# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ವನಪರ್ವ
ವಿರಾಟಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೮

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 8**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*
**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*
**ದಿ|| ಕೆ.ಎಸ್. ಕೌಶಿಕ್ (‘ವಿಶ್ವಾಮಿತ್ರ’)**

*ಆದಿ ಸಂಪಾದಕರು:*
**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*
**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್,M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ದಯಾಮಯನಾದ ಪರಮಾತ್ಮನ ಕರುಣೆಯಿಂದಲೂ, ಗುರುಭಗವಂತನ ಅನುಗ್ರಹದಿಂದಲೂ ಪುಷ್ಪರೂಪವಾದ ಈ ಎಂಟನೆಯ ಸಂಪುಟವನ್ನು ಪರಮಾತ್ಮನ ಪಾದಾರವಿಂದಗಳಲ್ಲರ್ಪಿಸಿ ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ. ಈ ಎಂಟನೆಯ ಸಂಪುಟವು ನಾವು ನಿರೀಕ್ಷಿಸಿದುದಕ್ಕಿಂತಲೂ ಬೇಗನೆಯೇ ಹೊರಬಿದ್ದಿದೆಯೆಂದು ಹೇಳಬಹುದಾಗಿದೆ. ಇದು ಕೇವಲ ದೈವಾನುಗ್ರಹ. ಏಳನೆಯ ಸಂಪುಟವನ್ನು ಮುಗಿಸುವಾಗ ನಮಗಿದ್ದ ಆರ್ಥಿಕಪರಿಸ್ಥಿತಿಯನ್ನು ಜ್ಞಾಪಿಸಿಕೊಂಡರೆ ಎಂಟನೆಯ ಸಂಪುಟವನ್ನು ಹೇಗೆ ಪ್ರಾರಂಭಮಾಡುವುದೆಂಬ ಸಮಸ್ಯೆಯೇ ಇದ್ದಿತು. ಆದರೆ ದಯಾಮಯನಾದ ಪರಮಾತ್ಮನ ದಿವ್ಯಾನುಗ್ರಹದಿಂದಾಗಿ ಸುಲಲಿತವಾಗಿಯೇ ಎಂಟನೆಯ ಸಂಪುಟವು ಹೊರಬಂದಿದೆ.

ಈ ಶೀರ್ಷಿಕೆಯಲ್ಲಿ ನಾವು ನಮ್ಮ ನಿಜಸ್ಥಿತಿಯನ್ನು ಆಗಿಂದಾಗ್ಗೆ ವಿವರಿಸುತ್ತಿರುತ್ತೇವೆ. ಇದರಿಂದ ಕೆಲವರಿಗೆ ಗ್ರಂಥವು ಹೊರಬರುತ್ತದೋ ಇಲ್ಲವೋ ಎಂಬ ವಿಷಯದಲ್ಲಿಯೇ ಸಂಶಯ ಬಂದು ಪತ್ರವನ್ನೂ ಬರೆದಿರುತ್ತಾರೆ. ಅವರೆಲ್ಲರಿಗೂ ಒಂದೇ ಉತ್ತರವಾಗಿ ಈ ಕೆಲವು ಮಾತುಗಳನ್ನು ಬರೆಯಬೇಕಾಗಿದೆ.

ಈ ಮಹಾಕಾರ್ಯವು ಕೇವಲ ಪರಮಾತ್ಮನ ದಯೆಯಿಂದ ನಡೆಯುತ್ತಿದೆ. ಈ ಕಾರಣದಿಂದಾಗಿ ಅದು ಮಧ್ಯದಲ್ಲಿ ಖಂಡಿತವಾಗಿಯೂ ನಿಲ್ಲಲಾರದು. ಪರಮಾತ್ಮನ ಅನುಗ್ರಹವಿಲ್ಲದೇ ಕೇವಲ ಹಣದ ಆಸರೆಯಿಂದ ಅಥವಾ ಬುದ್ಧಿಯ ಆಸರೆಯಿಂದ ಇದನ್ನು ಮಾಡಲು ಹೊರಟಿದ್ದರೆ ಆಗ ಮುಗಿಯುವುದೋ ಇಲ್ಲವೋ–ಎಂದು ಸಂಶಯಪಡಬೇಕಾಗಿತ್ತು. ಇಂತಹ ಮಹಾಗ್ರಂಥಗಳನ್ನು ಕೇವಲ ಹಣದ ಬೆಂಬಲದಿಂದ ಪ್ರಕಟಿಸಲು ಸಾಧ್ಯವಾಗುವುದಿಲ್ಲ. ಪೂರ್ಣವಿದ್ಯೆಯಿದೆಯೆಂಬ ಕಾರಣದಿಂದಲೂ ಪ್ರಕಟಿಸಲು ಸಾಧ್ಯವಾಗುವುದಿಲ್ಲ. ಪರಮಾತ್ಮನ ಇಚ್ಛೆಯೊಂದಿದ್ದರೆ ಹಣದ ಆಸರೆಯೇ ಇಲ್ಲದೇ ಇಂತಹ ಮಹಾಕಾರ್ಯವನ್ನು ಸಾಮಾನ್ಯಮನುಷ್ಯನೊಬ್ಬನಿಂದ ಅವನು ಮಾಡಿಸಿ ತೋರಿಸಬಲ್ಲನು. ಪ್ರಕೃತ ಈ ಪ್ರಕಟಣೆಯೇ ಇದಕ್ಕೆ ಪ್ರತ್ಯಕ್ಷನಿದರ್ಶನವಾಗಿದೆ. ಆದುದರಿಂದ ಹಲವಾರು ಕಾರಣಗಳಿಂದಾಗಿ

ಸಂಪುಟಗಳು ಹೊರಬರಲು ಒಂದೆರಡು ತಿಂಗಳುಗಳು ವಿಳಂಬವಾಗ ಬಹುದೇ ಹೊರತು ಪ್ರಕಟಣೆಯು ಪೂರ್ಣವಾಗುವುದರಲ್ಲಿ ಯಾರೂ-ಯಾವ ಕಾರಣದಿಂದಲೂ ಸಂಶಯಪಡಬೇಕಾಗಿಲ್ಲ. ಭಗವಂತನ ಪೂರ್ಣಾನುಗ್ರಹವಿದೆ. ಗ್ರಂಥವು ಪೂರ್ಣವಾಗುತ್ತದೆ.

ರಾಷ್ಟ್ರೀಕೃತಬ್ಯಾಂಕುಗಳಲ್ಲಿ ಹೆಸರಾಂತ ಕೆನರಾ ಬ್ಯಾಂಕಿನವರು ಮಹಾ ಭಾರತದ ಪೂರ್ಣಮಾಲೆಯನ್ನು ಪಡೆದುಕೊಳ್ಳಲಿಚ್ಛಿಸುವವರಿಗೆ 240/-ರೂ. -ರೂ.ಗಳ ಸಾಲ ಒದಗಿಸಲು ಮುಂದೆ ಬಂದಿರುವುದು ನಮ್ಮ ಕನ್ನಡಿಗರ ಸುಯೋಗ. ಪ್ರಗತಿಪಥದಲ್ಲಿ ಮುಂದುವರಿಯಲು ನಮಗೆ ಲಭ್ಯವಾಗಿರುವ ದೈವಾಯತ್ತವಾದ ಸದವಕಾಶ. ಕೆನರಾ ಬ್ಯಾಂಕಿನವರ ಈ ಯೋಜನೆಯನ್ನು ಕೇಳುತ್ತಲೇ ಸಾಹಿತ್ಯಪ್ರಪಂಚದಲ್ಲಿ ಕರ್ನಾಟಕದ ಭೀಷ್ಮರೆನಿಸಿದ್ದ, ಈಗ ತಾನೇ ನಮ್ಮನ್ನಗಲಿದ ಡಾ|| ಡಿ. ವಿ. ಜಿ.ಯವರು ಅಮಿತಾನಂದವನ್ನು ವ್ಯಕ್ತಪಡಿಸಿ ದ್ದರು. ಈ ಮೂಲಕವಾಗಿ ಕರ್ನಾಟಕದ ಪ್ರತಿಯೊಂದು ಮನೆಯಲ್ಲೂ ಮಹಾಭಾರತದ ಪ್ರತಿಗಳು ಇರುವಂತಾಗಲೆಂದು ಹಾರೈಸಿದ್ದರು. ಈಗಾಗಲೇ ಅನೇಕರು ಸಾಲದ ಸೌಲಭ್ಯವನ್ನು ಪಡೆದು ಸಂಪುಟಗಳನ್ನು ಪಡೆದು ಕೊಂಡಿರುತ್ತಾರೆ. ಕನ್ನಡಬಾಂಧವರೆಲ್ಲರೂ ಈ ಸೌಲಭ್ಯವನ್ನು ಪಡೆದು ಕೊಂಡು ಮಹಾಭಾರತದ ದೀವಿಗೆಯಿಂದ ತಮ್ಮ ಮನೆಗಳನ್ನು ಬೆಳಗಿಸಿ ಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ. ಮಹಾಭಾರತದಂತಹ ಗ್ರಂಥವು ಪ್ರಪಂಚದಲ್ಲಿಯೇ ಮತ್ತೊಂದಿಲ್ಲ. ನಮ್ಮ ದೇಶದಿಂದ ಹೊರದೇಶಗಳಿಗೆ ರಫ್ತುಮಾಡಲು ಇರುವ ಮಹಾವಸ್ತುಗಳೆಂದರೆ ಮಹಾಭಾರತ-ರಾಮಾ ಯಣಾದಿಗಳೇ. ಇವುಗಳಲ್ಲಿರುವ ಜ್ಞಾನಭಂಡಾರವನ್ನು ನಾವು ಮುಂದೆ ಸಾವಿರಾರು ವರ್ಷಗಳವರೆಗೂ ವಿದೇಶಗಳಿಗೆ ರಫ್ತುಮಾಡಬಹುದು. ಆದರೂ ಇದು ಮುಗಿಯದು. ನಮ್ಮ ಆಸ್ತಿ ಇದೊಂದೇ. ನಮ್ಮ ನಿಧಿ ಇದೊಂದೇ. ಇಂತಹ ಜ್ಞಾನಭಂಡಾರವನ್ನು ನಾವು ಮೊದಲು ತಿಳಿದುಕೊಳ್ಳಬೇಕು. ಅನಂತರ ಬೇರೆಯವರು ತಿಳಿದುಕೊಳ್ಳುವಂತೆ ಮಾಡಬೇಕು. ಇದರಿಂದ ನಾವೂ ಸಂಸ್ಕೃತರಾಗುತ್ತೇವೆ. ಇತರರನ್ನೂ ಸಂಸ್ಕೃತರನ್ನಾಗಿ ಮಾಡಬಲ್ಲೆವು. 'ಕೃಣ್ವನ್ತೋ ವಿಶ್ವಮಾರ್ಯಂ' ಎಂಬ ಆರ್ಯೋಕ್ತಿಯನ್ನು ಪುನರಾವರ್ತಿಸ ಬಹುದು.

ಕೆನರಾ ಬ್ಯಾಂಕಿನವರು ಈ ಸಾಲದ ಸೌಲಭ್ಯವನ್ನು ಕಲ್ಪಿಸಿಕೊಟ್ಟು ಮಹಾಭಾರತಪ್ರಚಾರವೆಂಬ ಮಹಾಕಾರ್ಯದಲ್ಲಿ ನೆರವು ನೀಡುತ್ತಿರುವುದ ಕ್ಕಾಗಿ ಕೃತಜ್ಞರಾಗಿರುತ್ತೇವೆ. ಈ ಕಾರ್ಯವನ್ನು ಮಾಡಿಕೊಡಲು ಸಹನೆಯಿಂದ ಶ್ರಮಿಸಿದ ಕೆನರಾ ಬ್ಯಾಂಕ್ ಅಧಿಕಾರಿಗಳಿಗೆ ಪರಮಾತ್ಮನು ಸನ್ಮಂಗಳವನ್ನುಂಟುಮಾಡಲಿ. ಈ ಬ್ಯಾಂಕಿನಂತೆಯೇ ಸಾಲದ ಸೌಲಭ್ಯವನ್ನು ತಮ್ಮ ಸದಸ್ಯರಿಗೂ ಮಾಡಿಕೊಡಬೇಕೆಂದು ಸಿಂಡಿಕೇಟ್ ಬ್ಯಾಂಕಿನವರನ್ನೂ ಪ್ರಾರ್ಥಿಸಿದ್ದೇವೆ. ಅವರೂ ಸಹ ಈ ನಮ್ಮ ಮಹಾಭಾರತದ ಪ್ರಚಾರ ಕಾರ್ಯದಲ್ಲಿ ಸಹಕರಿಸುವರೆಂಬ ಭರವಸೆಯಿದೆ.

ಡಾ॥ ಡಿ. ವಿ. ಗುಂಡಪ್ಪನವರು ನಮ್ಮನ್ನಗಲಿ ಹೋದುದರಿಂದಾಗಿ ನಮಗೂ ತುಂಬಲಾರದ ನಷ್ಟವುಂಟಾಗಿದೆ. ಅವರ ಉತ್ತೇಜಕವಾದ ನುಡಿ ಗಳನ್ನು ನಾವಿನ್ನು ಕೇಳಲಾರೆವು. “ನನ್ನ ಮಗಳಿಗೂ ಇದನ್ನೆಲ್ಲಾ ಓದುವಂತೆ ಹೇಳಿದ್ದೇನೆ. ಅಗೋ ನೋಡಿ ; ನಿಮ್ಮೆಲ್ಲಾ ಸಂಪುಟಗಳನ್ನೂ ಸಾಲಾಗಿಟ್ಟಿದ್ದೇನೆ. ದೊಡ್ಡ ಕೆಲಸಮಾಡುತ್ತಿದ್ದೀರಿ”–ಮುಂತಾಗಿ ಹೇಳಿ ನಮ್ಮನ್ನು ಉತ್ಸಾಹದಿಂದ ಹುರಿದುಂಬಿಸುತ್ತಿದ್ದರು. ಅವರು ನಮ್ಮ ಪ್ರಕಟಣೆಯ ವಿಷಯವಾಗಿ ನಾಲ್ಕಾರು ಪತ್ರಗಳನ್ನೂ ಬರೆದಿರುತ್ತಾರೆ. ಅವುಗಳಲ್ಲಿ ಒಂದನ್ನು ಮಾತ್ರ ಸ್ಮರಣಾರ್ಥವಾಗಿ ಪರಿಶಿಷ್ಟದಲ್ಲಿ ಕೊಟ್ಟಿರುತ್ತೇವೆ. ಈ ಹಿರಿಯರ ಅಗಲುವಿಕೆಯಿಂದ ನಮಗೆ ತುಂಬಲಾರದ ನಷ್ಟವಾಗಿದೆಯೆಂದು ಮತ್ತೊಮ್ಮೆ ಹೇಳುತ್ತೇವೆ. ಯಾರಲ್ಲಿಗೆ ಹೋಗುವುದು? ಯಾರಿಂದ ಉತ್ತೇಜನ ಪಡೆಯುವುದು?–ಎಂಬುದೇ ತಿಳಿಯದಾಗಿದೆ. ಆದರೆ ‘ಜಾತಸ್ಯ ಮರಣಂ ಧ್ರುವಂ’ ಮರಣವು ಅನಿವಾರ್ಯವಾದುದು. ಪರಮಾತ್ಮನು ಡಾ॥ ಡಿ. ವಿ. ಜಿ.ಯವರಿಗೆ ಸದ್ಗತಿಯನ್ನು ದಯಪಾಲಿಸಲಿ. ಇದೇ ಪರಮಾತ್ಮನಲ್ಲಿ ನಮ್ಮ ದೈನ್ಯಪ್ರಾರ್ಥನೆ.

ಇತ್ತೀಚಿನ ನಮ್ಮ ಗ್ರಾಹಕರಿಗೆ 2 ಮತ್ತು 3ನೆಯ ಸಂಪುಟಗಳನ್ನು ಕೊಡಲಾಗಿಲ್ಲ. 2ನೆಯ ಸಂಪುಟವು ಪುನರ್ಮುದ್ರಣವಾಗುತ್ತಿದ್ದು ನೂತನ ಗ್ರಾಹಕರಿಗೆ ಡಿಸೆಂಬರ್ ಮೊದಲನೇ ವಾರದಲ್ಲಿ ಕೊಡಬಹುದೆಂದು ಭಾವಿಸಿದ್ದೇವೆ. 3ನೆಯ ಸಂಪುಟವನ್ನೂ ಸಹ ಸಾಧ್ಯವಾದಷ್ಟು ಬೇಗ ಕೊಡು ತ್ತೇವೆ. ನೂತನಗ್ರಾಹಕರು ದಯಮಾಡಿ ಬೇಸರಿಸಬಾರದಾಗಿ ಪ್ರಾರ್ಥನೆ.

ಸಂಪಾದಕಮಂಡಲಿಯವರು ಅಮಿತೋತ್ಸಾಹದಿಂದ ಕಾರ್ಯ ಮಾಡುತ್ತಿದ್ದಾರೆ. ಆದರೆ ನಾವು ಸಂಪುಟಗಳನ್ನು ಬೇಗ ಕೊಡಬೇಕೆಂದು ನಿರ್ಧರಿಸಿದೊಡನೆಯೇ ಇವರ ಶ್ರಮವೂ ಅಧಿಕವಾಗುತ್ತದೆ. ಆದರೆ ಇವರಲ್ಲಿ ಯಾರೊಬ್ಬರೂ ಇದರ ವಿಷಯವಾಗಿ ಆಕ್ಷೇಪಿಸಿಲ್ಲ. ಬೇಗ-ಬೇಗ ಸಂಪುಟ ಗಳು ಬರುವಂತಾಗಲೆಂದು ಉತ್ಸಾಹದಿಂದಲೇ ಕಾರ್ಯಮಾಡುತ್ತಿದ್ದಾರೆ. ನಿಸ್ಪೃಹತೆಯಿಂದ ಅಗಾಧವಾದ ಕೆಲಸಮಾಡುತ್ತಿರುವ ಈ ವಿದ್ವಾಂಸರ ಸಹಯೋಗವೂ ದೈವಸಂಕಲ್ಪವೇ ಸರಿ.

ಏಳನೆಯ ಸಂಪುಟದ ಪ್ರಕಾಶನಸಮಾರಂಭವು ಜಯನಗರದ ಶ್ರೀ ಕೋದಂಡರಾಮಸ್ವಾಮಿ ದೇವಸ್ಥಾನದಲ್ಲಿ ವಿಜೃಂಭಣೆಯಿಂದ ನಡೆಯಿತು. ಶ್ರೀ ಶ್ರೀ ಆವಣಿ ಶೃಂಗೇರಿಮಠಾಧೀಶರು ಅಧ್ಯಕ್ಷತೆ ವಹಿಸಿದ್ದರು. ಪಠ್ಯ ಪುಸ್ತಕಸಮಿತಿಯ ಡೈರೆಕ್ಟರಾದ ಶ್ರೀ ಎಸ್. ಮಂಚಯ್ಯನವರು ಸಂಪುಟವನ್ನು ಪ್ರಕಾಶಿಸಿದರು. ಭಾರತದರ್ಶನಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ಏಳನೆಯ ಸಂಪುಟದ ಸಿಂಹಾವಲೋಕನವನ್ನು ಮಾಡಿದರು. ಶ್ರೀ ಶ್ರೀಗಳವರ ಅನುಗ್ರಹಭಾಷಣ ದೊಡನೆ ಸಮಾರಂಭವು ಮುಕ್ತಾಯವಾಯಿತು. ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕವಂದನೆಗಳನ್ನು ಈ ಮೂಲಕ ಸಮರ್ಪಿಸುತ್ತಿದ್ದೇವೆ.

ಭದ್ರಾವತಿ ಕಾಗದದ ಕಾರ್ಖಾನೆಯವರು ಮೊದಲಿನಂತೆ ಸಕಾಲಕ್ಕೆ ನಮಗೆ ಬೇಕಾಗುವಷ್ಟು ಕಾಗದವನ್ನೊದಗಿಸಿಕೊಟ್ಟು ಸಹಕಾರ ನೀಡುತ್ತಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು.

ಗ್ರಾಹಕರ ಮೂಲಕವಾಗಿ ನೂತನಗ್ರಾಹಕರಾಗುತ್ತಿರುವುದು ಸಂತಸದ ವಿಷಯವಾಗಿದೆ. ತಮ್ಮಲ್ಲಿರುವ ಸಂಪುಟಗಳನ್ನು ತಮ್ಮ ಗೆಳೆಯರಿಗೆ ಓದಲುಕೊಟ್ಟು, ಮಹಾಭಾರತದ ಸವಿಯುಣಿಸಿ, ಅನಂತರದಲ್ಲಿ ಅವರೂ ಒಬ್ಬ ಗ್ರಾಹಕರಾಗುವಂತೆ ಮಾಡುತ್ತಿದ್ದಾರೆ. ಇದು ಹೀಗೆಯೇ ವೃದ್ಧಿಹೊಂದ ಬೇಕೆಂಬುದೇ ನಮ್ಮ ಆಶಯವೂ ಆಗಿದೆ. ಮಹಾಭಾರತದ ಮೌಲ್ಯವನ್ನು ತಿಳಿದ ನಂತರವೇ ಗ್ರಾಹಕರಾಗುವುದು ಒಳ್ಳೆಯದು. ‘ಬಲಾತ್ಕಾರವಾಗಿಯೇ ಆದರೂ ರೋಗಿಗೆ ಔಷಧವನ್ನುಣಿಸುವಂತೆ ಮಹಾಭಾರತದಂತಹ ಮಹಾ ಗ್ರಂಥಗಳನ್ನು ತಲೆಗೆ ಕಟ್ಟಬೇಕು. ಮನಸ್ಸಿಲ್ಲದಿದ್ದರೂ ಎಂದಾದರೊಂದು

ದಿನ ಬೇಸರವಾದಾಗ ಈ ಗ್ರಂಥಗಳನ್ನು ನೋಡುವುದರಿಂದಲೇ ಅವರ ಮನಃಪರಿವರ್ತನೆಯಾಗುತ್ತದೆ'–ಎಂಬ ಭಾವನೆ ನಮಗಿದ್ದಿತು. ಆದರೆ ಅನೇಕಸಮಯಗಳಲ್ಲಿ ಈ ನಮ್ಮ ಭಾವನೆಯು ಭ್ರಮೆಯಾಗಿ ಬಲಾತ್ಕಾರ ದಿಂದ ಕಟ್ಟಿದ ಸಂಪುಟಗಳು ವ್ಯರ್ಥವಾಗಿ ಹೋದುದೂ ಉಂಟು. ಈ ಕಾರಣದಿಂದ ಓದಿದನಂತರ ಮನವೊಪ್ಪಿ ಕೊಳ್ಳುವುದೇ ಉಚಿತವೆನಿಸುತ್ತದೆ. ನಮ್ಮ ಅನೇಕ ಸ್ನೇಹಿತರು ಯಥಾಪೂರ್ವ ಮನೆ-ಮನೆಗೆ ಸಂಪುಟಗಳನ್ನು ಹಂಚಿ ನಮ್ಮೊಡನೆ ಸಂಪೂರ್ಣವಾಗಿ ಸಹಕರಿಸುತ್ತಿದ್ದಾರೆ. ಕರ್ನಾಟಕದ ಅನೇಕಭಾಗಗಳಲ್ಲಿ ಇದರ ಪ್ರಚಾರವಿನ್ನೂ ನಡೆಯಬೇಕಾಗಿದೆ. ಪರಮಾತ್ಮನ ದಯೆಯಿಂದ ಕಾಲಾನುಕ್ರಮವಾಗಿ ದೇಶದ ಮೂಲೆ-ಮೂಲೆಗೂ ಇದನ್ನು ಪ್ರಚುರಪಡಿಸಬೇಕೆನ್ನುವ ನಮ್ಮ ಆಶಯವು ಕೈಗೂಡುವುದೆಂಬ ಭರವಸೆ ಯಿಂದಿರುತ್ತೇವೆ.

ನಮ್ಮ ಈ ಮಹಾಕಾರ್ಯವನ್ನು ಅಡಿಗಡಿಗೂ ಪ್ರೋತ್ಸಾಹಿಸುತ್ತಿರುವ ಮತ್ತು ಸಂಪಾದಕಮಂಡಲಿಯ ವಿದ್ವಾಂಸರನ್ನು ಗೌರವಿಸಲೆಂದೇ ಪ್ರತಿ ಸಂಪುಟದ ಪ್ರಕಾಶನಸಮಯದಲ್ಲಿಯೂ ಆಶೀರ್ವಾದಪೂರ್ವಕವಾಗಿ ಮಂತ್ರಾಕ್ಷತೆಯನ್ನು ಗೌರವಸಂಭಾವನೆಯೊಡನೆ ಕಳುಹಿಸುತ್ತಿರುವ ಜಗದ್ಗುರು ಶ್ರೀಶಂಕರಾಚಾರ್ಯ ಶ್ರೀ ಶ್ರೀ ರಾಘವೇಂದ್ರಭಾರತೀಸ್ವಾಮಿ ಗಳವರು, ರಾಮಚಂದ್ರಾಪುರಮಠ–ಇವರು ಕೃಪೆಮಾಡಿ ಮುನ್ನುಡಿಯನ್ನು ಬರೆದುಕೊಟ್ಟು ಸಂಪುಟವನ್ನು ಹೆಚ್ಚು ಶೋಭಾಯಮಾನವನ್ನಾಗಿ ಮಾಡಿರು ತ್ತಾರೆ. ಗುರುಭಗವಂತನ ಮತ್ತು ಭಗವಂತನ ಅನುಗ್ರಹವೇ ನಮ್ಮ ಮೂಲಬಂಡವಾಳವೆಂದು ಪದೇ ಪದೇ ತಿಳಿಸುತ್ತಲೇ ಇದ್ದೇವೆ. ಶ್ರೀ ಶ್ರೀಗಳ ಪೂರ್ಣಾನುಗ್ರಹವು ನಿರಂತರವಾಗಿರಲೆಂದು ಪ್ರಾರ್ಥಿಸುತ್ತೇವೆ.

'ಈ ಮಹಾಕಾರ್ಯಕ್ಕೆ ನಿಮ್ಮಲ್ಲಿ ಅಪಾರ ಹಣ ಇದೆಯೇ? ಯಾರಾದರೂ ದಾನಕೊಡುತ್ತಾರೆಯೇ? 'ಡೊನೇಷನ್' ಪಡೆಯುವ ಪದ್ಧತಿ ಇದೆಯೇ?'–ಮುಂತಾಗಿ ಅನೇಕರು ಅಚ್ಚರಿಯಿಂದ ಪ್ರಶ್ನಿಸುತ್ತಾರೆ. 'ನಮ್ಮಲ್ಲಿ ಹಣವಿಲ್ಲ. ನಾವು ಹಣವಂತರಲ್ಲ. ಪ್ರಕಟಣೆಗೆ ಬೇಕಾಗುವಷ್ಟು ಹಣ ನಮ್ಮ ಗ್ರಾಹಕರಿಂದಲೇ ಬರುತ್ತದೆ. ಕೆಲಸವನ್ನು ಮೆಚ್ಚಿ ದಾನಮಾಡುವವರೂ ಆಗಿಂದಾಗ್ಗೆ ಒಬ್ಬಿಬ್ಬರು ಸಿಕ್ಕಿಯಾರು! ಡೊನೇಷನ್ ಪಡೆದುಕೊಳ್ಳುವ ಪ್ರಯತ್ನವಿಲ್ಲ. ತಾವಾಗಿಯೇ ಬಂದು ಕೊಡುವ ಸಾತ್ತ್ವಿಕ ದಾನವನ್ನು

ಪಡೆದುಕೊಂಡು ಸದ್ವಿನಿಯೋಗ ಮಾಡಲಡ್ಡಿಯಿಲ್ಲ.' ಇದೇ ನಮ್ಮ ಉತ್ತರ.

ರಂದು ನಮ್ಮ ಮನೆಗೆ ಒಬ್ಬರು ಮಹನೀಯರು ಬಂದಿದ್ದರು. ತಮ್ಮ ಧರ್ಮಪತ್ನೀ–ಶ್ರೀಮತಿ ಲಕ್ಷ್ಮೀ ಇವರ ಹೆಸರಿನಲ್ಲಿ ಐದು ನೂರು ರೂ. ಕೊಡಲು ಬಂದಿರುವುದಾಗಿ ಹೇಳಿದರು. ಅದೇ ನಮ್ಮ ಅವರ ಪ್ರಥಮ ಪರಿಚಯ. ಸಂಪುಟಗಳಿಂದ ಪ್ರಭಾವಿತರಾದುದಾಗಿಯೂ ಈ ಮಹಾ ಕಾರ್ಯಕ್ಕೆ ಅಲ್ಪಕಾಣಿಕೆಯನ್ನು ಸಲ್ಲಿಸುವ ಆಶಯದಿಂದ ಬಂದುದಾಗಿಯೂ ಹೇಳಿದರು. ಶಾಸ್ತ್ರಗಳಲ್ಲಿ ಹೇಳುವ ಸಾತ್ತ್ವಿಕದಾನವೆಂದರೆ ಇದೇ ಆಗಿರ ಬಹುದು. ಆ ಮಹನೀಯರಿಗೂ ಮತ್ತು ಅವರ ಕುಟುಂಬವರ್ಗದವರಿಗೂ ಪರಮಾತ್ಮನು ಸಕಲಸನ್ಮಂಗಲವನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ಕಡೆಯದಾಗಿ ವಾಚಕರಿಗೂ, ಸಂಪಾದಕಮಂಡಲಿಯವರಿಗೂ, ಸರ್ವ ಸುಹೃದರಿಗೂ ದಯಾಮಯನಾದ ಪರಮಾತ್ಮನು ಆಯುರಾರೋಗ್ಯಾದಿ ಗಳನ್ನೂ ಧಾರ್ಮಿಕಮನಃಪ್ರವೃತ್ತಿಯನ್ನೂ ದಯಪಾಲಿಸಲೆಂದು ಅನನ್ಯ ಶರಣರಾಗಿ ಪ್ರಾರ್ಥಿಸುತ್ತೇವೆ.

–ಪ್ರಕಾಶಕರು.

ಗತ ಸಂ.1848

ಪ್ರಸೀದತು ಶ್ರೀರಾಮಚನ್ದ್ರಃ

# ಭೂಮಿಕೆ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ
ಪಾರಾವಾರಪಾರೀಣ ಯಮ-ನಿಯಮಾಸನ-ಪ್ರಾಣಾಯಾಮ-
ಪ್ರತ್ಯಾಹಾರ-ಧ್ಯಾನ-ಧಾರಣ-ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ
ಷಡ್ದರ್ಶನಸ್ಥಾಪನಾಚಾರ್ಯ ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ

**ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶಿಷ್ಯ**

ಸುರೇಶ್ವರಾಚಾರ್ಯ ಜ್ಯೇಷ್ಠಶಿಷ್ಯ ವಿದ್ಯಾನಂದಾಚಾರ್ಯ
ಗುರುಪರಂಪರಾಪ್ರಾಪ್ತ ಸಕಲನಿಗಮಾಗಮಸಾರಹೃದಯ
ಸಾಂಖ್ಯತ್ರಯಪ್ರತಿಪಾದಕ ವೈದಿಕಮಾರ್ಗಪ್ರವರ್ತಕ ಸರ್ವತಂತ್ರ
ಸ್ವತಂತ್ರಾದಿ ಬಿರುದಾಂಕಿತ ವಿದ್ಯಾನಗರಮಹಾರಾಜಧಾನೀವೈಭವ
ಸಿಂಹಾಸನಾಧೀಶ್ವರ ವ್ಯಾಖ್ಯಾನಸಿಂಹಾಸನಾರೂಢ
ಶ್ರೀಮದ್ರಾಜಾಧಿರಾಜಗುರು

**ಶ್ರೀ ಗೋಕರ್ಣಮಂಡಲಾಚಾರ್ಯ**

ಶ್ರೀಮಚ್ಛತಶೃಂಗಪುರವರಾಧೀಶ್ವರ ಶ್ರೀಮಚ್ಛರಾವತೀತೀರವಾಸ
ಶ್ರೀಮದ್ರಾಮಚಂದ್ರಾಪುರಮಠಸ್ಥ ಶ್ರೀಮದ್ರಾಮಚಂದ್ರ
ಚಂದ್ರಮೌಳೀಶ್ವರಪಾದಪದ್ಮಾರಾಧಕ ಶ್ರೀಮದ್ರಾಮಚಂದ್ರಭಾರತೀ
ಶ್ರೀಗುರುಕರಕಮಲಸಂಜಾತ

**ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ ।**

ಶ್ರೀಯುತ ಸುಬ್ರಹ್ಮಣ್ಯ ಕೌಶಿಕರು, ಭಾರತ ದರ್ಶನ ಪ್ರಕಾಶನ, ಬೆಂಗಳೂರು ಇವರಿಗೆ–ಅದಾಗಿ :

ಭಾರತ ದರ್ಶನ ಪ್ರಕಾಶಕರಾದ ಶ್ರೀ ಕೇಶವ ಸುಬ್ರಹ್ಮಣ್ಯ ಕೌಶಿಕರು

ಮಹಾಭಾರತದ ಎಂಟನೆಯ ಸಂಪುಟಕ್ಕೆ ಭೂಮಿಕೆಯನ್ನು ಬರೆದುಕೊಡಬೇಕೆಂದು ವಿನಂತಿಸಿಕೊಂಡರು. ಭೂಮಿಕೆಯನ್ನು ಯಥಾಮತಿ ವಿದ್ವಾಂಸರನ್ನೂ ಕೇಳುವುದೂ ಮತ್ತು ಭೂಮಿಕೆಯನ್ನು ಯಥಾಮತಿ ಬರೆಯುವುದೂ–ಈ ಸಂಪ್ರದಾಯವೇನೋ ನಡೆದುಕೊಂಡು ಬಂದಿದೆ. ಆದರೆ ಶ್ರೀ ಕೌಶಿಕರು ನಮ್ಮನ್ನು ಮಹಾಭಾರತದ ಎಂಟನೆಯ ಸಂಪುಟಕ್ಕೆ ಭೂಮಿಕೆಯನ್ನು ಬರೆದುಕೊಡಬೇಕೆಂದು ಕೇಳಿದಾಗ ಅಥವಾ ಬರೆಯಬೇಕೆಂದು ನಾವು ಯೋಚಿಸಿದಾಗ ನಮಗೆ ಪರಾತ್ಪರಗುರುಗಳಾದ ಭಗವಾನ್ ವ್ಯಾಸರ ಕೃತಿಗೆ ಮುನ್ನುಡಿ ಬರೆಯುವ ಅರ್ಹತೆಯ ಬಗ್ಗೆ ಯೋಚನೆ ಬಂತು. ಗ್ರಂಥಕರ್ತರಿಗಿಂತ ಅಧಿಕಯೋಗ್ಯತೆಯುಳ್ಳವರಷ್ಟೇ ಅದನ್ನು ಬರೆಯಬೇಕು. ಭಗವಾನ್ ವೇದವ್ಯಾಸರು ಸಾಕ್ಷಾತ್ ವಿಷ್ಣುವಿನ ಆವೇಶಾವತಾರಿಗಳಾದುದರಿಂದ ಅವರಿಗಿಂತಲೂ ಹೆಚ್ಚು ಯೋಗ್ಯತೆಯುಳ್ಳವರು ಮಾತ್ರವೇ ಮುನ್ನುಡಿ ಬರೆಯಲು ಅರ್ಹರು. ಆದರೆ ನಾವು ಮಹಾಭಾರತವನ್ನು ಸ್ತುತಿಸಲಡ್ಡಿಯಿಲ್ಲ. ಭಾಷಾಂತರದ ವಿಷಯವಾಗಿ ಎರಡು ಮಾತು ಬರೆಯಲೂ ಅಡ್ಡಿಯಿಲ್ಲ. ಹೀಗೆ ನಿರ್ಧಾರಮಾಡಿ ಈ ಭೂಮಿಕೆಯನ್ನು ಬರೆಯಲುದ್ಯುಕ್ತರಾದೆವು.

ಮಹಾಭಾರತದ ವಿಷಯವಾಗಿ ಹೇಳುವುದಾದರೆ ಅದರ ಮಹತ್ತ್ವ, ಅಂತರ್ಗತ ವಿಷಯ–ಇವುಗಳ ಕಾರಣದಿಂದಾಗಿ ಇದನ್ನು ಮಹಾಭಾರತವೆಂದು ಕರೆದಿರುವರು.

**'ಮಹತ್ತ್ವಾದ್ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ'**

ಮಹಾಭಾರತವನ್ನು ಬಿಟ್ಟು ಉಳಿದ ಧರ್ಮಗ್ರಂಥಗಳಲ್ಲಿ ಮಹಾಭಾರತದಲ್ಲಿರುವ ವಿಷಯಗಳೇ ಅನೇಕಪ್ರಕಾರವಾಗಿ ಪ್ರತಿಪಾದಿತವಾಗಿವೆ. ಆದರೆ ಈ ಗ್ರಂಥದಲ್ಲಿಲ್ಲದ್ದನ್ನು–ಇಲ್ಲದಿರುವ ತತ್ತ್ವವನ್ನು ನಾವು ಬೇರೆಲ್ಲೂ ಕಾಣಲು ಸಾಧ್ಯವಿಲ್ಲ. ಇದು ಭಗವಾನರ ಅಭಿಮಾನದ ಮಾತು. ಆದುದರಿಂದಲೇ ಇದರ ಮಹತ್ತ್ವವನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಧರ್ಮ, ನೀತಿ, ತತ್ತ್ವಜ್ಞಾನ, ಆಚಾರ-ವಿಚಾರಗಳು, ಶರೀರರಕ್ಷಣೆಗಾಗಿ ಬೇಕಾಗಿರುವ ವೈದ್ಯಕೀಯ ಜ್ಞಾನ, ತೀರ್ಥಯಾತ್ರೆಗಳ ಮೂಲಕವಾಗಿ ನಾನಾ

ದೇಶಗಳ ಪರಿಚಯ–ಇವೇ ಮುಂತಾದ ಅನೇಕವಿಷಯಗಳು ಈ ಒಂದು ಗ್ರಂಥದಲ್ಲಿಯೇ ಅಡಕವಾಗಿರುವುದರಿಂದ ಇದು ಬಹುಭಾರವಾಗಿ ಅರ್ಥಾತ್ ಭಾರತವಾಗಿ ಪರಿಣಮಿಸಿದೆ.

ಇದನ್ನು ಐದನೆಯ ವೇದವೆಂದೂ ಕರೆದಿರುತ್ತಾರೆ. ಐದನೆಯ ವೇದ ವೆಂದು ಕರೆಯಲು ಅಥವಾ ಐದನೆಯ ವೇದವನ್ನು ರಚಿಸಲು ಭಗವಾನ್ ವ್ಯಾಸರ ಆಶಯವು ಇದಾಗಿದ್ದಿತು.

**ಸ್ತ್ರೀಶೂದ್ರದ್ವಿಜಬನ್ಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಇತಿ ಭಾರತಮಾಖ್ಯಾನಂ ಮುನಿನಾ ಕೃಪಯಾ ಕೃತಮ್ ॥**

ಮೂರು ವೇದಗಳಲ್ಲಿರುವ ವಿಷಯಗಳು ಸ್ತ್ರೀ-ಶೂದ್ರ-ದ್ವಿಜಬಂಧು ಗಳಿಗೆ ತಿಳಿಯದೇ ಇರುವ ಕಾರಣದಿಂದ ಆ ಮೂರು ವೇದಗಳ ತತ್ತ್ವವನ್ನೇ ಅಡಗಿಸಿ ಭಾರತವೆಂಬ ಆಖ್ಯಾನವು ವ್ಯಾಸರ ಕೃಪೆಯಿಂದ ರಚಿಸಲ್ಪಟ್ಟಿತು. ವೇದಾರ್ಥವನ್ನು ತಿಳಿದುಕೊಳ್ಳಲು ಅಸಮರ್ಥರಾದ ನಮಗೆ ಈ ಭಾರತದ ಇತಿಹಾಸದ ಮೂಲಕವಾಗಿ ವೇದಾರ್ಥಗಳನ್ನು ತಿಳಿಸಲು ಶ್ರಮಿಸಿರುವ ಮಹಾಭಾರತಕಾರರಿಗೆ ಅರ್ಥಾತ್ ವೇದವ್ಯಾಸರಿಗೆ ನಾವೆಲ್ಲರೂ ಚಿರಋಣಿ ಗಳಾಗಿರಬೇಕು.

ಇಂತಹ ಮಹಾಕಾರ್ಯವನ್ನು ಹಿಂದೆ ಯಾರೂ ಮಾಡಲಿಲ್ಲ. ಮುಂದೆ ಮಾಡುವ ಸಾಧ್ಯತೆಯೂ ಇಲ್ಲ. ಅವಶ್ಯಕತೆಯೂ ಇಲ್ಲ. ಎಷ್ಟು ಹೇಳಬೇಕೋ ಅಷ್ಟನ್ನೂ ಹೇಳಿಬಿಟ್ಟಿದ್ದಾರೆ. ಹೇಳದೇ ಬಿಟ್ಟಿರುವುದು ಯಾವುದೂ ಇಲ್ಲ. 'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ' ಎಂಬುದು ಸ್ವತಸ್ಸಿದ್ಧವಾದ ವಿಷಯ.

ವ್ಯಾಸಭಾರತದ ಗ್ರಂಥಗಳೆಷ್ಟು? ಅಥವಾ ಶ್ಲೋಕಗಳೆಷ್ಟು ಎಂಬ ವಿಷಯವಾಗಿ ಅನೇಕಾಭಿಪ್ರಾಯಗಳಿವೆ. ಈ ಅಭಿಪ್ರಾಯಗಳೆಲ್ಲಕ್ಕೂ ಮಹಾಭಾರತವೇ ಮೂಲವೆಂಬುದೂ ಒಂದು ಐತಿಹ್ಯ.

**ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ।**
**ಅಹಂ ವೇದ್ಮಿ ಶುಕೋ ವೇತ್ತಿ ಸಂಜಯೋ ವೇತ್ತಿ ವಾ ನ ವಾ ॥**

8,800 ಶ್ಲೋಕಗಳನ್ನು ಅಥವಾ ಶ್ಲೋಕಗಳ ರಹಸ್ಯಾರ್ಥವನ್ನು ನಾನು ತಿಳಿದುಕೊಂಡಿರುತ್ತೇನೆ. ಶುಕನಿಗೂ ತಿಳಿದಿದೆ. ಸಂಜಯನಿಗೆ ತಿಳಿದಿರಲೂ ಬಹುದು ; ತಿಳಿಯದೆಯೂ ಇರಬಹುದು.

ಇದು ವ್ಯಾಸರೇ ಹೇಳಿದ ಮಾತು. ಇದನ್ನೇ ಆಧಾರವಾಗಿಟ್ಟು ಕೊಂಡು ಕೆಲವು ವಿದ್ವಾಂಸರು ಮೂಲಭಾರತವು 8,800 ಶ್ಲೋಕಗಳನ್ನೊಳ ಗೊಂಡುದು ಎಂದು ಪ್ರತಿಪಾದಿಸಲು ಹೊರಟಿದ್ದಾರೆ. ಆದರೆ ಶ್ಲೋಕಗಳುಳ್ಳ ಮೂಲಭಾರತವೆಂದರೆ ಈಗಿರುವ ಮಹಾಭಾರತದಲ್ಲಿ ಯಾವ ಭಾಗವಾಗಿದೆಯೆಂಬುದನ್ನು ಅವರು ಉದ್ಧರಿಸಲಾರರು.

ನಮ್ಮ ಅಭಿಪ್ರಾಯದಲ್ಲಿ 8,800 ಕೂಟಶ್ಲೋಕಗಳ ವಿಷಯವಾಗಿ ವ್ಯಾಸರಿಲ್ಲಿ ಹೇಳಿದ್ದಾರೆ. ಕೇವಲ ಮೂರು ಮಂದಿಗೆ ಇದರ ಅರ್ಥವು ತಿಳಿ ಯುವುದಾಗಿದ್ದರೆ, ವೇದಕ್ಕಿಂತಲೂ ಮಹಾಭಾರತವು ಅರ್ಥಮಾಡಿಕೊಳ್ಳಲು ಕಷ್ಟವಾಗಿಯೇ ಪರಿಣಮಿಸುತ್ತಿತ್ತು. ಸ್ತ್ರೀ-ಶೂದ್ರ-ಬ್ರಾಹ್ಮಣಬಂಧುಗಳಿಗೆ ಇದರಿಂದಾವ ಪ್ರಯೋಜನವೂ ಆಗುತ್ತಿರಲಿಲ್ಲ. ಈ ಒಂದು ಕಾರಣದಿಂದಾಗಿ ಭಗವಾನ್ ವ್ಯಾಸರು ಸಮಗ್ರಭಾರತವನ್ನು 8,800 ಶ್ಲೋಕಗಳಿಂದ ಮಾಡಿಲ್ಲ ವೆಂಬುದನ್ನು ನಾವು ನಿರ್ಧರಿಸಬಹುದಾಗಿದೆ. ವ್ಯಾಸರಹಸ್ಯ ಅಥವಾ ವ್ಯಾಸಗುಟ್ಟು–ಎಂದು ಪ್ರಸಿದ್ಧವಾಗಿರುವ ಕೂಟಶ್ಲೋಕಗಳು 8,800 ಇರಲಿಕ್ಕೆ ಸಾಕು. ಮಹಾಭಾರತದ ಲೇಖಕನಾದ ಗಣಪತಿಯ ಓಟವನ್ನು ಕುಂಠಿತ ಗೊಳಿಸಿ ಮುಂದಿನ ಕಥಾಭಾಗವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವ ಸಲುವಾಗಿ ವ್ಯಾಸರು ಈ ಕೂಟಶ್ಲೋಕಗಳನ್ನು ಮಧ್ಯೇ-ಮಧ್ಯೇ ಸೇರಿಸಿದರೆಂಬ ಕಥೆಯಿದೆ. ಶ್ಲೋಕಗಳನ್ನು ಅರ್ಥಮಾಡಿಕೊಂಡು ಬರೆಯುವುದು ಗಣೇಶನ ಕರ್ತವ್ಯವಾಗಿದ್ದಿತು. ಇಂತಹ ಕೂಟಶ್ಲೋಕಗಳು ಬಂದಾಗ ಗಣೇಶನೂ ಸಹ ಅದರ ಅರ್ಥವನ್ನು ಗ್ರಹಿಸಲು ಕ್ಷಣಕಾಲ ಯೋಚಿಸಬೇಕಾಗಿತ್ತು. ಮೇಲಿನ ಶ್ಲೋಕದಲ್ಲಿರುವ 8,800 ಇಂತಹ ಕೂಟಶ್ಲೋಕಗಳ ಸಂಖ್ಯೆಯೇ ವಿನಾ ಮಹಾಭಾರತದ ಶ್ಲೋಕಸಂಖ್ಯೆಯಲ್ಲವೆಂದು ನಿಸ್ಸಂದೇಹವಾಗಿ ಹೇಳಬಹು ದಾಗಿದೆ. ಒಂದು ವೇಳೆ 8,800ರೇ ಇದರ ಮೂಲಶ್ಲೋಕಗಳಾಗಿದ್ದರೆ ಮಹಾಭಾರತವೆಂಬ ಹೆಸರೂ ಸಹ ಇದಕ್ಕೆ ಸಲ್ಲುತ್ತಿರಲಿಲ್ಲ.

ಭಾರತವು–ನಡೆದ ವೃತ್ತಾಂತದರ್ಶನಿಯಾದ್ದರಿಂದ–ಇತಿಹಾಸವೆಂಬ ಹೆಸರು ಪಡೆದಿದೆ. ನವರಸಭರಿತವಾದುದರಿಂದ ಮಹಾಕಾವ್ಯವೆಂದೂ ವಿದ್ವಾಂಸರಿಂದ ಪರಿಗಣಿತವಾಗಿದೆ. ವೇದಾರ್ಥವನ್ನೇ ಪ್ರತಿಪಾದಿಸುವುದ ರಿಂದ ಸ್ಮೃತಿಯೆಂಬ ಹೆಸರೂ ಪಡೆದಿದೆ. ಅನೇಕಾನೇಕ ಧರ್ಮಗಳನ್ನು ಹೇಳುವುದರಿಂದ ಇದು ಧರ್ಮಶಾಸ್ತ್ರವೂ ಆಗಿದೆ. ವ್ಯಾವಹಾರಿಕ ವಿಷಯ

ಗಳನ್ನು ಹೇಳಿರುವುದರಿಂದ ಅರ್ಥಶಾಸ್ತ್ರವೂ ಆಗಿದೆ. ಮೋಕ್ಷಧರ್ಮವನ್ನು ಆಮೂಲಾಗ್ರವಾಗಿ ತಿಳಿಸುವುದರಿಂದ ಮೋಕ್ಷಶಾಸ್ತ್ರದ ಉದ್ದಾಮಗ್ರಂಥ ವಾಗಿದೆ. ಕಾಮದ ಇತಿ-ಮಿತಿಯನ್ನು ವ್ಯವಸ್ಥಾಪಿಸಿರುವುದರಿಂದ ಇದು ಕಾಮಶಾಸ್ತ್ರವೂ ಆಗಿದೆ. ಮಹಾಭಾರತದ ವಿಷಯವಾಗಿ ಇದು ನಮ್ಮ ಅಭಿಪ್ರಾಯವಾಗಿದೆ. ನಮ್ಮ ಮುಂದಿರುವ ಮಹಾಭಾರತದ ಕೃತಿಯ ವಿಷಯ ವಾಗಿ ಎರಡು ಮಾತುಗಳನ್ನು ಹೇಳುವುದಿದೆ.

ಭಾರತ ದರ್ಶನ ಪ್ರಕಾಶನ ಸಂಸ್ಥೆಯವರು ಮಹಾಭಾರತವನ್ನು ಆಮೂಲಾಗ್ರವಾಗಿ ಯಥಾವತ್ತಾಗಿ 30 ಸಂಪುಟಗಳಲ್ಲಿ ಭಾಷಾಂತರಿಸ ಬೇಕೆಂದು ಇಚ್ಛಿಸಿ ಪ್ರಕಟಿಸುತ್ತಿರುವ ಸಂಪುಟಗಳಲ್ಲಿ ಇದು ಎಂಟನೆಯ ದಾಗಿದೆ. ಈ ಭಾಗವು ವನಪರ್ವದ 300ನೇ ಅಧ್ಯಾಯದಿಂದ ಪ್ರಾರಂಭವಾಗಿ ವಿರಾಟಪರ್ವದ 55ನೆಯ ಅಧ್ಯಾಯಕ್ಕೆ ಮುಗಿಯುತ್ತದೆ. ಸೂರ್ಯನು ತನ್ನ ಅಂಶದಿಂದ ಜನಿಸಿದ ಕರ್ಣನ ಹಿತವನ್ನು ಬಯಸಿ ಕರ್ಣಕುಂಡಲಗಳನ್ನು ಇಂದ್ರನಿಗೆ ದಾನಕೊಡಬಾರದೆಂದು ಉಪದೇಶಮಾಡುವುದರಿಂದ ಮೊದಲ್ಗೊಂಡು ಗೋಗ್ರಹಣಪರ್ಯಂತವಾಗಿ ಕಥೆಯಿದೆ. ಈ ಎಲ್ಲ ಭಾಗವನ್ನೂ ಭಾಷಾಂತರಿಸಿರುವ ಮತ್ತು ಮುಖ್ಯ-ಮುಖ್ಯ ಶ್ಲೋಕಗಳಿಗೆ ಕೊಟ್ಟಿರುವ ವಿವರಣೆಯು ಬಹುರಮ್ಯವಾಗಿದೆ. ಭಾಷಾಂತರವು ಇವರದೇ ಒಂದು ಹೊಸರೀತಿಯದಾಗಿದ್ದು ವೈಶಿಷ್ಟ್ಯಪೂರ್ಣವಾಗಿದೆ. ಓದುಗರಿಗೆ ಇವರು ಕೊಡುವ ವಿವರಣೆಯು ಭಾವಾವೇಶವನ್ನುಂಟುಮಾಡುತ್ತದೆ. ರಸಿಕರಿಗೆ ರಸದೂಟವನ್ನು ಉಣಿಸುತ್ತದೆ.

'ಭಾರತವನ್ನು ಹಾರುತ್ತಾ ಹೇಳಬೇಕು' ಎಂದು ಕೆಲವು ಹಿಂದಿನ ವಿದ್ವಾಂಸರು ಹೇಳುತ್ತಿದ್ದರು. ಅದರ ತಾತ್ಪರ್ಯವೇನೆಂದರೆ : ಭಾರತದಲ್ಲಿಯ ಎಲ್ಲ ಶ್ಲೋಕಗಳೂ ಭಾಗಗಳೂ ವಿವರಣೆಗೆ ಅರ್ಹವಲ್ಲ ; ಕೆಲವೆಡೆ ಯಾವ ರಸವೂ ಇಲ್ಲ. ಯಾವ ಹೊಸ ವಿಷಯವೂ ಇಲ್ಲ. ಕಾರಣ ಅಂಥಾ ಭಾಗಗಳನ್ನು ಹಾರಿಸಿ ಮುಂದಿನ ರಸಭಾಗಗಳನ್ನಷ್ಟೇ ವಿವರಿಸುವುದು ಯುಕ್ತ.

ಆದರೆ ಈ ಸಂಸ್ಥೆಯವರು ಈ ಮಾತನ್ನು ಇನ್ನೊಂದರ್ಥಕ್ಕೆ ತಿರುಗಿಸಿ ದ್ದಾರೆ. ಅದೆಂದರೆ : ಹಾರುತ್ತಾ-ಕುಣಿಯುತ್ತಾ ಅಷ್ಟೊಂದು ರಸಭಾವಗಳ

ಆವೇಶಭರಿತರಾಗಿ ಹೇಳಬೇಕು ಹಾಗೂ ಕೇಳಬೇಕು–ಎಂದರ್ಥೀಕರಿಸಿ ಬಹಳ ರುಚಿಕರವಾಗಿ ಮೂಲಕ್ಕೆ ಸ್ವಲ್ಪವಾದರೂ ಲೋಪವಿಲ್ಲದೆ ಭಾಷಾಂತರಿಸಿ ವಿವರವಾಗಿ ಕನ್ನಡ ಜನತೆಯ ಮುಂದಿಡುತ್ತಿದ್ದಾರೆ. ಕೆಲವೆಡೆಗಳಲ್ಲಿ ಇವರು ಕೊಡುವ ವಿವರಣೆಗಳನ್ನು ನೋಡಿದರೆ ವ್ಯಾಸಗುಟ್ಟನ್ನು ಹೊರಗೆಡಹುತ್ತಾರೋ–ಎಂಬಂತೆ ಭಾಸವಾಗುತ್ತದೆ.

ಧರ್ಮರಾಜನಿಗೂ–ಯಕ್ಷನಿಗೂ ನಡೆದ ಸಂಭಾಷಣೆ ಅಂದರೆ 'ಯಕ್ಷಪ್ರಶ್ನೆ' ಎಂಬ ಭಾಗವನ್ನು ನೋಡಿರಿ. ಲೋಕವ್ಯವಹಾರಕ್ಕೂ ಇತರ ಪ್ರಾಮಾಣಿಕಗ್ರಂಥಗಳಿಗೂ ಆ ಪ್ರಶ್ನೋತ್ತರಗಳನ್ನು ಹೊಂದಿಸಿ ಬರೆಯುವಾಗ ಈ ಸಂಸ್ಥೆಯ ವಿದ್ವಾಂಸರು ತುಂಬಾ ಶ್ರಮಿಸಿದ್ದಾರೆ. ಕ್ಲಿಷ್ಟವಾದ ವಿಷಯಗಳನ್ನು ಬಹುಸರಳವಾಗಿ ಜನತೆಗೆ ತಿಳಿಸಿದ್ದಾರೆ. **'ಬ್ರಾಹ್ಮಣ್ಯಂ ಕೇನ ಭವತಿ' 'ಕೋ ಮೋದತೇ' 'ಕಿಮಾಶ್ಚರ್ಯಂ'**–ಎಂಬಿವೇ ಕೆಲವು ಪ್ರಶ್ನೆಗಳನ್ನೂ ಅದರ ಉತ್ತರಗಳನ್ನೂ ವಿಮರ್ಶಿಸಿ ಬರೆಯುವಾಗ ಶ್ರೀ ಶಂಕರಭಗವತ್ಪಾದರು, ಸರ್ವಜ್ಞಕವಿ ಮುಂತಾದವರ ವಚನಗಳನ್ನು ಉದಾಹರಿಸಿ **'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ'**–ಎಂಬುದನ್ನು ಎತ್ತಿತೋರಿಸಿದ್ದಾರೆ.

'ಮಹಾಭಾರತ ಕಟ್ಟುಕಥೆ' ಎನ್ನುವವರಿಗೂ ಅನೇಕ ಕಡೆಗಳಲ್ಲಿ ಮನದಟ್ಟಾಗುವಂತೆ ಉತ್ತರಿಸಿದ್ದಾರೆ. ಈ ವಿಷಯವಾಗಿ ನಾವೂ ಎರಡು ಮಾತು ಹೇಳಬಯಸುತ್ತೇವೆ.

ಮಹಾಭಾರತವು ಕಟ್ಟುಕಥೆಯಾಗಿದ್ದರೆ ಇದಕ್ಕೆ ಇತಿಹಾಸ ಎಂಬ ಹೆಸರು ರೂಢಿಯಲ್ಲಿ ಬರುತ್ತಿರಲಿಲ್ಲ. 'ಕಾದಂಬರೀ' ಎಂದು ಕರೆಯುತ್ತಿದ್ದರು. ಮಹಾಭಾರತವು ಪ್ರಪ್ರಥಮವಾಗಿ ಪ್ರಚಾರದಲ್ಲಿ ಬಂದಾಗ ಜೀವಿಸುತ್ತಿದ್ದ ಜನರು ಇದು ನಡೆದ ಕಥೆಯೇ ಆಗಿರದಿದ್ದರೆ ಕಟ್ಟುಕಥೆಯೆಂದು ಹೀಯಾಳಿಸದೇ ಬಿಡುತ್ತಿರಲಿಲ್ಲ. ನಮ್ಮ ಹಿಂದಿನವರು ಇತಿಹಾಸ-ಕಾದಂಬರಿಗಳಿಗೆ ಭೇದಜ್ಞಾನವಿಲ್ಲದಷ್ಟು ಮಂದರಾಗಿರಲಿಲ್ಲ. ನಮ್ಮ ಕಾಲದಲ್ಲಿಯೇ ನಡೆಸಿರುವ ಸತ್ಯಾಗ್ರಹವೇ ( ಸ್ವಾತಂತ್ರ್ಯ ಚಳುವಳಿ ) ಮೊದಲಾದ ಕೆಲವು ಚರಿತ್ರಾಂಶಗಳನ್ನು ಕಾದಂಬರಿಯೆಂದು ನಾವೀಗ ಹೇಳಲು ಸಾಧ್ಯವಾಗುವುದೇ? ಹೇಳಿದರೆ ಜನರು ಒಪ್ಪುತ್ತಾರೆಯೇ? ಸತ್ಯಾಗ್ರಹವು ಚರಿತ್ರೆ

ಅಥವಾ ಇತಿಹಾಸ ಎಂದು ಇಂದು ನಾವು ಒಪ್ಪಿ ಹೇಳಿದುದನ್ನು ಮುಂದಿನವರೂ ಪರಿಗ್ರಹಿಸುತ್ತಾರಲ್ಲವೇ? ಅದೇ ರೀತಿಯಲ್ಲಿ ಹಿಂದಿನವರು ಇತಿಹಾಸವೆಂದೂ–ಚರಿತ್ರೆಯೆಂದೂ ಒಪ್ಪಿ ಹೇಳಿರುವುದನ್ನು ನಾವಿಂದು ಒಪ್ಪಿಕೊಳ್ಳಲೇಬೇಕು. ಮಹಾಭಾರತವನ್ನು ಆಮೂಲಾಗ್ರವಾಗಿ ಓದುವವರಿಗೆ ಅದು ಇತಿಹಾಸವೇ? ಅಲ್ಲವೇ?–ಎಂಬ ವಿವೇಚನೆಯೇ (ಸಂಶಯ) ಬರುವುದಿಲ್ಲವೆಂಬುದು ನಮ್ಮ ಅಭಿಪ್ರಾಯವಾಗಿದೆ. ಮಹಾಭಾರತವನ್ನು ಓದದವರು ಮಾತ್ರವೇ ಈ ವಿಷಯವಾಗಿ ವಿವಾದಮಾಡುತ್ತಾರೆ. ಮಹಾಭಾರತದಲ್ಲಿ ಹೆಜ್ಜೆ-ಹೆಜ್ಜೆಗೂ ನಾನಾತತ್ತ್ವಗಳನ್ನು ಓತ-ಪ್ರೋತವಾಗಿ ಭಗವಾನ್ ವ್ಯಾಸರು ಹೆಣೆದುಬಿಟ್ಟಿದ್ದಾರೆ. ಅದರ ಆಸ್ವಾದನೆಯಲ್ಲಿಯೇ ಮನಸ್ಸು ಲೀನವಾಗಿ ಬಿಡುವುದೇ ಹೊರತು 'ಹಾಗೆ ನಡೆಯಿತೇ? ಹೀಗೆ ನಡೆಯಿತೇ?' ಎಂಬ ಕಡೆಗೆ ಮನಸ್ಸೇ ಹೋಗುವುದಿಲ್ಲ. ಒಂದು ವೇಳೆ ಮನಸ್ಸು ಅತ್ತಕಡೆ ಸಾಗಿದರೂ ಸಹ ಇದು ಇತಿಹಾಸ, ಹಿಂದೆ ನಡೆದುದು–ಎಂಬುದನ್ನು ನಾವು ಮೇಲೆ ಕೊಟ್ಟಿರುವ ಉದಾಹರಣೆಯಿಂದ ಒಪ್ಪಿಕೊಳ್ಳಲೇಬೇಕಾಗುತ್ತದೆ.

ಒಟ್ಟಿನಲ್ಲಿ ಭಾರತ ದರ್ಶನ ಪ್ರಕಾಶನಸಂಸ್ಥೆಯವರು ಪ್ರಕಾಶನಗೊಳಿಸುತ್ತಿರುವ ಈ ಕನ್ನಡ ಮಹಾಭಾರತವು ಜನತೆಗೆ ಸ್ತುತ್ಯವೂ, ವಿಚಾರವಂತರಿಗೆ ವಿಚಾರವೇದಿಕೆಯೂ, ವೇತ್ತೃಗಳಿಗೆ ಸಂಗ್ರಾಹ್ಯವೂ, ಧರ್ಮಾರ್ಥ-ಕಾಮ-ಮೋಕ್ಷೇಚ್ಛುಗಳಿಗೆ ಶಾಸ್ತ್ರವೂ ಆಗಿದ್ದು ಸಕಲರೂ ಇದನ್ನು ಸಂಗ್ರಹಿಸಿ ಅವಲೋಕಿಸಿ ಶ್ರೇಯೋಭಾಗಿಗಳಾಗಲೆಂದೂ–ಈ ಮಹಾಗ್ರಂಥವನ್ನು ಪ್ರಕಟಿಸುತ್ತಿರುವ ಭಾರತ ದರ್ಶನ ಪ್ರಕಾಶನಕ್ಕೆ ಜನತೆಯ ವಿಶೇಷ ಆದರಣೆ–ಪ್ರೋತ್ಸಾಹಗಳು ದೊರೆತು ಶ್ರೀಸೀತಾರಾಮಚಂದ್ರ-ಚಂದ್ರಮೌಳೀಶ್ವರರ ಪ್ರಸಾದ ಪ್ರಾಪ್ತವಾಗಿ ಆರಂಭಿಸಿದ ಈ ಮಹಾಕಾರ್ಯವು ನಿರ್ವಿಘ್ನವಾಗಿ ಪೂರೈಸಲೆಂದೂ ಆಶಿಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮೃತಯಃಶ್ರೀಃ

ಶ್ರೀಮದ್ರಾಕ್ಷಸನಾಮಸಂವತ್ಸರ ಆಶ್ವಯುಜ ಶುದ್ಧ ಸಪ್ತಮೀ
ಸ್ಥಿರವಾಸರೇ (11.10.75)
ವಸತಿಃ– ಬಸವನಗುಡಿ ಲಾಲ್‌ಬಾಗ್ ವೆಸ್ಟ್ ಗೇಟ್ ಸಮೀಪಸ್ಥ
ಕೂಡಲೀ ಸಚ್ಚಿದಾನನ್ದಪ್ರಾಸಾದೇ, ಬೆಂಗಳೂರು ನಗರೇ

## ದ್ವಿತೀಯಮುದ್ರಣದ ಪ್ರಸ್ತಾವನೆ

8ನೆಯ ಸಂಪುಟದಿಂದ 16ನೆಯ ಸಂಪುಟದವರೆಗೆ ಎಂಟೆಂಟು ಸಾವಿರ ಪ್ರತಿಗಳನ್ನು ಛಾಪಿಸಲಾಗುತ್ತಿತ್ತು. ಈ 9 ಸಂಪುಟಗಳಲ್ಲಿ ಆರು ಸಂಪುಟಗಳು ಈ ಪ್ರಸ್ತಾವನೆಯನ್ನು ಬರೆಯುವ ವೇಳೆಗೆ ಸಂಪೂರ್ಣವಾಗಿ ಮುಗಿದಿವೆ. ಉಳಿದ 3 ಸಂಪುಟಗಳು ಸ್ವಲ್ಪದಿವಸಗಳಲ್ಲಿಯೇ ಮುಗಿಯುವುದರಲ್ಲಿವೆ. 2ನೆಯ ಬಾರಿಗೆ ಮುದ್ರಣವಾಗಿದ್ದ 4 ಮತ್ತು 5ನೆಯ ಸಂಪುಟಗಳೂ ಸಂಪೂರ್ಣವಾಗಿ ಮುಗಿದಿದ್ದು 6ನೆಯ ಸಂಪುಟವೂ ಮುಗಿಯುವುದರಲ್ಲಿದೆ. ಹೀಗೆ ಪುನರ್ಮುದ್ರಣದ ಕಾರ್ಯವು ಅಗಾಧವಾಗಿ ಬೆಳೆಯುತ್ತಿದೆ. ಮಹಾಭಾರತವು ಪುನರ್ಮುದ್ರಣವಾಗುತ್ತಿರುವುದು ಸಂತಸದ ವಿಷಯವೇ ಸರಿ. ಆದರೂ ಪುನರ್ಮುದ್ರಣಕ್ಕೆ ಬೇಕಾಗುವ ಲಕ್ಷಾಂತರ ರೂ.ಗಳನ್ನು ಒದಗಿಸಿಕೊಳ್ಳುವುದು ದುಸ್ತರವಾಗಿ ಕಾಣುತ್ತಿದೆ. ಮರಳುಗಾಡಿನಲ್ಲಿ ಕಾಣುವ ಚಿಲುಮೆಯಂತೆ ತಿರುಪತಿ-ತಿರುಮಲೆ ದೇವಸ್ಥಾನದವರು ಮಹಾ ಭಾರತದ ಪುನರ್ಮುದ್ರಣದ ಪ್ರತಿಸಂಪುಟಕ್ಕೂ 5 ಸಾವಿರ ರೂ.ಗಳ ಅನುದಾನ ವನ್ನು ಕೊಡುವುದಾಗಿ ಆಶ್ವಾಸನೆ ನೀಡಿರುತ್ತಾರೆ. ಕಷ್ಟವೆನಿಸಿದ ಸಮಯಗಳಲ್ಲಿ ಪರಮಾತ್ಮನ ಅಭಯಹಸ್ತವಿರುವುದೆಂಬುದಕ್ಕೆ ಇದು ಜ್ವಲಂತ ಸಾಕ್ಷಿಯಾಗಿದೆ. ಆದುದರಿಂದ ಲಕ್ಷಾಂತರ ರೂಪಾಯಿಗಳನ್ನು ಪುನರ್ಮುದ್ರಣಕ್ಕೆ ತೊಡಗಿಸಬೇಕಾಗಿ ದ್ದರೂ ಪರಮಾತ್ಮನ ಕೃಪೆಯಿಂದ ಎಲ್ಲವೂ ಸುಗಮವಾಗುವುದೆಂಬ ಭರವಸೆ ಯಿಂದಿರುತ್ತೇವೆ. ನಮ್ಮ ಕಾರ್ಯಕ್ರಮದಂತೆ 22ನೆಯ ಸಂಪುಟವು ಮುಗಿದನಂತರ ಇದೀಗ 8ನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಇದಾದ ನಂತರ ನವೆಂಬರ್ ವೇಳೆಗೆ 23ನೆಯ ಸಂಪುಟವನ್ನು ಮುಗಿಸಿ ಡಿಸೆಂಬರ್ ಕಡೆಯ ವೇಳೆಗೆ 9ನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸುವ ಆಶಯವಿದೆ.

ತಾತ್ಕಾಲಿಕವಾಗಿ ಸಂಪುಟಗಳು ಇಲ್ಲದ ಬಗೆಗೆ ಗ್ರಾಹಕರು ದಯವಿಟ್ಟು ಬೇಸರಪಡಕೂಡದು. ಕಾಲಾನುಕ್ರಮವಾಗಿ ಎಲ್ಲ ಸಂಪುಟಗಳನ್ನೂ ಪುನರ್ಮುದ್ರಿಸಿ ಕೊಡಲಾಗುವುದು. ಎಲ್ಲರೂ ಮಹಾಭಾರತವನ್ನು ಆಮೂಲಾಗ್ರವಾಗಿ ಅಧ್ಯಯನಮಾಡಬೇಕೆಂಬುದೇ ನಮ್ಮ ಮುಖ್ಯಧ್ಯೇಯವಾಗಿದೆ.

ಸಂಪಾದಕಮಂಡಲಿಯವರು ಈ ದ್ವಿತೀಯಮುದ್ರಣದ ತಪ್ಪು-ಒಪ್ಪುಗಳನ್ನು ಶ್ರಮವಹಿಸಿ ಪರಿಶೀಲಿಸಿಕೊಟ್ಟಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ದಯಾಮಯನಾದ ಸಚ್ಚಿದಾನಂದಸ್ವರೂಪನಾದ, ಹರಿ-ಹರ-ಗುರು ರೂಪಿಯಾದ ಪರಮಾತ್ಮನು ಮಹಾಭಾರತದ ಓದುಗರೆಲ್ಲರಿಗೂ ಸುಖ-ಸಂತೋಷಗಳನ್ನೀಯಲೆಂಬ ಪ್ರಾರ್ಥನೆಯೊಡನೆ ವಿರಮಿಸುವೆವು.

—ಪ್ರಕಾಶಕರು.

## ತೃತೀಯ ಮುದ್ರಣದ ಪ್ರಸ್ತಾವನೆ

ಭಗವಂತನ ದಯೆಯಿಂದ 8ನೆಯ ಸಂಪುಟದ ಮೂರನೆಯ ಮುದ್ರಣ ವನ್ನು ಮುಗಿಸಿದ್ದೇವೆ. 1984ರಲ್ಲಿ 7ನೆಯ ಸಂಪುಟದ ಮೂರನೆಯ ಮುದ್ರಣ ವಾದನಂತರ 8ನೆಯ ಸಂಪುಟದ ಮೂರನೆಯ ಮುದ್ರಣವಾಗಬೇಕಾಗಿದ್ದಿತು. 7ನೆಯ ಸಂಪುಟದ ಮೂರನೆಯ ಮುದ್ರಣದ ಪ್ರತಿಗಳು ಮುಗಿದು ಹೋದರೂ 8ನೆಯ ಸಂಪುಟವನ್ನು ಮುದ್ರಿಸಲು ಸಾಧ್ಯವಾಗಲಿಲ್ಲ. ಮೊದಲ ಐದು ಸಂಪುಟಗಳೇ ಮುಗಿದು ಹೋಗಿದ್ದು ಆ ಸಂಪುಟಗಳನ್ನು ಪುನರ್ಮುದ್ರಣಮಾಡಬೇಕಾಯಿತು. ಹೀಗಾಗಿ ಸುಮಾರು ಮೂರುಸಾವಿರ ಗ್ರಾಹಕರಿಗೆ 8ನೆಯ ಸಂಪುಟವನ್ನು ಈಗ ವಿತರಿಸಬೇಕಾಗಿದೆ. ಸ್ವಲ್ಪ ದಿವಸಗಳಲ್ಲಿಯೇ ಕಳುಹಿಸಿಕೊಡಲಾಗುವುದು. 6ನೆಯ ಸಂಪುಟವೂ ಮುಗಿಯುವುದರಲ್ಲಿದೆ. ಇದು ಆರನೆಯ ಸಂಪುಟದ ನಾಲ್ಕನೆಯ ಮುದ್ರಣ. 7ನೆಯ ಸಂಪುಟವನ್ನೂ ಮುದ್ರಿಸಬೇಕಾಗಿದೆ. ಆದರೆ 7ನೆಯ ಸಂಪುಟವು ಇತ್ತೀಚೆಗೆ ಮುಗಿದಿರುವುದರಿಂದ ನೆಯ ಸಂಪುಟದ ಮುದ್ರಣವಾದ ನಂತರ 7ನೆಯ ಸಂಪುಟವನ್ನು ಮುದ್ರಿಸಬೇಕೆಂದಿರುತ್ತೇವೆ. 6, 8ನೇ ಸಂಪುಟಗಳಿದ್ದು ಮಧ್ಯದಲ್ಲಿ 7ನೇ ಸಂಪುಟವಿರದಿದ್ದರೆ ಓದುಗರಿಗೆ ಬೇಸರವಾಗುವುದು ಸಹಜ. ಆದರೆ ಅನುಕ್ರಮವಾಗಿ ಮುದ್ರಿಸಬೇಕಾಗಿರುವುದರಿಂದ ಕೆಲವು ಸಂದರ್ಭದಲ್ಲಿ ಇದು ಅನಿವಾರ್ಯವಾಗುತ್ತದೆ. ಪ್ರಸಕ್ತ ನಾವು 23ನೇ ಸಂಪುಟದ ಪುನರ್ಮುದ್ರಣ ವನ್ನು ಪ್ರಾರಂಭಿಸಿದ್ದೇವೆ. ಅದು ಮುಗಿದನಂತರ 5ನೇ ಸಂಪುಟ ರಾಮಾಯಣವನ್ನು ಮುದ್ರಣಕ್ಕೆ ತೆಗೆದುಕೊಳ್ಳಲಾಗುವುದು. ಇದು ನಮ್ಮ ಪ್ರಕಟಣೆಯ ಕಾರ್ಯಕ್ರಮ ವಾಗಿದೆ. ಗ್ರಾಹಕರೆಲ್ಲರೂ ಸಹಕರಿಸಬೇಕಾಗಿ ಕೇಳಿಕೊಳ್ಳುತ್ತೇವೆ.

ಸಂಪಾದಕ ಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪು ಗಳನ್ನು ನೋಡಿಕೊಟ್ಟು ಉಪಕರಿಸಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮದು ಕೇವಲ ಸಂಕಲ್ಪ. ದಯಾಮಯನಾದ ಭಗವಂತನು ಎಲ್ಲವನ್ನು ನಡೆಸಿಕೊಡಬೇಕಾಗಿದೆ. ನಾವೆಲ್ಲರೂ ಅವನ ಕರುಣೆಗಾಗಿ ಒಕ್ಕೊರಳಿ ನಿಂದ ಪ್ರಾರ್ಥಿಸೋಣ.

—ಪ್ರಕಾಶಕರು.

## ಚತುರ್ಥ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಎಂಟನೆಯ ಸಂಪುಟದ ನಾಲ್ಕನೆಯ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಇದನ್ನೂ 21ನೆಯ ಸಂಪುಟದ

ಪುನರ್ಮುದ್ರಣದಂತೆಯೇ ಮೆ|| ಎಲಿಗೆಂಟ್ ಮುದ್ರಣಾಲಯದವರ ಸಹಕಾರದಿಂದ ಮುದ್ರಿಸಲಾಯಿತು. ಮುಂದಿನ ಕೆಲವು ಸಂಪುಟಗಳನ್ನೂ ಹೀಗೆಯೇ ಮುದ್ರಿಸುವ ಆಶಯವಿದೆ. ಪರಮಾತ್ಮನ ದಯೆಯಿಂದ ಇದಕ್ಕೆ ಬೇಕಾದ ಬಂಡವಾಳವೂ ಒದಗಿಬಂದು ಇದು ಸಾಧ್ಯವಾಗಬೇಕಾಗಿದೆ. ಗ್ರಾಹಕರ ಸಂಖ್ಯೆಯೂ ಹೆಚ್ಚಬೇಕಾಗಿದೆ. ಇದುವರೆಗೆ ಗ್ರಾಹಕರಾಗಿರುವವರೂ ಮಹಾಭಾರತ-ರಾಮಾಯಣ-ಭಾಗವತಗಳ ಪ್ರಚಾರದಲ್ಲಿ ಅವಶ್ಯವಾಗಿ ಸಹಕರಿಸಬೇಕು. ಒಬ್ಬರನ್ನಾದರೂ ಗ್ರಾಹಕರನ್ನಾಗಿ ಮಾಡಿಕೊಡಲು ಪ್ರಯತ್ನಿಸಬೇಕು. ಆಗಲೇ ನಮ್ಮ ಸತ್ಸಂಕಲ್ಪವು ನೆರವೇರಿದಂತಾಗುತ್ತದೆ.

—ಪ್ರಕಾಶಕರು.

---

## ಮಹಾಭಾರತ : ವನಪರ್ವ-ವಿರಾಟಪರ್ವಗಳು: ಎಂಟನೆಯ ಸಂಪುಟದ ವಿಷಯಾನುಕ್ರಮಣಿಕೆ

| ಅಧ್ಯಾಯ | ವಿಷಯಗಳು | ಪು. ಸಂಖ್ಯೆ |
|---|---|---|

## ವಿರಾಟಪರ್ವ

ಪಾಣ್ಡವಪ್ರವೇಶಪರ್ವ



# ಪರಿಶಿಷ್ಟ

## ಪಾಂಡವರ ವನವಾಸ ಮತ್ತು ಅಜ್ಞಾತವಾಸಗಳ ಕಾಲನಿರ್ಣಯ

ಪಾಂಡವರ ವನವಾಸ ಮತ್ತು ಅಜ್ಞಾತವಾಸಗಳ ಅವಧಿಯು ಮುಗಿಯಿತೇ?–ಎಂಬ ಪ್ರಶ್ನೆಯನ್ನು ಎತ್ತಿದ ದುರ್ಯೋಧನನು ಪುನಃ ಅದನ್ನು ಪ್ರಸ್ತಾಪಿಸಲಿಲ್ಲ. ಭೀಷ್ಮರು ತಮ್ಮ ಮಾತಿನಲ್ಲಿ :

[ವಿರಾಟಪರ್ವ ಅಧ್ಯಾಯ ೫೨]

**ಪಞ್ಚಮೇ ಪಞ್ಚಮೇ ವರ್ಷೇ ದ್ವೌಮಾಸಾವುಪಜಾಯತಃ ।**
**ಏಷಾಮಭ್ಯಧಿಕಾ ಮಾಸಾಃ ಪಞ್ಚ ಚ ದ್ವಾದಶ ಕ್ಷಪಾಃ ।**
**ತ್ರಯೋದಶಾನಾಂ ವರ್ಷಾಣಾಮಿತಿ ಮೇ ವರ್ತತೇ ಮತಿಃ ॥೪॥**

'ಐದು ವರ್ಷಗಳಿಗೊಮ್ಮೆ ಎರಡೆರಡು ಮಾಸಗಳು ಚಾಂದ್ರಮಾನದ ಪ್ರಕಾರ ಅಧಿಕವಾಗಿ ಬರುತ್ತವೆ. ಆದುದರಿಂದ ಹದಿಮೂರು ವರ್ಷಗಳಲ್ಲಿ ಐದು ಮಾಸಗಳು ಮತ್ತು ಹನ್ನೆರಡು ದಿನಗಳು ಅಧಿಕವಾಗಿ ಬಂದಿವೆ'– ಎಂದು ಹೇಳಿದ್ದಾರೆ. ಈ ಅಧಿಕಮಾಸಗಳನ್ನು ಕಳೆದು ಲೆಕ್ಕಹಾಕಬಹುದೇ? ಅಧಿಕಮಾಸಗಳ ಗಣನೆಯ ಪ್ರಕಾರ ಪಾಂಡವರು ಐದು ತಿಂಗಳು ಹನ್ನೆರಡು ದಿನಗಳು ಅವಧಿಗೆ ಮೊದಲಾಗಿಯೇ ಹೊರಬಿದ್ದರೇ?–ಇತ್ಯಾದಿ ಪ್ರಶ್ನೆಗಳು

ಹುಟ್ಟುತ್ತವೆ. ಮೊದಲನೆಯದಾಗಿ ದುರ್ಯೋಧನನ ಸಂಶಯಕ್ಕೆ ಕಾರಣ ವನ್ನು ವಿವೇಚಿಸೋಣ. ವಿಜಯದಶಮೀ ದಿವಸದಂದು ಸಾಯಂಕಾಲ ಪಾಂಡವರು ವನವಾಸಕ್ಕೆ ಹೊರಟರು. ಪುನಃ ಅದೇ ವಿಜಯದಶಮಿ ದಿವಸಕ್ಕೆ ಹದಿಮೂರು ವರ್ಷಗಳು ತುಂಬುತ್ತವೆ. ಆದರೆ ಅರ್ಜುನನು ಗ್ರೀಷ್ಮರ್ತು ವಿನ ಆಷಾಢಕೃಷ್ಣಾಷ್ಟಮಿಯ ದಿವಸ ಕೌರವರಿಗೆ ಕಾಣಿಸಿಕೊಂಡಿದ್ದಾನೆ. ದುರ್ಯೋಧನನ ಗಣನೆಯ ಪ್ರಕಾರ ಎಪ್ಪತ್ತೆಂಟು ದಿನಗಳು ಮುಂದಾಗಿ ಪಾಂಡವರು ಕಾಣಿಸಿಕೊಂಡಿರುತ್ತಾರೆ. ಒಂದು ವೇಳೆ ಚಾಂದ್ರಮಾನದಲ್ಲಿ ಅಧಿಕಮಾಸಗಳು ಬಂದರೂ ಅದನ್ನೂ ಸೇರಿಸಿ ವರ್ಷವೆಂದು ಪರಿಗಣಿ ಸುವರೇ ಹೊರತು, ಅದನ್ನು ಬಿಟ್ಟು ಯಾರೂ ವರ್ಷವನ್ನು ಪರಿಗಣಿ ಸುವುದಿಲ್ಲ. ಒಂದು ವೇಳೆ ಪಾಂಡವರು ಚಾಂದ್ರಸಂವತ್ಸರವನ್ನೇ ಗಣನೆಗೆ ತೆಗೆದುಕೊಂಡಿದ್ದಾದರೆ–ಅವರು ವಿಜಯದಶಮಿಯ ದಿವಸವೇ ಹಿಂದಿರುಗ ಬೇಕಾಗಿದ್ದಿತು. ಅಧಿಕಮಾಸಗಳ ಗಣನೆಯು ಅವರಿಗೆ ಯಾವ ವಿಧವಾದ ಅನುಕೂಲವನ್ನೂ ಉಂಟುಮಾಡುವುದಿಲ್ಲ.

ಸೌರಮಾನದ ಪ್ರಕಾರ ಗಣನೆಗೆ ತೆಗೆದುಕೊಂಡಿದ್ದರೂ ಚಾಂದ್ರ-ಸೌರ ಮಾನಗಳಲ್ಲಿ ದಿನಗಳು ಹೆಚ್ಚು ವ್ಯತ್ಯಾಸ ಬರುವುದಿಲ್ಲ. ಹದಿಮೂರು ವರ್ಷ ಗಳಲ್ಲಿ ಕೇವಲ ಆರೆಂಟು ದಿನಗಳ ವ್ಯತ್ಯಾಸವನ್ನು ನಾವು ಕಾಣಬಹುದು. ಹಿಂದೆಯೇ ಒಮ್ಮೆ ಹೇಳಿದಂತೆ ಪ್ರತಿಜ್ಞಾತವಾದ ವರ್ಷಗಳನ್ನು ಇದೇ ಕಾಲ ಮಾನದಿಂದ ಮುಗಿಸಬೇಕೆನ್ನುವ ನಿಬಂಧನೆಯೇನೂ ಆಗಿರಲಿಲ್ಲ. ಧರ್ಮಾತ್ಮ ನಾದ ಯುಧಿಷ್ಠಿರನು ಅಧರ್ಮವನ್ನೆಂದಿಗೂ ಮಾಡಿರಲಾರನೆಂಬುದು ನಿಶ್ಚಯವಾದರೂ–ಅವನು ಅನುಸರಿಸಿರುವ ಮಾರ್ಗವು ಧರ್ಮಾನುಗುಣ ವಾಗಿರಬೇಕಲ್ಲವೇ? ಈ ಸಂದರ್ಭದಲ್ಲಿ ಅವನು ಯಾವ ಸಂವತ್ಸರದ ಕಾಲ ಮಾನವನ್ನು ಅನುಸರಿಸಿ ಪ್ರತಿಜ್ಞಾತವರ್ಷಗಳನ್ನು ಮುಗಿಸಿದನು? ಆತನು ಅನುಸರಿಸಿದ ಕಾಲಮಾನವು ಧರ್ಮಸಮ್ಮತವಾದುದೇ?–ಎಂಬುದನ್ನು ವಿವೇಚಿಸಬೇಕಾಗಿದೆ. ಯಜ್ಞ-ಯಾಗಾದಿಗಳನ್ನು ಮಾಡುವವರು ಸಾವನ ಸಂವತ್ಸರದ ಗಣನೆಯನ್ನಿಟ್ಟುಕೊಳ್ಳುತ್ತಾರೆ. ಸಾವನ ಎಂದರೆ ಯಜ್ಞ (ಸವನ) ಸಂಬಂಧವಾದ ಕಾಲಗಣನೆಯಿರುವುದರಿಂದಲೇ ಇದಕ್ಕೆ ಸಾವನವೆಂದು ಹೆಸರು. ಈ ಸಂವತ್ಸರದಲ್ಲಿ ಮೂವತ್ತು ದಿವಸಗಳಿಗೆ ಒಂದು ಮಾಸ.

ವನವಾಸವೂ ಒಂದು ಮಹಾಯಜ್ಞರೂಪವೇ ಆದುದರಿಂದ ಧರ್ಮರಾಜನು ಸಾವನಸಂವತ್ಸರದ ಪ್ರಕಾರ ಕಾಲಮಾನವನ್ನು ಗಣನೆಮಾಡಿದನೆಂದು ಹೇಳಬಹುದಾಗಿದೆ.

ಹದಿಮೂರು ವರ್ಷಗಳಲ್ಲಿ ಚಾಂದ್ರ-ಸೌರ–ಸಾವನಸಂವತ್ಸರಗಳ ವ್ಯತ್ಯಾಸವು ಈ ಕೆಳಗೆ ಕಾಣಿಸಿದಂತೆ ಇರುತ್ತವೆ :

ಚಾಂದ್ರಮಾನಸಂವತ್ಸರದ ದಿನಗಳು :–1 ವರ್ಷಕ್ಕೆ 354 ದಿವಸಗಳು. 13 ವರ್ಷಗಳಿಗೆ 4,602 ದಿವಸಗಳು.

ಐದು ವರ್ಷಕ್ಕೆ ಎರಡು ತಿಂಗಳ ಅಧಿಕದಂತೆ ಹದಿಮೂರು ವರ್ಷ ಗಳಲ್ಲಿ 156 ದಿವಸಗಳು ಅಧಿಕವಾಗಿ ಬರುತ್ತವೆ.

(5 ತಿಂಗಳು 12 ದಿವಸಗಳೆಂದು ಭೀಷ್ಮರು ಹೇಳಿದ್ದಾರೆ. ಆದರೆ ಚಾಂದ್ರಮಾನದ ತಿಂಗಳಿನಲ್ಲಿ ಎಲ್ಲ ತಿಂಗಳಿನಲ್ಲಿಯೂ 30 ದಿವಸಗಳಿರುವು ವೆಂದು ಹೇಳಲಾಗುವುದಿಲ್ಲ.) ಚಾಂದ್ರಮಾನದ ಪ್ರಕಾರ (ಅಧಿಕವೂ ಸೇರಿ) ಒಟ್ಟು ದಿನಗಳು 4,758.

ಸೌರಮಾನಸಂವತ್ಸರದ ದಿನಗಳು :– 1 ವರ್ಷಕ್ಕೆ 365 ದಿವಸಗಳು. 16 ಗಳಿಗೆಗಳು. 13 ವರ್ಷಗಳಿಗೆ 4,749 ದಿವಸಗಳಾಗುತ್ತವೆ.

ಚಾಂದ್ರಮಾನ ಮತ್ತು ಸೌರಮಾನಗಳಿಗೆ ಹದಿಮೂರು ವರ್ಷಗಳಲ್ಲಿ ಕೇವಲ 9 ದಿವಸಗಳ ವ್ಯತ್ಯಾಸವಿರುತ್ತದೆ.

ಸೌರಮಾನಸಂವತ್ಸರದ ದಿನಗಳು :– 1 ವರ್ಷಕ್ಕೆ 360 ದಿನಗಳು. 13 ವರ್ಷಗಳಿಗೆ 4,680 ದಿನಗಳು.

ಚಾಂದ್ರಮಾನದ ಪ್ರಕಾರ ಪಾಂಡವರು ಹೊರಟ 4,758ನೆಯ ದಿವಸಕ್ಕೆ ಪುನಃ ವಿಜಯದಶಮಿಯು ಬರುತ್ತದೆ.

ಆದರೆ ಅವರು ಸಾವನಸಂವತ್ಸರದ ಗಣನೆಯಂತೆ 4,680 ದಿವಸ ಗಳನ್ನು ಮುಗಿಸಿ ಪ್ರತಿಜ್ಞೆಯನ್ನು ಪೂರೈಸಿದ್ದಾರೆ. ಎಂದರೆ ಚಾಂದ್ರಮಾಸದ ಎಣಿಕೆಗಿಂತಲೂ 78 ದಿವಸಗಳು ಕಡಿಮೆಯಾದ ಹಾಗಾಯಿತು. 78 ದಿವಸ

ಗಳ ಕಡಿಮೆಯೆಂದರೆ ಆಷಾಢ ಬಹುಳ ಅಷ್ಟಮಿಯಿಂದ ಆಶ್ವಯುಜ ಶುದ್ಧ ದಶಮಿಗೆ 78 ದಿವಸಗಳ ಅಂತರವಿರಬೇಕಾಯಿತು.

| | |
|---|---|
| ಆಷಾಢ | ೮ ದಿವಸಗಳು |
| ಶ್ರಾವಣ | ೩೦ ದಿವಸಗಳು |
| ಭಾದ್ರಪದ | ೩೦ ದಿವಸಗಳು |
| ಆಶ್ವಯುಜ | ೧೦ ದಿವಸಗಳು (ವಿಜಯದಶಮೀ) |

78 ದಿವಸಗಳ ವ್ಯತ್ಯಾಸವು ಸರಿಯಾಗಿ ಬರುತ್ತಾದ್ದರಿಂದ ಪಾಂಡವರು ಸಾವನಸಂವತ್ಸರವನ್ನೇ ವನವಾಸ ಮತ್ತು ಅಜ್ಞಾತವಾಸಗಳ ಗಣನೆಗೆ ತೆಗೆದುಕೊಂಡರೆಂದು ಖಚಿತವಾಗಿ ಹೇಳಬಹುದಾಗಿದೆ. ಅವಧಿಯು ಕಳೆದ ದಿವಸಕ್ಕೆ ಸರಿಯಾಗಿ ಅರ್ಜುನನು ಕಾಣಿಸಿಕೊಂಡನೇ ಹೊರತು ಅವಧಿ ಗಿಂತಲೂ ಮೊದಲೇ ಕಾಣಿಸಿಕೊಳ್ಳಲಿಲ್ಲ.



## ಭಾರತ ದರ್ಶನಕ್ಕೆ ಪೂಜ್ಯ ಡಾ|| ಡಿ. ವಿ. ಜಿ.ಯವರ ಪತ್ರ

ವಿದ್ವನ್ಮಿತ್ರರಾದ ಶ್ರೀಮಾನ್ ಕೌಶಿಕರವರ ಸನ್ನಿಧಿಯಲ್ಲಿ ವಿಜ್ಞಾಪನಾ.

ನಿನ್ನೆ ನನ್ನನ್ನು ನೋಡಲು ಇಬ್ಬರು ಸ್ನೇಹಿತರು ನನ್ನ ಮನೆಗೆ ಬಂದಿದ್ದರು. ಅವರಲ್ಲಿ ದೊಡ್ಡಾತನ ಅಣ್ಣನ ಮಗ ಇನ್ನೊಬ್ಬರು. ಅವರಿಬ್ಬರೂ ತಮ್ಮ ವನಪರ್ವ ಸಂಪುಟ (೬) ವನ್ನು ತೆಗೆದುಕೊಂಡು ಅದರಲ್ಲಿಯ 3174 ನೆಯ ಪುಟದಿಂದ "ಅಟ್ಟಶೂಲಾ ಜನಪದಾಃ" ಮೊದಲಾದ ಶ್ಲೋಕಗಳನ್ನೋದಿ ಇವುಗಳನ್ನು ವೇ|| ರಂಗಸ್ವಾಮಿಯವರೋ, ವೇ|| ರಾಮೇಶ್ವರಾವಧಾನಿಗಳವರೋ ಅಥವಾ ಬೇರೆ ಯಾರೋ ಈಗಿನವರು ರಚಿಸಿ ಸೇರಿಸಿರಬೇಕೆಂದು ವಾದಿಸಿದರು. ನಾನು ಹಾಗಿರಲಾರದೆಂದೆ. ಅದಕ್ಕೆ ಅವರು ನನ್ನನ್ನು ಕುರಿತು "ಮೂಢ! ನಿನಗೆ ತಿಳಿಯದು. ಅವರು ಯಾರೋ ಈಗಿನವರು. ಇಲ್ಲದಿದ್ದರೆ ಹೀಗೆ ಇಂದಿನ ಸ್ಥಿತಿಗಳನ್ನು ಇಷ್ಟು ಚೆನ್ನಾಗಿ

ವರ್ಣಿಸಲಾಗುತ್ತಿರಲಿಲ್ಲ. ಇದರಲ್ಲಿ **'ಕರಭಾರಭಯಾದ್ ಭೀತಾಃ'** ಮೊದಲಾದುವು ಈ ಹೊತ್ತಿನ ಯಥಾರ್ಥಸ್ಥಿತಿ. ಇವನ್ನು ಕಣ್ಣಾರ ಕಂಡಿರುವವರು ಬರೆದಿರಬೇಕು'–ಎಂದು ಹೇಳುತ್ತಾ ತಮ್ಮ ಸಂತೋಷವನ್ನು ಪ್ರದರ್ಶನಮಾಡಿ ಹೊರಟುಹೋದರು. ವಾದಕ್ಕೆ ನಿಲ್ಲಲಿಲ್ಲ. ಅವಸರವೆಂದರು. ಅವರಿಬ್ಬರೂ ಎಂ.ಎ., ಎಂ.ಎಸ್‌ಸ್ಸಿ, ಮೊದಲಾದ ಪರೀಕ್ಷೆಗಳನ್ನು ಬೆಂಗಳೂರು ಸೆಂಟ್ರಲ್ ಕಾಲೇಜಿನಿಂದ ಓದಿ ಪಾಸ್ ಮಾಡಿದವರು. ಈಗ ಇಪ್ಪತ್ತು-ಮೂವತ್ತು ವರ್ಷಗಳ ಹಿಂದಿನ ಅದೇ ಕಾಲೇಜಿನ ಪಂಡಿತರಲ್ಲಿ ತರಗತಿಗೆ ತಕ್ಕಷ್ಟು ಸಂಸ್ಕೃತವನ್ನೂ ಕಲಿತವರು.

ನಾನು ಅವರನ್ನು ಕೇಳಿದೆ : 'ಪುಸ್ತಕವನ್ನು ಓದಿದಿರಾ?' ಎಂದು. ಅವರು: "ಆಹಾ! ಈ ಒಂದು ಸಂಪುಟವನ್ನೇ ಅಲ್ಲ. ಹಿಂದಿನ ಸಂಪುಟಗಳನ್ನೂ ಓದಿದ್ದೇವೆ. ಬಹು ಚೆನ್ನಾಗಿದೆ. ಈ ಭಾರತ ದರ್ಶನ ಪ್ರಕಾಶನದಿಂದ ತುಂಬ ಉಪಕಾರವಾಗಿದೆ. ಬಹು ಸಂತೋಷ ಇಂಥಾ ಒಳ್ಳೆಯ ಕೆಲಸವನ್ನು ನೋಡಿ. ಈ ಮಾತನ್ನು ಹೇಳಿ ಹೋಗುವುದಕ್ಕೋಸ್ಕರವೇ ಇಲ್ಲಿಗೆ ಬಂದೆವು. ಇನ್ನು ಹೊರಡುತ್ತೇವೆ"–ಎಂದರು.

ಅವರು ಮಲ್ಲೇಶ್ವರದ ಆಚೇಕಡೆಯಿಂದ ಬಂದವರು. ಅವರು ಪಟ್ಟ ಸಂತೋಷ ನನ್ನದು ಮತ್ತು ನಿಮ್ಮದು. ನಡೆದ ಸಂಗತಿಯನ್ನು ಅರಿಕೆ ಮಾಡಿದ್ದೇನೆ.

ವಿದ್ವಾನ್ ಅನಂತಕೃಷ್ಣಶರ್ಮರವರ ಸಂತೋಷಪತ್ರವನ್ನೂ ನೋಡಿದ್ದೇನೆ.

ಇನ್ನೊಂದು ಮಾತು : ಅಭಕ್ಷ್ಯಭಕ್ಷಣಾಪೇಕ್ಷಿಗಳು ಸ್ವಪಕ್ಷಸಮರ್ಥನೆಗಾಗಿ ರಂತಿದೇವನ ಮೇಲೆ ಹೊರಿಸಿದ್ದ ಅಪಕೀರ್ತಿಯನ್ನು ತಾವು ತೊಡೆದು ಹಾಕಿದ್ದೀರಿ. ತಮ್ಮ ವಿಮರ್ಶನಾಸರಣಿ ಕಾರಣಸಹಿತವಾಗಿ, ಒಪ್ಪತಕ್ಕದ್ದಾಗಿದೆ–ಎಂದು ನನಗನ್ನಿಸುತ್ತದೆ. ಒಂದು ಪ್ರಾಚೀನಗ್ರಂಥದ ಪಾಠಾಂತರಗಳು ನಾಲ್ಕೈದಿರುವಲ್ಲಿ ಪ್ರಕರಣತಾತ್ಪರ್ಯದೃಷ್ಟ್ಯಾ ಯಾವ ಪಾಠವು ಸುಷ್ಠುವೆಂಬುದನ್ನು ನಿರ್ಣಯಮಾಡಿಕೊಂಡಲ್ಲವೇ ಅರ್ಥಹೇಳಬೇಕಾದದ್ದು?

ಮಹಾತಾತ್ಪರ್ಯವು ಭಂಗಪಡಬಾರದಲ್ಲವೇ? ಒಂದು ಕಥೆ ಜ್ಞಾಪಕಕ್ಕೆ ಬರುತ್ತದೆ : ಯಾವುದೋ ಉಪನಿಷತ್ತಿನಲ್ಲಿ 'ಸುಕೇಶಾ ಚ ಭಾರದ್ವಾಜಃ' ಎಂದಿದ್ದರೆ ಇದು ತಪ್ಪು. 'ಸಕೇಶೀ ಚ ಭಾರದ್ವಾಜಃ' ಎಂದು ತಿದ್ದಬೇಕು–ಎಂದು ಒಬ್ಬರು ವಾದ ಹೂಡಿದರು. ಹಾಗೆಯೇ 'ತಮಾಸನಂ ಮೃತ್ಯುರಭಿ' ಎಂಬ ಶ್ಲೋಕವನ್ನು "ಅದು ತಪ್ಪು. 'ತದಾಸನಂ' ಎಂದಿರಬೇಕು, ತಿದ್ದಿಕೊಳ್ಳಿ"–ಎಂದು ಆಚಾರ್ಯರು ಹೇಳಿದರಂತೆ. ಹೀಗಿದೆ ಅಭಕ್ಷ್ಯ ಭೋಜ್ಯಪಕ್ಷದವರ ವಾದ.

ನಾನು ದೃಷ್ಟಿ ಮಂದವಾಗಿ ಬರೆಯಲಾರದವನಾಗಿದ್ದೇನೆ. ಸ್ನೇಹಿತರ ಕೈಯಿಂದ ಇದನ್ನು ಬರೆಯಿಸುತ್ತಿದ್ದೇನೆ.

ಭಗವಂತನು ತಮಗೆ ಮಹಾಭಾರತದ ಮಹತ್ಕಾರ್ಯವನ್ನು ಸಾಂಗ ವಾಗಿ ಸಂಪೂರ್ಣಗೊಳಿಸಲು ಬೇಕಾದ ಎಲ್ಲ ಸಹಾಯ-ಸಂಪತ್ತುಗಳನ್ನೂ ಅನುಗ್ರಹಿಸಲಿ.

ಸರ್ವಂ ಶಿವಂ.

ಇಂತಿ ವಿಧೇಯ,
ಡಿ. ವಿ. ಜಿ.



## ಶಮೀವೃಕ್ಷದ ಮೇಲೆ ಆಯುಧಗಳನ್ನಿಟ್ಟವರು ಯಾರು?

ವಿರಾಟಪರ್ವದ ಐದನೆಯ ಅಧ್ಯಾಯದಲ್ಲಿ ಆಯುಧಗಳನ್ನು ನಕುಲನು ಶಮೀವೃಕ್ಷದ ಮೇಲೆ ಇಟ್ಟನೆಂದು–ನಾವು ಅನುವಾದಮಾಡಿ ದ್ದೇವೆ. ನಮ್ಮಲ್ಲಿರುವ ಮೂಲಭಾರತದಲ್ಲಿ ಹೀಗೆಯೇ ಇದೆ. ಆದರೆ ಒಂದು ಪ್ರತಿಯಲ್ಲಿ ಮಾತ್ರ ಆ ಭಾಗವು ಪ್ರಕ್ಷಿಪ್ತವೆಂಬ ಸೂಚನೆಯೊಡನೆ ಯುಧಿಷ್ಠಿರನೇ ಶಮೀವೃಕ್ಷದ ಮೇಲೆ ಆಯುಧವನ್ನಿಟ್ಟ ಪ್ರಕರಣವು ಬಂದಿರುತ್ತದೆ. ಅನೇಕ ಹರಿಕಥೆಗಳಲ್ಲಿಯೂ ಇದೇ ವಿಧವಾದ ಕಥೆಯನ್ನೇ ಹೇಳುತ್ತಾರಾದುದರಿಂದ ಆ ಪಾಠವು ಪ್ರಕ್ಷಿಪ್ತವೆಂದು ನಾವೂ ಭಾವಿಸುವೆ ವಾದರೂ ವಾಚಕರ ಸಲುವಾಗಿ ಅದನ್ನಿಲ್ಲಿ ಯಥಾವತ್ತಾಗಿ ಕೊಟ್ಟಿರುತ್ತೇವೆ.

ಆ ಸಂದರ್ಭದಲ್ಲಿ ಪಾಠಕ್ರಮವು ಹೀಗಿರುತ್ತದೆ :

ಐದನೆಯ ಅಧ್ಯಾಯದ 14ನೆಯ ಶ್ಲೋಕವಾದ ಮೇಲೆ ಶಮೀವೃಕ್ಷದ ವಿಷಯವಾಗಿ ನಾಲ್ಕು ಶ್ಲೋಕಗಳಿವೆ. ಅದನ್ನು ಅರ್ಜುನನು ಹೇಳುತ್ತಾನೆ :

ಏಷಾ ಶಮೀ ಪಾಪಹರಾ ಸದೈವ
ಯಾತ್ರೋತ್ಸವಾನಾಂ ವಿಜಯಾಯ ಹೇತುಃ ।
ಅತ್ರಾಯುಧಾನಾಂ ಕೃತಸಂನಿವೇಶೇ
ಕೃತಾರ್ಥಕಾಮಾ ಜಯಮಙ್ಗಲಂ ಚ ॥

ಪ್ರದಕ್ಷಿಣೀಕೃತ್ಯ ಶಮೀಲತಾಂ ತೇ
ಪ್ರಣಮ್ಯ ಚಾನರ್ಚುರಥ ಪ್ರವೀರಾಃ ।
ಮೃತ್ಪಿಣ್ಡಮಾದಾಯ ನಿಜಾಞ್ಚಲೇನ
ಸ್ತೂತಿಂ ಚಕಾರ ಪ್ರಥಮಂ ಕಿರೀಟೀ ॥

ಶಮೀ ಶಮಯತೇ ಪಾಪಂ ಶಮೀ ಶಮಯತೇ ರಿಪೂನ್ ।
ಶಮೀ ಶಮಯತೇ ರೋಗಾಞ್ಛಮೀ ಸರ್ವಾರ್ಥಸಾಧನಾ ॥

ರಾಮಃ ಸೀತಾಂ ಸಮಾದಾಯ ತ್ವತ್ಪ್ರಸಾದಾಚ್ಛಮೀತಲೇ ।
ಕೃತಕೃತ್ಯಃ ಪುರೇ ಪ್ರಾಪ್ತಃ ಪ್ರಸಾದಾತ್ತೇ ತಥಾಸ್ತು ಮೇ ॥

ಈ ಶಮೀವೃಕ್ಷವು ಸರ್ವದಾ ಆಶ್ರಿತರ ಪಾಪಗಳನ್ನು ಪರಿಹಾರ ಮಾಡತಕ್ಕ ವೃಕ್ಷ. ದಿಗ್ವಿಜಯಕ್ಕಾಗಿ ಹೊರಟವರಿಗೆ ವಿಜಯಕ್ಕೆ ಕಾರಣ ವಾದುದು. ಇಲ್ಲಿ ಆಯುಧಗಳನ್ನಿಡುವಿಕೆಯಿಂದ ಕೃತಾರ್ಥರಾಗಿ ಕಾಮನೆ ಗಳನ್ನು ಪೂರ್ಣಮಾಡಿಕೊಳ್ಳುತ್ತಾರೆ. ಯುದ್ಧದಲ್ಲಿ ವಿಜಯವೂ ಸನ್ಮಂಗಳವೂ ಉಂಟಾಗುತ್ತದೆ.

ಅನಂತರದಲ್ಲಿ ಪಾಂಡವಪ್ರವೀರರು ಶಮಿಯನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಯಥೋಚಿತವಾಗಿ ಪೂಜಿಸಿದರು. ಅರ್ಜುನನು ತನ್ನ ಬಟ್ಟೆಯ ಅಂಚಿನಿಂದ ಮೃತ್ಪಿಂಡವನ್ನು ತೆಗೆದುಕೊಂಡು ಬಂದು ಮೊದಲು ಪ್ರಾರ್ಥನೆ ಮಾಡಿದನು :

“ಶಮಿಯು ಪಾಪವನ್ನು ಪರಿಹಾರಮಾಡುತ್ತದೆ. ಶಮಿಯು ಶತ್ರು

ಗಳನ್ನು ವಿನಾಶಗೊಳಿಸುತ್ತದೆ. ಶಮಿಯು ರೋಗವನ್ನು ವಿನಾಶಮಾಡುತ್ತದೆ. ಸರ್ವಾರ್ಥಗಳನ್ನೂ ಶಮೀವೃಕ್ಷದಿಂದ ಸಾಧಿಸಿಕೊಳ್ಳಬಹುದು. ಹೇ ಶಮಿಯೇ! ನಿನ್ನ ದಯದಿಂದಲೇ ಶ್ರೀರಾಮನು ಸೀತೆಯನ್ನು ಪುನಃ ಪಡೆದುಕೊಂಡು ಕೃತಕೃತ್ಯನಾಗಿ ಅಯೋಧ್ಯೆಗೆ ಹಿಂದಿರುಗಿದನು. ನಿನ್ನ ಪ್ರಸಾದದಿಂದಾಗಿ ನಮಗೂ ಸಹ ಕಳೆದುಹೋಗಿರುವ ರಾಜ್ಯವು ಲಭ್ಯವಾಗಲಿ.”

(ಶಮೀ ಶಮಯತೇ ಪಾಪಂ–ಎಂಬ ಶ್ಲೋಕವನ್ನು ವಿಜಯ ದಶಮಿಯಂದು ಹೇಳಿ ಶಮೀಪತ್ರವನ್ನು ದೊಡ್ಡವರಿಗೆ ಕೊಟ್ಟು ನಮಸ್ಕರಿಸುವ ಸಂಪ್ರದಾಯವು ಈಗಲೂ ಇದೆ.)

ಐದನೆಯ ಅಧ್ಯಾಯದ 24ನೆಯ ಶ್ಲೋಕದ ನಂತರ ಒಂದು ಪುಸ್ತಕದಲ್ಲಿ ಈ ಪಾಠವಿದೆ :

**ಆಯುಧಾನಿ ಕಲಾಪಾಂಶ್ಚ ಗದಾಶ್ಚ ವಿಪುಲಾಸ್ತಥಾ ।**
**ಯಾನಿ ಸರ್ವಾಣಿ ಸನ್ನಹ್ಯ ವಾಸೋಭಿಃ ಪರಿವೇಷ್ಟ್ಯ ಚ ॥**

**ಆರುಹ್ಯ ಯಾವದೇತಾನಿ ವಿಧಾತುಂ ವಿಹಗೈರ್ವೃತಾಮ್ ।**
**ಶಮೀಮಾರುಹ್ಯ ಮಹತೀಂ ನಿಕ್ಷಿಪಾಮ್ಯಾಯುಧಾನಿ ಚ ॥**

ವೈಶಮ್ಪಾಯನ ಉವಾಚ :

**ಸ ಹಿ ಧರ್ಮೇಣ ಧರ್ಮಾತ್ಮಾ ತದಾ ಘೋರತರೇ ವನೇ ।**
**ಅರಣೀಪರ್ವಣಃ ಕಾಲೇ ವರದತ್ತಃ ಪರಂತಪಃ ॥**

**ತಾನ್ಯಾಯುಧಾನ್ಯುಪಾದಾಯ ಕುನ್ತಿಪುತ್ರೋ ಯುಧಿಷ್ಠಿರಃ ।**
**ಸ ವಚಃ ಪುರುಷವ್ಯಾಘ್ರಃ ಪ್ರೋವಾಚ ಮಧುರಾಕ್ಷರಮ್ ॥**

**ಯುಧಿಷ್ಠಿರಃ ಶುಚಿರ್ಭೂತ್ವಾ ಮನಸಾಭಿಪ್ರಣಮ್ಯ ಚ ।**

ಯುಧಿಷ್ಠಿರ ಉವಾಚ :

**ಬ್ರಹ್ಮಾಣಮಿನ್ದ್ರಂ ವರದಂ ಕುಬೇರಂ ವರುಣಾನ್ವಿತಮ್ ।**
**ರುದ್ರಂ ಯಮಂ ಚ ವಿಷ್ಣುಂ ಚ ಸೋಮಾರ್ಕೌ ಧರ್ಮಮೇವ ಚ ॥**

ಪೃಥಿವೀಮನ್ತರಿಕ್ಷಂ ಚ ದಿಶಶ್ಚೋಪದಿಶಸ್ತಥಾ ।
ವಸೂಂಶ್ಚ ಮರುತಶ್ಚೈವ ಜ್ವಲನಂ ಚಾತಿತೇಜಸಮ್ ॥

ದಿವಾಚರಾ ರಾತ್ರಿಚರಾಣಿ ಚಾಪಿ
ಯಾನೀಹ ಭೂತಾನ್ಯನುಕೀರ್ತಿತಾನಿ ।
ತೇಭ್ಯೋ ನಮಸ್ಕೃತ್ಯ ಚ ಸುವ್ರತೇಭ್ಯಃ
ಪ್ರಣಮ್ಯ ತೇಷಾಂ ಶರಣಂ ಗತೋಽಹಮ್ ॥

ಸರ್ವಾಯುಧಾನೀಹ ಮಹಾಬಲಾನಿ
ನ್ಯಾಸಂ ಮಹಾದೇವ ಸಮೀಪತೋ ವೈ ।
ನ್ಯಸ್ಯಾಮ್ಯಹಂ ವಾಯುಸಮೀಪತಶ್ಚ
ವನಸ್ಪತೀನಾಂ ಚ ಸಪರ್ವತಾನಾಮ್ ॥

ಏಷ ನ್ಯಾಸೋ ಮಯಾ ದತ್ತಃ
ಸೂರ್ಯಸೋಮಾನಿಲಾನ್ತಿಕೇ ।
ಮಹ್ಯಂ ಪಾರ್ಥಾಯ ವಾ ದೇಯಂ
ಪೂರ್ಣೇ ವರ್ಷೇ ತ್ರಯೋದಶೇ ॥

ನೇದಂ ಭೀಮೇ ಪ್ರದಾತವ್ಯಮಯಂ ಕ್ರುದ್ಧೋ ವೃಕೋದರಃ ।
ಅಮರ್ಷಾನ್ನಿತ್ಯಸಂರಬ್ಧೋ ಧೃತರಾಷ್ಟ್ರಸುತಾನ್ಪ್ರತಿ ॥

ಅಪೂರ್ಣಕಾಲೇ ಪ್ರಹರೇತ್ಕ್ರೋಧಸಂಜಾತಮತ್ಸರಃ ।
ಪುನಃ ಪ್ರವೇಶೋ ನಃ ಸ್ಯಾತ್ತು ವನವಾಸಾಯ ಸರ್ವಥಾ ॥

ಸಮಯೇ ಪರಿಪೂರ್ಣೇ ತು ಧಾರ್ತರಾಷ್ಟ್ರಾನ್ನಿಹನ್ಮಹೇ ।
ಏಷ ಚಾರ್ಥಶ್ಚ ಧರ್ಮಶ್ಚ ಕಾಮಃ ಕೀರ್ತಿಃ ಕುಲಂ ಯಶಃ ॥

ಮಮಾಯತ್ತಮಿದಂ ಸರ್ವಂ ಜೀವಿತಂ ಚ ನ ಸಂಶಯಃ ।

ವೈಶಮ್ಪಾಯನ ಉವಾಚ :

ಸೋಽವತೀರ್ಯ ಮಹಾಪ್ರಾಜ್ಞಃ ಪಾಣ್ಡವಃ ಸತ್ಯವಿಕ್ರಮಃ ।
ಭೀಮಂ ಕಣ್ಠೇ ಪರಿಷ್ವಜ್ಯ ಚಾನುನೀಯ ನರಾಧಿಪಃ ॥
[iii]

**ದೈವತೇಭ್ಯೋ ನಮಸ್ಕೃತ್ವಾ ಶಮೀಂ ಕೃತ್ವಾ ಪ್ರದಕ್ಷಿಣಮ್ ।**
**ನಗರಂ ಗನ್ತುಮಾಯಾತಃ ಸರ್ವೇ ತೇ ಭ್ರಾತರಃ ಸಹ ॥**

"ಆಯುಧಗಳನ್ನೂ ಕಲಾಪಗಳನ್ನೂ (ಬಾಣ-ಬತ್ತಳಿಕೆ ಮುಂತಾದುವುಗಳನ್ನೂ ) ದೊಡ್ಡದೊಡ್ಡ ಗದೆಗಳನ್ನೂ ಸೇರಿಸಿ ಕಟ್ಟಿ, ಬಟ್ಟೆಯಲ್ಲಿ ಸುತ್ತಿ, ಪಕ್ಷಿಗಳಿಂದ ತುಂಬಿಹೋಗಿರುವ ಈ ದೊಡ್ಡ ಶಮೀವೃಕ್ಷವನ್ನು ಹತ್ತಿ ನಮ್ಮ ಈ ಎಲ್ಲ ಆಯುಧಗಳನ್ನೂ ಇದರ ಮೇಲಿಡುತ್ತೇನೆ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಆಗ ಘೋರಾರಣ್ಯದಲ್ಲಿ ಅರಣೀಪರ್ವಕಾಲದಲ್ಲಿ ಯಮಧರ್ಮನಿಂದ ವರವನ್ನು ಪಡೆದಿದ್ದ, ಕುಂತೀಪುತ್ರನಾದ, ಪರಂತಪನಾದ, ಪುರುಷವ್ಯಾಘ್ರನಾದ ಯುಧಿಷ್ಠಿರನು ಶುಚೀಭೂತನಾಗಿ ಮನಸ್ಸಿನಲ್ಲಿಯೇ ದೇವತೆಗಳಿಗೆ ನಮಸ್ಕರಿಸಿ ಮಧುರಾಕ್ಷರಯುಕ್ತವಾದ ಈ ಮಾತುಗಳನ್ನು ಹೇಳಿದನು :

"ಬ್ರಹ್ಮನನ್ನೂ, ವರದನಾದ ಇಂದ್ರನನ್ನೂ, ಕುಬೇರನನ್ನೂ, ವರುಣನನ್ನೂ, ವಾಯುವನ್ನೂ, ರುದ್ರನನ್ನೂ, ಯಮನನ್ನೂ, ವಿಷ್ಣುವನ್ನೂ, ಚಂದ್ರ-ಸೂರ್ಯರನ್ನೂ, ಧರ್ಮದೇವತೆಯನ್ನೂ, ಪೃಥ್ವಿಯನ್ನೂ, ಅಂತರಿಕ್ಷವನ್ನೂ, ದಿಕ್ಕುಗಳನ್ನೂ, ಉಪದಿಕ್ಕುಗಳನ್ನೂ, ಅಷ್ಟವಸುಗಳನ್ನೂ, ಸಪ್ತ ಮರುತ್ತುಗಳನ್ನೂ, ಮಹಾತೇಜಸ್ವಿಯಾದ ಯಜ್ಞೇಶ್ವರನನ್ನೂ, ದಿವಾಚರರನ್ನೂ, ರಾತ್ರಿಂಚರರನ್ನೂ, ಯಾವ ಯಾವ ಭೂತಗಣಗಳಿರುವುದೆಂದು ಹೇಳಲ್ಪಟ್ಟಿರುವುದೋ ಆ ಭೂತಗಣಗಳನ್ನೂ ನಮಸ್ಕರಿಸಿ ಸುವ್ರತರಾದ ಆ ಎಲ್ಲರಿಗೂ ಶರಣಾಗತನಾಗಿರುತ್ತೇನೆ. ಮಹಾಬಲಿಷ್ಠವಾದ ಸಕಲಾಯುಧಗಳನ್ನೂ ಮಹಾದೇವನ ಸಮೀಪದಲ್ಲಿ ಸೂರ್ಯ-ಸೋಮಾಗ್ನಿಗಳ ಸಮೀಪದಲ್ಲಿ ನ್ಯಾಸಭೂತವಾಗಿಡುತ್ತೇನೆ. ಇದನ್ನು ನ್ಯಾಸಭೂತವಾಗಿಡಲಿರುವ ನನ್ನ ಆಶಯವು ಹೀಗಿದೆ : ಹದಿಮೂರು ವರ್ಷಗಳು ಪೂರ್ಣವಾದನಂತರ ಈ ನಮ್ಮ ಆಯುಧಗಳನ್ನು ನನಗಾಗಲೀ–ಪಾರ್ಥನಿಗಾಗಲೀ ಈ ದೇವತೆಗಳು ಹಿಂದಿರುಗಿಸಿಕೊಡಬೇಕು. ಭೀಮನಿಗೆ ಮಾತ್ರ ಇದನ್ನು ಕೊಡಲೇಬಾರದು. ಇವನು ಮಹಾಕೋಪಿಷ್ಠ. ಧೃತರಾಷ್ಟ್ರನ ಮಕ್ಕಳ ವಿಷಯದಲ್ಲಿ ಇವನಿಗೆ

ಸಹನೆಯೇ ಇಲ್ಲ. ಕ್ರೋಧದಿಂದ ಹುಟ್ಟಿದ ಮಾತ್ಸರ್ಯದಿಂದಾಗಿ ಇವನು ಅಜ್ಞಾತವಾಸವು ಪೂರ್ಣವಾಗದೆಯೇ ಧೃತರಾಷ್ಟ್ರನ ಮಕ್ಕಳನ್ನು ಪ್ರಹರಿಸಲು ಹೋಗಿಬಿಡಬಹುದು. ಹೀಗೆ ಮಾಡಿಬಿಟ್ಟರೆ ನಾವು ಪುನಃ ವನವಾಸಕ್ಕೆ ಹೋಗಬೇಕಾಗುತ್ತದೆ. ಇದನ್ನು ತಡೆಯುವ ಸಲುವಾಗಿ ಭೀಮನಿಗೆ ಆ ಆಯುಧಗಳನ್ನು ಕೊಡಬಾರದೆಂದು ನಾನು ಪ್ರಾರ್ಥಿಸುತ್ತಿದ್ದೇನೆ. ಪ್ರತಿಜ್ಞಾ ಕಾಲವು ಪೂರ್ಣವಾದೊಡನೆಯೇ ನಾವು ಧೃತರಾಷ್ಟ್ರನ ಮಕ್ಕಳನ್ನು ಕೊಂದು ಬಿಡುತ್ತೇವೆ. ಹೀಗೆ ಮಾಡುವುದೇ ಧರ್ಮ. ಅರ್ಥಪ್ರಾಪ್ತಿಗೆ ಸಾಧನಭೂತ ವಾದುದು. ನಮ್ಮ ಅಪೇಕ್ಷೆಯನ್ನು ಪೂರೈಸಿಕೊಳ್ಳಲು ಸರಿಯಾದ ಮಾರ್ಗ. ಕೀರ್ತಿ ಮತ್ತು ಯಶೋದಾಯಕವಾದುದು. ಜೀವಿತವು ಇಂದು ನನ್ನ ಅಧೀನವಾಗಿದೆ. ಆದುದರಿಂದ ನಾನಿದರ ವ್ಯವಸ್ಥೆಯನ್ನು ಮಾಡಬೇಕಾಗಿದೆ."

ಹೀಗೆಂದು ಹೇಳಿ ವೃಕ್ಷದ ಮೇಲೆ ಆಯುಧಗಳನ್ನಿಟ್ಟು ಕೆಳಗಿಳಿದು ಮಹಾಪ್ರಾಜ್ಞನಾದ, ಸತ್ಯವಿಕ್ರಮನಾದ ಯುಧಿಷ್ಠಿರನು ಭೀಮನನ್ನಾಲಿಂಗಿಸಿ ಕೊಂಡು ಸಮಾಧಾನಪಡಿಸಿ, ದೇವತೆಗಳಿಗೂ ಪುನಃ ನಮಸ್ಕರಿಸಿ, ಶಮೀವೃಕ್ಷಕ್ಕೆ ಪ್ರದಕ್ಷಿಣೆಮಾಡಿ, ಅನುಜರೊಡನೆ ವಿರಾಟನಗರಕ್ಕೆ ಹೊರಡಲು ಉದ್ಯುಕ್ತನಾದನು.



## ದುರ್ಗಾಸ್ತುತಿ

ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್–ಇವರು ಪ್ರಕಟಿಸಿರುವ ಮಹಾಭಾರತದಲ್ಲಿ ಆರನೆಯದಾದ ದುರ್ಗಾಸ್ತುತಿಯ ಅಧ್ಯಾಯವೇ ಇಲ್ಲ. ಇದು ಪ್ರಕ್ಷಿಪ್ತವೆಂದು ಅವರ ಅಭಿಪ್ರಾಯ. ಹಲವಾರು ಪುಸ್ತಕಗಳಲ್ಲಿ ಉಪಲಬ್ಧವಾಗಿರುವ ಪಾಠಗಳಲ್ಲಿ ಇದೇ ದುರ್ಗಾಸ್ತವವು ಏಳು ಪ್ರಕಾರಗಳಾಗಿವೆ. ಕೆಲವು ಪುಸ್ತಕಗಳಲ್ಲಿ ಇದು ಐದನೆಯ ಅಧ್ಯಾಯ ದೊಂದಿಗೇ ಸೇರಿಹೋಗಿದೆ. ಕೇವಲ ನಾಲ್ಕು ಶ್ಲೋಕಗಳಲ್ಲಿಯೇ ಪ್ರಕರಣವು ಮುಗಿದುಹೋಗಿದೆ. ಐದನೆಯ ಅಧ್ಯಾಯದ 29ನೆಯ ಶ್ಲೋಕದನಂತರ ಒಂದು ಪುಸ್ತಕದಲ್ಲಿ ಈ ಪ್ರಕರಣವು ಹೀಗೆ ಬರುತ್ತದೆ :

ತತ್ರ ತೇ ವೈ ಮಹಾತ್ಮಾನೋ ದುರ್ಗಾಂ ಭಕ್ತಿಪುರಸ್ಸೃತಾಃ ।
ಸ್ಮರನ್ತಃ ಪೂಜಯಾಂಚಕ್ರುರ್ದೇವೀಂ ದುರ್ಗವಿನಾಶಿನೀಮ್ ।
ಸಾ ಪೂಜಿತಾ ತದಾ ಸರ್ವೈಃ ಪಾಣ್ಡವೈಶ್ಚ ಸಮಾಹಿತೈಃ ।
ಪ್ರಸನ್ನಾ ವಾಗುವಾಚಾಥ ಸ್ಮಯನ್ತೀ ವಿಯತಿ ಸ್ಥಿತಾ ।
ನ ಭೇತವ್ಯಂ ಮಹಾಭಾಗಾ ದುರ್ಗಮೇತತ್ತರಿಷ್ಯಥ ।
........... ಆಯುಧಾನ್ಯುಪಲಪ್ಸ್ಯಥ ।
ತೀರ್ಣಪ್ರತಿಜ್ಞಾಃ ಸುಧಯಃ ಶತ್ರೂನಪಿ ವಿಜೇಷ್ಯಥ ।
ಇತ್ಯುಕ್ತ್ವಾನ್ತರ್ಹಿತಾ ಸದ್ಯಃ ಪಾಣ್ಡವಾ ವಿಸ್ಮಯಂ ಯಯುಃ ।

(ಇಲ್ಲಿ ಯುಧಿಷ್ಠಿರನೊಬ್ಬನೇ ಸ್ತೋತ್ರಮಾಡಿದನೆಂಬ ವಿಷಯವಿಲ್ಲ.) ಮಹಾತ್ಮರಾದ ಪಾಂಡವರೈವರೂ ಕಷ್ಟಗಳ ನಿವಾರಕಳಾದ ದುರ್ಗಾದೇವಿಯನ್ನು ಸ್ಮರಿಸಿ ಪೂಜೆಮಾಡಿದರು. ಏಕಾಗ್ರಚಿತ್ತರಾಗಿ ಮಾಡಿದ ಪಾಂಡವರ ಸ್ತೋತ್ರದಿಂದ ಪ್ರಸನ್ನಳಾದ ದುರ್ಗಾದೇವಿಯು ಆಕಾಶದಲ್ಲಿಯೇ ನಿಂತು ಮಂದಸ್ಮಿತಳಾಗಿ ಪಾಂಡವರನ್ನು ಕುರಿತು ಈ ಮಾತುಗಳನ್ನು ಹೇಳಿದಳು : "ಮಹಾಭಾಗರೇ! ನೀವು ಭಯಪಡುವ ಕಾರಣವಿಲ್ಲ. ಕಷ್ಟದಿಂದ ಪಾರಾಗುವಿರಿ. ಆಯುಧಗಳನ್ನೂ ಪಡೆದುಕೊಳ್ಳುವಿರಿ. ವಿದ್ವಾಂಸರಾದ ನೀವು ಪ್ರತಿಜ್ಞೆಯನ್ನು ಮುಗಿಸಿ ಶತ್ರುಗಳನ್ನೂ ಜಯಿಸುವಿರಿ"–ಹೀಗೆಂದು ಹೇಳಿ ದುರ್ಗೆಯು ಅಂತರ್ಹಿತಳಾದಳು. ಪಾಂಡವರದನ್ನು ಕಂಡು ವಿಸ್ಮಯ ಹೊಂದಿದರು.

ಮತ್ತೊಂದು ಪುಸ್ತಕದಲ್ಲಿ ಯುಧಿಷ್ಠಿರನು ಪ್ರಾರ್ಥಿಸಿದನೆಂದು ಹೇಳಿದೆ. ಅಲ್ಲಿಯೂ ಸಹ ಕೇವಲ ನಾಲ್ಕು ಶ್ಲೋಕಗಳಿಂದಲೇ ಪ್ರಕರಣವು ಮುಗಿದು ಹೋಗುತ್ತದೆ. ಇದೂ ಸಹ ಐದನೆಯ ಅಧ್ಯಾಯದ 29ನೆಯ ಶ್ಲೋಕದ ನಂತರ ಬಂದಿರುತ್ತದೆ.

ವಿರಾಟನಗರಂ ರಮ್ಯಂ ಪ್ರವಿಶನ್ನೇವ ಭೂಪತೇ ।
ಸ್ತುನೋತಿ ಮನಸಾ ದೇವೀಂ ಕುನ್ತೀಪುತ್ರೋ ಯುಧಿಷ್ಠಿರಃ ।
ಭ್ರಾತೃಭಿಃ ಸಹಿತೋ ರಾಜಂಸ್ತವೈವ ಪ್ರಪಿತಾಮಹಃ ।

**ದುಃಖಶೋಕೇನ ಸಂತಪ್ತೋ ದ್ರೌಪದ್ಯಾ ಸಹ ಭಾರತ ।**
**ಕೃತಾಞ್ಜಲಿಪುಟೋ ಭೂತ್ವಾ ವನವಾಸಾದ್ವಿನಿರ್ಗತಃ ।**
**ಭಕ್ತ್ಯಾ ಪರಮಯಾ ಯುಕ್ತೋ ದುರ್ಗಾಂ ದುರ್ಗತಿನಾಶಿನೀಮ್ ॥**

**ಮಹಿಷಾಸುರದರ್ಪಘ್ನೀಂ ಸರ್ವಲೋಕನಮಸ್ಕೃತಾಮ್ ।**
**ಶೈಲರಾಜಸುತಾಂ ಗೌರೀಂ ವರದಾಮಭಯಪ್ರದಾಮ್ ॥**

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ಅರಣ್ಯದಿಂದ ಹೊರಟು ವಿರಾಟನಗರವನ್ನು ಪ್ರವೇಶಿಸುತ್ತಲೇ (ಪ್ರವೇಶಿಸುವ ಮೊದಲು) ನಿನ್ನ ಪ್ರಪಿತಾಮಹನಾದ ಯುಧಿಷ್ಠಿರನು ದುಃಖಸಂತಪ್ತನಾಗಿ ಅನುಜರಿಂದಲೂ ದ್ರೌಪದಿಯಿಂದಲೂ ಕೂಡಿಕೊಂಡು ಬದ್ಧಾಂಜಲಿಯಾಗಿ ದುರ್ಗತಿನಾಶಿನಿಯಾದ, ಮಹಿಷಾಸುರನ ದರ್ಪವನ್ನು ಮುರಿದ, ಶೈಲರಾಜಸುತೆಯಾದ, ವರದಳಾದ, ಅಭಯ ಪ್ರದಳಾದ, ಸರ್ವಲೋಕನಮಸ್ಕೃತಳಾದ ಗೌರಿಯನ್ನು–ದುರ್ಗೆಯನ್ನು ನಿಯತಮನಸ್ಕನಾಗಿ ಸ್ತೋತ್ರಮಾಡಿದನು.

( ಇಲ್ಲಿ ದುರ್ಗೆಯ ದರ್ಶನವಾಗಲೀ ಅಭಯಪ್ರದಾನದ ಪ್ರಕರಣ ವಾಗಲೀ ಇರುವುದಿಲ್ಲ. )

ಮತ್ತೊಂದು ಪುಸ್ತಕದಲ್ಲಿ ಇದೇ ಪ್ರಕರಣವು ಹದಿನೈದು ಶ್ಲೋಕಗಳಿಂದ ನಿರೂಪಿತವಾಗಿದೆ. ಆ ಪುಸ್ತಕದಲ್ಲಿ ನಾವು ಪ್ರಕಟಿಸಿರುವಂತೆ ಯುಧಿಷ್ಠಿರನೊಬ್ಬನೇ ಸೋತ್ರಮಾಡಿದನೆಂದು ಹೇಳಿದೆ.

6ನೆಯ ಶ್ಲೋಕವಾದ **ಸ್ತೋತುಂ ಪ್ರಚಕ್ರಮೇ**–ಎಂಬ ಶ್ಲೋಕವು ಈ ಪಾಠದಲ್ಲಿಲ್ಲ.

7ನೆಯ ಶ್ಲೋಕವಾದ **ನಮೋಽಸ್ತು ವರದೇ ಕೃಷ್ಣೇ**–ಎಂಬುದಕ್ಕೆ ಬದಲಾಗಿ

**ಓಂ ನಮೋಽಸ್ತು ವರದೇ ದೇವಿ ಕುಮಾರಿ ಪ್ರಿಯದರ್ಶನೇ ।**
**ಬಾಲಭಾವಾಸುರೇನ್ದ್ರಾಣಿ ಘಣ್ಟಾಲಿ ವಿಕಟೋತ್ಕಟೇ ॥**

**(ಚತುರ್ಭುಜೇ ಚತುರ್ವಕ್ತ್ರೇ) ಚತುರ್ದಂಷ್ಟ್ರೇ ಮಹಾಸುರಿ ।**
**ಮಹಾದೇವಿ ಮಹೇಷ್ವಾಸೇ ಜಯನ್ತಿ ವಿಜಯಪ್ರದೇ ॥**

ಭೂತರಾತ್ರಿ ಮಹಾರೌದ್ರೇ ಚಾಷ್ಟಮೀನವಮೀಪ್ರಿಯೇ ।
ಕಪಿಲೇ ಪಿಙ್ಗಲೇ ಜ್ವಾಲೇ ಹಿರಣ್ಯಕನಕಪ್ರಭೇ ॥

ಶಶಿಸೂರ್ಯಮಹಾಭಾಗೇ ವಿದ್ಯುಜ್ಜ್ವಲಿತಕುಣ್ಡಲೇ ।
ಮೇರುವಿನ್ಧ್ಯಾನ್ತರಗತೇ ಅಪ್ಸರೋಗಣಸೇವಿತೇ ॥

(ಕಾಲಿಕಾಲಿ ಮಹಾಕಾಲಿ ಖಡ್ಗಖಟ್ವಾಙ್ಗಧಾರಿಣಿ)
ತ್ರಿಶೂಲವರದೇ ದೇವಿ ತ್ರಿನೇತ್ರೇ ಭುವನೇಶ್ವರಿ ।
ದೇವಿ ದೇವಾಶ್ಚ ಪೂಜನ್ತಿ ಪೂರ್ಣಮಾಸೀಮ್ ಚತುರ್ದಶೀಮ್ ॥

ಸೋಽಹಂ–ಇಲ್ಲಿಂದ ಮುಂದಿನ ಶ್ಲೋಕಗಳು ಅಲ್ಲಲ್ಲಿ ಪದವ್ಯತ್ಯಾಸವನ್ನು ಹೊಂದಿದ್ದರೂ ನಮ್ಮ ಸಂಪುಟದಲ್ಲಿರುವಂತೆಯೇ ಇವೆ. ಮುಂದೆ ದೇವಿಯು ಹೇಳುವ ನಾಲ್ಕು ಶ್ಲೋಕಗಳಿವೆ. ಆ ನಾಲ್ಕು ಶ್ಲೋಕಗಳ ವಿವರಣೆಯನ್ನೊಳಗೊಂಡ ಒಂಬತ್ತು ಶ್ಲೋಕಗಳೂ ನಮ್ಮ ಸಂಪುಟದಲ್ಲಿವೆಯೆನ್ನಬಹುದು. ವಿದ್ವಾಂಸರ ಅವಗಾಹನೆಗಾಗಿ ಅವುಗಳನ್ನೂ ಇಲ್ಲಿ ಕೊಡಲಾಗಿದೆ.

ಶೃಣು ತಸ್ಯ ಮಹಾಬಾಹೋ ಸಂಗ್ರಾಮೇ ವಿಜಯಸ್ತವ ।
ಮತ್ಪ್ರಸಾದಾದ್ವಿನಿರ್ಮುಕ್ತೋ ಹತ್ವಾ ಕೌರವವಾಹಿನೀಮ್ ॥

ನಿಷ್ಕಣ್ಟಕಂ ಕೃತಂ ರಾಜ್ಯಂ ಭೋಕ್ಷ್ಯಸೇ ಭ್ರಾತೃಭಿಃ ಸಹ ।
ಇತಿ ಗುಹ್ಯತಮಂ ಸ್ತೋತ್ರಂ ಪವಿತ್ರಂ ಪಾಪನಾಶನಮ್ ।
ಕೀರ್ತಯಿಷ್ಯನ್ತಿ ಯೇ ಲೋಕಾ ನ ತೇಷಾಂ ವಿದ್ಯತೇ ಭಯಮ್ ॥
ಸಂಗ್ರಾಮೇ ಶತ್ರುಸಂಬಾಧೇ ವಿವಾದೇ ಚೌರಸಂಕಟೇ ॥

ಪ್ರಸ್ಥಾನೇ ವಾ ಪ್ರವೇಶೇ ವಾ ಯಃ ಕಶ್ಚಿನ್ಮಾಂ ಸ್ಮರಿಷ್ಯತಿ ।
ತಸ್ಯಾಹಂ ಸರ್ವಕಾರ್ಯಾಣಿ ಸಾಧಯಿಷ್ಯಾಮಿ ಪಾಣ್ಡವ ॥

ಇತ್ಯುಕ್ತ್ವಾ ಪಾಣ್ಡವಂ ದೇವೀ ತತ್ರೈವಾನ್ತರಧೀಯತ ॥

ಮತ್ತೊಂದು ಪಾಠದಲ್ಲಿ ಮೇಲಿರುವಂತೆಯೇ ಪಾಠವಿದೆ. ಆದರೆ ಮೊದಲಿನಲ್ಲಿ ಸ್ವಲ್ಪ ಪಾಠಭೇದವಿದ್ದು ಒಂದು ಶ್ಲೋಕವು ಹೆಚ್ಚಾಗಿದೆ.

ವಿರಾಟನಗರಂ ರಮ್ಯಂ ಗಚ್ಛಮಾನೋ ಯುಧಿಷ್ಠಿರಃ

ಆದನಂತರ 'ತುಷ್ಟಾವ ಮನಸಾ' ಎಂಬುದಕ್ಕೆ ಬದಲಾಗಿ ಸ್ತೂಯಮಾನಸ್ತದಾ–ಎಂಬುದಾಗಿದೆ. ೫ನೆಯ ಶ್ಲೋಕವಾದನಂತರ ನಮ್ಮ ಸಂಪುಟದಲ್ಲಿರುವ ಒಂದು ಶ್ಲೋಕವು ಸ್ತೋತ್ರಂ–ಎಂಬುವ ಒಂದು ಪದದ ವ್ಯತ್ಯಾಸದಿಂದ ಇದರಲ್ಲಿ ಸೇರಿಕೊಂಡಿದೆ.

ಸ್ತೋತುಂ ಪ್ರಚಕ್ರಮೇ ಭೂಯೋ ವಿವಿಧೈಃ ಸ್ತೋತ್ರಸಂಭವೈಃ

ಮತ್ತೊಂದು ಪುಸ್ತಕದಲ್ಲಿ ನಮ್ಮ ಸಂಪುಟದಲ್ಲಿರುವಂತೆಯೇ ೮ನೆಯ ಶ್ಲೋಕವಾದ ಮಯೂರಪಿಚ್ಛವಲಯೇ–ಎಂಬುವವರೆಗೂ ಇದ್ದು ಅಲ್ಲಿಂದ ಮುಂದೆ ಕೆಲವು ಶ್ಲೋಕಗಳು ಈ ರೀತಿಯಾಗಿವೆ :

ನಮಸ್ತೇಽಮ್ಬುಜಪತ್ರಾಕ್ಷಿ ನಮಸ್ತೇ ತ್ರಿದಶಾರ್ಚಿತೇ ।
ಸುರಾರಿಣಿ ನಮಸ್ತುಭ್ಯಂ ನಮಃ ಪಶುಪತಿಪ್ರಿಯೇ ॥
ದೈತ್ಯದಾನವದರ್ಪಘ್ನಿ ದೈತ್ಯದಾನವಪೂಜಿತೇ ।
ಶೈಲರಾಜಸುತೇ ದೇವಿ ನಮಸ್ತೇ ವಿನ್ಧ್ಯವಾಸಿನಿ ॥

ಸರ್ವಪ್ರಹರಣೋಪೇತೇ ಸರ್ವಜ್ಞೇ ಸರ್ವಗೇ ಧ್ರುವೇ ।
ಅಜಿತೇ ವಿಜಯೇ ಭದ್ರೇ ಭದ್ರಕಾಲಿ ರಣಪ್ರಿಯೇ ॥

ಕೃಷ್ಣೇ ದೇವಿ ನಮಸ್ತುಭ್ಯಂ ನಮಃ ಕೈಟಭಮರ್ದಿನಿ ।
ನಮೋ ಗಾಯತ್ರಿ ಸಾವಿತ್ರಿ ನಮಸ್ತೇ ಜಾತವೇದಸಿ ॥

ವಾಗೀಶ್ವರಿ ನಮಸ್ತುಭ್ಯಂ ಮೇನಕಾಯಾಃ ಸುತೇ ನಮಃ ।
ಶಂಕರಾರ್ಧಶರೀರಸ್ಥೇ ನಮಸ್ತೇ ವಿಷ್ಣುಪೂಜಿತೇ ॥

ನಮೋ ಬ್ರಹ್ಮಾಣಿ ರುದ್ರಾಣಿ ನಮೋ ನಾರಾಯಣಪ್ರಿಯೇ ।
ನಮಸ್ತ್ರೈಲೋಕ್ಯವಿಖ್ಯಾತೇ ನಮಸ್ತೇಽಮರಪೂಜಿತೇ ॥

ಪದ್ಮಕಿಞ್ಜಲ್ಕವರ್ಣಾಭೇ ಚಾರುಪದ್ಮನಿಭಾನನೇ ।
ಮಹಾಸಿಂಹರಥಾರೂಢೇ ಮಹಾಶಾರ್ದೂಲವಾಹಿನಿ ॥

ಮಹೇನ್ದ್ರಾಣಿ ನಮಸ್ತುಭ್ಯಂ ನಮಸ್ತೇ ಭಕ್ತವತ್ಸಲೇ ।
ಮಹಿಷಾಸುರದರ್ಪಘ್ನಿ ಕಂಸಾಸುರಭಯಂಕರಿ ॥
ಕಾಲರಾತ್ರಿ ಮಹಾರಾತ್ರಿ ಯಶಸ್ಕರಿ ಶುಭಾನನೇ ।

ಮುಂದೆ ಕೌಮಾರಂ ವ್ರತಮಾಸ್ಥಾಯ—ಎಂಬ ಶ್ಲೋಕದಿಂದ ಶರಣಂ ಭವ ಮೇ ದುರ್ಗೇ—ಎಂಬ ಶ್ಲೋಕದವರೆಗೂ ನಮ್ಮ ಸಂಪುಟದಲ್ಲಿರುವಂತೆಯೇ ಇದ್ದು ಮುಂದೆ 3 ಶ್ಲೋಕಗಳು ನಮ್ಮ ಸಂಪುಟದಲ್ಲಿರುವುದಕ್ಕಿಂತಲೂ ಹೆಚ್ಚಿವೆ.

**ಆಪನ್ಮಹಾರ್ಣವೇ ಘೋರೇ ಅಸ್ಮಿನ್ವಿಷಮದುರ್ಗಮೇ ।**
**ದುಸ್ತರೇ ತ್ರಾಹಿ ಮಾಂ ಭದ್ರೇ ಪರಕೀಯನಿವೇಶನೇ ॥**
**ತಥಾ ನ ಜಾನಾತಿ ನರೋಽತ್ರ ಕಶ್ಚಿ-**
**ದ್ಯುಧಿಷ್ಠಿರೋಽತ್ರಾವಸತೀತಿ ದುರ್ಗೇ ।**
**ತಥಾ ಕುರು ಸ್ವರ್ಗಸದಾಂ ವರಿಷ್ಠೇ**
**ತ್ವಚ್ಚಾರುಪಾದಾಬ್ಜಪುರಃಸ್ಥಿತೋಽಹಮ್ ॥**
**ದುಃಖಾನ್ವಿತೋಽಹಂ ಪ್ರಲಪಾಮಿ ದುರ್ಗೇ**
**ಉನ್ಮತ್ತವದ್ದೀನಮನಾ ನಿರಾಶಃ ।**
**ಪ್ರಸೀದ ದುರ್ಗೇ ಮಮ ಸಾನುಜಸ್ಯ**
**ಸಮೀಹನಂ ತತ್ಕುರುತೇ ನಮೋಽಸ್ತು ॥**

ಮುಂದಿನ ಶ್ಲೋಕಗಳೆಲ್ಲವೂ ನಮ್ಮ ಸಂಪುಟದಲ್ಲಿರುವಂತೆಯೇ ಇವೆ.

---

## ಪಂಚಮ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ದಯೆಯಿಂದಲೂ, ಸದ್ಗುರುಗಳ ದಿವ್ಯಾಶೀರ್ವಾದದಿಂದಲೂ, ಸಹೃದರ ಸಹಕಾರ-ಸದಾಶಯಗಳಿಂದಲೂ ಶ್ರೀಮನ್ಮಹಾಭಾರತದ 8ನೇ ಸಂಪುಟದ 5ನೆಯ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಇದರ ಪುನರ್ಮುದ್ರಣ ಮುಗಿಯುವ ವೇಳೆಗೆ 22ನೇ ಸಂಪುಟವು ಪುನರ್ಮುದ್ರಣಕ್ಕೆ ಸಿದ್ಧವಾಗುತ್ತದೆ. ಹೀಗಾಗಿ ಪುನರ್ಮುದ್ರಣವೆಂಬ ಸುಳಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೋ ಎನ್ನಿಸುತ್ತದೆ. ಭಾರತ ದರ್ಶನದ ಅಭಿನಂದನ ಸಮಿತಿಯವರು ಪುನರ್ಮುದ್ರಣಕ್ಕಾಗಿಯೇ 30 ಲಕ್ಷ ರೂ.ಗಳ ನಿಧಿಯನ್ನು ಸಂಗ್ರಹಿಸುವ ಕಾರ್ಯವನ್ನು ವಹಿಸಿಕೊಂಡಿರುವುದರಿಂದ ಕೆಲವೇ ತಿಂಗಳುಗಳಲ್ಲಿ ಶ್ರೀಮನ್ಮಹಾಭಾರತದ ಎಲ್ಲಾ ಸಂಪುಟಗಳು ಪುನರ್ಮುದ್ರಣವಾಗುವುದೆಂಬ ಭರವಸೆಯಿಂದಿರುತ್ತೇವೆ. ನಿಧಿ ಸಂಗ್ರಹಕ್ಕೆ ತಮ್ಮೆಲ್ಲರ ಸಹಕಾರವು ಅತ್ಯಗತ್ಯ.

—ಪ್ರಕಾಶಕರು.

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಮಹಾಭಾರತ – ವನಪರ್ವ – ಎಂಟನೆಯ ಸಂಪುಟ

೩೦೦ನೆಯ ಅಧ್ಯಾಯ ಕುಣ್ಡಲಾಹರಣಪರ್ವ

## ಸೂರ್ಯನು ಸ್ವಪ್ನದಲ್ಲಿ ಕರ್ಣನಿಗೆ ದರ್ಶನವನ್ನಿತ್ತುದು : ಇಂದ್ರನಿಗೆ ಕರ್ಣಕುಂಡಲಗಳನ್ನೂ ಕವಚವನ್ನೂ ಕೊಡದಂತೆ ಕರ್ಣನನ್ನು ಸೂರ್ಯನು ಪ್ರೇರಿಸಿದುದು : ಕರ್ಣನು ದಾನಕೇಳುವ ಇಂದ್ರನಿಗೆ ಕವಚವನ್ನೂ ಕರ್ಣಕುಂಡಲಗಳನ್ನೂ ಕೊಡಲು ನಿರ್ಧಾರ ಮಾಡಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

“ಬ್ರಾಹ್ಮಣಸತ್ತಮರೇ! ಈ ಹಿಂದೆ ತಾವು, ಲೋಮಶರು ಧರ್ಮಜನೊಡನೆ ಮಾಡಿದ ಸಂಭಾಷಣೆಯನ್ನು ವಿವರಿಸಿ ಹೇಳಿರುವಿರಿ. ಆ ಸಮಯದಲ್ಲಿ ಲೋಮಶರು ಇಂದ್ರನ ಸಂದೇಶವನ್ನು ಪ್ರಸ್ತಾಪಿಸಿ ಹೇಳಿದ್ದರು. ಆ ಸಂದೇಶದಲ್ಲಿ ಇಂದ್ರನು ಯುಧಿಷ್ಠಿರನನ್ನು ಕುರಿತು ಹೀಗೆಂದು ಹೇಳಿದ್ದನು :

**ಯಚ್ಚಾಪಿ ತೇ ಭಯಂ ತೀವ್ರಂ ನ ಚ ಕೀರ್ತಯಸೇ ಕ್ವಚಿತ್ ।**
**ತಚ್ಚಾಪ್ಯಪಹರಿಷ್ಯಾಮಿ ಧನಂಜಯ ಇತೋ ಗತೇ ॥೨॥**

“ಯುಧಿಷ್ಠಿರ! ನಿನ್ನ ಮನಸ್ಸಿನಲ್ಲಿ ಒಂದು ಭಯವಡಗಿದೆ. ಆ ಭಯವೇನೆಂಬುದನ್ನು ನೀನು ಯಾರೊಡನೆಯೂ ಯಾವಾಗಲೂ ಹೇಳುವುದಿಲ್ಲ. ಆದರೆ ಅದರ ವಿಷಯವಾಗಿ ಹಗಲು-ರಾತ್ರಿಗಳೆನ್ನದೇ ಯೋಚಿಸುತ್ತಿರುವೆ. ನಿನ್ನ ಮನೋಗತವಾಗಿರುವ ಆ ಭಯವನ್ನೂ ಪಾರ್ಥನು ಇಲ್ಲಿಂದ (ಸ್ವರ್ಗ

ಲೋಕದಿಂದ ) ಹೊರಟುಹೋದನಂತರ (ನಿನ್ನ ಬಳಿಗೆ ಬಂದನಂತರ) ಪರಿಹರಿಸುತ್ತೇನೆ.”

ಇಂದ್ರನು ಇಂತಹ ಸಂದೇಶವನ್ನು ಯುಧಿಷ್ಠಿರನಿಗೆ ಲೋಮಶರ ಮೂಲಕವಾಗಿ ಕಳುಹಿಸಿಕೊಟ್ಟಿದ್ದನು.

ವೈಶಂಪಾಯನರೇ! ಕರ್ಣನ ವಿಷಯವಾಗಿ ಯುಧಿಷ್ಠಿರನಿಗೇನಾದರೂ ಭಯವಿದ್ದಿತೇ? ತನ್ನ ಮನಸ್ಸಿನ ಆ ಮಹಾಭಯವನ್ನು ಯುಧಿಷ್ಠಿರನು ಯಾರೊಡನೆಯೂ ಹೇಳದಿರಲು ಕಾರಣವೇನು? ಮತ್ತು ಇಂದ್ರನು ತನ್ನ ಸಂದೇಶಾನುಸಾರವಾಗಿ ಯುಧಿಷ್ಠಿರನ ಮನೋಗತವಾದ ಭಯವನ್ನು ಹೇಗೆ ದೂರಮಾಡಿದನು?–ಈ ಎಲ್ಲ ವಿಷಯಗಳನ್ನೂ ತಾವು ನನಗೆ ವಿಶದವಾಗಿ ಹೇಳಿರಿ.”

“ರಾಜಶಾರ್ದೂಲ! ನಿನ್ನ ಆಶಯದಂತೆಯೇ ಈ ಕಥೆಯನ್ನು ನಿನಗೆ ಸವಿಸ್ತರವಾಗಿ ಹೇಳುವೆನು. ಸಾವಧಾನಚಿತ್ತದಿಂದ ಕೇಳುವವನಾಗು”– ಎಂದು ಹೇಳಿ ವೈಶಂಪಾಯನರು ಕುಂಡಲಾಹರಣವೆಂಬ ಉಪಪರ್ವದ ಪ್ರವಚನವನ್ನಾರಂಭಿಸಿದರು.

“ಪಾಂಡವರ ವನವಾಸದ ಹನ್ನೆರಡು ವರ್ಷಗಳು ಕಳೆದು ಹದಿಮೂರ ನೆಯ ವರ್ಷವು ಪ್ರಾರಂಭವಾಗಲಾಗಿ, ಪಾಂಡವಪ್ರಿಯನಾದ ಇಂದ್ರನು ಪಾಂಡವರಿಗೆ ಹಿತವನ್ನು ಮಾಡುವ ಆಶಯದಿಂದ ಕರ್ಣನಲ್ಲಿ ಹುಟ್ಟಿನಿಂದಲೇ ಇದ್ದ ಕರ್ಣಕುಂಡಲಗಳನ್ನು ಭಿಕ್ಷಾರೂಪವಾಗಿ ಪಡೆಯಲು ಸಂಕಲ್ಪಿಸಿದನು. ತ್ರೈಲೋಕ್ಯಾಧಿಪತಿಯಾದ ಇಂದ್ರನ ಆ ಸಂಕಲ್ಪವು ಜಗತ್ತಿಗೇ ನೇತ್ರರೂಪನಾದ ಮತ್ತು ಕರ್ಣನ ತಂದೆಯಾದ ಸೂರ್ಯನಿಗೆ ತಿಳಿಯದಿರಲಿಲ್ಲ. ತನ್ನ ಮಗನ ಕರ್ಣಕುಂಡಲಗಳನ್ನು ಅಪಹರಿಸಬೇಕೆನ್ನುವ ಇಂದ್ರನ ಅಭಿಪ್ರಾಯವನ್ನು ತಿಳಿದ ಸೂರ್ಯನು ನೇರವಾಗಿ ಕರ್ಣನ ಬಳಿಗೆ ಹೋದನು. ಬ್ರಾಹ್ಮಣರ ವಿಷಯದಲ್ಲಿ ಅಪಾರವಾದ ಭಕ್ತಿಯನ್ನಿಟ್ಟಿದ್ದ ಮತ್ತು ಸತ್ಯನಿಷ್ಠನಾಗಿದ್ದ ತನ್ನ ಮಗನು ಹಂಸತೂಲಿಕಾತಲ್ಪದಲ್ಲಿ ರಾತ್ರಿಯಲ್ಲಿ ಮಲಗಿರುವಾಗ ಸೂರ್ಯನು ಸ್ವಪ್ನದಲ್ಲಿ ಅವನಿಗೆ ಕಾಣಿಸಿಕೊಂಡನು. ಆದರೆ ಸ್ವಪ್ನದಲ್ಲಿ ಕರ್ಣನಿಗೆ ಕಾಣಿಸಿಕೊಳ್ಳುವಾಗ ಸೂರ್ಯನು ತನ್ನ ರೂಪವನ್ನು

ಬದಲಾಯಿಸಿಕೊಂಡನು. ಪುತ್ರಪ್ರೇಮದ ಕಾರಣದಿಂದ ಸೂರ್ಯನು ಬಹುಕೃಪಾವಿಷ್ಟನಾಗಿ ವೇದವಿದನಾದ ಬ್ರಾಹ್ಮಣನೊಬ್ಬನ ರೂಪವನ್ನು ಧರಿಸಿ ಸ್ವಪ್ನದ ಅಂತ್ಯಭಾಗದಲ್ಲಿ (ಬೆಳಗಿನ ಜಾವದಲ್ಲಿ) ಕರ್ಣನಿಗೆ ಕಾಣಿಸಿಕೊಂಡನು. ಕರ್ಣನ ಹಿತಾರ್ಥವಾಗಿ ಸವಿಮಾತುಗಳಿಂದ ಸಂತೈಸುತ್ತಾ ಅವನನ್ನು ಕುರಿತು ಹೀಗೆಂದು ಹೇಳಿದನು :

"ಸತ್ಯನಿಷ್ಠರಲ್ಲಿ ಶ್ರೇಷ್ಠನಾದ ಕರ್ಣನೇ! ಮಗು! ನನ್ನ ಮಾತನ್ನು ಕೇಳು. ಮಹಾಬಾಹುವೇ! ನಿನ್ನ ಮೇಲೆ ನನಗಿರುವ ಪ್ರೇಮದ ಕಾರಣದಿಂದಾಗಿ ನಾನಿಂದು ನಿನಗೆ ಅತ್ಯಂತಹಿತಕರವಾದ ಈ ಮಾತನ್ನು ಹೇಳಲಿರುವೆನು. ಪಾಂಡವರಿಗೆ ಹಿತವನ್ನುಂಟುಮಾಡುವ ಇಚ್ಛೆಯಿಂದ ಇಂದ್ರನು ಕಪಟವೇಷವನ್ನು ಧರಿಸಿ ನಿನ್ನ ಬಳಿಗೆ ಬಂದು ನಿನ್ನಲ್ಲಿರುವ ಕರ್ಣಕುಂಡಲಗಳನ್ನು ಬೇಡಲಿರುವನು. ನೀನು ದಾನಶೀಲನೆಂಬುದು ಇಂದ್ರನಿಗೆ ತಿಳಿದಿರುವುದಲ್ಲದೇ ಜಗತ್ತಿಗೂ ನೀನು ಮಹಾದಾನಿಯೆಂಬ ವಿಷಯವು ತಿಳಿದಿರುವುದು. ನೀನೇನಾದರೂ ಸತ್ಪುರುಷರಿಂದ ಯಾಚಿತನಾದರೆ 'ಅವರ ಯಾಚನೆಯು ಎಂತಹುದು? ಕೊಡಲು ಅರ್ಹವಾದುದೇ?'–ಎಂಬುದನ್ನೂ ವಿವೇಚಿಸದೆ ಕೊಟ್ಟುಬಿಡುವೆ. ಆದರೆ ಯಾರೊಬ್ಬರನ್ನೂ ಯಾವ ಕಾರಣದಿಂದಲೂ ನೀನು ಬೇಡಲು ಹೋಗುವುದಿಲ್ಲ. ಮಗು! ಬ್ರಾಹ್ಮಣರ ವಿಷಯದಲ್ಲಿ ನಿನಗೆ ಅಪಾರವಾದ ಭಕ್ತಿಯಿದೆ. ಅವರು ಯಾಚಿಸಿದ ಯಾವ ವಸ್ತುವನ್ನೂ ನೀನು ಇಲ್ಲವೆನ್ನುವುದಿಲ್ಲ. ಕೇಳಿದವರಿಗೆ ಇಲ್ಲವೆನ್ನುವ ಸ್ವಭಾವವೇ ನಿನ್ನದಲ್ಲ. ಈ ನಿನ್ನ ಗುಣಾತಿಶಯವನ್ನು ತಿಳಿದಿರುವ ಶಕ್ರನು ನಿನ್ನಲ್ಲಿರುವ ಕವಚ-ಕುಂಡಲಗಳನ್ನು ಬೇಡಿ ಪಡೆಯಲು ಸಂಕಲ್ಪಿಸಿದ್ದಾನೆ. ಅವನು ಬಂದು ಕರ್ಣಕುಂಡಲಗಳನ್ನು ಯಾಚಿಸಿದಾಗ ನೀನವನಿಗೆ ದಿವ್ಯವಾದ ಕರ್ಣಕುಂಡಲಗಳನ್ನು ಕೊಟ್ಟುಬಿಡಬೇಡ. ಆದರೆ ಮಾತ್ರ ನೀನು ಅವನನ್ನು ಸರ್ವಪ್ರಕಾರದಿಂದಲೂ ಆದರಿಸಿ ಸತ್ಕರಿಸಬೇಕು. ಅವನೊಡನೆ ಭಕ್ತಿಯಿಂದ ನಡೆದುಕೊಳ್ಳಬೇಕು. ಅವನನ್ನು ಬಹುವಾಗಿ ಸ್ತೋತ್ರಮಾಡಬೇಕು. ಹೀಗೆ ಒಲಿಸಿಕೊಳ್ಳಬೇಕೇ ಹೊರತು ಕರ್ಣಕುಂಡಲಗಳನ್ನು ಮಾತ್ರ ಖಂಡಿತವಾಗಿಯೂ

ಕೊಡಕೂಡದು. ಕರ್ಣಕುಂಡಲಗಳನ್ನು ಕೊಡದಿರುವುದು ನಿನಗೆ ಶ್ರೇಯಸ್ಕರವಾದುದು.

ಆದರೆ ಪುರಂದರರನು ಬ್ರಾಹ್ಮಣವೇಷವನ್ನು ಧರಿಸಿ ಕೇವಲ ಕರ್ಣ ಕುಂಡಲಗಳನ್ನು ಒಯ್ಯುವ ಸಲುವಾಗಿಯೇ ಬರುತ್ತಾನೆಂಬುದು ನಿಶ್ಚಯ. ಆಗವನು ಕೇಳಿದಾಗ ನಾನಾಕಾರಣಗಳನ್ನು ಮುಂದುಮಾಡಿ ಶರೀರದೊಡ ನೆಯೇ ಸೇರಿಕೊಂಡಿರುವ ಕರ್ಣಕುಂಡಲಗಳನ್ನು ಕೊಡುವ ಅಸಾಧ್ಯತೆಯನ್ನು ಅವನಿಗೆ ಮನಗಾಣಿಸಬೇಕು. ಕರ್ಣಕುಂಡಲಗಳನ್ನು ಬಿಟ್ಟು ಬೇರಾವು ದನ್ನಾದರೂ ಕೇಳಬೇಕೆಂದು ಪುರಂದರನನ್ನು ನೀನು ಪುನಃ ಪುನಃ ಒತ್ತಾ ಯಿಸಬೇಕು. ಹೇರಳವಾದ ಧನ-ಕನಕ-ವಜ್ರ-ವೈಢೂರ್ಯ-ರತ್ನಹಾರಗಳನ್ನೇ ಕೊಡುವೆನೆಂದು ಹೇಳಬೇಕು. “ಉತ್ತಮರಾದ ಸ್ತ್ರೀಯರು, ಒಳ್ಳೆಯ ಜಾತಿಯ ಗೋವುಗಳು–ಇವುಗಳನ್ನಾದರೂ ಕರ್ಣಕುಂಡಲಗಳ ಪ್ರತ್ಯಾಮ್ನಾಯವಾಗಿ ಸ್ವೀಕರಿಸಿ ಅನುಗ್ರಹಿಸಬೇಕು. ಶರೀರಕ್ಕೆ ಹತ್ತಿಕೊಂಡಿ ರುವ ಕವಚವನ್ನೂ–ಕರ್ಣಕುಂಡಲಗಳನ್ನೂ ಕಿತ್ತರೆ ಕುಂಡಲಗಳೂ ಮತ್ತು ಕವಚವೂ ರಕ್ತಭೂಯಿಷ್ಠವಾಗಿ ದಾನಕೊಡಲು ಅಪವಿತ್ರವಾಗುವುವು” –ಎಂದು ಹೇಳಬೇಕು. ಇನ್ನೂ ಅನೇಕ ಲೌಕಿಕ ನಿದರ್ಶನಗಳನ್ನೂ ಕೊಟ್ಟು ಕರ್ಣಕುಂಡಲಗಳ ಭಿಕ್ಷೆಯು ಅಸಹಜವಾದುದೆಂದು ಪುರಂದರನಿಗೆ ಮನ ಗಾಣಿಸಬೇಕು.

ಮಗು! ವಾತ್ಸಲ್ಯದ ಕಾರಣದಿಂದ ನಾನು ಮುಂದಾಗಿಯೇ ಹೇಳಿರುವ ಈ ಮಾತುಗಳನ್ನು ಕಡೆಗಾಣಿಸಿ ನಿನ್ನ ಶರೀರಸಹಜವಾಗಿರುವ ಕರ್ಣಕುಂಡಲ ಗಳನ್ನು ಕುಂಡಲೇಪ್ಸುವಾದ ಪುರಂದರನಿಗೆ ನೀನು ಕೊಟ್ಟೆಯಾದರೆ ನಿನ್ನ ಆಯುಷ್ಯವು ಕ್ಷೀಣವಾಗಿ ಹೋಗುವುದಲ್ಲದೇ–ನೀನು ಬಹುಶೀಘ್ರದಲ್ಲಿಯೇ ಮೃತ್ಯುವಶನಾಗುವೆ. ನಿನ್ನ ಶರೀರದ ಜೊತೆಯಲ್ಲಿಯೇ ಕೂಡಿಕೊಂಡು ಬಂದಿರುವ ಕವಚ-ಕುಂಡಲಗಳ ಮಹತ್ತ್ವವನ್ನು ನೀನರಿಯೆ ; ಕರ್ಣ!

**ಕವಚೇನ ಸಮಾಯುಕ್ತಃ ಕುಣ್ಡಲಾಭ್ಯಾಂ ಚ ಮಾನದ ।**
**ಅವಧ್ಯಸ್ತ್ವಂ ರಣೇಽರೀಣಾಮಿತಿ ವಿದ್ಧಿ ವಚೋ ಮಮ ॥೧೯॥**

ಮಾನದನೇ! ಸಹಜವಾದ ಕವಚ-ಕರ್ಣಕುಂಡಲಗಳಿಂದ ಕೂಡಿರುವ ನೀನು ಯುದ್ಧದಲ್ಲಿ ಶತ್ರುಗಳಿಗೆ ಅವಧ್ಯನು. ಕರ್ಣಕುಂಡಲಗಳೂ ಮತ್ತು ಕವಚವೂ ನಿನ್ನಲ್ಲಿರುವ ಕಾರಣದಿಂದಲೇ ನಿನ್ನನ್ನು ಯಾರೂ ಯುದ್ಧದಲ್ಲಿ ವಧೆ ಮಾಡಲಾರರು. ಈ ರಹಸ್ಯವನ್ನು ಇಂದು ನನ್ನಿಂದ ತಿಳಿಯುವವನಾಗು. ಅರ್ಥಾತ್ ಈ ಕರ್ಣಕುಂಡಲಗಳೂ ಮತ್ತು ಕವಚವೂ ನಿನ್ನ ಪ್ರಾಣ ಸಮಾನವಾದುವುಗಳು. ನಿನ್ನ ಪ್ರಾಣವು ಇವುಗಳಲ್ಲಿಯೇ ಅಡಗಿದೆಯೆಂದರೂ ತಪ್ಪಾಗದು. ಈ ಕವಚ-ಕುಂಡಲಗಳು ನಿನ್ನ ಪ್ರಾಣವನ್ನು ಸುಭದ್ರವಾಗಿಟ್ಟಿರುತ್ತವೆ.

**ಅಮೃತಾದುತ್ಥಿತಂ ಹ್ಯೇತದುಭಯಂ ರತ್ನಸಮ್ಭವಮ್ ।**
**ತಸ್ಮಾದ್ರಕ್ಷ್ಯಂ ತ್ವಯಾ ಕರ್ಣ ಜೀವಿತಂ ಚೇತ್ಪ್ರಿಯಂ ತವ ॥೨೦॥**

ರತ್ನಮಯವಾದ ಈ ಕವಚ-ಕುಂಡಲಗಳು ಅಮೃತದಿಂದಲೇ ಹುಟ್ಟಿದುವುಗಳಾಗಿವೆ. (ಅಮೃತದಿಂದ ಹುಟ್ಟಿರುವ ಇವುಗಳಿಗೆ ತಮ್ಮನ್ನು ಧರಿಸಿದವರನ್ನು ಅಮರರನ್ನಾಗಿ ಮಾಡುವ ಸಾಮರ್ಥ್ಯವಿದೆ.) ಸರ್ವಪ್ರಾಣಿಗಳಿಗೂ ಇರುವಂತೆಯೇ ನಿನಗೆ ನಿನ್ನ ಜೀವಿತದಲ್ಲಿ ಮಮತೆಯಿರುವುದಾದರೆ–ನೀನು ಈ ಕವಚ-ಕುಂಡಲಗಳನ್ನು ರಕ್ಷಿಸಿಕೊಳ್ಳಲೇಬೇಕು."

ಬ್ರಾಹ್ಮಣವೇಷಧಾರಿಯಾದ ಸೂರ್ಯನ ಮಾತುಗಳನ್ನು ಕೇಳಿ ಕರ್ಣನು ಪ್ರಶ್ನಿಸಿದನು :

"ಭಗವನ್! ಇಷ್ಟೊಂದು ಸೌಹಾರ್ದದಿಂದ ನನ್ನೊಡನೆ ಮಾತನಾಡುತ್ತಿರುವ ಬ್ರಾಹ್ಮಣವೇಷಧರನಾದ ನೀನಾರೆಂದು ಕೇಳಬಹುದೇ? ನೀನಾರೆಂಬುದನ್ನು ತಿಳಿದುಕೊಳ್ಳಲು ಕುತೂಹಲಿಯಾಗಿದ್ದೇನೆ."

"ಮಗು! ನಾನು ಸಹಸ್ರಾಂಶು. ವಾತ್ಸಲ್ಯಪ್ರಚೋದಿತನಾಗಿ ನಾನು ನಿನಗೆ ಈ ಮಾರ್ಗವನ್ನು ಸೂಚಿಸಿದ್ದೇನೆ. ನಾನು ಹೇಳಿದಂತೆ ನೀನು ಖಂಡಿತವಾಗಿಯೂ ಮಾಡಬೇಕು. ಹೀಗೆ ಮಾಡುವುದೇ ನಿನಗೆ ಪರಮ ಶ್ರೇಯಸ್ಕರ."

"ಭಗವಾನ್! ಪ್ರಭುವಾದ, ಸಹಸ್ರಾಂಶುವಾದ, ಜಗಚ್ಚಕ್ಷುವಾದ ಸೂರ್ಯದೇವನೇ ನನ್ನ ಹಿತವನ್ನು ಅಭಿಲಾಷಿಸಿ ನನ್ನೊಡನೆ ಮಾತನಾಡುತ್ತಿರುವನೆಂದರೆ ಇದಕ್ಕಿಂತಲೂ ಶ್ರೇಯಸ್ಕರವಾದ ವಿಷಯವು ಮತ್ತೊಂದಿಲ್ಲ. ಇದರಿಂದ ನನಗೆ ಶ್ರೇಯಸ್ಸೇ ಉಂಟಾಗುವುದು. ಆದರೆ ಈ ವಿಷಯದಲ್ಲಿ ನಾನು ಹೇಳಲಿರುವ ಎರಡು ಮಾತುಗಳನ್ನೂ ಕರುಣೆಯಿಂದ ಲಾಲಿಸು.

**ಪ್ರಸಾದಯೇ ತ್ವಾಂ ವರದಂ ಪ್ರಣಯಾಚ್ಚ ಬ್ರವೀಮ್ಯಹಮ್ ।**
**ನ ನಿವಾರ್ಯೋ ವ್ರತಾದಸ್ಮಾದಹಂ ಯದ್ಯಸ್ಮಿ ತೇ ಪ್ರಿಯಃ ॥೨೪॥**

ವರದನಾದ ನಿನ್ನನ್ನು ಕೈಮುಗಿದು ಕೇಳಿಕೊಳ್ಳುತ್ತೇನೆ. ನಾನು ನಿನ್ನಲ್ಲಿಟ್ಟಿರುವ ಅಪಾರವಾದ ಪ್ರೇಮದ ಕಾರಣದಿಂದಲೂ ನಾನು ನಿನಗಿದನ್ನು ಹೇಳುತ್ತಿದ್ದೇನೆ. ನೀನು ಹೇಳಿದ ರೀತಿಯಲ್ಲಿ ನಾನು ನಿನಗೆ ಅತ್ಯಂತಪ್ರಿಯನೇ ಆಗಿದ್ದರೆ–ನಾನು ಕೈಗೊಂಡಿರುವ 'ದಾನವ್ರತ' ದಿಂದ ನನ್ನನ್ನು ವಿಮುಖನಾಗುವಂತೆ ಸಲಹೆ ನೀಡಬೇಡ, ದೇವ!

ವಿಭಾವಸುವೇ! ನನ್ನ ವ್ರತವೇನೆಂಬುದೂ ಮತ್ತು ಈ ದಾನವ್ರತದಲ್ಲಿ ನನಗಿರುವ ನಿಷ್ಠೆ ಎಷ್ಟೆಂಬುದೂ ಲೋಕಾಂತರಗಳಿಗೂ ತಿಳಿದುಹೋಗಿದೆ. ಬ್ರಾಹ್ಮಣಶ್ರೇಷ್ಠರು ನನ್ನ ಬಳಿಗೆ ಬಂದು ನನ್ನ ಪ್ರಾಣಗಳನ್ನೇ ದಾನವಾಗಿ ಬೇಡಿದರೂ ನಾನು ಕೊಟ್ಟುಬಿಡುವೆನೆಂಬ ವಿಷಯವನ್ನು ಎಲ್ಲರೂ ತಿಳಿದಿದ್ದಾರೆ.

ಖೇಚರೋತ್ತಮ! ಆದುದರಿಂದ, ಒಂದು ವೇಳೆ ನೀನು ಹೇಳಿದಂತೆ ಪಾಂಡವರ ಹಿತಾರ್ಥವಾಗಿ ಶಕ್ರನು ಬ್ರಾಹ್ಮಣವೇಷವನ್ನು ಧರಿಸಿ ನನ್ನ ಬಳಿಗೆ ಬಂದು ನನ್ನಲ್ಲಿರುವ ಕರ್ಣಕುಂಡಲಗಳ ಭಿಕ್ಷೆಯನ್ನು ಬೇಡಿದ್ದೇ ಆದರೆ–ಅವನಿಗೆ ನಾನು ಕರ್ಣಕುಂಡಲಗಳನ್ನೂ ಮತ್ತು ಕವಚವನ್ನೂ ಕೊಟ್ಟುಬಿಡುತ್ತೇನೆ. ಹಾಗೆ ಕೊಡುವುದರಿಂದ ಮಾತ್ರವೇ ಮೂರು ಲೋಕಗಳಲ್ಲಿಯೂ ಈಗ ಹರಡಿರುವ ನನ್ನ ಕೀರ್ತಿಗೆ ಕಳಂಕವುಂಟಾಗುವುದಿಲ್ಲ.

**ಮದ್ವಿಧಸ್ಯ ಯಶಸ್ಯಂ ಹಿ ನ ಯುಕ್ತಂ ಪ್ರಾಣರಕ್ಷಣಮ್ ।**
**ಯುಕ್ತಂ ಹಿ ಯಶಸಾ ಯುಕ್ತಂ ಮರಣಂ ಲೋಕಸಮ್ಮತಮ್ ॥**

ನನ್ನಂತಹವನಿಗೆ ಯಶಸ್ಸಿನ ರಕ್ಷಣೆಯು ಮುಖ್ಯವೇ ಹೊರತು ಪ್ರಾಣ ರಕ್ಷಣೆಯು ಖಂಡಿತವಾಗಿಯೂ ಯುಕ್ತವಲ್ಲ. ಲೋಕಸಮ್ಮತವಾದ ಯಶಸ್ಸಿನಿಂದ ಕೂಡಿದ ಮರಣವೇ ಶ್ರೇಷ್ಠವಾದುದು. ಆದುದರಿಂದ ನಾನು ಪಾಂಡವರ ಹಿತಾರ್ಥವಾಗಿ ಕರ್ಣಕುಂಡಲಗಳನ್ನೂ-ಕವಚವನ್ನೂ ಬೇಡುವ ಇಂದ್ರನಿಗೆ ಖಂಡಿತವಾಗಿಯೂ ಅವುಗಳನ್ನು ಕೊಟ್ಟುಬಿಡು ತ್ತೇನೆ. ಮೃತ್ಯುವಶನಾಗುವೆನೆಂಬ ಭಯದಿಂದ ಖಂಡಿತವಾಗಿಯೂ ಯಾಚಿಸಿದುದನ್ನು ಇಲ್ಲವೆನ್ನಲಾರೆನು. ಹೀಗೆ ಮಾಡುವುದು ನನ್ನ ಯಶಸ್ಸಿಗೆ ಕಾರಣವಾಗುವುದಲ್ಲದೆ ಇಂದ್ರನ ಅಪಯಶಸ್ಸಿಗೂ ಕಾರಣವಾಗುತ್ತದೆ. ಭಾನುಮಂತನೇ! ನಾನು ನನ್ನ ಜೀವಿತದ ವಿನಿಮಯದಿಂದಲಾದರೂ ಕೀರ್ತಿಯನ್ನು ಪಡೆಯಬೇಕೆಂಬ ಆಶೆಯುಳ್ಳವನಾಗಿದ್ದೇನೆ. ಮನುಷ್ಯ ನಾದವನು ಕೀರ್ತಿಮಂತನಾಗಿ ಬಾಳಬೇಕೆಂಬುದೇ ನನ್ನ ಅಭಿಪ್ರಾಯ.

**ಕೀರ್ತಿಮಾನಶ್ನುತೇ ಸ್ವರ್ಗಂ ಹೀನಕೀರ್ತಿಸ್ತು ನಶ್ಯತಿ ।**
**ಕೀರ್ತಿರ್ಹಿ ಪುರುಷಂ ಲೋಕೇ ಸಂಜೀವಯತಿ ಮಾತೃವತ್ ।**
**ಅಕೀರ್ತಿರ್ಜೀವಿತಂ ಹನ್ತಿ ಜೀವತೋಽಪಿ ಶರೀರಿಣಃ ॥೩೨॥**

ಕೀರ್ತಿಮಂತನಾದವನು ಸ್ವರ್ಗಸುಖವನ್ನು ಪಡೆಯುತ್ತಾನೆ. ಕೀರ್ತಿ ಹೀನನಾದವನು ನಾಶಹೊಂದುತ್ತಾನೆ. ತಾಯಿಯು ಮಗನನ್ನು ಪೋಷಿಸು ವಂತೆ-ಈ ಲೋಕದಲ್ಲಿ ಕೀರ್ತಿಯೇ ಮಾನವನನ್ನು ಪೋಷಿಸುತ್ತದೆ. (ಬದುಕಿಸುತ್ತದೆ.) ಅಕೀರ್ತಿಯೆಂಬುದು ಮನುಷ್ಯರನ್ನು ಅವರು ಬದುಕಿದ್ದರೂ ಕೊಲ್ಲುತ್ತದೆ. ( ಅಕೀರ್ತಿವಂತನಾದ ಮನುಷ್ಯನು ನೀರೋಗದೃಢಕಾಯನಾಗಿ ಬದುಕಿದ್ದರೂ ಮೃತಪ್ರಾಯನೇ ಆಗಿರುತ್ತಾನೆ. )

ಸೂರ್ಯದೇವ! ನಾನು ಹೇಳಲಿರುವ ಕೀರ್ತಿವಿಷಯವಾದ ಪುರಾತನ ವಾದ ಶ್ಲೋಕವು ಸಾಕ್ಷಾತ್ ಬ್ರಹ್ಮನಿಂದಲೇ ಹೇಳಲ್ಪಟ್ಟಿದೆ. ಆ ಶ್ಲೋಕದಲ್ಲಿ ಕೀರ್ತಿಯು ಆಯುರ್ವರ್ಧಕವೆಂದು ಚತುರ್ಮುಖನೇ ಬಣ್ಣಿಸಿದ್ದಾನೆ.

**ಪುರುಷಸ್ಯ ಪರೇ ಲೋಕೇ ಕೀರ್ತಿರೇವ ಪರಾಯಣಮ್ ।**
**ಇಹ ಲೋಕೇ ವಿಶುದ್ಧಾ ಚ ಕೀರ್ತಿರಾಯುರ್ವಿವರ್ಧನೀ ॥೩೪॥**

ಮನುಷ್ಯನಿಗೆ ಉತ್ತಮಲೋಕಪ್ರಾಪ್ತಿಗೆ ಅವನ ಕೀರ್ತಿಯೇ ಆಶ್ರಯೀಭೂತವಾಗಿರುತ್ತದೆ. ಇಹಲೋಕದಲ್ಲಿಯೂ ಕಳಂಕರಹಿತವಾದ ಕೀರ್ತಿಯು ಆಯುರ್ವರ್ಧಿನಿಯಾಗುತ್ತದೆ. ಅರ್ಥಾತ್ ಕೀರ್ತಿಯು ಐಹಿಕ ಮತ್ತು ಆಮುಷ್ಮಿಕಫಲಗಳನ್ನು ಕೊಡುತ್ತದೆ. ಆದುದರಿಂದ ನಾನು ನನ್ನ ಹುಟ್ಟಿನಿಂದಲೇ ನನ್ನ ಶರೀರದೊಡನೆಯೇ ಸೇರಿಕೊಂಡಿರುವ ಕರ್ಣಕುಂಡಲಗಳನ್ನೂ–ಕವಚವನ್ನೂ ದಾನಮಾಡಿ ಶಾಶ್ವತವಾದ ಕೀರ್ತಿಯನ್ನು ಪಡೆಯುತ್ತೇನೆ. ಬ್ರಾಹ್ಮಣಶ್ರೇಷ್ಠರಿಗೆ ಯಥಾವಿಧಿಯಾಗಿ ದಾನಕೊಟ್ಟು ಯುದ್ಧವೆಂಬ ಯಜ್ಞದಲ್ಲಿ ನನ್ನ ಶರೀರವನ್ನು ಹೋಮಮಾಡುತ್ತೇನೆ.

ಇತರರಿಂದ ಮಾಡಲು ಅಸಾಧ್ಯವಾದ ಕಾರ್ಯವನ್ನು ಮಾಡಿ ಶತ್ರುಗಳನ್ನು ಯುದ್ಧದಲ್ಲಿ ಜಯಿಸಿ ನಾನು ಅಪಾರವಾದ ಕೀರ್ತಿಯನ್ನೇ ಪಡೆಯುತ್ತೇನೆ. ನಾನು ನನ್ನ ಪರಮಶತ್ರುಗಳೊಡನೆ ಯುದ್ಧದಲ್ಲಿ ತೊಡಗಿದ್ದರೂ ಅವರು ಜೀವದಾನವನ್ನು ಬೇಡಿದರೆ ನಾನು ಭೀತರಾದ ಅವರಿಗೆ ಜೀವದಾನವನ್ನು ಮಾಡುತ್ತೇನೆ. ಚಿಕ್ಕಮಕ್ಕಳು, ವೃದ್ಧರು ಮತ್ತು ಬ್ರಾಹ್ಮಣರು, ಯಾವುದಾದರೂ ಕಾರಣದಿಂದ ಭಯಗ್ರಸ್ತರಾದರೆ ಅಂತಹವರ ಭಯವನ್ನು ಖಂಡಿತವಾಗಿಯೂ ದೂರಮಾಡುತ್ತೇನೆ. ಇದರಿಂದಲೂ ನಾನು ಲೋಕದಲ್ಲಿ ಶಾಶ್ವತವಾದ ಕೀರ್ತಿಯನ್ನೂ, ಅವಸಾನಾನಂತರದಲ್ಲಿ ಸ್ವರ್ಗಲೋಕವನ್ನೂ ಪಡೆಯುತ್ತೇನೆ. ಸೂರ್ಯದೇವ! ನಾನು ಹಿಂದೆಯೇ ಹೇಳಿದಂತೆ :

**ಜೀವಿತೇನಾಪಿ ಮೇ ರಕ್ಷ್ಯಾ ಕೀರ್ತಿಸ್ತದ್ವಿದ್ಧಿ ಮೇ ವ್ರತಮ್ ॥೩೮॥**

ಜೀವಿತವನ್ನು ತೊರೆದಾದರೂ ನಾನು ನನ್ನ ಸತ್ಕೀರ್ತಿಯನ್ನು ರಕ್ಷಿಸಿಕೊಳ್ಳಬೇಕು. ಇದೇ ನನ್ನ ವ್ರತವಾಗಿರುತ್ತದೆ. ಒಂದು ವೇಳೆ ನೀನು ಹೇಳಿದ ರೀತಿಯಲ್ಲಿ ಸಾಕ್ಷಾತ್ ಶತಕ್ರತುವು ಕಪಟಬ್ರಾಹ್ಮಣವೇಷಧರನಾಗಿ ನನ್ನ ಬಳಿಗೆ ಬಂದು, ಕವಚ-ಕುಂಡಲಗಳನ್ನು ಬೇಡಿ ಅವುಗಳನ್ನು ನನ್ನಿಂದ ಪಡೆದಲ್ಲಿ ನನ್ನ ಕೀರ್ತಿಯು ನಿಶ್ಚಯವಾಗಿಯೂ ಈ ಲೋಕದಲ್ಲಿ ಅಮರವಾಗಿ ಉಳಿಯುವುದು. (ಇಂತಹ ಸನ್ನಿವೇಶವನ್ನು ನಾನು ಮೃತ್ಯುವಿಗೆ ಹೆದರಿ ಕಳೆದುಕೊಳ್ಳಲೇ?)"

ಇ೦೦ನೆಯ ಅಧ್ಯಾಯವು ಮುಗಿಯಿತು.

೩೦೧ನೆಯ ಅಧ್ಯಾಯ ಕುಣ್ಡಲಾಹರಣಪರ್ವ ( ಮುಂದುವರಿದಿದೆ. )

## ಇಂದ್ರನಿಗೆ ಕರ್ಣಕುಂಡಲಗಳನ್ನು ಕೊಡದಿರುವಂತೆ ಸೂರ್ಯನಿಂದ ಕರ್ಣನಿಗೆ ಆದೇಶ

ಜನಮೇಜಯ! ಕೀರ್ತಿಕಾಮನಾದ ಕರ್ಣನಿಗೆ ಭಗವಾನ್ ಸೂರ್ಯನು ಹೇಳುತ್ತಾನೆ :

**ಮಾಹಿತಂ ಕರ್ಣ ಕಾರ್ಷೀಸ್ತ್ವಮಾತ್ಮನಃ ಸುಹೃದಾಂ ತಥಾ ।**
**ಪುತ್ರಾಣಾಮಥ ಭಾರ್ಯಾಣಾಮಥೋ ಮಾತುರಥೋ ಪಿತುಃ ॥೧॥**

"ಕರ್ಣ! ಕೀರ್ತಿಗಳಿಸುವುದನ್ನೇ ಪ್ರಧಾನವನ್ನಾಗಿಟ್ಟುಕೊಂಡು ನಿನ್ನನ್ನೇ ನಂಬಿ ಜೀವಿಸುತ್ತಿರುವ ನಿನ್ನ ಸ್ನೇಹಿತರಿಗೂ, ಸತೀ-ಸುತರಿಗೂ, ತಾಯಿ-ತಂದೆಗಳಿಗೂ, ನಿನಗೂ ಅಹಿತವಾಗುವ ರೀತಿಯಲ್ಲಿ ನೀನು ನಡೆದುಕೊಳ್ಳಬಾರದು. ಯಾವ ರೀತಿಯಲ್ಲಿ ಕೀರ್ತಿಯನ್ನು ಗಳಿಸುವುದರಿಂದ ನಮ್ಮ ಬಂಧು-ಮಿತ್ರವರ್ಗಕ್ಕೆ ಯಾವ ವಿಧವಾದ ತೊಂದರೆಯೂ ಆಗುವುದಿಲ್ಲವೋ–ಆ ರೀತಿಯಲ್ಲಿ ಕೀರ್ತಿಯನ್ನು ಸಂಪಾದಿಸಬೇಕು. ಪುರುಷಶ್ರೇಷ್ಠನೇ! ಜನರು ಈ ಲೋಕದಲ್ಲಿ ಶಾಶ್ವತಕೀರ್ತಿಯನ್ನೂ– ಪರಲೋಕದಲ್ಲಿ ಸ್ವರ್ಗಸುಖವನ್ನೂ ಅಪೇಕ್ಷಿಸುವುದೇನೋ ನಿಜ. ಆದರೆ ಅಂತಹ ಶಾಶ್ವತವಾದ ಕೀರ್ತಿಯನ್ನು ಬಯಸುವವರೂ ಮತ್ತು ಅದಕ್ಕಾಗಿ ಶ್ರಮಿಸುವವರೂ ತಮ್ಮ ಶರೀರತ್ಯಾಗಮಾಡಬಾರದು.

**ಯಸ್ತ್ವಂ ಪ್ರಾಣವಿರೋಧೇನ ಕೀರ್ತಿಮಿಚ್ಛಸಿ ಶಾಶ್ವತೀಮ್ ।**
**ಸಾ ತೇ ಪ್ರಾಣಾನ್ಸಮಾದಾಯ ಗಮಿಷ್ಯತಿ ನ ಸಂಶಯಃ ॥೩॥**

ಆದರೆ ನೀನು ಮಾತ್ರ ನಿನ್ನ ಜೀವವನ್ನೇ ವಿನಿಮಯಮಾಡಿ ಕೀರ್ತಿಯನ್ನು ಸಂಪಾದಿಸಲಿಚ್ಛಿಸಿರುವೆ. ನಿಶ್ಚಯವಾಗಿಯೂ ನನ್ನ ಮಾತಿಗೆ ಕಿವಿಗೊಡದೇ ನೀನು ನಡೆದುಕೊಂಡೆಯಾದರೆ ನಿನ್ನ ಆರಾಧ್ಯದೇವತೆಯಾದ ಕೀರ್ತಿಯೇ ನಿನ್ನ ಪ್ರಾಣಗಳನ್ನು ಅಪಹರಿಸಿಬಿಡುತ್ತದೆ. ಜೀವಿಸಿರುವ ಮನುಷ್ಯನು ಮಾತ್ರವೇ ತನ್ನನ್ನು ಅವಲಂಬಿಸಿರುವ ತಂದೆ-ತಾಯಿಗಳು, ಸತೀ-ಸುತರು ಮತ್ತು ಮಿತ್ರರ ಕಾರ್ಯಮಾಡಿಕೊಡಬಲ್ಲನು. ಪುರುಷನೇ

ಸತ್ತುಹೋದರೆ ಅವನ ಅಪಾರವಾದ ಅಥವಾ ಶಾಶ್ವತವಾದ ಕೀರ್ತಿಯೇನಾದರೂ ತಂದೆ-ತಾಯಿಗಳ, ಸತೀ-ಸುತ-ಮಿತ್ರಬಾಂಧವರ ಪೋಷಣೆ-ಪಾಲನೆಗಳಿಗೆ ಸಮರ್ಥವಾದೀತೇ?

ಕೀರ್ತಿಶ್ಚ ಜೀವತಃ ಸಾಧ್ವೀ ಪುರುಷಸ್ಯ ಮಹಾದ್ಯುತೇ ।
ಮೃತಸ್ಯ ಕೀರ್ತ್ಯಾ ಕಿಂ ಕಾರ್ಯಂ ಭಸ್ಮೀಭೂತಸ್ಯ ದೇಹಿನಃ ॥೬॥

ರಾಜರಾದವರಿಗೆ ತಮ್ಮ ಅತುಲಪರಾಕ್ರಮದ ಪ್ರಯೋಜನವು ಜೀವಿಸಿರುವವರೆಗೆ ಮಾತ್ರವೇ ಇರುತ್ತದೆ. ಅವಸಾನಹೊಂದಿದನಂತರ ಭಸ್ಮೀಭೂತನಾಗಿ ಹೋಗುವ ಮಾನವನಿಗೆ ಮಹಾಪರಾಕ್ರಮಶಾಲಿಯೆಂಬ ಅತುಲವಾದ ಕೀರ್ತಿಯು ಯಾವ ಪ್ರಯೋಜನಕ್ಕೆ ಬರುತ್ತದೆ? ಆದುದರಿಂದ ಕರ್ಣ! ಯಶಸ್ಸಿನ ಫಲವನ್ನು ಪಡೆಯಬೇಕಾದರೆ ಜೀವಿಸಿರುವುದೂ ಅತ್ಯಾವಶ್ಯಕ. ಇದನ್ನು ನೀನು ಚೆನ್ನಾಗಿ ವಿವೇಚಿಸು.

ಮೃತಃ ಕೀರ್ತಿಂ ನ ಜಾನೀತೇ ಜೀವನ್ಕೀರ್ತಿಂ ಸಮಶ್ನುತೇ ।
ಮೃತಸ್ಯ ಕೀರ್ತಿರ್ಮರ್ತ್ಯಸ್ಯ ಯಥಾ ಮಾಲಾ ಗತಾಯುಷಃ ॥೭॥

ಜೀವಿಸಿರುವವನಿಗೆ ಕೀರ್ತಿಯಿರುವುದು ಸಾಧುವಾಗಿರುತ್ತದೆ. ದೇಹವು ಭಸ್ಮೀಭೂತವಾದ ಮೇಲೆ ಆ ಕೀರ್ತಿಯನ್ನು ಕಟ್ಟಿಕೊಂಡು ಏನು ಮಾಡಬೇಕಾಗಿದೆ? ತಾನು ಮಾಡಿದ ಕಾರ್ಯದಿಂದ ಪ್ರಾಪ್ತವಾಗಬಹುದಾದ ಕೀರ್ತಿಯ ಸುಖವನ್ನು ಜೀವಿಸಿರುವವನು ಮಾತ್ರವೇ ಅನುಭವಿಸಬಲ್ಲನು. ಸತ್ತುಹೋದನಂತರ ಅವನ ಕೀರ್ತಿಯನ್ನು ಹಾಡಿ-ಹೊಗಳಿದರೆ ಹೆಣಕ್ಕೆ ಹೂಗಳಿಂದ ಅಲಂಕರಿಸಿದಷ್ಟೇ ಪ್ರಯೋಜನವಾಗುತ್ತದೆ. ಕೀರ್ತಿಯನ್ನು ಹಾಡುವವನಿಗೂ ಪ್ರಯೋಜನವಿಲ್ಲ. ಹಾಡಿಸಿಕೊಂಡವನಿಗೂ ಪ್ರಯೋಜನವಿಲ್ಲ. (ಕೀರ್ತಿಯ ಅಥವಾ ಹೊಗಳಿಕೆಯ ಪ್ರಯೋಜನವು ಅಥವಾ ಸುಖವು ಮಾನಸಿಕವಾದುದು. ಹೊಗಳಿಕೆಗೆ ಮಾರುಹೋಗದ ಮಾನವನೇ ಇಲ್ಲ. ಸಾಮಾನ್ಯವಾಗಿ ಎಲ್ಲ ಮಾನವರೂ ಹೊಗಳಿಕೆಗಾಗಿಯೇ ಕಾರ್ಯಮಾಡುತ್ತಾರೆ. ತಮ್ಮ ಕಾರ್ಯವನ್ನು ಅಥವಾ ಸಾಧನೆಯನ್ನು ನೋಡಿ ಮತ್ತೊಬ್ಬರು ಹೊಗಳಿದರೆ ಉಬ್ಬಿಹೋಗುತ್ತಾರೆ. ತಾವು ಮಾಡಿದ ಕಾರ್ಯದಿಂದ

ಹೊಗಳಿಕೆಯು ಬಂತೆಂದರೆ ಅವರ ಮನಸ್ಸಿಗೆ ಆಪ್ಯಾಯಮಾನವಾಗುತ್ತದೆ. ಆದುದರಿಂದ ಹೊಗಳಿಕೆಯ ಸುಖವನ್ನು ಅನುಭವಿಸಬೇಕಾದರೆ ಮನುಷ್ಯನು ಜೀವಿಸಿರಲೇಬೇಕು.)

ಕರ್ಣ! 'ನೀನೇಕೆ ನನ್ನೊಡನೆ ಈ ವಿಷಯಗಳೆಲ್ಲವನ್ನೂ ಹೇಳುತ್ತಿರುವೆಯೆಂದೂ, ಇಂತಹ ಸಲಹೆಯನ್ನು ಏಕೆ ಕೊಡುತ್ತಿರುವೆಯೆಂದೂ' ನನ್ನನ್ನು ಪ್ರಶ್ನಿಸಬಹುದು : ಇದಕ್ಕೆ ಕಾರಣವಿಷ್ಟೆ :

ನೀನು ಯಾವಾಗಲೂ ನನ್ನ ಉಪಾಸನೆಯನ್ನು ಮಾಡುತ್ತಿರುತ್ತೀಯೆ. ನೀನು ನನ್ನ ಭಕ್ತನಾಗಿರುವುದರಿಂದ ನಿನಗೆ ಹಿತವಾಗುವ ವಿಷಯವನ್ನು ಹೇಳುವುದು ನನ್ನ ಕರ್ತವ್ಯವಾಗಿದೆ. ನನ್ನ ಭಕ್ತರು ಯಾವಾಗಲೂ ನನ್ನಿಂದ ರಕ್ಷಿಸಲ್ಪಡತಕ್ಕವರಾಗಿರುತ್ತಾರೆ.

ಮಹಾಭುಜನೇ! 'ಇವನು ನನ್ನ ಪರಮಭಕ್ತ. ನನ್ನನ್ನು ಅಪಾರವಾದ ಭಕ್ತಿಭಾವದಿಂದ ಸರ್ವದಾ ಆರಾಧಿಸುತ್ತಿರುತ್ತಾನೆ'–ಎಂಬ ಭಾವನೆಯಿಂದಾಗಿ ನಿನ್ನಲ್ಲಿ ನನಗೆ ಅಪಾರವಾದ ಆದರವು ಹುಟ್ಟಿದೆ. ಆದುದರಿಂದ ನೀನು ನಾನು ಹೇಳಿದಂತೆ ಮಾಡು. ಈ ಒಂದು ಕಾರಣವಲ್ಲದೇ ದೈವಿಕವಾದ ಮತ್ತು ಆಧ್ಯಾತ್ಮಿಕವಾದ ಮತ್ತೊಂದು ಕಾರಣವೂ ಇರುತ್ತದೆ. ಆ ಕಾರಣದಿಂದಲೂ ನಾನು ನಿನಗೆ ಈ ವಿಧವಾದ ಉಪದೇಶವನ್ನು ನೀಡಲು ಬಂದಿರುತ್ತೇನೆ. ನೀನು ಚಿರಾಯುವಾಗಿಯೂ–ಕೀರ್ತಿಮಂತನಾಗಿಯೂ ಇರಬೇಕೆಂಬುದನ್ನು ನಾನು ಆಶಿಸುತ್ತೇನೆ. ಆದುದರಿಂದ ನನ್ನ ಮಾತಿನಲ್ಲಿ ಸ್ವಲ್ಪವಾದರೂ ಶಂಕೆಯಿಡದೇ ನಾನು ಹೇಳಿದಂತೆ ಮಾಡು.

ನಾನು ನಿನ್ನ ಬಳಿಗೆ ಬರಲು ದೈವಿಕವಾದ ಕಾರಣವೇನೆಂದು ನೀನು ಕೇಳಬಹುದು. ಆದರೆ ಆ ಪ್ರಶ್ನೆಗೆ ಉತ್ತರಿಸಲು ನಾನು ಸಿದ್ಧನಾಗಿಲ್ಲ. ಆ ದೇವರಹಸ್ಯವನ್ನು ತಿಳಿಯುವ ಸಾಧ್ಯತೆಯೂ ನಿನಗಿರುವುದಿಲ್ಲ. ಆದುದರಿಂದಲೇ ಆ ದೇವರಹಸ್ಯವನ್ನು ನಾನು ನಿನ್ನೊಡನೆ ಹೇಳುವುದೂ ಇಲ್ಲ. ತಿಳಿಯಬೇಕಾದ ಸಮಯವೊದಗಿದಾಗ ಆ ದೇವರಹಸ್ಯವು ತಾನಾಗಿಯೇ ನಿನಗೆ ತಿಳಿಯುತ್ತದೆ.

ರಾಧೇಯ! ನಾನು ಹಿಂದೆ ಹೇಳಿದುದನ್ನೇ ಪುನಃ ಪುನಃ ಒತ್ತಾಯ ಪೂರ್ವಕವಾಗಿ ಹೇಳುತ್ತೇನೆ.

**ಮಾಸ್ಮೈ ತೇ ಕುಣ್ಡಲೇ ದದ್ಯಾ ಭಿಕ್ಷಿತೇ ವಜ್ರಪಾಣಿನಾ ॥೧೧॥**

ಇಂದ್ರನು ಭಿಕ್ಷೆ ಬೇಡಿದರೂ ನಿನ್ನಲ್ಲಿರುವ ಈ ಕರ್ಣಕುಂಡಲಗಳನ್ನು ನೀನವನಿಗೆ ಕೊಡಬೇಡ.

ಕರ್ಣ! ನಿಶ್ಚಯವಾಗಿಯೂ ಥಳ-ಥಳನೆ ಹೊಳೆಯುತ್ತಿರುವ ಈ ಕರ್ಣಕುಂಡಲಗಳನ್ನು ಹೊಂದಿರುವ ನೀನು ಎರಡು ವಿಶಾಖಾನಕ್ಷತ್ರಗಳ ಮಧ್ಯ ದಲ್ಲಿರುವ ಚಂದ್ರನಂತೆಯೇ ಶೋಭಿಸುತ್ತಿರುವೆ.

**ಕೀರ್ತಿಶ್ಚ ಜೀವತಃ ಸಾಧ್ವೀ ಪುರುಷಸ್ಯೇತಿ ವಿದ್ಧಿ ತತ್ ।**
**ಪ್ರತ್ಯಾಖ್ಯೇಯಸ್ತ್ವಯಾ ತಾತ ಕುಣ್ಡಲಾರ್ಥೇ ಸುರೇಶ್ವರಃ ॥೧೩॥**

ಜೀವಂತನಾದವನಿಗೆ ಮಾತ್ರವೇ ಕೀರ್ತಿಯು ಸುಖದಾಯಕವೆಂಬು ದನ್ನು ಮನಗಾಣುವವನಾಗು. ಆದುದರಿಂದ ನಿನ್ನ ಪ್ರಾಣರೂಪವಾದ ಈ ಕುಂಡಲಗಳನ್ನು ದೇವೇಂದ್ರನಿಗೆ ಖಂಡಿತವಾಗಿಯೂ ಕೊಡಬೇಡ. ಅನೇಕ ವಿಧವಾದ ನಯ-ವಿನಯಗಳ ಮಾತುಗಳನ್ನಾಡಿ ದೇವೇಂದ್ರನಿಗೆ ನಿನ್ನ ಕರ್ಣಕುಂಡಲಗಳ ಮೇಲಿನ ಅಭಿಲಾಷೆಯು ತೊರೆದುಹೋಗುವಂತೆ ಮಾಡು. ಅವನೊಡನೆ ಯುಕ್ತಿಯುಕ್ತವಾದ ಮಾತುಗಳನ್ನಾಡು. ಅವನನ್ನು ಪ್ರೀತ್ಯಾದರಗಳಿಂದ ಸತ್ಕರಿಸು. ಭಕ್ತಿಭಾವದಿಂದ ಪೂಜಿಸು. ಕರ್ಣ ಕುಂಡಲಗಳನ್ನುಳಿದು ಪೃಥ್ವಿಯಲ್ಲಿ ನಿನಗೆ ಸೇರಿರುವ ಸಕಲೈಶ್ವರ್ಯ ಗಳನ್ನಾದರೂ ಕೊಟ್ಟುಬಿಡುವುದಾಗಿ ಹೇಳು. ಯಾವ ಉಪಾಯದಿಂದ ಲಾದರೂ ಸರಿಯೇ ; ಅಮೋಘವಾದ ನಿನ್ನ ಪ್ರಾಣರೂಪವಾದ ಕರ್ಣ ಕುಂಡಲಗಳನ್ನು ಅಪಹರಿಸಿಕೊಂಡು ಹೋಗಲು ಆಗಮಿಸುವ ಇಂದ್ರನ ಮನಸ್ಸನ್ನು ಬದಲಾಯಿಸು.

ನಾನು ಯಾವ ಕಾರಣದಿಂದಾಗಿ ನಿನ್ನನ್ನು ಇಷ್ಟು ಬಲಾತ್ಕರಿಸುತ್ತಿ ರುವೆನೆಂಬ ರಹಸ್ಯವನ್ನೂ ಹೇಳಿಬಿಡುತ್ತೇನೆ. ನಿನಗೆ ಈ ಜಗತ್ತಿನಲ್ಲಿರುವ ಏಕೈಕಶತ್ರುವೆಂದರೆ ಪಾರ್ಥನೊಬ್ಬನೇ. ನೀನು ಸವ್ಯಸಾಚಿಯೊಡನೆ

ಸ್ಪರ್ಧಿಸಲು ಯಾವಾಗಲೂ ಆಶೆಯುಳ್ಳವನಾಗಿರುತ್ತೀಯೆ. ಮುಂದೆ ನಡೆಯ ಲಿರುವ ಕೌರವ-ಪಾಂಡವರ ಯುದ್ಧದಲ್ಲಿ ನಿಶ್ಚಯವಾಗಿಯೂ ನೀನು ಸವ್ಯ ಸಾಚಿಯೊಡನೆ ಯುದ್ಧಮಾಡಬೇಕಾಗುತ್ತದೆ. ಆ ಮಹಾಯುದ್ಧದಲ್ಲಿ ನೀನು ನಿನ್ನ ಈ ಸುಮನೋಹರವಾದ ಕರ್ಣಕುಂಡಲಸಹಿತನಾಗಿ ಅರ್ಜುನನನ್ನು ಎದುರಿಸಿ ನಿಂತರೆ ಅವನೆಂದಿಗೂ ನಿನ್ನನ್ನು ಪರಾಜಯಗೊಳಿಸಲು ಸಮರ್ಥ ನಾಗುವುದಿಲ್ಲ.

ಸಾಕ್ಷಾತ್ ಶಚೀಪತಿಯೇ ಅವನ ಸಹಾಯಕ್ಕೆ ಬಂದರೂ ಕರ್ಣ ಕುಂಡಲ-ಕವಚಗಳನ್ನು ಹುಟ್ಟಿನಿಂದಲೇ ಧರಿಸಿರುವ ನಿನ್ನನ್ನು ಅರ್ಜುನನು ಗೆಲ್ಲಲಾರನು.

**ತಸ್ಮಾನ್ನ ದೇಯೇ ಶಕ್ರಾಯ ತ್ವಯೈತೇ ಕುಣ್ಡಲೇ ಶುಭೇ ।**
**ಸಂಗ್ರಾಮೇ ಯದಿ ನಿರ್ಜೇತುಂ ಕರ್ಣ ಕಾಮಯಸೇಽರ್ಜುನಮ್ ॥**

ಮುಂಬರುವ ಯುದ್ಧದಲ್ಲಿ ನಿನಗೆ ನಿಶ್ಚಯವಾಗಿಯೂ ಅರ್ಜುನನನ್ನು ಪರಾಭವಗೊಳಿಸಲೇಬೇಕೆನ್ನುವ ಆಶಯವಿದ್ದರೆ–ಶುಭದಾಯಕಗಳಾದ ಈ ಕರ್ಣಕುಂಡಲಗಳನ್ನು ನೀನು ಇಂದ್ರನಿಗೆ ಖಂಡಿತವಾಗಿಯೂ ಕೊಡ ಬಾರದು."

ಇ೦೧ನೆಯ ಅಧ್ಯಾಯವು ಮುಗಿಯಿತು.

ಇ೦೨ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ).

## ಕರ್ಣ–ಸೂರ್ಯರ ಸಂವಾದ : ಸೂರ್ಯನ ಆಜ್ಞಾನುಸಾರವಾಗಿ ಕರ್ಣಕುಂಡಲ–ಕವಚಗಳನ್ನು ಶಕ್ತ್ಯಾಯುಧದ ವಿನಿಮಯಕ್ಕೆ ಕೊಡುವುದಾಗಿ ಕರ್ಣನು ನಿಶ್ಚಯಿಸಿದುದು

ಪಾರಿಕ್ಷಿತ! ಕರ್ಣನು ಹೇಳುತ್ತಾನೆ :

"ಭಗವನ್! ಗೋಪತೇ! ನೀನು ನನ್ನನ್ನು ನಿನ್ನ ಪರಮಭಕ್ತ ನೆಂದು ತಿಳಿದಿರುವಂತೆಯೇ–ನಾನು ದಾನವಾಗಿ ಕೊಡದ ವಸ್ತುವೇ ಇಲ್ಲ ವೆಂಬ ನನ್ನ ದಾನವ್ರತವನ್ನೂ ನೀನು ತಿಳಿದಿರುವೆಯಲ್ಲವೇ? ನಾನು ನಿನ್ನ

ವಿಷಯದಲ್ಲಿ ಎಷ್ಟು ಭಕ್ತಿಭಾವದಿಂದಿರುವೆನೋ, ದಾನವ್ರತದಲ್ಲಿಯೂ ಅಷ್ಟೇ ನಿಷ್ಠೆಯಿಂದಿರುತ್ತೇನೆ. ಭಾಸ್ಕರ! ನಿನಗಿಂತಲೂ ನನಗೆ ಇಷ್ಟರಾದವರು ಈ ಪ್ರಪಂಚದಲ್ಲಿಯೇ ಬೇರೊಬ್ಬರು ಇರುವುದಿಲ್ಲ. ಭಾರ್ಯೆಯರಿಗಿಂತಲೂ, ಮಕ್ಕಳಿಗಿಂತಲೂ, ಮೇಲಾಗಿ ನನ್ನ ಪ್ರಾಣಗಳಿಗಿಂತಲೂ ನೀನು ನನಗೆ ಇಷ್ಟತಮನಾಗಿರುವೆ. ಮಹಾತ್ಮರಾದವರು ತಮ್ಮ ಇಷ್ಟರಾದ ಭಕ್ತರಿಗೆ ಅವರು ಅಪೇಕ್ಷಿಸುವ ಇಷ್ಟಾರ್ಥಗಳನ್ನು ಅನುಗ್ರಹಿಸುವರೆಂಬ ವಿಷಯವನ್ನೂ ನೀನು ತಿಳಿದವನಾಗಿರುವೆ.

'ಕರ್ಣನು ನನ್ನ ಪರಮಭಕ್ತನು. ಇವನು ನನಗೆ ಇಷ್ಟನಾದವನು. ನನ್ನನ್ನು ಬಿಟ್ಟು ದಿವಿಯಲ್ಲಿರುವ ಬೇರಾವ ದೇವತೆಯನ್ನೂ ಇವನು ಆರಾಧಿಸುವುದಿಲ್ಲ. ಆದುದರಿಂದ ಇವನಿಗೆ ನಾನು ಹಿತವನ್ನೇ ಮಾಡಬೇಕು'–ಎಂಬ ಅಭಿಪ್ರಾಯದಿಂದ ನೀನು ನನಗೆ ಹಿತವಾದುದನ್ನೇ ಹೇಳಿರುವೆ. ಈ ವಿಷಯದಲ್ಲಿ ನನಗೆ ಸಂಶಯವಿಲ್ಲ. ಆದರೆ ಪ್ರಭುವೇ! ನನ್ನನ್ನು ಈ ಒಂದು ವಿಷಯದಲ್ಲಿ ಮಾತ್ರ ಕ್ಷಮಿಸುವವನಾಗು. ದಯಾಮಯ! ತಲೆಬಾಗಿ ಪುನಃ-ಪುನಃ ನಿನ್ನನ್ನು ಬೇಡುವೆನು. ನಾನು ಹಿಂದೆ ಹೇಳಿದುದನ್ನೇ ಪುನಃ ಹೇಳುವೆನು. ದಯೆತೋರು, ದೇವ!

**ಬಿಭೇಮಿ ನ ತಥಾ ಮೃತ್ಯೋರ್ಯಥಾ ಬಿಭ್ಯೇಽನೃತಾದಹಮ್ ।**
**ವಿಶೇಷೇಣ ದ್ವಿಜಾತೀನಾಂ ಸರ್ವೇಷಾಂ ಸರ್ವದಾ ಸತಾಮ್ ॥೬॥**

**ಪ್ರದಾನೇ ಜೀವಿತಸ್ಯಾಪಿ ನ ಮೇಽತ್ರಾಸ್ತಿ ವಿಚಾರಣಾ ।**

ಮೃತ್ಯುವು ಸನ್ನಿಹಿತವಾಗಿದೆಯೆಂಬ ಮಾತು ಕೇಳಿದರೆ ನನಗೆ ಭಯ ವಾಗುವುದಿಲ್ಲ. ಮೃತ್ಯುವನ್ನು ನಾನು ಸರ್ವದಾ ನಿರೀಕ್ಷಿಸುತ್ತಲೇ ಇರುತ್ತೇನೆ. ಆದರೆ ಸುಳ್ಳನ್ನಾಡಲು ಬಹಳ ಭಯಪಡುತ್ತೇನೆ. ಇದು ನನಗೆ ಮೃತ್ಯುವಿಗಿಂತಲೂ ಭಯಂಕರವಾಗಿ ಕಾಣುತ್ತದೆ. ಅದರಲ್ಲಿಯೂ ಬ್ರಾಹ್ಮಣರ ವಿಷಯದಲ್ಲಿ ಸುಳ್ಳು ಹೇಳುವ ಸಾಧ್ಯತೆಯೇ ಇಲ್ಲ. ಬ್ರಾಹ್ಮಣರಿಗೆ, ಸತ್ಪುರುಷರಿಗೆ ಯಾವ ಕಾಲದಲ್ಲಿಯೇ ಆಗಲೀ ನನ್ನ ಜೀವಿತವನ್ನೇ ಸಮರ್ಪಿಸಲೂ ನಾನು ಸಿದ್ಧನಿದ್ದೇನೆ. ಈ ವಿಷಯದಲ್ಲಿ ನಾನು ಸ್ವಲ್ಪ

ವಾದರೂ ವಿಚಾರಮಾಡಲು ಹೋಗುವುದಿಲ್ಲ. ಆದುದರಿಂದ ಬ್ರಾಹ್ಮಣವೇಷವನ್ನು ಧರಿಸಿ ಬರುವ ಇಂದ್ರನು ಏನನ್ನು ಕೇಳಿದರೂ ನಾನು ಕೊಟ್ಟುಬಿಡಲು ಸಿದ್ಧನಾಗಿದ್ದೇನೆ. ಅರ್ಜುನನ ವಿಷಯವಾಗಿ, ಅವನೊಡನೆ ಮಾಡಲಿರುವ ಯುದ್ಧದ ವಿಷಯವಾಗಿ ನೀನು ಆತಂಕವನ್ನು ವ್ಯಕ್ತಪಡಿಸಿರುವೆ. ಅವನೊಡನೆ ಮಾಡಲಿರುವ ಯುದ್ಧದ ವಿಷಯವಾಗಿ ನೀನು ಸ್ವಲ್ಪವೂ ಆತಂಕಪಡಬೇಕಾಗಿಲ್ಲ. ನಿನ್ನ ಮನಸ್ಸಿನ ಆ ಪರಿತಾಪವನ್ನು ಸಂಪೂರ್ಣವಾಗಿ ದೂರಮಾಡು. ಯುದ್ಧದಲ್ಲಿ ನಾನು ಅರ್ಜುನನನ್ನು ಖಂಡಿತವಾಗಿಯೂ ಪರಾಭವಗೊಳಿಸುತ್ತೇನೆ. ಕರ್ಣಕುಂಡಲಗಳಿಂದ ವಿಹೀನನಾದ ನಾನು ದುರ್ಬಲನಾಗಿಬಿಡುವೆನೆಂದು ಭಾವಿಸಬೇಡ. ನಿನಗೆ ತಿಳಿದಂತೆಯೇ ನನಗೆ ಅಪಾರವಾದ ಅಸ್ತ್ರಗಳ ಬಲವಿದೆ.

ಜಮದಗ್ನಿಯ ಮಗನಾದ ಭಗವಂತನಾದ ಪರಶುರಾಮನಿಂದಲೂ ಮತ್ತು ಮಹಾತ್ಮರಾದ ದ್ರೋಣರಿಂದಲೂ ನಾನು ಅನೇಕಾನೇಕ ಮಹಾಸ್ತ್ರಗಳನ್ನು ಪಡೆದಿರುತ್ತೇನೆ. ಸುರಶ್ರೇಷ್ಠನೇ! ಆದುದರಿಂದ ವ್ರತಪರಿಪಾಲನೆಗೆ ಅನುಮತಿಯನ್ನು ದಯಪಾಲಿಸು. ಬ್ರಾಹ್ಮಣವೇಷವನ್ನು ಧರಿಸಿ ನನ್ನ ಬಳಿಗೆ ಬರುವ ಶಚೀಪತಿಯು ನನ್ನ ಅಸುವನ್ನೇ ಭಿಕ್ಷೆಯಾಗಿ ಕೇಳಿದರೂ ಕೊಟ್ಟುಬಿಡುತ್ತೇನೆ. ಇದಕ್ಕೆ ನೀನು ಅನುಮತಿಯನ್ನು ನೀಡಿ ಅನುಗ್ರಹಿಸು, ದೇವ!"

ಸೂರ್ಯನಿಗೆ ಕರ್ಣನ ಮನವೊಲಿಸಲು ಸಾಧ್ಯವಿಲ್ಲವಾಯಿತು. ಕರ್ಣಕುಂಡಲ ಮತ್ತು ಕವಚಗಳ ಮಹತ್ತ್ವವೆಷ್ಟೆಂಬುದು ಸೂರ್ಯದೇವನಿಗೆ ಚೆನ್ನಾಗಿ ತಿಳಿದಿತ್ತು. ಆದರೂ ದೈವಸಂಕಲ್ಪವನ್ನು ವಿಪರ್ಯಾಸಗೊಳಿಸಲು ಜಗಚ್ಚಕ್ಷುವಾದ ಸೂರ್ಯನಿಗೂ ಸಾಧ್ಯವಿಲ್ಲವಾಯಿತು. ಪುತ್ರಪ್ರೇಮದಿಂದ ಆಕರ್ಷಿತನಾದ ಸೂರ್ಯನು ಕರ್ಣನನ್ನು ಕುರಿತು ಪುನಃ ಹೇಳಿದನು :

"ಕರ್ಣ! ನೀನು ಕರ್ಣಕುಂಡಲಗಳನ್ನು ಬ್ರಾಹ್ಮಣವೇಷಧರನಾಗಿ ಬರುವ ವಜ್ರಪಾಣಿಗೆ ಕೊಟ್ಟುಬಿಡುವುದಾದರೆ–ನಾನು ಹೇಳುವ ಮತ್ತೊಂದು ಸಲಹೆಯನ್ನಾದರೂ ಅಂಗೀಕರಿಸು. ನೀನೀ ಕರ್ಣಕುಂಡಲಗಳನ್ನೂ, ಕವಚ

ವನ್ನೂ ಕಳೆದುಕೊಂಡರೂ ಯುದ್ಧದಲ್ಲಿ ವಿಜಯಿಯಾಗಬೇಕೆಂಬ ಆಶಯದಿಂದ ನಾನಿದನ್ನು ನಿನಗೆ ಹೇಳುತ್ತಿದ್ದೇನೆ. ಇಂದ್ರನು ಬಂದು ಕರ್ಣಕುಂಡಲಗಳನ್ನು ಭಿಕ್ಷೆ ಬೇಡುವ ಕಾಲದಲ್ಲಿ ನೀನವನಿಗೆ ಹೀಗೆಂದು ಹೇಳಬೇಕು:

**ನಿಯಮೇನ ಪ್ರದದ್ಯಾಂ ತೇ ಕುಣ್ಡಲೇ ವೈ ಶತಕ್ರತೋ ।**

"ಇಂದ್ರದೇವ! ನೀನು ಕೇಳಿದ ಈ ಕುಂಡಲಗಳನ್ನು ನಿನಗೆ ದಾನವಾಗಿ ಕೊಡುವುದಂತೂ ನಿಶ್ಚಯ. ಆದರೆ ಒಂದೇ ಒಂದು ನಿಯಮದಿಂದ ಈ ಕುಂಡಲಗಳನ್ನು ನಿನಗರ್ಪಿಸುತ್ತೇನೆ"–ಹೀಗೆಂದು ಹೇಳಿಯಾದರೂ ನೀನು ದಿವ್ಯವಾದ ಕರ್ಣಕುಂಡಲಗಳನ್ನು ಬ್ರಾಹ್ಮಣವೇಷಧರನಾದ ಇಂದ್ರನಿಗೆ ದಾನವಾಗಿ ಕೊಡಬೇಕು.

ವತ್ಸ! ಈ ಕರ್ಣಕುಂಡಲಗಳು ನಿನ್ನಲ್ಲಿರುವವರೆಗೂ ನಿನ್ನನ್ನು ಯಾರೂ ಕೊಲ್ಲಲಾರರು. ನೀನು ಅವಧ್ಯನು. ಅರ್ಜುನನಿಂದ ನಿನ್ನನ್ನು ಯುದ್ಧದಲ್ಲಿ ಕೊಲ್ಲಿಸಬೇಕೆಂಬ ಆಶಯದಿಂದಲೇ ನಿನ್ನಲ್ಲಿರುವ ಕರ್ಣಕುಂಡಲಗಳನ್ನು ಅಪಹರಿಸಲು ಇಂದ್ರನು ನಿಶ್ಚಯಿಸಿದ್ದಾನೆ. ಅರ್ಜುನನು ವಿಜಯಿಯಾಗಬೇಕೆಂಬುದೇ ಇಂದ್ರನ ಆಕಾಂಕ್ಷೆಯಾಗಿದೆ. ಆದುದರಿಂದ ನೀನವನನ್ನು ಪ್ರಯತ್ನಪೂರ್ವಕವಾಗಿ ಭಕ್ತಿಯಿಂದ ಆರಾಧಿಸು. ಸ್ತೋತ್ರಾದಿಗಳಿಂದ ಅವನ ಮನಸ್ಸನ್ನು ಪ್ರಸನ್ನಗೊಳಿಸು. ಕರ್ಣಕುಂಡಲಗಳ ವಿನಿಮಯದಿಂದ ಅಮೋಘವಾದ ಅಸ್ತ್ರವನ್ನಾದರೂ ಇಂದ್ರನಿಂದ ಪಡೆಯಲು ನೀನವನನ್ನು ಆರಾಧಿಸಬೇಕು. ನಿನ್ನ ಪೂಜೆಯಿಂದ ಸುಪ್ರೀತನಾಗುವ ಇಂದ್ರನನ್ನು ಕುರಿತು ನೀನು ಹೀಗೆಂದು ಹೇಳಬೇಕು :

**ಅಮೋಘಾಂ ದೇಹಿ ಮೇ ಶಕ್ತಿಮಮಿತ್ರವಿನಿಬರ್ಹಿಣೀಮ್ ।**
**ದಾಸ್ಯಾಮಿ ತೇ ಸಹಸ್ರಾಕ್ಷ ಕುಣ್ಡಲೇ ವರ್ಮ ಚೋತ್ತಮಮ್ ॥**

"ಇಂದ್ರದೇವ! ಶತ್ರುಗಳನ್ನು ವಿನಾಶಮಾಡಲು ಸಮರ್ಥವಾದ ಅಪ್ರತಿಹತವಾದ ಶಕ್ತ್ಯಾಯುಧವನ್ನು ನನಗೆ ದಯಪಾಲಿಸು. ನಾನು ನಿನಗೆ ನನ್ನ ಕರ್ಣಕುಂಡಲಗಳನ್ನೂ ಮತ್ತು ಕವಚವನ್ನೂ ವಿನಿಮಯವಾಗಿ ಕೊಡುತ್ತೇನೆ."

ಮಗು! ಈ ಒಂದು ನಿಯಮವನ್ನಾದರೂ ಮಾಡಿಕೊಂಡೇ ನೀನು ನಿನ್ನ ಪ್ರಾಣರೂಪವಾದ ಕರ್ಣಕುಂಡಲಗಳನ್ನು ಇಂದ್ರನಿಗೆ ಕೊಡು. ಇದರಿಂದ ನಿನ್ನ ವ್ರತಕ್ಕೂ ಭಂಗವಾದಂತಾಗುವುದಿಲ್ಲ. ಕರ್ಣಕುಂಡಲಗಳನ್ನು ಕಳೆದುಕೊಂಡ ನಿನಗೆ ಅಮರತ್ವವಿಲ್ಲದಿದ್ದರೂ ಇಂದ್ರನು ಕೊಡುವ ಶಕ್ತ್ಯಾಯುಧದಿಂದ ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲುವೆ. ಇಂದ್ರನ ಶಕ್ತ್ಯಾಯುಧದ ಮಹಿಮೆಯು ಅಪಾರವಾದುದು. ಆ ಶಕ್ತ್ಯಾಯುಧದಿಂದ ನೀನು ನಿನ್ನ ಶತ್ರುಗಳನ್ನು ಸಂಹಾರಮಾಡಬಹುದು. ಒಮ್ಮೆ ಪ್ರಯುಕ್ತವಾದ ಆ ಶಕ್ತ್ಯಾಯುಧವು ನೂರಾರು–ಸಾವಿರಾರು ಶತ್ರುಗಳನ್ನು ಸಂಪೂರ್ಣವಾಗಿ ವಿನಾಶಮಾಡದೇ ಖಂಡಿತವಾಗಿಯೂ ಹಿಂದಿರುಗುವುದಿಲ್ಲ." ಹೀಗೆಂದು ಕರ್ಣನೊಡನೆ ಹೇಳಿ, ಬ್ರಾಹ್ಮಣವೇಷವನ್ನು ಧರಿಸಿ ಬಂದಿದ್ದ ಸೂರ್ಯನು ಅದೃಶ್ಯನಾದನು.

ಜನಮೇಜಯ! ಇದಿಷ್ಟು ವಿಷಯಗಳೂ ಕರ್ಣನ ಕನಸಿನಲ್ಲಿಯೇ ನಡೆದುಹೋದುವು. ಕರ್ಣನ ಸೂರ್ಯೋಪಾಸನೆಯು ಅಸದೃಶವಾದುದು. ಸೂರ್ಯದೇವತಾಕವಾದ ಮಂತ್ರಜಪವನ್ನು ಮಾಡಿದನಂತರದಲ್ಲಿ ಕರ್ಣನು ತನ್ನ ಆರಾಧ್ಯದೇವತೆಯೊಡನೆ ಮಾತನಾಡುತ್ತಿದ್ದನು. ಮರುದಿನ ಬೆಳಿಗ್ಗೆ ಎಂದಿನಂತೆಯೇ ಕರ್ಣನು ಸೂರ್ಯಮಹಾಮಂತ್ರದ ಜಪವನ್ನು ಮುಗಿಸಿ ಸ್ತೋತ್ರಮಾಡುತ್ತಿರಲಾಗಿ, ತನ್ನ ಭಕ್ತನ ಮುಖಾರವಿಂದದಿಂದ ಎಲ್ಲ ವಿಷಯಗಳನ್ನೂ ಕೇಳಿದ, ರಾಹುವಿನ ಶತ್ರುವಾದ, ದೇವದೇವನಾದ ದಿವಾಕರನು ಕರ್ಣನ ಮುಖಾರವಿಂದವನ್ನು ನೋಡಿ ನಸುನಗುತ್ತಾ ಕನಸಿನಲ್ಲಿ ನಡೆದುದೆಲ್ಲವೂ ನಿಜವೆಂದು ಹೇಳಿ ಬಳಿಕ ಮುಗುಳ್ನಗೆಯೊಡನೆ ಅದೃಶ್ಯನಾದನು.

ಸೂರ್ಯನು ಹೇಳಿದುದು ಯಥಾರ್ಥವಾಗಿದೆಯೆಂದು ಕರ್ಣನು ನಿಶ್ಚಯಿಸಿದವನಾಗಿ ದಿವ್ಯವಾದ ಶಕ್ತ್ಯಾಯುಧವನ್ನು ಪಡೆಯಲು ಇಂದ್ರನ ಆಗಮನವನ್ನೇ ನಿರೀಕ್ಷಿಸುತ್ತಿದ್ದನು."

ಇ೦೨ನೆಯ ಅಧ್ಯಾಯವು ಮುಗಿಯಿತು.

# ಕುಂತಿಭೋಜನ ಮನೆಗೆ ದುರ್ವಾಸರು ಆಗಮಿಸಿದುದು : ರಾಜನು ಅವರ ಸೇವೆಗಾಗಿ ಕುಂತಿಯನ್ನು ನಿಯಮಿಸಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ!–'**ದೇವಗುಹ್ಯಂ ತ್ವಯಾ ಜ್ಞಾತುಂ ನ ಶಕ್ಯಂ ಪುರುಷರ್ಷಭ ।** ಪುರುಷರ್ಷಭನೇ! ದೇವರಹಸ್ಯವನ್ನು ನಿನ್ನಿಂದೀಗ ತಿಳಿಯುವ ಸಾಧ್ಯತೆಯಿಲ್ಲ'–ಎಂಬುದಾಗಿ ಸೂರ್ಯದೇವನು ಹೇಳಿದನೆಂದು ತಾವು ಹೇಳಿದಿರಿ. ಅಂತಹ ದೇವರಹಸ್ಯವು ಯಾವುದು? ಆ ರಹಸ್ಯವನ್ನು ಪರಮಭಕ್ತನಾದ ಕರ್ಣನಿಗೆ ಸೂರ್ಯದೇವನು ಹೇಳದಿರಲು ಕಾರಣವೇನು? ಕರ್ಣಕುಂಡಲಗಳು ಯಾವುವು? ಕರ್ಣಕುಂಡಲಗಳೂ ಮತ್ತು ಕವಚವೂ ಜನ್ಮತಃ ಕರ್ಣನ ಶರೀರದೊಡನೆಯೇ ಅಂಟಿಕೊಂಡು ಬಂದಿದ್ದಾದರೂ ಹೇಗೆ? ಆ ಕರ್ಣಕುಂಡಲ-ಕವಚಗಳು ಮೊದಲು ಎಲ್ಲಿದ್ದುವು? ತಪೋಧನರೇ! ಈ ಎಲ್ಲ ವಿಷಯಗಳನ್ನೂ ನನಗೆ ದಯಮಾಡಿ ಹೇಳಿರಿ."

"ಮಹಾರಾಜ! ವಿಭಾವಸುವು ಕರ್ಣನೊಡನೆ ಆಗ ಹೇಳದಿದ್ದ ದೇವ ರಹಸ್ಯವನ್ನು ನಾನು ನಿನ್ನೊಡನೆ ಹೇಳುತ್ತೇನೆ ಮತ್ತು ಕರ್ಣನು ತೊಟ್ಟಿದ್ದ ಕರ್ಣಕುಂಡಲಗಳ ಮತ್ತು ಕವಚದ ಇತಿಹಾಸವನ್ನೂ ಹೇಳುತ್ತೇನೆ. ಸಾವಧಾನದಿಂದ ಕೇಳುವವನಾಗು.

ಹಿಂದೊಮ್ಮೆ ಕುಂತಿಭೋಜನ ಆಸ್ಥಾನಕ್ಕೆ ಮಹಾತೇಜಸ್ವಿಯಾದ, ದೀರ್ಘಕಾಯನಾದ, ನೀಳವಾದ ಗಡ್ಡವನ್ನೂ, ಜಟೆಯನ್ನೂ ಧರಿಸಿದ್ದ, ದಂಡ ಧರನಾದ ಬ್ರಾಹ್ಮಣನೊಬ್ಬನು (ದುರ್ವಾಸನು) ಆಗಮಿಸಿದನು. ಅವನು ನೋಡಲು ಬಹುಲಕ್ಷಣಯುಕ್ತವಾಗಿ ಕಾಣುತ್ತಿದ್ದನು. ಅವನ ಶರೀರದ ಯಾವ ಭಾಗದಲ್ಲಾಗಲೀ ನ್ಯೂನತೆಯು ಕಂಡುಬರುತ್ತಿರಲಿಲ್ಲ. ಸರ್ವಾಂಗ

ಸುಂದರನಾಗಿದ್ದನು. ಧಗ-ಧಗಿಸುವ ಯಜ್ಞೇಶ್ವರನೋಪಾದಿಯಲ್ಲಿ ತೇಜಃಪುಂಜಯುಕ್ತನಾಗಿದ್ದನು. ಅವನ ಶರೀರದ ಬಣ್ಣವು ಜೇನುತುಪ್ಪದ ಬಣ್ಣಕ್ಕೆ ಅನುರೂಪವಾಗಿದ್ದಿತು. ಅವನ ಮಾತಿನಲ್ಲಿಯೂ ಜೇನು ತೊಟ್ಟಿಕ್ಕುತ್ತಿದ್ದಿತು. ಅಂತಹ ಸುಮಧುರವಾದ ಮಾತುಗಳನ್ನಾಡುತ್ತಿದ್ದನು. ತಪಸ್ಸು ಮತ್ತು ವೇದಾಧ್ಯಯನಗಳೇ ಅವನಿಗೆ ಭೂಷಣಪ್ರಾಯವಾಗಿದ್ದುವು.

ಆ ಮಹಾತಪಸ್ವಿಯು ಕುಂತಿಭೋಜಮಹಾರಾಜನಿಗೆ ಹೇಳಿದನು : "ಮಾತ್ಸರ್ಯರಹಿತನಾದ ಮಹಾರಾಜನೇ! ನಾನು ನಿನ್ನ ಅರಮನೆಯಲ್ಲಿ ಕೆಲವು ದಿನಗಳವರೆಗೆ ಇರಲು ಇಚ್ಛಿಸಿ ಬಂದಿದ್ದೇನೆ. ನನ್ನ ಭೋಜನಕ್ಕಾಗಿ ನಿನ್ನ ಮನೆಯಲ್ಲಿಯೇ ಭಿಕ್ಷೆಯನ್ನು ಸ್ವೀಕರಿಸುತ್ತೇನೆ. ನೀನಾಗಲೀ ನಿನ್ನ ಅನುಯಾಯಿಗಳಾಗಲೀ ನನ್ನ ಮನಸ್ಸಿಗೆ ಅಸಮಾಧಾನವಾಗುವ ರೀತಿಯಲ್ಲಿ ನಡೆದುಕೊಳ್ಳಬಾರದು. ನಿನ್ನ ಅರಮನೆಯಲ್ಲಿ ನಾನು ಇಚ್ಛೆಬಂದಂತಿರಲು ನೀನು ಒಪ್ಪುವೆಯಾದರೆ ನಾನಿಲ್ಲಿ ಸ್ವಲ್ಪಕಾಲವಿರುತ್ತೇನೆ. ನಾನು ಇಚ್ಛೆ ಬಂದಾಗ ಹೊರಗೆ ಹೋಗುತ್ತೇನೆ. ಇಚ್ಛೆ ಬಂದಾಗ ಅರಮನೆಗೆ ಬರುತ್ತೇನೆ. ನನ್ನ ಚಲನ-ವಲನಗಳ ವಿಷಯವಾಗಿ ಯಾರಿಂದಲೂ ಯಾವ ಪ್ರತಿಬಂಧಕವೂ ಆಗಕೂಡದು. ನನ್ನ ಊಟದ ವಿಷಯದಲ್ಲಾಗಲೀ, ನನ್ನ ನಿದ್ರೆಯ ಸಮಯದಲ್ಲಾಗಲೀ ಯಾವನೊಬ್ಬನೂ ಕಿಂಚಿತ್ತಾದರೂ ಅಪರಾಧ ಮಾಡಲಾಗದು. ನಾನು ಯಾವ ವೇಳೆಗೆ ಬಂದರೆ ಆ ವೇಳೆಗೆ ಭಿಕ್ಷೆಯನ್ನು ನೀಡಬೇಕು. ನಾನು ಎಷ್ಟು ಹೊತ್ತು ಮಲಗಿದ್ದರೂ ಆಕ್ಷೇಪಿಸಬಾರದು. ನಾನು ಏಳುವ ಸಮಯಕ್ಕೆ ಸರಿಯಾಗಿ ಸ್ನಾನಾಹ್ನಿಕಾದಿಗಳಿಗೆ ಸಿದ್ಧಮಾಡಿರಬೇಕು."

(ಇಂತಹ ನಿಯಮಗಳಿಗೆ ರಾಜನಾದವನೊಬ್ಬನು ಒಪ್ಪಿ ನಡೆದುಕೊಳ್ಳಬೇಕಾಗಿತ್ತು! ಇಂದು ನಾವಿದನ್ನು ಅಸಹನೀಯವಾದ ನಿಬಂಧನೆಗಳೆಂದು ಭಾವಿಸಬಹುದಾದರೂ ಅಂದು ಕುಂತಿಭೋಜನು ಬ್ರಾಹ್ಮಣನ ಆ ನಿಬಂಧನೆಗಳೆಲ್ಲಕ್ಕೂ ಒಪ್ಪಿದನು. ಬ್ರಾಹ್ಮಣನು ತನ್ನ ಮನೆಯಲ್ಲಿರಲೊಪ್ಪಿದ್ದೇ ಮಹಾಪ್ರಸಾದವೆಂದು ರಾಜನು ಭಾವಿಸಿದನು. ದೇಹಾಭಿಮಾನವನ್ನೂ ತೊರೆದ ತಪಸ್ವಿಗಳು ಒಬ್ಬನ ಮನೆಯಲ್ಲಿ ಸ್ವೇಚ್ಛೆಯಿಂದಲೇ ಬಂದು ಸ್ವಲ್ಪ

ಕಾಲ ಇರಲಿಚ್ಛಿಸಿದರೆ ಅಂತಹ ತಪಸ್ವಿಗಳನ್ನು ಉಪಚರಿಸುವ ಅವಕಾಶವು ದೈವಾಯತ್ತವಾದುದೆಂದೂ ಯಾವುದೋ ಒಂದು ಮಹಾಫಲದ ಪ್ರಾಪ್ತಿ ಗಾಗಿಯೇ ಮಹರ್ಷಿಗಳ ಆಗಮನವಾಗಿದೆಯೆಂದೂ ಅಂದಿನ ರಾಜರು ಭಾವಿಸುತ್ತಿದ್ದರು.)

ಅಂತೆಯೇ ಕುಂತಿಭೋಜನೂ ಮಹರ್ಷಿಗಳ ಮಾತಿಗೆ ನಸುನಗುತ್ತಲೇ ಒಪ್ಪಿಗೆಯನ್ನಿತ್ತು ಮಹರ್ಷಿಗಳನ್ನು ಕುರಿತು ಹೇಳಿದನು : "ಮಹಾಪ್ರಾಜ್ಞರೇ! ನನಗೆ ಪೃಥಾ ಎಂಬ ಹೆಸರಿನ ಯಶಸ್ವಿನಿಯಾದ ಮಗಳಿದ್ದಾಳೆ. ಅವಳು ಸುಶೀಲಳು. ಸಾಧ್ವೀ. ಮೇಲಾಗಿ ವ್ರತನಿಷ್ಠಳು. ಅವಳನ್ನೇ ನಿಮ್ಮ ಸೇವೆಗೆ ನಾನು ನಿಯಮಿಸುತ್ತೇನೆ. ಅವಳು ನಿಮ್ಮ ಸೇವೆಯನ್ನು ಅಪ್ರಮತ್ತಳಾಗಿ ಮಾಡುವುದಲ್ಲದೇ ನಿಮ್ಮನ್ನು ಸಂಪೂರ್ಣವಾದ ಗೌರವದಿಂದಲೂ ಕಾಣುತ್ತಾಳೆ. ಅವಳ ಸೌಶೀಲ್ಯದಿಂದಲೂ ಮತ್ತು ಅವಳ ನಡೆ-ನುಡಿಗಳಿಂದಲೂ ನೀವು ಖಂಡಿತವಾಗಿಯೂ ಸುಪ್ರೀತರಾಗುವಿರಿ."

ಹೀಗೆ ರಾಜನು ಮಹರ್ಷಿಗಳಿಗೆ ಹೇಳಿ ಅವರನ್ನು ಯಥಾಯೋಗ್ಯವಾದ ಪೂಜಾದಿಗಳಿಂದ ಸತ್ಕರಿಸಿ ವಿಶ್ರಮಿಸಿಕೊಳ್ಳಲು ಹೇಳಿದ ನಂತರ ತಪಸ್ವಿಗಳ ಅನುಮತಿಯನ್ನು ಪಡೆದು, ವಿಶಾಲಾಕ್ಷಿಯಾದ ತನ್ನ ಮಗಳಿದ್ದೆಡೆಗೆ ಬಂದು ಪೃಥೆಯನ್ನು ಕುರಿತು ಹೇಳಿದನು :

"ಮಗಳೇ! ಮಹಾಭಾಗರಾದ ಬ್ರಾಹ್ಮಣರೊಬ್ಬರು ನಮ್ಮ ಅರಮನೆ ಯಲ್ಲಿ ಸ್ವಲ್ಪ ದಿವಸಗಳ ಪರ್ಯಂತವಾಗಿ ಇರಲು ಬಂದಿರುತ್ತಾರೆ. ಮಹಾ ತಪಸ್ವಿಗಳು ನಮ್ಮ ಅರಮನೆಗೆ ಬಂದಿರುವುದು ನಿಶ್ಚಯವಾಗಿಯೂ ನಮ್ಮ ಸೌಭಾಗ್ಯವೇ ಸರಿ. ಅವರು ಹೇಳಿದ ನಿಬಂಧನೆಗಳಿಗೆ ನಾನು ಒಪ್ಪಿಗೆಯನ್ನು ಕೊಟ್ಟಿದ್ದೇನೆ. ಬ್ರಾಹ್ಮಣರ ಪೂಜೆಯನ್ನು ನೀನು ಬಹಳ ಜಾಗರೂಕತೆ ಯಿಂದ ನಡೆಸುವೆಯೆಂಬ ಭರವಸೆಯಿಂದಲೇ ನಾನವರ ನಿಬಂಧನೆಗಳಿಗೆ ಒಪ್ಪಿದ್ದೇನೆ. ಕ್ಷಮಾಗುಣದಲ್ಲಿ ಭೂದೇವಿಗೆ ಸಮಾನಳಾಗಿರುವ ನಿನ್ನೊಬ್ಬ ಳಿಂದ ಮಾತ್ರವೇ ಮಹರ್ಷಿಗಳ ನಿಬಂಧನೆಗಳಂತೆ ನಡೆದುಕೊಂಡು ಅವ ರನ್ನು ಉಪಚರಿಸಲು ಸಾಧ್ಯವಾಗುವುದು. ಆದುದರಿಂದ ನಾನು ಬ್ರಾಹ್ಮಣರಿ ಗಿತ್ತಿರುವ ಅಭಿವಚನವು ಸುಳ್ಳಾಗದಂತೆ ಜಾಗರೂಕತೆಯಿಂದ ನಡೆದುಕೊಳ್ಳು

ವುದು ನಿನ್ನ ಕರ್ತವ್ಯವಾಗಿದೆ. ಮಹಾತಪಸ್ವಿಗಳಾದ, ವೇದಾಧ್ಯಯನದಲ್ಲಿ ನಿರತರಾದ ಈ ಬ್ರಾಹ್ಮಣಶ್ರೇಷ್ಠರು ಯಾವ ಸಮಯದಲ್ಲಿ ಏನನ್ನೇ ಕೇಳಿದರೂ ಸ್ವಲ್ಪವಾದರೂ ಬೇಸರಮಾಡಿಕೊಳ್ಳದೇ ಕೊಡಬೇಕು. ವತ್ಸೇ! ಸ್ವಾಧ್ಯಾಯವ್ರತನಿಷ್ಠರಾದ ಬ್ರಾಹ್ಮಣರ ಮಹಿಮೆಯು ಅಪಾರವಾದುದು.

**ಬ್ರಾಹ್ಮಣೋ ಹಿ ಪರಂ ತೇಜೋ ಬ್ರಾಹ್ಮಣೋ ಹಿ ಪರಂ ತಪಃ ।**
**ಬ್ರಾಹ್ಮಣಾನಾಂ ನಮಸ್ಕಾರೈಃ ಸೂರ್ಯೋ ದಿವಿ ವಿರಾಜತೇ ॥೧೬॥**

**ಅಮಾನಯನ್ಹಿ ಮಾನಾರ್ಹಾನ್ವಾತಾಪಿಶ್ಚ ಮಹಾಸುರಃ ।**
**ನಿಹತೋ ಬ್ರಹ್ಮದಣ್ಡೇನ ತಾಲಜಙ್ಘಸ್ತಥೈವ ಚ ॥೧೭॥**

ಬ್ರಾಹ್ಮಣನು ತೇಜಸ್ಸ್ವರೂಪನು ಮತ್ತು ಅವನು ಶ್ರೇಷ್ಠವಾದ ತಪಸ್ಸ್ವರೂಪನು. ಬ್ರಾಹ್ಮಣರು ಮಾಡುವ ನಮಸ್ಕಾರಗಳಿಂದಲೂ, ತ್ರಿಕಾಲ ಸಂಧ್ಯೋಪಾಸನೆಗಳಿಂದಲೂ ಸೂರ್ಯದೇವನು ಅಂತರಿಕ್ಷದಲ್ಲಿ ವಿರಾಜಿಸುತ್ತಾನೆ. ಪೂಜಿಸಲು ಯೋಗ್ಯರಾದ ಬ್ರಾಹ್ಮಣರನ್ನು ಅವಮಾನಿಸಿ ವಿನಾಶ ಪಡಿಸುತ್ತಿದ್ದುದರಿಂದಲೇ ಮಹಾಸುರನಾದ ವಾತಾಪಿಯೂ, ತಾಲಜಂಘ ನೆಂಬುವನೂ ಬ್ರಾಹ್ಮಣರ ಬ್ರಹ್ಮದಂಡಕ್ಕೆ (ಶಾಪಕ್ಕೆ) ಗುರಿಯಾಗಿ ವಿನಾಶಹೊಂದಿದರು. ನಾನೀ ಸಮಯದಲ್ಲಿ ಅಂತಹ ಬ್ರಾಹ್ಮಣಶ್ರೇಷ್ಠ ರಾದವರೊಬ್ಬರನ್ನು ಶುಶ್ರೂಷೆಮಾಡುವ ಸಲುವಾಗಿ ನಿನ್ನನ್ನು ನಿಯಮಿಸಿದ್ದೇನೆ.

ನೀನು ಅನನ್ಯಚಿತ್ತಳಾಗಿ ಆ ಮಹಾಮಹಿಮರ ಶುಶ್ರೂಷೆಯನ್ನು ಮಾಡಬೇಕು. ಈ ದೊಡ್ಡ ಹೊರೆಯನ್ನು ನಿನ್ನ ಮೇಲೆ ಹೊರಿಸಿದ್ದೇನೆ. ನೀನು ಬಾಲ್ಯದಾರಭ್ಯ ಬ್ರಾಹ್ಮಣರ ವಿಷಯದಲ್ಲಿಯೂ, ಹಿರಿಯರ ವಿಷಯದಲ್ಲಿಯೂ, ಬಂಧುಗಳ ವಿಷಯದಲ್ಲಿಯೂ, ನಿನ್ನ ತಂದೆ-ತಾಯಿಗಳ ವಿಷಯದಲ್ಲಿಯೂ ಎಷ್ಟು ವಿನಮ್ರತೆಯಿಂದ ನಡೆದುಕೊಳ್ಳುತ್ತಿರುವೆಯೆಂಬ ವಿಷಯವನ್ನು ನಾನು ಚೆನ್ನಾಗಿ ಗ್ರಹಿಸಿದ್ದೇನೆ. ಬಂದ ಅತಿಥಿಗಳನ್ನು ಆದರದಿಂದ ಸತ್ಕರಿಸುವುದೇ ನಿನ್ನ ದೈನಂದಿನಕಾರ್ಯವಾಗಿರುತ್ತದೆ. ನೀನು ಯಾರನ್ನು ಯಾವ ರೀತಿಯಲ್ಲಿ ಕಂಡು ಸತ್ಕರಿಸಬೇಕೆನ್ನುವ ವಿಷಯವನ್ನು ಚೆನ್ನಾಗಿ ತಿಳಿದಿರುವೆ. ಆದುದರಿಂದಲೇ ನಮ್ಮ ಪಟ್ಟಣದಲ್ಲಾಗಲೀ, ಅಂತಃಪುರ

ದಲ್ಲಾಗಲೀ ನಿನ್ನಿಂದ ಸತ್ಕೃತರಾಗಿ ಸಂತುಷ್ಟರಾಗದವರೇ ಇಲ್ಲವಾಗಿದ್ದಾರೆ. ನೀನು ನಮ್ಮ ಭೃತ್ಯಜನರನ್ನೂ ಸಹ ಆದರಿಸಿ ಗೌರವಿಸುವೆ. ಆದುದರಿಂದಲೇ ನಾನು ಮಹಾಕೋಪಿಷ್ಠರಾದ ಈ ಬ್ರಾಹ್ಮಣರ ಸೇವೆಗೂ ನಿನ್ನನ್ನೇ ನಿಯಮಿಸಿದ್ದೇನೆ. ಈ ವಿಷಯದಲ್ಲಿ ನಿನಗೆ ಕೆಲವು ಮಾತುಗಳನ್ನು ಹೇಳುತ್ತೇನೆ:

ಮಗಳೇ! ನಾನು ನಿನ್ನನ್ನು ದತ್ತಕರೂಪದಲ್ಲಿ ತೆಗೆದುಕೊಂಡೆನು. ನೀನು ವೃಷ್ಣಿಕುಲದಲ್ಲಿ ಹುಟ್ಟಿದವಳು. ಶೂರರಾಜನ ಪ್ರೀತಿಪಾತ್ರಳಾದ ಮಗಳಾಗಿದ್ದೆ. ಹುಟ್ಟುವ ಮೊದಲೇ ನಿನ್ನ ತಂದೆಯು 'ತನಗೆ ಹುಟ್ಟುವ ಮೊದಲನೆಯ ಶಿಶುವನ್ನು ನನಗೆ ಕೊಟ್ಟುಬಿಡುವೆನೆಂದು' ಅಭಿವಚನವನ್ನಿತ್ತಿದ್ದನು. ಆ ಪ್ರತಿಜ್ಞಾನುಸಾರವಾಗಿ ನೀನವನ ಪ್ರೇಮದ ಕುವರಿಯಾಗಿದ್ದರೂ ನನಗೆ ಕೊಟ್ಟುಬಿಟ್ಟನು. ನಿನ್ನ ತಮ್ಮನೇ ವಸುದೇವ. ಅಂತಹ ಪರಮಶ್ರೇಷ್ಠವಾದ ಕುಲದಲ್ಲಿ ಹುಟ್ಟಿರುವ ನೀನು ಶ್ರೇಷ್ಠವಾದ ಕುಲದಲ್ಲಿಯೇ ಅಭಿ ವೃದ್ಧಿಹೊಂದುತ್ತಿರುವೆ. ಕಮಲದ ಪುಷ್ಪವನ್ನು ಒಂದು ಸರೋವರದಿಂದ ಮತ್ತೊಂದು ಸರೋವರಕ್ಕೆ ಒಯ್ಯುವಂತೆ–ಒಂದು ಸುಖಸ್ಥಾನದಿಂದ ಮತ್ತೊಂದು ಸುಖಸ್ಥಾನಕ್ಕೆ ಕರೆತರುವಂತೆ–ಕಮಲಪ್ರಾಯಳಾದ ನಿನ್ನನ್ನು ವೃಷ್ಣಿಕುಲದಿಂದ ನಮ್ಮ ಕುಲಕ್ಕೆ ಕರೆತಂದಿದ್ದೇನೆ. ಈ ಕಾರಣದಿಂದಲೇ ನೀನಿಂದು ನನ್ನ ಮಗಳೂ ಆಗಿರುವೆ.

ಶುಭಾಂಗಿ! ಪ್ರಾಯಶಃ ದುಷ್ಕುಲದಲ್ಲಿ ಹುಟ್ಟಿದ ಹೆಣ್ಣುಮಕ್ಕಳು ಎಷ್ಟೇ ನಿರ್ಬಂಧದಲ್ಲಿದ್ದರೂ ತಮ್ಮ ಅವಿವೇಕದಿಂದ ದುಶ್ಶೀಲೆಯರಾಗುತ್ತಾರೆ. ನೀನಾದರೋ ರಾಜಕುಲದಲ್ಲಿ ಹುಟ್ಟಿದವಳು. ನಿನಗೆ ಅನುಪಮವಾದ ಸೌಂದರ್ಯವಿದೆ. ನೀನು ಸರ್ವಲಕ್ಷಣಸಂಪನ್ನೆಯಾಗಿರುವೆಯಲ್ಲದೇ ಸರ್ವಗುಣಗಳಿಂದಲೂ ಪರಿಪೂರ್ಣಳಾಗಿರುವೆ. ನೀನು ದರ್ಪವನ್ನೂ, ದಂಭವನ್ನೂ, ಅಭಿಮಾನವನ್ನೂ ಪರಿತ್ಯಜಿಸಿ ಬ್ರಾಹ್ಮಣಶ್ರೇಷ್ಠನನ್ನು ಸೇವಿಸು. ಈಗ ನಮ್ಮಲ್ಲಿಗೆ ಆಗಮಿಸಿರುವ ವಿಪ್ರರು ಶಾಪಾನುಗ್ರಹಗಳೆರಡನ್ನೂ ಕೊಡಲು ಸಮರ್ಥರು. ನೀನವರನ್ನು ನಿನ್ನ ಶುಶ್ರೂಷೆಯಿಂದ ತೃಪ್ತಿಪಡಿಸಿದರೆ ಪರಮಾದ್ಭುತವಾದ ವರವನ್ನೇ ನೀಡಬಲ್ಲರು. ಅದರಿಂದ ನಿನಗೆ ಹೆಚ್ಚಿನ

ಶ್ರೇಯಸ್ಸೂ ಉಂಟಾಗುತ್ತದೆ. ಒಂದು ವೇಳೆ ಅವರ ಶುಶ್ರೂಷೆಯನ್ನು ಮಾಡುವಾಗ ಆಲಸಿಕೆಯಿಂದ ವರ್ತಿಸಿ ಅದರಿಂದವರು ಕುಪಿತರಾದರೆ– ನಮ್ಮ ಕುಲವನ್ನೇ ಭಸ್ಮಮಾಡಿಬಿಡುತ್ತಾರೆ. ಇದೂ ನಿನ್ನ ಸ್ಮರಣೆಯಲ್ಲಿರಲಿ."

೩೦೩ನೆಯ ಅಧ್ಯಾಯವು ಮುಗಿಯಿತು.

೩೦೪ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ.)

## ಕುಂತೀ ಮತ್ತು ಕುಂತಿಭೋಜರ ಮಾತುಕತೆ : ಕುಂತಿಯು ಮಹರ್ಷಿಗಳ ಸೇವೆಮಾಡಲೊಪ್ಪಿದುದು

(ಕುಂತಿಗದು ಪರೀಕ್ಷಾಸಮಯವೇ ಸರಿ. ದುರ್ವಾಸರ ಕೋಪವೆಂತಹು ದೆಂಬುದು ತ್ರಿಲೋಕಪ್ರಸಿದ್ಧವಾದುದು. ಸ್ವಲ್ಪವೇ ನ್ಯೂನಾತಿರಿಕ್ತಗಳು ಕಂಡುಬಂದರೂ ರುದ್ರನಂತೆ ಕುಪಿತರಾಗುವರು. ಅಂತಹ ಮಹಾಮಹಿಮರ ಸೇವೆಮಾಡಲು ರಾಜನು ತನ್ನ ಮಗಳನ್ನು ನಿಯೋಜಿಸಿದ್ದನು. ಅವರು ಕುಪಿತರಾದರೆ ತನ್ನ ವಂಶವೇ ನಿರ್ಮೂಲವಾಗಿ ಹೋಗುವುದೆಂಬ ಎಚ್ಚರಿಕೆ ಯನ್ನೂ ರಾಜನು ಕುಂತಿಗೆ ಕೊಟ್ಟಿದ್ದನು. ದುರ್ವಾಸರು ಸುಪ್ರೀತರಾದರೆ ಮಹತ್ತ್ವಪೂರ್ಣವಾದ ವರವು ಪ್ರಾಪ್ತವಾಗುವುದೆಂಬುದೂ ನಿಜ. ಮೇಲಾಗಿ ದುರ್ವಾಸರು ವಿಧಿಯ ನಿಯಮವಿಲ್ಲದೇ ಯಾರೊಬ್ಬರ ಮನೆಗೂ ಬರುವ ವ್ಯಕ್ತಿಯಲ್ಲ. ಆದುದರಿಂದ ಕುಂತೀದೇವಿಗೆ ಕಷ್ಟಪಟ್ಟರೂ ಸುಖವುಂಟೆಂಬ ಭಾವನೆಯೂ ಬಂದಿರಬಹುದು.)

ರಾಜನಿಗೆ ಕುಂತಿಯು ಹೇಳಿದಳು :

"ತಂದೆಯೇ! ನೀನು ಬ್ರಾಹ್ಮಣರಿಗಿತ್ತಿರುವ ಮಾತಿನಂತೆಯೇ ನಾನು ನಡೆದುಕೊಳ್ಳುತ್ತೇನೆ. ನಾನು ಏಕಾಗ್ರಚಿತ್ತಳಾಗಿದ್ದು ಅವರ ಸೇವೆಯನ್ನು ಮಾಡುತ್ತೇನೆ. ಈ ವಿಷಯದಲ್ಲಿ ನಾನು ಸುಳ್ಳಾಡುವುದಿಲ್ಲ. ನೀನು ಬ್ರಾಹ್ಮಣರಿಗಿತ್ತಿರುವ ಅಭಿವಚನವನ್ನೂ ಸುಳ್ಳುಮಾಡುವುದಿಲ್ಲ. ಅಪ್ಪ! ನಿನಗೆ ತಿಳಿದಿರುವಂತೆ ನನ್ನ ಮನಸ್ಸು ಯಾವಾಗಲೂ ಬ್ರಾಹ್ಮಣರ ಶುಶ್ರೂಷೆ ಮಾಡಲು ತವಕಿಸುತ್ತಿರುತ್ತದೆ. ಅವರನ್ನು ಪೂಜಿಸುವುದೇ ನನ್ನ ಸ್ವಭಾವ ವಾಗಿ ಹೋಗಿದೆ. ನಿನಗೆ ಪ್ರಿಯವಾಗುವಂತೆ ಮಾಡುವುದೂ ನನ್ನ ಆದ್ಯ

ಕರ್ತವ್ಯವಾಗಿರುತ್ತದೆ. ಮೇಲಾಗಿ ಮಹರ್ಷಿಗಳಾದ, ಮಹಾಮಹಿಮರಾದ ದುರ್ವಾಸರ ಶುಶ್ರೂಷೆಮಾಡುವುದರಿಂದ ನನಗೆ ಶ್ರೇಯಸ್ಸು ಪ್ರಾಪ್ತವಾಗುತ್ತದೆ. ಈ ಎಲ್ಲ ಕಾರಣಗಳಿಂದಲೂ ನಾನು ಆ ಬ್ರಾಹ್ಮಣೋತ್ತಮರ ಸೇವೆಯನ್ನು ಅನನ್ಯಮನಸ್ಕಳಾಗಿಯೇ ಮಾಡುತ್ತೇನೆ. ಪೂಜ್ಯರಾದ ದುರ್ವಾಸಮಹರ್ಷಿಗಳು ಸಾಯಂಕಾಲದಲ್ಲಿಯೇ ಬರಲಿ, ಪ್ರಾತಃಕಾಲದಲ್ಲಿಯೇ ಬರಲಿ, ರಾತ್ರಿಯಲ್ಲೇ ಬರಲಿ, ಅರ್ಧರಾತ್ರಿಯಲ್ಲಾದರೂ ಆಗಮಿಸಲಿ–ಜಾಗರೂಕಳಾಗಿದ್ದು ಅವರನ್ನು ಸ್ವಾಗತಿಸಿ ಸತ್ಕರಿಸುತ್ತೇನೆ. ಅವರು ಕೋಪಗೊಳ್ಳಲು ಖಂಡಿತವಾಗಿಯೂ ಅವಕಾಶಕೊಡುವುದಿಲ್ಲ. ತಂದೆಯೇ! ನನ್ನ ಮೇಲೆ ಭರವಸೆಯನ್ನಿಡು. ಅವರು ನಮ್ಮ ಅರಮನೆಯಲ್ಲಿರುವ ಪರ್ಯಂತವಾಗಿ ಅವರಿಗೆ ಸ್ವಲ್ಪವಾದರೂ ಅಸಮಾಧಾನವಾಗದ ರೀತಿಯಲ್ಲಿ ನಾನು ನಡೆದುಕೊಳ್ಳುತ್ತೇನೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ. ಬಂದಿರುವ ಬ್ರಾಹ್ಮಣರಿಗೆ ಪ್ರಿಯವಾಗುವಂತೆ ಮಾಡಲು ಮತ್ತು ನಿನಗೆ ಹಿತವಾಗುವಂತೆ ಮಾಡಲು ನಾನು ಸತತವಾಗಿ ಪ್ರಯತ್ನಿಸುತ್ತೇನೆ.

ನನ್ನ ಕಾರಣದಿಂದಾಗಿ ನೀನು ಬ್ರಾಹ್ಮಣರ ಕಡೆಯಿಂದ ಯಾವ ವಿಧವಾದ ತೊಂದರೆಗೂ ಪಾತ್ರನಾಗುವುದಿಲ್ಲವೆಂಬ ಭರವಸೆಯನ್ನೂ ನೀಡುತ್ತೇನೆ. ಆದುದರಿಂದ ನಿನ್ನ ಮನಸ್ಸಿನಲ್ಲಿರಬಹುದಾದ ಆತಂಕವನ್ನು ದೂರ ಮಾಡು.

ಅಪ್ಪ! ಬ್ರಾಹ್ಮಣರಲ್ಲಿರುವ ಬ್ರಹ್ಮತೇಜಸ್ಸಿನ ಬಲವೆಷ್ಟೆಂಬುದು ನನಗೆ ಸಂಪೂರ್ಣವಾಗಿ ತಿಳಿದಿರುವುದು.

**ಬ್ರಾಹ್ಮಣಾ ಹಿ ಮಹಾಭಾಗಾಃ ಪೂಜಿತಾಃ ಪೃಥಿವೀಪತೇ ।**
**ತಾರಣಾಯ ಸಮರ್ಥಾಸ್ಯುರ್ವಿಪರೀತೇ ವಧಾಯ ಚ ॥೭॥**

ಮಹಾರಾಜ! ಮಹಾಭಾಗರಾದ ಬ್ರಾಹ್ಮಣರು ನಾವು ಮಾಡುವ ಶುಶ್ರೂಷೆಯಿಂದ ಸುಪ್ರೀತರಾದರೆ–ನಮ್ಮನ್ನು ಅನೇಕ ವಿಪತ್ತುಗಳಿಂದ ಪಾರು ಮಾಡಲು ಅಥವಾ ದುಃಖಮಯವಾದ ಸಂಸಾರದಿಂದ ನಮ್ಮನ್ನು ಉದ್ಧರಿಸಲು ಸಮರ್ಥರಾಗುತ್ತರೆ. ಅದಕ್ಕೆ ಪ್ರತಿಯಾಗಿ ನಾವು ಅವರ ವಿಷಯದಲ್ಲಿ

ತೋರುವ ಔದಾಸೀನ್ಯದಿಂದ ಅವರು ಕುಪಿತರಾದರೆಂದರೆ–ನಮ್ಮನ್ನು ಸಂಹರಿಸಲು ಅಥವಾ ನಮ್ಮ ವಂಶವನ್ನೇ ನಿರ್ಮೂಲಮಾಡಲೂ ಅವರು ಸಮರ್ಥರು.

ಈ ರಹಸ್ಯವನ್ನು ತಿಳಿದಿರುವ ನಾನು ದ್ವಿಜಶ್ರೇಷ್ಠರಾದ ದುರ್ವಾಸ ಮಹರ್ಷಿಗಳನ್ನು ನನ್ನ ಸೇವೆಯಿಂದ ಖಂಡಿತವಾಗಿಯೂ ತೃಪ್ತಿಗೊಳಿಸುವೆನು. ಬ್ರಾಹ್ಮಣರ ವಿಷಯದಲ್ಲಿ ಅಪರಾಧವನ್ನೆಸಗಿದರೆ ಅವರು ಖಂಡಿತವಾಗಿಯೂ ರಾಜರ ಅಪಯಶಸ್ಸಿಗೆ ಕಾರಣರಾಗುತ್ತಾರೆ. ಸುಕನ್ಯೆಯ ಚರ್ಯೆಯಿಂದಾಗಿ ಚ್ಯವನನು ಶರ್ಯಾತಿಯ ವಿಷಯದಲ್ಲಿ ಕುಪಿತನಾದನೆಂಬ ಇತಿಹಾಸವನ್ನು ಕೇಳಿರುವೆನಲ್ಲವೇ? ಈ ಎಲ್ಲ ವಿಷಯಗಳನ್ನೂ ತಿಳಿದಿರುವ ನಾನು ವಿಶೇಷ ನಿಯಮಗಳಿಂದಲೇ ಈ ಬ್ರಾಹ್ಮಣೋತ್ತಮರ ಸೇವೆಮಾಡುತ್ತೇನೆ. ನೀನು ಬ್ರಾಹ್ಮಣರಿಗಿತ್ತಿರುವ ಅಭಿವಚನದಂತೆ ಅವರ ಸೇವೆಯನ್ನು ಬಹಳ ಜಾಗರೂಕತೆಯಿಂದಲೂ, ಭಕ್ತಿ-ಶ್ರದ್ಧೆಗಳಿಂದಲೂ ಮಾಡಿ ಅವರನ್ನು ಸುಪ್ರೀತರನ್ನಾಗಿ ಮಾಡುತ್ತೇನೆ."

ಕುಮಾರಿಯಾದ ಕುಂತಿಯ ಮಾತುಗಳನ್ನು ಕೇಳಿ ರಾಜನು ಆನಂದದಲ್ಲಿ ಮುಳುಗಿಹೋದನು. ಅಂತೆಯೇ ಮಗಳನ್ನು ಬಾಚಿ ತಬ್ಬಿಕೊಂಡು ನೆತ್ತಿಯನ್ನು ಆಘ್ರಾಣಿಸಿ, ಅವಳ ಬೆನ್ನಿನ ಮೇಲೆ ಕೈಯಿಟ್ಟು ಸಂತೈಸುತ್ತಾ ಏನೇನು ಮಾಡಬೇಕೆಂಬುದನ್ನು ತಿಳಿಸಿ ಬಳಿಕ ಹೀಗೆ ಹೇಳಿದನು :

"ಮಗಳೇ! ನಿನ್ನ ಮಾತಿನಂತೆ ನೀನು ದುರ್ವಾಸಮಹರ್ಷಿಗಳ ಶುಶ್ರೂಷೆಯನ್ನು ಮಾಡು. ಅವರು ಕೋಪಿಷ್ಠರೆಂಬ ಕಲ್ಪನೆಯಿಂದ ನೀನು ಭಯಪಡುವ ಕಾರಣವಿಲ್ಲ. ಯಾರೊಬ್ಬರಾದರೂ ಸ್ವಲ್ಪವಾದರೂ ಕಾರಣ ವಿದ್ದೇ ಕೋಪಗೊಳ್ಳುವರೇ ವಿನಾ ಕಾರಣವಿಲ್ಲದೇ ಕೋಪಗೊಳ್ಳಲಾರರು. ಅಲಸಿಕೆಗೆ ಸ್ವಲ್ಪವಾದರೂ ಅವಕಾಶಕೊಡದಂತೆ ನೀನು ಜಾಗರೂಕತೆಯಿಂದ ವರ್ತಿಸಿದೆಯಾದರೆ ಅದರಿಂದ ನನಗೂ ಮತ್ತು ನಿನಗೂ ಶ್ರೇಯಸ್ಸುಂಟಾಗು ವುದಲ್ಲದೇ ನಮ್ಮ ಕುಲವೂ ಉದ್ಧಾರವಾಗುವುದು."

ಮಗಳಿಗೆ ಈ ರೀತಿ ಹೇಳಿದನಂತರ ಯಶೋವಂತನಾದ, ದ್ವಿಜವತ್ಸಲ

ನಾದ ಕುಂತಿಭೋಜನು ಕುಂತಿಯನ್ನು ದುರ್ವಾಸರ ಬಳಿಗೆ ಕರೆದೊಯ್ದು ಮಗಳನ್ನು ಅವರಿಗೊಪ್ಪಿಸಿಕೊಡುತ್ತಾ ಹೇಳಿದನು :

"ಬ್ರಾಹ್ಮಣೋತ್ತಮರೇ! ಇವಳೇ ನನ್ನ ಮಗಳು ಕುಂತೀ. ನಿಮ್ಮ ಪರಿಚರ್ಯೆಗಾಗಿ ನಿಮ್ಮ ಬಳಿಯಲ್ಲಿ ಬಿಡುತ್ತಿದ್ದೇನೆ. ನಾನಿವಳನ್ನು ಬಹಳ ಅಕ್ಕರೆಯಿಂದ ಸಾಕಿದ್ದೇನೆ. ಇವಳು ಬಹಳ ಸುಖದಿಂದ ನನ್ನ ಅರಮನೆಯಲ್ಲಿ ಬೆಳೆದಿರುತ್ತಾಳೆ. ಹರೆಯದ ಪ್ರಾಯದ ಈ ನನ್ನ ಮುದ್ದುಮಗಳು ಅಪ್ಪಿ-ತಪ್ಪಿ ಚಿಕ್ಕ-ಪುಟ್ಟ ಅಪರಾಧವನ್ನೇನಾದರೂ ಮಾಡಬಹುದು. ಅಂತಹ ಸಂದರ್ಭದಲ್ಲಿ ಮಗುವು ಮಾಡಿದ ಅಪರಾಧವನ್ನು ಮನಸ್ಸಿಗೆ ತಂದುಕೊಳ್ಳದೇ ಕ್ಷಮಿಸಿಬಿಡಿರಿ.

**ದ್ವಿಜಾತಯೋ ಮಹಾಭಾಗಾ ವೃದ್ಧಬಾಲತಪಸ್ವಿಷು ।**
**ಭವನ್ತ್ಯಕ್ರೋಧನಾಃ ಪ್ರಾಯೋ ಹ್ಯಪರಾದ್ಧೇಷು ನಿತ್ಯದಾ ॥೧೫॥**

ಮಹಾಭಾಗರಾದ ಬ್ರಾಹ್ಮಣರು ಸಾಮಾನ್ಯವಾಗಿ ವೃದ್ಧರ, ಬಾಲಕರ, ಮತ್ತು ತಪಸ್ವಿಗಳ ವಿಷಯದಲ್ಲಿ ಅವರು ಪದೇ ಪದೇ ಅಪರಾಧವನ್ನಸಗಿದರೂ ಕೋಪಗೊಳ್ಳುವುದಿಲ್ಲವೆಂದು ಹಿರಿಯರಾಡುವ ಮಾತನ್ನು ನಾನು ಕೇಳಿದ್ದೇನೆ. ತಪ್ಪು ದೊಡ್ಡದೇ ಆದರೂ ಬ್ರಾಹ್ಮಣೋತ್ತಮರು ಕ್ಷಮಿಸಬೇಕು. ಬ್ರಾಹ್ಮಣೋತ್ತಮರೇ! ನನ್ನ ಮಗಳ ಯಥಾಶಕ್ತಿ–ಯಥೋತ್ಸಾಹದ ಶುಶ್ರೂಷೆಯನ್ನು ನೀವು ಪ್ರೀತಿಯಿಂದ ಸ್ವೀಕರಿಸಿರಿ."

ಜನಮೇಜಯ! ರಾಜನ ಆ ಮಾತಿಗೆ ದುರ್ವಾಸರು "**ತಥಾಸ್ತು**" ಎಂದರು.

ಪರಮಪ್ರೀತನಾದ ರಾಜನು ದುರ್ವಾಸರು ತಂಗಲು ಹಂಸಕ್ಕೆ ಸಮಾನವಾದ ಅಥವಾ ಬೆಳದಿಂಗಳಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಅರಮನೆಯನ್ನು ಬಿಟ್ಟುಕೊಟ್ಟನು. ಆ ಅರಮನೆಯಲ್ಲಿದ್ದ ಅಗ್ನ್ಯಗಾರದಲ್ಲಿ ಕುಳಿತುಕೊಳ್ಳಲು ಕುಂತಿಭೋಜನು ಪ್ರಕಾಶಮಾನವಾದ ಆಸನವೊಂದನ್ನು ನಿರ್ಮಿಸಿದನು. ಉತ್ತಮರೀತಿಯಲ್ಲಿ ಬ್ರಾಹ್ಮಣರಿಗೆ ಭಕ್ಷ್ಯ-ಭೋಜ್ಯ-ಲೇಹ್ಯ-

ಚೋಷ್ಯಾದಿಗಳನ್ನು ಸಿದ್ಧಗೊಳಿಸಲು ಸಕಲವಿಧವಾದ ಸಂಭಾರಗಳೂ ಆ ಅರಮನೆಯಲ್ಲಿ ಸಮೃದ್ಧವಾಗಿದ್ದುವು.

ರಾಜಕುಮಾರಿಯಾದ ಕುಂತಿಯೂ ಅಲಸಿಕೆಯನ್ನೂ ಮತ್ತು ಅಭಿಮಾನವನ್ನೂ ಬದಿಗಿಟ್ಟು ಮಹರ್ಷಿಗಳ ಆರಾಧನೆಯಲ್ಲಿ ಕಟಿಬದ್ಧಳಾಗಿ (ಸೊಂಟಕಟ್ಟಿ ) ನಿಂತಳು. ಸರ್ವದಾ ಪರಿಶುದ್ಧಳಾಗಿ ತಪಸ್ವಿಗಳ ಸಮೀಪದಲ್ಲಿಯೇ ಇರುತ್ತಾ, ಅವರ ಮುಖಾವಲೋಕನದಿಂದಲೇ ಅವರ ಮನೋಭಿಲಾಷೆಯನ್ನು ತಿಳಿದು ಅವರಿಗೆ ಬೇಕಾಗಬಹುದಾದ ಪದಾರ್ಥಗಳನ್ನು ಸಿದ್ಧಗೊಳಿಸುತ್ತಾ, ಪೂಜಾರ್ಹರಾದ ದುರ್ವಾಸಮಹರ್ಷಿಗಳನ್ನು ರಾಜಕುಮಾರಿಯಾದ ಕುಂತಿಯು ಸಾಕ್ಷಾತ್ ದೇವತೆಯನ್ನು ಉಪಚರಿಸುವಂತೆಯೇ ಭಕ್ತಿ-ಶ್ರದ್ಧಾಪೂರ್ವಕವಾಗಿ ಉಪಚರಿಸುತ್ತಿದ್ದಳು."

೨೦೪ನೆಯ ಅಧ್ಯಾಯವು ಮುಗಿಯಿತು.

೨೦೫ನೆಯ ಅಧ್ಯಾಯ — ಕುಣ್ಡಲಾಹರಣಪರ್ವ (ಮುಂದುವರಿದಿದೆ)

## ಕುಂತಿಯು ಸೇವೆಯಿಂದ ಸಂತುಷ್ಟರಾದ ದುರ್ವಾಸ ಮಹರ್ಷಿಗಳು ಅವಳಿಗೆ ಮಂತ್ರೋಪದೇಶವನ್ನು ಮಾಡಿದುದು

"ಜನಮೇಜಯ! ಕುಮಾರಿಯಾದ ಕುಂತಿಯು ಬಹುತೀಕ್ಷ್ಣವಾದ ವ್ರತಾನುಷ್ಠಾನಮಾಡುತ್ತಿದ್ದಳು. ಬ್ರಾಹ್ಮಣರ ಪರಿಚರ್ಯೆಯೇ ಅಂದವಳ ವ್ರತವಾಗಿದ್ದಿತು. ಸ್ವಸುಖದ ಕಡೆಗೆ ಸ್ವಲ್ಪವಾದರೂ ಗಮನಕೊಡುತ್ತಿರಲಿಲ್ಲ. ದುರ್ವಾಸರೂ ಬಹುತೀಕ್ಷ್ಣವಾದ ವ್ರತಾನುಷ್ಠಾನಗಳನ್ನು ಮಾಡುತ್ತಿದ್ದರು. ಅವರು ಆಚರಿಸುತ್ತಿದ್ದ ಕಠಿನವ್ರತಕ್ಕೆ ಸ್ವಲ್ಪವಾದರೂ ಕುಂದುಂಟಾಗದ ರೀತಿಯಲ್ಲಿ ಕುಂತಿಯು ನಡೆದುಕೊಳ್ಳುತ್ತಿದ್ದಳು. ಕುಂತಿಯು ಶೀಘ್ರಕೋಪಿಗಳಾದ ದುರ್ವಾಸರನ್ನೂ ಶುದ್ಧಮನಸ್ಕಳಾಗಿ ದೇವರಂತೆ ತನ್ನ ಪರಿಚರ್ಯೆಯಿಂದ ಸಂತುಷ್ಟರನ್ನಾಗಿ ಮಾಡಿದಳು. ದುರ್ವಾಸರ ವ್ರತಾನುಷ್ಠಾನಗಳೂ ಸಾಂಗವಾಗಿ ನೆರವೇರಿದುವು. ಅಂತೆಯೇ ಕುಂತಿಯ ಪರಿಚರ್ಯಾವ್ರತವೂ ಸಾಂಗವಾಗಿ ನೆರವೇರಿತು.

(ಭೂದೇವಿಗೆ ಸದೃಶರಾದ ಸ್ತ್ರೀಯರಿಗೆ ಕ್ಷಮಾಗುಣವು ಸ್ವಭಾವವಾಗಿಯೇ ಇರುತ್ತದೆ. ಸ್ತ್ರೀಯರಲ್ಲಿ ಕ್ಷಮಾಗುಣವೊಂದಿಲ್ಲದಿದ್ದರೆ ಪ್ರಪಂಚದಲ್ಲಿ ಮಕ್ಕಳು ಉಳಿಯುವ ಸಾಧ್ಯತೆಯೇ ಇರಲಿಲ್ಲ. ಮಕ್ಕಳು ಎಷ್ಟೇ ಕಾಡಿದರೂ ತಾಯಿಯಾದವಳು ಸಹನೆಯಿಂದಲೇ ಮಕ್ಕಳನ್ನು ಆಡಿಸುತ್ತಾಳೆ.)

ಜನಮೇಜಯ! ದುರ್ವಾಸಮಹರ್ಷಿಗಳೊಮ್ಮೆ ಪ್ರಾತಃಕಾಲದಲ್ಲಿ ಬರುವೆನೆಂದು ಕುಂತಿಯೊಡನೆ ಹೇಳಿ ಹೊರಟುಹೋಗುತ್ತಿದ್ದರು. ಅವರ ಮಾತಿನ ಪ್ರಕಾರವಾಗಿ ಕುಂತೀದೇವಿಯು ಪ್ರಾತಃಕಾಲದಲ್ಲಿ ತಪಸ್ವಿಗಳಿಗೆ ಸಿದ್ಧಪಡಿಸಬೇಕಾದುದೆಲ್ಲವನ್ನೂ ಸಿದ್ಧಪಡಿಸಿ ಅವರ ಆಗಮನವನ್ನೇ ನಿರೀಕ್ಷಿಸುತ್ತಾ ಇರುತ್ತಿದ್ದಳು. ಆದರೆ ಅವರು ಸಾಯಂಕಾಲ ಅಥವಾ ರಾತ್ರಿಯ ವೇಳೆಗೆ ಅರಮನೆಗೆ ಬರುತ್ತಿದ್ದರು. ಪ್ರಾತಃಕಾಲದಲ್ಲಿ ಸಿದ್ಧಪಡಿಸಿದ್ದ ವಸ್ತುಗಳೆಲ್ಲವೂ ವ್ಯರ್ಥವಾಗಿ ಹೋಗುತ್ತಿದ್ದುವು. ಅವರು ಬಂದ ವೇಳೆಯಲ್ಲಿ ಪುನಃ ಎಲ್ಲವನ್ನೂ ಸಿದ್ಧಮಾಡಬೇಕಾಗಿತ್ತು. ಕುಂತಿಯು ನಗುನಗುತ್ತಲೇ ಪುನಃ ಎಲ್ಲವನ್ನೂ ಸಿದ್ಧಗೊಳಿಸುತ್ತಿದ್ದಳು. ಅವರು ಯಾವಾಗ ಬಂದರೂ ಅವರ ಅನುಷ್ಠಾನಗಳಿಗೆ ಬೇಕಾದುದೆಲ್ಲವನ್ನೂ ಸಿದ್ಧಪಡಿಸಿ, ಆಗ ಪುನಃ ರುಚಿಕರವಾದ ಅಡಿಗೆಮಾಡಿ ಊಟಕ್ಕೆ ಬಡಿಸಿ ಮಹರ್ಷಿಗಳು ಊಟಮಾಡಿ ಏಳುವುದರೊಳಗಾಗಿ ಅವರ ವಿಶ್ರಾಂತಿಗಾಗಿ ಹಾಸಿಗೆಯನ್ನು ಸಿದ್ಧಗೊಳಿಸುತ್ತಿದ್ದಳು.

ಬ್ರಾಹ್ಮಣಪರಿಚರ್ಯೆಯೇ ಒಂದು ಮಹಾತಪಸ್ಸೆಂದು ಅವಳು ಭಾವಿಸಿದ್ದಳು. ಬ್ರಾಹ್ಮಣರು ಅಕಾಲದಲ್ಲಿ ಬರುತ್ತಿದ್ದುದರ ಪರಿಣಾಮವಾಗಿ ಅವಳಿಗೆ ಸರಿಯಾಗಿ ನಿದ್ರಾಹಾರಗಳಿಲ್ಲದೇ ತೊಂದರೆಯಾಗುತ್ತಿದ್ದರೂ ಅದನ್ನವಳು ಸಹಿಸಿಕೊಂಡಿದ್ದಳು ಅವರನ್ನು ಯಥಾಯೋಗ್ಯವಾಗಿ ಉಪಚರಿಸಬೇಕೆಂಬ ಶ್ರದ್ಧೆಯು ಕುಂತಿಗೆ ದಿನ-ದಿನಕ್ಕೂ ಹೆಚ್ಚುತ್ತಿದ್ದಿತು.

**ಅನ್ನಾದಿಸಮುದಾಚಾರಃ ಶಯ್ಯಾಸನಕೃತಸ್ತಥಾ ।**
**ದಿವಸೇ ದಿವಸೇ ತಸ್ಯ ವರ್ಧತೇ ನ ತು ಹೀಯತೇ ॥೪॥**

ದುರ್ವಾಸರಿಗೆ ಸಿದ್ಧಪಡಿಸಬೇಕಾಗಿದ್ದ ಅನ್ನ-ಪಾನಾದಿಗಳ, ಶಯ್ಯಾಸನಗಳ ವ್ಯವಸ್ಥೆಯು ದಿನ-ದಿನಕ್ಕೂ ಹೆಚ್ಚುತ್ತಿದ್ದಿತೇ ಹೊರತು ಕಡಿಮೆಯಾಗುತ್ತಿರಲಿಲ್ಲ.

ಕುಂತಿಭೋಜನೇನೋ ಮಗಳ ಮೇಲಿನ ಅಕ್ಕರೆಯಿಂದಾಗಿ ತನ್ನ ಮಗಳು ಅಪ್ಪಿ-ತಪ್ಪಿ ತಪ್ಪುಮಾಡಿದರೂ ಮನಸ್ಸಿಗೆ ತಂದುಕೊಳ್ಳಕೂಡದೆಂದು–ದುರ್ವಾಸರನ್ನು ಪ್ರಾರ್ಥಿಸಿದ್ದನು. ಆದರೆ ದುರ್ವಾಸರು ಸ್ವಭಾವಸಹಜವಾಗಿ ತಮ್ಮಲ್ಲಿದ್ದ ಕೋಪವನ್ನು ಬಿಡಲು ಸಾಧ್ಯವೇ?

ಹಲವು ವೇಳೆ ಕುಂತಿಯು ಮಾಡಿದುದರಲ್ಲಿ ತಪ್ಪನ್ನು ಕಂಡುಹಿಡಿದು ದುರ್ವಾಸರು ಕುಂತಿಯನ್ನು ಗದರಿಸುತ್ತಿದ್ದರು. ಬೈಯ್ಯುತ್ತಿದ್ದರು. ಕಠಿನವಾದ ಮಾತುಗಳನ್ನೂ ಆಡುತ್ತಿದ್ದರು. ರಾಜಕುಮಾರಿಯು ಅಂತಹ ಕಠಿನವಾದ ಮಾತುಗಳನ್ನು ಕೇಳಿಯೂ ಕೋಪಗೊಳ್ಳುತ್ತಿರಲಿಲ್ಲ. ಅವರಾಡಿದ ಮಾತಿಗೆ ಪ್ರತಿಯಾಗಿ ಮಾತನಾಡುತ್ತಿರಲಿಲ್ಲ. ತಾನು ಮಾಡಿದ ತಪ್ಪೇನೆಂಬುದನ್ನು ಗ್ರಹಿಸುವುದರಲ್ಲಿ ಮಾತ್ರವೇ ಅವಳಿಗೆ ನೆಟ್ಟದೃಷ್ಟಿಯಿರುತ್ತಿದ್ದಿತು. ಒಮ್ಮೆ ಮಾಡಿದ ಅಪರಾಧವನ್ನು ಪುನಃ ಮಾಡಲು ಹೋಗುತ್ತಿರಲಿಲ್ಲ. ಬ್ರಾಹ್ಮಣನಿಗೆ ಅಪ್ರಿಯಕಾರ್ಯವನ್ನು ಮಾಡದಿರಲು ಕುಂತಿಯು ಸರ್ವದಾ ಶ್ರಮಿಸುತ್ತಿದ್ದಳು.

ಜನಮೇಜಯ! ನಾನು ಹಿಂದೆಯೇ ಹೇಳಿದಂತೆ ದುರ್ವಾಸರು–ಈ ವೇಳೆಗೆ ಬರುವೆನೆಂದು ಹೇಳಿ ಆ ವೇಳೆಗೆ ಬಾರದೇ–ಬಹಳ ಹೊತ್ತಾದ ನಂತರ ಅರಮನೆಗೆ ಹಿಂದಿರುಗುತ್ತಿದ್ದರು. ಅವರು ಬಂದ ವೇಳೆಗೆ ಕುಂತಿಯು ಎಲ್ಲವನ್ನೂ ಸಿದ್ಧಗೊಳಿಸುತ್ತಿದ್ದಳು.

ಒಂದೊಂದು ಸಮಯದಲ್ಲಿ ದುರ್ವಾಸರು ಅರ್ಧರಾತ್ರಿಯಲ್ಲಿ ಆಗಮಿಸಿ ಕುಂತಿಯನ್ನು ಕುರಿತು ನನಗೆ ಮೃಷ್ಟಾನ್ನವು ಬೇಕೆನ್ನುತ್ತಿದ್ದರು. ಕುಂತಿಯು ನಗುನಗುತ್ತಲೇ ಸ್ವಲ್ಪ ಹೊತ್ತಿನಲ್ಲಿ ಸಕಲವನ್ನೂ ಸಿದ್ಧಗೊಳಿಸಿ "ಸಕಲವೂ ಸಿದ್ಧವಾಗಿದೆ, ಭೋಜನಕ್ಕೇಳಿರಿ" ಎನ್ನುತ್ತಿದ್ದಳು. ಆ ಸಮಯದಲ್ಲಿ ಸಿದ್ಧಗೊಳಿಸಿದ ಮೃಷ್ಟಾನ್ನವನ್ನೂ ಕೆಲವು ಬಾರಿ ದುರ್ವಾಸರು ಬೇಡವೆನ್ನುತ್ತಿದ್ದರು.

ಕುಂತಿಯು ಶಾಂತಮನಸ್ಕಳಾಗಿ "ಹಾಗೆಯೇ ಆಗಲಿ" ಎನ್ನುವಳು. ದುರ್ವಾಸರ ಈ ಚರ್ಯೆಗಳಿಂದಾಗಿ ಕುಂತಿಯ ಮುಖದಲ್ಲಿ ಲೇಶಮಾತ್ರವೂ ಬೇಸರದ ಅಥವಾ ಕೋಪದ ಚಿಹ್ನೆಯು ಕಾಣುತ್ತಿರಲಿಲ್ಲ.

**ಶಿಷ್ಯವತ್ಪುತ್ರವಚ್ಚೈವ ಸ್ವಸೃವಚ್ಚ ಸುಸಂಯತಾ ।**
**ಯಥೋಪಜೋಷಂ ರಾಜೇನ್ದ್ರ ದ್ವಿಜಾತಿಪ್ರವರಸ್ಯ ಸಾ ।**
**ಪ್ರೀತಿಮುತ್ಪಾದಯಾಮಾಸ ಕನ್ಯಾರತ್ನಮನಿನ್ದಿತಾ ॥೮॥**

ಶಿಷ್ಯನಾಗಿರುವವನೊಬ್ಬನು ಗುರುವಿಗೆ ಆ ವಿಧವಾದ ಪರಿಚರ್ಯೆ ಮಾಡಲಾರನು. ಔರಸಪುತ್ರನೂ ತಂದೆಗೆ ಆ ವಿಧವಾದ ಸೇವೆಮಾಡುವ ಸಾಧ್ಯತೆಯಿಲ್ಲ. ತಂಗಿಯಾದವಳೂ ತನ್ನಣ್ಣನಿಗೆ ಅಷ್ಟು ಸೇವೆಮಾಡಲಾರಳು. ಶಿಷ್ಯತ್ವ, ಪುತ್ರತ್ವ ಮತ್ತು ಭಗಿನೀತ್ವ–ಇವುಗಳೆಲ್ಲವೂ ಕುಂತಿಯಲ್ಲಿ ಮೂರ್ತಿ ಮತ್ತಾಗಿ ಇದ್ದಿತಾದ್ದರಿಂದ ಕುಂತಿಗೆ ಆ ವಿಧವಾದ ಶುಶ್ರೂಷೆಮಾಡಲು ಸಾಧ್ಯವಾಯಿತು. ಶಿಷ್ಯನಂತೆ, ಮಗಳಂತೆ ಮತ್ತು ತಂಗಿಯಂತೆ ಕುಂತೀ ದೇವಿಯು ಏಕಾಗ್ರಚಿತ್ತಳಾಗಿ ದ್ವಿಜಾತಿಶ್ರೇಷ್ಠರಾದ ದುರ್ವಾಸರ ಶುಶ್ರೂಷೆ ಯನ್ನು ಯಥಾಯೋಗ್ಯವಾಗಿ ಮಾಡುತ್ತಿದ್ದಳು. ಅಂತಹ ಪರಿಚರ್ಯೆಯಿಂದ ಕನ್ಯಾರತ್ನಳಾದ ಕುಂತಿಯು ದುರ್ವಾಸರನ್ನು ತೃಪ್ತಿಪಡಿಸಿದಳು.

ಅವಳ ಸೌಶೀಲ್ಯ ಮತ್ತು ಸದ್ವೃತ್ತಿಗಳಿಂದ ಮಹರ್ಷಿಗಳು ಸಂತುಷ್ಟ ರಾದರು. ತನ್ನನ್ನು ಏಕಾಗ್ರಚಿತ್ತದಿಂದ ಉಪಚರಿಸುತ್ತಿರುವ ಕುಂತೀದೇವಿಗೆ ಶ್ರೇಯಸ್ಸನ್ನುಂಟುಮಾಡಬೇಕೆಂದು ಅಂತರ್ಮುಖರಾಗಿದ್ದ ದುರ್ವಾಸರು ನಿಶ್ಚಯಿಸಿದರು.

ಮಗಳ ಮೇಲೆ ಶುಶ್ರೂಷೆಯ ಭಾರವನ್ನು ವಹಿಸಿದ್ದರೂ ಕುಂತಿ ಭೋಜನ ಮನಸ್ಸಿನಲ್ಲಿ ಆತಂಕವಿಲ್ಲದೇ ಇರಲಿಲ್ಲ. ಪ್ರಾತಃಕಾಲ-ಸಾಯಂ ಕಾಲಗಳಲ್ಲಿ ರಾಜನು ಮಗಳ ಬಳಿಗೆ ಬಂದು ಕೇಳುತ್ತಿದ್ದನು :

**ಅಪಿ ತುಷ್ಯತಿ ತೇ ಪುತ್ರಿ ಬ್ರಾಹ್ಮಣಃ ಪರಿಚರ್ಯಯಾ ॥೧೦॥**

"ನಿನ್ನ ಪರಿಚರ್ಯೆಯಿಂದಾಗಿ, ಶುಶ್ರೂಷೆಯಿಂದಾಗಿ ಪೂಜ್ಯರು ಸಂತುಷ್ಟರಾಗಿರುವರೇ?"

"ಪರಮಪ್ರೀತರಾಗಿದ್ದಾರಪ್ಪಾ!" ಎಂದು ಯಶಸ್ವಿನಿಯಾದ ಕುಂತಿಯು ಉತ್ತರಿಸುತ್ತಿದ್ದಳು. ಕುಂತಿಯ ಆ ಉತ್ತರದಿಂದಾಗಿ ಕುಂತಿಭೋಜನಿಗೆ ಅಪಾರವಾದ ಆನಂದವಾಗುತ್ತಿತ್ತು. ಹೀಗೆಯೇ ಒಂದು ವರ್ಷ ಕಳೆಯಿತು. ಮಹರ್ಷಿಗಳ ಪರಿಚರ್ಯೆಯಲ್ಲಿ ಒಂದು ವರ್ಷ ಕಳೆದರೂ ಕುಂತಿಗೆ ಬೇಸರವಾಗಲಿಲ್ಲ. ಶುಶ್ರೂಷೆಯನ್ನು ನಿಷ್ಕಳಂಕವಾದ ಮನಸ್ಸಿನಿಂದಲೂ ನಿಶ್ಚಲವಾದ ಶ್ರದ್ಧೆಯಿಂದಲೂ ಮುಂದುವರಿಸಿದಳು. ತಾನು ಮಹರ್ಷಿಗಳಿಗೆ ಮಾಡುತ್ತಿದ್ದ ಶುಶ್ರೂಷೆಯಿಂದ ತನ್ನ ತಂದೆಗಾಗುತ್ತಿದ್ದ ಆನಂದವೇ ಕುಂತಿಗೆ ಮುಖ್ಯಪ್ರಯೋಜನವಾಗಿತ್ತು. ದುರ್ವಾಸರು ಕುಂತಿಯಲ್ಲಿ ಒಂದು ದೋಷವನ್ನೂ ಕಂಡುಹಿಡಿಯಲಾರದೇ ಹೋದರು. ಶಾಂತಮನಸ್ಕರಾಗಿದ್ದ ದುರ್ವಾಸರೊಮ್ಮೆ ಕುಂತಿಯನ್ನು ಹತ್ತಿರ ಕರೆದು ಹೇಳಿದರು :

**ಪ್ರೀತೋಽಸ್ಮಿ ಪರಮಂ ಭದ್ರೇ ಪರಿಚಾರೇಣ ತೇ ಶುಭೇ ।**
**ವರಾನ್ವೃಣೀಷ್ವ ಕಲ್ಯಾಣಿ ದುರಾಪಾನ್ಮಾನುಷೈರಿಹ ।**
**ಯೈಸ್ತ್ವಂ ಸೀಮಂತಿನೀಃ ಸರ್ವಾ ಯಶಸಾಭಿಭವಿಷ್ಯಸಿ ॥೧೪॥**

"ಭದ್ರೇ! ಮಂಗಳಾಂಗಿ! ನಿನ್ನ ಪರಿಚರ್ಯೆಯಿಂದಾಗಿ ನಾನು ಪರಮ ಪ್ರೀತನಾಗಿದ್ದೇನೆ. ನೀನು ಯಾವ ವರಗಳನ್ನು ಪಡೆಯುವುದರಿಂದ ಪ್ರಪಂಚದಲ್ಲಿರುವ ಸ್ತ್ರೀಯರಲ್ಲೆಲ್ಲಾ ಯಶಸ್ಸಿನಿಂದ ಶ್ರೇಷ್ಠಳೆನಿಸುವೆಯೋ ಮತ್ತು ಬಹುಕಷ್ಟದಿಂದಲೂ ಅಂತಹ ಅಮೋಘವಾದ ವರಗಳನ್ನು ಇತರರಿಂದ ಪಡೆಯಲು ಸಾಧ್ಯವಿಲ್ಲವೋ–ಅಂತಹ ಅಮೋಘವಾದ, ಇತರರಿಗೆ ಪರಮದುರ್ಲಭವಾದ ವರಗಳನ್ನು ಕೇಳು. ಕಲ್ಯಾಣಿ! ಅನುಗ್ರಹಿಸುತ್ತೇನೆ."

ಅದಕ್ಕುತ್ತರವಾಗಿ ಕುಂತಿಯು ವಿನಮ್ರಳಾಗಿ ಹೇಳಿದಳು :

**ಕೃತಾನಿ ಮಮ ಸರ್ವಾಣಿ ಯಸ್ಯಾ ಮೇ ವೇದವಿತ್ತಮ ।**
**ತ್ವಂ ಪ್ರಸನ್ನಃ ಪಿತಾ ಚೈವ ಕೃತಂ ವಿಪ್ರವರೈರ್ಮಮ ॥೧೫॥**

"ವೇದವಿತ್ತಮರೇ! ನಿಮ್ಮ ಈ ಮಾತಿನಿಂದಲೇ ನಾನು ಅನು ಗೃಹೀತಳಾಗಿರುವೆನು. ವೇದವಿದರಲ್ಲಿ ಶ್ರೇಷ್ಠರಾದ ನೀವು ನನ್ನ ಪರಿಚರ್ಯೆ

ಯಿಂದ ಸುಪ್ರೀತರಾದಿರೆಂದು ಹೇಳಿದುದೇ ಶ್ರೇಷ್ಠವಾದ ವರವಲ್ಲವೇ? ಮೇಲಾಗಿ ನೀವು ಸುಪ್ರೀತರಾಗಿರುವುದರಿಂದ ನಮ್ಮ ತಂದೆಯವರೂ ಸುಪ್ರೀತರಾಗಿದ್ದಾರೆ. ಆನಂದಭರಿತರಾಗಿದ್ದಾರೆ. ಇಷ್ಟರಿಂದಲೇ ನಾನು ಕೃತಾರ್ಥಳಾಗಿದ್ದೇನೆ. ಬ್ರಾಹ್ಮಣೋತ್ತಮರೇ! ನಿಮ್ಮ ಸುಪ್ರೀತಿಯೇ ನನಗೆ ಮಹಾವರವಾಗಿದೆ."



ಯದಿ ನೇಚ್ಛಸಿ ಭದ್ರೇ ತ್ವಂ ವರಂ ಮತ್ತಃ ಶುಚಿಸ್ಮಿತೇ ।
ಇಮಂ ಮನ್ತ್ರಂ ಗೃಹಾಣ ತ್ವಮಾಹ್ವಾನಾಯ ದಿವೌಕಸಾಮ್ ॥೧೬॥

ಯಂ ಯಂ ದೇವಂ ತ್ವಮೇತೇನ ಮನ್ತ್ರೇಣಾವಾಹಯಿಷ್ಯಸಿ ।
ತೇನ ತೇನ ವಶೇ ಭದ್ರೇ ಸ್ಥಾತವ್ಯಂ ತೇ ಭವಿಷ್ಯತಿ ॥೧೭॥

**ಅಕಾಮೋ ವಾ ಸಕಾಮೋ ವಾ ಸ ಸಮೇಷ್ಯತಿ ತೇ ವಶೇ ।**
**ವಿಬುಧೋ ಮನ್ತ್ರಸಂಶಾನ್ತೋ ಭವೇದ್ಭೃತ್ಯ ಇವಾನತಃ ॥೧೮॥**

"ಮಂಗಳಾಂಗಿ! ಶುಚಿಸ್ಮಿತಳೇ! ನೀನು ನನ್ನಿಂದ ಯಾವ ವರವನ್ನೂ ಪಡೆಯಲು ಇಚ್ಛಿಸದಿದ್ದರೆ ಈ ಒಂದು ಮಹಾಮಂತ್ರವನ್ನಾದರೂ ಸ್ವೀಕರಿಸು. ಈ ಮಹಾಮಂತ್ರದ ಪುನಶ್ಚರಣೆಯಿಂದ ನೀನು ದೇವಲೋಕದಲ್ಲಿರುವ ಯಾವ ದೇವತೆಯನ್ನಾದರೂ ಆಹ್ವಾನಿಸಬಹುದು.

ಮಂತ್ರದ ಪುನಶ್ಚರಣೆಮಾಡಿ ನೀನಿಚ್ಛಿಸಿದ ದೇವನನ್ನು ಆಹ್ವಾನಿಸಿದರೆ ಅವನು ಒಡನೆಯೇ ಬಂದು ನಿನ್ನ ವಶನಾಗುವನು. ಆ ದೇವತೆಗೆ ನಿನ್ನ ಬಳಿಗೆ ಬರುವ ಇಚ್ಛೆಯಿರಲಿ ; ಇಲ್ಲದಿರಲಿ–ಈ ಮಂತ್ರಪ್ರಭಾವದಿಂದಾಗಿ ನಿನ್ನ ಬಳಿಗೆ ಬಂದು, ವಿನೀತನಾದ ಭೃತ್ಯನಂತೆ ಸ್ವಲ್ಪಕಾಲ ನಿನ್ನ ಅಧೀನದಲ್ಲಿರುತ್ತಾನೆ."

ಯದ್ಯಪಿ ಕುಂತೀದೇವಿಗೆ ಯಾವ ವರವನ್ನಾಗಲೀ, ಮಂತ್ರವನ್ನಾಗಲೀ ಪಡೆಯುವ ಆಸಕ್ತಿಯಿಲ್ಲದಿದ್ದರೂ ತಥಾಪಿ ದುರ್ವಾಸರನ್ನು ಕುರಿತು ಎರಡನೆಯ ಬಾರಿಯೂ 'ಬೇಡ' ಎಂದು ಹೇಳಲು ಭಯಪಟ್ಟಳು. ಅವರ ಈ ಮಾತನ್ನೂ ತಿರಸ್ಕರಿಸಿದರೆ ಮಹರ್ಷಿಗಳು ಶಾಪಕೊಟ್ಟಾರೆಂದು ಲತಾಂಗಿಯಾದ ಕುಂತಿಯು ನಡುಗಿದಳು. ಮಹರ್ಷಿಯು ಹೇಳಿದ ಮಾತಿಗೆ ಮರುಮಾತಾಡದೇ ಮೌನವಾಗಿದ್ದು ತನ್ನ ಸಮ್ಮತಿಯನ್ನು ಸೂಚಿಸಿದಳು.

ಸ್ನಾನಮಾಡಿ ಶುಚೀಭೂತಳಾಗಿ ಶುದ್ಧಾಂತಃಕರಣಳಾಗಿದ್ದ ಕುಂತೀ ದೇವಿಯನ್ನು ದುರ್ವಾಸಮಹರ್ಷಿಗಳು ತಮ್ಮ ಬಳಿಯಲ್ಲಿ ಕುಳ್ಳಿರಿಸಿಕೊಂಡು ಅಥರ್ವಶಿರಸ್ಸಿನ ಮಂತ್ರಗ್ರಾಮವನ್ನು (ಮಂತ್ರಸಮುಚ್ಚಯವನ್ನು) ಕುಂತಿಗೆ ಉಪದೇಶಿಸಿದರು.

ಅನಂತರದಲ್ಲಿ ದುರ್ವಾಸಮಹರ್ಷಿಗಳು ಕುಂತಿಭೋಜನನ್ನು ಕರೆಯಿಸಿ ಅವನನ್ನು ಕುರಿತು ಹೇಳಿದರು :

**ಉಷಿತೋಽಸ್ಮಿ ಸುಖಂ ರಾಜನ್ಕನ್ಯಯಾ ಪರಿತೋಷಿತಃ ।**
**ತವ ಗೇಹೇಷು ವಿಹಿತಃ ಸದಾ ಸುಪ್ರತಿಪೂಜಿತಃ ॥೨೨॥**

**ಸಾಧಯಿಷ್ಯಾಮಹೇ ತಾವತ್...............**

"ರಾಜೇಂದ್ರ! ನಿನ್ನ ಅರಮನೆಯಲ್ಲಿ ನಾನು ಒಂದು ವರ್ಷಕಾಲ ಬಹಳ ಸುಖವಾಗಿ ಕಳೆದೆನು. ನಿನ್ನ ಮಗಳ ಪರಿಚರ್ಯೆಯಿಂದ ನಾನು ಬಹಳ ಸುಪ್ರೀತನಾದೆನು. ನಾನು ಇಲ್ಲಿಗೆ ಬಂದಾಗಿನಿಂದ ಇದುವರೆಗೂ ನಿನ್ನ ಅರಮನೆಯಲ್ಲಿ ಅತಿಶಯವಾದ ಸತ್ಕಾರವನ್ನು ಪಡೆದಿರುತ್ತೇನೆ. ನಾನಿನ್ನು ಹೋಗಿಬರುತ್ತೇನೆ. ನಿನಗೆ ಮಂಗಳವಾಗಲಿ."–ಹೀಗೆಂದು ಹೇಳಿ ಮಹರ್ಷಿಗಳು ಅಂತರ್ಧಾನ ಹೊಂದಿದರು. ಅದರಿಂದಾಗಿ ರಾಜನು ಆಚ್ಚರಿಗೊಂಡನಲ್ಲದೇ ಮಹಾಕೋಪಿಷ್ಠರೆಂದು ಪ್ರಸಿದ್ಧರಾದ ದುರ್ವಾಸರನ್ನೂ ಸಂತುಷ್ಟಿಗೊಳಿಸಿದ ಮಗಳನ್ನು ಬಹುವಾಗಿ ಸಮ್ಮಾನಿಸಿದನು.

ಇ೦೫ನೆಯ ಅಧ್ಯಾಯವು ಮುಗಿಯಿತು.

ಇ೦೬ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ.)

## ಕುಂತಿಯು ಮಂತ್ರಪುನಶ್ಚರಣೆಮಾಡಿ ಸೂರ್ಯನನ್ನು ಆಹ್ವಾನಿಸಿದುದು : ಸೂರ್ಯ-ಕುಂತಿಯರ ಸಂವಾದ

ವೈಶಂಪಾಯನರು ಹೇಳುತ್ತಾರೆ :

**ಗತೇ ತಸ್ಮಿನ್ದ್ವಿಜಶ್ರೇಷ್ಠೇ ಕಸ್ಮಿಂಶ್ಚಿತ್ಕಾರಣಾನ್ತರೇ ।**
**ಚಿನ್ತಯಾಮಾಸ ಸಾ ಕನ್ಯಾ ಮನ್ತ್ರಗ್ರಾಮಬಲಾಬಲಮ್ ॥೧॥**

ದ್ವಿಜಶ್ರೇಷ್ಠರಾದ ಮಹರ್ಷಿಗಳಾದ ದುರ್ವಾಸರು ಕುಂತಿಗೆ ಮಂತ್ರೋಪದೇಶಮಾಡಿ ಕಾರಣಾಂತರದಿಂದ ಹೊರಟುಹೋದೊಡನೆಯೇ ಕುಂತಿಯು ಮಂತ್ರಗ್ರಾಮದ ಬಲಾಬಲವನ್ನು ಕುರಿತು ಚಿಂತಿಸತೊಡಗಿದಳು.

**ಅಯಂ ವೈ ಕೀದೃಶಸ್ತೇನ ಮಮ ದತ್ತೋ ಮಹಾತ್ಮನಾ ।**
**ಮನ್ತ್ರಗ್ರಾಮೋ ಬಲಂ ತಸ್ಯ ಜ್ಞಾಸ್ಯೇ ನಾತಿಚಿರಾದಿತಿ ॥೨॥**

"ಮಹಾತ್ಮರಾದ ದುರ್ವಾಸಮಹರ್ಷಿಗಳಿಂದ ಉಪದಿಷ್ಟವಾದ ಮಂತ್ರ ಗ್ರಾಮವು ಯಾವ ರೀತಿಯದು ಮತ್ತು ಈ ಮಹಾಮಂತ್ರದ ಬಲವೇನು? ಎಂಬುದನ್ನು ನಾನೀಗಲೇ ಪರೀಕ್ಷಿಸಿಬಿಡುತ್ತೇನೆ"–ಹೀಗೆಂದು ಕುಂತಿಯು ನಿಶ್ಚಯಿಸಿದಳು. ಆ ಆಶಯವು ಕುಮಾರಿಯಾದ ಕುಂತಿಯ ಮನಸ್ಸಿನಲ್ಲಿ ಅಂಕುರಿಸಿದೊಡನೆಯೇ ಅವಳು ರಜಸ್ವಲೆಯಾದಳು. ತಾನಿನ್ನೂ ಪ್ರೌಢೆ ಯಾಗದೇ ಕನ್ಯಾವಸ್ಥೆಯಲ್ಲಿರುವಾಗಲೇ ರಜಸ್ವಲೆಯಾದುದನ್ನು ತಿಳಿದು ಕುಂತಿಗೆ ಬಹಳ ನಾಚಿಕೆಯಾಯಿತು. ಒಮ್ಮೆ ಅರಮನೆಯ ಉಪ್ಪರಿಗೆಯ ಮೇಲೆ ದಿವ್ಯಪರ್ಯಂಕದಲ್ಲಿ ಮಲಗಿದ್ದ ಕುಂತಿಯು ಪೂರ್ವದಿಕ್ಕಿನಲ್ಲಿ ಆಗ ತಾನೇ ಉದಯಿಸುತ್ತಿದ್ದ ಸೂರ್ಯನನ್ನು ಎವೆಯಿಕ್ಕದೇ ನೋಡತೊಡ ಗಿದಳು. ಸುಮಧ್ಯಮೆಯಾದ (ಶೋಭಾಯಮಾನವಾದ ಕಟಿಪ್ರದೇಶದಿಂದ ಕೂಡಿದ್ದ) ಕುಂತಿಯ ಮನಸ್ಸು ಮತ್ತು ದೃಷ್ಟಿಗಳೆರಡೂ ಸೂರ್ಯಮಂಡಲ ದಲ್ಲಿಯೇ ನೆಟ್ಟುಹೋದುವು. ಬಾಲಸೂರ್ಯನನ್ನು ಎಷ್ಟೆಷ್ಟು ನೋಡಿದರೂ ಅಂದವಳಿಗೆ ತೃಪ್ತಿಯೇ ಉಂಟಾಗಲಿಲ್ಲ. ಜಗಚ್ಚಕ್ಷುವಾದ ಸೂರ್ಯದೇವ ನನ್ನು ನೋಡುತ್ತಲೇ ಇರಬೇಕೆಂದು ಕುಂತಿಗನ್ನಿಸಿತು.

ಹೀಗೆ ಸೂರ್ಯನನ್ನು ಎವೆಯಿಕ್ಕದೇ ನೋಡುತ್ತಿದ್ದಾಗ ಅವಳ ದೃಷ್ಟಿಯು ದಿವ್ಯದೃಷ್ಟಿಯಾಗಿ ಪರಿವರ್ತಿತವಾಯಿತು. ದಿವ್ಯದೃಷ್ಟಿಯಿಂದ ಅವಳು ದಿವ್ಯಾಲಂಕಾರಭೂಷಿತನಾದ ಸೂರ್ಯದೇವನನ್ನೇ ಸಾಕ್ಷಾತ್ತಾಗಿ ನೋಡತೊಡಗಿದಳು.

**ಆಮುಕ್ತಕವಚಂ ದೇವಂ ಕುಂಡಲಾಭ್ಯಾಂ ಚ ಭೂಷಿತಮ್ ॥೬॥**

ದಿವ್ಯಕವಚಧರನಾಗಿದ್ದ, ಕರ್ಣಕುಂಡಲಗಳಿಂದ ಅಲಂಕೃತನಾಗಿದ್ದ ಸೂರ್ಯದೇವನನ್ನು ಕುಂತಿಯು ತನಗೆ ಪ್ರಾಪ್ತವಾಗಿದ್ದ ದಿವ್ಯದೃಷ್ಟಿಯಿಂದ ಸಂದರ್ಶಿಸಿದಳು. ಆ ದಿವ್ಯಸುಂದರಮೂರ್ತಿಯನ್ನು ನೋಡಿದೊಡನೆಯೇ ಕುಂತಿಗೆ ದುರ್ವಾಸರು ಉಪದೇಶಿಸಿದ್ದ ಮಹಾಮಂತ್ರವು ಸ್ಮರಣೆಯಾಯಿತು ಮತ್ತು ಆ ಸಮಯದಲ್ಲಿ ಆ ಮಂತ್ರದ ಬಲಾಬಲವನ್ನು ಪರೀಕ್ಷಿಸಬೇಕೆಂಬ ಕುತೂಹಲವೂ ಉಂಟಾಯಿತು. ಒಡನೆಯೇ ಮೇಲೆದ್ದು, ಸ್ನಾನಮಾಡಿ, ಮಡಿಯುಟ್ಟು, ಶುದ್ಧಾಚಮನಮಾಡಿ, ಮಹರ್ಷಿಗಳಿಂದ ಉಪದಿಷ್ಟವಾದ

ರೀತಿಯಲ್ಲಿ ಮಹಾಮಂತ್ರವನ್ನು ಪುನಶ್ಚರಣೆಮಾಡಿ ದಿವಾಕರನನ್ನು ಆಹ್ವಾನಿಸಿದಳು. ಒಡನೆಯೇ ಸೂರ್ಯದೇವನು ಬಹಳ ಆತುರದಿಂದಲೇ ಕುಂತಿಯ ಬಳಿಗೆ ಆಗಮಿಸಿದನು. ಸೂರ್ಯದೇವನ ಶರೀರವು ಜೇನುತುಪ್ಪದ ಬಣ್ಣದಂತೆ ಕಂಗೊಳಿಸುತ್ತಿದ್ದಿತು. ಅವನು ಮಹಾಬಾಹುವಾಗಿಯೂ ಶಂಖದಂತೆ ಕುತ್ತಿಗೆಯುಳ್ಳವನಾಗಿಯೂ ಇದ್ದನು. ಕನಕಾಂಗದ-ಕೇಯೂರಗಳನ್ನೂ-ಕಿರೀಟವನ್ನೂ ಧರಿಸಿದವನಾಗಿ, ನಾಲ್ಕು ದಿಕ್ಕುಗಳಲ್ಲಿಯೂ ತನ್ನ ಕಾಂತಿಯನ್ನು ಪ್ರಸರಿಸುತ್ತಾ ಮಂದಸ್ಮಿತನಾದ ಸೂರ್ಯದೇವನು ಕುಂತಿಯ ಬಳಿಗೆ ಆಗಮಿಸಿದನು. ಆ ಸಮಯದಲ್ಲಿ ಸೂರ್ಯದೇವನ ಶರೀರವು ಎರಡು ರೂಪಗಳಲ್ಲಿ ಕಾಣುತ್ತಿದ್ದಿತು. ಯೋಗಶಕ್ತಿಯಿಂದ ತನ್ನ ಶರೀರವನ್ನು ಎರಡಾಗಿ ಮಾಡಿಕೊಂಡು ಕುಂತಿಯ ಬಳಿಗೆ ಒಂದು ಶರೀರದಿಂದ ಅವನು ಬಂದಿದ್ದನು. ಆಕಾಶದಲ್ಲಿ ಮಂಡಲಾಕಾರನಾಗಿಯೇ ಇದ್ದು ಮತ್ತೊಂದು ಶರೀರದಿಂದ ಜಗತ್ತನ್ನು ಬೆಳಗುತ್ತಿದ್ದನು. ಸುಮಧುರವಾದ ಮತ್ತು ಪ್ರೇಮಪೂರಿತವಾದ ಧ್ವನಿಯಿಂದ ಸೂರ್ಯದೇವನು ಕುಂತಿಯನ್ನು ಕುರಿತು ಹೇಳಿದನು :

"ಭದ್ರೇ! ನೀನು ಪುನಶ್ಚರಣೆಮಾಡಿದ ಮಂತ್ರದ ಬಲದಿಂದ ಆಕೃಷ್ಟನಾಗಿ ನಿನ್ನ ಬಳಿಗೆ ಬಂದು ನಿನ್ನ ವಶನಾಗಿರುತ್ತೇನೆ. ಮಹಾರಾಣಿ! ನಾನು ನಿನಗೇನು ಮಾಡಿಕೊಡಲಿ? ನೀನೇನು ಹೇಳಿದರೂ ನಾನದನ್ನೀಗಲೇ ನಡೆಸಿಕೊಡುವೆನು."

ಸೂರ್ಯದೇವನು ಹೇಳಿದ ಮಾತುಗಳನ್ನು ಕೇಳಿ ಕುಂತಿಯು ಹೇಳಿದಳು : "ಭಗವನ್! ನೀನು ಈಗ ಎಲ್ಲಿಂದ ಆಗಮಿಸಿದೆಯೋ ಅಲ್ಲಿಗೇ ಹೊರಟುಹೋಗು. ನಾನು ಕೇವಲ ಕುತೂಹಲದಿಂದ ನಿನ್ನನ್ನು ಆಹ್ವಾನಿಸಿದೆನು. ಪ್ರಸನ್ನನಾಗು, ದೇವ!"

"ಸುಮಧ್ಯಮೇ! ನೀನು ಹೇಳಿದಂತೆಯೇ ನಾನು ನನ್ನ ಸ್ವಸ್ಥಾನಕ್ಕೆ ತೆರಳುವೆನು. ಆದರೆ ಮಂತ್ರದಿಂದ ದೇವನೊಬ್ಬನನ್ನು ಆಹ್ವಾನಿಸಿ ಯಾವ ವಿಧವಾದ ಪ್ರಯೋಜನವನ್ನೂ ಪಡೆಯದೇ ಹಿಂದಕ್ಕೆ ಕಳುಹಿಸುವುದು ಖಂಡಿತವಾಗಿಯೂ ಉಚಿತವಲ್ಲ. ಕೇವಲ ಕುತೂಹಲಮಾತ್ರದಿಂದ ಕರೆದೆನೆಂದು ನೀನು ನನ್ನೊಡನೆ ಹೇಳಿದೆಯಾದರೂ ನಿನ್ನ ಉದ್ದೇಶವು ಮಾತ್ರ

ಕರ್ಣಕುಂಡಲಗಳನ್ನೂ, ಕವಚವನ್ನೂ ಧರಿಸಿರುವ ಮತ್ತು ಪ್ರಪಂಚದಲ್ಲಿಯೇ ಅಪ್ರತಿಮವಾದ ಪರಾಕ್ರಮವುಳ್ಳ ಪುತ್ರನನ್ನು ನನ್ನಿಂದ ಪಡೆಯಬೇಕೆನ್ನುವುದೇ ಆಗಿರುತ್ತದೆ. ಆದುದರಿಂದ ಈ ಕೂಡಲೇ ನೀನು ನಿನ್ನ ಶರೀರವನ್ನು ನನಗೆ ಪ್ರದಾನಮಾಡು. (ನನ್ನೊಡನೆ ರಮಿಸು.) ನಿನ್ನ ಮನಸ್ಸಿನ ಇಚ್ಛೆಗೆ ಅನುರೂಪನಾದ ಪುತ್ರನನ್ನು ನನ್ನಿಂದ ಪಡೆಯುವೆ. ನಿನ್ನೊಡನೆ ಸಮಾಗಮವಾದನಂತರವೇ ನಾನು ಇಲ್ಲಿಂದ ಹೊರಡುವೆನು. ಒಂದು ವೇಳೆ ನೀನು ನನ್ನ ಈ ಇಚ್ಛೆಯನ್ನು ಪೂರ್ಣಗೊಳಿಸದಿದ್ದರೆ ಕೋಪಗೊಂಡ ನಾನು ನಿನ್ನ ತಂದೆಯನ್ನೂ ಮತ್ತು ನಿನಗೆ ಮಂತ್ರವನ್ನು ಉಪದೇಶಿಸಿದ ಬ್ರಾಹ್ಮಣನನ್ನೂ ಶಪಿಸಿಬಿಡುತ್ತೇನೆ. ನಿನ್ನ ಕಾರಣದಿಂದಾಗಿ ಅವರುಗಳೆಲ್ಲರನ್ನೂ ಭಸ್ಮಮಾಡಿಬಿಡುತ್ತೇನೆಂಬುದರಲ್ಲಿ ಸಂಶಯವಿಲ್ಲ. ಈ ನಿನ್ನ ನೀತಿಗೆಟ್ಟ ವರ್ತನೆಯನ್ನು ತಿಳಿಯದ, ಮೂಢನಾದ ನಿನ್ನ ತಂದೆಯನ್ನೂ ಮತ್ತು ನಿನ್ನ ಶೀಲ-ವೃತ್ತಗಳೇನೆಂಬುದನ್ನು ಚೆನ್ನಾಗಿ ತಿಳಿಯದೇ, ನಿನಗೆ ಮಹಾಮಂತ್ರವನ್ನುಪದೇಶಿಸಿದ ಬ್ರಾಹ್ಮಣನನ್ನೂ ನಿಶ್ಚಯವಾಗಿಯೂ ಶಿಕ್ಷಿಸುತ್ತೇನೆ. ಪುರಂದರಪ್ರಮುಖರಾದ ದೇವತೆಗಳೆಲ್ಲರೂ ತಮ್ಮ-ತಮ್ಮ ದಿಕ್ಕುಗಳಲ್ಲಿ ಉಪಸ್ಥಿತರಾಗಿ ನಿನ್ನಿಂದ ತಿರಸ್ಕೃತನಾದ ನನ್ನನ್ನು ನೋಡಿ ಅಪಹಾಸ್ಯಮಾಡುತ್ತಿದ್ದಾರೆ. ನನ್ನ ನಿಜಸ್ವರೂಪವನ್ನು ನೋಡುತ್ತಿರುವ ದಿವ್ಯದೃಷ್ಟಿಯಿಂದಲೇ ನೀನು ಇಂದ್ರಪ್ರಮುಖರಾದ ಆ ದೇವತೆಗಳನ್ನೂ ನೋಡಬಹುದಾಗಿದೆ.”

ಜನಮೇಜಯ! ಸೂರ್ಯನು ಹೇಳಿದಂತೆಯೇ ಇಂದ್ರಪ್ರಮುಖರಾದ ದೇವತೆಗಳು ಆಕಾಶದಲ್ಲಿ ತಮ್ಮ ತಮ್ಮ ಸ್ಥಾನಗಳಲ್ಲಿ ಉಪಸ್ಥಿತರಾಗಿ ತಮ್ಮನ್ನೇ ದಿಟ್ಟಿಸಿ ನೋಡುತ್ತಿರುವುದನ್ನು ರಾಜಪುತ್ರಿಯಾದ ಕುಂತಿಯು ನೋಡಿದಳು. ಪ್ರಭೆಯಿಂದ ಕೂಡಿರುವ ತೇಜೋಮಯನಾದ ಆದಿತ್ಯನನ್ನು ಸುಶರೀರಳಾದ ಕುಂತಿಯು ಸಂದರ್ಶಿಸಿದಂತೆಯೇ ಇಂದ್ರಪ್ರಮುಖರಾದ ದೇವತೆಗಳನ್ನೂ ಸಂದರ್ಶಿಸಿದಳು. ಆ ದೇವತೆಗಳೆಲ್ಲರೂ ತಮ್ಮಿಬ್ಬರನ್ನೂ ದಿಟ್ಟಿಸುತ್ತಿರುವುದನ್ನು ನೋಡಿ ಕುಂತಿಯು ನಾಚಿದಳು. ಒಂದು ವಿಧವಾದ ಭಯವೂ ಅವಳನ್ನು ಆವರಿಸಿತು. ಮಂತ್ರದ ಬಲಾಬಲವನ್ನು ಪರೀಕ್ಷಿಸಬೇಕೆಂಬ ಕುತೂಹಲದಿಂದ ಮಾಡಿದ ಕಾರ್ಯದ ಫಲವಾಗಿ ಕುಂತಿಯು

ಪೇಚಿಗೆ ಸಿಕ್ಕಿಕೊಂಡಳು. ಭೀತಳಾದ ಕುಂತಿಯು ಸೂರ್ಯನನ್ನು ಕುರಿತು ಹೇಳಿದಳು :

"ರಶ್ಮಿಮಂತನೇ! ದಯಮಾಡಿ ನಿನ್ನ ರಥಕ್ಕೆ ತೆರಳುವವನಾಗು. ಕನ್ಯಾಭಾವದಿಂದ (ಚಾಪಲ್ಯದಿಂದ) ಮಾಡಿದ ಈ ಅಪರಾಧವು ದುಃಖಕ್ಕೆ ಕಾರಣವಾಯಿತು. ಮೇಲಾಗಿ ನಾನಿನ್ನೂ ಕನ್ಯೆಯಾಗಿರುವುದರಿಂದ ನಿನ್ನೊಡನೆ ಸಮಾಗಮದ ಅಪಚಾರವು ದುಃಖದಲ್ಲಿಯೇ ಪರ್ಯವಸಾನಹೊಂದುತ್ತದೆ. ಎರಡನೆಯದಾಗಿ–ಈ ನನ್ನ ದೇಹವನ್ನು ನಿನಗರ್ಪಿಸಲೂ ನಾನು ಸ್ವತಂತ್ರಳಲ್ಲ.

**ಪಿತಾ ಮಾತಾ ಗುರವಶ್ಚೈವ ಯೇऽನ್ಯೇ**
**ದೇಹಸ್ಯಾಸ್ಯ ಪ್ರಭವನ್ತಿ ಪ್ರದಾನೇ ।**
**ನಾಹಂ ಧರ್ಮಂ ಲೋಪಯಿಷ್ಯಾಮಿ ಲೋಕೇ**
**ಸ್ತ್ರೀಣಾಂ ವೃತ್ತಂ ಪೂಜ್ಯತೇ ದೇಹರಕ್ಷಾ ॥೨೩॥**

ತಂದೆ-ತಾಯಿಗಳು ಮತ್ತು ಇತರ ಗುರುಜನರು ಮಾತ್ರವೇ ಈ ಶರೀರವನ್ನು ( ಕನ್ಯೆಯನ್ನು ) ಯೋಗ್ಯನಾದ ವರನಿಗೆ ಪ್ರದಾನಮಾಡಲು ಅಧಿಕಾರಹೊಂದಿರುತ್ತಾರೆ. ಇಂತಹ ಪರಮೋಚ್ಚವಾದ ಧರ್ಮವನ್ನು ನಾನು ಲೋಪಗೊಳಿಸಲಾರೆನು. (ಈ ಧರ್ಮಕ್ಕೆ ವಿರುದ್ಧವಾಗಿ ನಾನು ನಡೆಯ ಲಾರೆನು.) ಕನ್ಯಾಪ್ರದಾನಕ್ಕೆ ಮೊದಲು ಯಾರೊಬ್ಬರ ಸಂಸ್ಪರ್ಶವೂ ಇಲ್ಲ ದಂತೆ ದೇಹವನ್ನು ರಕ್ಷಿಸಿಕೊಳ್ಳುವುದೇ ಸ್ತ್ರೀಯರ ಪರಮೋಚ್ಚಧರ್ಮವಾಗಿದೆ.

ಈ ಧರ್ಮವೇ ಲೋಕದಲ್ಲಿ ಗೌರವಿಸಲ್ಪಡುತ್ತದೆ. ವಿಭಾವಸೋ! ಮಹರ್ಷಿಯು ಉಪದೇಶಿಸಿದ ಮಹಾಮಂತ್ರದ ಪ್ರಭಾವವೇನೆಂಬುದನ್ನು ಪರೀಕ್ಷಿಸುವ ಸಲುವಾಗಿ ಮಂತ್ರಪುನಶ್ಚರಣೆಮಾಡಿ ನಿನ್ನನ್ನು ಆಹ್ವಾನಿಸಿದೆನು. ಅರಿಯದ ಬಾಲೆಯೊಬ್ಬಳಿಂದ ಈ ಅಪರಾಧವು ನಡೆಯಿತೆಂದು ಭಾವಿಸಿ ಮಹಾತ್ಮನಾದ ನೀನು ನನ್ನನ್ನು ಕ್ಷಮಿಸುವುದು ಸಾಧುವಾಗಿದೆ."

"ಕುಂತಿ! ನೀನಿನ್ನೂ ಬಾಲೆಯೆಂಬ ಕಾರಣದಿಂದಲೇ ನಾನು ನಿನ್ನ ವಿಷಯದಲ್ಲಿ ಬಹಳ ಸೌಜನ್ಯದಿಂದಲೇ ನಡೆದುಕೊಳ್ಳುತ್ತಿದ್ದೇನೆ. ಹಾಗಿಲ್ಲ

ದಿದ್ದರೆ ನಾನು ಸೌಜನ್ಯದಿಂದಿರುವ ಸಾಧ್ಯತೆಯೇ ಇಲ್ಲ. ಬೇರೆಯವರಾರೂ ನನ್ನಿಂದ ಇಷ್ಟು ಸೌಜನ್ಯವನ್ನು ಪಡೆಯಲಾರರು. ಆದುದರಿಂದ ಈಗಲೂ ನನ್ನ ಮಾತಿನಂತೆ ಆತ್ಮಪ್ರದಾನಮಾಡು. ಇದರಿಂದ ನಿನಗೆ ಸುಖ-ಶಾಂತಿಗಳೆರಡೂ ಲಭಿಸುವುವು. ನೀನು ನನ್ನನ್ನು ಮಹಾಮಂತ್ರದ ಮೂಲಕ ಆಹ್ವಾನಿಸಿರುವಾಗ ಯಾವ ವಿಧವಾದ ಪ್ರಯೋಜನವೂ ಇಲ್ಲದೇ ನಾನು ಹೊರಟು ಹೋಗುವುದೂ ಯುಕ್ತವಲ್ಲ. ಇಂದು ನಾನು ನಿನ್ನ ಮಾತಿನಂತೆ ಹೊರಟು ಹೋದೆನಾದರೆ ಲೋಕವೇ ನನ್ನನ್ನು ಅಪಹಾಸ್ಯಮಾಡುವುದು. ಎಲ್ಲ ದೇವತೆಗಳ ಅಪಹಾಸ್ಯಕ್ಕೂ ನಾನು ಗುರಿಯಾಗಬೇಕಾಗುವುದು.

ಆದುದರಿಂದ ನೀನೀಗಲೇ ಆತ್ಮಪ್ರದಾನಮಾಡು. ನನ್ನ ಸಮಾಗಮದಿಂದಾಗಿ ನನಗೆ ಸದೃಶನಾದ ಪುತ್ರನನ್ನೇ ಪಡೆಯುವೆ. ಇದರಿಂದ ಲೋಕದಲ್ಲಿ ನಿನಗೆ ಯಶಸ್ಸೂ ಲಭ್ಯವಾಗುತ್ತದೆ. ಪ್ರಪಂಚದಲ್ಲಿ ನೀನು ವಿಶೇಷವಾದ ಹೊಗಳಿಕೆಗೆ ಪಾತ್ರಳಾಗುವೆ. (ಎಲ್ಲರಿಗಿಂತಲೂ ಮೇಲಾದವಳಾಗುವೆ.) ಇದರಲ್ಲಿ ಸಂಶಯವಿಲ್ಲ.”

೩೦೬ನೆಯ ಅಧ್ಯಾಯವು ಮುಗಿಯಿತು.

೩೦೭ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ.)

## ಸೂರ್ಯ-ಕುಂತಿಯರ ಸಮಾಗಮ : ಕುಂತಿಯು ಗರ್ಭವತಿಯಾದುದು

ಜನಮೇಜಯ! ಕನ್ಯೆಯಾದ ಕುಂತಿಯು ಸೂರ್ಯನೊಡನೆ ಸಮಾಗಮವನ್ನು ನಿರಾಕರಿಸಿ ಅನೇಕರೀತಿಯಲ್ಲಿ ಸುಮಧುರವಾದ ಮಾತುಗಳಿಂದ ಪ್ರಾರ್ಥಿಸಿದರೂ ಯಾವುದೊಂದು ಪ್ರಯೋಜನವೂ ಆಗಲಿಲ್ಲ. ಅವಳು ಸೂರ್ಯನನ್ನು ಹಿಂದಿರುಗಿಸಲು ಅಸಮರ್ಥಳಾದಳು. ಸೂರ್ಯನನ್ನು ಹಿಂದಿರುಗಿಸುವುದು ಅಸಾಧ್ಯವೆಂದು ತಿಳಿದನಂತರ ಮುಂದಿನ ಕರ್ತವ್ಯವನ್ನು ಕುರಿತು ಕುಂತಿಯು ಬಹುವಾಗಿ ಯೋಚಿಸತೊಡಗಿದಳು. ಕುಂತಿಗಿದ್ದುದು ಎರಡೇ ಮಾರ್ಗ. ಆ ಎರಡು ಮಾರ್ಗಗಳಲ್ಲಿಯೂ

ಅಪಾಯವೂ, ಅಪಯಶಸ್ಸೂ ಇದ್ದೇ ಇದ್ದಿತು. 'ಸೂರ್ಯನೊಡನೆ ಸಮಾಗಮಕ್ಕೆ ಒಪ್ಪದಿದ್ದರೆ ಅವನೇ ಹೇಳಿದಂತೆ ತನ್ನ ತಂದೆಯನ್ನೂ, ಮಂತ್ರೋಪದೇಶಕನನ್ನೂ ಮತ್ತು ತನ್ನನ್ನೂ ಅವನು ಶಪಿಸುತ್ತಾನೆ. ಸೂರ್ಯನೊಡನೆ ಸಮಾಗಮಕ್ಕೆ ಒಪ್ಪಿದರೆ ಮದುವೆಯಾಗುವ ಮೊದಲೇ ಮಕ್ಕಳಾಯಿತೆಂಬ ಲೋಕಾಪವಾದಕ್ಕೆ ಗುರಿಯಾಗಬೇಕಾಗುತ್ತದೆ. ಈ ಅಪಯಶಸ್ಸೂ ತನಗೊಬ್ಬಳಿಗೆ ಮಾತ್ರವಲ್ಲ; ವಂಶಕ್ಕೂ ಅಪಕೀರ್ತಿ ಯುಂಟಾಗುತ್ತದೆ. ಕೇವಲ ಚಾಪಲ್ಯದಿಂದ ಮಂತ್ರಪುನಶ್ಚರಣೆಯನ್ನು ಮಾಡಿದುದಕ್ಕೆ, ಮಹಾಮಂತ್ರದ ಬಲಾಬಲವನ್ನು ಪರೀಕ್ಷಿಸಲು ಪ್ರಯತ್ನಿಸಿ ದುದಕ್ಕೆ ತಾನು ಈ ವಿಧವಾದ ತೊಂದರೆಗೆ ಸಿಕ್ಕಿಕೊಳ್ಳಬೇಕಾಯಿತು'–ಎಂದು ಕುಂತಿಯು ಬಹುವಿಧವಾಗಿ ಪರಿತಪಿಸಿದಳು.

"ನನ್ನ ತಂದೆಯು ನಿರ್ದೋಷಿ. ನನಗೆ ಮಂತ್ರೋಪದೇಶಮಾಡಿದ ಬ್ರಾಹ್ಮಣರೂ ಯಾವ ವಿಷಯವನ್ನೂ ತಿಳಿಯದವರು. ನಾನು ಅವರಿಬ್ಬರನ್ನೂ ಕುಪಿತನಾಗಿರುವ ಈ ಸೂರ್ಯನ ಶಾಪದಿಂದ ತಪ್ಪಿಸಬೇಕಾಗಿದೆ. ಹೇಗೆ ತಪ್ಪಿಸಬೇಕು? ಹೇಗೆ ತಪ್ಪಿಸಲಿ?

**ಬಾಲೇನಾಪಿ ಸತಾ ಮೋಹಾದ್ಭೃಶಂ ಪಾಪಕೃತಾನ್ಯಪಿ ।**
**ನಾಭ್ಯಾಸಾದಯಿತವ್ಯಾನಿ ತೇಜಾಂಸಿ ಚ ತಪಾಂಸಿ ಚ ॥೪॥**

ತೇಜಸ್ಸು ಮತ್ತು ತಪಸ್ಸುಗಳು ಪಾಪಗಳನ್ನು ಹೋಗಲಾಡಿಸು ತ್ತವೆಂಬುದೇನೋ ನಿಜ. ಆದರೆ ಆ ಮಹಾತೇಜಸ್ಸನ್ನೂ ಮತ್ತು ತಪಸ್ಸನ್ನೂ ಪಡೆಯಲು ಸತ್ತ್ವಭಾವವುಳ್ಳ ಬಾಲಕನು ಯತ್ನಿಸಬಾರದು. ಏಕೆಂದರೆ: ಬಾಲ್ಯದಲ್ಲಿ ಚಾಪಲ್ಯವೆಂಬುದು ಹೆಚ್ಚಾಗಿರುವುದರಿಂದ ತಪಸ್ಸಿನ ಫಲವನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬ ವಿವೇಚನೆಯಿರುವುದಿಲ್ಲ. ಈ ಕಾರಣ ದಿಂದಲೇ ನಾನು ಇಂತಹ ಪೇಚಿನಲ್ಲಿ ಸಿಕ್ಕಿಕೊಂಡಿರುವೆನು. ನಾನೀಗ ಸೂರ್ಯನ ವಶಳಾಗಿಬಿಟ್ಟಿದ್ದೇನೆ. ಇವನಿಗೆ ನನ್ನ ಆತ್ಮಪ್ರದಾನಮಾಡುವುದು ಅಕಾರ್ಯವೆಂದೇ ನನಗನ್ನಿಸುತ್ತಿದೆ. ಈ ಅಕಾರ್ಯವನ್ನು ನಾನು ಹೇಗೆತಾನೇ ಮಾಡಲಿ?"

ಜನಮೇಜಯ! ಒಂದು ಕಡೆ ಕುಂತಿಯು ಶಾಪದ ಭೀತಿಯುಳ್ಳ

ವಳಾಗಿದ್ದಳು. ಮತ್ತೊಂದೆಡೆಯಲ್ಲಿ ಸೂರ್ಯನೊಡನೆ ಸಮಾಗಮವು ಅಕಾರ್ಯವೆಂದು ಭಾವಿಸಿದ್ದಳು. ಯಾವ ಮಾರ್ಗವನ್ನನುಸರಿಸಲೂ ಅವಳ ಮನಸ್ಸು ಒಡಂಬಡುತ್ತಿರಲಿಲ್ಲ. ಯಾವುದಾದರೂ ಒಂದು ಮಾರ್ಗವನ್ನು ಅನುಸರಿಸಲೇಬೇಕೆಂಬ ವಿಷಯವೂ ಕುಂತಿಗೆ ತಿಳಿದಿತ್ತು. ಅದರಿಂದಲೇ ಅವಳು ಬಹಳ ಭಯಗ್ರಸ್ತಳಾಗಿದ್ದಳು. ಒಮ್ಮೆ ಕುಂತಿಯು ತನಗೊದಗಿದ ಪರಿಸ್ಥಿತಿಯನ್ನು ಕುರಿತು ಆಶ್ಚರ್ಯಪಡುತ್ತಿದ್ದಳು.

ಕಟ್ಟಕಡೆಗೆ ಭಯಗ್ರಸ್ತಳಾದ ಕುಂತಿಯು ಲಜ್ಜೆಯಿಂದ ತಲೆತಗ್ಗಿಸಿಕೊಂಡು ದೇವದೇವನಾದ ಸೂರ್ಯನನ್ನು ಕುರಿತು ಹೇಳಿದಳು :

"ದೇವ! ನನ್ನ ತಾಯಿ-ತಂದೆ ಮತ್ತು ಬಂಧುಗಳಿನ್ನೂ ಬದುಕಿರುವಾಗ ನಾನು ಸ್ವತಂತ್ರಳಾಗಿ ಆತ್ಮಪ್ರದಾನಮಾಡುವುದು ವಿಧಿಲೋಪ ವಾದಂತಾಗುತ್ತದೆ. ವಿಧಿನಿಷೇಧಿತವಾದ ಸಮಾಗಮವನ್ನು ನಾನು ನಿನ್ನೊಡನೆ ಮಾಡಿದೆನಾದರೆ ನನ್ನ ಕಾರಣದಿಂದಾಗಿ ಈ ಲೋಕದಲ್ಲಿ ನಮ್ಮ ಕುಲಕ್ಕೇ ಅಪಕೀರ್ತಿಯುಂಟಾಗುತ್ತದೆ. ಆದರೆ, ದೇವ! ನೀನು ಪ್ರಪಂಚಕ್ಕೇ ಸಾಕ್ಷಿ ಯಾಗಿರುವೆ. ಧರ್ಮಮೂರ್ತಿಯಾಗಿರುವೆ. ತಂದೆ-ತಾಯಿಗಳು ನನ್ನನ್ನು ಪ್ರದಾನಮಾಡದಿದ್ದರೂ ಬಾಧಕವಲ್ಲವೆಂದೂ, ಇದು ಧರ್ಮಕ್ಕೆ ವಿರೋಧ ವಾಗುವುದಿಲ್ಲವೆಂದೂ, ಧರ್ಮಸಮ್ಮತವೆಂದೂ ನೀನು ಹೇಳುವುದಾದರೆ ನಾನು ನಿನಗೆ ಆತ್ಮಪ್ರದಾನಮಾಡುವೆನು. ನಿನ್ನ ಆಶಯವನ್ನು ಪೂರ್ಣ ಗೊಳಿಸುವೆನು. ಆತ್ಮಪ್ರದಾನಮಾಡಿದ ನಂತರವೂ ನಾನು ಸತಿಯಾಗಿಯೇ ಉಳಿಯಬೇಕು. ಪರಿಶುದ್ಧಳಾಗಿಯೇ ಇರಬೇಕು. ನಿನ್ನಲ್ಲಿ ಸಕಲಪ್ರಾಣಿಗಳ ಧರ್ಮ, ಯಶಸ್ಸು, ಕೀರ್ತಿ, ಆಯುಷ್ಯ–ಇವುಗಳು ಪ್ರತಿಷ್ಠಿತವಾಗಿವೆ. ಆದುದರಿಂದ ನಿನ್ನ ಸಮಾಗಮವಾದ ನಂತರ ನಾನು ಕನ್ಯೆಯಾಗಿಯೇ ಉಳಿಯುವುದಾದರೆ–ಹಾಗೆ ನೀನು ಅನುಗ್ರಹಿಸುವುದಾದರೆ–ನಾನು ಆತ್ಮ ಪ್ರದಾನಮಾಡುವೆನು."

**ನ ತೇ ಪಿತಾ ನ ತೇ ಮಾತಾ ಗುರವೋ ವಾ ಶುಚಿಸ್ಮಿತೇ ।**
**ಪ್ರಭವನ್ತಿ ವರಾರೋಹೇ ಭದ್ರಂ ತೇ ಶೃಣು ಮೇ ವಚಃ ॥೧೨॥**

"ಮಂಗಳಾಂಗಿ! ಶುಚಿಸ್ಮಿತೇ! ನಿನ್ನ ತಂದೆಯಾಗಲೀ, ತಾಯಿ ಯಾಗಲೀ, ನಿನ್ನ ಬಂಧುಗಳಾಗಲೀ–ನಿನ್ನನ್ನು ನನ್ನೊಡನಾಗುವ ಸಮಾಗಮ

ದಿಂದ ತಡೆಯಲು ಸಮರ್ಥರಲ್ಲ. ನಿನಗೆ ಮಂಗಳವಾಗಲಿ. ನಾನು ಹೇಳಲಿರುವ ಈ ಮಾತುಗಳನ್ನಾದರೂ ಕೇಳು :

**ಸರ್ವಾನ್ಕಾಮಯತೇ ಯಸ್ಮಾತ್ಕಮೇರ್ಧಾತೋಶ್ಚ ಭಾಮಿನಿ ।**
**ತಸ್ಮಾತ್ಕನ್ಯೇಹ ಸುಶ್ರೋಣಿ ಸ್ವತನ್ತ್ರಾ ವರವರ್ಣಿನಿ ॥೧೩॥**

ಎಲ್ಲರನ್ನೂ ಕಾಮಿಸುತ್ತಾಳೆಂಬುದೇ ಕನ್ಯಾಶಬ್ದದ ಅರ್ಥವಾಗಿದೆ. ಈ ಕನ್ಯಾಶಬ್ದವು 'ಕಮು' ಧಾತುವಿನಿಂದಲೇ ಹುಟ್ಟಿರುವುದು. ಈ ಕಾರಣದಿಂದಾಗಿ ಕನ್ಯೆಯು ಸ್ವತಂತ್ರಳು. ಅವಳು ಪರತಂತ್ರಳಲ್ಲ. ಆತ್ಮಪ್ರದಾನ ಮಾಡಲು ಅವಳಿಗೆ ಸ್ವಾತಂತ್ರ್ಯವಿದೆ. ಇದರಿಂದ ವಿಧಿಯ ಉಲ್ಲಂಘನೆಯಾದಂತಾಗುವುದಿಲ್ಲ.

**ನಾಧರ್ಮಶ್ಚರಿತಃ ಕಶ್ಚಿತ್ತ್ವಯಾ ಭವತಿ ಭಾಮಿನಿ ।**
**ಅಧರ್ಮಂ ಕುತ ಏವಾಹಂ ಚರೇಯಂ ಲೋಕಕಾಮ್ಯಯಾ ॥೧೪॥**

ನನ್ನೊಡನೆ ಸಮಾಗಮದಿಂದ ನೀನು ಅಧರ್ಮವನ್ನು ಮಾಡಿದಂತಾಗುವುದಿಲ್ಲ. ಸಕಲಲೋಕಗಳಿಗೂ ಹಿತಾಕಾಂಕ್ಷಿಯಾದ ನಾನು ಹೇಗೆತಾನೇ ಅಧರ್ಮಾಚರಣೆಯನ್ನು ಪ್ರೋತ್ಸಾಹಿಸುವೆನು? ಅಥವಾ ಅಧರ್ಮವೆನಿಸುವ ಕಾರ್ಯವನ್ನಾದರೂ ಹೇಗೆ ಮಾಡುವೆನು?

**ಅನಾವೃತಾಃ ಸ್ತ್ರಿಯಃ ಸರ್ವಾ ನರಾಶ್ಚ ವರವರ್ಣಿನಿ ।**
**ಸ್ವಭಾವ ಏಷ ಲೋಕಾನಾಂ ವಿಕಾರೋಽನ್ಯ ಇತಿ ಸ್ಮೃತಃ ॥೧೫॥**

ಪ್ರಪಂಚದಲ್ಲಿ ಹುಟ್ಟುವ ಸ್ತ್ರೀಯರಾಗಲೀ, ಪುರುಷರಾಗಲೀ ಯಾವಾಗಲೂ ಅಸ್ವತಂತ್ರರಲ್ಲ. ಸ್ವಭಾವದಿಂದಲೇ ಅವರು ಸ್ವತಂತ್ರರಾಗಿರುವವರು. ಸ್ವತಂತ್ರರಾಗಿರುವವರನ್ನು ಅಸ್ವತಂತ್ರರೆಂದು ಭಾವಿಸುವುದು ಅಸ್ವಾಭಾವಿಕ ಮತ್ತು ವಿಕಾರವೆಂದು ಹೇಳಲ್ಪಡುವುದು. ಮೇಲಾಗಿ ನನ್ನೊಡನೆ ನೀನು ಸಮಾಗಮಮಾಡಿದನಂತರ ಪುನಃ ಕನ್ಯಾವಸ್ಥೆಯನ್ನೇ ಪಡೆಯುವೆ. ನನ್ನೊಡನೆ ಮಾಡುವ ಸಮಾಗಮದ ಫಲವಾಗಿ ನಿನಗೆ ಮಹಾಯಶನಾದ ಮತ್ತು ಮಹಾಬಾಹುವಾದ ಮಗನೂ ಹುಟ್ಟುತ್ತಾನೆ."

ಸೂರ್ಯದೇವನ ಮಾತುಗಳನ್ನು ಕೇಳಿ ಕುಂತಿಗೆ ನಾಚಿಕೆಯೂ

ಭಯವೂ ದೂರವಾಯಿತು. ತನ್ನ ಮನಸ್ಸಿನ ಆಶಯವನ್ನು ಬಹಳ ಸ್ಪಷ್ಟ ವಾಗಿಯೇ ಸೂರ್ಯನೊಡನೆ ಹೇಳಿದಳು.

**ಯದಿ ಪುತ್ರೋ ಮಮ ಭವೇತ್ತ್ವತ್ತಃ ಸರ್ವತಮೋನುದ ।**
**ಕುಣ್ಡಲೀ ಕವಚೀ ಶೂರೋ ಮಹಾಬಾಹುರ್ಮಹಾಬಲಃ ॥೧೭॥**

"ಸಕಲವಿಧವಾದ ತಮಸ್ಸನ್ನೂ ಹೋಗಲಾಡಿಸುವ ಸೂರ್ಯನೇ! ನಿನ್ನಿಂದ ನನಗೊಬ್ಬ ಮಗನು ಹುಟ್ಟುವುದಾದರೆ ಅವನು ಕರ್ಣಕುಂಡಲಗಳನ್ನು ಹೊಂದಿದವನಾಗಿಯೂ ಕವಚವನ್ನು ಧರಿಸಿದವನಾಗಿಯೂ, ಶೂರ ನಾಗಿಯೂ, ಮಹಾಬಾಹುವಾಗಿಯೂ, ಮಹಾಬಲನಾಗಿಯೂ ಇರಲಿ."

**ಭವಿಷ್ಯತಿ ಮಹಾಬಾಹುಃ ಕುಣ್ಡಲೀ ದಿವ್ಯವರ್ಮಭೃತ್ ।**
**ಉಭಯಂ ಚಾಮೃತಮಯಂ ತಸ್ಯ ಭದ್ರೇ ಭವಿಷ್ಯತಿ ॥೧೮॥**

"ಭದ್ರೇ! ಮಹಾಬಾಹುವಾದ ಆ ನಿನ್ನ ಮಗನು ದಿವ್ಯಕರ್ಣಕುಂಡಲ ಗಳನ್ನೂ, ದಿವ್ಯಕವಚವನ್ನೂ ಧರಿಸಿಯೇ ಜನ್ಮಪಡೆಯುತ್ತಾನೆ. ಕರ್ಣ ಕುಂಡಲಗಳೂ ಮತ್ತು ಅವನು ಧರಿಸಿರುವ ಕವಚವೂ ಅಮೃತಮಯ ವಾಗಿರುತ್ತವೆ."

"ದೇವ! ನಿನ್ನ ಸಮಾಗಮದಿಂದ ಹುಟ್ಟಲಿರುವ ಆ ನನ್ನ ಮಗನು ಅಮೃತಮಯವಾದ ಕರ್ಣಕುಂಡಲಗಳನ್ನೂ ಮತ್ತು ಕವಚವನ್ನೂ ಧರಿಸಿರುವವನಾದರೆ ನೀನು ಹೇಳಿದಂತೆ ನನ್ನೊಡನೆ ನಿನ್ನ ಸಮಾಗಮವಾಗಲಿ. ನಾನು ನನ್ನ ಆತ್ಮವನ್ನು ನಿನಗೆ ಅರ್ಪಿಸುತ್ತೇನೆ. ಆ ನನ್ನ ಮಗನು ನಿನ್ನಂತೆಯೇ ವೀರ್ಯವಂತನೂ, ರೂಪವಂತನೂ, ಸತ್ತ್ವವಂತನೂ, ಓಜಸ್ವಿಯೂ, ಧರ್ಮಾತ್ಮನೂ ಆಗಿರಲಿ."

**ಅದಿತ್ಯಾ ಕುಣ್ಡಲೇ ರಾಜ್ಞಿ ದತ್ತೇ ಮೇ ಮತ್ತಕಾಶಿನಿ ।**
**ತೇಽಸ್ಯ ದಾಸ್ಯಾಮಿ ವೈ ಭೀರು ವರ್ಮ ಚೈವೇದಮುತ್ತಮಮ್ ॥೧೯॥**

"ಮಹಾರಾಣಿ! ಅಮೃತಮಯವಾದ ಈ ದಿವ್ಯಕರ್ಣಕುಂಡಲಗಳು ತಾಯಿಯಾದ ಅದಿತಿಯಿಂದ ನನಗೆ ಕೊಡಲ್ಪಟ್ಟಿವೆ. ಅವುಗಳನ್ನೂ ಮತ್ತು

ನಾನೀಗ ಧರಿಸಿರುವ ಉತ್ತಮೋತ್ತಮವಾದ ಈ ಕವಚವನ್ನೂ ನಿನ್ನ ಪುತ್ರನಿಗೆ ನಾನು ಅನುಗ್ರಹಿಸುವೆನು."

"ರಶ್ಮಿಮಂತನೇ! ನೀನು ನಿರೂಪಿಸಿದಂತೆಯೇ ಕರ್ಣಕುಂಡಲ-ಕವಚ ಗಳನ್ನು ಧರಿಸಿರುವ ಮಹಾಪರಾಕ್ರಮಿಯಾದ ಪುತ್ರನೇ ನಿನ್ನ ಸಮಾಗಮದಿಂದ ನನ್ನಲ್ಲಿ ಹುಟ್ಟುವುದಾದರೆ ನಾನು ನಿನ್ನ ವಶಳಾಗುವೆನು."

ಜನಮೇಜಯ! ಸೂರ್ಯದೇವನು "ತಥಾಸ್ತು" ಎಂದು ಕುಂತಿಗೆ ಅಭಿವಚನವನ್ನಿತ್ತು ಪರ್ಯಂಕದಲ್ಲಿದ್ದ ಕುಂತಿಯನ್ನು ಸಮೀಪಿಸಿದನು. ಯೋಗಾತ್ಮನಾದ ಮತ್ತು ರಾಹುವಿನ ಶತ್ರುವಾದ ಸೂರ್ಯದೇವನು ಕುಂತಿಯ ನಾಭಿಯನ್ನು ಸ್ಪರ್ಶಮಾಡಿದನು. ಸೂರ್ಯನ ದಿವ್ಯತೇಜಸ್ಸನ್ನು ಸಹಿಸಲಾರದ ಕುಂತಿಯು ಮಂಕು ಹಿಡಿದವಳಂತಾದಳು. ಸ್ವಲ್ಪಕಾಲ ಪ್ರಜ್ಞಾಹೀನಳಾಗಿ ಪರ್ಯಂಕದ ಮೇಲೆ ಬಿದ್ದಿದ್ದಳು.

ಸಮಾಗಮದನಂತರದಲ್ಲಿ ಸೂರ್ಯನು ಎಚ್ಚರಗೊಂಡ ಕುಂತಿಯನ್ನು ಕುರಿತು ಹೇಳಿದನು : "ಸುಶ್ರೋಣಿ! ನಾನಿನ್ನು ಹೋಗಿಬರುತ್ತೇನೆ. ಶಸ್ತ್ರಾಸ್ತ್ರಗಳನ್ನು ತಿಳಿದವರಲ್ಲಿ ಅತ್ಯಂತಶ್ರೇಷ್ಠನೆನಿಸುವ ಪುತ್ರನನ್ನು ನೀನು ಪಡೆಯುವೆ ಮತ್ತು ನೀನು ಪುನಃ ಕನ್ಯೆಯಾಗಿಯೇ ಉಳಿಯುವೆ."

ಜನಮೇಜಯ! ಹೀಗೆಂದು ಹೇಳಿ ಹೊರಟುನಿಂತಿದ್ದ ಮಹಾ ತೇಜಸ್ವಿಯಾದ ಸೂರ್ಯದೇವನನ್ನು ಕುರಿತು ನಾಚಿಕೆಯಿಂದ ಕೂಡಿದ್ದ ಕುಂತಿಯು–"ಏವಮಸ್ತು" 'ನೀನು ಹೇಳಿದಂತೆಯೇ ಆಗಲಿ'–ಎಂದು ಮಾತ್ರ ಹೇಳಿದಳು.

ಮಹಾರಾಜ! ಈ ರೀತಿಯಾಗಿ ಕುಂತಿಭೋಜನ ಮಗಳಾದ ಕುಂತಿಯು ಸೂರ್ಯನನ್ನು ಕುರಿತು ಲಜ್ಜಾನ್ವಿತೆಯಾಗಿ ಪುತ್ರನನ್ನು ಯಾಚಿಸಿ ದಳು. ಸಮಾಗಮದ ಕಾಲದಲ್ಲಿ ಸೂರ್ಯನ ದಿವ್ಯತೇಜಸ್ಸನ್ನು ಸಹಿಸಿಕೊಳ್ಳ ಲಾರದೇ ಮೋಹಾವಿಷ್ಟಳಾಗಿ ಕತ್ತರಿಸಿಬಿದ್ದ ಲತೆಯೋಪಾದಿಯಲ್ಲಿ ಪರ್ಯಂಕದ ಮೇಲೆ ಬಿದ್ದಿದ್ದಳು.

**ತಿಗ್ಮಾಂಶುಸ್ತಾಂ ತೇಜಸಾ ಮೋಹಯಿತ್ವಾ**
**ಯೋಗೇನಾವಿಶ್ಯಾತ್ಮಸಂಸ್ಥಾಂ ಚಕಾರ ।**
**ನ ಚೈವೈನಾಂ ದೂಷಯಾಮಾಸ ಭಾನುಃ**
**ಸಂಜ್ಞಾಂ ಲೇಭೇ ಭೂಯ ಏವಾಥ ಬಾಲಾ ॥೨೩॥**

ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯದೇವನು ತನ್ನ ಅಪಾರವಾದ ತೇಜಸ್ಸಿನಿಂದ ಕುಂತಿಯನ್ನು ಮೋಹಪರವಶಳನ್ನಾಗಿಮಾಡಿ ಯೋಗಬಲದಿಂದ ಕುಂತಿಯ ಗರ್ಭದಲ್ಲಿ ತನ್ನ ಆತ್ಮವನ್ನು ಪ್ರತಿಷ್ಠಾಪಿಸಿದನೇ ಹೊರತು ಸುರತಕ್ರಿಯೆಯಿಂದ ಪ್ರತಿಷ್ಠಾಪಿಸಲಿಲ್ಲ. ಇದರಿಂದಾಗಿ ಕುಂತಿಗೆ ಪರಪುರುಷ ಸಮಾಗಮದ ದೋಷವೂ ಉಂಟಾಗಲಿಲ್ಲ. ಸೂರ್ಯನು ಹೊರಟುಹೋದ ಸ್ವಲ್ಪಹೊತ್ತಿನಲ್ಲಿಯೇ ಬಾಲೆಯಾದ ಕುಂತಿಯು ಪ್ರಜ್ಞಾವಂತಳಾದಳು.

ಇ೦೭ನೆಯ ಅಧ್ಯಾಯವು ಮುಗಿಯಿತು.

ಇ೦೮ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ.)

## ಕರ್ಣನ ಜನ್ಮ : ಕುಂತಿಯು ಮಗುವನ್ನು ಪೆಟ್ಟಿಗೆಯಲ್ಲಿಟ್ಟು ತೇಲಿಬಿಟ್ಟುದು : ಕುಂತಿಯ ದುಃಖ

ಜನಮೇಜಯ! ಅಂತರಿಕ್ಷದಲ್ಲಿ ಚಂದ್ರನು ಉದಯಿಸುವಂತೆ ಸೂರ್ಯನ ಅನುಗ್ರಹದಿಂದಾಗಿ *ಮಾಘಶುದ್ಧ ಪ್ರಥಮೆಯ ದಿನ ಕುಂತಿಯ ಉದರದಲ್ಲಿ ಸೂರ್ಯನಿಂದ ಗರ್ಭವು ಸ್ಥಾಪಿತವಾಯಿತು. ಬಂಧುಗಳು

---

* ಶುಕ್ಲೇ ದಶೋತ್ತರೇ ಪಕ್ಷೇ–ಎಂದು ಪಾಠವಿದೆ. ನಾವಿದಕ್ಕೆ ಮಾಘಶುದ್ಧ ಪ್ರಥಮೆ ಎಂದು ಅರ್ಥಮಾಡಿರುತ್ತೇವೆ. ದಶೋತ್ತರವಾದುದು ಅಥವಾ ಹತ್ತು ಸಂಖ್ಯೆಯ ನಂತರ ಬರುವುದು ಹನ್ನೊಂದು. ಹನ್ನೊಂದನೆಯ ತಿಂಗಳೆಂದು ಅರ್ಥವಾಗುತ್ತದೆ. ಚೈತ್ರದಿಂದ ಹನ್ನೊಂದನೆಯ ಮಾಸ ಮಾಘವಾಗುತ್ತದೆ. ಆದರೆ ಹಿಂದೆ ಮಾರ್ಗಶೀರ್ಷಮಾಸದಿಂದ ವರ್ಷವು ಆರಂಭವಾಗುತ್ತಿತ್ತೆಂಬುದಕ್ಕೆ ಆಧಾರವು ಸಿಕ್ಕುತ್ತದೆ. ಶ್ರೀಕೃಷ್ಣನೂ ಗೀತೆಯಲ್ಲಿ 'ಮಾಸಾನಾಂ ಮಾರ್ಗಶೀರ್ಷೋಽಹಂ' ಎಂಬುದಾಗಿ ಹೇಳಿದ್ದಾನೆ. ಮಾರ್ಗಶೀರ್ಷವನ್ನೇ ವರ್ಷದ ಮೊದಲನೆಯ ತಿಂಗಳೆಂದು ಭಾವಿಸುವುದಾದರೆ ಆಶ್ವಯುಜಮಾಸವು ಹನ್ನೊಂದನೆಯದಾಗುತ್ತದೆ.

ನಿಂದೆಮಾಡಿಯಾರೆಂಬ ಭಯದಿಂದಾಗಿ ಬಾಲೆಯಾದ ಕುಂತಿಯು ತಾನು ಗರ್ಭವತಿಯಾಗಿರುವುದನ್ನು ಯಾರೊಡನೆಯೂ ಹೇಳಲಿಲ್ಲ ; ಯಾರಿಗೂ ಆ ವಿಷಯವು ತಿಳಿಯಲೂ ಇಲ್ಲ. ಯಾವಾಗಲೂ ಅಂತಃಪುರದಲ್ಲಿಯೇ ಇರುತ್ತಿದ್ದ ಕುಂತಿಯು ಬಹುಚತುರತೆಯಿಂದ ತಾನು ಗರ್ಭವತಿಯಾಗಿರುವುದನ್ನು ಮರೆಮಾಚಿದ್ದಳು. ಆದರೆ ಒಬ್ಬಳೇ ಒಬ್ಬ ಸೇವಕಿಗೆ ಮಾತ್ರ ಆ ವಿಷಯವು ತಿಳಿದಿದ್ದಿತು. ನವಮಾಸವು ತುಂಬಿದನಂತರ ವರವರ್ಣಿನಿಯಾದ, ಕನ್ಯೆಯಾದ ಕುಂತೀದೇವಿಯು ಸೂರ್ಯದೇವನ ಅನುಗ್ರಹದಿಂದಾಗಿ ಅಮರ ಪ್ರಭನಾದ ಶಿಶುವಿಗೆ ಜನ್ಮವಿತ್ತಳು. ತಂದೆಯಾದ ಸೂರ್ಯದೇವನಂತೆಯೇ ಸ್ವರ್ಣಮಯವಾದ ಕರ್ಣಕುಂಡಲಗಳಿಂದಲೂ, ಕವಚದಿಂದಲೂ ಕೂಡಿದ್ದ ಆ ಶಿಶುವಿನ ಅವಯವಗಳೆಲ್ಲವೂ ಸಾಮಾನ್ಯವಾಗಿ ಸೂರ್ಯನ ಅವಯವಗಳನ್ನೇ ಹೋಲುತ್ತಿದ್ದುವು. ಶಿಶುವು ಹುಟ್ಟಿದೊಡನೆಯೇ ಕುಂತಿಯು ತನ್ನ ದಾಸಿಯೊಡನೆ ಸಮಾಲೋಚಿಸಿ ಒಂದು ಪೆಟ್ಟಿಗೆಯನ್ನು ತರಿಸಿದಳು. ಅದರಲ್ಲಿದ್ದ ರಂಧ್ರಗಳೆಲ್ಲವನ್ನೂ ಜೇನುಮೇಣದಿಂದ ಮುಚ್ಚಿದಳು. ಅದರ ಒಳಭಾಗದಲ್ಲಿ ಬಹಳ ನುಣುಪಾದ ಮೆತ್ತೆಯನ್ನು ಹಾಸಿದಳು. ಹುಟ್ಟಿದ ಮಗುವನ್ನು ಅದರಲ್ಲಿ ಮಲಗಿಸಿದಳು. ಪೆಟ್ಟಿಗೆಯ ಮೇಲ್ಭಾಗದಿಂದ ಗಾಳಿಯಾಡಲು ಅವಕಾಶವಿದ್ದಿತು. ಪೆಟ್ಟಿಗೆಯು ನೀರಿನಲ್ಲಿ ಮುಳುಗದಂತೆ ಪೆಟ್ಟಿಗೆಯ ಕೆಳಭಾಗಕ್ಕೆ ಬೆಂಡನ್ನು ಜೋಡಿಸಲಾಯಿತು. ಮಗುವು ಎಲ್ಲಿಯಾದರೂ ಬದುಕಿಕೊಳ್ಳಲಿ ಎಂಬ ಆಶಯದಿಂದ ಕುಂತಿಯು ದಾಸಿಯೊಡನೆ ಸಮಾಲೋಚಿಸಿ ಬಹಳ ಜಾಗರೂಕತೆಯಿಂದ ಪೆಟ್ಟಿಗೆಯನ್ನು ಸಿದ್ಧಗೊಳಿಸಿದ್ದಳು. ಮಗುವನ್ನು ಪೆಟ್ಟಿಗೆಯಲ್ಲಿಡುತ್ತಿದ್ದಾಗ ಕುಂತಿಯ ಕಣ್ಣುಗಳಿಂದ ಕಂಬನಿಯು ಪ್ರವಾಹರೂಪವಾಗಿ ಹರಿಯತೊಡಗಿತು. ಪೆಟ್ಟಿಗೆಯನ್ನು 'ಅಶ್ವಾ' ಎಂಬ ನದಿಗೆ ತೆಗೆದುಕೊಂಡು ಹೋಗಿ ದಾಸಿಯ ಸಹಾಯದಿಂದ ನದಿಯಲ್ಲಿ ತೇಲಿಬಿಟ್ಟಳು.

ಮದುವೆಯಾಗದ ಕನ್ಯೆಯು ಮಕ್ಕಳನ್ನು ಪಡೆಯಬಾರದೆಂಬ ವಿಷಯವು ಕುಂತಿಗೆ ಸಂಪೂರ್ಣವಾಗಿ ತಿಳಿದಿತ್ತು. ಮದುವೆಯಾಗದ ಕನ್ಯೆಗೆ ಮಗುವಾಗಿದೆಯೆಂಬ ಜನಾಪವಾದವನ್ನು ತಪ್ಪಿಸಿಕೊಳ್ಳುವ ಸಲು

ವಾಗಿಯೇ ಕುಂತಿಯು ಮಗುವನ್ನು ನದಿಯಲ್ಲಿ ತೇಲಿಬಿಡಲು ನಿಶ್ಚಯಿಸಿದಳು. ಆದರೂ ಮಾತೃಪ್ರೇಮವು ಕುಂತಿಯನ್ನು ಬಾಧಿಸದಿರಲಿಲ್ಲ. ಪೆಟ್ಟಿಗೆಯನ್ನು ನೋಡಿ ನೋಡಿ ಗಳ-ಗಳನೆ ಅಳುತ್ತಿದ್ದಳು. ಪೆಟ್ಟಿಗೆಯನ್ನು ನೀರಿಗೆ ಬಿಡುತ್ತಿದ್ದಾಗ ಕುಂತಿಯು ಪುತ್ರಪ್ರೇಮದಿಂದ ಆಕರ್ಷಿತಳಾಗಿ ಹೇಗೆ ಹಲುಬಿದಳೆಂಬುದನ್ನು ಹೇಳುವೆನು ಕೇಳು, ಜನಮೇಜಯ!



ಸ್ವಸ್ತಿ ತೇ ಚಾನ್ತರಿಕ್ಷೇಭ್ಯಃ ಪಾರ್ಥಿವೇಭ್ಯಶ್ಚ ಪುತ್ರಕ ।
ದಿವ್ಯೇಭ್ಯಶ್ಚೈವ ಭೂತೇಭ್ಯಸ್ತಥಾ ತೋಯಚರಾಶ್ಚ ಯೇ ॥೧೦॥

ಶಿವಾಸ್ತೇ ಸನ್ತು ಪನ್ಥಾನೋ ಮಾ ಚ ತೇ ಪರಿಪನ್ಥಿನಃ ।
ಆಗತಾಶ್ಚ ತಥಾ ಪುತ್ರ ಭವನ್ತ್ವದ್ರೋಹಚೇತಸಃ ॥೧೧॥

ಪಾತು ತ್ವಾಂ ವರುಣೋ ರಾಜಾ ಸಲಿಲೇ ಸಲಿಲೇಶ್ವರಃ ।
ಅಂತರಿಕ್ಷೇಽನ್ತರಿಕ್ಷಸ್ಥಃ ಪವನಃ ಸರ್ವಗಸ್ತಥಾ ॥೧೨॥

ಪಿತಾ ತ್ವಾಂ ಪಾತು ಸರ್ವತ್ರ ತಪನಸ್ತಪತಾಂ ವರಃ ।
ಯೇನ ದತ್ತೋಽಸಿ ಮೇ ಪುತ್ರ ದಿವ್ಯೇನ ವಿಧಿನಾ ಕಿಲ ॥೧೩॥

ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿಶ್ವೇ ಚ ದೇವತಾಃ ।
ಮರುತಶ್ಚ ಸಹೇನ್ದ್ರೇಣ ದಿಶಶ್ಚ ಸದಿಗೀಶ್ವರಾಃ ॥೧೪॥

ರಕ್ಷನ್ತು ತ್ವಾಂ ಸುರಾಃ ಸರ್ವೇ ಸಮೇಷು ವಿಷಮೇಷು ಚ ।
ವೇತ್ಸ್ಯಾಮಿ ತ್ವಾಂ ವಿದೇಶೇಽಪಿ ಕವಚೇನಾಭಿಸೂಚಿತಮ್ ॥೧೫॥

ಧನ್ಯಸ್ತೇ ಪುತ್ರ ಜನಕೋ ದೇವೋ ಭಾನುರ್ವಿಭಾವಸುಃ ।
ಯಸ್ತ್ವಾಂ ದ್ರಕ್ಷ್ಯತಿ ದಿವ್ಯೇನ ಚಕ್ಷುಷಾ ವಾಹಿನೀಗತಮ್ ॥೧೬॥

ಧನ್ಯಾ ಸಾ ಪ್ರಮದಾ ಯಾ ತ್ವಾಂ ಪುತ್ರತ್ವೇ ಕಲ್ಪಯಿಷ್ಯತಿ ।
ಯಸ್ಯಾಸ್ತ್ವಂ ತೃಷಿತಃ ಪುತ್ರ ಸ್ತನಂ ಪಾಸ್ಯಸಿ ದೇವಜ ॥೧೭॥

ಕೋ ನು ಸ್ವಪ್ನಸ್ತಯಾ ದೃಷ್ಟೋ ಯಾ ತ್ವಾಮಾದಿತ್ಯವರ್ಚಸಮ್
ದಿವ್ಯವರ್ಮಸಮಾಯುಕ್ತಂ ದಿವ್ಯಕುಣ್ಡಲಭೂಷಿತಮ್ ॥೧೮॥

ಪದ್ಮಾಯತವಿಶಾಲಾಕ್ಷಂ ಪದ್ಮತಾಮ್ರದಲೋಜ್ಜ್ವಲಮ್ ।
ಸುಲಲಾಟಂ ಸುಕೇಶಾನ್ತಂ ಪುತ್ರತ್ವೇ ಕಲ್ಪಯಿಷ್ಯತಿ ॥೧೯॥

ಧನ್ಯಾ ದ್ರಕ್ಷ್ಯನ್ತಿ ಪುತ್ರ ತ್ವಾಂ ಭೂಮೌ ಸಂಸರ್ಪಮಾಣಕಮ್ ।
ಅವ್ಯಕ್ತಕಲವಾಕ್ಯಾನಿ ವದನ್ತಂ ರೇಣುಗುಣ್ಠಿತಮ್ ॥೨೦॥

ಧನ್ಯಾ ದ್ರಕ್ಷ್ಯನ್ತಿ ಪುತ್ರ ತ್ವಾಂ ಪುನರ್ಯೌವನಗೋಚರಮ್ ।
ಹಿಮವದ್ವನಸಮ್ಭೂತಂ ಸಿಂಹಂ ಕೇಸರಿಣಂ ಯಥಾ ॥೨೧॥

"ಮಗುವೇ! ಅಂತರಿಕ್ಷದಲ್ಲಿರುವವರಿಂದ ನಿನಗೆ ಮಂಗಳವಾಗಲಿ. ಭೂಮಿಯ ಮೇಲಿರುವವರಿಂದ ನಿನಗೆ ಮಂಗಳವಾಗಲಿ. ಸ್ವರ್ಗವಾಸಿಗಳಿಂದ

ನಿನಗೆ ಮಂಗಳವಾಗಲಿ. ಜಲಚರಪ್ರಾಣಿಗಳಿಂದ ನಿನಗೆ ಮಂಗಳವಾಗಲಿ. ನೀನು ಹೋಗುವ ಹಾದಿಯು ನಿನಗೆ ಶುಭವಾಗಿರಲಿ. ಮಾರ್ಗದಲ್ಲಿ ನಿನಗೆ ಶತ್ರುಗಳಿಲ್ಲದಿರಲಿ. (ಯಾವ ಪ್ರಾಣಿಗಳಿಂದಲೂ ನಿನಗೆ ತೊಂದರೆಯಾಗ ದಿರಲಿ.) ವಿಧಿನಿಯಮದಂತೆ ನೀನು ತಲುಪಬೇಕಾಗಿರುವ ಸ್ಥಳಕ್ಕೆ ಹೋಗುವ ವರೆಗೂ ಯಾರೂ ನಿನ್ನನ್ನು ತಡೆಯದಿರಲಿ. ಒಂದು ವೇಳೆ ಮಾರ್ಗಮಧ್ಯದಲ್ಲಿ ಯಾರಾದರೂ ನಿನ್ನನ್ನು ನೋಡಿದರೂ ಅವರಿಗೆ ನಿನ್ನ ವಿಷಯದಲ್ಲಿ ಅನುಕಂಪವುಂಟಾಗಲಿ. ನಿನಗೆ ತೊಂದರೆಮಾಡುವ ಬುದ್ಧಿಯು ಅವರಿಗೆ ಹುಟ್ಟದಿರಲಿ. ನೀರಿನಲ್ಲಿ ತೇಲಿಹೋಗುತ್ತಿರುವಾಗ ನಿನ್ನನ್ನು ನೀರಿನ ಅಧಿಪತಿಯಾದ ವರುಣನೇ ಕಾಪಾಡಲಿ. ಅಂತರಿಕ್ಷದಲ್ಲಿರುವ ವಾಯುವು ನಿನ್ನನ್ನು ಅಂತರಿಕ್ಷದ ದೆಸೆಯಿಂದ ಬರಬಹುದಾದ ಅಪಾಯಗಳಿಂದ ಪಾರು ಮಾಡಲಿ. ತಾಪವನ್ನುಂಟುಮಾಡುವವರಲ್ಲಿ ಶ್ರೇಷ್ಠನಾದ, ನಿನ್ನ ತಂದೆಯಾದ ಸೂರ್ಯನು ನಿನ್ನನ್ನು ಸರ್ವತ್ರ ಕಾಪಾಡಲಿ. ದೈವವಿಧಾನದಿಂದಲೇ ನೀನು ಅವನಿಂದ ನನ್ನಲ್ಲಿ ಜನ್ಮತಾಳಿರುವೆ.

ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಸಾಧ್ಯರು, ವಿಶ್ವೇದೇವತೆಗಳು, ಇಂದ್ರಸಮೇತರಾದ ಸಪ್ತಮರುತ್ತುಗಳು, ದಶದಿಕ್ಕುಗಳು ಮತ್ತು ದಿಕ್ಪಾಲಕರುಗಳು–ನಿನ್ನನ್ನು ಎಲ್ಲ ಸಮಯಗಳಲ್ಲಿಯೂ ರಕ್ಷಿಸಲಿ. ನದಿಯು ಗಂಭೀರವಾಗಿ ಹರಿಯುತ್ತಿರುವಾಗಲೂ–ಕೆಲವೆಡೆಗಳಲ್ಲಿ ವೇಗವಾಗಿ ಪ್ರವಹಿಸುವಾಗಲೂ, ಸಮಸ್ಥಳಗಳಲ್ಲಿಯೂ, ಕಲ್ಲುಬಂಡೆಗಳಿಂದ ಕೂಡಿರುವ ವಿಷಮಸ್ಥಳಗಳಲ್ಲಿಯೂ ನಿನ್ನನ್ನು ರಕ್ಷಿಸಲಿ. ನೀನು ಅಮೃತಮಯವಾದ ಕವಚವನ್ನೂ ಮತ್ತು ಕರ್ಣಕುಂಡಲಗಳನ್ನೂ ಧರಿಸಿರುವುದರಿಂದ ನೀನು ಯಾವ ದೇಶದಲ್ಲಿಯೇ ಇದ್ದರೂ ನಿನ್ನನ್ನು ನಾನು ತಿಳಿಯುವೆನು. ನಿನ್ನ ತಂದೆಯಾದ ಸೂರ್ಯನು ನಿಶ್ಚಯವಾಗಿಯೂ ಧನ್ಯನೇ ಸರಿ. ಏಕೆಂದರೆ : ನದಿಯಲ್ಲಿ ದೋಣಿಯ ರೂಪವಾದ ಈ ಪೆಟ್ಟಿಗೆಯಲ್ಲಿ ತೇಲಿಹೋಗುತ್ತಿರುವ ನಿನ್ನನ್ನವನು ದಿವ್ಯದೃಷ್ಟಿಯಿಂದ ನೋಡುತ್ತಲೇ ಇರುತ್ತಾನೆ.

ದೇವಪುತ್ರ! ನಿನ್ನನ್ನು ರಕ್ಷಿಸಲಿರುವ ಮತ್ತು ನಿನಗೆ ಹಸಿವಾದಾಗ

ಸ್ತನ್ಯವನ್ನು ಕೊಡಲಿರುವ ಆ ನಿನ್ನ ಸಾಕುತಾಯಿಯೂ ಧನ್ಯಳೇ ಸರಿ. ಈ ವೇಳೆಗಾಗಲೇ ಆ ಮಹಾತಾಯಿಗೆ ಕನಸೂ ಆಗಿರಬಹುದು. ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ, ದಿವ್ಯಕರ್ಣಕುಂಡಲ-ಕವಚಧರನಾದ, ಕಮಲದಂತೆ ವಿಶಾಲವಾದ ನೇತ್ರದ್ವಯವುಳ್ಳ, ಪದ್ಮದ ಎಸಳಿನಂತೆ ನಸುಗೆಂಪಾದ ಶರೀರಕಾಂತಿಯುಳ್ಳ, ಸುಂದರವಾದ ಹಣೆಯಿಂದ ಕೂಡಿದ ಮತ್ತು ಗುಂಗುರುಕೂದಲಿನಿಂದ ಕೂಡಿರುವ ನಿನ್ನನ್ನಾಗಲೇ ಅವಳು ತನ್ನ ಕನಸಿನಲ್ಲಿ ಕಂಡಿರಲೂಬಹುದು.

ಮಗುವೇ! ತೊದಲ್ನುಡಿಗಳನ್ನಾಡುತ್ತಾ, ಅಂಬೆಗಾಲಿಕ್ಕುತ್ತಾ ಧೂಳಿನಲ್ಲಿ ಆಡುತ್ತಿರುವ ನಿನ್ನನ್ನು ನೋಡುತ್ತಾ ನಲಿಯುವ ನಿನ್ನ ಸಾಕುತಾಯಿ-ತಂದೆಗಳು ನಿಶ್ಚಯವಾಗಿಯೂ ಧನ್ಯರು. ನೀನು ಪ್ರೌಢನಾದ ಮೇಲೆ ಹಿಮಾಲಯದ ಕಾಡಿನಲ್ಲಿರುವ ಸಿಂಹದಂತೆ ಹೆಜ್ಜೆಯಿಡುತ್ತಾ ಬರುವುದನ್ನು ನೋಡಿ ಆನಂದಿಸುವ ಆ ನಿನ್ನ ತಾಯಿ-ತಂದೆ ಮೊದಲಾದವರು ನಿಶ್ಚಯವಾಗಿಯೂ ಧನ್ಯರೇ ಸರಿ.”

ಜನಮೇಜಯ! ಕುಂತಿಯು ಹೀಗೆ ಹೇಳಿಕೊಂಡು ರೋದನ ಮಾಡುತ್ತಾ, ಕ್ಷಣ-ಕ್ಷಣಕ್ಕೂ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಬಹು ಕಷ್ಟದಿಂದ ಪೆಟ್ಟಿಗೆಯನ್ನು ನದಿಯಲ್ಲಿ ತೇಲಿಬಿಟ್ಟಳು.

ತಾನೇ ಪ್ರಸವಿಸಿದ ಮಗುವನ್ನು ಹೊಳೆಯಲ್ಲಿ ತೇಲಿಬಿಡುವುದು ಸಾಮಾನ್ಯವಾದ ಕಾರ್ಯವಲ್ಲ. ಆ ಸಮಯದಲ್ಲಿ ಕುಂತಿಗಾದ ದುಃಖವನ್ನು ವರ್ಣಿಸುವ ಸಾಧ್ಯತೆಯೇ ಇಲ್ಲ. ಮಗುವು ಜೀವಂತವಾಗಿಯೇ ಉಳಿಯುವುದೆಂದು ಕುಂತಿಯು ದೃಢವಾಗಿ ನಂಬಿದ್ದಳು. ಹುಟ್ಟಿರುವವನು ಸಾಕ್ಷಾತ್ ಸೂರ್ಯದೇವನ ಪುತ್ರನೆಂಬುದೂ, ಅಮೃತಮಯವಾದ ಕರ್ಣಕುಂಡಲ-ಕವಚಗಳನ್ನು ಧರಿಸಿದವನೆಂಬುದೂ ಆ ನಂಬಿಕೆಗೆ ಕಾರಣವಾಗಿತ್ತು. ಅತ್ಯಂತ ಶ್ರಮದಿಂದ ಗರ್ಭವನ್ನು ಗೋಪ್ಯವಾಗಿಟ್ಟುಕೊಂಡಿದ್ದಳೇ ಹೊರತು ಹುಟ್ಟಿದ ಮಗುವನ್ನು ಗೋಪ್ಯವಾಗಿಟ್ಟು ಕಾಪಾಡುವ ಸಾಧ್ಯತೆಯಿರಲಿಲ್ಲ. ದಾಸಿಯೊಡನೆ ಅರ್ಧರಾತ್ರಿಯಲ್ಲಿ ಅಶ್ವಾನದಿಗೆ ತೆರಳಿ ಮಗುವನ್ನು ತೇಲಿಬಿಟ್ಟಳು. ಹಗಲಿನಲ್ಲಿ ಆ ಕಾರ್ಯವನ್ನು ಮಾಡುವ ಸಾಧ್ಯತೆಯಿರಲಿಲ್ಲ.

ತೇಲಿಹೋಗುತ್ತಿದ್ದ ಮಗುವನ್ನು ನೋಡಿ ದುಃಖವನ್ನು ತಡೆಯಲಾರದೇ ಹೋದಳು. ಬಂಧುಗಳಾರಾದರೂ ನೋಡಿಯಾರೆಂಬ ಭೀತಿಯಿಂದ ಹೆಚ್ಚು ಕಾಲ ಅಲ್ಲಿ ನಿಲ್ಲುವಂತೆಯೂ ಇರಲಿಲ್ಲ. ತನ್ನ ದಾಸಿಯೊಡನೆ ಒಡನೆಯೇ ಅರಮನೆಗೆ ಬಂದು ಸೇರಿಕೊಂಡಳು.

ಉಪನದಿಯಾದ ಅಶ್ವಾನದಿಯಲ್ಲಿ ತೇಲಿಕೊಂಡು ಹೋಗುತ್ತಿದ್ದ ಪೆಟ್ಟಿಗೆಯು ಯಮುನಾನದಿಯ ಉಪನದಿಯಾದ ಚರ್ಮಣ್ವತಿಯನ್ನು ಸೇರಿತು. ಚರ್ಮಣ್ವತಿಯ ಸಂಗಮದವರೆಗೆ ತೇಲಿಕೊಂಡು ಬಂದು ಪೆಟ್ಟಿಗೆಯು ಯಮುನೆಯನ್ನೂ ಸೇರಿತು.

ಯಮುನಾನದಿಯಲ್ಲಿ ಸ್ವಲ್ಪದೂರದವರೆಗೂ ತೇಲುತ್ತಾ ಹೋಗಿ ಗಂಗಾ ನದಿಯನ್ನು ಸೇರಿತು. ಗಂಗಾನದಿಯ ತೆರೆಗಳಿಂದ ಒಯ್ಯಲ್ಪಟ್ಟ ಪೆಟ್ಟಿಗೆಯು ಸೂತರ ಆಳ್ವಿಕೆಗೆ ಒಳಪಟ್ಟಿದ್ದ 'ಚಂಪಾ' ಎಂಬ ಪಟ್ಟಣದ ತೀರಪ್ರದೇಶಕ್ಕೆ ಹೋಯಿತು. ಶಿಶುವು ಅಮೃತಮಯವಾದ ಕುಂಡಲಗಳನ್ನೂ-ಕವಚವನ್ನೂ ಧರಿಸಿದ್ದುದರಿಂದಲೂ, ವಿಧಿಯ ನಿಯಮದಂತೆಯೂ ಅಷ್ಟುದೂರದವರೆಗೆ ಎರಡು-ಮೂರು ನದಿಗಳಲ್ಲಿ ಪೆಟ್ಟಿಗೆಯು ತೇಲಿಬಂದರೂ ಪೆಟ್ಟಿಗೆಯಲ್ಲಿದ್ದ ಮಗುವು ಸಜೀವವಾಗಿಯೇ ಉಳಿದಿತ್ತು.

ಇ೦೮ನೆಯ ಅಧ್ಯಾಯವು ಮುಗಿಯಿತು.

೩೦೯ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ.)

## ಅಧಿರಥನಿಗೆ ಪೆಟ್ಟಿಗೆಯು ಸಿಕ್ಕಿದುದು : ರಾಧೆಯು ಕರ್ಣನನ್ನು ಪಾಲಿಸಿ-ಪೋಷಿಸಿದುದು : ಹಸ್ತಿನಾಪಟ್ಟಣದಲ್ಲಿ ಕರ್ಣನ ವಿದ್ಯಾಭ್ಯಾಸ : ಕರ್ಣನ ಬಳಿಗೆ ಇಂದ್ರನ ಆಗಮನ

ಜನಮೇಜಯ! ನಾನು ಹಿಂದೆ ಹೇಳಿದಂತೆ ಮಗುವಿದ್ದ ಪೆಟ್ಟಿಗೆಯು ಚಂಪಾಪಟ್ಟಣದ ಬಳಿಗೆ ತೇಲಿಬಂದಿತು. ಆ ವೇಳೆಗೆ ಸರಿಯಾಗಿ ಧೃತರಾಷ್ಟ್ರನ ಮಿತ್ರನಾದ ಅಧಿರಥನೆಂಬ ಸೂತನು ಪತ್ನೀಸಮೇತನಾಗಿ ಪುಣ್ಯಕಾಲದ ಸ್ನಾನಮಾಡಲು ಗಂಗಾನದಿಗೆ ಆಗಮಿಸಿದನು. ಅಧಿರಥನ ಪತ್ನಿಯಾದ ಪರಮಸೌಭಾಗ್ಯವತಿಯಾದ ರಾಧೆಯು ಪೃಥ್ವಿಯಲ್ಲಿಯೇ

ಅನುಪಮಸುಂದರಿಯಾಗಿದ್ದಳು. ಆದರೆ ಆ ದಂಪತಿಗಳಿಗೆ ಮಕ್ಕಳಿರಲಿಲ್ಲ. ಮಕ್ಕಳಾಗಬೇಕೆಂಬ ಆಶಯದಿಂದ ಪೂಜಾ-ಪುರಸ್ಕಾರಗಳು, ತೀರ್ಥಯಾತ್ರೆ– ಇತ್ಯಾದಿ ಅನೇಕ ವಿಧವಾದ ಆಚರಣೆಗಳನ್ನು ರಾಧೆಯು ಮಾಡುತ್ತಿದ್ದಳು. ಆದರೂ ಪುತ್ರಫಲವು ಲಭ್ಯವಾಗಿರಲಿಲ್ಲ. ಅವಳು ಗಂಗಾನದಿಗೆ ತನ್ನ ಪತಿಯೊಡನೆ ಆಗಮಿಸಿದ್ದ ಕಾಲಕ್ಕೆ ಸರಿಯಾಗಿ ಪೆಟ್ಟಿಗೆಯು ತಾನಾಗಿಯೇ ಅವಳ ಸಮೀಪಕ್ಕೆ ತೇಲಿಬಂದಿತು.

ಜನಮೇಜಯ! ಹಿಂದೆಯೇ ಹೇಳಿದಂತೆ ಪೆಟ್ಟಿಗೆಯು ಅಷ್ಟು ದೂರದವರೆಗೆ ತೇಲಿಬಂದರೂ ಮಗುವು ಸುರಕ್ಷಿತವಾಗಿದ್ದಿತು. ಗಂಗಾನದಿಯ ಅಲೆಗಳಿಂದ ಒಯ್ಯಲ್ಪಟ್ಟ ಪೆಟ್ಟಿಗೆಯು ರಾಧೆಯ ಸಮೀಪಕ್ಕೆ ಆಗಮಿಸಲು, ಕುತೂಹಲಯುಕ್ತಳಾದ ರಾಧೆಯು ಆ ಪೆಟ್ಟಿಗೆಯನ್ನು ತನ್ನ ಸೇವಕರ ಮೂಲಕವಾಗಿ ನದಿಯಿಂದ ದಡಕ್ಕೆ ತರಿಸಿ, ಅನತಿದೂರದಲ್ಲಿದ್ದ ಗಂಡನ ಸಮೀಪಕ್ಕೆ ಹೋಗಿ ಎಲ್ಲವನ್ನೂ ವಿವರಿಸಿ ಹೇಳಿದಳು. ರಾಧೆಯಂತೆಯೇ ಅಧಿರಥನೂ ಕುತೂಹಲಾವಿಷ್ಟನಾಗಿ ನದಿಯ ದಡದಲ್ಲಿದ್ದ ಪೆಟ್ಟಿಗೆಯನ್ನು ಮೇಲಕ್ಕೆತಂದು ಮುಚ್ಚಳವನ್ನು ತೆಗೆಯುವ ಸಾಧನಗಳಿಂದ ಬಹುಜೋಪಾನವಾಗಿ ಮುಚ್ಚಳವನ್ನು ತೆಗೆದನು.

ಪೆಟ್ಟಿಗೆಯ ಒಳಗಿದ್ದ ಮಗುವನ್ನು ನೋಡಿದೊಡನೆಯೇ ಅಧಿರಥನ ಕಣ್ಣುಗಳು ಅರಳಿದುವು. ಬಾಲಸೂರ್ಯನಂತೆ ಬಹುಪ್ರಕಾಶಮಾನವಾಗಿದ್ದ ಶಿಶುವನ್ನು ಅಧಿರಥನು ಆ ಪೆಟ್ಟಿಗೆಯೊಳಗೆ ಕಂಡನು. ಆ ಶಿಶುವು ಸ್ವರ್ಣಮಯವಾದ ಕವಚದಿಂದ ಆಚ್ಛಾದಿತವಾಗಿತ್ತಲ್ಲದೇ, ಅದರ ಎರಡು ಕಿವಿಗಳಲ್ಲಿಯೂ ಪ್ರಕಾಶಮಾನವಾಗಿದ್ದ ಕುಂಡಲಗಳೂ ಇದ್ದುವು. ದಂಪತಿಗಳಿಗೆ ಆ ಶಿಶುವನ್ನು ನೋಡಿ ಬಹಳ ಅಚ್ಚರಿಯಾಯಿತು. ಅಂತೆಯೇ ಅವರು ಆ ಶಿಶುವನ್ನು ಬಹಳ ಹೊತ್ತಿನವರೆಗೆ ಎವೆಯಿಕ್ಕದೇ ಅರಳಿದ ಕಣ್ಣುಗಳಿಂದ ನೋಡುತ್ತಲೇ ಇದ್ದರು.

ಅನಂತರದಲ್ಲಿ ಅಧಿರಥನು ಪೆಟ್ಟಿಗೆಯಿಂದ ಮಗುವನ್ನು ಮೆಲ್ಲನೆ ಎತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ಪತ್ನಿಗೆ ಹೇಳಿದನು : “ಪ್ರಿಯಳೇ! ಹುಟ್ಟಿದಾಗಿನಿಂದಲೂ ಇಂತಹ ಮಗುವನ್ನೇ ನಾನು ಕಂಡಿರಲಿಲ್ಲ.

ನಿಶ್ಚಯವಾಗಿಯೂ ಈ ಶಿಶುವು ದೇವಶಿಶುವೇ ಆಗಿರಬಹುದು. ನಮ್ಮ ಸಲುವಾಗಿಯೇ ಈ ಮಗುವು ಇಲ್ಲಿಗೆ ಕಳುಹಿಸಲ್ಪಟ್ಟಿರಬಹುದು. ನಾವು ಮಕ್ಕಳಿಲ್ಲದವರಾಗಿರುವುದರಿಂದಲೂ ಮತ್ತು ಮಕ್ಕಳನ್ನು ಪಡೆಯಲೋಸುಗ ಅನೇಕ ವ್ರತಾನುಷ್ಠಾನಗಳನ್ನು ಮಾಡುತ್ತಿರುವುದರಿಂದಲೂ ಸುಪ್ರೀತರಾದ ದೇವತೆಗಳೇ ಈ ಮಗುವನ್ನು ನಮಗೆ ಅನುಗ್ರಹಿಸಿರುತ್ತಾರೆ"–ಹೀಗೆಂದು ಹೇಳುತ್ತಾ ಅಧಿರಥನು ಶಿಶುವನ್ನು ರಾಧೆಗೊಪ್ಪಿಸಿದನು. ದಿವ್ಯರೂಪವನ್ನು



ಹೊಂದಿದ್ದ, ಕಮಲಪುಷ್ಪದೊಳಗಿರುವ ರೇಣುವಿನಂತೆ ಶರೀರಕಾಂತಿಯನ್ನು ಹೊಂದಿದ್ದ, ದೇವತೆಯ ಅನುಗ್ರಹದಿಂದಲೇ ಜನ್ಮತಾಳಿದ್ದ, ತೇಜಃಪುಂಜ ಯುಕ್ತವಾದ ಶಿಶುವನ್ನು ರಾಧೆಯು ವಿಧಿಪೂರ್ವಕವಾಗಿ ದತ್ತಕರೂಪದಲ್ಲಿ

ದೇವದತ್ತವೆಂದು ಸ್ವೀಕರಿಸಿದಳು. ಬಹಳ ಅಕ್ಕರೆಯಿಂದ ಪೋಷಿಸಲ್ಪಡುತ್ತಿದ್ದ ಆ ದೇವಶಿಶುವು ದಿನ-ದಿನಕ್ಕೂ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿ ಹೊಂದುತ್ತಿದ್ದಿತು. ಆ ದೇವಶಿಶುವಿನ ಮಹತ್ತ್ವವೂ ಅಪಾರವಾದುದು. ಜನಮೇಜಯ! ಆ ಶಿಶುವನ್ನು ವಿಧ್ಯುಕ್ತವಾಗಿ ದತ್ತು ತೆಗೆದುಕೊಂಡನಂತರ ಅಧಿರಥನಿಗೆ ರಾಧೆಯಲ್ಲಿ ಹಲವು ಔರಸಪುತ್ರರೂ ಹುಟ್ಟಿದರು. ಶಿಶುವು ಸ್ವರ್ಣಕವಚ-ಕುಂಡಲಗಳಿಂದ ಕೂಡಿರುವುದನ್ನು ಕಂಡು ಬ್ರಾಹ್ಮಣೋತ್ತಮರು ಆ ಶಿಶುವಿಗೆ ವಸುಷೇಣನೆಂದೇ ನಾಮಕರಣಮಾಡಿದರು.

ಅಮಿತವಿಕ್ರಮನಾದ ವಸುಷೇಣನು ಈ ರೀತಿಯಾಗಿ ಸೂತಪುತ್ರ ಎನಿಸಿಕೊಂಡನು. ವೃಷನೆಂದೂ ಅವನನ್ನು ಕೆಲವರು ಕರೆಯುತ್ತಿದ್ದರು. ಗಂಗಾನದಿಯಲ್ಲಿ ತೇಲಿಬಂದ ಪೆಟ್ಟಿಗೆಯೊಂದರಲ್ಲಿದ್ದ ಬಹಳ ಸುಂದರವಾದ ಮಗುವು ಅಧಿರಥನೆಂಬ ಸೂತನಿಗೆ ಸಿಕ್ಕಿತೆಂಬ ವಾರ್ತೆಯು ಸರ್ವತ್ರ ಹರಡಿತು. ತನ್ನ ಮಗನ ಗತಿಯೇನಾಯಿತೆಂಬುದನ್ನೇ ಚಿಂತಿಸುತ್ತಿದ್ದ ಕುಂತಿಗೂ ಆ ವಿಷಯವು ತಿಳಿಯಿತು.

ಕವಚ-ಕುಂಡಲಗಳನ್ನು ಧರಿಸಿರುವ ತನ್ನ ಮಗನು ಅಂಗದೇಶದಲ್ಲಿ ಅಧಿರಥನ ಹಿರಿಯ ಮಗನಾಗಿ, ತನ್ನ ಭುಜಬಲ-ಪರಾಕ್ರಮಗಳಿಂದ ಪ್ರಸಿದ್ಧಿ ಹೊಂದುತ್ತಿರುವನೆಂಬ ವಾರ್ತೆಯನ್ನು ಕುಂತಿಯು ಗೂಢಚಾರರ ಮೂಲಕ ವಾಗಿಯೂ ತಿಳಿದುಕೊಂಡಳು.

ಮಗನು ಪ್ರಾಪ್ತವಯಸ್ಕನಾಗಲಾಗಿ ಅಧಿರಥನು ವಸುಷೇಣನನ್ನು ತನ್ನ ಮಿತ್ರನಾದ ಧೃತರಾಷ್ಟ್ರನ ರಾಜಧಾನಿಯಾದ ಹಸ್ತಿನಾಪಟ್ಟಣಕ್ಕೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿಕೊಟ್ಟನು. ಅಲ್ಲಿ ಕರ್ಣನು ದ್ರೋಣಾಚಾರ್ಯರ ಬಳಿಯಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸಮಾಡತೊಡಗಿದನು. ಆ ಸಮಯದಲ್ಲಿಯೇ ಮಹಾಪರಾಕ್ರಮಿಯಾದ ಕರ್ಣನಿಗೂ, ಧೃತರಾಷ್ಟ್ರನ ಮಗನಾದ ದುರ್ಯೋಧನನಿಗೂ ಮೈತ್ರಿಯು ಬೆಳೆಯಿತು. ಕರ್ಣನು ದ್ರೋಣಾಚಾರ್ಯರಿಂದಲೂ, ಕೃಪಾಚಾರ್ಯರಿಂದಲೂ, ಭಗವಾನ್ ಪರಶು ರಾಮನಿಂದಲೂ ನಾಲ್ಕುವಿಧವಾದ ಅಸ್ತ್ರಪ್ರಕ್ರಿಯೆಗಳನ್ನೂ ಅಭ್ಯಾಸಮಾಡಿ

ಧನುರ್ಧಾರಿಗಳಲ್ಲಿ ಶ್ರೇಷ್ಠನೆಂಬ ಕೀರ್ತಿಯನ್ನೂ ಪಡೆದನು. ದುರ್ಯೋಧನನೊಡನೆ ಮಾಡಿಕೊಂಡ ಮೈತ್ರಿಯ ಪರಿಣಾಮವಾಗಿ ಕರ್ಣನು ಪಾಂಡವರನ್ನು ದ್ವೇಷಿಸತೊಡಗಿದನು. ಪಾಂಡವಮಧ್ಯಮನಾದ ಅರ್ಜುನನೊಡನೆ ಕಾಳಗವಾಡಬೇಕೆಂಬುದೇ ಕರ್ಣನ ಪರಮೋಚ್ಚಧ್ಯೇಯವಾಗಿದ್ದಿತು. ವಿದ್ಯಾಭ್ಯಾಸಕಾಲದಲ್ಲಿಯೂ ಸಾಮಾನ್ಯವಾಗಿ ಅವರಿಬ್ಬರಲ್ಲಿಯೇ ಸ್ಪರ್ಧೆಯು ನಡೆಯುತ್ತಿದ್ದಿತು. ಅರ್ಜುನನನ್ನು ನೋಡಿದರೆ ಕರ್ಣನಿಗೆ ಸಹ್ಯವಾಗುತ್ತಿರಲಿಲ್ಲ. ಅಂತೆಯೇ ಕರ್ಣನನ್ನು ನೋಡಿದರೆ ಅರ್ಜುನನಿಗೂ ಸಹ್ಯವಾಗುತ್ತಿರಲಿಲ್ಲ.

ಒಬ್ಬರು ಮತ್ತೊಬ್ಬರನ್ನು ನೋಡಿದೊಡನೆಯೇ, ಪರಸ್ಪರವಾಗಿ ಯುದ್ಧ ಮಾಡಿ ಯಾರ ಪರಾಕ್ರಮವು ಹೆಚ್ಚಿನದೆಂದು ನಿರ್ಧರಿಸಿಬಿಡಬೇಕೆಂಬ ಆಶಯವು ಇಬ್ಬರಲ್ಲಿಯೂ ಮೂಡುತ್ತಿದ್ದಿತು. ಕರ್ಣನು ಅರ್ಜುನನನ್ನು ದ್ವೇಷಿಸುವುದು ಮತ್ತು ಕರ್ಣನ ವಿಷಯದಲ್ಲಿ ಅರ್ಜುನನ ಅಸಹನೆ–ಈ ಎರಡೂ ಕರ್ಣಾರ್ಜುನರ ಸ್ವಭಾವವೇ ಆಗಿತ್ತೆಂದೂ ಹೇಳಬಹುದು.

ಕರ್ಣನು ಅಧಿರಥನ ಮನೆಯಲ್ಲಿ ಸೂತಪುತ್ರನಾಗಿ ಅಭಿವೃದ್ಧಿಹೊಂದುತ್ತಿದ್ದಾಗ ಅವನು ಸೂರ್ಯನಿಂದ ಕುಂತಿಯಲ್ಲಿ ಹುಟ್ಟಿದ ವಿಷಯವು ರಹಸ್ಯವಾಗಿಯೇ ಉಳಿಯಿತು. ಕರ್ಣನಿಗೆ ಸೂರ್ಯನು ದೇವರಹಸ್ಯವೆಂದು ಹೇಳಿದ ರಹಸ್ಯವೇ ಇದು. ಅಮೃತಮಯವಾದ ಕರ್ಣಕುಂಡಲಗಳೂ ಮತ್ತು ಕವಚವೂ ಕರ್ಣನಿಗಿದ್ದುದರಿಂದ ಅವನನ್ನು ಸಂಹಾರಮಾಡುವ ಸಾಧ್ಯತೆಯು ಗಾಂಡೀವಿಗೂ ಇಲ್ಲವೆಂಬುದು ಯುಧಿಷ್ಠಿರನಿಗೆ ಚೆನ್ನಾಗಿ ತಿಳಿದಿತ್ತು. ಆ ಕಾರಣದಿಂದಲೇ ಅವನು ಅನೇಕ ರಾತ್ರಿಗಳನ್ನು ನಿದ್ರೆಮಾಡದೇ ಯೋಚನಾಮಗ್ನನಾಗಿಯೇ ಕಳೆಯುತ್ತಿದ್ದನು.

ಕರ್ಣನಿಗೆ ಸೂರ್ಯನು ತನ್ನ ಜನಕನೆಂಬುದು ತಿಳಿದಿರದಿದ್ದರೂ ಅವನು ಸೂರ್ಯನ ಆರಾಧನೆಯನ್ನು ಅನುದಿನವೂ ತಪ್ಪದೇ ಮಾಡುತ್ತಿದ್ದನು. ಅವನು ತ್ರಿಕಾಲಗಳಲ್ಲಿಯೂ ಸ್ನಾನಮಾಡಿ ಸೂರ್ಯಪ್ರಾರ್ಥನೆಯನ್ನು ಮಾಡುತ್ತಿದ್ದನು. ಮಧ್ಯಾಹ್ನದ ವೇಳೆಯಲ್ಲಿ ನದಿಯಲ್ಲಿ ಮಿಂದು ಶುಚೀಭೂತನಾಗಿ ರಶ್ಮಿಮಂತನಾದ ದಿವಾಕರನನ್ನು ನೀರಿನಲ್ಲಿಯೇ ನಿಂತು

ಅನನ್ಯಭಕ್ತಿಯಿಂದ ಆರಾಧಿಸುತ್ತಿದ್ದಾಗ ಬ್ರಾಹ್ಮಣರು ಅವನ ಸಮೀಪಕ್ಕೆ ಧನವನ್ನು ಯಾಚಿಸಲು ಬರುತ್ತಿದ್ದರು.

ಆ ಸಮಯದಲ್ಲಿ ಕರ್ಣನು ಅವರ ಇಚ್ಛೆಗಳೆಲ್ಲವನ್ನೂ ಪೂರೈಸುತ್ತಿದ್ದನು. ಬ್ರಾಹ್ಮಣರು ಪ್ರಾರ್ಥಿಸಿದುದನ್ನು ಇಲ್ಲವೆಂದು ಕರ್ಣನು ಯಾವಾಗಲೂ ಹೇಳುತ್ತಿರಲಿಲ್ಲ. ಇಂದ್ರನೂ ಅದೇ ಸಮಯವನ್ನೇ ಉಪಯೋಗಿಸಿಕೊಂಡು ಬ್ರಾಹ್ಮಣವೇಷವನ್ನು ಧರಿಸಿ–ಕರ್ಣನು ಸೂರ್ಯನ ಪೂಜೆಯನ್ನು ಮುಗಿಸಿದ ನಂತರ–ಅವನ ಬಳಿಗೆ ಬಂದು ಹೇಳಿದನು :

"ಭಿಕ್ಷಾಂ ದೇಹಿ"–'ಭಿಕ್ಷೆಯನ್ನು ದಯಪಾಲಿಸು.' ಅದಕ್ಕುತ್ತರವಾಗಿ ರಾಧೇಯನು–'ನಿಮಗೆ ಸುಸ್ವಾಗತವು'–ಎಂದು ಹೇಳಿ ಆಸನವನ್ನಿತ್ತು ಉಪಚರಿಸಿದನು.

೩೦೯ನೆಯ ಅಧ್ಯಾಯವು ಮುಗಿಯಿತು.

೩೧೦ನೆಯ ಅಧ್ಯಾಯ ಕುಣ್ಡಲಾಹರಣಪರ್ವ (ಮುಂದುವರಿದಿದೆ.)

## ಇಂದ್ರನು ಕರ್ಣನಿಗೆ ಶಕ್ತ್ಯಾಯುಧವನ್ನು ಕೊಟ್ಟು ಕವಚ-ಕುಂಡಲಗಳನ್ನು ವಿನಿಮಯರೂಪವಾಗಿ ಪಡೆದುದು

ಜನಮೇಜಯ! ಸೂರ್ಯದೇವನು ಕರ್ಣನ ಕನಸಿನಲ್ಲಿ ಬಂದು–ಇಂದ್ರನು ಬ್ರಾಹ್ಮಣವೇಷವನ್ನು ಧರಿಸಿ ಕರ್ಣಕುಂಡಲಗಳನ್ನು ಬೇಡಲು ಬರುವನೆಂಬ ವಿಷಯವನ್ನು ಹೇಳಿದ್ದರೂ ಇಂದ್ರನು ಯಾವ ಸಮಯದಲ್ಲಿ ಅಥವಾ ಎಂದು ಬರುವನೆಂಬ ವಿಷಯವು ಕರ್ಣನಿಗೆ ತಿಳಿದಿರಲಿಲ್ಲ. ಅನುದಿನವೂ ಆಗಮಿಸುತ್ತಿದ್ದ ಬ್ರಾಹ್ಮಣರನ್ನು ಸ್ವಾಗತಿಸಿ-ಸತ್ಕರಿಸುತ್ತಿದ್ದಂತೆಯೇ ಅಂದೂ ಬ್ರಾಹ್ಮಣವೇಷಧಾರಿಯಾಗಿದ್ದ ಇಂದ್ರನನ್ನೂ ಸ್ವಾಗತಿಸಿ-ಸತ್ಕರಿಸಿ ಕರ್ಣನು ಪ್ರಶ್ನಿಸಿದನು :

"ಬ್ರಾಹ್ಮಣೋತ್ತಮರೇ! ನಿಮಗೆ ಏನನ್ನು ಕೊಡಲಿ? ರೂಪವತಿಯರಾದ, ಸುವರ್ಣಾಭರಣಾಲಂಕಾರಭೂಷಿತೆಯರಾದ ಸ್ತ್ರೀಯರನ್ನು ನಿಮ್ಮ ಪರಿಚರ್ಯೆಗಾಗಿ ಕಳುಹಿಸಲೇ? ಅಥವಾ ಗೋವುಗಳಿಂದ ಸಮೃದ್ಧವಾಗಿ

ರುವ ಗ್ರಾಮಗಳನ್ನು ನಿಮಗೆ ದಾನವಾಗಿ ಕೊಡಲೇ? ಇವುಗಳಲ್ಲಿ ಯಾವುದು ಅಭಿಮತವೋ ಅದನ್ನು ಕೊಡುತ್ತೇನೆ. ಯಾವುದರಿಂದ ನೀವು ಸುಪ್ರೀತರಾಗುವಿರಿ?"

"ಕರ್ಣ! ಸ್ವರ್ಣಾಭರಣಭೂಷಿತೆಯರಾದ, ಅನುಪಮವಾದ ರೂಪವುಳ್ಳ ಸ್ತ್ರೀಯರಾಗಲೀ ಅಥವಾ ಗೋವುಗಳಿಂದ ಸಮೃದ್ಧವಾದ ಗ್ರಾಮಗಳಾಗಲೀ ನನಗೆ ಬೇಕಾಗಿಲ್ಲ. ಅವುಗಳನ್ನು ಅಪೇಕ್ಷಿಸುವ ಬ್ರಾಹ್ಮಣರಿಗೇ ನೀನವುಗಳನ್ನು ಕೊಡಬಹುದಾಗಿದೆ. ನೀನು ಸತ್ಯವ್ರತನೆಂಬುದು ನಿಶ್ಚಯವಾದರೆ ನಿನ್ನ ಹುಟ್ಟಿನಿಂದಲೇ ನಿನ್ನ ಶರೀರದೊಡನೆ ಅಂಟಿಕೊಂಡು ಬಂದಿರುವ ಕವಚವನ್ನೂ ಮತ್ತು ದಿವ್ಯವಾದ ಕರ್ಣಕುಂಡಲಗಳನ್ನೂ ನಿನ್ನ ಶರೀರದಿಂದ ಕತ್ತರಿಸಿ ನನಗೆ ದಾನವಾಗಿ ಕೊಡು. ಈ ದಾನವನ್ನು ನಾನು ಕ್ಷಿಪ್ರವಾಗಿ ಅಪೇಕ್ಷಿಸುತ್ತೇನೆ. ಉಳಿದೆಲ್ಲ ದಾನಗಳ ಲಾಭಕ್ಕಿಂತಲೂ ಈ ದಾನದ ಲಾಭವೇ ಹೆಚ್ಚಿನದೆಂದು ನಾನು ಭಾವಿಸಿದ್ದೇನೆ."

ಅದಕ್ಕುತ್ತರವಾಗಿ ಕರ್ಣನು ಹೇಳಿದನು :

"ಬ್ರಾಹ್ಮಣೋತ್ತಮರೇ! ವಾಸಮಾಡಲು ಮನೆಯನ್ನೂ, ರೂಪವತಿಯರಾದ ಸ್ತ್ರೀಯರನ್ನೂ, ಗೋವುಗಳನ್ನೂ ಮತ್ತು ಫಲವತ್ತಾದ ಭೂಮಿಯನ್ನೂ ನಿಮಗೆ ದಾನಮಾಡುವೆನು. ಆದರೆ ನನ್ನ ಶರೀರದೊಡನೆಯೇ ಬಂದಿರುವ ಈ ಕರ್ಣಕುಂಡಲಗಳನ್ನೂ, ಕವಚವನ್ನೂ ನಾನು ಹೇಗೆ ತಾನೇ ಕೊಡಲಿ?"

ಜನಮೇಜಯ! ಕರ್ಣನು ಬ್ರಾಹ್ಮಣನಿಗೆ ಅನೇಕಪ್ರಕಾರವಾಗಿ ತಿಳಿಯ ಹೇಳಿದನು. ಅನೇಕಸಹಸ್ರಸಂಖ್ಯೆಯ ಚಿನ್ನದ ನಾಣ್ಯಗಳನ್ನು ಕೊಡುವುದಾಗಿ ಹೇಳಿದನು. ರಕ್ತಸಿಕ್ತವಾದ ಕವಚ-ಕುಂಡಲಗಳು ದಾನಕ್ಕೆ ಅರ್ಹವಾಗಲಾರದೆಂದೂ ಹೇಳಿದನು. ಆದರೆ ಬ್ರಾಹ್ಮಣವೇಷವನ್ನು ಧರಿಸಿದ್ದ ಇಂದ್ರನಿಗೆ ಕರ್ಣಕುಂಡಲ-ಕವಚವನ್ನುಳಿದು ಬೇರಾವ ದಾನವೂ ಬೇಡವಾಗಿದ್ದಿತು. ಕರ್ಣನು ಬ್ರಾಹ್ಮಣನನ್ನು ಬಹುವಾಗಿ ಸತ್ಕರಿಸಿದನು. ತನ್ನ ಬುದ್ಧಿ ಕುಶಲತೆಯನ್ನುಪಯೋಗಿಸಿ, ಕರ್ಣಕುಂಡಲಗಳನ್ನೂ ಮತ್ತು ಕವಚವನ್ನೂ ಬೇಡುವುದು ಬ್ರಾಹ್ಮಣಧರ್ಮಕ್ಕೆ ವಿರುದ್ಧವೆಂದೂ ಸಕಾರಣವಾಗಿ

ನಿರೂಪಿಸಿದನು. ಆದರೆ ಆ ಯಾವ ಮಾತುಗಳಿಂದಲೂ ಬ್ರಾಹ್ಮಣನನ್ನು ಒಡಂಬಡಿಸಲು ಸಾಧ್ಯವಾಗಲಿಲ್ಲ. ಅವನು ಕರ್ಣಕುಂಡಲ-ಕವಚಗಳನ್ನು ಬಿಟ್ಟು ಬೇರಾವ ದಾನವನ್ನೂ ಕೇಳಲು ಒಪ್ಪಲೇ ಇಲ್ಲ. ತ್ರಿಲೋಕಾಧಿಪತಿಗೆ ಬೇರಾವ ದಾನವು ತಾನೇ ಬೇಕಾಗಿದೆ?

ಬ್ರಾಹ್ಮಣನು ಬೇರೆ ಯಾವ ದಾನವನ್ನೂ ಕೇಳಲು ಒಪ್ಪದಿದ್ದಾಗ ರಾಧೇಯನು ನಸುನಗುತ್ತಾ ಬ್ರಾಹ್ಮಣನನ್ನು ಕುರಿತು ಹೇಳಿದನು :

"ಬ್ರಾಹ್ಮಣೋತ್ತಮರೇ! ನನ್ನೀ ಕವಚವು ಜನ್ಮತಃ ನನ್ನೊಡನೆಯೇ ಬಂದಿರುವುದು. ನನ್ನೀ ಕರ್ಣಕುಂಡಲಗಳು ಅಮೃತದಿಂದಲೇ ಹುಟ್ಟಿದುವುಗಳಾಗಿವೆ. ಇವುಗಳನ್ನು ನಾನು ತೊಟ್ಟುಕೊಂಡಿರುವುದರಿಂದಲೇ ನನ್ನನ್ನು ಈ ಭೂಮಿಯಲ್ಲಿ ಯಾರೂ ಸಂಹರಿಸಲಾರರು. ಈ ಒಂದು ಕಾರಣದಿಂದ ನಾನು ನೀವು ಕೇಳುವ ಈ ಅನರ್ಘವಸ್ತುಗಳನ್ನು ತೊರೆಯಲು ಅಸಮರ್ಥನಾಗಿದ್ದೇನೆ. ನೀವು ಅಪೇಕ್ಷಿಸಿದಲ್ಲಿ ಈ ಕರ್ಣಕುಂಡಲ-ಕವಚಗಳಿಗೆ ಪ್ರತ್ಯಾಮ್ನಾಯಮಾಗಿ ಈ ವಿಶ್ವವನ್ನೇ ಗೆದ್ದು ನಿಮಗೆ ದಾನವಾಗಿ ಕೊಡುವೆನು.

ಶತ್ರುಗಳಿಂದ ಅಬಾಧಿತವಾದ ಮತ್ತು ಸಂಪತ್ಸಮೃದ್ಧವಾದ ಈ ಭೂಮಂಡಲವನ್ನೇ ನೀವು ದಾನವಾಗಿ ಪಡೆಯಬಹುದಾಗಿದೆ. ಬ್ರಾಹ್ಮಣಶ್ರೇಷ್ಠರೇ! ನಿಮ್ಮ ಕೇಳಿಕೆಯಂತೆ ನಾನೇನಾದರೂ ಈ ಅನರ್ಘವಸ್ತುಗಳನ್ನು ಕೊಟ್ಟುಬಿಟ್ಟರೆ ನಾನು ಯುದ್ಧದಲ್ಲಿ ಶತ್ರುಗಳಿಂದ ಪರಾಜಿತನಾಗುತ್ತೇನೆ. ಈ ಒಂದು ಕಾರಣದಿಂದಾಗಿ ನಾನು ಕರ್ಣಕುಂಡಲ-ಕವಚಗಳನ್ನು ತ್ಯಾಗ ಮಾಡಲು ಇಚ್ಛಿಪಡುತ್ತಿಲ್ಲ."

ಬ್ರಾಹ್ಮಣವೇಷಧರನಾದ ಇಂದ್ರನ ಮನಸ್ಸು ಬದಲಾವಣೆ ಹೊಂದಲಿಲ್ಲ. ಹೊಂದುವ ಸಾಧ್ಯತೆಯೂ ಇರಲಿಲ್ಲ. ಇಂದ್ರನಲ್ಲದೇ ನಿಜವಾದ ಬ್ರಾಹ್ಮಣನೇ ಆಗಿದ್ದರೆ ಕರ್ಣಕುಂಡಲ-ಕವಚಗಳನ್ನು ಯಾವ ಕಾರಣದಿಂದಲೂ ಅಪೇಕ್ಷಿಸುತ್ತಲೇ ಇರಲಿಲ್ಲ. ಆ ವಸ್ತುಗಳನ್ನು ಬ್ರಾಹ್ಮಣನು ಕೇಳಿದೊಡನೆಯೇ ಸೂರ್ಯನು ಕನಸಿನಲ್ಲಿ ಹೇಳಿದ್ದ ಮಾತು ಕರ್ಣನ ಸ್ಮೃತಿಪಥಕ್ಕೆ ಬಂದಿತು. ಬಂದಿರುವವನು ಇಂದ್ರನೆಂದೇ ನಿರ್ಧರಿಸಿ

ಅವನೊಡನೆ ಮಾತನಾಡುತ್ತಿದ್ದನು. ಸೂರ್ಯನ ಸಲಹೆಯಂತೆ ಇಂದ್ರನ ಮನಸ್ಸನ್ನು ತಿರುಗಿಸಲು ಬಹಳ ಪ್ರಯತ್ನವನ್ನೇ ಮಾಡಿದನು.

ಇಂದ್ರನು ಕರ್ಣಕುಂಡಲ-ಕವಚಗಳನ್ನು ಬಿಟ್ಟುಹೋಗಲು ಬಂದಿಲ್ಲ ವೆಂಬುದು ಕರ್ಣನಿಗೆ ಬಹುಸ್ಪಷ್ಟವಾಗಿ ತಿಳಿದಿದ್ದರೂ ಇಂದ್ರನಿಂದ ಶಕ್ತ್ಯಾಯುಧವನ್ನು ಪಡೆಯಬೇಕೆಂಬ ಆಶಯದಿಂದ ಕರ್ಣನು ಮಾತನಾಡು ತ್ತಿದ್ದನು.

ಬ್ರಾಹ್ಮಣನು ಯಾವ ಮಾತಿಗೂ ಒಪ್ಪದ ನಂತರ ಕರ್ಣನು ನಸುನಗುತ್ತಲೇ ಹೇಳಿದನು :

"ದೇವದೇವ! ಈ ಮೊದಲೇ ನಾನು ನೀನಾರೆಂಬುದನ್ನು ತಿಳಿದಿದ್ದೆನು. ನೀನು ಕರ್ಣಕುಂಡಲಗಳ ಮತ್ತು ಕವಚದ ಬೇಡಿಕೆಗಾಗಿ ಬರುವೆಯೆಂಬ ವಿಷಯವೂ ನನಗೆ ತಿಳಿದಿತ್ತು.

ದೇವ! ನೀನು ಸಾಕ್ಷಾತ್ ದೇವೇಂದ್ರನೇ ಆಗಿರುವೆ. ತ್ರಿಲೋಕಾಧಿ ಪತಿಯಾಗಿರುವೆ. ಇಂತಹ ತ್ರಿಲೋಕಾಧಿಪತಿಗೆ ನಾನು ಯಾವ ಪ್ರಯೋ ಜನವೂ ಇಲ್ಲದೇ ದಾನಕೊಡುವುದು ನ್ಯಾಯವಲ್ಲ. ಅಥವಾ ನೀನು ನನ್ನನ್ನು ಬೇಡುವುದು, ನಾನು ದಾನಕೊಡುವುದು–ಈ ಎರಡು ವಿಷಯಗಳೂ ಹಾಸ್ಯಾಸ್ಪದವಾಗುತ್ತವೆ. ತ್ರಿಲೋಕಾಧಿಪತಿಯಾದ, ದೇವೇಶನಾದ ನೀನು ನನಗೆ ವರಕೊಡುವುದು ಸಾಧುವಾಗಿದೆ. ನೀನು ಎಲ್ಲ ಪ್ರಾಣಿಗಳಿಗೂ ಈಶ್ವರನು. ಸಕಲಭೂತಗಳ ಸೃಷ್ಟಿಗೂ ಕಾರಣನಾಗಿರುವೆ. ನಿನ್ನ ಪ್ರಾರ್ಥನೆ ಯಂತೆ ನಾನು ನನ್ನ ಕರ್ಣಕುಂಡಲಗಳನ್ನೂ, ಕವಚವನ್ನೂ ಕೊಟ್ಟುಬಿಟ್ಟರೆ ನನ್ನ ವಿನಾಶವಂತೂ ಖಂಡಿತ. ನೀನೂ ಕೂಡ ಇದರಿಂದ ಅಪಹಾಸ್ಯಕ್ಕೆ ಗುರಿಯಾಗುವೆ. ಆದುದರಿಂದ ನಾನು ಕವಚ-ಕುಂಡಲಗಳನ್ನು ವಿನಿಮಯ ರೂಪವಾಗಿ ಕೊಡಲಿಚ್ಛಿಸಿದ್ದೇನೆ. ಇವುಗಳಿಗೆ ಪ್ರತಿಯಾಗಿ ನೀನು ನನಗೆ ಯಾವುದಾದರೂ ವರವನ್ನು ಕೊಡಬೇಕು. ಅದು ಸಾಧ್ಯವಾಗದಿದ್ದರೆ ನಾನಿವು ಗಳನ್ನು ಕೊಡಲಾರೆನು."

“ಕರ್ಣ! ನಾನು ಇಂದ್ರನೆಂಬುದು ನಿಜ. ನಾನಿಲ್ಲಿಗೆ ಬರುವ ಮೊದಲೇ ಸೂರ್ಯನು ನನ್ನ ಮನೋಗತವಾಗಿದ್ದ ಆಶಯವನ್ನು ತಿಳಿದವನಾಗಿ ಅದನ್ನು ನಿನ್ನೊಡನೆ ಹೇಳಿಬಿಟ್ಟಿದ್ದಾನೆ. ಕರ್ಣ! ನಿನ್ನ ಆಶಯದಂತೆ ನೀನು ನಿನ್ನ ಕರ್ಣಕುಂಡಲ-ಕವಚಗಳನ್ನು ವಿನಿಮಯರೂಪವಾಗಿಯೇ ಕೊಡಬಹುದು. ವಜ್ರಾಯುಧವೊಂದನ್ನುಳಿದು ನಿನಗೆ ಬೇಕಾದ ವಸ್ತುವನ್ನು ಕೇಳು.”

ಜನಮೇಜಯ! ಬ್ರಾಹ್ಮಣವೇಷಧರನಾದ ಇಂದ್ರನು ವಜ್ರಾಯುಧವೊಂದನ್ನು ಬಿಟ್ಟು ಬೇರಾವುದನ್ನಾದರೂ ಕೊಡುವೆನೆಂದು ಹೇಳಿದ ಕೂಡಲೇ ಕರ್ಣನಿಗೆ ಬಹಳ ಆನಂದವಾಯಿತು. ತನ್ನ ಮನಸ್ಸಿನ ಆಶಯವು ನೆರವೇರಿತೆಂದೇ ಭಾವಿಸಿದವನಾಗಿ ಅಮೋಘವಾದ ಶಕ್ತ್ಯಾಯುಧವನ್ನು ದಯಪಾಲಿಸುವಂತೆ ಇಂದ್ರನನ್ನು ಪ್ರಾರ್ಥಿಸಿದನು.

**ವರ್ಮಣಾ ಕುಣ್ಡಲಾಭ್ಯಾಂ ಚ ಶಕ್ತಿಂ ಮೇ ದೇಹಿ ವಾಸವ ।**
**ಅಮೋಘಾಂ ಶತ್ರುಸಂಘಾನಾಂ ಘಾತಿನೀಂ ಪೃತನಾಮುಖೇ ॥**

“ಕವಚ-ಕುಂಡಲಗಳ ವಿನಿಮಯದಿಂದ ನೀನು ನನಗೆ ಯುದ್ಧಭೂಮಿಯಲ್ಲಿ ಶತ್ರುಸಮೂಹವನ್ನು ಸಂಪೂರ್ಣವಾಗಿ ವಿನಾಶಗೊಳಿಸುವ ಸಾಮರ್ಥ್ಯವುಳ್ಳ ಅಮೋಘವಾದ ಶಕ್ತ್ಯಾಯುಧವನ್ನು ದಯಪಾಲಿಸು.”

ಕರ್ಣನ ಮಾತನ್ನು ಕೇಳಿ ವಾಸವನು ಮುಹೂರ್ತಕಾಲ ಶಕ್ತ್ಯಾಯುಧ ಪ್ರದಾನದ ವಿಷಯವಾಗಿ ಮನಸ್ಸಿನಲ್ಲಿ ಚಿಂತಿಸಿ, ಅನಂತರ ಕರ್ಣನನ್ನು ಕುರಿತು ಹೇಳಿದನು :

“ಕರ್ಣ! ನಿನ್ನ ಶರೀರಸಹಜವಾದ ಕವಚವನ್ನೂ ಮತ್ತು ಕರ್ಣಕುಂಡಲಗಳನ್ನೂ ನನಗೆ ಕೊಟ್ಟು ಈ ಅಮೋಘವಾದ ಶಕ್ತ್ಯಾಯುಧವನ್ನು ಒಂದು ನಿಬಂಧನೆಯೊಡನೆ ಸ್ವೀಕರಿಸು.

ನಾನು ದೈತ್ಯರೊಡನೆ ಯುದ್ಧದಲ್ಲಿ ತೊಡಗಿದ್ದಾಗ ನನ್ನ ಕೈಯಿಂದ ಪ್ರಯೋಗಿಸಲ್ಪಟ್ಟ ಈ ಶಕ್ತ್ಯಾಯುಧವು ಶತ್ರುಸೈನ್ಯವನ್ನು ಹೊಕ್ಕು ನೂರಾರು ಮಂದಿ ಸೈನಿಕರನ್ನು ಸಂಹರಿಸಿ ಪುನಃ ನನ್ನ ಕೈಗೇ ಬಂದು ಸೇರುತ್ತಿತ್ತು.

ನಿನಗೆ ಇಂದು ಕೊಡಲ್ಪಡುವ ಇದೇ ಶಕ್ತ್ಯಾಯುಧವು ನಿನ್ನೆದುರಾಗಿ ಯುದ್ಧಕ್ಕೆ ನಿಂತು ಗರ್ಜಿಸುವ ತೇಜಃಪುಂಜಯುಕ್ತನಾದ ಅಪ್ರತಿಮಸಾಹಸಿಯೊಬ್ಬನನ್ನು ಸಂಹರಿಸಿ ಪುನಃ ನನ್ನ ಕೈಗೇ ಬಂದು ಸೇರುತ್ತದೆ."

"ಇಂದ್ರದೇವ! ಮಹಾಪ್ರತಾಪಶಾಲಿಯಾದ, ನನ್ನನ್ನು ಕಂಡೊಡನೆಯೇ ದರ್ಪದಿಂದ ಸಿಂಹಗರ್ಜನೆಮಾಡುವ ನನ್ನ ಒಬ್ಬನೇ ಒಬ್ಬ ಶತ್ರುವಿನ ನಿರ್ಮೂಲನಕ್ಕಾಗಿಯೇ ನಾನೀ ಶಕ್ತ್ಯಾಯುಧವನ್ನು ನಿನ್ನಿಂದ ಅಪೇಕ್ಷಿಸಿದ್ದೇನೆ. ಅವನೊಬ್ಬನಿಂದಲೇ ನಮಗೆ ಈ ಜಗತ್ತಿನಲ್ಲಿ ಭಯವೆಂಬುದಿರುವುದು, ದೇವೇಂದ್ರ! ಅಂತಹ ಒಬ್ಬ ಶತ್ರುವನ್ನು–ನೀನು ದಯಪಾಲಿಸಲಿರುವ ಶಕ್ತ್ಯಾಯುಧವು ಸಂಹರಿಸುವುದಾದರೆ–ನಾನು ನಿಶ್ಚಯವಾಗಿಯೂ ಧನ್ಯನು."

"ಕರ್ಣ! ನಾನು ಕೊಡಲಿರುವ ಈ ಶಕ್ತ್ಯಾಯುಧದಿಂದ ನೀನು ಸಿಂಹದಂತೆ ಗರ್ಜನೆಮಾಡುವ ಮಹಾಬಲಶಾಲಿಯಾದ ಶತ್ರುವನ್ನು ಸಂಹರಿಸುವುದಂತೂ ನಿಶ್ಚಯ. ಆದರೆ ನೀನು ಉದ್ದೇಶಿಸಿರುವ ಶತ್ರುವನ್ನು ನೀನಿದರಿಂದ ಕೊಲ್ಲಲಾರೆ. ಎಂದರೆ : ಈ ನನ್ನ ಶಕ್ತ್ಯಾಯುಧಕ್ಕೆ ಅವನನ್ನು ಕೊಲ್ಲುವ ಸಾಮರ್ಥ್ಯವಿಲ್ಲವೆಂದಲ್ಲ. ನೀನು ಕೊಲ್ಲಲಿಚ್ಛಿಸಿರುವ ಆ ವೀರಾಗ್ರಣಿಯು ಮಹಾತ್ಮನೊಬ್ಬನಿಂದ ರಕ್ಷಿತನಾಗಿದ್ದಾನೆ. ಆ ಮಹಾತ್ಮನು ಯಾರೆಂಬುದನ್ನು ಹೇಳುವೆನು, ಕೇಳು :

**ಯಮಾಹುರ್ವೇದವಿದ್ವಾಂಸೋ ವರಾಹಮಪರಾಜಿತಮ್ ।**
**ನಾರಾಯಣಮಚಿನ್ತ್ಯಂ ಚ ತೇನ ಕೃಷ್ಣೇನ ರಕ್ಷ್ಯತೇ ॥೧೮॥**

ಯಾವ ಮಹಾತ್ಮನನ್ನು ವೇದವಿದರು, ಅಪರಾಜಿತನಾದ ವೇದೋದ್ಧಾರಕನಾದ ವರಾಹಮೂರ್ತಿಯೆಂದು ಕರೆಯುತ್ತಾರೆಯೋ ಮತ್ತು ನಾರಾಯಣನೆಂದೂ, ಅಚಿಂತ್ಯನೆಂದೂ ಕರೆಯುವರೋ–ಅಂತಹ ಮಹಾತ್ಮನಾದ ಶ್ರೀಕೃಷ್ಣನಿಂದ ಆ ನಿನ್ನ ಶತ್ರುವು ಸುರಕ್ಷಿತನಾಗಿದ್ದಾನೆ."

"ಮಹೇಂದ್ರ! ನೀನು ಹೇಳಿದಂತೆಯೇ ಆಗಲೂಬಹುದು. ನಾನು ಉದ್ದೇಶಿಸಿರುವ ಶತ್ರುವನ್ನು ಈ ಶಕ್ತ್ಯಾಯುಧದಿಂದ ಸಂಹರಿಸಲು ಆಗದಿರ

ಬಹುದು. ಆದರೂ ಪ್ರತಾಪಶಾಲಿಯಾದ ಒಬ್ಬನೇ ಶತ್ರುವನ್ನು ಸಂಹರಿಸುವ ಶಕ್ತ್ಯಾಯುಧವನ್ನು ನಿನ್ನಿಂದ ಅಪೇಕ್ಷಿಸುತ್ತೇನೆ.

ಈ ಶಕ್ತ್ಯಾಯುಧದಿಂದ ನಾನು ಒಬ್ಬನೇ ಒಬ್ಬ ಅತುಲಪರಾಕ್ರಮಿಯಾದ ಶತ್ರುವನ್ನಾದರೂ ಕೊಲ್ಲುತ್ತೇನೆ. ಈ ಶಕ್ತ್ಯಾಯುಧಕ್ಕೆ ವಿನಿಮಯರೂಪವಾಗಿ ನಾನು ಈ ಮೊದಲೇ ಹೇಳಿದಂತೆ ಕವಚವನ್ನೂ–ಕರ್ಣಕುಂಡಲಗಳನ್ನೂ ನನ್ನ ಶರೀರದಿಂದ ಕತ್ತರಿಸಿಕೊಡುವೆನು. ಆದರೆ ನನ್ನ ಶರೀರದಿಂದ ಈ ಕವಚವನ್ನು ಕತ್ತರಿಸಬೇಕಾಗಿರುವುದರಿಂದ ಶರೀರವು ವ್ರಣಮಯವಾಗುವುದು. ಕವಚವನ್ನು ಕತ್ತರಿಸಿದರೂ ವ್ರಣವಾಗದಂತೆ ನೀನು ಅನುಗ್ರಹಿಸು ದೇವ! ಇದನ್ನು ಕತ್ತರಿಸುವುದರಿಂದ ನನ್ನ ಶರೀರವು ಘೋರರೂಪವನ್ನು ತಾಳದಿರಲಿ.”

“ಕರ್ಣ! ನೀನು ಸತ್ಯನಿಷ್ಠನಾಗಿರುವ ಕಾರಣದಿಂದ ನಿನ್ನ ಶರೀರದಲ್ಲಿ ವ್ರಣವುಂಟಾಗುವುದಿಲ್ಲ ಮತ್ತು ಕವಚವನ್ನು ಕತ್ತರಿಸಿಕೊಡುವುದರಿಂದ ನಿನ್ನ ಶರೀರವು ಭಯಂಕರವಾಗಿಯೂ ಕಾಣುವುದಿಲ್ಲ. ನಿನ್ನ ತಂದೆಯಲ್ಲಿ ಯಾವ ವಿಧವಾದ ತೇಜಸ್ಸು ಮತ್ತು ಕಾಂತಿಯಿರುವುದೋ ಅದೇ ವಿಧವಾದ ತೇಜಸ್ಸಿನಿಂದಲೂ ಮತ್ತು ಕಾಂತಿಯಿಂದಲೂ ನೀನು ಪ್ರಕಾಶಿಸುವೆ. ನಾನು ಕೊಡಲಿರುವ ಶಕ್ತ್ಯಾಯುಧದ ವಿಷಯವಾಗಿ ಮತ್ತೊಂದು ರಹಸ್ಯವನ್ನೂ ನಿನ್ನೊಡನೆ ಹೇಳುತ್ತೇನೆ. ಶತ್ರುಗಳನ್ನು ಸಂಹರಿಸುವ ಸಾಮರ್ಥ್ಯವುಳ್ಳ ಇನ್ನೂ ಅನೇಕ ಶಸ್ತ್ರಾಸ್ತ್ರಗಳು ನಿನ್ನ ಬಳಿಯಲ್ಲಿರುವಾಗ ನೀನು ಈ ಶಕ್ತ್ಯಾಯುಧವನ್ನು ಪ್ರಯೋಗಿಸುವ ಯತ್ನಮಾಡಬಾರದು. ಅರ್ಥಾತ್ ನಿನ್ನ ಶತ್ರುವಿನ ಮೇಲೆ ಸಕಲಶಸ್ತ್ರಾಸ್ತ್ರಗಳೂ ವಿಫಲತೆಯನ್ನು ಹೊಂದಿದ ನಂತರವೇ ನೀನಿದನ್ನು ಪ್ರಯೋಗಿಸಬೇಕು. ಮೇಲಾಗಿ ನಿನಗೆ ಪ್ರಾಣಾಪಾಯವು ಸನ್ನಿಹಿತವಾದ ಸಮಯದಲ್ಲಿ ಪ್ರಾಣರಕ್ಷಣೆಗಾಗಿ ಮಾತ್ರವೇ ಈ ಶಕ್ತ್ಯಾಯುಧವನ್ನು ಪ್ರಯೋಗಿಸಬೇಕು. ದುರ್ಬಲರಾದವರ ಮೇಲೆ ಈ ಆಯುಧವನ್ನು ಖಂಡಿತವಾಗಿಯೂ ಯಾವ ಕಾರಣದಿಂದಲೂ ಪ್ರಯೋಗಿಸಬಾರದು. ಈ ಕಟ್ಟುಪಾಡುಗಳಿಗೆ ನೀನು ವಿರುದ್ಧವಾಗಿ ನಡೆದೆಯಾದರೆ ಈ ಶಕ್ತ್ಯಾಯುಧವು ನಿನ್ನನ್ನೇ ಸಂಹರಿಸಿಬಿಡುವುದು.”

“ಮಹೇಂದ್ರ! ಸತ್ಯವಾಗಿ ಹೇಳುತ್ತೇನೆ. ನೀನು ದಯಪಾಲಿಸಲಿರುವ

'ವಾಸವೀ' ಎಂಬ ಶಕ್ತ್ಯಾಯುಧವನ್ನು ನಾನು ಆಪತ್ಕಾಲದಲ್ಲಿ ಮಾತ್ರವೇ ಪ್ರಯೋಗಮಾಡುತ್ತೇನೆ. ನೀನೀ ವಿಷಯದಲ್ಲಿ ಸಂಶಯಿಸುವ ಕಾರಣವಿಲ್ಲ."



ಜನಮೇಜಯ! ಕರ್ಣನು ಹೀಗೆಂದು ಹೇಳಿ ಇಂದ್ರನಿಗೆ ಆಶ್ವಾಸನೆ ಯನ್ನಿತ್ತು ಮಹಾತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದ ಶಕ್ತ್ಯಾಯುಧವನ್ನು ಇಂದ್ರ ನಿಂದ ಪಡೆದನು. ವಿನಿಮಯರೂಪವಾಗಿ ಕವಚ-ಕರ್ಣಕುಂಡಲಗಳನ್ನು ಇಂದ್ರನಿಗೆ ಕೊಡುವುದು ಅಷ್ಟು ಸುಲಭವಾದ ಕಾರ್ಯವಾಗಿರಲಿಲ್ಲ. ಬಹಳ ಹರಿತವಾದ ಶಸ್ತ್ರವೊಂದನ್ನು ತೆಗೆದುಕೊಂಡು ಕರ್ಣನು ತನ್ನ ಹುಟ್ಟಿನಿಂದ ಜೊತೆಯಲ್ಲಿಯೇ ಅಂಟಿಕೊಂಡು ಬಂದಿದ್ದ ವಜ್ರಕವಚವನ್ನು ಕರ-ಕರನೆ

ಕತ್ತರಿಸತೊಡಗಿದನು. ತನ್ನ ಶರೀರವನ್ನು ಸ್ವತಃ ತಾನೇ ಕರ-ಕರನೆ ಕತ್ತರಿಸಿ ಕೊಳ್ಳುತ್ತಿದ್ದ ಕರ್ಣನ ಆ ಸಾಹಸಕ್ರಿಯೆಯನ್ನು ಕಂಡು ದೇವ-ಮಾನವ-ದಾನವರು ಸಿಂಹನಾದಗಳನ್ನು ಮಾಡಿದರು. ತನ್ನ ಶರೀರವನ್ನೇ ತಾನು ಕೊಯ್ದುಕೊಳ್ಳುತ್ತಿದ್ದರೂ ಸಹ ಕರ್ಣನ ಮುಖದಲ್ಲಿ ಕಿಂಚಿತ್ತಾದರೂ ವಿಕಾರವು ಕಾಣುತ್ತಿರಲಿಲ್ಲ.

ನಗುನಗುತ್ತಲೇ ಕವಚವನ್ನು ಕತ್ತಿಯಿಂದ ಕತ್ತರಿಸುತ್ತಿದ್ದಾಗ ದೇವ ದುಂದುಭಿಗಳು ಮೊಳಗಿದುವು. ದೇವತೆಗಳು ಪುಷ್ಪವೃಷ್ಟಿಯನ್ನು ಕರೆದರು.

**ತತಶ್ಛಿತ್ತ್ವಾ ಕವಚಂ ದಿವ್ಯಮಜ್ಞಾ-**
**ತ್ತಥೈವಾರ್ದ್ರಂ ಪ್ರದದೌ ವಾಸವಾಯ ।**
**ತಥೋತ್ಕೃತ್ಯ ಪ್ರದದೌ ಕುಣ್ಡಲೇ ತೇ**
**ಕರ್ಣಾತ್ತಸ್ಮಾತ್ಕರ್ಮಣಾ ತೇನ ಕರ್ಣಃ ॥೩೮॥**

ತನ್ನ ಶರೀರದಿಂದ ವಜ್ರಕವಚವನ್ನು ಪೂರ್ಣವಾಗಿ ಕತ್ತರಿಸಿ ತೆಗೆದು ಸ್ರವಿಸುತ್ತಿದ್ದ ರಕ್ತದಿಂದ ಕೂಡಿದ್ದ ಆ ಕವಚವನ್ನು ಕರ್ಣನು ಇಂದ್ರನಿಗೆ ಕೊಟ್ಟನು. ಕರ್ಣಕುಂಡಲಗಳನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿ ಇಂದ್ರನಿಗರ್ಪಿಸಿದನು. ಕರ್ಣಕುಂಡಲಗಳನ್ನೂ–ಕವಚವನ್ನೂ ಇಂದ್ರನಿಗೆ ಕತ್ತರಿಸಿಕೊಟ್ಟಿದ್ದರಿಂದಲೇ ವಸುಷೇಣನಿಗೆ ಕರ್ಣನೆಂದು ಹೆಸರಾಯಿತು.

ಜನಮೇಜಯ! ಶಕ್ರನು ಕರ್ಣನನ್ನು ನಗುನಗುತ್ತಲೇ ವಂಚಿಸಿದನು. ಶಕ್ರನ ಆ ಕ್ರಿಯೆಯಿಂದಲೇ ಕರ್ಣನಿಗೆ ದಾನಶೂರನೆಂಬ ಶಾಶ್ವತವಾದ ಕೀರ್ತಿಯೂ ಲಭಿಸಿತು. ಕರ್ಣನಿಗೆ ಪ್ರಾಪ್ತವಾದ ಆ ಕೀರ್ತಿಗೆ ಶಕ್ರನೇ ಕಾರಣನೆಂದೂ ಹೇಳಬಹುದು. ಪಾಂಡವರಿಗೆ ಸಂಬಂಧಿಸಿದ ಕಾರ್ಯವು ಯಶಸ್ವಿಯಾಗಿ ಮುಗಿದುದಕ್ಕಾಗಿ ಇಂದ್ರನೂ ಸಂತಸದಿಂದ ತನ್ನ ಲೋಕಕ್ಕೆ ತೆರಳಿದನು.

ಕರ್ಣನ ಕವಚವನ್ನೂ–ಕುಂಡಲಗಳನ್ನೂ ಇಂದ್ರನು ವಂಚಿಸಿ ಅಪ ಹರಿಸಿಕೊಂಡು ಹೋದ ವಿಷಯವು ದುರ್ಯೋಧನಾದಿಗಳಿಗೂ ತಿಳಿಯಿತು. ಆ ವಾರ್ತೆಯನ್ನು ಕೇಳಿ ಅವರೆಲ್ಲರೂ ಬಹಳ ದುಃಖಿತರಾದರು.

ದುರ್ಯೋಧನನು ತನ್ನ ವಿಜಯಕ್ಕಾಗಿ ಕರ್ಣನೊಬ್ಬನನ್ನೇ ಸಂಪೂರ್ಣ

ವಾಗಿ ಅವಲಂಬಿಸಿದ್ದನಲ್ಲವೇ? ಕವಚ-ಕುಂಡಲಗಳ ಅಪಹರಣದ ವಾರ್ತೆಯನ್ನು ಕೇಳಿದೊಡನೆಯೇ ಅವರೆಲ್ಲರೂ ಅಧೀರರಾದರು ಮತ್ತು ಅವರ ಸೊಕ್ಕು ತಾತ್ಕಾಲಿಕವಾಗಿಯೇ ಆದರೂ ಸ್ವಲ್ಪ ಅಡಗಿತು. ಅದಕ್ಕೆ ಪ್ರತಿಯಾಗಿ ಅರಣ್ಯದಲ್ಲಿದ್ದ ಪಾಂಡವರು ಸೂತಪುತ್ರನಿಗೊದಗಿದ ದುರವಸ್ಥೆಯನ್ನು ಕೇಳಿ ಬಹಳ ಸಂತಸಗೊಂಡರು.

ಜನಮೇಜಯ! ಈ ರೀತಿಯಲ್ಲಿ ಯುಧಿಷ್ಠಿರನಿಗೆ ಅನೇಕವರ್ಷಗಳಿಂದಲೂ ಮನಸ್ಸಿನಲ್ಲಿಯೇ ಅಡಗಿದ್ದ ಆತಂಕವು ಪರಿಹೃತವಾಯಿತು."

"ಮಹರ್ಷಿಗಳೇ! ಇಂದ್ರನು ಕರ್ಣನಿಂದ ಕರ್ಣಕುಂಡಲ-ಕವಚಗಳನ್ನು ಅಪಹರಿಸಿಕೊಂಡು ಹೋದಾಗ ಪಾಂಡವರೆಲ್ಲಿದ್ದರು? ಆ ವಾರ್ತೆಯು ಪಾಂಡವರಿಗೆ ಯಾರ ಮೂಲಕವಾಗಿ ತಿಳಿಯಿತು? ಹನ್ನೆರಡು ವರ್ಷಗಳ ವನವಾಸ ಕಳೆದನಂತರ ನಮ್ಮ ತಾತಂದಿರು ಮುಂದೇನು ಮಾಡಿದರು?–ಈ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳಿರಿ."

"ಜನಮೇಜಯ! ಪಾಂಡವರು ಸೈಂಧವನನ್ನೂ, ಅವನ ಅಪಾರ ಸೈನ್ಯವನ್ನೂ ಪರಾಜಯಗೊಳಿಸಿ ದ್ರೌಪದಿಯನ್ನು ಬಿಡಿಸಿಕೊಂಡು ಬಂದರು. ಆ ವೇಳೆಗಾಗಲೇ ಬಹುಕ್ಲಿಷ್ಟವಾದ ಅವರ ಹನ್ನೆರಡು ವರ್ಷಗಳ ವನವಾಸವು ಮುಗಿಯುವುದರಲ್ಲಿತ್ತು. ಮಾರ್ಕಂಡೇಯರಿಂದ ದೇವರ್ಷಿಗಳ ಅನೇಕ ಉಪಾಖ್ಯಾನಗಳನ್ನು ಕೇಳಿದರು. ಅನಂತರದಲ್ಲಿ ಪಾಂಡವರು ಬ್ರಾಹ್ಮಣ ಸಮೇತರಾಗಿ ಕಾಮ್ಯಕವನದಿಂದ ದ್ವೈತವನಕ್ಕೆ ತೆರಳಿದರು. ಅದೇ ಸಮಯದಲ್ಲಿಯೇ ಇಂದ್ರನು ಕರ್ಣನಿಂದ ಕರ್ಣಕುಂಡಲ-ಕವಚಗಳನ್ನು ಅಪಹರಿಸಿದನು."

ಃ೧೦ನೆಯ ಅಧ್ಯಾಯವು ಮುಗಿಯಿತು.

ಃ೧೧ನೆಯ ಅಧ್ಯಾಯ ಆರಣೇಯಪರ್ವ

## ಬ್ರಾಹ್ಮಣನ ಅರಣಿ ಮತ್ತು ಮಂಥನದಂಡಗಳನ್ನು ತಂದು ಕೊಡಲು ಪಾಂಡವರು ಜಿಂಕೆಯನ್ನು ಬೆನ್ನಟ್ಟಿದುದು

ಜನಮೇಜಯನು ಪುನಃ ಪ್ರಶ್ನಿಸುತ್ತಾನೆ :

"ಬ್ರಾಹ್ಮಣೋತ್ತಮರೇ! ನೀವು ಹೇಳಿದಂತೆ ಸೈಂಧವನು ದ್ರೌಪದಿ

ಯನ್ನು ಅಪಹರಿಸಿದುದರಿಂದ ನಮ್ಮ ತಾತಂದಿರಿಗೆ ಬಹಳ ದುಃಖವಾಯಿತು. ವೀರರಾದ ಅವರು ದ್ರೌಪದಿಯನ್ನು ಬಿಡುಗಡೆಮಾಡಿದ ಅನಂತರದಲ್ಲಿ ಏನು ಮಾಡಿದರೆಂಬುದನ್ನು ದಯಮಾಡಿ ಹೇಳಿರಿ."

"ಜನಮೇಜಯ! ಪಾಂಡವರು ದ್ರೌಪದಿಯನ್ನು ಬಿಡುಗಡೆಮಾಡಿ ಕೊಂಡು ಬಂದರೂ ಅವರ ಮನಸ್ಸಿನ ದುಃಖವು ಅಳಿದುಹೋಗಲಿಲ್ಲ. ಅವರಿಗೆ ಕಾಮ್ಯಕವನವನ್ನೇ ಬಿಟ್ಟು ಹೋಗಬೇಕೆನ್ನಿಸಿತು. ಯುಧಿಷ್ಠಿರನು ತನ್ನ ಅನುಜರೊಡನೆ ಸಮಾಲೋಚಿಸಿ ಕಾಮ್ಯಕವನದಿಂದ–ಅನೇಕಜಾತಿಯ ವೃಕ್ಷ ಗಳಿಂದ ಚಿತ್ರ-ವಿಚಿತ್ರವಾಗಿ ಕಂಗೊಳಿಸುತ್ತಿದ್ದ, ರುಚಿಕರವಾದ ಫಲ ಗಳಿಂದಲೂ, ಕಂದ-ಮೂಲಗಳಿಂದಲೂ ಸಮೃದ್ಧವಾಗಿದ್ದ, ಬಹುರಮ್ಯ ವಾಗಿದ್ದ ದ್ವೈತವನಕ್ಕೆ ಹೋದನು. ಅಲ್ಲವರು ವ್ರತನಿಷ್ಠರಾಗಿದ್ದು ಕೇವಲ ಫಲಾಹಾರದಿಂದಲೇ ಕಾಲಕಳೆಯುತ್ತಿದ್ದರು. ಭಾರ್ಯೆಯಾದ ದ್ರೌಪದಿ ಯೊಡನೆ ಮಿತಾಹಾರಿಗಳಾಗಿ ವ್ರತನಿಷ್ಠರಾಗಿ ಕಾಲಕಳೆಯುತ್ತಿದ್ದರು. ದ್ವೈತ ವನದಲ್ಲಿ ಕುಂತೀಪುತ್ರನಾದ ಯುಧಿಷ್ಠಿರನು ಅನುಜರಾದ ಭೀಮಾರ್ಜುನ-ನಕುಲ-ಸಹದೇವರೊಡನೆ ಇರುತ್ತಿರಲಾಗಿ, ಧರ್ಮಾತ್ಮರಾದ, ವ್ರತನಿಷ್ಠರಾದ ಆ ಪಾಂಡವರು ಬ್ರಾಹ್ಮಣನೊಬ್ಬನ ಸಲುವಾಗಿ ಬಹುವಿಧವಾದ ಕಷ್ಟಕ್ಕೆ ಗುರಿಯಾಗಬೇಕಾಯಿತು. ಆದರೆ ಕಟ್ಟಕಡೆಯಲ್ಲಿ ಆ ಕಷ್ಟವು ಅತ್ಯಂತಸುಖ ದಲ್ಲಿಯೇ ಪರ್ಯವಸಾನಗೊಂಡಿತು.

ದ್ವೈತವನದಲ್ಲಿ ವಾಸಮಾಡುತ್ತಿದ್ದಾಗ ಅವರಿಗೆ ಯಾವ ರೀತಿಯಲ್ಲಿ ಕಷ್ಟವು ಪ್ರಾಪ್ತವಾಯಿತು ಮತ್ತು ಆ ಕಷ್ಟವು ಹೇಗೆ ನಿವಾರಣೆಯಾಗಿ ಸುಖದಲ್ಲಿ ಪರ್ಯವಸಾನವಾಯಿತೆಂಬುದನ್ನು ಸವಿಸ್ತರವಾಗಿ ಹೇಳುವೆನು, ಕೇಳು :

ಬ್ರಾಹ್ಮಣನೊಬ್ಬನು ದ್ವೈತವನದ ಒಂದು ಭಾಗದಲ್ಲಿ ಆಶ್ರಮವನ್ನು ರಚಿಸಿಕೊಂಡು ತಪಶ್ಚರಣೆಯಲ್ಲಿ ನಿರತನಾಗಿದ್ದನು. ಒಮ್ಮೆ ಅವನ ಆಶ್ರಮಕ್ಕೆ ಜಿಂಕೆಯೊಂದು ಓಡುತ್ತಾ ಬಂದಿತು. ಆಶ್ರಮದ ಸಮೀಪದಲ್ಲಿದ್ದ ವೃಕ್ಷವೊಂದರಲ್ಲಿ ತೂಗು ಹಾಕಿದ್ದ ಅರಣಿ ( ಅಗ್ನಿಯನ್ನು ಉತ್ಪಾದಿಸುವುದ ಕ್ಕಾಗಿ ಹಿಂದೆ ಉಪಯೋಗಿಸುತ್ತಿದ್ದ ಒರಳಿನಂತಹ ಮರದ ತುಂಡು) ಮತ್ತು

ಅರಣಿಯನ್ನು ಕಡೆಯಲು ಉಪಯೋಗಿಸುತ್ತಿದ್ದ ಮಂಥನದಂಡ–ಇವೆರಡೂ ಜಿಂಕೆಯು ಮರಕ್ಕೆ ಮೈಯನ್ನು ಉಜ್ಜುತ್ತಿದ್ದಾಗ ಅದರ ಕೊಂಬುಗಳಿಗೆ ಸಿಕ್ಕಿಕೊಂಡುವು. ಜಿಂಕೆಯು ಗಾಬರಿಗೊಂಡು ಅರಣಿ-ಮಂಥನದಂಡಗಳ ಸಮೇತವಾಗಿಯೇ ಓಡಲಾರಂಭಿಸಿತು. ಬ್ರಾಹ್ಮಣನು ಸ್ವಲ್ಪದೂರ ಹಿಂಬಾಲಿಸಿದರೂ ಜಿಂಕೆಯನ್ನು ಹಿಡಿಯಲಾಗಲಿಲ್ಲ. ಜಿಂಕೆಯು ಓಡುತ್ತಿದ್ದರೂ ಅರಣಿಯು ಅದರ ಕೊಂಬಿನಿಂದ ಕೆಳಗೆ ಬೀಳಲಿಲ್ಲ. ಬ್ರಾಹ್ಮಣನು ಅಗ್ನಿಹೋತ್ರಿಯಾಗಿದ್ದುದರಿಂದ ಅರಣಿಯ ಮತ್ತು ಅಗ್ನಿಮಂಥನದಂಡದ ಅವಶ್ಯಕತೆಯು ಬಹಳವಾಗಿತ್ತು. ಆದುದರಿಂದಲೇ ಅವನು ಬಹುವ್ಯಾಕುಲಗೊಂಡವನಾಗಿ ಪಾಂಡವರ ಬಳಿಗೆ ಬಂದನು. ಸಂತಪ್ತನಾದ ಆ ಬ್ರಾಹ್ಮಣನು ಅನುಜರಿಂದೊಡಗೂಡಿ ಕುಳಿತಿದ್ದ ಅಜಾತಶತ್ರುವನ್ನು ಸ್ವಲ್ಪವಾದರೂ ತಡಮಾಡದೇ ಸಂದರ್ಶಿಸಿ ಹೇಳಿದನು :

"ಮಹಾರಾಜ! ಜಿಂಕೆಯೊಂದು ನನ್ನ ಆಶ್ರಮದ ಬಳಿಯಲ್ಲಿ ಓಡುತ್ತಾ, ಒಂದು ಮರಕ್ಕೆ ಮೈಯ್ಯುಜ್ಜುತ್ತಿದ್ದಾಗ ಕವಲೊಡೆದ ಅದರ ಎರಡು ಕೊಂಬುಗಳಿಗೆ, ನಾನು ವೃಕ್ಷದ ಮೇಲೆ ತೂಗುಹಾಕಿದ್ದ ಅರಣಿಯೂ ಮತ್ತು ಅಗ್ನಿಯನ್ನು ಮಥಿಸುವ ದಂಡವೂ ಸಿಕ್ಕಿಹಾಕಿಕೊಂಡುವು. ಒಡನೆಯೇ ಆ ಜಿಂಕೆಯು ತಲೆಯನ್ನಲ್ಲಾಡಿಸುತ್ತಾ ಒಂದೆಡೆಯಿಂದ ಮತ್ತೊಂದೆಡೆಗೆ ನೆಗೆಯುತ್ತಾ ಬಹುವೇಗವಾಗಿ ಓಡಿಹೋಯಿತು. ಅದು ತಲೆಯಲ್ಲಾಡಿಸಿದರೂ ಅರಣಿಯಾಗಲೀ ಮಂಥನದಂಡವಾಗಲೀ ಕೆಳಗೆ ಬೀಳಲಿಲ್ಲ. ಅದರ ಹೆಜ್ಜೆಗಳನ್ನೇ ನೀವುಗಳು ಅನುಸರಿಸಿ ಹೋಗಿ ನನ್ನ ಅಗ್ನ್ಯುತ್ಪಾದಕಸಾಮಗ್ರಿಗಳನ್ನು ತಂದುಕೊಡಿರಿ. ನೀವು ಶೀಘ್ರದಲ್ಲಿಯೇ ಹೋಗಿ ನನಗವುಗಳನ್ನು ತಂದುಕೊಡದಿದ್ದರೆ ನನ್ನ ಅಗ್ನಿಹೋತ್ರವು ನಿಂತುಹೋಗುವುದು. ಸಕಾಲದಲ್ಲಿ ಮಾಡಬೇಕಾಗಿರುವ ಅಗ್ನಿಹೋತ್ರಕ್ಕೆ ನ್ಯೂನತೆಯುಂಟಾಗದ ರೀತಿಯಲ್ಲಿ ನೀವೀಗಲೇ ಜಿಂಕೆಯ ಬೆನ್ನಟ್ಟಿಹೋಗಿರಿ."

ಬ್ರಾಹ್ಮಣನ ಮಾತುಗಳನ್ನು ಕೇಳಿ ಯುಧಿಷ್ಠಿರನು ಸಂತಪ್ತನಾದನು. ಆ ಕೂಡಲೇ ಧನುಸ್ಸನ್ನು ತೆಗೆದುಕೊಂಡು ತನ್ನ ಅನುಜರೊಡನೆ ಜಿಂಕೆಯನ್ನು ಹುಡುಕಲು ಹೊರಟೇಬಿಟ್ಟನು. ಯುಧಿಷ್ಠಿರನ ಅನುಜರೂ ಧನು

ಬಾಣಗಳಿಂದ ಸನ್ನದ್ಧರಾಗಿಯೇ ಹೊರಟರು. ಬ್ರಾಹ್ಮಣನ ಅಗ್ನ್ಯುತ್ಪಾದಕ ಸಾಮಗ್ರಿಗಳನ್ನು ಸಾಧ್ಯವಾದಷ್ಟು ಬೇಗ ತರುವ ಸಲುವಾಗಿ ಆ ಐವರೂ ಶೀಘ್ರವಾಗಿ ಜಿಂಕೆಯನ್ನರಸುತ್ತಾ ಓಡಿದರು. ಜಿಂಕೆಯನ್ನು ಹುಡುಕುವುದು ಪಾಂಡವರಿಗೆ ಅಷ್ಟೇನೂ ಕಷ್ಟವಾಗಲಿಲ್ಲ. ಸ್ವಲ್ಪದೂರ ಅದರ ಹೆಜ್ಜೆಗಳನ್ನನು ಸರಿಸಿ ಹೋಗುವುದರೊಳಗಾಗಿಯೇ ಜಿಂಕೆಯು ಗೋಚರವಾಯಿತು. ಒಡನೆಯೇ ಪಾಂಡವರು ಭರ್ಜಿಗಳಿಂದಲೂ, ಈಟಿಗಳಿಂದಲೂ, ಬಾಣ ಗಳಿಂದಲೂ ಜಿಂಕೆಗೆ ಗುರಿಯಿಟ್ಟು ಹೊಡೆದರು. ಆದರೆ ಅವರು ಪ್ರಯೋ ಗಿಸಿದ ಯಾವ ಆಯುಧವೂ ಜಿಂಕೆಗೆ ಘಾಸಿಯನ್ನುಂಟುಮಾಡಲಿಲ್ಲ. ಅದು ಓಡುತ್ತಲೇ ಇದ್ದಿತು. ಪಾಂಡವರೂ ಅದನ್ನು ಕೊಲ್ಲುವ ನಿರ್ಧಾರದಿಂದ ಬೆನ್ನಟ್ಟಿ ಬಾಣಪ್ರಯೋಗವನ್ನು ಮಾಡುತ್ತಲೇ ಇದ್ದರು. ಹತ್ತಿರದಲ್ಲಿಯೇ ಸಿಕ್ಕಿ ಜಿಂಕೆಯು ಹತವಾಗಿ ಹೋಗುವುದೆಂದು ಪಾಂಡವರು ಭಾವಿಸಿದ ಮರುಕ್ಷಣದಲ್ಲಿಯೇ ಅದು ಕಣ್ಮರೆಯಾಗುತ್ತಿದ್ದಿತು. ಬಹಳ ಹೊತ್ತಿನವರೆಗೆ ಪಾಂಡವರು ಜಿಂಕೆಯ ಬೆನ್ನಟ್ಟಿ ಹೋದರೂ ಅದು ಆಯಾಸದಲ್ಲಿ ಪರ್ಯವಸಾನವಾಯಿತೇ ಹೊರತು ಜಿಂಕೆಯನ್ನು ಕೊಲ್ಲಲು ಪಾಂಡವರಿಗೆ ಸಾಧ್ಯವಾಗಲಿಲ್ಲ. ಬಹಳ ದೂರದವರೆಗೆ ಅವರನ್ನು ಕರೆದೊಯ್ದನಂತರ ಆ ಜಿಂಕೆಯೂ ಕಾಣಿಸದೇ ಹೋಯಿತು. ಅದರಿಂದಾಗಿ ಪಾಂಡವರ ಉತ್ಸಾಹವೂ ಪೂರ್ಣವಾಗಿ ಕುಗ್ಗಿತು. ಹಸಿವು-ಬಾಯಾರಿಕೆಗಳಿಂದ ಬಳಲಿದ್ದ ಪಾಂಡವರು ಮುಂದೆ ನಡೆಯಲಾರದೇ ಅಲ್ಲಿಯೇ ಇದ್ದ ತಂಪಾದ ನೆರಳಿನಿಂದ ಕೂಡಿದ್ದ ಆಲದ ಮರದ ಕೆಳಗೆ ವಿಶ್ರಮಿಸಿಕೊಂಡರು. ಐವರೂ ಕುಳಿತಿರಲಾಗಿ ದಣಿವಿನಿಂದ ಬಹುವಾಗಿ ಬಳಲಿದ್ದ ನಕುಲನು ಬಹುದುಃಖಿತನಾಗಿ ಮತ್ತು ಸಹನೆ ಮೀರಿದವನಾಗಿ ಅಣ್ಣನನ್ನು ಪ್ರಶ್ನಿಸಿದನು :

ನಾಸ್ಮಿನ್ಕುಲೇ ಜಾತು ಮಮಜ್ಜ ಧರ್ಮೋ
ನ ಚಾಲಸ್ಯಾದರ್ಥಲೋಪೋ ಬಭೂವ ।
ಅನುತ್ತರಾಃ ಸರ್ವಭೂತೇಷು ಭೂಯಃ
ಸಮ್ಪ್ರಾಪ್ತಾಃ ಸ್ಮಃ ಸಂಶಯಂ ಕಿಂ ನು ರಾಜನ್ ॥ ೨೧॥

"ಅಣ್ಣ! ನಮ್ಮ ವಂಶದಲ್ಲಿ ಯಾವಾಗಲೂ ಧರ್ಮವು ಲೋಪ

ಹೊಂದಿರಲಿಲ್ಲ. ಆಲಸ್ಯದ ಕಾರಣದಿಂದ ಅರ್ಥಲೋಪವೂ ಉಂಟಾಗಿರುವುದಿಲ್ಲ. ಧರ್ಮಾರ್ಥಗಳ ವಿಷಯದಲ್ಲಿ ವಿವೇಕದಿಂದಲೇ ನಡೆದುಕೊಂಡು ಬರುತ್ತಿದ್ದೇವೆ. ಯಾರು ಯಾವ ಕಾಲದಲ್ಲಿ ಯಾವುದೇ ಕಾರ್ಯಾರ್ಥವಾಗಿ ಬಂದರೂ ನಾವು ಪುನಃ ಉತ್ತರಕೊಡುವ ಅಥವಾ ಪುನಃ ಪ್ರಶ್ನಿಸುವ ಗೋಜಿಗೇ ಹೋದವರಲ್ಲ. ಪ್ರಾರ್ಥಿಸಿದ ಕಾರ್ಯವನ್ನು ಕೂಡಲೇ ಮಾಡಿಕೊಡುವ ಮತ್ತು ಯಾಚಿಸಿದುದುನ್ನು ಕೂಡಲೇ ದಾನಮಾಡುವ ಸ್ವಭಾವವು ನಮ್ಮದು. ಹೀಗೇಕೆ ವರ್ತಿಸಿದಿರೆಂದು ಬೇರೆಯವರು ಪ್ರಶ್ನಿಸುವ ರೀತಿಯಲ್ಲಿ ನಾವೆಂದಿಗೂ ನಡೆದುಕೊಂಡಿರುವುದಿಲ್ಲ. ಹೀಗಿರುವಾಗ ಬ್ರಾಹ್ಮಣನ ಕಾರ್ಯವನ್ನು ಮಾಡಿಕೊಡಲಾರದ ಈ ದೋಷವು ನಮಗೆ ಹೇಗೆ ಪ್ರಾಪ್ತವಾಯಿತು? ಜಿಂಕೆಯನ್ನು ಹಿಡಿಯಲು ನಾವು ಏಕೆ ಅಸಮರ್ಥರಾದೆವು?"

ಇ೧೧ನೆಯ ಅಧ್ಯಾಯವು ಮುಗಿಯಿತು.

ಇ೧೨ನೆಯ ಅಧ್ಯಾಯ ಆರಣೇಯಪರ್ವ (ಮುಂದುವರಿದಿದೆ.)

## ಕುಡಿಯಲು ನೀರು ತರಲು ಹೋದ ನಕುಲ-ಸಹದೇವ-ಭೀಮಾರ್ಜುನರು ಸರೋವರದ ಸಮೀಪದಲ್ಲಿ ನಿಶ್ಚೇಷ್ಟರಾಗಿ ಬಿದ್ದುದು

ಪಾರಿಕ್ಷಿತ! ಧರ್ಮಜನು ಉತ್ತರಿಸಿದನು :

"ನಕುಲ!

**ನಾಪದಾಮಸ್ತಿ ಮರ್ಯಾದಾ ನ ನಿಮಿತ್ತಂ ನ ಕಾರಣಮ್ ।**
**ಧರ್ಮಸ್ತು ವಿಭಜತ್ಯರ್ಥಮುಭಯೋಃ ಪುಣ್ಯಪಾಪಯೋಃ ॥೧॥**

ಆಪತ್ತುಗಳಿಗೆ ಒಂದು ಎಲ್ಲೆಯಿಲ್ಲ. ಅದು–'ಯಾವಾಗ ಬರಬೇಕು, ಯಾವಾಗ ಬರಕೂಡದು'–ಎಂಬುದಿಲ್ಲ. ಕಾರಣ ಮತ್ತು ನಿಮಿತ್ತಗಳಿದ್ದೇ ಅವುಗಳು ಬರಬೇಕೆಂಬುದೂ ಇಲ್ಲ. ಆಪತ್ತುಗಳಿಗೆ ಮುಖ್ಯಕಾರಣನೆಂದರೆ ಯಮಧರ್ಮನು. ಮಾನವನು ಮಾಡುವ ಪುಣ್ಯ-ಪಾಪಗಳನ್ನು ಸರಿಯಾಗಿ ವಿಭಜಿಸಿ ಅವುಗಳ ಪ್ರಯೋಜನವನ್ನು (ಫಲವನ್ನು) ಸೂಕ್ತವೆನಿಸಿದ ಕಾಲದಲ್ಲಿ ಹಂಚಿಕೊಡುತ್ತಾನೆ."

ಧರ್ಮಜನ ಮಾತುಗಳನ್ನು ಕೇಳಿ ಭೀಮನು ಹೇಳಿದನು :

**ಪ್ರಾತಿಕಾಮ್ಯನಯತ್ಕೃಷ್ಣಾಂ ಸಭಾಯಾಂ ಪ್ರೇಷ್ಯವತ್ತದಾ ।**
**ನ ಮಯಾ ನಿಹತಸ್ತತ್ರ ತೇನ ಪ್ರಾಪ್ತಾಃ ಸ್ಮ ಸಂಶಯಮ್ ॥೨॥**

"ಅಣ್ಣ! ನಮಗೀಗ ಒದಗಿರುವ ಕಷ್ಟದ ಕಾರಣವನ್ನು ನಾನು ಹೀಗೆಂದು ಬಗೆದಿದ್ದೇನೆ. ಧೂರ್ತನಾದ ದುಃಶಾಸನನು ವೀರಪತ್ನಿಯಾದ ದ್ರೌಪದಿಯನ್ನು–ದಾಸಿಯೊಬ್ಬಳನ್ನು ಸೆಳೆದೆಳೆಯುವಂತೆ–ರಾಜಸಭೆಗೆ ಸೆಳೆದು ತಂದಾಗ ಅವನನ್ನು ಆ ಕೂಡಲೇ ಸಂಹಾರಮಾಡದೇ ಬಿಟ್ಟಿದ್ದೇ (ಆ ಕರ್ತವ್ಯಲೋಪವೇ) ನಮ್ಮ ಈ ಕಷ್ಟಪರಂಪರೆಗೆ ಮುಖ್ಯಕಾರಣವಾಗಿ ರುತ್ತದೆ."

ಅರ್ಜುನನೂ ತನ್ನ ಅಭಿಪ್ರಾಯವನ್ನು ಹೀಗೆಂದು ವ್ಯಕ್ತಪಡಿಸಿದನು :

**ವಾಚಸ್ತೀಕ್ಷ್ಣಾಸ್ಥಿಭೇದಿನ್ಯಃ ಸೂತಪುತ್ರೇಣ ಭಾಷಿತಾಃ ।**
**ಅತಿತೀವ್ರಾ ಮಯಾ ಕ್ಷಾಂತಾಸ್ತೇನ ಪ್ರಾಪ್ತಾಃ ಸ್ಮ ಸಂಶಯಮ್ ॥೩॥**

"ನೀನು ಹೇಳುವುದು ನಿಜವಣ್ಣ! ಅಂದಿನ ಆ ಮಹಾಸಭೆಯಲ್ಲಿ ಸೂತಪುತ್ರನಾಡಿದ, ಮೂಳೆಗಳನ್ನೂ ಭೇದಿಸಿ ಒಳಹೊಗುವಂತಹ (ಹೃದಯಭೇದಕವಾದ) ಸುತೀಕ್ಷ್ಣವಾದ ಮಾತುಗಳನ್ನು ಕೇಳಿಯೂ ನಾನು ಕ್ಷಮಾಗುಣವನ್ನು ಅವಲಂಬಿಸಿ ಕುಳಿತಿದ್ದುದೇ ಇಂದಿನ ಈ ಕಷ್ಟಪರಂಪರೆಗೆ ಮುಖ್ಯಕಾರಣವೆಂದು ಭಾವಿಸುತ್ತೇನೆ."

**ಶಕುನಿಸ್ತ್ವಾಂ ಯದಾಜೈಷೀದಕ್ಷದ್ಯೂತೇನ ಭಾರತ ।**
**ಸ ಮಯಾ ನ ಹತಸ್ತತ್ರ ತೇನ ಪ್ರಾಪ್ತಾಃ ಸ್ಮ ಸಂಶಯಮ್ ॥೪॥**

"ಹಾಗಲ್ಲವಣ್ಣ! ವಂಚನೆಯ ಪಗಡೆಯಾಟದಲ್ಲಿ ನಮ್ಮನ್ನು ಸೋಲಿಸಿದೊಡನೆಯೇ ವಂಚಕನಾದ ಆ ದುಷ್ಟಶಕುನಿಯನ್ನು ನಾನು ಕೊಲ್ಲದಿದ್ದುದೇ ಇಂದಿನ ವಿಪತ್ತುಗಳಿಗೆ ಕಾರಣವಾಗಿದೆ"–ಎಂಬುದಾಗಿ ಸಹದೇವನೂ ಗರ್ಜಿಸಿ ಹೇಳಿದನು.

ಜನಮೇಜಯ! ಅನಂತರ ಧರ್ಮಜನು ತನ್ನ ಅನುಜರೆಲ್ಲರನ್ನೂ ಸುಯುಕ್ತಿಗಳಿಂದ ಸಮಾಧಾನಗೊಳಿಸಿ ನಕುಲನನ್ನು ಕುರಿತು ಹೇಳಿದನು : "ಮಾದ್ರೇಯ! ನೀನೀಗಲೇ ಈ ಮರವನ್ನು ಹತ್ತಿ ದಶದಿಕ್ಕುಗಳಲ್ಲಿಯೂ

ದೃಷ್ಟಿಯನ್ನು ಪ್ರಸರಿಸಿ ಹತ್ತಿರದಲ್ಲೇ ಕುಡಿಯುವ ನೀರು ಎಲ್ಲಿಯಾದರೂ ಕಾಣುವುದೇ ನೋಡು. ಒಂದು ವೇಳೆ ತಟಾಕವು ಕಾಣದೇ ಇದ್ದರೂ ನೀರಿನ ಆಶ್ರಯದಿಂದಲೇ ಬೆಳೆಯುವ ವೃಕ್ಷಗಳಾದರೂ ಎಲ್ಲಿವೆ–ಎಂಬುದನ್ನಾದರೂ ತಿಳಿದುಕೋ. ಅವುಗಳ ಸಮೀಪದಲ್ಲಾದರೂ ನಮಗೆ ನೀರು ಸಿಕ್ಕಬಹುದು. ಈ ನಿನ್ನ ಸೋದರರೆಲ್ಲರೂ ಬಾಯಾರಿಕೆಯಿಂದ ಬಳಲಿ ಹೋಗಿದ್ದಾರೆ."

ಹಾಗೆಯೇ ಆಗಲೆಂದು ಹೇಳಿ ನಕುಲನು ಒಡನೆಯೇ ವೃಕ್ಷವನ್ನೇರಿ ಸುತ್ತಲೂ ನೋಡಿ ಅಣ್ಣನನ್ನು ಕುರಿತು ಹೇಳಿದನು :

"ಮಹಾರಾಜ! ನಾನು ಈ ದಿಕ್ಕಿನಲ್ಲಿ ನೀರಿನ ಆಸರೆಯಿಂದಲೇ ಬೆಳೆಯುವ ವೃಕ್ಷಗಳ ಸಮೂಹವನ್ನು ಕಾಣುತ್ತಿದ್ದೇನೆ ಮತ್ತು ಈ ಕಡೆಯಿಂದಲೇ ನೀರಿನಲ್ಲಿ ವಾಸಮಾಡುವ ಸಾರಸಪಕ್ಷಿಗಳ ಮಧುರನಿನಾದವನ್ನೂ ಕೇಳುತ್ತಿದ್ದೇನೆ. ಆದುದರಿಂದ ಈ ವೃಕ್ಷಗಳ ನಡುವೆ ಯಾವುದಾದರೂ ಸರೋವರವಿದ್ದೇ ಇರಬೇಕು. ಇದರಲ್ಲಿ ಸಂಶಯವೇ ಇಲ್ಲ."

ನಕುಲನ ಮಾತುಗಳನ್ನು ಕೇಳಿ ಸತ್ಯಧೃತಿಯಾದ, ಕುಂತೀಪುತ್ರನಾದ ಯುಧಿಷ್ಠಿರನು ಹೇಳಿದನು : "ಸೌಮ್ಯನೇ! ನೀನೀಗಲೇ ಈ ಬತ್ತಳಿಕೆಗಳನ್ನು ತೆಗೆದುಕೊಂಡು ಹೋಗಿ ಇವುಗಳಲ್ಲಿ ನೀರನ್ನು ತುಂಬಿಕೊಂಡು ಬಾ."

ಹಾಗೆಯೇ ಆಗಲೆಂದು ಹೇಳಿದ ನಕುಲನು ಬತ್ತಳಿಕೆಗಳನ್ನು ತೆಗೆದು ಕೊಂಡು ವೃಕ್ಷಗಳ ಸಮೂಹವಿದ್ದ ದಿಕ್ಕಿನ ಕಡೆಗೆ ಹೊರಟವನಾಗಿ ಸ್ವಲ್ಪ ಹೊತ್ತಿನಲ್ಲಿಯೇ ಅವುಗಳ ಮಧ್ಯದಲ್ಲಿದ್ದ ಸರೋವರದ ಬಳಿಗೆ ಧಾವಿಸಿದನು. ಸರೋವರದ ನೀರು ಸ್ಫಟಿಕದಂತೆ ಸ್ವಚ್ಛವಾಗಿದ್ದಿತು. ಸಾರಸಪಕ್ಷಿಗಳು ಸರೋವರದ ಸುತ್ತಲೂ ನಲಿದಾಡುತ್ತಿದ್ದುವು. ಅಂತಹ ಬಹುರಮ್ಯವಾದ ಸರೋವರವನ್ನು ಕಂಡೊಡನೆಯೇ ನಕುಲನಿಗೆ ನೀರು ಕುಡಿಯುವ ಆಸೆಯಾಯಿತು. ಅಂತೆಯೇ ನೀರಿನ ಬಳಿಗೆ ಹೋದನು. ಆ ವೇಳೆಗೆ ಸರಿಯಾಗಿ ಅಂತರಿಕ್ಷದ ಕಡೆಯಿಂದ ಬಂದ ಈ ಮಾತುಗಳನ್ನು ನಕುಲನು ಕೇಳಿದನು :

**ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ ।**
**ಪ್ರಶ್ನಾನುಕ್ತ್ವಾ ತು ಮಾದ್ರೇಯ ಪಿಬಸ್ವ ಚ ಹರಸ್ವ ಚ ॥೧೨॥**

"ಮಗು! ಮಾದ್ರೇಯ! ನೀರನ್ನು ಮುಟ್ಟುವ ಸಾಹಸವನ್ನು ಮಾಡಬೇಡ. ಈ ಮೊದಲೇ ನಾನೀ ಸರೋವರವನ್ನು ನನ್ನದನ್ನಾಗಿ ಮಾಡಿಕೊಂಡಿರುತ್ತೇನೆ. ನೀರನ್ನು ಮುಟ್ಟುವ ಮೊದಲು ನೀನು ನನ್ನ ಪ್ರಶ್ನೆಗೆ ಉತ್ತರಿಸಬೇಕು. ಅನಂತರದಲ್ಲಿ ಬೇಕಾದಷ್ಟು ನೀರನ್ನು ಕುಡಿದು ನಿನ್ನ ಸೋದರರಿಗೂ ಒಯ್ಯಬಹುದು."

ಆದರೆ ನಕುಲನಿಗೆ ಬಾಯಾರಿಕೆಯು ಬಹಳವಾಗಿತ್ತು. ಪ್ರಶ್ನೆಗೆ ಉತ್ತರಿಸುವಷ್ಟು ಸೈರಣೆಯಿರಲಿಲ್ಲ. ಅಶರೀರವಾಣಿಯನ್ನು ಅನಾದರಣೆ ಮಾಡಿ ಸರೋವರದ ಶೀತಲವಾದ ಆ ನೀರನ್ನು ಕುಡಿದನು. ಕುಡಿದ ಮರುಕ್ಷಣದಲ್ಲಿಯೇ ಅಸುವನ್ನು ತೊರೆದು ಕೆಳಗುರುಳಿದನು.

ಇತ್ತ ಯುಧಿಷ್ಠಿರನಿಗೆ ನಕುಲನು ಬಹಳ ಹೊತ್ತಾದರೂ ಬಾರದಿರುವುದನ್ನು ಕಂಡು ವ್ಯಾಕುಲವಾಯಿತು. ಕಡೆಯ ತಮ್ಮನಾದ ಸಹದೇವನನ್ನು ಕರೆದು ಧರ್ಮಜನು ಹೇಳಿದನು : "ಸಹದೇವ! ನಿನ್ನ ಅಗ್ರಜನಾದ ನಕುಲನು ನೀರು ತರಲು ಹೋಗಿ ಬಹಳ ಹೊತ್ತಾಯಿತು. ನೀನೀಗಲೇ ಆ ಸರೋವರದ ಸಮೀಪಕ್ಕೆ ಹೋಗಿ ಅವನನ್ನು ಕರೆದುಕೊಂಡು ಬರುವುದಲ್ಲದೇ–ನಾವುಗಳು ಕುಡಿಯಲು ಬತ್ತಳಿಕೆಯಲ್ಲಿ ನೀರನ್ನೂ ತೆಗೆದುಕೊಂಡು ಬಾ."

ಸಹದೇವನು ಹಾಗೆಯೇ ಆಗಲೆಂದು ಹೇಳಿ ನಕುಲನು ಹೋದ ಮಾರ್ಗವನ್ನೇ ಅನುಸರಿಸಿ ಹೋಗಿ ಸರೋವರವನ್ನು ತಲುಪಿದನು. ಸರೋವರದ ಸಮೀಪದಲ್ಲಿ ತನ್ನ ಅಣ್ಣನು ಸತ್ತುಬಿದ್ದಿರುವುದನ್ನು ನೋಡಿ ಬಹಳ ದುಃಖಿತನಾದನು. ಅವನಿಗೂ ಬಾಯಾರಿಕೆಯು ಬಹಳವಾಗಿತ್ತು. ಮೊದಲು ನೀರನ್ನು ಕುಡಿದುಬಿಡಬೇಕೆಂಬ ಅವಸರದಿಂದ ಸರೋವರದ ಸಮೀಪಕ್ಕೆ ಹೋಗಿ ನೀರನ್ನು ಮುಟ್ಟುವುದರೊಳಗಾಗಿ ಅವನಿಗೂ ಸಹ ಹಿಂದಿನಂತೆಯೇ ಆಕಾಶದ ಕಡೆಯಿಂದ ಮಾತೊಂದು ಕೇಳಿಬಂದಿತು :

**ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ ।**
**ಪ್ರಶ್ನಾನುಕ್ತ್ವಾ ಯಥಾಕಾಮಂ ಪಿಬಸ್ವ ಚ ಹರಸ್ವ ಚ ॥೧೮॥**

"ಮಗು! ನೀರನ್ನು ಮುಟ್ಟುವ ಸಾಹಸವನ್ನು ಮಾಡಬೇಡ. ಈ ಮೊದಲೇ ನಾನು ಈ ಸರೋವರವನ್ನು ನನ್ನದನ್ನಾಗಿ ಮಾಡಿಕೊಂಡಿರುತ್ತೇನೆ. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರಿಸಿದ ನಂತರ ಯಥೇಚ್ಛವಾಗಿ ನೀರನ್ನು ಕುಡಿ ಮತ್ತು ತೆಗೆದುಕೊಂಡೂ ಹೋಗು."

ಜನಮೇಜಯ! ಅತಿಯಾದ ಬಾಯಾರಿಕೆಯಿಂದಾಗಿ ಪ್ರಶ್ನೆಯೇನೆಂಬುದನ್ನು ಕೇಳುವ ಸಹನೆಯು ಸಹದೇವನಿಗೂ ಇಲ್ಲವಾಯಿತು. ಅಶರೀರವಾಣಿಯನ್ನು ಅನಾದರಣೆಮಾಡಿ ಸರೋವರದ ಶೀತಲೋದಕವನ್ನು ಸಹದೇವನೂ ಕುಡಿದನು. ಒಡನೆಯೇ ಅವನು ಗತಪ್ರಾಣನಾಗಿ ಕೆಳಗುರುಳಿದನು.

ಸಹದೇವನೂ ಬಹಳ ಹೊತ್ತಾದರೂ ಬರಲಿಲ್ಲ. ಯುಧಿಷ್ಠಿರನು ಯೋಚನೆಗೀಡಾದನು. ಅಂತೆಯೇ ವಿಜಯನನ್ನು ಕುರಿತು ಹೇಳಿದನು : "ನಿನ್ನ ಇಬ್ಬರು ಅನುಜರೂ ಹೋಗಿ ಬಹಳ ಹೊತ್ತಾಯಿತು. ಅವರು ಬಾರದಿರಲು ಕಾರಣವೂ ತಿಳಿಯಲಿಲ್ಲ. ನೀನೀಗಲೇ ಹೋಗಿ ಅವರನ್ನು ಕರೆತರುವುದಲ್ಲದೇ ನಾವು ಕುಡಿಯಲು ಬತ್ತಳಿಕೆಯಲ್ಲಿ ನೀರನ್ನೂ ತೆಗೆದುಕೊಂಡು ಬಾ, ಅರ್ಜುನ! ದುಃಖಿತರಾದ ನಮಗೆ ನೀನೊಬ್ಬನೇ ಆಶ್ರಯನು."

ಅಣ್ಣನು ಹೀಗೆಂದು ಹೇಳಿದೊಡನೆಯೇ ಮೇಧಾವಿಯಾದ ಗುಡಾಕೇಶನು ಧನುರ್ಬಾಣಗಳನ್ನು ತೆಗೆದುಕೊಂಡು ಒರೆಯಿಂದ ತೆಗೆದ ಖಡ್ಗವನ್ನು ಕೈಯಲ್ಲಿ ಝಳಪಿಸುತ್ತಾ ಸರೋವರದ ಬಳಿಗೆ ಧಾವಿಸಿದನು. ನೀರನ್ನು ತರಲು ಬಂದಿದ್ದ ಇಬ್ಬರು ಸಹೋದರರರೂ ನೀರಿನ ಅಂಚಿನಲ್ಲಿಯೇ ಸತ್ತು ಬಿದ್ದಿರುವುದನ್ನು ಶ್ವೇತವಾಹನನು ಕಂಡನು.

ಜೀವರಹಿತರಾಗಿ ಬಿದ್ದಿದ್ದರೂ ನಕುಲ-ಸಹದೇವರು ಮಲಗಿ ನಿದ್ರಿಸುತ್ತಿರುವರೋ ಎಂಬಂತೆಯೇ ಕಾಣುತ್ತಿದ್ದರು. ನರಸಿಂಹನಾದ ಅರ್ಜುನನು ಅವರನ್ನು ನೋಡಿ ಬಹುದುಃಖಿತನಾಗಿ ಧನುಸ್ಸನ್ನು ಮೇಲೆತ್ತಿ ಸರೋವರದ ಸುತ್ತಲೂ ವೀಕ್ಷಿಸಿದನು. ಆ ಮಹಾವನದಲ್ಲಿ ಒಂದು ಪ್ರಾಣಿಯಾದರೂ

ಅರ್ಜುನನ ಕಣ್ಣುಗಳಿಗೆ ಕಾಣಿಸಲಿಲ್ಲ. ಬಹುಶ್ರಾಂತನಾಗಿದ್ದ ಸವ್ಯಸಾಚಿಯು ಬಾಯಾರಿಕೆಯಿಂದಾಗಿ ನೀರನ್ನು ಕುಡಿಯಲು ತಟಾಕದ ಸಮೀಪಕ್ಕೆ ಬಂದಾಗ ಅಂತರಿಕ್ಷದ ಕಡೆಯಿಂದ ಈ ಮಾತನ್ನು ಕೇಳಿದನು :

**ಕಿಮಾಸೀದಸಿ ಪಾನೀಯಂ ನೈತಚ್ಛಕ್ಯಂ ಬಲಾತ್ತ್ವಯಾ ॥೨೬॥**

**ಕೌನ್ತೇಯ ಯದಿ ಪ್ರಶ್ನಾಂಸ್ತಾನ್ಮಯೋಕ್ತಾನ್ಪ್ರತಿಪತ್ಸ್ಯಸೇ ।**
**ತತಃ ಪಾಸ್ಯಸಿ ಪಾನೀಯಂ ಹರಿಷ್ಯಸಿ ಚ ಭಾರತ ॥೨೭॥**

"ನೀರಿನ ಬಳಿಗೆ ಬಂದುಬಿಡುವೆಯೇನು? (ನೀರನ್ನು ಕುಡಿದು ಬಿಡುವೆಯಾ?) ಬಲಾತ್ಕಾರದಿಂದ ಹೀಗೆ ಮಾಡಲು ಖಂಡಿತವಾಗಿಯೂ ನಿನಗೆ ಸಾಧ್ಯವಾಗಲಾರದು, ಕೌಂತೇಯ! (ಬಲಿಷ್ಠನಾಗಿರುವ ಮಾತ್ರದಿಂದ ನೀನು ಈ ನೀರನ್ನು ಕುಡಿಯಲಾರೆ.) ನನ್ನ ಪ್ರಶ್ನೆಗಳನ್ನು ಕೇಳಿ ಆ ಪ್ರಶ್ನೆಗಳಿಗೆ ಅನುರೂಪವಾದ ಉತ್ತರವನ್ನು ಕೊಟ್ಟನಂತರ ಈ ಸರೋವರದ ನೀರನ್ನು ಕುಡಿಯಲು ಮತ್ತು ಬೇಕಾದಷ್ಟನ್ನು ಒಯ್ಯಲು ನಿನಗೆ ಸಾಧ್ಯವಾಗುವುದು."

ಜನಮೇಜಯ! ನೀರುಕುಡಿಯಲು ಪ್ರತಿರೋಧಿಸಿದ ಅಶರೀರವಾಣಿಯನ್ನು ಕೇಳಿ ಆ ವಾಣಿಯು ಬಂದಕಡೆಗೆ ಅಭಿಮುಖನಾಗಿ ನಿಂತು ಪಾರ್ಥನು ಹೇಳಿದನು :

"ಅದೃಶ್ಯನಾಗಿ ನಿಂತು ನೀರು ಕುಡಿಯುವುದನ್ನು ಪ್ರತಿಬಂಧಿಸಲು ಯತ್ನಿಸಬೇಡ. ಪ್ರತ್ಯಕ್ಷವಾಗಿ ಬಂದು ಪ್ರತಿರೋಧಿಸು. ನನ್ನ ಬಾಣಗಳ ಪ್ರಹಾರದಿಂದ ಕ್ಷಣಮಾತ್ರದಲ್ಲಿ ಹತನಾಗುವ ನೀನು ಪುನಃ ಹೀಗೆ ಹೇಳಲು ಸಮರ್ಥನಾಗಲಾರೆ." ಹೀಗೆಂದು ಹೇಳಿದ ಪಾರ್ಥನು ಧನುಸ್ಸಿಗೆ ಹೆದೆಯೇರಿಸಿ ಮಂತ್ರಪುನಶ್ಚರಣೆಮಾಡಿ ಅನುಸ್ಯೂತವಾಗಿ ಬಾಣಗಳನ್ನು ಪ್ರಯೋಗಿಸಿ ದಿಕ್ಕುಗಳೆಲ್ಲವನ್ನೂ ಶರಜಾಲದಿಂದ ಮುಚ್ಚಿಬಿಟ್ಟನಲ್ಲದೇ–ಅಶರೀರವಾಣಿಯು ಬರುತ್ತಿದ್ದೆಡೆಗೆ ಗುರಿಯಿಟ್ಟು ಬಾಣಪ್ರಯೋಗ ಮಾಡುತ್ತಾ ತನ್ನಲ್ಲಿದ್ದ ಶಬ್ದವೇಧಿವಿದ್ಯೆಯ ಪಾಂಡಿತ್ಯವನ್ನೂ ಪ್ರದರ್ಶಿಸಿದನು. ಕರ್ಣೀ, ನಾಲೀಕ, ನಾರಾಚ–ಮುಂತಾದ ಬಾಣವಿಶೇಷಗಳನ್ನೂ

ಪ್ರಯೋಗಿಸಿ ಬಹಳ ಆಯಾಸಗೊಂಡವನಾಗಿ, ಬಾಯಾರಿಕೆಯಿಂದಲೂ ಪೀಡಿತನಾದನು. ಅವನ ಅನುಸ್ಯೂತವಾದ ಬಾಣಪ್ರಯೋಗದಿಂದಾಗಲೀ, ನಾಲೀಕ-ನಾರಾಚಗಳ ಪ್ರಹಾರಗಳಿಂದಾಗಲೀ ಯಾವ ಪ್ರಯೋಜನವೂ ಕಂಡುಬರಲಿಲ್ಲ. ಗಾಳಿಯನ್ನು ಗುದ್ದಿದಷ್ಟೇ ಆಯಾಸವಾಯಿತು.

ಅದೃಶ್ಯನಾಗಿದ್ದ ಯಕ್ಷನು ಪುನಃ ಹೇಳಿದನು :

**ಕಿಂ ವಿಘಾತೇನ ತೇ ಪಾರ್ಥ ಪ್ರಶ್ನಾನುಕ್ತ್ವಾ ತತಃ ಪಿಬ ।**
**ಅನುಕ್ತ್ವಾ ಚ ಪಿಬನ್ಪ್ರಶ್ನಾನ್ಪೀತ್ವೈವ ನ ಭವಿಷ್ಯಸಿ ॥೩೧॥**

"ನಾನಾವಿಧವಾದ ಈ ಬಾಣಪ್ರಯೋಗಗಳಿಂದ ಆಗುವ ಪ್ರಯೋಜನವಾದರೂ ಏನು, ಪಾರ್ಥ! ನನ್ನ ಪ್ರಶ್ನೆಗಳಿಗೆ ಉತ್ತರಿಸು. ಅನಂತರದಲ್ಲಿ ನೀರನ್ನು ಕುಡಿ. ಒಂದು ವೇಳೆ ನೀನೂ ನನ್ನ ಮಾತುಗಳನ್ನು ಅನಾದರಣೆಮಾಡಿ ನನ್ನ ಪ್ರಶ್ನೆಗಳಿಗೆ ಉತ್ತರವೀಯದೇ ನೀರನ್ನು ಕುಡಿದೆಯಾದರೆ ಕೂಡಲೇ ಪ್ರಾಣವನ್ನು ತೊರೆಯುವೆ."

ಅದೃಶ್ಯನಾಗಿದ್ದ ಯಕ್ಷನು ಇಷ್ಟು ಸ್ಪಷ್ಟವಾಗಿ ಹೇಳಿದರೂ ಸವ್ಯಸಾಚಿಯಾದ ಧನಂಜಯನು ಯಕ್ಷನ ಮಾತನ್ನು ಅನಾದರಣೆಮಾಡಿ ಸರೋವರದ ನೀರನ್ನು ಕುಡಿದನು ಮತ್ತು ಒಡನೆಯೇ ಮೃತನಾಗಿ ಕೆಳಗುರುಳಿದನು.

ಅರ್ಜುನನೂ ಹೋಗಿ ಬಹಳ ಹೊತ್ತಾಯಿತು. ಹಿಂದಿರುಗಲೇ ಇಲ್ಲ. ತನ್ನ ಪಕ್ಕದಲ್ಲಿದ್ದ ಭೀಮಸೇನನನ್ನು ಕುರಿತು ಕುಂತೀಪುತ್ರನಾದ ಯುಧಿಷ್ಠಿರನು ಹೇಳಿದನು :

"ಭೀಮಸೇನ! ನೀರುತರಲು ಹೋದ ಅರ್ಜುನ-ನಕುಲ-ಸಹದೇವರಿನ್ನೂ ಬರಲೇ ಇಲ್ಲ. ನೀನೀಗಲೇ ಹೋಗಿ ಅವರೆಲ್ಲರನ್ನೂ ಕರೆದುಕೊಂಡು ನಾನು ಕುಡಿಯುವ ಸಲುವಾಗಿ ಸ್ವಲ್ಪ ನೀರನ್ನೂ ತೆಗೆದುಕೊಂಡು ಬಾ, ಭೀಮ!"

ಭೀಮಸೇನನು ಹಾಗೆಯೇ ಆಗಲೆಂದು ಅಣ್ಣನಿಗೆ ಹೇಳಿ ಸರೋವರದ ಸಮೀಪಕ್ಕೆ ಧಾವಿಸಿದನು. ಅವನ ಮೂವರು ತಮ್ಮಂದಿರೂ ಸರೋವರದ ದಂಡೆಯಲ್ಲಿ ಸತ್ತುಬಿದ್ದಿರುವುದನ್ನು ನೋಡಿ ಬಹುದುಃಖಿತನಾದನು.

ಅವನಿಗೂ ಬಹಳ ಬಾಯಾರಿತ್ತು. ತನ್ನ ತಮ್ಮಂದಿರನ್ನು ಕೊಂದಿರುವವರು ಯಕ್ಷರೋ ಅಥವಾ ರಾಕ್ಷಸರೋ ಆಗಿರಬೇಕೆಂದೇ ಮಹಾಬಾಹುವಾದ ಭೀಮಸೇನನು ನಿಶ್ಚಯಿಸಿದನು. "ನಾನಿಂದು ಖಂಡಿತವಾಗಿಯೂ ಅವರೊಡನೆ ಯುದ್ಧಮಾಡಲೇ ಬೇಕಾಗುವುದು. ಆದುದರಿಂದ ನಾನು ಮೊದಲು ಸರೋವರದ ನೀರುಕುಡಿದು ಬಾಯಾರಿಕೆಯನ್ನು ನಿವಾರಿಸಿಕೊಳ್ಳುವೆನು." ಹೀಗೆಂಬುದಾಗಿ ಭೀಮನು ಆಲೋಚಿಸಿ ನೀರುಕುಡಿಯಲು ಸರೋವರದ ಸಮೀಪಕ್ಕೆ ಧಾವಿಸಿದನು.

ಭೀಮನಿನ್ನು ನೀರನ್ನು ಸ್ಪರ್ಶಮಾಡುವುದರಲ್ಲಿದ್ದಾಗಲೇ ಅಗೋಚರನಾಗಿದ್ದ ಯಕ್ಷನು ಭೀಮನನ್ನು ಕುರಿತು ಹೇಳಿದನು :

**ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ ।**
**ಪ್ರಶ್ನಾನುಕ್ತ್ವಾ ತು ಕೌನ್ತೇಯ ತತಃ ಪಿಬ ಹರಸ್ವ ಚ ॥೩೯॥**

"ಮಗು! ನೀರನ್ನು ಮುಟ್ಟುವ ಸಾಹಸಮಾಡಬೇಡ. ಈ ಮೊದಲೇ ನಾನು ಈ ಸರೋವರವನ್ನು ನನ್ನದನ್ನಾಗಿ ಮಾಡಿಕೊಂಡಿರುತ್ತೇನೆ. ನಾನು ಕೇಳಲಿರುವ ಪ್ರಶ್ನೆಗಳಿಗೆ ಉತ್ತರಿಸಿದ ನಂತರ ನೀನು ಈ ಸರೋವರದ ನೀರನ್ನು ಕುಡಿಯಬಹುದು ; ಒಯ್ಯಲೂ ಬಹುದು."

ಮಹಾತೇಜಸ್ವಿಯಾದ ಯಕ್ಷನಿಂದ ಹೀಗೆ ಹೇಳಲ್ಪಟ್ಟರೂ ಭೀಮನು ಆ ಮಾತುಗಳನ್ನು ಗಣನೆಗೆ ತೆಗೆದುಕೊಳ್ಳದೇ ಸರೋವರದ ನೀರನ್ನು ಕುಡಿದನು ಮತ್ತು ತನ್ನ ತಮ್ಮಂದಿರಂತೆಯೇ ಮೃತನಾಗಿ ಕೆಳಗೆ ಬಿದ್ದನು.

ಇತ್ತ ಯುಧಿಷ್ಠಿರನು ಬಹಳ ಹೊತ್ತಿನವರೆಗೂ ಕಾಯುತ್ತಾ ಕುಳಿತಿದ್ದನು. ಆದರೆ ನಾಲ್ವರಲ್ಲಿ ಒಬ್ಬರಾದರೂ ಹಿಂದಿರುಗಲಿಲ್ಲ. ರಾಜನು ತನ್ನಲ್ಲಿಯೇ ತಾನು ಹೀಗೆಂದು ಯೋಚಿಸತೊಡಗಿದನು : "ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಇಷ್ಟೇಕೆ ತಡಮಾಡುತ್ತಿದ್ದಾರೆ? ಗಾಂಡೀವಧನುರ್ಧರನಾದ ಅರ್ಜುನನೇಕೆ ಬರಲಿಲ್ಲ? ಮಹಾಪರಾಕ್ರಮಿಯಾದ ಭೀಮನಾದರೂ ಈ ವೇಳೆಗೆ ಬರಬೇಕಾಗಿತ್ತಲ್ಲವೇ?"–ಹೀಗೆಂದು ಯೋಚಿಸುತ್ತಿದ್ದ ಯುಧಿಷ್ಠಿರನಿಗೆ ಆಲದ ಮರದ ತಂಪಾದ ನೆರಳಿನಲ್ಲಿ ಹೆಚ್ಚು

ಕಾಲ ಕುಳಿತುಕೊಳ್ಳಲೂ ಸಾಧ್ಯವಾಗಲಿಲ್ಲ. ಅವರುಗಳನ್ನು ತಾನೇ ಹುಡುಕಿಕೊಂಡು ಬರಲು ನಿರ್ಧರಿಸಿ ಯುಧಿಷ್ಠಿರನು ಮೇಲೆದ್ದನು. ಅವನ ಹೃದಯವು ದುಃಖದಿಂದ ಪರಿತಪಿಸುತ್ತಿದ್ದಿತು. ಸರೋವರದ ಕಡೆಗೆ ನಡೆದು ಹೋಗುತ್ತಿದ್ದಾಗ ಅವನ ಮನಸ್ಸಿನಲ್ಲಿ ಯೋಚನಾತರಂಗಗಳು ಒಂದಾದ ಮೇಲೊಂದು ಬರತೊಡಗಿದುವು.

"ಈ ಅರಣ್ಯದಲ್ಲೇನಾದರೂ ಭೂತಸಂಚಾರವಿದೆಯೇ? ದುಷ್ಟಪ್ರಾಣಿ ಗಳೇನಾದರೂ ಈ ಅರಣ್ಯದಲ್ಲಿ ಸೇರಿಕೊಂಡಿವೆಯೇ? ಅಥವಾ ನನ್ನ ತಮ್ಮಂದಿರೇನಾದರೂ ಮಹಾತ್ಮನೊಬ್ಬನನ್ನು ಅನಾದರಣೆಮಾಡಿ ಅಪಾಯ ಕ್ಕೊಳಗಾಗಿರುವರೇ? ಅಥವಾ ನೀರಿದೆಯೆಂದು ಭಾವಿಸಿ, ಅಲ್ಲಿಗೆ ಹೋಗಿ ನೀರು ಸಿಕ್ಕದೇ ಇದುವರೆಗೂ ನೀರನ್ನು ಹುಡುಕುತ್ತಾ ಈ ಅರಣ್ಯದ ಸುತ್ತಲೂ ತಿರುಗುತ್ತಿರುವರೇ? ಪುರುಷವ್ಯಾಘ್ರರಾದ ನನ್ನ ತಮ್ಮಂದಿರಿನ್ನೂ ಹಿಂದಿರುಗದಿರಲು ಬೇರಾವ ಕಾರಣವಿರಬಹುದು?"–ಇವೇ ಮುಂತಾಗಿ ಯೋಚಿಸುತ್ತಾ ಯುಧಿಷ್ಠಿರನು ಮನುಷ್ಯರ ಸುಳಿವೂ ಇಲ್ಲದ ಮಹಾರಣ್ಯವನ್ನು ಪ್ರವೇಶಿಸಿದನು.

ಆ ಮಹಾರಣ್ಯವು ಜಿಂಕೆಗಳಿಂದಲೂ ಹಂದಿಗಳಿಂದಲೂ, ಅನೇಕ ವಿಧವಾದ ಪಕ್ಷಿಗಳಿಂದಲೂ ತುಂಬಿಹೋಗಿತ್ತು. ಹಸುರಾಗಿಯೂ, ಸೊಂಪಾಗಿಯೂ ಮತ್ತು ದಟ್ಟವಾಗಿಯೂ ಬೆಳೆದಿದ್ದ ನಯನಮನೋಹರ ವಾದ ವೃಕ್ಷಗಳು ಆ ಮಹಾರಣ್ಯದಲ್ಲಿದ್ದುವು. ಆ ವೃಕ್ಷಗಳ ಮೇಲೆ ಸಾವಿ ರಾರು ದುಂಬಿಗಳು ಝೇಂಕಾರಮಾಡುತ್ತಿದ್ದುವು. ಒಂದೊಂದು ವೃಕ್ಷ ದಲ್ಲಿಯೂ ನೂರಾರು ಪಕ್ಷಿಗಳು ಗೂಡುಕಟ್ಟಿಕೊಂಡಿದ್ದು ಚಿಲಿ-ಪಿಲಿಗುಟ್ಟು ತ್ತಿದ್ದುವು. ಅಂತಹ ಮಹಾರಣ್ಯದ ಮಧ್ಯದಲ್ಲಿ ನಡೆದುಹೋಗುತ್ತಾ ಯುಧಿಷ್ಠಿರನು ನಯನಮನೋಹರವಾದ ಸರೋವರದ ಸಮೀಪಕ್ಕೆ ತೆರಳಿದನು. ಆ ಸರೋವರವು ದೇವಶಿಲ್ಪಿಯಾದ ವಿಶ್ವಕರ್ಮನಿಂದ ನಿರ್ಮಿ ಸಲ್ಪಟ್ಟಿದೆಯೋ ಎಂಬಂತೆ ಬಹಳ ಸುಂದರವಾಗಿದ್ದಿತು. ಆ ಸರೋವರದಲ್ಲಿ ಚಿನ್ನದ ಬಣ್ಣದಿಂದ ಕೂಡಿದ್ದ ಸಿಂಧುವಾರವೆಂಬ ಕಮಲಪುಷ್ಪಗಳಿದ್ದುವು. ವೇತಸವೃಕ್ಷಗಳು ಅಲ್ಲಿ ಬೆಳೆದಿದ್ದುವು. ಸರೋವರವು ಕೇತಕೀ, ಕರವೀರ,

ಪಿಪ್ಪಲ–ಇವೇ ಮುಂತಾದ ಹೂಗಿಡಗಳಿಂದ ಪರಿವೃತವಾಗಿದ್ದಿತು. ದಾರಿ ನಡೆದ ಶ್ರಮದಿಂದ ಬಹಳ ಬಳಲಿದ್ದ ಯುಧಿಷ್ಠಿರನು ಆ ಸರಸ್ಸನ್ನು ನೋಡಿ ವಿಸ್ಮಿತನಾದನು.

೩೧೨ನೆಯ ಅಧ್ಯಾಯವು ಮುಗಿಯಿತು.

೩೧೩ನೆಯ ಅಧ್ಯಾಯ ಆರಣೇಯಪರ್ವ (ಮುಂದುವರೆದಿದೆ.)

## ಯಕ್ಷನ ಪ್ರಶ್ನೆಗಳಿಗೆ ಯುಧಿಷ್ಠಿರನ ಉತ್ತರ : ಧರ್ಮಜನ ಉತ್ತರದಿಂದ ತೃಪ್ತನಾದ ಯಕ್ಷನು ಭೀಮಾದಿಗಳನ್ನು ಬದುಕಿಸಿದುದು

ಜನಮೇಜಯ! ಪ್ರಳಯಕಾಲದಲ್ಲಿ ಲೋಕಪಾಲರು ಕೆಳಗೆ ಬೀಳುವಂತೆ–ಇಂದ್ರನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿದ್ದ ಭೀಮಾರ್ಜುನ-ನಕುಲ-ಸಹದೇವರು ನೆಲದ ಮೇಲೆ ಸತ್ತುಬಿದ್ದಿರುವುದನ್ನು ಯುಧಿಷ್ಠಿರನು ನೋಡಿದನು. ಅರ್ಜುನನು ಬಿದ್ದೆಡೆಯಲ್ಲಿ ಅವನ ಧನುರ್ಬಾಣಗಳೂ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ಭೀಮ-ನಕುಲ-ಸಹದೇವರು ಮತ್ತೊಂದೆಡೆಯಲ್ಲಿ ಗತಪ್ರಾಣರಾಗಿ ಬಿದ್ದಿದ್ದರು. ಅವರನ್ನು ನೋಡಿ ಧರ್ಮಜನು ಸುದೀರ್ಘವಾಗಿ ನಿಟ್ಟುಸಿರುಬಿಟ್ಟನು. ಕಣ್ಣಳಲ್ಲಿ ನೀರು ತುಂಬಿಕೊಂಡಿತು. ಮಹಾಬಾಹುವಾದ ಧರ್ಮಪುತ್ರನು ತನ್ನ ತಮ್ಮಂದಿರೆಲ್ಲರೂ ಒಟ್ಟಾಗಿ ಸತ್ತುಬಿದ್ದಿರುವುದನ್ನು ನೋಡಿ ಗೋಳಾಡಿದನು. ಭೀಮನ ಸಮೀಪದಲ್ಲಿ ಕುಳಿತು ಗಳ-ಗಳನೆ ಅಳುತ್ತಾ ಧರ್ಮಜನು ಹಲುಬಿದನು :

**ನನು ತ್ವಯಾ ಮಹಾಬಾಹೋ ಪ್ರತಿಜ್ಞಾತಂ ವೃಕೋದರ ।**
**ಸುಯೋಧನಸ್ಯ ಭೇತ್ಸ್ಯಾಮಿ ಗದಯಾ ಸಕ್ಥಿನೀ ರಣೇ ॥೪॥**

"ಅಯ್ಯೋ ವೃಕೋದರ! ನೀನಿಂದು ಅಸುನೀಗಿ ಬಿದ್ದಿರುವೆಯಲ್ಲಾ! ನೀನು ಹಿಂದೆ ಮಾಡಿದ ಪ್ರತಿಜ್ಞೆಯ ಪರಿಣಾಮವೇನು? ಮುಂಬರುವ ಯುದ್ಧದಲ್ಲಿ ದುರ್ಯೋಧನನ ಎರಡು ತೊಡೆಗಳನ್ನೂ ಗದೆಯಿಂದ ಭೇದಿಸುವೆನೆಂದು ನೀನು ಪ್ರತಿಜ್ಞೆಮಾಡಿದ್ದೆಯಲ್ಲವೇ? ಮಹಾತ್ಮನಾದ, ಮಹಾಬಾಹುವಾದ, ಕುರುವಂಶೀಯರ ಕೀರ್ತಿವರ್ಧಕನಾದ ನೀನೇ ಮರಣ ಹೊಂದಿದ ಮೇಲೆ ಆ ಪ್ರತಿಜ್ಞೆಯೆಲ್ಲವೂ ವ್ಯರ್ಥವಾದಂತೆಯೇ ಸರಿ.

ಮನುಷ್ಯರು ಹೇಳುವ ಮಾತುಗಳು, ಮಾಡುವ ಪ್ರತಿಜ್ಞೆಗಳು ಕೆಲವು ಸಮಯಗಳಲ್ಲಿ ಸುಳ್ಳಾಗಬಹುದು. ಆದರೆ ದೇವತೆಗಳೇ ನಮ್ಮ ವಿಷಯ ದಲ್ಲಾಡಿದ ಮಾತುಗಳು ಸುಳ್ಳಾಗುವುದೆಂತು? ಧನಂಜಯ! ನೀನು ಹುಟ್ಟಿದ ಕೂಡಲೇ ದೇವತೆಗಳು ಬಂದು ಕುಂತಿಗೆ ಈ ರೀತಿ ಹೇಳಿದ್ದರು :

**ಸಹಸ್ರಾಕ್ಷಾದನವರಃ ಕುನ್ತಿ ಪುತ್ರಸ್ತವೇತಿ ವೈ ॥೮॥**

"ಕುಂತಿ! ಈ ನಿನ್ನ ಪುತ್ರನು ಸಹಸ್ರಾಕ್ಷನಾದ ಇಂದ್ರನಿಗೆ ಯಾವ ವಿಧದಲ್ಲಿಯೂ ಕಡಿಮೆ ಎನಿಸುವುದಿಲ್ಲ."

ಉತ್ತರದಿಕ್ಕಿನಲ್ಲಿ ಪಾರಿಯಾತ್ರಪರ್ವತದಲ್ಲಿದ್ದ ಸಕಲಪ್ರಾಣಿಗಳೂ ನೀನು ಹುಟ್ಟಿದ ಕೂಡಲೇ ನಿನ್ನನ್ನು ಕುರಿತು ಹೀಗೆಂದು ಹಾಡಿದ್ದುವು :

**ವಿಪ್ರಣಷ್ಟಾಂ ಶ್ರಿಯಂ ಚೈಷಾಮಾಹರ್ತಾ ಪುನರಞ್ಜಸಾ ।**
**ನಾಸ್ಯ ಜೇತಾ ರಣೇ ಕಶ್ಚಿದಜೇತಾ ನೈಷ ಕಸ್ಯಚಿತ್ ॥೯॥**

"ವಿನಷ್ಟವಾದ ಕುಲದ ಸಂಪತ್ತಿಯನ್ನು ಇವನೊಬ್ಬನೇ ಬಹುಶೀಘ್ರವಾಗಿ ಮತ್ತೆ ತರುತ್ತಾನೆ. ನಷ್ಟವಾದ ಕುಲದ ಕೀರ್ತಿಯು ಇವನಿಂದ ಪುನಃ ಲಭ್ಯವಾಗುತ್ತದೆ. ಯುದ್ಧದಲ್ಲಿ ಇವನನ್ನು ಸೋಲಿಸುವವರು ಯಾರೂ ಇರುವುದಿಲ್ಲ ಮತ್ತು ಇವನಿಂದ ಸೋಲನ್ನನುಭವಿಸದವರೂ ಯಾರೂ ಇರುವುದಿಲ್ಲ. ಯಾರೇ ಆಗಲೀ ಇವನೊಡನೆ (ಅರ್ಜುನನೊಡನೆ) ಯುದ್ಧ ಮಾಡಲು ಹೋದರೆ ಪರಾಜಿತರಾಗಿ ಹಿಂದಿರುಗಬೇಕೇ ಹೊರತು ಜಯ ಗಳಿಸುವ ಸಾಧ್ಯತೆಯೇ ಇಲ್ಲ." ಹೀಗಿರುವಾಗ ಅಜೇಯನಾದ ಅಪ್ರತಿಮ ಸಾಹಸಿಯಾದ ಜಿಷ್ಣುವು ಹೇಗೆ ಮೃತ್ಯುವಶನಾದನು?

ಸವ್ಯಸಾಚಿಯು ನಮ್ಮ ಕಷ್ಟಗಳ ಪರಿಹಾರಕನೆಂಬ ಮತ್ತು ನಾಥನೆಂಬ ಒಂದೇ ಒಂದು ವಿಶ್ವಾಸದಿಂದ ನಾವಿದುವರೆಗೂ ಎಲ್ಲ ಕಷ್ಟಗಳನ್ನೂ ಸಹಿಸಿಕೊಂಡೇ ಬಂದೆವು. ಆದರೆ ಇಂದು ಈ ನನ್ನ ಕಿರೀಟಿಯು ತಾನು ಸಾಯುವುದರ ಜೊತೆಗೆ ನನ್ನ ಆಸೆಗಳೆಲ್ಲವನ್ನೂ ಪೂರ್ಣವಾಗಿ ಭಗ್ನಗೊಳಿಸಿ ಭೂಮಿಯ ಮೇಲೆ ಮಲಗಿಬಿಟ್ಟಿದ್ದಾನೆ. ಅಯ್ಯೋ ವಿಧಿಯೇ!

ಇವರು ರಣೋತ್ಸಾಹಿಗಳಾಗಿದ್ದರು. ಮಹಾವೀರರಾಗಿದ್ದರು. ಸರ್ವ ಕಾಲಗಳಲ್ಲಿಯೂ ಶತ್ರುಗಳ ಮರ್ದನದಲ್ಲಿಯೇ ನಿರತರಾಗಿರುತ್ತಿದ್ದರು. ಆದುದರಿಂದ ಶತ್ರುಗಳು ತಾವಾಗಿಯೇ ಬಂದು ಇವರ ಮೇಲೆ ಬೀಳುವ ಸಾಧ್ಯತೆಯೇ ಇರಲಿಲ್ಲ. ಹೀಗಿರುವಾಗ ಕುಂತೀಪುತ್ರರಾದ ಮಹಾಬಲರಾದ ಭೀಮಾರ್ಜುನರು ಹೇಗೆ ತಾನೇ ಶತ್ರುವಶರಾದರು? ಶತ್ರುಗಳು ಹೇಗೆ ಇವರನ್ನು ಸಂಹರಿಸಿದರು? ಭೀಮಾರ್ಜುನರು ಸರ್ವಾಸ್ತ್ರಪ್ರವೀಣರು. ಇವರು ಎಲ್ಲ ಅಸ್ತ್ರಗಳನ್ನೂ ತಿಳಿದವರಾಗಿದ್ದುದರಿಂದ ಮಹಾಸ್ತ್ರಗಳಿಂದಲೂ ಇವರನ್ನು ಕೊಲ್ಲುವ ಸಾಧ್ಯತೆಯಿರಲಿಲ್ಲ.

ನಿಶ್ಚಯವಾಗಿಯೂ ನನ್ನ ಹೃದಯವು ಕಲ್ಲಿನಿಂದಲೇ ಮಾಡಲ್ಪಟ್ಟಿರುವುದೆಂದು ತೋರುತ್ತದೆ. ಏಕೆಂದರೆ : ಅಮಿತಪರಾಕ್ರಮಿಗಳಾದ ಪ್ರಾಣಸಮರಾದ ಈ ನನ್ನ ತಮ್ಮಂದಿರು ಸತ್ತುಬಿದ್ದಿರುವುದನ್ನು ನೋಡಿಯೂ ನನ್ನ ಹೃದಯವು ಸೀಳಿಹೋಗದೆಯೇ ಉಳಿದಿದೆಯಲ್ಲವೇ? ಈ ಯಮಳರು ಸತ್ತುಬಿದ್ದಿರುವುದನ್ನು ನೋಡಿಯೂ ನನ್ನ ಹೃದಯವು ಸೀಳಿಹೋಗದೆಯೇ ದೃಢವಾಗಿ ಉಳಿದಿದೆ.

ಪುರುಷರ್ಷಭರೇ! ನಿಮ್ಮ ಶರೀರಗಳನ್ನು ನೋಡಿದರೆ ಬಾಣಾಘಾತದ ಚಿಹ್ನೆಯೇ ಇಲ್ಲ. ಧನುರ್ಬಾಣಗಳು ಅಸ್ತವ್ಯಸ್ತವಾಗಿ ಬಿದ್ದಿರುವುದನ್ನು ನೋಡಿದರೆ ನೀವು ಯುದ್ಧನಿರತರಾಗಿ ಧನುರ್ಬಾಣಗಳನ್ನು ಉಪಯೋಗಿಸಿದಂತೆಯೂ ಕಾಣುವುದಿಲ್ಲ. ಯಾರೊಡನೆಯೂ ಯುದ್ಧದಲ್ಲಿ ಪರಾಜಿತರಾಗದಿದ್ದರೂ ಪ್ರಜ್ಞಾಹೀನರಾಗಿ ಭೂಮಿಯ ಮೇಲೆ ಹೀಗೇಕೆ ಮಲಗಿದ್ದೀರಿ? ನೀವೆಲ್ಲರೂ ಶಾಸ್ತ್ರಜ್ಞರು ; ತಪಸ್ವಿಗಳು ; ಮಾಡಬೇಕಾದ ಕರ್ತವ್ಯಗಳನ್ನು ಆಯಾ ಕಾಲಗಳಲ್ಲಿಯೇ ಮಾಡಿ ಮುಗಿಸುವವರು. ಹೀಗಿದ್ದರೂ ನಿಮಗೆ ಯೋಗ್ಯವಾದ ಸಾಹಸಕಾರ್ಯಗಳನ್ನು ಮಾಡದೇ ಅಸುವನ್ನು ತೊರೆದು ಹೀಗೇಕೆ ಮಲಗಿದ್ದೀರಿ?"

ಮಹಾಮತಿಯಾದ ಯುಧಿಷ್ಠಿರನು ಈ ರೀತಿಯಲ್ಲಿ ದುಃಖಿಸುತ್ತಾ ಪರ್ವತಗಳ ಶಿಖರೋಪಾದಿಯಲ್ಲಿ ಆ ಸರೋವರದ ದಡದಲ್ಲಿ ಮಲಗಿದ್ದ ತನ್ನ ತಮ್ಮಂದಿರನ್ನು ನೋಡಿ ಬಹುಖಿನ್ನನಾದನು. ಅವನ ಶರೀರವು ಬೆವರಿ

ನಿಂದ ತೊಯ್ದು ಹೋಗಿತ್ತು. ಆ ಧರ್ಮಾತ್ಮನು ಬಹಳ ಕಷ್ಟದೆಸೆಗೀಡಾದನು. "ಹೀಗಾಗಬೇಕಾದುದು ವಿಧಿನಿಯಮವಿರಬಹುದು"–ಎಂಬುದಾಗಿ ಹೇಳುತ್ತಾ ಶೋಕಸಾಗರದ ಮಧ್ಯದಲ್ಲಿ, ಮನುಜೇಶ್ವರನಾದ, ಧರ್ಮಾತ್ಮನಾದ ಯುಧಿಷ್ಠಿರನು ವ್ಯಾಕುಲಚಿತ್ತನಾಗಿ ಅನುಜರ ಮರಣಕ್ಕೆ ಕಾರಣವೇನಿರಬಹುದೆಂಬುದನ್ನು ಸುದೀರ್ಘವಾಗಿ ಪುನಃ ಯೋಚಿಸತೊಡ ಗಿದನು. ಅನೇಕ ಪ್ರಕಾರವಾಗಿ ಯೋಚಿಸಿದರೂ ಯಾವ ಕಾಲದಲ್ಲಿ ಯಾವ ಸ್ಥಳದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಚೆನ್ನಾಗಿ ತಿಳಿದಿದ್ದ, ಮಹಾಮತಿ ಯಾದ ಧರ್ಮಜನೂ ತನ್ನ ಮುಂದಿನ ಕರ್ತವ್ಯವೇನೆಂಬುದನ್ನು ನಿರ್ಧರಿಸಲು ಅಸಮರ್ಥನಾದನು.

ಧರ್ಮಾತ್ಮನಾದ, ಧರ್ಮಪುತ್ರನಾದ ಯುಧಿಷ್ಠಿರನು ಬಹಳ ಹೊತ್ತಿನ ವರೆಗೂ ತನ್ನ ತಮ್ಮಂದಿರಿಗಾಗಿ ವಿಲಪಿಸುತ್ತಿದ್ದು, ವೃಥಾವಿಲಾಪದಿಂದ ಪ್ರಯೋಜನವೇನೂ ಇಲ್ಲವೆಂಬುದನ್ನು ಮನಗಂಡವನಾಗಿ, ಶೋಕತಪ್ತ ವಾಗಿದ್ದ ತನ್ನ ಆತ್ಮವನ್ನು ಬಿಗಿಹಿಡಿದು ತಮ್ಮಂದಿರನ್ನು ಯಾರು ಕೊಂದಿರ ಬಹುದೆಂಬ ವಿಷಯವಾಗಿ ಪುನಃ ಆಲೋಚಿಸತೊಡಗಿದನು. ಧೃತಿಗೆಟ್ಟರೆ ಯಾವುದನ್ನೂ ಯೋಚಿಸಿ ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಮಹಾಕಷ್ಟಸಮಯದಲ್ಲಿಯೂ ಧೃತಿಗೆಡದೇ ಮುಂದಿನದನ್ನು ಯೋಚಿಸ ಬೇಕು. ಯುಧಿಷ್ಠಿರನೂ ಸನ್ನಿವೇಶವನ್ನು ಬಹುಸೂಕ್ಷ್ಮವಾಗಿ ಪರಿಶೀಲಿಸುತ್ತಾ ಪುನಃ ಹೀಗೆ ಚಿಂತಿಸಿದನು. (ತನ್ನಲ್ಲಿಯೇ ಹೇಳಿಕೊಂಡನು.)

**ನೈಷಾಂ ಶಸ್ತ್ರಪ್ರಹಾರೋಽಸ್ತಿ ಪದಂ ನೇಹಾಸ್ತಿ ಕಸ್ಯಚಿತ್ ।**
**ಭೂತಂ ಮಹದಿದಂ ಮನ್ಯೇ ಭ್ರಾತರೋ ಯೇನ ಮೇ ಹತಾಃ ॥**

"ಇವರುಗಳ ಮೇಲೆ ಶಸ್ತ್ರಗಳ ಪ್ರಹಾರದ ಚಿಹ್ನೆಗಳಿಲ್ಲ. ಬೇರೊಬ್ಬರ ಪಾದಚಿಹ್ನೆಗಳೂ ಇಲ್ಲಿ ಕಂಡುಬರುವುದಿಲ್ಲ. ಯುದ್ಧದ ಪ್ರಸಂಗವೇ ಇಲ್ಲದೇ ನನ್ನ ತಮ್ಮಂದಿರನ್ನು ಕೊಂದಿರುವ ವ್ಯಕ್ತಿಯು ಮಹಾಭೂತವೇ ಆಗಿರ

ಬೇಕೆಂದು ತಿಳಿಯುತ್ತೇನೆ. ಏಕಾಗ್ರಚಿತ್ತನಾಗಿ ನಾನಿದರ ರಹಸ್ಯವನ್ನು ತಿಳಿಯುತ್ತೇನೆ. ಮೊದಲು ನೀರನ್ನು ಕುಡಿದು ಅನಂತರ ವಿಷಯವನ್ನು ತಿಳಿಯುವೆನು." ಹೀಗೆಂದು ನಿಶ್ಚಯಿಸಿದ ಮರುಕ್ಷಣದಲ್ಲಿಯೇ ಯುಧಿಷ್ಠಿರನಿಗೆ ಮತ್ತೊಂದು ಯೋಚನೆಯು ಉದಯಿಸಿತು. "ದುಷ್ಟ ದುರ್ಯೋಧನನು ರಹಸ್ಯದಲ್ಲಿ ನಮಗೆ ವಿಪತ್ಕಾರಕವಾದ ಈ ತಟಾಕವನ್ನು ಇಲ್ಲಿ ನಿರ್ಮಿಸಿರಲೂಬಹುದು. ಕುತ್ಸಿತವಾದ ಸಲಹೆಗಳನ್ನು ನೀಡುವುದರಲ್ಲಿ ಪಾರಂಗತನಾದ, ವಕ್ರಬುದ್ಧಿಯಾದ ಶಕುನಿಯ ಸಲಹೆಯಂತೆ ಏನಾದರೂ ಕೃತ್ರಿಮಪ್ರಯೋಗವನ್ನು ಗುಟ್ಟಾಗಿ ಮಾಡಿಸಿರಬಹುದು. ಏಕೆಂದರೆ : ದುರ್ಯೋಧನನಿಗೆ ಕಾರ್ಯ ಮತ್ತು ಅಕಾರ್ಯ ಈ ಎರಡರಲ್ಲಿ ಯಾವ ಭೇದವೂ ಇಲ್ಲ. ಅಕೃತಾತ್ಮನಾದ, ಜಿತೇಂದ್ರಿಯನಲ್ಲದ, ಕೇವಲ ಪಾಪಕರ್ಮಿಯಾದ ಅವನಲ್ಲಿ ಯಾರು ತಾನೇ ವಿಶ್ವಾಸವನ್ನಿಟ್ಟಾರು? ಅಥವಾ ದುರಾತ್ಮನಾದ ದುರ್ಯೋಧನನು ಗೂಢಚಾರರಿಂದ ಈ ಸರೋವರದ ನೀರನ್ನು ವಿಷಮಯವನ್ನಾಗಿಯಾದರೂ ಮಾಡಿರಬಹುದು."

ಜನಮೇಜಯ! ಈ ರೀತಿಯಾಗಿ ಯುಧಿಷ್ಠಿರನು ತನ್ನ ಅನುಜರ ಮರಣಕ್ಕೆ ಕಾರಣವನ್ನು ಕುರಿತು ನಾನಾವಿಧವಾಗಿ ಯೋಚಿಸಿದನು. ಪುನಃ ಯೋಚಿಸಲಾಗಿ ನೀರು ವಿಷಮಯವಾಗಿದೆಯೆಂಬುದನ್ನೂ ಯುಧಿಷ್ಠಿರನು ನಿರ್ಧರಿಸಲಾಗಲಿಲ್ಲ. ಏಕೆಂದರೆ ಸತ್ತುಬಿದ್ದಿದ್ದ ತನ್ನ ತಮ್ಮಂದಿರ ಮುಖದಲ್ಲಾಗಲೀ, ಶರೀರದಲ್ಲಾಗಲೀ ವಿಷ ಕುಡಿದ ಯಾವ ಚಿಹ್ನೆಯೂ ಕಂಡುಬರಲಿಲ್ಲ. ವಿಷಕುಡಿದು ಪ್ರಾಣಬಿಟ್ಟಿದ್ದರೆ ಅವರ ಮುಖಗಳು ವಿಕಾರಗೊಳ್ಳಬೇಕಾಗಿತ್ತು. ಆದರೆ ಅವರು ಗತಪ್ರಾಣರಾಗಿದ್ದರೂ ಅವರ ಮುಖದಲ್ಲಿ ಯಾವ ವಿಧವಾದ ವಿಕಾರವೂ ಕಾಣುತ್ತಿರಲಿಲ್ಲ.

"ನನ್ನ ತಮ್ಮಂದಿರ ಮುಖವರ್ಣವು ಪ್ರಸನ್ನವಾಗಿಯೇ ಇದೆ. ಉಸಿರಾಡದೇ ಇರುವುದರಿಂದ ಮಾತ್ರ ಇವರು ಸತ್ತಿರುವರೆಂದು ತಿಳಿಯಬೇಕಾಗಿದೆಯೇ ಹೊರತು ಇವರ ಮುಖವನ್ನು ನೋಡಿದರೆ ಗಾಢನಿದ್ರೆಯಲ್ಲಿರುವಂತೆಯೇ ಇವರು ಶೋಭಿಸುತ್ತಿದ್ದಾರೆ. ಆದುದರಿಂದ ವಿಷ ಕುಡಿದ ಚಿಹ್ನೆಯು ಇವರ ಮುಖಗಳಲ್ಲಿ ಕಾಣುತ್ತಿಲ್ಲ. ನನ್ನ ತಮ್ಮಂದಿರಲ್ಲಿ

ಒಬ್ಬೊಬ್ಬರೂ ಮಹಾಬಲವುಳ್ಳವರಾಗಿದ್ದಾರೆ. ಬಲದ ಸಮೂಹವೇ ಒಬ್ಬೊಬ್ಬರಲ್ಲಿಯೂ ಮೂರ್ತಿಮತ್ತಾಗಿ ನೆಲೆಸಿದೆ. ಇಂತಹ ಪುರುಷಶ್ರೇಷ್ಠರನ್ನು ಕಾಲಾಂತಕನಾದ ಯಮನೊಬ್ಬನನ್ನು ಬಿಟ್ಟು ಬೇರೆ ಯಾರು ತಾನೇ ಕೊಲ್ಲಲು ಸಮರ್ಥರಾದಾರು?" ಹೀಗೆಂಬುದಾಗಿ ಚಿಂತಿಸುತ್ತಾ ಯುಧಿಷ್ಠಿರನು ನೀರನ್ನು ಕುಡಿಯಲು ಸರೋವರದಲ್ಲಿಳಿದನು.

ನೀರಿಗಿಳಿಯುತ್ತಲೇ ಯುಧಿಷ್ಠಿರನು ಅಂತರಿಕ್ಷದ ಕಡೆಯಿಂದ ಬಂದ ಈ ಮಾತನ್ನು ಕೇಳಿದನು :

**ಅಹಂ ಬಕಃ ಶೈವಲಮತ್ಸ್ಯಭಕ್ಷೋ**
**ನೀತಾ ಮಯಾ ಪ್ರೇತವಶಂ ತವಾನುಜಾಃ ।**
**ತ್ವಂ ಪಞ್ಚಮೋ ಭವಿತಾ ರಾಜಪುತ್ರ**
**ನ ಚೇತ್ಪ್ರಶ್ನಾನ್ಪೃಚ್ಛತೋ ವ್ಯಾಕರೋಷಿ ॥೨೯॥**

"ಪಾಚಿಯಲ್ಲಿರುವ ಚಿಕ್ಕ-ಪುಟ್ಟ ಮೀನುಗಳನ್ನು ತಿಂದು ಜೀವಿಸುತ್ತಿರುವ ನಾನೊಂದು ಬಕಪಕ್ಷಿಯಾಗಿದ್ದೇನೆ. ನನ್ನಿಂದಲೇ ಈ ನಿನ್ನ ತಮ್ಮಂದಿರು ಪ್ರೇತಾಲಯಕ್ಕೆ ಕಳುಹಿಸಲ್ಪಟ್ಟಿರುವರು. ನನ್ನ ಪ್ರಶ್ನೆಗಳಿಗೆ ಉತ್ತರಿಸದೇ ಈ ಸರೋವರದ ನೀರನ್ನು ಕುಡಿಯಲು ಯತ್ನಿಸಿದರೆ ನೀನು ಐದನೆಯವನಾಗುವೆ. ನೀನೂ ಯಮಾಲಯಕ್ಕೆ ತೆರಳಬೇಕಾಗುವುದು. ಆದುದರಿಂದ :

**ಮಾ ತಾತ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ ।**
**ಪ್ರಶ್ನಾನುಕ್ತ್ವಾ ತು ಕೌನ್ತೇಯ ತತಃ ಪಿಬ ಹರಸ್ವ ಚ ॥೩೦॥**

ಮಗು! ನೀರನ್ನು ಮುಟ್ಟುವ ಸಾಹಸಕಾರ್ಯವನ್ನು ಮಾಡಬೇಡ. ಈ ಮೊದಲೇ ನಾನು ಈ ಸರೋವರವನ್ನು ನನ್ನದನ್ನಾಗಿ ಮಾಡಿಕೊಂಡಿರುತ್ತೇನೆ. ನಾನು ಕೇಳಲಿರುವ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರಿಸಿದನಂತರ ಈ ಸರೋವರದ ನೀರನ್ನು ಕುಡಿಯಬಹುದು ; ಬೇಕಾದಷ್ಟನ್ನು ತುಂಬಿಕೊಂಡು ಹೋಗಲೂಬಹುದು."

ಆ ಅಶರೀರವಾಣಿಯನ್ನು ಕೇಳಿ ಯುಧಿಷ್ಠಿರನು ಹೇಳಿದನು :

"ನನ್ನ ತಮ್ಮಂದಿರನ್ನು ಯಮಾಲಯಕ್ಕೆ ಕಳುಹಿಸಿರುವ ನೀನು

ಖಂಡಿತವಾಗಿಯೂ ಪಕ್ಷಿಯಲ್ಲ. ನೀನು ಏಕಾದಶರುದ್ರರಲ್ಲಿ ಒಬ್ಬನಾಗಿರಬಹುದು. ಅಷ್ಟವಸುಗಳಲ್ಲಿ ಒಬ್ಬನಾಗಿರಬಹುದು ಅಥವಾ ಸಪ್ತಮರುತ್ತುಗಳಲ್ಲಿ ಒಬ್ಬನಾಗಿರಬಹುದು. ನೀನು ಇವರಲ್ಲಿ ಯಾವ ಪ್ರಧಾನದೇವನೆಂಬುದನ್ನು ಪ್ರಶ್ನಿಸುತ್ತೇನೆ. ಈ ಕಾರ್ಯವು ಕೇವಲ ಒಂದು ಪಕ್ಷಿಯಿಂದ ಆಗಿರುವ ಕಾರ್ಯವಲ್ಲ. ನನ್ನ ತಮ್ಮಂದಿರೆಂದರೆ ಸಾಮಾನ್ಯರಲ್ಲ.

ಹಿಮವಂತ, ಪಾರಿಯಾತ್ರ, ವಿಂಧ್ಯ ಮತ್ತು ಮಲಯಪರ್ವತಗಳಿಗೆ ಸಮಾನರಾದ ಇವರನ್ನು ಸಂಹರಿಸುವುದು ಆ ನಾಲ್ಕು ಪರ್ವತಗಳನ್ನೂ ಭೇದಿಸುವಷ್ಟೇ ಶ್ರಮಸಾಧ್ಯವಾದ ಕಾರ್ಯ. ಇಂತಹವರನ್ನೂ ಸಂಹರಿಸಿರುವ ನೀನು ಮಹಾಬಲಿಷ್ಠನೇ ಸರಿ. ನೀನು ಮಾಡಿರುವ ಈ ಕಾರ್ಯವೂ ಅತ್ಯದ್ಭುತವಾದುದು. ಯುದ್ಧದಲ್ಲಿ ನನ್ನ ಈ ತಮ್ಮಂದಿರಿಗೆದುರಾಗಿ ನಿಲ್ಲಬಲ್ಲ ದೇವತೆಗಳಾಗಲೀ, ಗಂಧರ್ವರಾಗಲೀ, ಅಸುರರಾಗಲೀ, ರಾಕ್ಷಸರಾಗಲೀ ಇಲ್ಲ. ಇವರ ಬಾಣಪ್ರಹಾರಗಳನ್ನು ಯಾರೂ ತಡೆದುಕೊಳ್ಳಲಾರರು. ಇವರಿಗೆದುರಾಗಿ ನಿಂತು ಹೆಚ್ಚುಕಾಲ ಯುದ್ಧಮಾಡಲಾರರು. ಇಂತಹ ನಾಲ್ವರು ಮಹಾಪರಾಕ್ರಮಿಗಳನ್ನು ನೀನೊಬ್ಬನೇ ಸಂಹಾರಮಾಡಿರುವೆಯೆಂದರೆ ಇದು ಪರಮಾದ್ಭುತವಾಗಿದೆ ಮತ್ತು ನಿನ್ನ ಪರಾಕ್ರಮವೂ ಅಸದೃಶವಾಗಿದೆ. ನನಗಂತೂ ನೀನು ಮಾಡಿರುವ ಈ ಸಾಹಸಕಾರ್ಯವು ಮಹಾಶ್ಚರ್ಯವನ್ನೇ ಉಂಟುಮಾಡಿದೆ. ನಿನ್ನ ಉದ್ದೇಶವೇನೆಂಬುದು ನನಗೆ ತಿಳಿಯದು ಮತ್ತು ನಿನ್ನ ಆಕಾಂಕ್ಷೆಯೇನೆಂಬುದನ್ನೂ ನಾನು ತಿಳಿಯದವನಾಗಿದ್ದೇನೆ. ನೀನು ಮಾಡಿರುವ ಈ ಅದ್ಭುತಕಾರ್ಯದಿಂದಾಗಿ ಕುತೂಹಲವೂ ಮತ್ತು ಮಹಾಭಯವೂ ಉಂಟಾಗಿದೆ. ಇದರಿಂದಾಗಿ ನಾನು ಉದ್ವಿಗ್ನಹೃದಯನಾಗಿದ್ದೇನೆ. ನನ್ನ ತಲೆಯೂ ಸುತ್ತುತ್ತಿದೆ. (ತಲೆಯು ಜ್ವರದಿಂದ ಬಿಸಿಯಾಗಿದೆ.) ಆದುದರಿಂದ, ಭಗವನ್! ಈ ನನ್ನ ಅನುಜರನ್ನು ಸಂಹಾರಮಾಡಿರುವ ನೀನು ಯಾರು? ನನ್ನ ಈ ಪ್ರಶ್ನೆಗೆ ದಯಮಾಡಿ ಉತ್ತರಿಸು."

**ಯಕ್ಷೋಽಹಮಸ್ಮಿ ಭದ್ರಂ ತೇ ನಾಸ್ಮಿ ಪಕ್ಷೀ ಜಲೇಚರಃ ।**
**ಮಯೈತೇ ನಿಹತಾಃ ಸರ್ವೇ ಭ್ರಾತರಸ್ತೇ ಮಹೌಜಸಃ ॥೨೬॥**

"ಧರ್ಮಜ! ನಿನಗೆ ಮಂಗಳವಾಗಲಿ. ನಾನು ನೀರಿನಲ್ಲಿ ವಾಸ ಮಾಡುವ ಪಕ್ಷಿಯಲ್ಲ. ನಾನೊಬ್ಬ ಯಕ್ಷನಾಗಿದ್ದೇನೆ. ಮಹಾಪರಾಕ್ರಮಿಗಳಾದ ಈ ನಾಲ್ವರು ನಿನ್ನ ಅನುಜರೂ ನನ್ನಿಂದಲೇ ಸಂಹೃತರಾಗಿರುವರು."

ಜನಮೇಜಯ! 'ನಾನು ಯಕ್ಷನಾಗಿದ್ದೇನೆ. ನನ್ನಿಂದಲೇ ನಿನ್ನ ತಮ್ಮಂದಿರು ಹತರಾದರು'–ಎಂಬ ಅಮಂಗಳಕರವಾದ ಮತ್ತು ಕರ್ಣಕಠೋರವಾದ ಮಾತುಗಳನ್ನು ಕೇಳಿದನಂತರ ಯುಧಿಷ್ಠಿರನು ಯಕ್ಷನ ಸಮೀಪಕ್ಕೆ ಹೋಗಿ ನಿಂತುಕೊಂಡನು. ಯಕ್ಷನ ಆಕಾರವು ಬಹಳ ಭಯಂಕರವಾಗಿತ್ತು. ಅವನು ವಿರೂಪವಾದ ಕಣ್ಣುಗಳಿಂದ ಕೂಡಿದ್ದನು. ಮಹಾಕಾಯನಾಗಿದ್ದನು. ತಾಲವೃಕ್ಷದಂತೆ ಬಹಳ ಎತ್ತರವಾಗಿದ್ದನು. ಪ್ರಜ್ವಲಿಸುವ ಸೂರ್ಯನಿಗೆ ಸಮಾನವಾದ ತೇಜಸ್ಸನ್ನು ಹೊಂದಿದ್ದನು. ಅವನಿಗೆದುರಾಗಿ ನಿಂತುಕೊಳ್ಳಲು ಸಾಮಾನ್ಯರಿಂದ ಸಾಧ್ಯವಾಗುತ್ತಿರಲಿಲ್ಲ. ಅಧೃಷ್ಯನಾಗಿದ್ದನು ; ಪರ್ವತೋಪಮನಾಗಿದ್ದನು ; ಮೇಘಕ್ಕೆ ಸಮಾನವಾದ ಗಂಭೀರಧ್ವನಿಯಿಂದ ಭಯಪಡಿಸುತ್ತಿದ್ದನು ; ಬಹಳ ಗಟ್ಟಿಯಾಗಿ ಶಬ್ದಮಾಡುತ್ತಿದ್ದನು. ವೃಕ್ಷವೊಂದನ್ನು ಅವಲಂಬಿಸಿ ನಿಂತಿದ್ದ ಅಂತಹ ಬೃಹದಾಕಾರದ ಯಕ್ಷನನ್ನು ಯುಧಿಷ್ಠಿರನು ನೋಡಿದನು.

ಯುಧಿಷ್ಠಿರನು ತನ್ನ ಸಮೀಪಕ್ಕೆ ಬಂದು ನಿಂತ ಬಳಿಕ ಅವನನ್ನು ಕುರಿತು ಯಕ್ಷನು ಹೇಳಿದನು :

"ಯುಧಿಷ್ಠಿರ! ನಾನು ನಿನ್ನ ಈ ತಮ್ಮಂದಿರನ್ನು ಕಾರಣವಿಲ್ಲದೇ ಕೊಲ್ಲಲಿಲ್ಲ. ಈ ಸರೋವರವು ನನ್ನದೆಂದೂ, ಇದರ ನೀರನ್ನು ನನ್ನ ಅನುಮತಿಯಿಲ್ಲದೇ ಕುಡಿಯಬಾರದೆಂದೂ ಹೇಳಿ ನೀರು ಕುಡಿಯುವುದನ್ನು ತಡೆದೆನು. ಆದರೆ ನಿನ್ನ ಅನುಜರು ನನ್ನ ಮಾತನ್ನು ಕೇಳದೇ ತಮ್ಮ ಬಾಹುಬಲವನ್ನೇ ಅವಲಂಬಿಸಿ ನೀರು ಕುಡಿಯಲು ಬಂದರು. ಈ ಕಾರಣದಿಂದ ನಾನಿವರನ್ನು ಸಂಹರಿಸಬೇಕಾಯಿತು. ಇವರೊಡನೆ ಹೇಳಿದ ಮಾತುಗಳನ್ನೇ ನಿನ್ನೊಡನೆಯೂ ಹೇಳುತ್ತೇನೆ, ಯುಧಿಷ್ಠಿರ! ಪ್ರಾಣಗಳ ಮೇಲೆ ಆಸೆಯಿರುವುದಾದರೆ ಈ ಸರೋವರದ ನೀರನ್ನು ನೀನೂ ಕುಡಿಯಬಾರದು.

**ಪಾರ್ಥ ಮಾ ಸಾಹಸಂ ಕಾರ್ಷೀರ್ಮಮ ಪೂರ್ವಪರಿಗ್ರಹಃ ।**
**ಪ್ರಶ್ನಾನುಕ್ತ್ವಾ ತು ಕೌಂತೇಯ ತತಃ ಪಿಬ ಹರಸ್ವ ಚ ॥೪೨॥**

ಯುಧಿಷ್ಠಿರ! ನೀರನ್ನು ಮುಟ್ಟುವ ಸಾಹಸಕಾರ್ಯವನ್ನು ಮಾಡ ಬೇಡ. ಈ ಮೊದಲೇ ನಾನು ಈ ಸರೋವರವನ್ನು ನನ್ನದನ್ನಾಗಿ ಮಾಡಿ ಕೊಂಡಿರುತ್ತೇನೆ. ನಾನು ಕೇಳಲಿರುವ ಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರಿ ಸಿದ ನಂತರ ಈ ಸರೋವರದ ನೀರನ್ನು ಕುಡಿ ಮತ್ತು ಬೇಕಾದಷ್ಟನ್ನು ತುಂಬಿಕೊಂಡು ಹೋಗು."

ಭೀಮಾರ್ಜುನ-ನಕುಲ-ಸಹದೇವರಂತೆ ಯುಧಿಷ್ಠಿರನು ಯಕ್ಷನ ಮಾತನ್ನು ಅಲಕ್ಷಿಸಿ ಸರೋವರದಲ್ಲಿ ನೀರು ಕುಡಿಯಲು ಯತ್ನಿಸಲಿಲ್ಲ. ತನಗೆ ಬಹಳ ಬಾಯಾರಿಕೆಯಾಗಿದ್ದರೂ ನೀರಿನಿಂದ ಹಿಂದಕ್ಕೆ ಸರಿದು ನಿಂತು ಯಕ್ಷನನ್ನು ಕುರಿತು ಹೇಳಿದನು :

**ನ ಚಾಹಂ ಕಾಮಯೇ ಯಕ್ಷ ತವ ಪೂರ್ವಪರಿಗ್ರಹಮ್ ।**
**ಕಾಮಂ ನೈತತ್ಪ್ರಶಂಸಂತಿ ಸಂತೋ ಹಿ ಪುರುಷಾಃ ಸದಾ ॥೪೩॥**

**ಯದಾತ್ಮನಾ ಸ್ವಮಾತ್ಮಾನಂ ಪ್ರಶಂಸೇ ಪುರುಷರ್ಷಭ ।**
**ಯಥಾಪ್ರಜ್ಞಂ ತು ತೇ ಪ್ರಶ್ನಾನ್ಪ್ರತಿವಕ್ಷ್ಯಾಮಿ ಪೃಚ್ಛ ಮಾಮ್ ॥೪೪॥**

"ಯಕ್ಷ! ನಿನ್ನ ಸ್ವಾಧೀನದಲ್ಲಿರುವ ಈ ಸರೋವರದ ನೀರನ್ನು (ನಿನ್ನ ಅನುಜ್ಞೆಯಿಲ್ಲದೇ) ನಾನು ಕುಡಿಯಲು ಆಶಿಸುವುದಿಲ್ಲ. ಒಬ್ಬರಿಗೆ ಸೇರಿದ ವಸ್ತುವನ್ನು ಅವರ ಅನುಮತಿಯಿಲ್ಲದೇ ತೆಗೆದುಕೊಳ್ಳುವುದನ್ನು ಸತ್ಪುರುಷರೆಂದಿಗೂ ಪ್ರಶಂಸಿಸುವುದಿಲ್ಲ. ನೀನು ಕೇಳಲಿರುವ ಪ್ರಶ್ನೆಗಳ ವಿಷಯವಾಗಿ ಹೇಳುವುದಾದರೆ : ನೀನು ಕೇಳಲಿರುವ ಎಲ್ಲ ಪ್ರಶ್ನೆಗಳಿಗೂ ಉತ್ತರಿಸುವ ಸಾಮರ್ಥ್ಯವು ನನಗಿದೆಯೆಂದು ಹೇಳಲಾರೆನು. ಪುರುಷ ರ್ಷಭನೇ! ಯಾರು ತಾನೇ ತನ್ನನ್ನು ತಾನು ಪ್ರಶಂಸೆಮಾಡಿಕೊಂಡಾನು? (ಆತ್ಮಪ್ರಶಂಸೆಯನ್ನು ಸತ್ಪುರುಷರು ಯಾವಾಗಲೂ ಶ್ಲಾಘಿಸುವುದಿಲ್ಲ.) ನೀನು ನನ್ನನ್ನು ಪ್ರಶ್ನಿಸು. ಯಥಾಮತಿಯಾಗಿ ನಾನೂ ನಿನ್ನ ಪ್ರಶ್ನೆಗಳಿಗೆ ಉತ್ತರಿಸುವೆನು. ಆಗಬಹುದೇ?"

ಯಕ್ಷನು ಯುಧಿಷ್ಠಿರನನ್ನು ಕುರಿತು ಪ್ರಶ್ನೆಗಳನ್ನು ಕೇಳಲು ಉಪ

ಕ್ರಮಿಸಿದನು. (ಈ ಪ್ರಕರಣವು ಯಕ್ಷಪ್ರಶ್ನೆಯೆಂದೇ ಪ್ರಸಿದ್ಧವಾಗಿದೆ. ಇದರಲ್ಲಿ ಗೂಢವಾದ ಅರ್ಥಗಳೂ ಇವೆ. ವಿವರಣೆಗಳು ಸಾಧ್ಯವಾದ ಮಟ್ಟಿಗೆ ಕೊಡಲ್ಪಟ್ಟಿವೆ.)

**ಕಿಂಸ್ವಿದಾದಿತ್ಯಮುನ್ನಯತಿ ಕೇ ಚ ತಸ್ಯಾಭಿತಶ್ಚರಾಃ ।**
**ಕಶ್ಚೈನಮಸ್ತಂ ನಯತಿ ಕಸ್ಮಿಂಶ್ಚ ಪ್ರತಿತಿಷ್ಠತಿ ॥೪೫॥**

ಇದು ಯಕ್ಷನು ಕೇಳುವ ಮೊದಲನೆಯ ಪ್ರಶ್ನೆ. "ಸೂರ್ಯನನ್ನು ಮೇಲೆತ್ತುವುದು (ಉದಯಿಸುವಂತೆ ಮಾಡುವುದು) ಯಾವುದು? ಅವನ ಸುತ್ತಲೂ ಸಂಚರಿಸತಕ್ಕವರು ಯಾರು? ಅವನಿಗೆ ಅಸ್ತವನ್ನುಂಟುಮಾಡ ತಕ್ಕವನು ಯಾರು? ಆದಿತ್ಯನು ಎಲ್ಲಿ ಪ್ರತಿಷ್ಠಿತನಾಗಿದ್ದಾನೆ?"

ಈ ಪ್ರಶ್ನೆಗೆ ಯುಧಿಷ್ಠಿರನು ಒಡನೆಯೇ ಉತ್ತರಿಸುತ್ತಾನೆ.

**ಬ್ರಹ್ಮಾದಿತ್ಯಮುನ್ನಯತಿ ದೇವಾಸ್ತಸ್ಯಾಭಿತಶ್ಚರಾಃ ।**
**ಧರ್ಮಶ್ಚಾಸ್ತಂ ನಯತಿ ಚ ಸತ್ಯೇ ಚ ಪ್ರತಿತಿಷ್ಠತಿ ॥೪೬॥**

"ಬ್ರಹ್ಮನು ( ವೇದವು ) ಸೂರ್ಯನನ್ನು ಮೇಲಕ್ಕೆತ್ತುವುದು. ದೇವತೆಗಳು ಅವನ ಸುತ್ತಲೂ ಸಂಚರಿಸುವರು. ಧರ್ಮವು ಅವನಿಗೆ ಅಸ್ತವನ್ನುಂಟುಮಾಡುತ್ತದೆ. ಆದಿತ್ಯನು ಸತ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ." ಇದು ಯುಧಿಷ್ಠಿರನ ಉತ್ತರ.

(ಮೊದಲು ಸಾಮಾನ್ಯರೀತಿಯಲ್ಲಿ ನಾವು ಈ ಪ್ರಶ್ನೆಯನ್ನೂ ಮತ್ತು ಉತ್ತರವನ್ನೂ ವಿಚಾರಮಾಡೋಣ.)

'ಸೂರ್ಯನನ್ನು ಮೇಲಕ್ಕೆಬ್ಬಿಸುವುದು ಅಥವಾ ಮೇಲಕ್ಕೆತ್ತುವುದು ಯಾವುದು?'–ಎಂಬುದು ಮೊದಲನೆಯ ಪ್ರಶ್ನೆ. "ಸೂರ್ಯನು ಹುಟ್ಟುತ್ತಾನೆ. ಮಧ್ಯಭಾಗಕ್ಕೆ ಬರುತ್ತಾನೆ. ಅಸ್ತಂಗತನಾಗುತ್ತಾನೆ"–ಎಂದು ಹೇಳುವುದೇ ಬಳಕೆಯಲ್ಲಿ ಬಂದಿದೆ. ಸೂರ್ಯನು ಅಚಲನೆಂದೂ, ಭೂಮಿಯು ತನ್ನ ಅಕ್ಷದಲ್ಲಿ ಎಡಬಿಡದೇ ಸುತ್ತುವಾಗ ಸೂರ್ಯೋದಯ- ಸೂರ್ಯಾಸ್ತಗಳಾಗುವಂತೆ ಕಂಡುಬರುತ್ತದೆಂಬುದು ಸಿದ್ಧಾಂತವಾದರೂ ಸೂರ್ಯನು ಉದಯಿಸಲು ಬೇರೊಬ್ಬರು ಕಾರಣವಾಗುತ್ತಾರೆಂಬ ವಿಷಯವು ನಮಗೆ

ಹೊಸ ವಿಷಯ. ಈ ಜಟಿಲಪ್ರಶ್ನೆಗೆ ಉತ್ತರವೀಯಲು ಪಾಂಡಿತ್ಯವೇ ಬೇಕು. ಯುಧಿಷ್ಠಿರನು ಈ ಪ್ರಶ್ನೆಗೆ ಸರಸವಾಗಿ ಉತ್ತರಿಸುತ್ತಾನೆ. 'ವೇದವು ಸೂರ್ಯನನ್ನು ಉದಯಿಸುವಂತೆ ಮಾಡುತ್ತದೆ'–ಎಂಬುದು ಯುಧಿಷ್ಠಿರನ ಉತ್ತರ. ಈ ಉತ್ತರಕ್ಕೆ ವೇದಪ್ರಾಮಾಣ್ಯವಿದೆ.

**ಋಗ್ಭಿಃ ಪೂರ್ವಾಹ್ಣೇ ದಿವಿ ದೇವ ಈಯತೇ ।**
**ಯಜುರ್ವೇದೇ ತಿಷ್ಠತಿ ಮಧ್ಯೇ ಅಹ್ನಃ ।**
**ಸಾಮವೇದೇನಾಸ್ತಮಯೇ ಮಹೀಯತೇ ।**

–ತೈತ್ತಿರೀಯಬ್ರಾಹ್ಮಣ.

ಋಗ್ವೇದದ ಋಕ್ಕುಗಳ ಪ್ರಭಾವದಿಂದ ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುತ್ತಾನೆ. ಮಧ್ಯಾಹ್ನದ ವೇಳೆಯಲ್ಲಿ ಅದೇ ಸೂರ್ಯನು ಯಜುರ್ವೇದವನ್ನು ಅವಲಂಬಿಸಿ ನಿಲ್ಲುತ್ತಾನೆ. ಸಾಮವೇದದ ಪ್ರಭಾವದಿಂದಾಗಿ ಅಸ್ತಮಾನದ ಸಮಯದಲ್ಲಿ ಪ್ರಕಾಶಮಾನನಾಗಿರುತ್ತಾನೆ. ಅರ್ಥಾತ್ ಸೂರ್ಯನ ಉದಯಾಸ್ತಗಳಿಗೆ ವೇದಗಳೇ ಕಾರಣ. ಆದರೆ ಯುಧಿಷ್ಠಿರನಿಲ್ಲಿ ಸಾಮವೇದದ ಪ್ರಭಾವದಿಂದ ಸಾಯಂಕಾಲದಲ್ಲಿ ಸೂರ್ಯನು ಬೆಳಗುವನೆಂದಾಗಲೀ ಸಾಮವೇದದಿಂದ ಅಸ್ತಂಗತನಾಗುವನೆಂದಾಗಲೀ ಉತ್ತರಿಸಿಲ್ಲ. ಯುಧಿಷ್ಠಿರನು **ಧರ್ಮಶ್ಚಾಸ್ತಂ ನಯತಿ** ಎಂದಿದ್ದಾನೆ. ಧರ್ಮವು ಸೂರ್ಯನನ್ನು ಅಸ್ತನಾಗುವಂತೆ ಮಾಡುತ್ತದೆ. ಈ ಕಾರಣದಿಂದ ಹಿಂದೆ ಹೇಳಿದ ಶ್ರುತಿಯ ಪ್ರಕಾರ "ಸಾಮವೇದೇನಾಸ್ತಮಯೇ ಮಹೀಯತೇ" ಎಂಬುದು ಇಲ್ಲಿಗೆ ಸಮನ್ವಯವಾಗುವುದಿಲ್ಲ. ಈ ಕಾರಣಗಳಿಂದ ವ್ಯಾಖ್ಯಾನಕಾರರು ಯಕ್ಷಪ್ರಶ್ನೆಯು ಆತ್ಮತತ್ತ್ವದ ನಿರ್ಣಯರೂಪವಾಗಿದೆಯೆಂದು ವ್ಯಾಖ್ಯೆಮಾಡಿರುತ್ತಾರೆ.

ಆದಿತ್ಯಃ ಎಂಬುದಕ್ಕೆ ರೂಢಿಯಾಗಿ ಬಂದಿರುವ ಅರ್ಥ :ಅದಿತೇಃ ಅಪತ್ಯಂ ಪುಮಾನ್ ಆದಿತ್ಯಃ –ಅದಿತಿಯ ಮಗ ಆದಿತ್ಯ'–ಎಂಬುದಾಗಿದೆ. ವ್ಯಾಖ್ಯಾನಕಾರರು ಆದಿತ್ಯಶಬ್ದಕ್ಕೆ ಜೀವನೆಂದು ಅರ್ಥಮಾಡಿದ್ದಾರೆ.

**ಆದತ್ತೇ ಶಬ್ದಾದೀನ್ ಶ್ರೋತ್ರಾದಿಭಿಃ ಇತ್ಯಾದಿತ್ಯಃ = ಜೀವಃ**

ಶಬ್ದ-ಸ್ಪರ್ಶ-ರೂಪ-ರಸ-ಗಂಧಾದಿಗಳನ್ನು ಶ್ರೋತ್ರಾದಿ ಇಂದ್ರಿಯಗಳಿಂದ ಗ್ರಹಣಮಾಡುವವನು ಆದಿತ್ಯ ಅರ್ಥಾತ್ ಜೀವ. ಇಂದ್ರಿಯಾದಿಗಳಿಂದ ಜೀವನನ್ನು ಪೃಥಕ್ಕರಿಸುವುದೇ ಆದಿತ್ಯೋನ್ನಯನ. ದೇಹೇಂದ್ರಿಯಾದ್ಯತಿರಿಕ್ತನೇ ಆತ್ಮನೆಂದು ವೇದವು ಹೇಳುತ್ತದೆ. ಶಮ-ದಮಾದಿ ಗುಣಗಳೇ ದೇವತೆಗಳು. ಆದಿತ್ಯೋನ್ನಯನಕ್ಕೆ ಇವುಗಳು ಸಹಾಯಕಗಳು. ಶಮ-ದಮಾದಿಗಳು ಯಾವಾಗಲೂ ಆತ್ಮಜ್ಞಾನಿಯನ್ನು ಅನುಸರಿಸುತ್ತವೆ. ಇಂತಹ ಸೂರ್ಯನಿಗೂ (ಜೀವನಿಗೆ) ಧರ್ಮವೇ ಅಸ್ತವನ್ನುಂಟುಮಾಡುತ್ತದೆ.

**ಸತ್ಯಂ = ಯಥಾಶಾಸ್ತ್ರಾರ್ಥತಾ, ಸ ಏವ ಅನುಷ್ಠೀಯಮಾನಃ ಧರ್ಮನಾಮಾ ಭವತಿ.** ಯಥಾಶಾಸ್ತ್ರವಾಗಿ ಪ್ರತಿಪಾದಿಸುವ ವಿಷಯಗಳಿಗೆ ಸತ್ಯವೆಂದು ಹೆಸರು. ಶಾಸ್ತ್ರಪ್ರತಿಪಾದ್ಯವಾದ ಕರ್ಮಾಚರಣೆಗೆ ಧರ್ಮವೆಂದು ಹೆಸರು. ಅರ್ಥಾತ್ ಶ್ರುತಿ-ಸ್ಮೃತ್ಯುಕ್ತವಾದ ಕರ್ಮಗಳನ್ನು ಮಾಡುವುದು ಧರ್ಮ. ಆ ಕರ್ಮಾನುಷ್ಠಾನವೇ ಜೀವನನ್ನು ಅಸ್ತಂಗತನನ್ನಾಗಿ ಮಾಡುವುದು–ಎಂದು ಅರ್ಥಮಾಡಬೇಕು. ಕರ್ಮಾನುಷ್ಠಾನದಿಂದ ಜೀವನು ಆತ್ಮನಲ್ಲಿ ಅಸ್ತವಾದನಂತರ ಜೀವನು ಸತ್ಯಸ್ವರೂಪದಿಂದ ಬ್ರಹ್ಮವಸ್ತುವಿನಲ್ಲಿ ಪ್ರತಿಷ್ಠಿತನಾಗುತ್ತಾನೆ.

ಈ ರೀತಿಯಾಗಿ ನಾವು ವ್ಯಾಖ್ಯಾನವನ್ನು ಅನುಸರಿಸಿ ಅರ್ಥಮಾಡಬಹುದಾಗಿದೆ. ವ್ಯಾಖ್ಯಾನಕಾರರು ಆದಿತ್ಯಶಬ್ದಕ್ಕೆ ಜೀವ ಎಂದು ಅರ್ಥಮಾಡಿರುವುದು ಮಾತ್ರವಲ್ಲ ; ದೇವಾಃ ಎಂಬುದಕ್ಕೂ ಶಮ-ದಮಾದಿಗಳು ಎಂದು ಅರ್ಥಮಾಡಿದ್ದಾರೆ. ಶಮ-ದಮಾದಿಗಳನ್ನೇ ದೇವತಾಸ್ವರೂಪರೆಂದು ಭಾವಿಸಬೇಕಾಗಿದೆಯೇ ಹೊರತು ದೇವಾಃ ಎಂಬುದಕ್ಕೆ ಶಮ-ದಮಾದಿಗಳೆಂಬ ನೇರವಾದ ಅರ್ಥವನ್ನು ಮಾಡುವ ಸಾಧ್ಯತೆಯಿಲ್ಲ.

ಆದುದರಿಂದ ಸರಸವಾಗಿ ಹೀಗೂ ಅರ್ಥಮಾಡಬಹುದಾಗಿದೆ.

**ಕಿಂಸ್ವಿದಾದಿತ್ಯಮುನ್ನಯತಿ? = ಬ್ರಹ್ಮಾದಿತ್ಯಮುನ್ನಯತಿ**

ಬ್ರಹ್ಮ ಎಂದರೆ ವೇದ. ಅರ್ಥಾತ್ ಗಾಯತ್ರೀ, ಗಾಯತ್ರೀ ಮಂತ್ರದಿಂದ ಅಭಿಮಂತ್ರಿತವಾದ ಅರ್ಘ್ಯವು ವಜ್ರಾಯುಧವಾಗಿ ಸೂರ್ಯನ

ಶತ್ರುಗಳನ್ನು ಸಂಹರಿಸಿ ಅವನು ಮೇಲೆ ಬರಲು ಅನುಕೂಲವಾಗುವಂತೆ ಮಾಡುವುದೆಂದು ಯಜುರಾರಣ್ಯಕದಲ್ಲಿ ಹೇಳಿದೆ.

**ರಕ್ಷಾಗ್ಂಸಿ ಹವಾ ಪುರೋನುವಾಕೇ ತಪೋಗ್ರಮತಿಷ್ಠನ್ತ ತಾನ್ಪ್ರಜಾಪತಿರ್ವರೇಣೋಪಾಮನ್ತ್ರಯತ ತಾನಿ ವರಮವೃಣೀತಾದಿತ್ಯೋ ನೋ ಯೋದ್ಧಾ ಇತಿ ತಾನ್ಪ್ರಜಾಪತಿರಬ್ರವೀದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠನ್ತಗ್ಂ ಹವಾ ತಾನಿ ರಕ್ಷಾಗ್ಂ ಸ್ಯಾದಿತ್ಯಂ ಯೋಧಯನ್ತಿ ಯಾವದಸ್ತಮನ್ವಗಾತ್ತಾನಿ ಹವಾ ಏತಾನಿ ರಕ್ಷಾಗ್ಂಸಿ ಗಾಯತ್ರಿಯಾಭಿಮನ್ತ್ರಿತೇನಾಮ್ಭಸಾ ಶಾಮ್ಯನ್ತಿ ತದು ಹವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಸ್ಸನ್ಧ್ಯಾಯಾಂ ಗಾಯತ್ರಿಯಾಭಿಮನ್ತ್ರಿತಾ ಆಪ ಊರ್ಧ್ವಂ ವಿಕ್ಷಿಪನ್ತಿ ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ ರಕ್ಷಾಗ್ಂಸಿ ಮನ್ದೇಹಾರುಣೇ ದ್ವೀಪೇ ಪ್ರಕ್ಷಿಪನ್ತಿ ।**

ಸಾಮವೇದದ ಒಂದು ಪ್ರಕರಣದಲ್ಲಿ ಈ ಪ್ರಶ್ನೆಗೆ ನೇರವಾಗಿಯೇ ಉತ್ತರವಿದೆ.

ಉನ್ನಯಾಮಿ – ಹೋಇ – ಆದಿತ್ಯಂ ಪ್ರಾಞ್ಚಂ ಯಾನ್ತಂ ಉನ್ನಯಾಮಿ.

ಆದುದರಿಂದ ಈ ಪ್ರಕರಣದಲ್ಲಿ ಸಾಕ್ಷಾತ್ ಸೂರ್ಯನನ್ನೇ ಕುರಿತು ಪ್ರಶ್ನಿಸಿರುವುದೆಂದು ಹೇಳಬಹುದಾಗಿದೆ.

ದೇವತೆಗಳು ಸೂರ್ಯನ ಅನುಚರರು. ಹಿಂದೆಯೇ ಹೇಳಿದಂತೆ ಸತ್ಯವೆಂದರೆ ಶ್ರುತಿ-ಸ್ಮೃತಿಗಳಲ್ಲಿ ಉಕ್ತವಾಗಿರುವ ಕರ್ಮಗಳು. ಧರ್ಮವೆಂದರೆ ಕರ್ಮಗಳ ಅನುಷ್ಠಾನ. ಅರ್ಥಾತ್ ಸೂರ್ಯನು ದ್ವಿಜರು ಕೊಡುವ ಅರ್ಘ್ಯಪ್ರದಾನದಿಂದಲೇ ಉದಯಿಸುತ್ತಾನೆ ಮತ್ತು ಅವರು ಮಾಡುವ ಔಪಾಸನ-ಅಗ್ನಿಹೋತ್ರಗಳೇ ಮೊದಲಾದ ವೇದವಿಹಿತಕರ್ಮಾನುಷ್ಠಾನಗಳ ಫಲವಾಗಿ ಅಸ್ತಂಗತನಾಗುತ್ತಾನೆ.

**ಸತ್ಯೇನ ವಾಯುರಾವಾತಿ ಸತ್ಯೇನಾದಿತ್ಯೋ ರೋಚತೇ ।**
**ದಿವಿ ಸತ್ಯಂ ವಾಚಃ ಪ್ರತಿಷ್ಠಾ ಸತ್ಯೇ ಸರ್ವಂ ಪ್ರತಿಷ್ಠಿತಮ್ ॥**

**(ತೈತ್ತಿರೀಯೋಪನಿಷತ್)**

ಈ ಶ್ರುತಿಪ್ರಮಾಣದಂತೆ ಸೂರ್ಯನೂ ಸತ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ.

ಯೋಗಿಗಳೊಬ್ಬರು ಹೇಳಿದ ಈ ಅರ್ಥವೂ ಸಹ ಗ್ರಾಹ್ಯವಾಗಿದೆ. ಆದಿತ್ಯನೆಂದರೆ ಸಾಕ್ಷಾತ್ ಆತ್ಮ. ಆತ್ಮಜ್ಯೋತಿಗೆ ಸೂರ್ಯನೆಂದೂ ಹೆಸರು. ಬ್ರಹ್ಮ ಎಂದರೆ ಜ್ಞಾನವು ಈ ಆತ್ಮನನ್ನು ಉದಯಿಸುವಂತೆ ಮಾಡುತ್ತದೆ. ಅರ್ಥಾತ್ ಜ್ಞಾನದಿಂದ ಆತ್ಮನು ತಿಳಿಯುತ್ತಾನೆ. ಧರ್ಮದಲ್ಲಿ ಅಸ್ತಂಗತನಾಗುತ್ತಾನೆ. ಸ್ವಧರ್ಮದಲ್ಲಿ ಯಾವಾಗಲೂ ಸೂರ್ಯನು ಪ್ರಕಾಶಿಸುತ್ತಲೇ ಇರುತ್ತಾನೆ. ಪ್ರಕೃತಿಧರ್ಮದಲ್ಲಿ ಮಾತ್ರ ಸೂರ್ಯನಿಗೆ ಉದಯಾಸ್ತಗಳಾಗುತ್ತವೆ. ಆತ್ಮನಿಗೆ ಅಥವಾ ಆದಿತ್ಯನಿಗೆ ಯಾವಾಗಲೂ ಸತ್ಯದಲ್ಲಿಯೇ ಅಧಿಷ್ಠಾನ.

ಯಕ್ಷನು ಕೇಳಿದ ಮುಂದಿನ ಪ್ರಶ್ನೆ ಇದು :

**ಕೇನಸ್ವಿಚ್ಛ್ರೋತ್ರಿಯೋ ಭವತಿ ಕೇನಸ್ವಿದ್ವಿನ್ದತೇ ಮಹತ್ ।**
**ಕೇನಸ್ವಿದ್ದ್ವಿತೀಯವಾನ್ಭವತಿ ರಾಜನ್ಕೇನ ಚ ಬುದ್ಧಿಮಾನ್ ॥೪೭॥**

"ಯುಧಿಷ್ಠಿರ! ಮನುಷ್ಯನು ಯಾವುದರಿಂದ ಶ್ರೋತ್ರಿಯನಾಗುತ್ತಾನೆ? ಯಾವುದರಿಂದ ಮಹಾವಸ್ತುವನ್ನು ಪಡೆಯುತ್ತಾನೆ? ಯಾವುದರಿಂದ ದ್ವಿತೀಯರೂಪವುಳ್ಳವನಾಗುತ್ತಾನೆ ಮತ್ತು ಯಾವುದರಿಂದ ಬುದ್ಧಿವಂತನಾಗುತ್ತಾನೆ?"

ಯುಧಿಷ್ಠಿರನು ಉತ್ತರಿಸುತ್ತಾನೆ :

**ಶ್ರುತೇನ ಶ್ರೋತ್ರಿಯೋ ಭವತಿ ತಪಸಾ ವಿನ್ದತೇ ಮಹತ್ ।**
**ಧೃತ್ಯಾ ದ್ವಿತೀಯವಾನ್ಭವತಿ ಬುದ್ಧಿಮಾನ್ವೃದ್ಧಸೇವಯಾ ॥೪೮॥**

"ವೇದಾಧ್ಯಯನವನ್ನು ಮಾಡುವುದರಿಂದ ಶ್ರೋತ್ರಿಯನಾಗುತ್ತಾನೆ. ತಪಸ್ಸಿನಿಂದ ಮಹತ್ತ್ವವನ್ನು ಪಡೆಯುತ್ತಾನೆ. ಧೈರ್ಯದಿಂದ ಎರಡನೆಯ ರೂಪವುಳ್ಳವನಾಗುತ್ತಾನೆ. ವೃದ್ಧರ ಸೇವೆಯಿಂದ ಬುದ್ಧಿವಂತನಾಗುತ್ತಾನೆ."

ಯಕ್ಷನು ಕೇಳಿದ ಎರಡನೆಯ ಪ್ರಶ್ನಮಾಲಿಕೆ : **ಕೇನಸ್ವಿತ್ ಶ್ರೋತ್ರಿಯೋ ಭವತಿ**–ಯಾವುದರಿಂದ ಶ್ರೋತ್ರಿಯನಾಗುತ್ತಾನೆ? ಶ್ರೋತ್ರಿಯಶಬ್ದಕ್ಕೆ **ಶ್ರೋತ್ರಿಯಶ್ಛನ್ದೋಽಧೀತೇ** = ವೇದಾಧ್ಯಯನ

ಮಾಡಿದವನು 'ಶ್ರೋತ್ರಿಯ' ಎಂದೇ ಸ್ಪಷ್ಟವಾಗಿರುವಾಗ ಯಾವುದರಿಂದ ಶ್ರೋತ್ರಿಯನಾಗುತ್ತಾನೆ ಎಂದು ಕೇಳುವ ಕಾರಣವಾದರೂ ಏನಿದೆ? ಅರ್ಥಾತ್ ವೇದಾಧ್ಯಯನಮಾತ್ರದಿಂದಲೇ ಶ್ರೋತ್ರಿಯನಾಗಲಾರನೆಂಬ ಅಭಿಪ್ರಾಯವನ್ನು ಯಕ್ಷನು ಮನಸ್ಸಿನಲ್ಲಿಟ್ಟುಕೊಂಡು ಪ್ರಶ್ನಿಸಿದ್ದಾನೆ. ಅದಕ್ಕುತ್ತರವಾಗಿ ಯುಧಿಷ್ಠಿರನು **ಶ್ರುತೇನ ಶ್ರೋತ್ರಿಯೋ ಭವತಿ** ಎಂದು ಉತ್ತರಿಸುತ್ತಾನೆ. ವೇದಾಧ್ಯಾಯಿಯಾದ ಶ್ರೋತ್ರಿಯನು **ಶ್ರುತೇನ = ಆಚಾರ್ಯಮುಖಾದ್ವೇದಾರ್ಥಾವಧಾರಣೇನ** – ಆಚಾರ್ಯ ಮುಖದಿಂದ ವೇದಾರ್ಥವನ್ನು ಗ್ರಹಣಮಾಡುವುದರಿಂದ ಮಾತ್ರವೇ ಶ್ರೋತ್ರಿಯನಾಗುತ್ತಾನೆ.

ಈ ಶ್ಲೋಕದ ಎರಡನೆಯ ಪ್ರಶ್ನೆಗೆ ಉತ್ತರ–**ತಪಸಾ ವಿನ್ದತೇ ಮಹತ್.** ಮಹತ್ ಎಂದರೆ ಬ್ರಹ್ಮ. **ಅಣೋರಣೀಯಾನ್ಮಹತೋ ಮಹೀಯಾನ್.** ವೇದಾರ್ಥಗಳ ಆಲೋಚನೆಯೇ ತಪಸ್ಸು. ನಿರಂತರವಾದ ವೇದಾರ್ಥಗಳ ಆಲೋಚನೆಯಿಂದ ಪರಬ್ರಹ್ಮವಸ್ತುವಿನ ತಿಳಿವಳಿಕೆಯುಂಟಾಗುತ್ತದೆ. ಈ ಎರಡು ಉತ್ತರಗಳಿಂದ ವೇದಾಧ್ಯಯನ ಮತ್ತು ಆಚಾರ್ಯಮುಖೇನ ವೇದಾರ್ಥಗಳ ಗ್ರಹಣ, ಅನಂತರದಲ್ಲಿ ವೇದಾರ್ಥಗಳ ಸಮಗ್ರವಾದ ವಿವೇಚನೆಯಿಂದಾಗಿ ಪರಬ್ರಹ್ಮವಸ್ತುವಿನ ಅರಿವು ಇಷ್ಟೂ ಆಗುವುದೆಂದು ಹೇಳಿದ ಹಾಗಾಯಿತು. **ಧೃತ್ಯಾ ದ್ವಿತೀಯವಾನ್ಭವತಿ–** ಎಂಬುದು ಮೂರನೆಯ ಪ್ರಶ್ನೆಗೆ ಉತ್ತರ. ಧೃತಿ ಎಂಬುದಕ್ಕೆ ದೃಢತೆ, ನಿಷ್ಠೆ ಎಂಬುದು ಸಾಧಾರಣವಾದ ಅರ್ಥ. ಈ ಪದಕ್ಕೆ ಭಗವದ್ಗೀತೆಯಲ್ಲಿ ಅತಿಮಹತ್ತ್ವದ ಅರ್ಥವಿದೆ.

**ಧೃತ್ಯಾ ಯಯಾ ಧಾರಯತೇ ಮನಃ ಪ್ರಾಣೇನ್ದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಸ್ಸಾ ಪಾರ್ಥ ಸಾತ್ತ್ವಿಕೀ ॥**

ಅತ್ತಿತ್ತ ಹೊಯ್ದಾಡದ ಧೃತಿಯಿಂದ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಏಕಾಗ್ರತೆಯಿಂದ ತಡೆಗಟ್ಟಿ ಆತ್ಮಾನ್ವೇಷಣದ ಮಾರ್ಗದಲ್ಲಿಯೇ ಸಾಗುವಂತೆ ಮಾಡಿದರೆ ಆ ಧೃತಿಯು ಸಾತ್ತ್ವಿಕವೆನಿಸಿಕೊಳ್ಳುತ್ತದೆ. ಇದೇ ಆತ್ಮನಿಧಿಧ್ಯಾಸನಕ್ಕೆ ಮಾರ್ಗ. ಈ ಆತ್ಮನಿಧಿಧ್ಯಾಸನ

ದಿಂದ ಜೀವಾತ್ಮನು ತನಗೆ ಎರಡನೆಯದಾದ ಪರಮಾತ್ಮಸ್ವರೂಪನಾಗುತ್ತಾನೆ.



ಉಪನಿಷದ್ವಾಕ್ಯವೂ ಇದೇ ಅಭಿಪ್ರಾಯವನ್ನು ಪ್ರತಿಪಾದಿಸುತ್ತದೆ. ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿಧಿಧ್ಯಾ ಸಿತವ್ಯಃ

ಶ್ರವಣ : ಮೊದಲು ವೇದಾಧ್ಯಯನಮಾಡಬೇಕು. ಮನನ : ಅನಂತರದಲ್ಲಿ ಆಚಾರ್ಯಮುಖೇನ ವೇದಾರ್ಥಗ್ರಹಣಮಾಡಬೇಕು. ಅದರಿಂದ ಪರಬ್ರಹ್ಮ ರೂಪವು ಮನದಟ್ಟಾಗುತ್ತದೆ. ಅನಂತರದಲ್ಲಿ ಅಂಗುಷ್ಠ ಮಾತ್ರಸ್ವರೂಪನಾದ ಪರಮಪುರುಷನನ್ನು ಎಡೆಬಿಡದೇ ಏಕಾಗ್ರತೆಯಿಂದ

ಧ್ಯಾನಮಾಡಬೇಕು. ಇದೇ ನಿಧಿಧ್ಯಾಸನ. ಹೀಗೆ ಮಾಡುವುದರಿಂದ ಆತ್ಮಾನುಭವವಾಗುತ್ತದೆ.

ಈ ಶ್ಲೋಕದಲ್ಲಿ ಕಡೆಯ ಪ್ರಶ್ನೆ : 'ಕೇನ ಚ ಬುದ್ಧಿಮಾನ್' 'ಯಾವುದರಿಂದ ಬುದ್ಧಿವಂತನಾಗುತ್ತಾನೆ?' ಎಂಬುದು. ಇದಕ್ಕೆ ಯುಧಿಷ್ಠಿರನ ಉತ್ತರ : 'ಬುದ್ಧಿಮಾನ್ ಭವತಿ ವೃದ್ಧಸೇವಯಾ–ವೃದ್ಧರ ಸೇವೆಮಾಡುವುದರಿಂದ ಬುದ್ಧಿವಂತನಾಗುತ್ತಾನೆ.'

ಈ ಪ್ರಕರಣದಲ್ಲಿ ವೃದ್ಧರೆಂದರೆ ಜ್ಞಾನವೃದ್ಧರೆಂದರ್ಥ. ಕೇವಲ ಮುದುಕರೆಂಬ ಅರ್ಥವಲ್ಲ. ವೃದ್ಧರಾದ ಆಚಾರ್ಯರು ಅಥವಾ ಗುರುಗಳು ಎಂದು ಅರ್ಥಮಾಡಬೇಕು. ನಮ್ಮ ಪೌರ್ವಾತ್ಯವಿದ್ಯೆಗಳೆಲ್ಲವೂ ಗುರು ಶುಶ್ರೂಷೆ ಮತ್ತು ಗುರುಪ್ರಸಾದಗಳಿಂದಲೇ ಲಭ್ಯವಾಗುತ್ತವೆ. ವಿದ್ಯೆಯ ರಹಸ್ಯಗಳು ಗುರುಗಳ ದಿವ್ಯಾನುಗ್ರಹವಿಲ್ಲದೇ ಲಭ್ಯವಾಗಲಾರವು. ಅದರಲ್ಲಿಯೂ ಅಧ್ಯಾತ್ಮವಿದ್ಯೆಗೆ ಪರಂಜ್ಯೋತಿಸ್ವರೂಪನಾದ ಗುರುವಿದ್ದೇ ಇರಬೇಕು.

ಇದನ್ನೇ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ.

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**

ಪರಬ್ರಹ್ಮವಸ್ತುವನ್ನು ಅನನ್ಯಶರಣತೆಯಿಂದ ಪ್ರಶ್ನೋಪಪ್ರಶ್ನೆಗಳಿಂದ ಮತ್ತು ಗುರುಸೇವೆಯಿಂದ ತಿಳಿಯುವವನಾಗು.

ಈ ವಿಷಯವನ್ನೇ ಶ್ರೀಶಂಕರಭಗವತ್ಪಾದರು ವಿವೇಕಚೂಡಾಮಣಿಯಲ್ಲಿ ಹೀಗೆ ಹೇಳಿದ್ದಾರೆ.

**ದುರ್ಲಭಂ ತ್ರಯಮೇವೈತದ್ದೇವಾನುಗ್ರಹಹೇತುಕಮ್ ।**
**ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷಸಂಶ್ರಯಃ ॥**

ದೇವಾನುಗ್ರಹಕ್ಕೆ ಕಾರಣಭೂತವಾದ ಮನುಷ್ಯತ್ವ ; ಮನುಷ್ಯನಾಗಿ ಹುಟ್ಟಿದರೂ ಮುಮುಕ್ಷುವಾಗಬೇಕೆಂಬ ಇಚ್ಛೆ ; ಈ ಇಚ್ಛೆಯ ಪೂರಣಕ್ಕಾಗಿ ಮಹಾಪುರುಷರ, ಪರಮಯೋಗಿಗಳ ಅಥವಾ ಪರಮಗುರುಗಳ ಆಶ್ರಯ. ಈ ಮೂರೂ ಏಕಕಾಲದಲ್ಲಿ ಈ ಲೋಕದಲ್ಲಿ ಲಭಿಸುವುದು ಸುದುರ್ಲಭವೇ ಸರಿ. ಶಾಸ್ತ್ರಾರ್ಥಗಳನ್ನು ತಿಳಿದು ಪರಬ್ರಹ್ಮಸ್ವರೂಪವನ್ನು ತಿಳಿದಿದ್ದರೂ

ಆತ್ಮಸಾಕ್ಷಾತ್ಕಾರಕ್ಕಾಗಿ ಪರಮಗುರುವನ್ನೇ ಆಶ್ರಯಿಸಬೇಕೆಂದು ಎಲ್ಲ ಮತಾಚಾರ್ಯರೂ ಹೇಳುತ್ತಾರೆ.

ಬುದ್ಧಿ, ಮನಸ್ಸು, ಚಿತ್ತ ಮತ್ತು ಅಹಂಕಾರಗಳಲ್ಲಿ ಬುದ್ಧಿಯೊಂದೇ ಆತ್ಮಾನ್ವೇಷಣಕ್ಕೆ ಸಾಧನವಾಗುವುದು. ಆದುದರಿಂದ ಆತ್ಮಾನ್ವೇಷಣವನ್ನು ಮಾಡುವವನೇ ಬುದ್ಧಿವಂತನೆಂದು ಹೇಳಬಹುದಾಗಿದೆ.

ಈ ಉತ್ತರಗಳಿಂದಾಗಿ ಯುಧಿಷ್ಠಿರನು ಆತ್ಮಾನುಸಂಧಾನಕ್ಕೆ ವಿವರಣೆಯನ್ನು ಪೂರ್ಣವಾಗಿ ಕೊಟ್ಟಂತಾಯಿತು.

ವ್ಯಾವಹಾರಿಕವಾದ ವಿಷಯಗಳನ್ನೇ ತಿಳಿದುಕೊಳ್ಳಬೇಕಾದರೂ ಮನೆಯಲ್ಲಿ ಹಿರಿಯರ ಸೇವೆ ಮತ್ತು ತಿಳಿಯದ ವಿಷಯಗಳಲ್ಲಿ ಪ್ರಶ್ನೋಪಪ್ರಶ್ನಗಳನ್ನು ಕೇಳುವುದು ಅತ್ಯವಶ್ಯಕವಾಗಿರುತ್ತದೆ. ಆದುದರಿಂದ ಬುದ್ಧಿವಂತನಾಗಲು, ಆಧ್ಯಾತ್ಮಿಕವಿಷಯವನ್ನು ತಿಳಿಯಲು ವೃದ್ಧರ ಸೇವೆಯನ್ನು ಮಾಡಬೇಕೆಂಬುದು ಸಮಂಜಸವಾಗಿಯೇ ಇದೆ.

ಯಕ್ಷನು ಪುನಃ ನಾಲ್ಕು ಪ್ರಶ್ನೆಗಳನ್ನು ಕೇಳುತ್ತಾನೆ :

**ಕಿಂ ಬ್ರಾಹ್ಮಣಾನಾಂ ದೇವತ್ವಂ ಕಶ್ಚ ಧರ್ಮಃ ಸತಾಮಿವ ।**
**ಕಶ್ಚೈಷಾಂ ಮಾನುಷೋ ಭಾವಃ ಕಿಮೇಷಾಮಸತಾಮಿವ ॥೬೯॥**

"ಬ್ರಾಹ್ಮಣರಿಗೆ ದೇವತ್ವವನ್ನು ಕೊಡತಕ್ಕದ್ದು ಯಾವುದು? ಸಜ್ಜನರಿಗೆ ಅನುರೂಪವಾದ ಧರ್ಮವು ಯಾವುದು? ಯಾವ ಕಾರಣದಿಂದವರು ಮನುಷ್ಯಭಾವವನ್ನು ಹೊಂದುತ್ತಾರೆ? ಅವರು ಮಾಡುವ ಯಾವ ಕಾರ್ಯವು ಅಸತ್ಕಾರ್ಯಕ್ಕೆ ಸಮಾನವಾಗುತ್ತದೆ?"

ಧರ್ಮಜನು ಉತ್ತರಿಸುತ್ತಾನೆ :

**ಸ್ವಾಧ್ಯಾಯ ಏಷಾಂ ದೇವತ್ವಂ ತಪ ಏಷಾಂ ಸತಾಮಿವ ।**
**ಮರಣಂ ಮಾನುಷೋ ಭಾವಃ ಪರಿವಾದೋಽಸತಾಮಿವ ॥೫೦॥**

"ಬ್ರಾಹ್ಮಣರಿಗೆ ವೇದಾಧ್ಯಯನವು ದೇವತ್ವವನ್ನುಂಟುಮಾಡುತ್ತದೆ. ಸತ್ಪುರುಷರ ಕರ್ಮಕ್ಕೆ ಅನುರೂಪವಾದ ಅವರ ಕರ್ಮವೇ ತಪಸ್ಸು. ಮರಣವೇ ಅವರಿಗೆ ಮನುಷ್ಯಭಾವವನ್ನು ಸ್ಥಿರೀಕರಿಸುತ್ತದೆ. ಅವರು

ಮಾಡುವ ಪರನಿಂದನೆಯು ಅಸತ್ಪುರುಷರ ಆಚರಣೆಗೆ ಅನುರೂಪ ವಾಗಿರುತ್ತದೆ."

ಬ್ರಾಹ್ಮಣರಿಗೆ ಭೂಸುರರೆಂಬ ಹೆಸರಿದ್ದರೂ ಈ ದೇವತ್ವವು ಕೇವಲ ಬ್ರಾಹ್ಮಣವರ್ಣದಲ್ಲಿ ಹುಟ್ಟಿದ ಮಾತ್ರವೇ ಸಿದ್ಧವಾಗುವುದಿಲ್ಲವೆಂಬ ಸಿದ್ಧಾಂತದಿಂದ ಯಕ್ಷನು ಯುಧಿಷ್ಠಿರನನ್ನು ಕುರಿತು **ಕಿಂ ಬ್ರಾಹ್ಮಣಾನಾಂ ದೇವತ್ವಂ?** –ಎಂದು ಪ್ರಶ್ನಿಸುತ್ತಾನೆ. ಯುಧಿಷ್ಠಿರನೂ ಪ್ರಶ್ನೆಯ ಇಂಗಿತ ವನ್ನು ಅರ್ಥಮಾಡಿಕೊಂಡು **ಸ್ವಾಧ್ಯಾಯ ಏಷಾಂ ದೇವತ್ವಂ**–ಎಂದು ಉತ್ತರಿಸುತ್ತಾನೆ. ಬ್ರಾಹ್ಮಣನಾದವನಿಗೆ ವೇದಾಧ್ಯಯನವೇ ಮುಖ್ಯ ವಾದುದು. ವೇದಾಧ್ಯಯನವನ್ನು ಮಾಡದವನು ಮೃತ್ಯುವಶನಾಗುವನೆಂದು ಮನುಸ್ಮೃತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

**ಅನಭ್ಯಾಸೇನ ವೇದನಾಮಾಚಾರಸ್ಯ ಚ ವರ್ಜನಾತ್ ।**
**ಆಲಸ್ಯಾದನ್ನದೋಷಾಚ್ಚ ಮೃತ್ಯುರ್ವಿಪ್ರಾಞ್ಜಿಘಾಂಸತಿ ॥**

ವೇದಗಳನ್ನು ಅಧ್ಯಯನಮಾಡದ ಕಾರಣದಿಂದ, ಪರಂಪರಾಗತವಾಗಿ ಬಂದಿರುವ ಸದಾಚಾರಗಳನ್ನು ವರ್ಜಿಸುವ ಕಾರಣದಿಂದ, ಆಲಸ್ಯದ ಕಾರಣದಿಂದ, ದೋಷಯುಕ್ತವಾದ ಅನ್ನವನ್ನು ತಿನ್ನುವ ಕಾರಣದಿಂದ ಮೃತ್ಯುವು ಬ್ರಾಹ್ಮಣನನ್ನು ಸಂಹಾರಮಾಡುತ್ತದೆ. (ವೇದಾಧ್ಯಯನಮಾಡದ ಬ್ರಾಹ್ಮಣನು ಮರ್ತ್ಯನಾಗುತ್ತಾನೆ.) ವೇದಾಧ್ಯಯನಮಾಡಿದವನ ಮಹಿಮೆಯು ಅಪಾರವಾದುದು. ತೈತ್ತಿರೀಯಾರಣ್ಯಕದಲ್ಲಿ ಹೀಗೆ ಹೇಳಿದೆ ;

**ಯಾವತೀರ್ವೈ ದೇವತಾಸ್ತಾ ಸ್ಸರ್ವಾ ವೇದವಿದಿ ಬ್ರಾಹ್ಮಣೇ ವಸನ್ತಿ ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾನ್ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ॥**

ಎಲ್ಲ ದೇವತೆಗಳೂ ವೇದವಿದನಾದ ಬ್ರಾಹ್ಮಣನಲ್ಲಿ ವಾಸವಾಗಿರು ತ್ತಾರೆ. ಆದುದರಿಂದ ವೇದವಿದರಾದ ಬ್ರಾಹ್ಮಣರಿಗೆ ಅನುದಿನವೂ ನಮಸ್ಕರಿಸಬೇಕು. ಅವರ ವಿಷಯದಲ್ಲಿ ಅಶ್ಲೀಲವಾದ ಮಾತುಗಳನ್ನು ಹೇಳಬಾರದು. ಇದರಿಂದಲೇ ದೇವತೆಗಳು ಸುಪ್ರೀತರಾಗುತ್ತಾರೆ.

ಶ್ರೀಕೃಷ್ಣನೂ ಮಹಾಭಾರತದಲ್ಲಿ ಹೀಗೆಯೇ ಹೇಳಿದ್ದಾನೆ :

**ದೈವಾಧೀನಂ ಜಗತ್ಸರ್ವಂ ಮನ್ತ್ರಾಧೀನಂ ತು ದೈವತಮ್ ।**
**ತೇ ಮನ್ತ್ರಾ ಬ್ರಾಹ್ಮಣಾಧೀನಾ ಬ್ರಾಹ್ಮಣೋ ಮಮ ದೈವತಮ್ ॥**

'ಈ ಸರ್ವಜಗತ್ತುಗಳೂ ವೇದಗಳ ಅಧೀನವಾಗಿವೆ. ದೇವತೆಗಳು ವೇದಮಂತ್ರಗಳ ಅಧೀನರಾಗಿದ್ದಾರೆ. (ಆಯಾ ದೇವತೆಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಪುನಶ್ಚರಣೆಮಾಡಿದರೆ ಅವರುಗಳು ಒಲಿಯುತ್ತಾರೆ.) ಆ ಮಹಾಮಂತ್ರಗಳೆಲ್ಲವೂ ವೇದವಿದರಾದ ಬ್ರಾಹ್ಮಣರ ಸ್ವಾಧೀನದಲ್ಲಿವೆ. ಆದುದರಿಂದ ಬ್ರಾಹ್ಮಣರೇ ನನಗೆ ದೇವತೆಗಳು.'

ಈ ಕಾರಣಗಳಿಂದ ಬ್ರಾಹ್ಮಣನಿಗೆ ವೇದಾಧ್ಯಯನದಿಂದ ದೇವತ್ವವು ಪ್ರಾಪ್ತವಾಗುವುದೆಂಬುದು ಸರ್ವಸಮಂಜಸವಾಗಿದೆ. ಅಂತೆಯೇ ವೇದಾಧ್ಯಯನಮಾಡದವನು ಮನುಸ್ಮೃತಿಯಲ್ಲಿ ಹೇಳಿರುವಂತೆ ಮರ್ತ್ಯತ್ವವನ್ನು ಹೊಂದುತ್ತಾನೆ ಅಥವಾ ಮೃತ್ಯುವಶನಾಗುತ್ತಾನೆ.

ವೇದಾಧ್ಯಯನವನ್ನು ಮಾಡಿ ದೇವತ್ವವನ್ನು ಪಡೆದರೂ ಅವನು ಅಮರತ್ವವನ್ನು ಪಡೆಯಲು ಇದಿಷ್ಟೇ ಸಾಲದು. ಸತ್ಪುರುಷರು ಆಚರಿಸುವ ಧರ್ಮಕ್ಕೆ ಅನುರೂಪವಾದ ಧರ್ಮವನ್ನೂ ಆಚರಿಸಬೇಕು. ಸತ್ಪುರುಷರು ಆಚರಿಸುವ ಧರ್ಮಕ್ಕೆ ಅನುರೂಪವಾದ ಧರ್ಮ 'ತಪಸ್ಸು' ಎಂದು ಯುಧಿಷ್ಠಿರನ ಉತ್ತರ. ತಪಸ್ಸೆಂದರೆ ಶಮ-ದಮ-ಸದಾಚಾರಗಳು. ಇವು ವೇದವಿದನಾದ ಬ್ರಾಹ್ಮಣನಲ್ಲಿರಬೇಕು. ಆಚಾರಹೀನಂ ನ ಪುನನ್ತಿ ವೇದಾಃ– 'ಸದಾಚಾರಿಯಲ್ಲದ ಬ್ರಾಹ್ಮಣನನ್ನು ಕೇವಲ ವೇದಾಧ್ಯಯನವು ಪವಿತ್ರನನ್ನಾಗಿ ಮಾಡುವುದಿಲ್ಲ.' ಸದಾಚಾರಗಳು ಮನುಷ್ಯನನ್ನು ಶಾರೀರಕವಾಗಿ ಪವಿತ್ರಗೊಳಿಸುತ್ತವೆ. ಶಮ-ದಮಾದಿಗಳು ಮನುಷ್ಯನ ಮನಸ್ಸನ್ನು ಸ್ವಚ್ಛಗೊಳಿಸುತ್ತವೆ. ಇವೆರಡೂ ವೇದಾಧ್ಯಯನಮಾಡಿದ ಬ್ರಾಹ್ಮಣನಲ್ಲಿರಬೇಕು.

**ಕಶ್ಚೈಷಾಂ ಮಾನುಷೋ ಭಾವಃ?**–ಈ ಪ್ರಶ್ನೆಯನ್ನು ಯಕ್ಷನು ಮೂರನೆಯ ಪ್ರಶ್ನೆಯನ್ನಾಗಿ ಕೇಳಿರುವುದರಿಂದ ದೇವತ್ವವಿರುವ ಮತ್ತು

ಸತ್ಪುರುಷರ ಧರ್ಮವಿರುವ ಬ್ರಾಹ್ಮಣನಿಗೆ ಮರ್ತ್ಯತ್ವವಿಲ್ಲವೆಂಬ ಅಭಿಪ್ರಾಯ ಕೊಡುತ್ತದೆ. ಅವನು ಅಮರನು ಅಥವಾ ಆತ್ಮಜ್ಞಾನೀ. ಅವನಿಗೆ ಸಾವೆಂಬುದಿಲ್ಲ. ಇಲ್ಲಿ ಯುಧಿಷ್ಠಿರನು–**'ಮರಣಂ ಮಾನುಷೋ ಭಾವಃ'**– ಎಂದು ಉತ್ತರಿಸಿದ್ದಾನೆ. ಮನುಸ್ಮೃತಿಯಲ್ಲಿ ಹೇಳಿರುವಂತೆ ವೇದಾಧ್ಯಯನ ಮಾಡದವನನ್ನು ಮೃತ್ಯುವು ಕೊಲ್ಲುವುದೆಂದು ಈ ಹಿಂದೆಯೇ ವಿವರಿಸ ಲಾಗಿದೆ. ಮರಣವೇ ಮನುಷ್ಯಭಾವವೆನ್ನುವುದಾದರೆ ವೇದಾಧ್ಯಾಯಿಗೆ ಅಥವಾ ಆತ್ಮಜ್ಞಾನಿಗೆ ಮರಣವಿಲ್ಲವೆ? ದೇಹಾಭಿಮಾನವಿರುವವನಿಗೆ ಸಾವು-ಮುಪ್ಪುಗಳ, ಸುಖ-ದುಃಖಗಳ ಸಂಕೋಲೆಯಿರುವುದು. ಕೇವಲ ದೇಹದ ವಿನಾಶವೇ ಮರಣವೆಂದು ಭಾವಿಸುತ್ತಾನೆ. ದೇಹವು ಆತ್ಮವಲ್ಲ. ದೇಹವೇ ಬೇರೆ ; ಆತ್ಮವೇ ಬೇರೆ. ದೇಹವೆಂಬುದು ಕೇವಲ ಅಂಗಿಯ ರೂಪವಾದುದು. ಈ ಭಾವನೆಯು ರೂಢಮೂಲವಾಗಿ, ನಿಧಿಧ್ಯಾಸನದಿಂದ ಹೃದಯಾಂತರಾಳದಲ್ಲಿ ಪರಮಾತ್ಮನನ್ನು ಕಂಡುಕೊಳ್ಳುವವರೆಗೂ, ಜೀವನಿಗೆ ಜನನ-ಮರಣಾದಿ ಕ್ರಿಯೆಗಳು ಇದ್ದೇ ಇರುತ್ತವೆ. **'ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವ ಆಜಾಯತೇ ಪುನಃ'** ಎಂದು ಕಠೋಪನಿಷತ್ತಿನಲ್ಲಿ ಹೇಳಿರುವಂತೆ ಜನನ-ಮರಣಾದಿಗಳನ್ನು ಅನುಭವಿಸುತ್ತಲೇ ಇರುತ್ತಾನೆ.

**'ಕಿಮೇಷಾಮಸತಾಮಿವ'**–ಎಂಬ ಯಕ್ಷನ ಪ್ರಶ್ನೆಗೆ **'ಪರಿವಾದೋಽಸತಾಮಿವ'**–ಎಂಬುದು ಯುಧಿಷ್ಠಿರನ ಉತ್ತರ. ಅಸತ್ಪುರುಷರಿಗೆ ಯೋಗ್ಯವಾದ ಪರನಿಂದೆಯು ಬ್ರಾಹ್ಮಣನಿಗೆ ಅತ್ಯಂತದೋಷದಾಯಕ ವಾದುದು. ಬ್ರಾಹ್ಮಣನಾದವನು ಪರನಿಂದೆಯನ್ನು ಸರ್ವಥಾ ಮಾಡ ಕೂಡದು.

ಯಕ್ಷನು ಪುನಃ ಪ್ರಶ್ನಿಸುತ್ತಾನೆ :

**ಕಿಂ ಕ್ಷತ್ರಿಯಾಣಾಂ ದೇವತ್ವಂ ಕಶ್ಚ ಧರ್ಮಃ ಸತಾಮಿವ ।**
**ಕಶ್ಚೈಷಾಂ ಮಾನುಷೋ ಭಾವಃ ಕಿಮೇಷಾಮಸತಾಮಿವ ॥೫೧॥**

"ಕ್ಷತ್ರಿಯರಿಗೆ ದೇವತ್ವವನ್ನು ಉಂಟುಮಾಡುವುದು ಯಾವುದು? ಅವರಿಗೆ ಸಜ್ಜನಯೋಗ್ಯವಾದ ಧರ್ಮವು ಯಾವುದು? ಅವರ ಮಾನುಷ

ಭಾವವು ಯಾವುದು? ಅವರಲ್ಲಿರಬಹುದಾದ ಯಾವ ಗುಣವು ಅಸತ್ಪುರುಷರಲ್ಲಿರುವ ಗುಣಕ್ಕೆ ಸಮನಾಗಿರುತ್ತದೆ?"

ಯುಧಿಷ್ಠಿರನು ಉತ್ತರಿಸುತ್ತಾನೆ :

**ಇಷ್ವಸ್ತ್ರಮೇಷಾಂ ದೇವತ್ವಂ ಯಜ್ಞ ಏಷಾಂ ಸತಾಮಿವ ।**
**ಭಯಂ ವೈ ಮಾನುಷೋ ಭಾವಃ ಪರಿತ್ಯಾಗೋಽಸತಾಮಿವ ॥೫೨॥**

"ಧನುರ್ಬಾಣಗಳ ವಿದ್ಯೆಯು (ಶಸ್ತ್ರವಿದ್ಯೆಯು) ಕ್ಷತ್ರಿಯರಿಗೆ ದೇವತ್ವವನ್ನುಂಟುಮಾಡುತ್ತದೆ. ಸತ್ಪುರುಷರು ಆಚರಿಸುವ ಯಜ್ಞ-ಯಾಗಾದಿಗಳನ್ನು ಮಾಡುವುದು ಕ್ಷತ್ರಿಯನ ಧರ್ಮ. ಕ್ಷತ್ರಿಯನಾಗಿದ್ದರೂ ಕ್ಷತ್ರಿಯನಿಗೆ ಅಸಹಜವಾದ ಭಯವಿರುವುದೇ ಅವನ ಮನುಷ್ಯತ್ವ. ಕಷ್ಟಕ್ಕೆ ಸಿಕ್ಕಿದವರನ್ನೂ, ಆಶ್ರಿತರನ್ನೂ ಪರಿತ್ಯಜಿಸುವುದೇ ಅಸತ್ಪುರುಷರ ಕಾರ್ಯಕ್ಕೆ ಅನುಗುಣವಾದ ಧರ್ಮ."

ಕ್ಷತ್ರಿಯನಾದವನು ಧನುರ್ವೇದವನ್ನು ಅಧ್ಯಯನಮಾಡಿರಬೇಕು ಮತ್ತು ಧನುರ್ವಿದ್ಯೆಯಲ್ಲಿ ಪಾರಂಗತನಾಗಿರಬೇಕು. ಅದರಿಂದಲೇ ಅವನಿಗೆ ದೇವತ್ವವುಂಟಾಗುತ್ತದೆ. ಧನುರ್ವಿದ್ಯೆಯ ಪ್ರಾವೀಣ್ಯದಿಂದ ಅನೇಕ ಶತ್ರುಗಳನ್ನು ಜಯಿಸುವುದು ಮಾತ್ರವಲ್ಲದೇ ಕ್ಷತ್ರಿಯನು ಕಾಲ-ಕಾಲಗಳಲ್ಲಿ ಯಜ್ಞ-ಯಾಗಾದಿಗಳನ್ನೂ ಮಾಡುತ್ತಿರಬೇಕು. ಕ್ಷತ್ರಿಯನಿಗೂ ಭಯಕ್ಕೂ ಬಹಳ ಅಂತರವಿರುತ್ತದೆ. ಕ್ಷತ್ರಿಯನಾದವನಿಗೆ ಭಯವೆಂಬುದೇ ಇರಬಾರದು. ಭಯವೆಂಬುದು ಕಳಂಕವಿದ್ದಂತೆ. ಆದುದರಿಂದಲೇ ಧರ್ಮಜನು ಭಯವೆಂಬುದು ಕ್ಷತ್ರಿಯನ ಮನುಷ್ಯಭಾವವೆಂದು ಹೇಳಿದ್ದಾನೆ. ಶರಣಾಗತ ರಕ್ಷಣೆಯು ಕ್ಷತ್ರಿಯನಿಗೆ ಬಹುಮುಖ್ಯವಾದ ಧರ್ಮ.

**ಕ್ಷತಾತ್ಕಿಲ ತ್ರಾಯತ ಇತ್ಯುದಗ್ರಃ**
**ಕ್ಷತ್ರಸ್ಯ ಶಬ್ದೋ ಭುವನೇಷು ರೂಢಃ ।**

ಕಷ್ಟದಿಂದ ಕಾಪಾಡುತ್ತಾನಾದ್ದರಿಂದ ಕ್ಷತ್ರಿಯಶಬ್ದವು ಪ್ರಪಂಚದಲ್ಲಿ ರೂಢಿಗೆ ಬಂದಿದೆ. ಅರ್ಥಾತ್ ಕ್ಷತ್ರಿಯಶಬ್ದಕ್ಕೆ ಸಂಕಟದಲ್ಲಿರುವವರ ಕಷ್ಟ ವನ್ನು ಪರಿಹರಿಸುವವನು–ಎಂದಾಗುತ್ತದೆ. ಹೀಗಿರುವಾಗ ಶರಣಾಗತರನ್ನೂ ಮತ್ತು ಕಷ್ಟಕ್ಕೆ ಸಿಕ್ಕಿದವರನ್ನೂ ಪರಿತ್ಯಜಿಸಿದವನು ಕ್ಷತ್ರಿಯನೆನಿಸಿಕೊಳ್ಳುವು ದಿಲ್ಲ. ಅಸತ್ಪುರುಷರಿಗೆ ಸಮಾನನೆನಿಸುತ್ತಾನೆ.

ಯಕ್ಷನ ಮುಂದಿನ ಪ್ರಶ್ನೆಗಳು ಈ ರೀತಿಯಾಗಿವೆ :

**ಕಿಮೇಕಂ ಯಜ್ಞಿಯಂ ಸಾಮ ಕಿಮೇಕಂ ಯಜ್ಞಿಯಂ ಯಜುಃ ।**
**ಕಾ ಚೈಷಾಂ ವೃಣುತೇ ಯಜ್ಞಂ ಕಾಂ ಯಜ್ಞೋ ನಾತಿವರ್ತತೇ ॥೫೬॥**

"ಯಜ್ಞದಲ್ಲಿ ಹೇಳಬೇಕಾದ ಅತಿಮುಖ್ಯವಾದ ಒಂದು ಸಾಮವು ಯಾವುದು? ಯಜ್ಞದಲ್ಲಿ ಹೇಳಬೇಕಾದ ಅತಿಮುಖ್ಯವಾದ ಒಂದು ಯಜುಸ್ಸು ಯಾವುದು? ಇವುಗಳಲ್ಲಿ ಯಾವುದು ಯಜ್ಞವನ್ನು ಆವರಿಸಿದೆ? ಯಾವುದಿಲ್ಲದಿದ್ದರೆ ಯಜ್ಞಮಾಡುವ ಸಾಧ್ಯತೆಯಿರುವುದಿಲ್ಲ?"

ಯುಧಿಷ್ಠಿರನು ಹೇಳುತ್ತಾನೆ :

**ಪ್ರಾಣೋ ವೈ ಯಜ್ಞಿಯಂ ಸಾಮ**
**ಮನೋ ವೈ ಯಜ್ಞಿಯಂ ಯಜುಃ ।**
**ಋಗೇಕಾ ವೃಣುತೇ ಯಜ್ಞಂ**
**ತಾಂ ಯಜ್ಞೋ ನಾತಿವರ್ತತೇ ॥೫೭॥**

"ಪ್ರಾಣವೇ (ಪ್ರಾಣಸಾಮವು) ಯಜ್ಞದಲ್ಲಿ ಅತಿಮುಖ್ಯವಾದ ಸಾಮವು. ಮನಸ್ಸೇ ಯಜ್ಞಕ್ಕೆ ಅತಿಮುಖ್ಯವಾದ ಯಜುಸ್ಸು. ಮುಖ್ಯವಾದ ಋಕ್ಕು ಯಜ್ಞವನ್ನು ವರಿಸುತ್ತದೆ. ಋಕ್ಕಿಲ್ಲದಿದ್ದರೆ ಯಜ್ಞಮಾಡುವ ಸಾಧ್ಯತೆಯಿಲ್ಲ."

ಇಲ್ಲಿ ಯಕ್ಷನು ಕೇಳುವುದು ತಾತ್ತ್ವಿಕವಾದ ಪ್ರಶ್ನೆ. ಏಕೆಂದರೆ : ಯಾವ ಯಜ್ಞದಲ್ಲಿಯೇ ಆಗಲಿ ಆಯಾ ಯಜ್ಞದ ಪ್ರಯೋಗಭಾಗಕ್ಕೆ ಅನುಸಾರವಾಗಿ ಅನೇಕ ಸಾಮಗಳನ್ನು ಗಾನಮಾಡುತ್ತಾರೆ. ಅಧ್ವರ್ಯುವು ಅನೇಕ ಯಜುರ್ಮಂತ್ರಗಳನ್ನೂ, ಹೋತೃವು ಅನೇಕ ಋಙ್ಮಂತ್ರಗಳನ್ನೂ ಹೇಳುತ್ತಾನೆ. ಇವುಗಳಲ್ಲಿ ಯಾವುದು ಪ್ರಧಾನ, ಯಾವುದು ಅಪ್ರಧಾನ– ಎಂಬ ವಿಷಯವೇ ಇಲ್ಲ. ಯಜ್ಞದಲ್ಲಿ ಅಧ್ವರ್ಯುವು ಪ್ರಯೋಗ ಭಾಗಗಳನ್ನು ಹೇಳುವವನು ಮತ್ತು ಯಜ್ಞಕ್ಕೆ ಸಂಬಂಧಿಸಿದ ಸಕಲಕರ್ಮಗಳ ನಿರ್ದೇಶಕನು. ಹೋತೃವು ಆಯಾ ದೇವತಾತ್ಮಕವಾದ ಋಙ್ಮಂತ್ರಗಳನ್ನು ಹೇಳಿ ದೇವತೆಗಳನ್ನು ಆಹ್ವಾನಿಸುವವನು. ಉದ್ಗಾತೃವು ಋಙ್ಮಂತ್ರಗಳಿಗೆ ಸಾಮಗಾನಮಾಡುವವನು. ಯಕ್ಷನು ತನ್ನ ಪ್ರಶ್ನೆಯಲ್ಲಿ

ಮುಖ್ಯವಾದ ಸಾಮವು ಯಾವುದು ಎಂದು ಕೇಳಿರುವುದರಿಂದ ಈ ಪ್ರಶ್ನೆಯು ಭೌತಿಕಯಜ್ಞಕ್ಕೆ ಸಂಬಂಧಿಸಿದುದಲ್ಲ. ಇದು ಕೇವಲ ಆತ್ಮಯಜ್ಞಕ್ಕೆ ಸಂಬಂಧಿಸಿದುದು. ಅದಕ್ಕೆ ಅನುಸಾರವಾಗಿಯೇ ಯುಧಿಷ್ಠಿರನು ಉತ್ತರ ಹೇಳುತ್ತಾನೆ.

ಆತ್ಮಯಜ್ಞಕ್ಕೆ ಮುಖ್ಯವಾದ ಸಾಮವು ಪ್ರಾಣ. ಮುಖ್ಯವಾದ ಯಜುಸ್ಸೆಂದರೆ ಮನಸ್ಸು. ಋಕ್ಕು ಅಥವಾ ವಾಕ್ಕು–ಆತ್ಮಯಜ್ಞದ ಮುಖ್ಯವಾದ ಅಂಗವಾಗಿರುತ್ತದೆ. ಈ ವಾಕ್ಕನ್ನು ಅಥವಾ ಋಕ್ಕನ್ನು ಬಿಟ್ಟು ಯಜ್ಞಮಾಡುವ ಸಾಧ್ಯತೆಯಿಲ್ಲ. ಇಲ್ಲಿ ಋಕ್ಕು ಎಂದರೆ ಉಪನಿಷನ್ಮಂತ್ರಗಳು.

ಪ್ರಾಣ ಮತ್ತು ಮನಸ್ಸುಗಳು ಆತ್ಮಯಜ್ಞಕ್ಕೆ ಪ್ರಧಾನವಾದ ಸಾಧನ ವಸ್ತುಗಳು. ಪ್ರಾಣ ಮತ್ತು ಮನಃಸ್ಥಿರತೆ (ಮನಸ್ಸಿನ ಏಕಾಗ್ರತೆ) ಇವು ಗಳಿರಬೇಕು. ಪ್ರಾಣಾಯಾಮ-ಪ್ರತ್ಯಾಹಾರಗಳಾದ ನಂತರ ಧ್ಯಾನಮಾಡುವ ವಸ್ತುವು ಯಾವುದೆಂಬುದನ್ನು ನಿರ್ದೇಶಿಸುವುದೇ ಉಪನಿಷನ್ಮಂತ್ರಗಳು. **ಅಹಂ ಬ್ರಹ್ಮಾಸ್ಮಿ। ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ। ತತ್ತ್ವಮಸಿ।** ಇತ್ಯಾದಿಗಳು. ಏಕಾಗ್ರತೆ ಮತ್ತು ಪ್ರಾಣಾಯಾಮ ಇವುಗಳಿದ್ದರೂ ಉಪನಿಷದ್ವಾಕ್ಯಗಳಿಲ್ಲದಿದ್ದರೆ ಮನಸ್ಸಿಗೆ ಸರಿಯಾದ ನೆಲೆಯು ಸಿಕ್ಕಲಾರದು. ಆದುದರಿಂದ ಜ್ಞಾನಯಜ್ಞದಲ್ಲಿ ಉಪನಿಷದ್ವಾಕ್ಯಗಳೇ ಬಹುಮುಖ್ಯವಾದುವುಗಳು.

ಯುಧಿಷ್ಠಿರನ ಉತ್ತರಕ್ಕೆ ಅನುಗುಣವಾಗಿ ಬೃಹದಾರಣ್ಯಕದಲ್ಲಿ ಹೀಗೆ ಹೇಳಿದೆ :

**ತ್ರಯೋ ವೇದಾ ಏತ ಏವ ವಾಗೇವರ್ಗ್ವೇದೋ ಮನೋ ಯಜುರ್ವೇದಃ ಪ್ರಾಣಃ ಸಾಮವೇದಃ।**

ಯಜ್ಞಕ್ಕೂ ಮತ್ತು ಋಕ್ಕಿಗೂ ಇರುವ ಸಂಬಂಧವೆಂದರೆ ಪತಿ-ಪತ್ನಿಯರ ಸಂಬಂಧ. ಈ ಸಂಬಂಧವು ಭೌತಿಕಯಜ್ಞದಲ್ಲಾಗಲೀ–ಆತ್ಮಯಜ್ಞದಲ್ಲಾಗಲೀ ಒಂದೇ ಆಗಿರುವುದು.

ಯಜ್ಞವು ಪುಲ್ಲಿಂಗವಾದರೆ–ಋಕ್ ಎಂಬುದು ಸ್ತ್ರೀಲಿಂಗದಲ್ಲಿದೆ.

ಯಜ್ಞದಲ್ಲಿ ಋಙ್ಮಂತ್ರಗಳಿಲ್ಲದಿದ್ದರೆ ಅದು ಯಜ್ಞವೇ ಆಗುವುದಿಲ್ಲ. ಆತ್ಮ ಯಜ್ಞದಲ್ಲಿಯೂ ಯಜ್ಞಪುರುಷನಾದ ಪರಮಾತ್ಮನನ್ನು ನಿರ್ದೇಶಿಸಿ ಹೇಳುವ ಮಹಾವಾಕ್ಯಗಳ ಅನುಸಂಧಾನದಿಂದ ಆತ್ಮಯಜ್ಞ ಅಥವಾ ಜ್ಞಾನ ಯಜ್ಞವಾಗಬೇಕು.

ಯಜ್ಞ ಮತ್ತು ಋಕ್ಕುಗಳಿಗೆ ಪತಿ-ಪತ್ನಿಯರ ಸಂಬಂಧವಿದೆಯೆಂಬ ವಿಷಯವಾಗಿ ಶತಪಥ ಬ್ರಾಹ್ಮಣದಲ್ಲಿ ಹೀಗೆ ಹೇಳಿದೆ :

**ಯಜ್ಞಂ! ಇಯಂ ವಾವ ಯೋಷಾ । ತ್ವಂ ತು ಪುಮಾನ್ ।ತಸ್ಮಾತ್ ತಾಂ ಉಪಾಮನ್ತ್ರಸ್ವ ।**

'ಯಜ್ಞಪುರುಷನೇ! ಇವಳು (ಋಕ್ ) ಸ್ತ್ರೀಯಾಗಿದ್ದಾಳೆ. ನೀನು ಪುರುಷನಾಗಿದ್ದೀಯೆ. ಆದುದರಿಂದ ನೀನಿವಳನ್ನು ಸ್ವೀಕರಿಸು.' ಇಲ್ಲಿಯೂ ಯುಧಿಷ್ಠಿರನು–**ಋಗೇಕಾ ವೃಣುತೇ ಯಜ್ಞಂ**–ಋಕ್ ಎಂಬ ಸ್ತ್ರೀಯು ಯಜ್ಞವನ್ನು ವರಿಸುತ್ತಾಳೆ ಎಂದು ಸ್ಪಷ್ಟವಾಗಿಯೇ ಹೇಳಿದ್ದಾನೆ.

ಯಕ್ಷನು ಧರ್ಮರಾಜನ ಉತ್ತರಕ್ಕೆ ಒಪ್ಪಿಗೆಯನ್ನಿತ್ತು ಮುಂದಿನ ಪ್ರಶ್ನೆಗಳನ್ನು ಕೇಳುತ್ತಾನೆ.

**ಕಿಂಸ್ವಿದಾವಪತಾಂ ಶ್ರೇಷ್ಠಂ ಕಿಂಸ್ವಿನ್ನಿವಪತಾಂ ವರಮ್ ।**
**ಕಿಂಸ್ವಿತ್ಪ್ರತಿಷ್ಠಮಾನಾನಾಂ ಕಿಂಸ್ವಿತ್ಪ್ರಸವತಾಂ ವರಮ್ ॥೫೫॥**

"ದೇವತರ್ಪಣಗಳನ್ನು ಮಾಡುವವರಿಗೆ ಶ್ರೇಷ್ಠವಾದ ಫಲವು ಯಾವುದು? ಪಿತೃತರ್ಪಣಗಳನ್ನು ಮಾಡುವವರಿಗೆ ಉತ್ತಮಫಲವು ಯಾವುದು? ಸುಖಾಪೇಕ್ಷಿಗಳಿಗೆ ಯಾವುದು ಉತ್ತಮಫಲ? ಸಂತತಿಯನ್ನು ಇಚ್ಛಿಸುವವರಿಗೆ ಉತ್ತಮಫಲವು ಯಾವುದು?"

ಇದಕ್ಕೆ ಯುಧಿಷ್ಠಿರನ ಉತ್ತರ :

**ವರ್ಷಮಾವಪತಾಂ ಶ್ರೇಷ್ಠಂ ಬೀಜಂ ನಿವಪತಾಂ ವರಮ್ ।**
**ಗಾವಃ ಪ್ರತಿಷ್ಠಮಾನಾನಾಂ ಪುತ್ರಃ ಪ್ರಸವತಾಂ ವರಃ ॥೫೬॥**

"ದೇವತರ್ಪಣಮಾಡುವವರಿಗೆ ವೃಷ್ಟಿಯು ಶ್ರೇಷ್ಠವಾದ ಫಲ. ಪಿತೃ ತರ್ಪಣಮಾಡುವವರಿಗೆ ಬೀಜಬಿತ್ತುವ ಹೊಲ ಮುಂತಾದುವು ಉತ್ತಮ

ಫಲ. ಸುಖಾಪೇಕ್ಷಿಗಳಿಗೆ ಹಸುಗಳು ಉತ್ತಮಫಲ. ಸಂತತಿಯನ್ನು ಇಚ್ಛಿಸುವವರಿಗೆ ಪುತ್ರನು ಉತ್ತಮಫಲ."

ಈ ಎರಡು ಶ್ಲೋಕಗಳಿಗೂ ವ್ಯಾಖ್ಯಾನಕಾರರು ಕೊಟ್ಟಿರುವ ಅರ್ಥವನ್ನು ಇಲ್ಲಿ ಕೊಡಲಾಗಿದೆ. ಆವಪನ ಎಂಬುದಕ್ಕೆ ರೂಢವಾದ ಅರ್ಥ–ಭೂಮಿಯಲ್ಲಿ ಬೀಜವನ್ನು ಬಿತ್ತುವುದು ಎಂದಾಗುತ್ತದೆ. ಆದರೆ ವ್ಯಾಖ್ಯಾನಕಾರರು ಇಲ್ಲಿ **ಆಸಮನ್ತಾತ್ ದೇವಾಂಸ್ತರ್ಪಯತಾಂ**–ಸಕಲ ಸಂಪೂರ್ಣತೆಯಿಂದ ದೇವತೆಗಳನ್ನು ಪೂಜಿಸುವವರಿಗೆ **ವರ್ಷಂ**–ಮಳೆಯು **ಶ್ರೇಷ್ಠಂ**–ಶ್ರೇಷ್ಠವಾದ ಫಲವಾಗಿರುತ್ತದೆ. ದೇವತೆಗಳ ತರ್ಪಣವೆಂದರೆ ಯಜ್ಞ-ಯಾಗಾದಿಗಳಿಂದ ದೇವತೆಗಳನ್ನು ತೃಪ್ತಿಪಡಿಸುವುದು–ಹೀಗೆ ಮಾಡುವುದರಿಂದ ಮಳೆಯು ಬರುತ್ತದೆಂಬುದಕ್ಕೆ ಶಾಸ್ತ್ರಾಧಾರವಿದೆ.

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ಆದಿತ್ಯಾಜ್ಜಾಯತೇ ವೃಷ್ಟಿಃ।** ಅಗ್ನಿಯಲ್ಲಿ ಮಾಡಿದ ಹೋಮವು ಆದಿತ್ಯನನ್ನು ಹೋಗಿ ಸೇರುತ್ತದೆ. ಅದರ ಫಲವಾಗಿ ಸೂರ್ಯನಿಂದ ಮಳೆಯು ಉತ್ಪನ್ನವಾಗುತ್ತದೆ.

ನಿವಪನ–ಎಂಬುದಕ್ಕೆ ಬಿತ್ತುವುದು ಎಂಬುದು ರೂಢಾರ್ಥವಾಗಿದೆ. ಆದರೆ ಪಿತೃತರ್ಪಣ ಎಂಬ ಅರ್ಥವೂ ನಿವಪನಶಬ್ದಕ್ಕಿದೆ. ಬೀಜಂ ಎಂಬುದಕ್ಕೆ **ಕ್ಷೇತ್ರಾರಾಮಾದ್ಯಾತ್ಮೋಪಕಾರಕಂ ಫಲಂ** = ಹೊಲ, ಕೈತೋಟ ಇವೇ ಮುಂತಾದ ಆತ್ಮೋಪಕಾರಕವಾದ ಫಲ–ಎಂದು ವ್ಯಾಖ್ಯಾನಕಾರರು ವ್ಯಾಖ್ಯಾನಮಾಡಿರುತ್ತಾರೆ. ಆದರೆ ಈ ಅರ್ಥವು ರೂಢಿಯಲ್ಲಿಲ್ಲ. ಫಲವೆಂದು ಪರ್ಯಾಯಾಂತರವಾಗಿ ಅರ್ಥಮಾಡಬಹುದಾಗಿದೆ. ಆದುದರಿಂದ ಈ ಎರಡು ಶ್ಲೋಕಗಳಿಗೂ ಸ್ವಾಭಾವಿಕವಾಗಿ ತೋರುವ ಅರ್ಥವನ್ನು ಹೀಗೆ ಮಾಡಬಹುದಾಗಿದೆ. ಈ ಅರ್ಥದಲ್ಲಿ ಆವಾಪ-ನಿವಾಪಗಳೆರಡೂ ಸಮಾನಾರ್ಥಕಗಳಾಗುತ್ತವೆ.

**ಕಿಂಸ್ವಿದಾವಪತಾಂ ಶ್ರೇಷ್ಠಂ** = ಭೂಮಿಯಲ್ಲಿ ಬಿತ್ತುವವರಿಗೆ ಶ್ರೇಷ್ಠವಾದುದು ಯಾವುದು? **ವರ್ಷಮಾವಪತಾಂ ಶ್ರೇಷ್ಠಂ** = ಭೂಮಿಯಲ್ಲಿ ಬಿತ್ತುವವರಿಗೆ ಮಳೆಯೇ ಶ್ರೇಷ್ಠವಾದುದು. **ಕಿಂಸ್ವಿನ್ನಿವಪತಾಂ ವರಂ** =

ಬಿತ್ತನೆ (ಬೀಜ) ಬಿತ್ತುವವರಿಗೆ ಶ್ರೇಷ್ಠವಾದುದು ಯಾವುದು? **ಬೀಜಂ ನಿವಪತಾಂ ವರಂ** = ಬಿತ್ತನೆಯನ್ನು ಬಿತ್ತುವವರಿಗೆ ಉತ್ತಮವಾದ ಬೀಜವೇ ಶ್ರೇಷ್ಠವಾದುದು. (ಉತ್ತಮವಾದ ಬೀಜವೇ ಇಲ್ಲದಿದ್ದರೆ ಎಷ್ಟೇ ಚೆನ್ನಾಗಿ ವ್ಯವಸಾಯಮಾಡಿದರೂ ಕಾಲ-ಕಾಲಕ್ಕೆ ಮಳೆಬಂದರೂ, ಬೇಕಾದಷ್ಟು ಗೊಬ್ಬರಹಾಕಿದರೂ ಪ್ರಯೋಜನವಿಲ್ಲ.) **ಕಿಂಸ್ವಿತ್ಪ್ರತಿಷ್ಠಮಾನಾನಾಂ** = ಸುಖವನ್ನು ಅಪೇಕ್ಷಿಸುವವರಿಗೆ ಶ್ರೇಷ್ಠವಾದುದು ಯಾವುದು? **ಗಾವಃ ಪ್ರತಿಷ್ಠಮಾನಾನಾಂ** = ಸುಖಾಪೇಕ್ಷಿಗಳಿಗೆ ಹಸುಗಳು ಶ್ರೇಷ್ಠವಾದುವುಗಳು. (ಹಳ್ಳಿಗಳಲ್ಲಿ ಪ್ರತಿಯೊಂದು ಮನೆಯಲ್ಲಿಯೂ ಸಾಮಾನ್ಯವಾಗಿ ಹಸುಗಳನ್ನು ಸಾಕುತ್ತಾರೆ. ಹಾಲನ್ನು ಮಾರುವುದಕ್ಕಾಗಿ ಅವುಗಳನ್ನು ಸಾಕುವುದಿಲ್ಲ. ಸ್ವಶರೀರಪೋಷಣೆಗಾಗಿಯೇ ಅವುಗಳನ್ನು ಸಾಕುತ್ತಾರೆ. ಹಸುವಿನ ಹಾಲು, ಮೊಸರು, ತುಪ್ಪ–ಇವುಗಳು ಶರೀರಪೋಷಣೆಗೆ ಅತ್ಯುತ್ತಮವಾದ ಆಹಾರ. ಮೇಲಾಗಿ ಸಗಣಿಯನ್ನು ಗೊಬ್ಬರವಾಗಿ ಉಪಯೋಗಿಸಿದರೆ ಭೂಮಿಯಲ್ಲಿ ಸಾರವು ಹೆಚ್ಚುಕಾಲ ಉಳಿಯುವುದೆಂಬುದು ವೈಜ್ಞಾನಿಕರ ಅಭಿಮತವಾಗಿದೆ. ಆದುದರಿಂದ ಆರೋಗ್ಯವನ್ನು ಅಪೇಕ್ಷಿಸುವವರಿಗೆ ಶರೀರಪೋಷಣೆಗೆ ಹಸುಗಳು ಶ್ರೇಷ್ಠವೆಂಬುದು ಸರ್ವಸಮಂಜಸವಾಗಿಯೇ ಇದೆ.)

**ಕಿಂಸ್ವಿತ್ ಪ್ರಸವತಾಂ ವರಂ? ಪುತ್ರಃ ಪ್ರಸವತಾಂ ವರಂ**

ಸಂತತಿಯನ್ನು ಅಪೇಕ್ಷಿಸುವವರಿಗೆ ಪುತ್ರನೇ (ಗಂಡುಶಿಶುವಿನ ಜನನವು) ಶ್ರೇಷ್ಠವೆಂಬ ಭಾವನೆಯು ಎಲ್ಲರಲ್ಲಿಯೂ ಇರುತ್ತದೆ.

ಯಕ್ಷನು ಪುನಃ ಪ್ರಶ್ನಿಸುತ್ತಾನೆ :

**ಇನ್ದ್ರಿಯಾರ್ಥಾನನುಭವನ್ಬುದ್ಧಿಮಾಲ್ಲೋಕಪೂಜಿತಃ ।**
**ಸಮ್ಮತಃ ಸರ್ವಭೂತಾನಾಮುಚ್ಛ್ವಸನ್ಕೋ ನ ಜೀವತಿ ॥೫೭॥**

"ಇಂದ್ರಿಯಭೋಗಗಳನ್ನು ಅನುಭವಿಸುತ್ತಾ ಬುದ್ಧಿವಂತನೂ, ಲೋಕಪೂಜ್ಯನೂ, ಸರ್ವಸಮ್ಮತನೂ ಆಗಿರುವ ಯಾವ ಪುರುಷನು ಉಸಿರಾಡುತ್ತಿದ್ದರೂ ಜೀವಿಸುವುದಿಲ್ಲ?"

ಯುಧಿಷ್ಠಿರನು ಉತ್ತರಿಸುತ್ತಾನೆ :

**ದೇವತಾತಿಥಿಭೃತ್ಯಾನಾಂ ಪಿತೄಣಾಮಾತ್ಮನಶ್ಚ ಯಃ ।**
**ನ ನಿರ್ವಪತಿ ಪಞ್ಚಾನಾಮುಚ್ಛ್ವಸನ್ನ ಸ ಜೀವತಿ ॥೫೮॥**

"ದೇವತೆಗಳು, ಅತಿಥಿ, ಸೇವಕ, ಪಿತೃಗಳು, ಆತ್ಮಾ–ಈ ಐವರಿಗೆ ತೃಪ್ತಿಯನ್ನುಂಟುಮಾಡದಿರುವ ಪುರುಷನು ಉಸಿರಾಡುತ್ತಿದ್ದರೂ ಜೀವಿಸಿರುವುದಿಲ್ಲ."

ಯಕ್ಷನ ಪ್ರಶ್ನೆಯನ್ನು ಕೇಳಿದೊಡನೆಯೇ ಅವನ ಮನಸ್ಸಿನ ಇಂಗಿತವೇನೆಂಬುದು ಅರ್ಥವಾಗುವುದಿಲ್ಲ. ಅವನು ಉಪಯೋಗಿಸಿರುವ ವಿಶೇಷಣಗಳನ್ನು ನೋಡಿದರೆ ಅಂತಹವನೇ ಲೋಕದಲ್ಲಿ ಜೀವಿಸಲು ಅರ್ಹನೆಂದು ಭಾಸವಾಗುತ್ತದೆ. ಅದರಲ್ಲಿಯೂ ಈಗಿನ ಕಾಲದಲ್ಲಿ ಸುಖೋಪಭೋಗಗಳನ್ನು ಅನುಭವಿಸುತ್ತಾ, ಬುದ್ಧಿವಂತನೆನಿಸಿ, ಸಕಲರಿಂದಲೂ ಸನ್ಮಾನಿತನಾಗಿ ಸರ್ವಪ್ರಾಣಿಗಳಿಗೂ ಪ್ರಿಯನಾಗಿರತಕ್ಕವನು ಮಹಾಕೀರ್ತಿವಂತನಾಗುತ್ತಾನೆ. ಆದರೆ ಯಕ್ಷನು–'ಇಂತಹವನು ಬದುಕಿದ್ದೂ ಸತ್ತವನಂತಾಗುತ್ತಾನೆ. ಹೇಗೆ?'–ಎಂದು ಪ್ರಶ್ನಿಸುತ್ತಾನೆ. ಅವನ ಮನಸ್ಸಿನ ಇಂಗಿತವನ್ನರಿಯುವುದು ನಿಜವಾಗಿಯೂ ಶ್ರಮಸಾಧ್ಯವೇ ಸರಿ. ಆದರೆ ಮಹಾಮೇಧಾವಿಯಾದ ಯುಧಿಷ್ಠಿರನು ಒಡನೆಯೇ ಉತ್ತರಿಸುತ್ತಾನೆ. ಒಬ್ಬ ಮನುಷ್ಯನು ಅದೃಷ್ಟವಶಾತ್ ಐಶ್ವರ್ಯವಂತನಾಗಬಹುದು. ಸುಖೋಪಭೋಗಗಳನ್ನೂ ಅನುಭವಿಸಬಹುದು. ಬುದ್ಧಿವಂತನೂ ಆಗಿರಬಹುದು. ಅವನು ಬುದ್ಧಿವಂತನಾಗಿರುವುದರಿಂದ ಮತ್ತು ಅವನಲ್ಲಿರುವ ಐಶ್ವರ್ಯದ ಕಾರಣದಿಂದ ಲೋಕಪೂಜಿತನೂ ಆಗಬಹುದು. ತನ್ನಲ್ಲಿರುವ ಅಪಾರವಾದ ಐಶ್ವರ್ಯದಲ್ಲಿ ಯತ್ಕಿಂಚಿತ್ತನ್ನು ದಾನಮಾಡಿ ಸರ್ವಜನಪ್ರಿಯನೂ ಆಗಬಹುದು. ಆದರೂ ಅವನು–ದೇವತೆ, ಅತಿಥಿ, ಭೃತ್ಯ, ಪಿತೃ ಮತ್ತು ಆತ್ಮಾ–ಈ ಐವರಿಗೆ ಆಯಾ ಕಾಲಗಳಲ್ಲಿ ಸಲ್ಲಿಸಬೇಕಾದುದನ್ನು ಸಲ್ಲಿಸದಿದ್ದರೆ ಅವನು ಬದುಕಿದ್ದರೂ ಸತ್ತಂತೆಯೇ ಸರಿ. ಅವನ ಐಶ್ವರ್ಯ ಮತ್ತು ಕೀರ್ತಿಗಳು ನಿಷ್ಪ್ರಯೋಜಕಗಳಾಗುತ್ತವೆ.

ಇಲ್ಲಿ ಪಂಚಮಹಾಯಜ್ಞಗಳ ವಿಷಯವಾಗಿ ಹೇಳಿದೆಯೆಂದು ವ್ಯಾಖ್ಯಾನಮಾಡಬಹುದಾಗಿದೆ.

ದೇವಯಜ್ಞ, ಅತಿಥಿಯಜ್ಞ (ಮನುಷ್ಯಯಜ್ಞ), ಭೃತ್ಯಯಜ್ಞ (ಭೂತಯಜ್ಞ), ಪಿತೃಯಜ್ಞ ಮತ್ತು ಆತ್ಮಯಜ್ಞ (ಬ್ರಹ್ಮಯಜ್ಞ) ಈ ಐದು ಅನುದಿನವೂ ಮಾಡಬೇಕಾದ ಪಂಚಮಹಾಯಜ್ಞಗಳು. ಇಲ್ಲಿ ಯಜ್ಞವು ಪೂಜೆ ಎಂಬ ಅರ್ಥದಲ್ಲಿದೆ. ಯಜ-ಪೂಜಾಯಾಂ. (೧) ದೇವತೆಗಳ ಪೂಜೆ, (೨) ಅತಿಥಿಸತ್ಕಾರ, (೩) ಭೂತಬಲಿ ಅಥವಾ ಸೇವಕರ ಪೋಷಣೆ, (೪) ಪಿತೃತರ್ಪಣ, (೫) ವೇದಾಧ್ಯಯನ, ವೇದಾಂತಶ್ರವಣ, ಮನನ, ನಿದಿಧ್ಯಾಸನಗಳಿಂದ ಆತ್ಮನಿಗೆ ತೃಪ್ತಿಯನ್ನುಂಟುಮಾಡುವುದು-ಇವುಗಳೇ ಪಂಚಮಹಾಯಜ್ಞಗಳು. ಈ ಮಹಾಯಜ್ಞಗಳನ್ನು ಅನುದಿನವೂ ಮಾಡಬೇಕು.

ಪಂಚಮಹಾಯಜ್ಞಗಳ ವಿಷಯವಾಗಿ ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ :

**ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಮ್ ।**
**ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಮ್ ॥**

ವೇದವನ್ನು ಹೇಳಿಕೊಡುವುದು ಬ್ರಹ್ಮಯಜ್ಞ. ತರ್ಪಣಬಿಡುವುದು ಪಿತೃಯಜ್ಞ. ಅಗ್ನಿಯಲ್ಲಿ ಮಂತ್ರಪೂರ್ವಕವಾಗಿ ಹೋಮಮಾಡುವುದು ದೇವಯಜ್ಞವೆನಿಸಿಕೊಳ್ಳುತ್ತದೆ. ವೈಶ್ವದೇವ ಮಾಡುವುದು ಭೂತಯಜ್ಞ ವೆನಿಸಿಕೊಳ್ಳುತ್ತದೆ. ಭೃತ್ಯನೇ ಮೊದಲಾದ ಸರ್ವರಿಗೂ ಯಥಾಶಕ್ತಿ ಭೋಜನಮಾಡಿಸಿ ತೃಪ್ತಿಗೊಳಿಸಬೇಕೆಂದು ವೈಶ್ವದೇವದಲ್ಲಿಯೇ ಹೇಳಿದೆ. ಇದಕ್ಕೆ ಭೂತತೃಪ್ತಿ ಎನ್ನುತ್ತಾರೆ. ಅತಿಥಿಗಳನ್ನು ತೃಪ್ತಿಪಡಿಸುವುದು ಮನುಷ್ಯಯಜ್ಞವೆನಿಸಿಕೊಳ್ಳುತ್ತದೆ.

ಪಂಚಮಹಾಯಜ್ಞಗಳ ಫಲ ಪಂಚಮಹಾಪಾಪಗಳ ನಿವೃತ್ತಿ.

**ಪಞ್ಚೈತಾನ್ಯೋ ಮಹಾಯಜ್ಞಾನ್ನ ಹಾಪಯತಿ ಶಕ್ತಿತಃ ।**
**ಸ ಗೃಹೇಽಪಿ ವಸನ್ನಿತ್ಯಂ ಸೂನಾದೋಷೈರ್ನ ಲಿಪ್ಯತೇ ॥**

ಈ ಪಂಚಮಹಾಯಜ್ಞಗಳನ್ನು ಯಾವಾಗಲೂ ಬಿಡದೇ ಅನುದಿನವೂ ಮಾಡುವ ಗೃಹಸ್ಥನು ಯಾವ ತೀರ್ಥಯಾತ್ರಾದಿಗಳನ್ನೂ ಮಾಡದೇ ಸ್ವಗೃಹ

ದಲ್ಲಿಯೇ ಇದ್ದರೂ ಸೂನಾದೋಷೈಃ ಎಂದರೆ ಪಂಚಮಹಾಪಾತಕಗಳಿಂದ ವಿಮುಕ್ತನಾಗುತ್ತಾನೆ.

ಮನುಸ್ಮೃತಿಯಲ್ಲಿ ಬರುವ ಈ ಮುಂದಿನ ಶ್ಲೋಕವೇ ಧರ್ಮರಾಜನಿಲ್ಲಿ ಕೊಡುವ ಉತ್ತರವೂ ಆಗಿರುವುದೆಂಬುದನ್ನು ಗಮನಿಸಬೇಕಾಗಿದೆ.

**ದೇವತಾತಿಥಿಭೃತ್ಯಾನಾಂ ಪಿತೄಣಾಮಾತ್ಮನಶ್ಚ ಯಃ ।**
**ನ ನಿರ್ವಪತಿ ಪಞ್ಚಾನಾಮುಚ್ಛ್ವಸನ್ನ ಸ ಜೀವತಿ ॥**

ತೈತ್ತಿರೀಯಾರಣ್ಯಕದಲ್ಲಿ ಪಂಚಮಹಾಯಜ್ಞಗಳ ವಿಷಯವಾಗಿ ವಿವರಣೆಯು ಹೀಗಿದೆ :

**ಪಞ್ಚವಾ ಏತೇ ಮಹಾಯಜ್ಞಾಸ್ಸತತಿ ಪ್ರತಾಯನ್ತೇ ಸತತಿ ಸಂತಿಷ್ಠನ್ತೇ ದೇವಯಜ್ಞಃ ಪಿತೃಯಜ್ಞೋ ಭೂತಯಜ್ಞೋ ಮನುಷ್ಯಯಜ್ಞೋ ಬ್ರಹ್ಮಯಜ್ಞ ಇತಿ ಯದಗ್ನೌ ಜುಹೋತ್ಯಪಿ ಸಮಿಧಂ ತದ್ದೇವಯಜ್ಞಃ ಸಂತಿಷ್ಠತೇ ಯತ್ಪಿತೃಭ್ಯಸ್ಸ್ವಧಾ-ಕರೋತ್ಯಪ್ಯಪಸ್ತತ್ಪಿತೃಯಜ್ಞಸ್ಸಂತಿಷ್ಠತೇ ಯದ್ಭೂತೇಭ್ಯೋ ಬಲಿಗ್ಂ ಹರತಿ ತದ್ಭೂತಯಜ್ಞಃ ಸಂತಿಷ್ಠತೇ ಯದ್ಬ್ರಾಹ್ಮಣೇಭ್ಯೋಽನ್ನಂ ದದಾತಿ ತನ್ಮಾನುಷ್ಯಯಜ್ಞಃ ಸನ್ತಿಷ್ಠತೇ ಯತ್ಸ್ವಾಧ್ಯಾಯಮಧೀಯೀತೈ ಕಾಮಪ್ಯೃಚಂ ಯಜುಸ್ಸಾಮ ವಾ ತದ್ಬ್ರಹ್ಮಯಜ್ಞಃ ಸಂತಿಷ್ಠತೇ ।**

ಆಯಾ ದೇವತಾತ್ಮಕವಾದ ಮಂತ್ರವನ್ನು ಹೇಳಿ ಹೋಮದ್ರವ್ಯ ಗಳನ್ನೂ ಸಮಿತ್ತನ್ನೂ ಅಗ್ನಿಯಲ್ಲಿ ಹೋಮಮಾಡುವುದಕ್ಕೆ ದೇವಯಜ್ಞ ವೆಂದು ಹೆಸರು. ಪಿತೃದೇವತೆಗಳನ್ನು ಉದ್ದೇಶಿಸಿ ಆಯಾ ಶ್ರಾದ್ಧಮಾಡುವು ದಕ್ಕೂ ನೀರಿನಿಂದ ತರ್ಪಣಬಿಡುವುದಕ್ಕೂ ಪಿತೃಯಜ್ಞವೆಂದು ಹೆಸರು. ಭೂತಾದಿಗಳಿಗೆ ಬಲಿಯನ್ನು ಕೊಡುವುದಕ್ಕೆ ಭೂತಯಜ್ಞವೆಂದು ಹೆಸರು. ಬ್ರಾಹ್ಮಣರಿಗೆ ಅನ್ನದಾನಮಾಡುವುದಕ್ಕೆ (ಭೋಜನಮಾಡಿಸಿ ಸಂತೃಪ್ತಿ ಪಡಿಸುವುದಕ್ಕೆ) ಮನುಷ್ಯಯಜ್ಞವೆಂದು ಹೆಸರು. ಒಂದೇ ಒಂದು ಋಕ್ಕನ್ನಾಗಲೀ, ಯಜುಸ್ಸನ್ನಾಗಲೀ, ಸಾಮವನ್ನಾಗಲೀ ಅನುದಿನವೂ ಅಧ್ಯಯನಮಾಡುವುದಕ್ಕೆ ಬ್ರಹ್ಮಯಜ್ಞವೆಂದು ಹೆಸರು.

ಯಕ್ಷನ ಮುಂದಿನ ಪ್ರಶ್ನೆಗಳು :

**ಕಿಂಸ್ವಿದ್ಗುರುತರಂ ಭೂಮೇಃ ಕಿಂಸ್ವಿದುಚ್ಚತರಂ ಚ ಖಾತ್ ।**
**ಕಿಂಸ್ವಿಚ್ಛೀಘ್ರತರಂ ವಾಯೋಃ ಕಿಂಸ್ವಿದ್ಬಹುತರಂ ತೃಣಾತ್ ॥೫೯॥**

“ಭೂಮಿಗಿಂತಲೂ ದೊಡ್ಡದು (ಭಾರವಾದುದು) ಯಾವುದು? ಆಕಾಶಕ್ಕಿಂತಲೂ ಎತ್ತರವಾದುದು ಯಾವುದು? ಗಾಳಿಗಿಂತಲೂ ಶೀಘ್ರ ಗಾಮಿಯು ಯಾವುದು? ಹುಲ್ಲಿಗಿಂತಲೂ ಹೆಚ್ಚಾಗಿ ಬೆಳೆಯತಕ್ಕ ವಸ್ತುವು ಯಾವುದು?”

ಅದಕ್ಕೆ ಯುಧಿಷ್ಠಿರನ ಉತ್ತರ :

**ಮಾತಾ ಗುರುತರಾ ಭೂಮೇಃ ಖಾತ್ಪಿತೋಚ್ಚತರಸ್ತಥಾ ।**
**ಮನಃ ಶೀಘ್ರತರಂ ವಾತಾಚ್ಚಿನ್ತಾ ಬಹುತರೀ ತೃಣಾತ್ ॥೬೦॥**

“ಭೂಮಿಗಿಂತಲೂ ತಾಯಿಯು ದೊಡ್ಡವಳು. ಆಕಾಶಕ್ಕಿಂತಲೂ ತಂದೆಯು ಶ್ರೇಷ್ಠನಾದವನು (ಎತ್ತರವಾದವನು). ಗಾಳಿಗಿಂತಲೂ ಮನಸ್ಸು ಶೀಘ್ರಗಾಮೀ. ಚಿಂತೆಯು ಹುಲ್ಲಿಗಿಂತಲೂ ಅಧಿಕವಾಗಿ ಬೆಳೆಯತಕ್ಕ ವಸ್ತು.”

ಭೂದೇವಿಯನ್ನು ತಾಯಿಯೆಂದೂ ಕರೆಯುತ್ತಾರೆ. ಆದರೆ ಭೂಮಾತೆ ಗಿಂತಲೂ ದೊಡ್ಡವಳು ಹೆತ್ತತಾಯಿ. ತಾಯಿಗಿಂತಲೂ ದೊಡ್ಡದು ಯಾವುದೂ ಇಲ್ಲ. ಆದುದರಿಂದಲೇ ಉಪನಿಷತ್ತಿನಲ್ಲಿ ಮೊದಲನೆಯದಾಗಿ “**ಮಾತೃದೇವೋ ಭವ**” ಎಂಬ ಉಪದೇಶವಾಕ್ಯವಿದೆ. ಆಕಾಶವು ಬಹಳ ಎತ್ತರದಲ್ಲಿದೆ. ಅದಕ್ಕಿಂತಲೂ ಉಚ್ಚನಾದವನು (ಶ್ರೇಷ್ಠನಾದವನು) ಯಾರು ಎಂಬುದಕ್ಕೆ ಧರ್ಮಜನ ಉತ್ತರ–ತಂದೆ. ಮಾನವಸಾಮಾನ್ಯನಿಗೆ ಮಾತಾ-ಪಿತೃಗಳು ಸರ್ವಶ್ರೇಷ್ಠರು. ದೇವಸಮಾನರು. ವೇಗದಲ್ಲಿ ವಾಯುವನ್ನು ಹೆಚ್ಚಿನ ವೇಗದವನೆಂದು ಹೇಳುತ್ತಾರೆ. ಆದರೆ ವಾಯುವಿ ಗಿಂತಲೂ ಹೆಚ್ಚು ವೇಗವುಳ್ಳದ್ದು ಮನಸ್ಸು. ಮನಸ್ಸಿಗಿಂತಲೂ ಹೆಚ್ಚು ವೇಗವಿರುವ ವಸ್ತುವನ್ನು ಕಂಡುಹಿಡಿಯುವ ಸಾಧ್ಯತೆಯೇ ಇಲ್ಲ. ಏಕೆಂದರೆ : ಮನಸ್ಸು ಒಂದು ಕ್ಷಣಮಾತ್ರದಲ್ಲಿ ಪ್ರಪಂಚವೆಲ್ಲವನ್ನೂ ಸುತ್ತಿಬರಬಲ್ಲುದು. ಎಲ್ಲೆಡೆಗಳಲ್ಲಿಯೂ ಗರಿಕೆಯ ಹುಲ್ಲು ಯಥೇಚ್ಛವಾಗಿ

ಬೆಳೆದಿರುತ್ತದೆ. ಅದಕ್ಕೆ ಯಾವ ವ್ಯವಸಾಯವೂ ಬೇಕಾಗಿಲ್ಲ. ಕಿತ್ತರೂ ಬೆಳೆಯುತ್ತಲೇ ಇರುತ್ತದೆ. ಆದರೆ ಗರಿಕೆಹುಲ್ಲಿಗಿಂತಲೂ ಹುಲುಸಾಗಿ ವ್ಯವಸಾಯವೇ ಇಲ್ಲದೇ ಬೆಳೆಯುವ ವಸ್ತುವು ಯಾವುದೆಂಬುದಕ್ಕೆ ಚಿಂತೆ, ಆಲೋಚನೆ ಎಂದು ಧರ್ಮಜನು ಉತ್ತರಿಸುತ್ತಾನೆ.

ಪ್ರತಿಯೊಬ್ಬ ಮನುಷ್ಯನ ಮನಸ್ಸಿನಲ್ಲಿಯೂ ಆಲೋಚನಾತರಂಗಗಳು ಪ್ರತಿಕ್ಷಣದಲ್ಲಿಯೂ ಮೂಡಿ ಲುಪ್ತವಾಗುತ್ತಿರುತ್ತವೆ. 'ನಾನು ಯಾವ ವಿಧವಾದ ಯೋಚನೆಯನ್ನೂ ಮಾಡುವುದಿಲ್ಲ'–ಎಂಬ ಮನುಷ್ಯನು ಖಂಡಿತವಾಗಿಯೂ ಸಿಕ್ಕಲಾರನು. ಪ್ರತಿಕ್ಷಣದಲ್ಲಿಯೂ ವಿನೂತನವಾದ ಆಲೋಚನೆಗಳು ಮನುಷ್ಯನ ಮನಸ್ಸನ್ನು ಪ್ರವೇಶಿಸುತ್ತಿರುತ್ತವೆ.

ಈ ಶ್ಲೋಕಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿದ್ದಾರೆ :- ಸಾಧಕನಾದವನು ಮಾತಾ-ಪಿತೃಗಳ ಶುಶ್ರೂಷೆಮಾಡಬೇಕು. ಮನಸ್ಸನ್ನು ನಿರೋಧಿಸಬೇಕು ಮತ್ತು ಹುಲ್ಲಿನಂತೆ ಜೀವನಸಂಬಂಧವಾದ ವ್ಯರ್ಥಚಿಂತೆ ಯನ್ನು ಪರಿತ್ಯಾಗಮಾಡಬೇಕು.

ಯಕ್ಷನ ಮುಂದಿನ ಪ್ರಶ್ನೆ :

**ಕಿಂಸ್ವಿತ್ಸುಪ್ತಂ ನ ನಿಮಿಷತಿ ಕಿಂಸ್ವಿಜ್ಜಾತಂ ನ ಚೋಪತಿ ।**
**ಕಸ್ಯಸ್ವಿದ್ಧೃದಯಂ ನಾಸ್ತಿ ಕಿಂಸ್ವಿದ್ವೇಗೇನ ವರ್ಧತೇ ॥೬೧॥**

"ಯಾವುದು ನಿದ್ರಿಸುವಾಗಲೂ ಕಣ್ಣುಮುಚ್ಚುವುದಿಲ್ಲ? ಯಾವುದು ಹುಟ್ಟಿದ ಮೇಲೂ ಚಲಿಸುವುದಿಲ್ಲ? ಯಾವುದಕ್ಕೆ ಹೃದಯವಿಲ್ಲ? ಯಾವುದು ವೇಗದಿಂದ ವರ್ಧಿಸುತ್ತದೆ?"

ಇದಕ್ಕೆ ಧರ್ಮಜನ ಉತ್ತರ :

**ಮತ್ಸ್ಯಃ ಸುಪ್ತೋ ನ ನಿಮಿಷತ್ಯಣ್ಡಂ ಜಾತಂ ನ ಚೋಪತಿ ।**
**ಅಶ್ಮನೋ ಹೃದಯಂ ನಾಸ್ತಿ ನದೀ ವೇಗೇನ ವರ್ಧತೇ ॥೬೨॥**

"ಮೀನು ನಿದ್ರಿಸುವಾಗ ಕಣ್ಣುಮುಚ್ಚುವುದಿಲ್ಲ. ಮೊಟ್ಟೆಯು ಹುಟ್ಟಿದ ಮೇಲೂ ಚಲಿಸುವುದಿಲ್ಲ. ಕಲ್ಲಿಗೆ ಹೃದಯವಿಲ್ಲ. ನದಿಯು ವೇಗದಿಂದ ವರ್ಧಿಸುತ್ತದೆ."

ಯುಧಿಷ್ಠಿರನು ಕೊಟ್ಟಿರುವ ಈ ನಾಲ್ಕು ಉತ್ತರಗಳೂ ಸಮಂಜಸ

ವಾಗಿಯೇ ಇವೆ. ಈ ಶ್ಲೋಕವನ್ನು ವೇದಾಂತಪರವಾಗಿಯೂ ಅರ್ಥಮಾಡ ಬಹುದಾಗಿದೆ. ಮತ್ಸ್ಯ–ಎಂದರೆ ಜೀವ. ಬೃಹದಾರಣ್ಯಕೋಪನಿಷತ್ತಿನಲ್ಲಿ ಜೀವನನ್ನು ಮಹಾಮತ್ಸ್ಯಕ್ಕೆ ಹೋಲಿಸಿದ್ದಾರೆ.

**ತದ್ಯಥಾ ಮಹಾಮತ್ಸ್ಯ ಉಭೇ ಕೂಲೇಽನುಸಂಚರತಿ ಪೂರ್ವಂ ಚಾಪರಂ ಚ । ಏವಮೇವಾಯಂ ಪುರುಷ ಏತಾವುಭಾವನ್ತಾವನುಸಂಚರತಿ ಸ್ವಪ್ನಾನ್ತಂ ಚ ಬುದ್ಧಾನ್ತಂ ಚ ॥**

ಯಾವ ರೀತಿಯಲ್ಲಿ ಮಹಾಮತ್ಸ್ಯವು ನದಿಯ ಎರಡು ಪಾರ್ಶ್ವ ಗಳಲ್ಲಿಯೂ ಸಂಚರಿಸುವುದೋ–ಅದೇ ರೀತಿಯಲ್ಲಿಯೇ ಪುರುಷನೂ ಜಾಗ್ರತ್ತಿನಿಂದ ಸ್ವಪ್ನಕ್ಕೂ, ಸ್ವಪ್ನದಿಂದ ಜಾಗ್ರತ್ತಿಗೂ ಸಂಚರಿಸುತ್ತಲೇ ಇರುತ್ತಾನೆ. ನಿದ್ರೆಯಲ್ಲಿ ಮನಸ್ಸು ಲೀನವಾದರೂ ಜೀವನು ಎಚ್ಚರವಾಗಿಯೇ ಇರುತ್ತಾನೆ. ಜೀವನು ಯಾವಾಗಲೂ ಅಚಲ. ಆದರೆ ಅವನು ಶರೀರವೆಂಬ ಅಂಗಿಯಲ್ಲಿ ಸೇರಿಕೊಂಡಿರುವುದರಿಂದ ಜೀವನು ಚಲಿಸುವನೆಂಬ ಭ್ರಾಂತಿಯನ್ನುಂಟು ಮಾಡುತ್ತಾನೆ. ಅಥವಾ ಬ್ರಹ್ಮಾಂಡವು ಜಡವಾದ್ದರಿಂದ ಚಲಿಸಲಾರದು. ಅದು ಅಚೇತನ. ಕಲ್ಲಿಗೆ ಹೃದಯವಿಲ್ಲವೆಂಬುದು ನಿಜ. ಆದರೆ ಇಲ್ಲಿ ಅಶ್ಮ ಶಬ್ದಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿದ್ದಾರೆ. ಶ್ಮ–ಎಂದರೆ ಜೀರ್ಣವಾಗಿ ಹೋಗುವ ಶರೀರ. ಇಂತಹ ಶರೀರವನ್ನು ಹೊಂದಿರದವನು ಅಶ್ಮ. ಎಂದರೆ ಜ್ಞಾನಿಯಾದವನಿಗೆ ಶರೀರದ ಮೇಲಿನ ಅಭಿಮಾನವು ಸ್ವಲ್ಪವಾದರೂ ಇರುವುದಿಲ್ಲ. ಈ ಕಾರಣದಿಂದಲೇ ಅವನಿಗೆ ಹೃದಯವಿಲ್ಲ. ಹೃದಯವೇ ಇಲ್ಲದ ಕಾರಣದಿಂದ ದುಃಖ-ಸುಖಗಳ ಪರಿವೆಯೂ ಇರುವುದಿಲ್ಲ. ನದಿಯು ವೇಗದಿಂದ (ಪ್ರವಾಹದಿಂದ) ವರ್ಧಿಸುತ್ತದೆ. ಇದು ಸಾಮಾನ್ಯವಾದ ಅರ್ಥ. ಚಿತ್ತನದಿಯು ಇಂದ್ರಿಯ ವಿಷಯಗಳಲ್ಲಿ ವೇಗದಿಂದ ಹರಿದಷ್ಟೂ ವೃದ್ಧಿಹೊಂದುತ್ತಾ ಹೋಗುತ್ತದೆ ಎಂದು ವ್ಯಾಖ್ಯಾನಕಾರರು ವ್ಯಾಖ್ಯೆಮಾಡಿರುತ್ತಾರೆ.

ಯಕ್ಷನ ಮುಂದಿನ ಪ್ರಶ್ನೆ :

**ಕಿಂಸ್ವಿತ್ಪ್ರವಸತೋ ಮಿತ್ರಂ ಕಿಂಸ್ವಿನ್ಮಿತ್ರಂ ಗೃಹೇ ಸತಃ ।**
**ಆತುರಸ್ಯ ತು ಕಿಂ ಮಿತ್ರಂ ಕಿಂಸ್ವಿನ್ಮಿತ್ರಂ ಮರಿಷ್ಯತಃ ॥೬೩॥**

"ಪ್ರವಾಸಮಾಡತಕ್ಕವನಿಗೆ ಮಿತ್ರನು ಯಾರು? ಮನೆಯಲ್ಲಿ ಇರತಕ್ಕವನಿಗೆ ಮಿತ್ರನು ಯಾರು? ರೋಗಿಗೆ ಮಿತ್ರನು ಯಾರು? ಸಾಯುವವನಿಗೆ ಮಿತ್ರನು ಯಾರು?"

ಧರ್ಮಜನ ಉತ್ತರ :

**ಸಾರ್ಥಃ ಪ್ರವಸತೋ ಮಿತ್ರಂ ಭಾರ್ಯಾ ಮಿತ್ರಂ ಗೃಹೇ ಸತಃ |**
**ಆತುರಸ್ಯ ಭಿಷಙ್ಮಿತ್ರಂ ದಾನಂ ಮಿತ್ರಂ ಮರಿಷ್ಯತಃ ||೬೪||**

"ಪ್ರವಾಸಮಾಡತಕ್ಕವನಿಗೆ ಮತ್ತೊಬ್ಬ ಸಹಪ್ರವಾಸಿಯೇ ಮಿತ್ರನು. ಮನೆಯಲ್ಲಿ ಇರತಕ್ಕವನಿಗೆ ಪತ್ನಿಯೇ ಮಿತ್ರಳು. ರೋಗಿಗೆ ವೈದ್ಯನೇ ಮಿತ್ರನು. ಸಾಯುವವನಿಗೆ ದಾನವೇ ಮಿತ್ರನು."

ಯಾತ್ರಿಕರ ಸಮೂಹಕ್ಕೆ ಸಾರ್ಥ–ಎಂದು ಹೆಸರು. ಹಿಂದಿನ ಕಾಲದಲ್ಲಿ ಗುಂಪು-ಗುಂಪಾಗಿ ಯಾತ್ರೆಗೆ ಹೋಗುತ್ತಿದ್ದರು. ಈಗಲೂ ಅದೇ ಪದ್ಧತಿಯೇ ಬೆಳೆದುಬಂದಿದೆ. ಆದುದರಿಂದ ಯಾತ್ರೆ ಹೊರಟವನಿಗೆ ಯಾತ್ರಿಕನು ಅಥವಾ ಯಾತ್ರಿಕರ ಸಮೂಹವು ಮಿತ್ರನೆಂಬುದು ಸಮಂಜಸವಾಗಿದೆ. ಭಾರ್ಯಾ ಮಿತ್ರಂ ಗೃಹೇ ಸತಃ–ಮನೆಯಲ್ಲಿರುವವನಿಗೆ ಭಾರ್ಯೆಯೇ ಮಿತ್ರಳು–ಎಂದು ಯುಧಿಷ್ಠಿರನು ಉದ್ಘೋಷಿಸಿದ್ದಾನೆ. ನಮ್ಮ ಸಮಾಜದಲ್ಲಿ ಹೆಂಗಸರಿಗೆ ಸ್ವಾತಂತ್ರ್ಯವಿಲ್ಲವೆಂಬ ಉದ್ಗಾರಗಳು ಈಗಲೂ ಆಗಾಗ ಕೇಳಿ ಬರುತ್ತಿವೆ. ಆದರೆ ಪ್ರಾಚೀನಕಾಲದಿಂದಲೂ ನಮ್ಮಲ್ಲಿ ಸ್ತ್ರೀಯರಿಗೆ ಸಮಾಜದಲ್ಲಿ ವಿಶೇಷವಾದ ಸ್ಥಾನ-ಗೌರವಗಳಿವೆ. ವಿವಾಹಕಾಲದಲ್ಲಿಯೂ ಭಾರ್ಯೆಯನ್ನು ಮಿತ್ರನೆಂದೇ ವರನು ಪರಿಗ್ರಹಿಸುತ್ತಾನೆ. ವಿವಾಹದಲ್ಲಿ ಅತಿಮುಖ್ಯವಾದ ಸಪ್ತಪದಿಯಲ್ಲಿ ಹೇಳುವ ಮಂತ್ರವು ಈ ವಿಷಯವನ್ನು ಬಹುಸ್ಪಷ್ಟವಾಗಿ ತಿಳಿಸುತ್ತದೆ.

**ಸಖಾ ಸಪ್ತಪದಾ ಭವ | ಸಖಾಯೌ ಸಪ್ತಪದಾ ಬಭೂವ |**

**ಸಖ್ಯಂ ತೇ ಗಮೇಯಂ | ಸಖ್ಯಾತ್ತೇ ಮಾಯೋಷಮ್ |**

**ಸಖ್ಯಾನ್ಮೇ ಮಾಯೋಷ್ಠಾಃ | ಸಮಯಾವ ಸಙ್ಕಲ್ಪಾವಹೈ |**

**ಸಮ್ಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ |**

**ಇಷಮೂರ್ಜಮಭಿಸಂವಸಾನೌ ಸನ್ನೌಮನಾಗ್ಂಸಿ**
**ಸಂವ್ರತಾ ಸಮುಚಿತ್ತಾನ್ಯಾಕರಮ್ ।**

"ಈ ಏಳು ಹೆಜ್ಜೆಗಳನ್ನಿಡುವುದರಿಂದ ನೀನು ನನ್ನ ಜೀವದ ಗೆಳತಿಯಾಗಿರುವೆ. ನಾವಿಬ್ಬರೂ ಸ್ನೇಹಿತರಾದೆವು. ನಾನು ನಿನ್ನೊಡನಾದ ಗೆಳೆತನದಿಂದ ವಿಮುಖನಾಗುವುದಿಲ್ಲ. ನೀನೂ ಸಹ ನನ್ನೊಡನಾದ ಗೆಳೆತನದಿಂದ ವಿಮುಖಳಾಗಬೇಡ. ನಾವಿಬ್ಬರೂ ಒಟ್ಟಾಗಿ ಸೇರಿದ್ದೇವೆ. ನಾವು ಅನ್ಯೋನ್ಯ ಪ್ರೀತಿಯಿಂದಿದ್ದು ಚಿರಕಾಲ ಬದುಕಿ-ಬಾಳೋಣ. ನಾವಿಬ್ಬರೂ ಪರಸ್ಪರ ಸೌಹಾರ್ದದಿಂದ ಎಲ್ಲ ವಿಷಯಗಳನ್ನೂ ಸಮಾಲೋಚನೆ ಮಾಡೋಣ. ನಾವು ಯಾವಾಗಲೂ ಹಸನ್ಮುಖರಾಗಿಯೇ ಇದ್ದುಕೊಂಡು ನಮ್ಮಿಬ್ಬರ ಮನಸ್ಸುಗಳೂ ಒಂದಾಗಿ ಕಲೆತು, ನಾವಿಬ್ಬರೂ ಸೇರಿ ಒಂದೇ ವಿಧವಾದ ವ್ರತಾಚರಣೆಗಳನ್ನು ಮಾಡೋಣ."

ವಿವಾಹದಲ್ಲಿಯೇ ಬರುವ ಮತ್ತೊಂದು ಮಂತ್ರವು ಹೀಗಿದೆ :

**ಮೂರ್ಧಾನಂ ಪತ್ಯುರಾರೋಹ । ಪ್ರಜಯಾ ಚ ವಿರಾಢ್ಭವ ।**

**ಸಂರಾಜ್ಞೀ ಶ್ವಶುರೇ ಭವ । ಸಂರಾಜ್ಞೀ ಶ್ವಶ್ರುವಾಂ ಭವ ।**

**ನನಾನ್ದರಿ ಸಂರಾಜ್ಞೀ ಭವ । ಸಂರಾಜ್ಞೀ ಅಧಿದೇವೃಷು ।**

"ನಿನ್ನ ಪತಿಯು ನಿನ್ನನ್ನು ತಲೆಯ ಮೇಲೆ ಕುಳ್ಳಿರಿಸಿಕೊಳ್ಳಲಿ–ಎಂದರೆ ಪತಿಯಿಂದ ನೀನು ಯಥಾಯೋಗ್ಯವಾದ ಗೌರವವನ್ನು ಪಡೆಯುವವಳಾಗು. ಮಕ್ಕಳನ್ನು ಪಡೆ. ನಿನ್ನ ಗಂಡನ ಮನೆಯಲ್ಲಿರುವ ಮಾವ, ಅತ್ತೆ, ನಾದಿನಿ, ಮೈದುನ ಇವರೆಲ್ಲರಿಗೂ ನೀನೇ ರಾಣಿಯಾಗು (ಪ್ರಿಯಳಾಗು). ಅವರೆಲ್ಲರ ಮಧ್ಯದಲ್ಲಿ ನೀನು ಸಂರಾಜ್ಞಿಯಾಗಿ ವಿರಾಜಿಸು."

ದಾನಕೊಡುವಾಗಲೂ ಪತ್ನಿಯು ನೀರು ಬಿಡದೇ ಗಂಡನಿಗೆ ದಾನ ಕೊಡುವ ಅಧಿಕಾರವೇ ಇಲ್ಲ. ಸ್ವಚ್ಛಂದತೆಯಿಂದ ವಿಹರಿಸದಿರಲು ಕಟ್ಟು ಪಾಡುಗಳಿವೆಯೇ ಹೊರತು ಸ್ತ್ರೀಯರನ್ನು ಯಾವಾಗಲೂ ನಾವು ಗೌರವಿಸುತ್ತೇವೆ.

ರೋಗಿಗೆ ವೈದ್ಯನೇ ಮಿತ್ರನೆಂಬುದೂ ಸಹಜವಾಗಿಯೇ ಇದೆ.

ಸಾಯುವವನಿಗೆ ಮಿತ್ರನಾರೆಂಬುದಕ್ಕೆ ಧರ್ಮಜನು ದಾನವೇ ಮಿತ್ರನೆಂದು ಹೇಳುತ್ತಾನೆ. ಯಾವಾಗಲೂ ದಾನ-ಧರ್ಮಗಳನ್ನು ಮಾಡುತ್ತಲೇ ಇರಬೇಕಾದುದು ಮನುಷ್ಯನ ಕರ್ತವ್ಯ. ಅದರಲ್ಲಿಯೂ ಸಾಯುವ ಕಾಲದಲ್ಲಿ ಗೋದಾನ-ಭೂದಾನಾದಿ ಷೋಡಶದಾನಗಳನ್ನಾದರೂ ಮೃತ್ಯುಶಯ್ಯೆಯಲ್ಲಿರುವವನಿಂದ ಕೊಡಿಸಬೇಕೆಂದು ಶಾಸ್ತ್ರವಿಧಿಯಿದೆ. ಈ ಸಂಪ್ರದಾಯವು ಇಂದಿಗೂ ನಡೆದು ಬಂದಿದೆ. ಈ ದಾನಗಳ ಫಲವು ಪ್ರಾಣೋತ್ಕ್ರಮಣಾನಂತರದಲ್ಲಿ ವೈತರಣೀನದಿಯನ್ನು ಸುಲಭವಾಗಿ ದಾಟಿಸುವುದೆಂದು ಗರುಡ ಪುರಾಣದಲ್ಲಿ ನಿರೂಪಿತವಾಗಿದೆ. ಸಾಯುವ ಕಾಲದಲ್ಲಿ ದಾನಕೊಡುವುದರಿಂದ ಅಪಾರವಾದ ಪುಣ್ಯವು ಲಭ್ಯವಾಗುತ್ತದೆಂದೂ–ಉತ್ತಮಲೋಕಗಳೂ, ಅನಂತರದಲ್ಲಿ ಉತ್ತಮಜನ್ಮವೂ ಲಭ್ಯವಾಗುವುದೆಂದೂ ನಮ್ಮ ಪುರಾಣೇತಿಹಾಸಗಳು ಹೇಳುತ್ತವೆ. ಕಷ್ಟಕಾಲದಲ್ಲಿ ಮಿತ್ರನು ದಾರಿತೋರುವಂತೆ ಪ್ರಾಣೋತ್ಕ್ರಮಣಕಾಲದಲ್ಲಿ ಮಾಡುವ ದಾನವು (ದಾನದ ಫಲವು) ಜನ್ಮಾಂತರಗಳಲ್ಲಿಯೂ ನಮ್ಮನ್ನು ಕಾಪಾಡುತ್ತದೆ. ಆದುದರಿಂದ ಮಾನವನಾದವನು ದಾನರೂಪವಾದ ಧರ್ಮವನ್ನು ಮಾಡುತ್ತಲೇ ಇರಬೇಕೆಂಬ ಅಭಿಪ್ರಾಯವನ್ನಿಲ್ಲಿ ನಿರೂಪಿಸಲಾಗಿದೆ.

ಯಕ್ಷನ ಮುಂದಿನ ಪ್ರಶ್ನೆ :

**ಕೋಽತಿಥಿಃ ಸರ್ವಭೂತಾನಾಂ ಕಿಂಸ್ವಿದ್ಧರ್ಮಂ ಸನಾತನಮ್ ।**
**ಅಮೃತಂ ಕಿಂಸ್ವಿದ್ರಾಜೇನ್ದ್ರ ಕಿಂಸ್ವಿತ್ಸರ್ವಮಿದಂ ಜಗತ್ ॥೬೫॥**

"ರಾಜೇಂದ್ರ! ಸಕಲಪ್ರಾಣಿಗಳಿಗೂ ಅತಿಥಿಯು ಯಾರು? ಸನಾತನ ಧರ್ಮವು ಯಾವುದು? ಅಮೃತವು ಯಾವುದು? ಈ ಸಕಲ ಜಗತ್ತೂ ಯಾವುದು?"

ಧರ್ಮಜನು ಉತ್ತರಿಸುತ್ತಾನೆ :

**ಅತಿಥಿಃ ಸರ್ವಭೂತಾನಾಮಗ್ನಿಃ ಸೋಮೋ ಗವಾಮೃತಮ್ ।**
**ಸನಾತನೋಽಮೃತೋ ಧರ್ಮೋ ವಾಯುಃ ಸರ್ವಮಿದಂ ಜಗತ್ ॥**

"ಸರ್ವಜನರಿಗೂ ಅಗ್ನಿಯು ಅತಿಥಿ. ಗೋಕ್ಷೀರವೇ ಅಮೃತ.

ಅವಿನಾಶಿಯಾದ ಧರ್ಮವೇ ಸನಾತನಧರ್ಮ. ಈ ಎಲ್ಲ ಜಗತ್ತೂ ವಾಯು ರೂಪವೇ ಆಗಿದೆ. (ಸರ್ವಜಗತ್ತನ್ನೂ ವಾಯುವು ವ್ಯಾಪಿಸುವುದು.)"

ಸರ್ವಜನರಿಗೂ ಅಗ್ನಿಯೇ ಅತಿಥಿಯು–ಎಂಬುದು ಧರ್ಮಜನ ಉತ್ತರ. ಅನಿರೀಕ್ಷಿತವಾಗಿ ಮನೆಗೆ ಬಂದು ತಂಗಿದವನು ಅತಿಥಿ. ಅಗ್ನಿಯೂ ಸಹ ಯಾರ ನಿರೀಕ್ಷಣೆಗೂ ಸಿಕ್ಕತಕ್ಕವನಲ್ಲ. ಅತಿಥಿಸತ್ಕಾರವೆಂದರೆ ಮುಖ್ಯವಾಗಿ ಭೋಜನ. ಯಜ್ಞೇಶ್ವರನಿಗೂ ಹುತಭುಜನೆಂದು ಹೆಸರು. ಅವನು ಅಗ್ನಿಹೋತ್ರ-ಔಪಾಸನೆಗಳನ್ನು ಮಾಡುವವರ ಮನೆಗಳಲ್ಲಿ ಮಾತ್ರವಲ್ಲ ; ಎಲ್ಲರ ಮನೆಗಳಲ್ಲಿಯೂ ಇರುತ್ತಾನೆ. ತನಗೆ ಕೊಟ್ಟ ವಸ್ತುಗಳನ್ನೆಲ್ಲಾ (ಸೌದೆ ಮುಂತಾದುದು) ಉಪಭುಂಜಿಸುತ್ತಿರುತ್ತಾನೆ. ಊಟ ಮಾಡುವ ಅತಿಥಿಯು ಒಂದು ದಿನ ಬಾರದಿದ್ದರೂ ಬಾಧಕವಿಲ್ಲ. ಆದರೆ ಅತಿಥಿರೂಪನಾದ ಅಗ್ನಿಯಿಲ್ಲದಿದ್ದರೆ ದೈನಂದಿನವ್ಯವಹಾರವೇ ನಡೆಯುವುದಿಲ್ಲ. ಆದುದರಿಂದ ಸರ್ವಜನರಿಗೂ ಅಗ್ನಿಯೇ ಅತಿಥಿ ಎಂಬುದು ಸಮಂಜಸವಾಗಿದೆ. ಅತಿಥಿಪೂಜನದಿಂದ ಆಮುಷ್ಮಿಕಫಲವುಂಟಾಗುತ್ತದೆ. ಅತಿಥಿರೂಪನಾದ ಅಗ್ನಿಯನ್ನು ಸಮಿಚ್ಚರ್ವಾಜ್ಯಗಳಿಂದ ಸಂಪೂಜಿಸಿದಲ್ಲಿ ಪ್ರತ್ಯಕ್ಷಫಲವನ್ನು ನೀಡುತ್ತಾನೆ.

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥**

ಅತಿಥಿರೂಪನಾದ ಅಗ್ನಿಯಲ್ಲಿ ಮಾಡಿದ ಹೋಮ-ಹವನಾದಿಗಳು ಸೂರ್ಯನನ್ನು ತಲುಪುತ್ತವೆ. ಸೂರ್ಯನಿಂದ ವೃಷ್ಟಿಯು ಹುಟ್ಟುತ್ತದೆ. ವೃಷ್ಟಿಯಿಂದ ಅನ್ನವು (ಬೆಳೆ) ಹುಟ್ಟುತ್ತದೆ. ಆ ಬೆಳೆಯೇ ಪ್ರಜೆಗಳ ಜೀವನಕ್ಕೆ ಆಧಾರವಾಗುತ್ತದೆ. ವೇದದಲ್ಲಿ ಅಗ್ನಿಯನ್ನು ಅತಿಥಿ–ಎಂದು ಕರೆದಿದ್ದಾರೆ. **ಅತಿಥಿರ್ದುರೋಣಸತ್** = ಅಹವನೀಯಾದಿ ಅಗ್ನಿಯು ಅತಿಥಿ.

**'ಅತಿಥಿಃ ಸರ್ವಭೂತಾನಾಂ'** ಎಂಬುದಕ್ಕೆ ಜಠರಾಗ್ನಿಯೆಂದೂ ಹೇಳಬಹುದಾಗಿದೆ.

**'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ'**

ಎಂಬ ಗೀತೆಯ ವಚನವೂ ಇದಕ್ಕೆ ಆಧಾರವಾಗಿದೆ. ಜಠರಾಗ್ನಿಗೆ ಬೇಕಾದ ಆಹಾರವನ್ನು ಕೊಟ್ಟು ಸರ್ವಭೂತಗಳ ದೇಹಗಳಲ್ಲಿಯೂ ಆಶ್ರಯಪಡೆದಿರುವ ಅತಿಥಿರೂಪನಾದ ಅಗ್ನಿಯನ್ನು ಸತ್ಕರಿಸದಿದ್ದರೆ ಯಾವ ಪ್ರಾಣಿಯೂ ಬಾಳಲಾರದು.

ಈ ಶ್ಲೋಕದಲ್ಲಿ ಯುಧಿಷ್ಠಿರನ ಉತ್ತರಾನುಸರಣೆಯಲ್ಲಿ ಸ್ವಲ್ಪ ಅಸ್ತವ್ಯಸ್ತತೆಯಿದೆ. (ಆದುದರಿಂದ ಪ್ರಶ್ನೋತ್ತರಗಳೆರಡೂ ಪ್ರಕ್ಷಿಪ್ತವಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ.)

**ಕೋಽತಿಥಿಃ ಸರ್ವಭೂತಾನಾಂ** ಎಂಬುದಕ್ಕೆ **ಅತಿಥಿಃ ಸರ್ವಭೂತಾನಾಮಗ್ನಿಃ** ಎಂಬ ಉತ್ತರವು ಸರಿಯಾಗಿದೆ. ಯಕ್ಷನು ಈ ಶ್ಲೋಕದಲ್ಲಿ ಕೇಳುವ ಎರಡನೆಯ ಪ್ರಶ್ನೆ–'**ಕಿಂಸ್ವಿದ್ಧರ್ಮಂ ಸನಾತನಂ**'. ಯುಧಿಷ್ಠಿರನ ವಾಕ್ಯದಲ್ಲಿ ಎರಡನೆಯ ಉತ್ತರ–'**ಸೋಮೋ ಗವಾಮೃತಂ**'–ಸೋಮವೆನಿಸಿಕೊಳ್ಳುವ ಗೋಕ್ಷೀರವೇ ಸನಾತನಧರ್ಮ. ಮೂರನೆಯ ಪ್ರಶ್ನೆ–'**ಅಮೃತಂ ಕಿಂ**'–ಎಂಬುದಕ್ಕೆ ಧರ್ಮಜನ ಉತ್ತರ :– '**ಸನಾತನೋಽಮೃತೋ ಧರ್ಮಃ**'–ಧರ್ಮವೇ ಅಮೃತ. ಸೋಮವೆನಿಸಿಕೊಳ್ಳುವ ಗೋಕ್ಷೀರವು ಸನಾತನಧರ್ಮವಾಗುವುದು ಹೇಗೆಂಬುದಕ್ಕೆ ವ್ಯಾಖ್ಯಾನಕಾರರು ಹೀಗೆ ಹೇಳುತ್ತಾರೆ : **ಸೋಮೋ ಗವಾಮೃತಂ ಸನಾತನಃ** –ಗೋಕ್ಷೀರ ಅಥವಾ ಗೋಘೃತಗಳು ಯಾಗದಲ್ಲಿ ಅಗ್ನಿಗೆ ಸಮರ್ಪಿಸಬೇಕಾದ ಹವನೀಯದ್ರವ್ಯಗಳು. ಅವನ್ನು ಹೋಮಮಾಡುವುದೇ ನಿತ್ಯಧರ್ಮ. ಇದೇ ಸನಾತನಧರ್ಮ. **ಅಮೃತಂ ಕಿಂ**–ಎನ್ನುವುದಕ್ಕೆ ಇವರ ಅಭಿಪ್ರಾಯದಂತೆ ಧರ್ಮರಾಜನು ಹೇಳುವ ಉತ್ತರ **ಅಮೃತೋ ಧರ್ಮಃ** ಅಮೃತವೆಂದರೆ ಮೋಕ್ಷಹೇತುವಾದುದು ಧರ್ಮ. ಅರ್ಥಾತ್ ಮೋಕ್ಷಕ್ಕೆ ಧರ್ಮವೇ ಮೂಲ. ಹೀಗೆ ಅರ್ಥಮಾಡುವುದಾದರೆ ಸನಾತನಧರ್ಮ– ಮೋಕ್ಷಧರ್ಮಗಳೆರಡರ ವಿಷಯವಾಗಿಯೂ ಯಕ್ಷನು ಕೇಳಿರುವನೆಂಬ ಅಭಿಪ್ರಾಯವಾಗುತ್ತದೆ.

ಇದಕ್ಕೆ ಸರಳವಾದ ಅರ್ಥವನ್ನು ಹೀಗೆ ಮಾಡಬಹುದಾಗಿದೆ :

**ಕಿಂಸ್ವಿದ್ಧರ್ಮಂ ಸನಾತನಂ**–ಸನಾತನಧರ್ಮವು ಯಾವುದು?

**ಸನಾತನೋಽಮೃತೋ ಧರ್ಮಃ** = ಅಮೃತ ಎಂದರೆ ಮೋಕ್ಷ. ಮೋಕ್ಷ ಧರ್ಮವೇ ಸನಾತನಧರ್ಮ. '**ಅಮೃತಂ ಕಿಂ?**' '**ಸೋಮೋ ಗವಾಮೃತಂ**'. '**ಸೋಮಃ**= ಅಮೃತವು **ಗವಾಮೃತಮ್** =ಹಸುವಿನ ಹಾಲು'. ಅರ್ಥಾತ್ ಹಸುವಿನ ಹಾಲೇ ಅಮೃತ.

ಈ ಶ್ಲೋಕದ ಕಡೆಯ ಪ್ರಶ್ನೆ–'**ಕಿಂಸ್ವಿತ್ ಸರ್ವಮಿದಂ ಜಗತ್**' ಇದಕ್ಕೆ ಧರ್ಮಜನ ಉತ್ತರ–'**ವಾಯುಸ್ಸರ್ವಮಿದಂ ಜಗತ್**'

'**ವಾಯುರೇವ ವ್ಯಷ್ಟಿಃ । ವಾಯುಃ ಸಮಷ್ಟಿಃ**'–ಎಂದು ಉಪನಿಷತ್ತು ಹೇಳುತ್ತದೆ. ಜಗತ್ತು ವಾಯುವಿನಿಂದ ಧರಿಸಲ್ಪಟ್ಟಿದೆ. ಪ್ರಾಣಿಗಳ ಶರೀರಗಳನ್ನು ಪ್ರಾಣವೆಂಬ ವ್ಯಷ್ಟಿವಾಯುವೂ–ಜಗತ್ತನ್ನು ಸಮಷ್ಟಿವಾಯುವೂ ಧರಿಸಿರುವುದರಿಂದ ಜಗತ್ತು ವಾಯುರೂಪ–ಎಂದು ಹೇಳಲಾಗಿದೆ. ಆದುದರಿಂದಲೇ ಉಪನಿಷತ್ತಿನಲ್ಲಿ ವಾಯುವನ್ನು ಕುರಿತು ಹೀಗೆ ಸ್ತೋತ್ರಮಾಡಿದ್ದಾರೆ. '**ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ।**'

ಯಕ್ಷನ ಮುಂದಿನ ಪ್ರಶ್ನೆ :

**ಕಿಂಸ್ವಿದೇಕೋ ವಿಚರತೇ ಜಾತಃ ಕೋ ಜಾಯತೇ ಪುನಃ ।**
**ಕಿಂಸ್ವಿದ್ಧಿಮಸ್ಯ ಭೈಷಜ್ಯಂ ಕಿಂಸ್ವಿದಾವಪನಂ ಮಹತ್ ॥೬೭॥**

"ಒಬ್ಬನೇ ಸಂಚರಿಸುವವನು ಯಾರು? ಹುಟ್ಟಿದವನೇ ಪುನಃ ಹುಟ್ಟತಕ್ಕವನು ಯಾರು? ಶೀತಕ್ಕೆ ಔಷಧವು ಯಾವುದು? ದೊಡ್ಡ ಆಧಾರ (ಬೀಜವನ್ನು ಬಿತ್ತುವ) ಕ್ಷೇತ್ರವು ಯಾವುದು?"

ಈ ಪ್ರಶ್ನೆಗೆ ಯುಧಿಷ್ಠಿರನ ಉತ್ತರ :

**ಸೂರ್ಯ ಏಕೋ ವಿಚರತೇ ಚನ್ದ್ರಮಾ ಜಾಯತೇ ಪುನಃ ।**
**ಅಗ್ನಿರ್ಹಿಮಸ್ಯ ಭೈಷಜ್ಯಂ ಭೂಮಿರಾವಪನಂ ಮಹತ್ ॥೬೮॥**

"ಸೂರ್ಯನು ಏಕಾಕಿಯಾಗಿ ಸಂಚರಿಸುತ್ತಾನೆ. ಹುಟ್ಟಿದ ಚಂದ್ರನೇ ಪುನಃ ಹುಟ್ಟುತ್ತಾನೆ. ಅಗ್ನಿಯು ಶೀತಕ್ಕೆ ಔಷಧ. ಭೂಮಿಯು ದೊಡ್ಡ ಆಧಾರ (ಬೀಜಾವಾಪ) ಕ್ಷೇತ್ರವಾಗಿದೆ."

ಯಜುರ್ವೇದದ ತೈತ್ತಿರೀಯಸಂಹಿತೆಯಲ್ಲಿಯೂ ಇದೇ ವಿಧವಾದ ಪ್ರಶ್ನೋತ್ತರಗಳಿವೆ :

**ಕಸ್ಸ್ವಿದೇಕಾಕೀ ಚರತಿ ಕ ಉ ಸ್ವಿಜ್ಜಾಯತೇ ಪುನಃ ।**
**ಕಿಗ್ಂಸ್ವಿದ್ಧಿಮಸ್ಯ ಭೇಷಜಂ ಕಿಗ್ಂಸ್ವಿದಾವಪನಂ ಮಹತ್ ।**

**ಸೂರ್ಯ ಏಕಾಕೀ ಚರತಿ ಚನ್ದ್ರಮಾ ಜಾಯತೇ ಪುನಃ ।**
**ಅಗ್ನಿರ್ಹಿಮಸ್ಯ ಭೇಷಜಂ ಭೂಮಿರಾವಪನಂ ಮಹತ್ ॥**

ಈ ಹಿಂದೆ ಆದಿತ್ಯನ ಅಥವಾ ಸೂರ್ಯನ ವಿಷಯವು ಬಂದಾಗ ಯುಧಿಷ್ಠಿರನು–**ದೇವಾಸ್ತಸ್ಯಾಭಿತಶ್ಚರಾಃ** –ದೇವತೆಗಳು ಅವನ ಸುತ್ತಲೂ ಸಂಚರಿಸುವರೆಂದು ಹೇಳಿದ್ದಾನೆ. ಇಲ್ಲಿ ಸೂರ್ಯನೊಬ್ಬನೇ ಏಕಾಕಿಯಾಗಿ ಸಂಚರಿಸುತ್ತಾನೆಂದೂ ಹೇಳಿದ್ದಾನೆ. ಆದುದರಿಂದ ಇಲ್ಲಿ ಸೂರ್ಯನೆಂದರೆ ಆತ್ಮವೆಂದು ಅರ್ಥಮಾಡಬೇಕು. **ಸೂರ್ಯ ಆತ್ಮಾ ಜಗತಃ** –ಸಕಲ ಭುವನಗಳ ವಿನಾಶವಾದನಂತರವೂ ಏಕಾಕಿಯಾಗಿ ಉಳಿಯತಕ್ಕವನು ಆತ್ಮನೊಬ್ಬನೇ. ಅನಂತರದಲ್ಲಿ ಚಂದ್ರನು ಉದಯಿಸುತ್ತಾನೆ. ಚಂದ್ರನೆಂದರೆ ಮನಸ್ಸು. '**ಚನ್ದ್ರಮಾ ಮನಸೋ ಜಾತಃ ।**' '**ಚನ್ದ್ರಮಾ ಮನೋ ಭೂತ್ವಾ।**' ಆತ್ಮನ ಪ್ರಭಾವದಿಂದ ಮನಸ್ಸು ಪುನಃ ಹುಟ್ಟಿ ಜಗತ್ತಿನ ಪುನರುತ್ಪತ್ತಿಗೆ ಕಾರಣವಾಗುತ್ತದೆ. ಜಗತ್ತಿನ ಪುನರುತ್ಪತ್ತಿಯಾದೊಡನೆಯೇ ಶೀತೋಷ್ಣ, ಸುಖ-ದುಃಖಗಳು ಅವಿದ್ಯೆಯಿಂದ ಪ್ರಭಾವಿತನಾದ ಜೀವನನ್ನು ಆವರಿಸುತ್ತವೆ. ಅವಿದ್ಯೆಯೆಂಬ ಹಿಮಕ್ಕೆ ಜ್ಞಾನಾಗ್ನಿಯೇ ದಿವ್ಯೌಷಧ. ಭೂಮಿಯೆಂದರೆ ಶರೀರ. ಈ ಶರೀರವೇ ವಿದ್ಯೆಗೂ ಅವಿದ್ಯೆಗೂ ಆಧಾರವಾದುದು. ಶರೀರಿಯು ಸಂಸಾರಸಾಗರದಲ್ಲಿ ಮುಳುಗಿ ಸಂಕಟ ಪಡಬಹುದು ಅಥವಾ ಮುಕ್ತಿಯನ್ನೂ ಪಡೆಯಬಹುದು.

ಯಕ್ಷನು ಪುನಃ ಪ್ರಶ್ನಿಸುತ್ತಾನೆ :

**ಕಿಂಸ್ವಿದೇಕಪದಂ ಧರ್ಮ್ಯಂ ಕಿಂಸ್ವಿದೇಕಪದಂ ಯಶಃ ।**
**ಕಿಂಸ್ವಿದೇಕಪದಂ ಸ್ವರ್ಗ್ಯಂ ಕಿಂಸ್ವಿದೇಕಪದಂ ಸುಖಮ್ ॥೬೯॥**

"ಸಮಗ್ರವಾದ ಧರ್ಮದಿಂದ ಯುಕ್ತವಾದುದು ಯಾವುದು? ಸಮಗ್ರ

ವಾದ ಯಶಸ್ಸು ಯಾವುದು? ಸ್ವರ್ಗಕ್ಕೆ ಮುಖ್ಯ ಹೇತುವು ಯಾವುದು? ಸಮಗ್ರವಾದ ಸುಖವು ಯಾವುದು?"

ಯುಧಿಷ್ಠಿರನು ಉತ್ತರಿಸುತ್ತಾನೆ :

**ದಾಕ್ಷ್ಯಮೇಕಪದಂ ಧರ್ಮ್ಯಂ ದಾನಮೇಕಪದಂ ಯಶಃ ।**
**ಸತ್ಯಮೇಕಪದಂ ಸ್ವರ್ಗ್ಯಂ ಶೀಲಮೇಕಪದಂ ಸುಖಮ್ ॥೭೦॥**

"ದೃಢತೆ ಅಥವಾ ಪ್ರಾಮಾಣಿಕತೆಯು ಸಮಗ್ರವಾದ ಧರ್ಮಕ್ಕೆ ಮೂಲ ಸಾಧನ. ಯಶಸ್ಸಿಗೆ ಕಾರಣವಾದುದು ದಾನ. ಸತ್ಯರು ಸ್ವರ್ಗಕ್ಕೆ ಮುಖ್ಯ ಕಾರಣ. ಸಮಗ್ರವಾದ ಸುಖಕ್ಕೆ ಸಾಧನವಾದುದು ಸದಾಚಾರ."

ಮನುಷ್ಯನಿಗೆ, ಧರ್ಮಕಾರ್ಯಮಾಡಲು ಯಾವಾಗಲೂ ಕರ್ಮ ಗಳಲ್ಲಿ ದೃಢವಿಶ್ವಾಸ ಮತ್ತು ಪ್ರಾಮಾಣಿಕತೆಗಳಿರಬೇಕು. ಪಟಾಟೋಪದಿಂದ ಮಾಡುವ ಯಾವ ಕರ್ಮಗಳೂ ಫಲದಾಯಕಗಳಾಗುವುದಿಲ್ಲ. ಆದುದರಿಂದ ಧರ್ಮಕ್ಕೆ ಅಥವಾ ಧರ್ಮಕಾರ್ಯಗಳಿಗೆ ಮೂಲವಾದುದು ದೃಢತೆ ಮತ್ತು ಪ್ರಾಮಾಣಿಕತೆ. ಯಶಸ್ಸಿಗೆ ಮೂಲವಾದುದು ದಾನ. ಸಾಮಾನ್ಯವಾಗಿ ದಾನಿಯನ್ನು ಎಲ್ಲರೂ ಕೊಂಡಾಡುತ್ತಾರೆ. ಧರ್ಮ ಮತ್ತು ನ್ಯಾಯಗಳ ಮೂಲಕವಾಗಿ ಆರ್ಜಿಸಿದ ವಿತ್ತವನ್ನು ಸತ್ಪಾತ್ರನಲ್ಲಿ ದಾನಮಾಡುವ ದಾನಿಗೆ ಪರದಲ್ಲಿಯೂ ಅತ್ಯುತ್ತಮವಾದ ಲೋಕಗಳು ಲಭ್ಯವಾಗುತ್ತವೆ. ದಾನಿಯ ಹೆಸರು ಪೃಥ್ವಿಯಲ್ಲಿ ಉಳಿದಿರುವವರೆಗೂ ಅವನಿಗೆ ಸ್ವರ್ಗಲೋಕದಲ್ಲಿ ಸ್ಥಾನವಿರುತ್ತದೆ.

ಸ್ವರ್ಗಪ್ರಾಪ್ತಿಗೆ (ಇಲ್ಲಿ ಮೋಕ್ಷವೆಂದರ್ಥ) ಮುಖ್ಯಕಾರಣವಾದುದು ಸತ್ಯ. **ಸತ್ಯೇನ ನ ಸುವರ್ಗಾಲ್ಲೋಕಾಚ್ಯವನ್ತೇ ಕದಾಚನ.**

ಸತ್ಯಸಂಧರಾದವರು ಯಾವಾಗಲೂ ಸ್ವರ್ಗದಿಂದ (ಪರಮಪದದಿಂದ) ಚ್ಯುತರಾಗುವುದಿಲ್ಲ. ಆತ್ಮಾನ್ವೇಷಣಕ್ಕೆ ಸತ್ಯನಿಷ್ಠೆಯೇ ಮುಖ್ಯವಾದುದು.

ಆದುದರಿಂದಲೇ **ಸತ್ಯಾನ್ನ ಪ್ರಮದಿತವ್ಯಂ**–ಎಂದು ಆಚಾರ್ಯರು ಶಿಷ್ಯನಿಗೆ ನಿರ್ದೇಶನಮಾಡುತ್ತಾರೆ. ಸತ್ಯದ ವಿಷಯವಾಗಿ ರಾಮಾಯಣದಲ್ಲಿ ಹೀಗೆ ಹೇಳಿದೆ :

**ಧರ್ಮಃ ಸತ್ಯಪರೋ ಲೋಕೇ ಮೂಲಂ ಸರ್ವಸ್ಯ ಚೋಚ್ಯತೇ ।**
**ಸತ್ಯಮೇವೇಶ್ವರೋ ಲೋಕೇ ಸತ್ಯೇ ಧರ್ಮಃ ಸದಾಶ್ರಿತಃ ॥೧೨॥**

**ಸತ್ಯಮೂಲಾನಿ ಸರ್ವಾಣಿ ಸತ್ಯಾನ್ನಾಸ್ತಿ ಪರಂ ಪದಮ್ ॥೧೩॥**

**ದತ್ತಮಿಷ್ಟಂ ಹುತಂ ಚೈವ ತಪ್ತಾನಿ ಚ ತಪಾಂಸಿ ಚ ।**
**ವೇದಾಃ ಸತ್ಯಪ್ರತಿಷ್ಠಾನಾಸ್ತಸ್ಮಾತ್ಸತ್ಯಪರೋ ಭವೇತ್ ॥೧೪॥**

ಅಯೋಧ್ಯಾಕಾಂಡ ; ಸರ್ಗ ೧೦೯

ಧರ್ಮವು ಸತ್ಯಪರವಾದುದು (ಸತ್ಯದ ಆಧಾರವುಳ್ಳದ್ದು ಧರ್ಮವೆನಿಸಿಕೊಳ್ಳುತ್ತದೆ). ಸತ್ಯವು ಎಲ್ಲಕ್ಕೂ ಮೂಲವೆಂದು ಹೇಳಲ್ಪಟ್ಟಿದೆ. ಸತ್ಯವೇ ಲೋಕದಲ್ಲಿ ಈಶ್ವರಸ್ವರೂಪವು. ಧರ್ಮವು ಸತ್ಯದಲ್ಲಿ ಸದಾ ಆಶ್ರಯವನ್ನು ಪಡೆದಿರುವುದು. ಸರ್ವಕರ್ಮಗಳೂ ಸತ್ಯಮೂಲವಾದುವುಗಳು. 'ಸತ್ಯ' ಎಂಬ ಪದಕ್ಕಿಂತಲೂ ಶ್ರೇಷ್ಠವಾದ ಪದವೇ ಬೇರೊಂದಿಲ್ಲ. ಸತ್ಯದ ಆಶ್ರಯಕ್ಕಿಂತಲೂ ಉತ್ತಮವಾದ ಬೇರೊಂದು ಆಶ್ರಯವೇ ಇರುವುದಿಲ್ಲ. ದಾನ, ಇಷ್ಟಿಗಳು, ಹೋಮ-ಹವನಗಳು, ತಪಸ್ಸುಗಳು, ಸಕಲವೇದಗಳು– ಇವುಗಳೆಲ್ಲವೂ ಸತ್ಯದಲ್ಲಿಯೇ ಪ್ರತಿಷ್ಠಿತವಾಗಿರುವುದರಿಂದ ಮಾನವನು ಯಾವಾಗಲೂ ಸತ್ಯನಿಷ್ಠನಾಗಿರಬೇಕು.

ಸುಖಕ್ಕೆ ಮೂಲಕಾರಣ ಶೀಲ. ಭರ್ತೃಹರಿಯ ನೀತಿಶತಕದಲ್ಲಿ ಶೀಲದ ವಿಷಯವಾಗಿ ಹೀಗೆ ಹೇಳಿದ್ದಾನೆ :

**ಐಶ್ವರ್ಯಸ್ಯ ವಿಭೂಷಣಂ ಸುಜನತಾ ಶೌರ್ಯಸ್ಯ ವಾಕ್ಸಂಯಮಃ**
**ಜ್ಞಾನಸ್ಯೋಪಶಮಃ ಶ್ರುತಸ್ಯ ವಿನಯೋ ವಿತ್ತಸ್ಯ ಪಾತ್ರೇ ವ್ಯಯಃ ।**
**ಅಕ್ರೋಧಸ್ತಪಸಃ ಕ್ಷಮಾ ಪ್ರಭವಿತುರ್ಧರ್ಮಸ್ಯ ನಿರ್ವ್ಯಾಜತಾ**
**ಸರ್ವೇಷಾಮಪಿ ಸರ್ವಕಾರಣಮಿದಂ ಶೀಲಂ ಪರಂ ಭೂಷಣಮ್ ॥**

ಐಶ್ವರ್ಯಕ್ಕೆ ಸೌಜನ್ಯದಿಂದಿರುವಿಕೆಯು ಭೂಷಣವಾದುದು. ಶೌರ್ಯಕ್ಕೆ ಮಿತಭಾಷಿತ್ವವೇ ಭೂಷಣ. ವಿತ್ತಕ್ಕೆ ಸತ್ಪಾತ್ರನಲ್ಲಿ ದಾನ ಮಾಡುವುದೇ ಭೂಷಣ. ತಪಶ್ಚರಣೆಗೆ ಕೋಪವನ್ನು ತ್ಯಜಿಸಿರುವುದೇ ಭೂಷಣ. ಪರಾಕ್ರಮಿಗೆ ಕ್ಷಮಾಗುಣವೇ ಭೂಷಣ. ಧಾರ್ಮಿಕಕ್ರಿಯೆಗಳಿಗೆ ನಿಷ್ಕಾಪಟ್ಯವೇ ಭೂಷಣ. ಮೇಲೆ ಹೇಳಿದ ಎಲ್ಲ ಕರ್ಮಗಳಿಗೂ ಶೀಲವೇ

ಪರಮಭೂಷಣವಾದುದು. (ಶೀಲವೊಂದಿಲ್ಲದೇ ಉಳಿದ ಯಾವ ಗುಣಗಳಿದ್ದರೂ ನಿಷ್ಪ್ರಯೋಜನಗಳಾಗುತ್ತವೆ.)

ಯಕ್ಷನು ಪುನಃ ಪ್ರಶ್ನಿಸುತ್ತಾನೆ :

**ಕಿಂಸ್ವಿದಾತ್ಮಾ ಮನುಷ್ಯಸ್ಯ ಕಿಂಸ್ವಿದ್ದೈವಕೃತಃ ಸಖಾ ।**
**ಉಪಜೀವನಂ ಕಿಂಸ್ವಿದಸ್ಯ ಕಿಂಸ್ವಿದಸ್ಯ ಪರಾಯಣಮ್ ॥೭೦॥**

"ಮನುಷ್ಯನಿಗೆ ಆತ್ಮನು ಯಾರು? ದೇವರು ಕೊಟ್ಟಿರುವ ಸ್ನೇಹಿತನಾರು? ಈತನ ಜೀವನೋಪಾಯವು ಹೇಗೆ ನಡೆಯುತ್ತದೆ? ಇವನ ಮುಖ್ಯವಾದ ಆಶ್ರಯವು ಯಾವುದು? ಇವನ ಕರ್ತವ್ಯವೇನು?"

ಧರ್ಮಜನ ಉತ್ತರ :

**ಪುತ್ರ ಆತ್ಮಾ ಮನುಷ್ಯಸ್ಯ ಭಾರ್ಯಾ ದೈವಕೃತಃ ಸಖಾ ।**
**ಉಪಜೀವನಂ ಚ ಪರ್ಜನ್ಯೋ ದಾನಮಸ್ಯ ಪರಾಯಣಮ್ ॥೭೨॥**

"ಮನುಷ್ಯನಿಗೆ ಪುತ್ರನೇ ಆತ್ಮ. ದೇವರು ಕೊಟ್ಟಿರುವ ಸಹಚಾರಿಣಿಯೆಂದರೆ ಪತ್ನೀ. ಮೇಘವು (ಮಳೆಯು) ಜೀವನಕ್ಕೆ ಉಪಾಯ. ದಾನ ಮಾಡುವುದು ಮುಖ್ಯಕರ್ತವ್ಯ."

"**ಆತ್ಮಾ ವೈ ಪುತ್ರನಾಮಾಸಿ**" ಎಂಬ ಶ್ರುತಿಪ್ರಾಮಾಣ್ಯದಂತೆ ಪುತ್ರನು ಆತ್ಮನೆನಿಸುತ್ತಾನೆ.

ತಂದೆಯು ಮಗನನ್ನು ಕುರಿತು ಹೇಳುತ್ತಾನೆ : '**ಆತ್ಮಾ ವೈ** = ನೀನು ನನ್ನ ಆತ್ಮನೇ ಆಗಿರುವೆ. ಆದರೆ **ಪುತ್ರನಾಮಾಸಿ**–ನೀನು ನನ್ನ ಸಾಕ್ಷಾತ್ ಆತ್ಮನೇ ಆದರೂ ಪುತ್ರನೆಂಬ ಹೆಸರನ್ನು ಪಡೆದಿರುವೆ.' ಆದುದರಿಂದ '**ಪುತ್ರ ಆತ್ಮಾ ಮನುಷ್ಯಸ್ಯ**'–ಎಂಬುದು ವೇದಪ್ರಾಮಾಣ್ಯದಿಂದ ಕೂಡಿರುವುದು. **ಕಿಂಸ್ವಿನ್ಮಿತ್ರಂ ಗೃಹೇ ಸತಃ** ಎಂಬುದಕ್ಕೂ **ಭಾರ್ಯಾ ಮಿತ್ರಂ ಗೃಹೇ ಸತಃ** ಎಂಬುದೇ ಉತ್ತರ. **ಕಿಂಸ್ವಿದ್ದೇವಕೃತಃ ಸಖಾ** ಎಂಬುದಕ್ಕೂ **ಭಾರ್ಯಾ ದೇವಕೃತಃ ಸಖಾ** ಎಂದೇ ಉತ್ತರ. ಆದರಿಲ್ಲಿ ದೈವಕೃತವಾದ ಮಿತ್ರನು ಭಾರ್ಯೆ ಎಂದು ಹೇಳಿದ್ದಾರೆ. ಗೆಳೆಯರನೇಕರಾಗಬಹುದು. ಕೃಷ್ಣಾರ್ಜುನರು, ಕರ್ಣ-ದುರ್ಯೋಧನರು, ರಾಮ-ಸುಗ್ರೀವರು–ಇವರುಗಳ ಗೆಳೆತನವು ಅಸಾಧಾರಣವಾದುದು. ಆದರೆ ಸಾಧಾರಣವಾಗಿ

ಗೆಳೆತನವು ಶಾಶ್ವತವಾಗಿ ಉಳಿಯುವುದಿಲ್ಲ. ಮನುಷ್ಯನ ವಯಸ್ಸು, ಸಮಾಜದಲ್ಲಿ ಅವನ ಅಂತಸ್ತುಗಳು ಬದಲಾಯಿಸಿದಂತೆ ಮಿತ್ರರೂ ಬದಲಾವಣೆ ಹೊಂದುತ್ತಿರುತ್ತಾರೆ. ದ್ರುಪದನು ದ್ರೋಣನಿಗೆ ಬಾಲ್ಯದಲ್ಲಿ ಮಿತ್ರನಾಗಿದ್ದರೂ ಅವನು ಸಿಂಹಾಸನವನ್ನೇರಿದ ಮೇಲೆ ತನಗೆ ಕಡುಬಡವ ನೊಡನೆ ಮಿತ್ರತ್ವವಿಲ್ಲವೆಂದು ಹೀಯಾಳಿಸಿದನು. ಈ ವಿಧವಾದ ಮಿತ್ರತ್ವ ಗಳು ಬದಲಾವಣೆಯನ್ನು ಹೊಂದುತ್ತಲೇ ಇರುತ್ತವೆ. ಆದರೆ ಭಾರ್ಯಾ- ಭರ್ತೃಗಳ ಮಿತ್ರತ್ವವು ಶಾಶ್ವತವಾದುದು.

ಈ ಮಿತ್ರತ್ವವು ದೇವದತ್ತವಾದುದು. ಇದು ಮಾನವರು ಪ್ರಯತ್ನ ಪೂರ್ವಕವಾಗಿ ಮಾಡಿಕೊಳ್ಳುವ ಮಿತ್ರತ್ವವಲ್ಲ. ಮಾನವನು ತಾನು ಬಯಸಿದ ಹೆಣ್ಣನ್ನು ಮದುವೆಯಾಗಲೂಬಹುದು ಅಥವಾ ಮದುವೆಯಾಗ ದಿರಲೂಬಹುದು. ಸ್ತ್ರೀ-ಪುರುಷರ ವೈವಾಹಿಕಸಂಬಂಧವು ದೈವಸಂಕಲ್ಪ ದಿಂದಲೇ ನಡೆಯುವುದಾಗಿರುತ್ತದೆ. ಹುಟ್ಟು, ಸಾವು ಮತ್ತು ವಿವಾಹಗಳು ಮನುಷ್ಯನ ಅಧೀನಕ್ಕೆ ಒಳಪಟ್ಟುವುಗಳಲ್ಲ. ಆದರೆ ಮನುಷ್ಯರು ಈ ವಿಷಯದಲ್ಲಿ ಬಹಳ ಭ್ರಾಂತರಾಗುತ್ತಾರೆ. ವಿವಾಹವು ಕೇವಲ ದೈವಿಕವಾದುದ ರಿಂದಲೇ ಯಕ್ಷನ ಪ್ರಶ್ನೆಗೆ ಧರ್ಮರಾಜನು–**ಭಾರ್ಯಾ ದೈವಕೃತಃ ಸಖಾ**– ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಕಾರಣದಿಂದ ದೈವಸಂಕಲ್ಪದಿಂದಲೇ ಲಭ್ಯವಾಗುವ ಭಾರ್ಯೆಯನ್ನು ಮಾನವನೆಂದಿಗೂ ಯಾವ ಕಾರಣ ದಿಂದಲೂ ತಿರಸ್ಕಾರಭಾವದಿಂದ ಕಾಣಬಾರದು. ಈ ಕಾರಣದಿಂದಲೇ ಮನುಸ್ಮೃತಿಯಲ್ಲಿ ಮನುವು ಹೀಗೆ ಹೇಳಿದ್ದಾನೆ :

**ಯತ್ರ ನಾರ್ಯಸ್ತು ಪೂಜ್ಯನ್ತೇ ರಮನ್ತೇ ತತ್ರ ದೇವತಾಃ**

ಸ್ತ್ರೀಯರು ಯಾವ ಮನೆಯಲ್ಲಿ ಗೌರವಿಸಲ್ಪಡುತ್ತಾರೆಯೋ–ಅಲ್ಲಿ ದೇವತೆಗಳೂ ಸಂತೃಪ್ತಿಯಿಂದಿರುತ್ತಾರೆ.

ಮನುಷ್ಯನ ಜೀವಿಕೆಯು ಪರ್ಜನ್ಯನಿಂದ. ಪಟ್ಟಣಿಗರ ಜೀವನವು ಬೇರೆಯ ವಿಧಗಳಿಂದ ನಡೆಯುವುದಾಗಿದ್ದರೂ ರೈತನು ಆಹಾರಧಾನ್ಯಗಳನ್ನು ಬೆಳೆದು ಪಟ್ಟಣಕ್ಕೆ ಕಳುಹಿಸದಿದ್ದರೆ ಪಟ್ಟಣಿಗನು ಅರ್ಜಿಸಿದ ಹಣವು ಹೊಟ್ಟೆ ತುಂಬುವಂತೆ ಮಾಡಲಾರದು. ರೈತನು ಬೆಳೆಯನ್ನು ಬೆಳೆಯಲೇಬೇಕು.

ಅದನ್ನೇ ಪಟ್ಟಣಿಗರೂ ಕೊಂಡುಕೊಳ್ಳಬೇಕು. ಬೆಳೆಗೆ ಬೇಕಾದುದು ಮಳೆ. ಮಳೆಯೇ ಬಾರದಿದ್ದರೆ ಬೆಳೆ ಬೆಳೆಯಲು ಸಾಧ್ಯವಿಲ್ಲ. ಆದುದರಿಂದ ಪ್ರಪಂಚದಲ್ಲಿ ಹುಟ್ಟಿರುವ, ಹುಟ್ಟಲಿರುವ ಸಕಲಪ್ರಾಣಿಗಳಿಗೂ ಮಳೆಯೇ ಜೀವನಾಧಾರವೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

**'ಕಿಂಸ್ವಿದಸ್ಯ ಪರಾಯಣಂ'** 'ಮನುಷ್ಯನಿಗೆ ಮುಖ್ಯವಾದ ಆಶ್ರಯ ವಾವುದು?' ಎಂಬುದಕ್ಕೆ ಧರ್ಮಜನು **'ದಾನಮಸ್ಯ ಪರಾಯಣಮ್'** 'ದಾನವೇ ಅವನಿಗೆ ಮುಖ್ಯವಾದ ಆಶ್ರಯ'–ಎನ್ನುತ್ತಾನೆ. ಸಮಯಗಳಲ್ಲಿ ಮನುಷ್ಯನ ತಲೆಯನ್ನು ಕಾಯುವುದು ದಾನ-ಧರ್ಮಗಳು. ಇದು ಹೇಗೆಂಬುದನ್ನು ಪ್ರತ್ಯಕ್ಷವಾಗಿ ಸಮರ್ಥಿಸಲು ಸಾಧ್ಯವಾಗದಿದ್ದರೂ ಸುದೀರ್ಘವಾದ ಸಮಾಲೋಚನೆಯಿಂದ ಸತ್ಯಾನ್ವೇಷಣಮಾಡಿದರೆ ದಾನ ಮಾಡಿದ ಫಲವು ಮನುಷ್ಯನನ್ನು ಸಮಯಗಳಲ್ಲಿ ಕಾಯುವುದೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. **'ನಾದತ್ತಮುಪತಿಷ್ಠತೇ'** ಎಂಬ ನ್ಯಾಯದಿಂದ ನಾವು ದಾನಮಾಡಿದ ವಸ್ತುವು ಮಾತ್ರವೇ ಪುನಃ ನಮಗೆ ಇಮ್ಮಡಿಯಾಗಿ ಲಭಿಸುತ್ತದೆ. ಭೂಮಿಯಲ್ಲಿ ಬೀಜಬಿತ್ತಿ ನೂರ್ಮಡಿಯಾಗಿ ಹೆಚ್ಚಿನ ಫಸಲನ್ನು ಪಡೆಯುವಂತೆ–ಸಮಯಗಳಲ್ಲಿ ಸತ್ಪಾತ್ರನಿಗೆ ದಾನಮಾಡಿ ನೂರ್ಮಡಿಯಾದ ಫಲವನ್ನು ಪಡೆಯಬಹುದು. ಆದುದರಿಂದ ಮನುಷ್ಯನಿಗೆ ದಾನವು ಮುಖ್ಯಕರ್ತವ್ಯ.

ಯಕ್ಷನ ಮುಂದಿನ ಪ್ರಶ್ನೆ :

**ಧನ್ಯಾನಾಮುತ್ತಮಂ ಕಿಂಸ್ವಿದ್ಧನಾನಾಂ ಸ್ಯಾತ್ಕಿಮುತ್ತಮಮ್ ।**
**ಲಾಭಾನಾಮುತ್ತಮಂ ಕಿಂ ಸ್ಯಾತ್ಸುಖಾನಾಂ ಸ್ಯಾತ್ಕಿಮುತ್ತಮಮ್ ॥೭೩॥**

"ಧನ್ಯಪುರುಷರಲ್ಲಿ ಉತ್ತಮಗುಣವಾವುದು? ಧನಗಳಲ್ಲಿ ಉತ್ತಮವಾದುದು ಯಾವುದು? ಲಾಭಗಳಲ್ಲಿ ಉತ್ತಮವಾದುದು ಯಾವುದು? ಸುಖಗಳಲ್ಲಿ ಉತ್ತಮವಾದುದು ಯಾವುದು?"

ಯುಧಿಷ್ಠಿರನು ಹೇಳುತ್ತಾನೆ :

**ಧನ್ಯಾನಾಮುತ್ತಮಂ ದಾಕ್ಷ್ಯಂ ಧನಾನಾಮುತ್ತಮಂ ಶ್ರುತಮ್ ।**
**ಲಾಭಾನಾಂ ಶ್ರೇಯ ಆರೋಗ್ಯಂ ಸುಖಾನಾಂ ತುಷ್ಟಿರುತ್ತಮಾ ॥೭೪॥**

“ದೃಢತೆಯುಳ್ಳವರೇ ಧನ್ಯರು. ವಿದ್ಯೆಯೇ ಉತ್ತಮವಾದ ಧನ. ಆರೋಗ್ಯವೇ ಶ್ರೇಷ್ಠವಾದ ಲಾಭ. ಸಂತೃಪ್ತಿಯೇ ಉತ್ತಮಸುಖದಾಯಕ ವಾದುದು.”

ಈ ಹಿಂದೆ **ಕಿಂಸ್ವಿದೇಕಪದಂ ಧರ್ಮ್ಯಂ**–ಎಂಬ ಯಕ್ಷನ ಪ್ರಶ್ನೆಗೆ **ದಾಕ್ಷ್ಯಮೇಕಪದಂ ಧರ್ಮ್ಯಂ**–ದೃಢತೆಯೇ ಧರ್ಮಕ್ಕೆ ಮುಖ್ಯವಾದುದೆಂದು ಯುಧಿಷ್ಠಿರನು ಉತ್ತರಿಸಿದ್ದಾನೆ. ಇಲ್ಲಿಯೂ ಧನ್ಯಪುರುಷರಲ್ಲಿರುವ ಉತ್ತಮಗುಣವಾವುದೆಂಬುದಕ್ಕೆ ಸಾಮರ್ಥ್ಯ ಅಥವಾ ದೃಢತೆಯೆಂದು ಉತ್ತರಿಸಿದ್ದಾನೆ. ಸಾಮರ್ಥ್ಯ ಅಥವಾ ದೃಢತೆ ಎಲ್ಲಕ್ಕಿಂತಲೂ ಉತ್ತಮ ವಾದುದು. ಸಾಮರ್ಥ್ಯವಿಲ್ಲದಿದ್ದರೆ ಯಾವ ಕಾರ್ಯದ ಸಾಧನೆಯೂ ಆಗುವುದಿಲ್ಲ.

ಧನಗಳಲ್ಲಿ ಉತ್ತಮವಾದ ಧನವಾವುದೆಂಬ ಯಕ್ಷನ ಪ್ರಶ್ನೆಗೆ ಯುಧಿಷ್ಠಿರನ ಉತ್ತರ–ವಿದ್ಯೆ. ಬೇರಾವ ಧನವಾದರೂ ನಷ್ಟವಾಗಿ ಹೋಗಬಹುದು. ಆದರೆ ವಿದ್ಯಾಧನವು ಮಾತ್ರ ನಷ್ಟವಾಗತಕ್ಕದ್ದಲ್ಲ. ಎರಡನೆಯದಾಗಿ : ದ್ರವ್ಯರೂಪದ ಧನವು ವೆಚ್ಚಮಾಡುತ್ತಿದ್ದರೆ ಮುಗಿದು ಹೋಗುತ್ತದೆ. ಆದರೆ ವಿದ್ಯೆಯನ್ನು ವೆಚ್ಚಮಾಡುತ್ತಿದ್ದರೆ ಅರ್ಥಾತ್ ವಿದ್ಯೆಯನ್ನು ಇತರರಿಗೆ ಉಪದೇಶಿಸುತ್ತಿದ್ದರೆ ಆ ಧನವು ಮತ್ತಷ್ಟು ಊರ್ಜಿತವಾಗುತ್ತದೆ. ಆದುದರಿಂದ ವಿದ್ಯಾಧನವನ್ನು ಸರ್ವಪ್ರಕಾರ ದಿಂದಲೂ ಅರ್ಜಿಸಬೇಕು. ಲಾಭಗಳಲ್ಲಿ ಉತ್ತಮವಾದುದು ಯಾವು ದೆಂಬುದಕ್ಕೆ ಧರ್ಮಜನ ಉತ್ತರ–ಆರೋಗ್ಯ. ಯಾವುದೇ ವ್ಯಾಪಾರದಿಂದ ಎಷ್ಟೆಷ್ಟೇ ಲಾಭಬಂದರೂ ಆರೋಗ್ಯವೊಂದಿಲ್ಲದಿದ್ದರೆ ಲಾಭದ ಪ್ರಯೋ ಜನವನ್ನು ಅನುಭವಿಸುವ ಸಾಧ್ಯತೆಯಿಲ್ಲ. ಈ ವೈಪರೀತ್ಯವನ್ನು ನಾವು ನಮ್ಮ ಸಮಾಜದಲ್ಲಿಂದು ಕಾಣುತ್ತಿದ್ದೇವೆ. ಹೇರಳವಾಗಿ ಹಣವನ್ನು ಹೊಂದಿರುವವನಿಗೆ ಅದನ್ನು ಉಪಭೋಗಿಸಲು ಆರೋಗ್ಯವಿರುವುದಿಲ್ಲ. ಒಂದು ತುತ್ತು ಅನ್ನವನ್ನೂ ಅರಗಿಸಿಕೊಳ್ಳಲಾರದವನಾಗಿರುತ್ತಾನೆ. ಆದುದ ರಿಂದ ನಮ್ಮ ಹಿರಿಯರು ಆರೋಗ್ಯವೇ ಭಾಗ್ಯವೆನ್ನುತ್ತಾರೆ. ವ್ಯಾಪಾರ-ವಾಣಿಜ್ಯಗಳಲ್ಲಿ ಕಷ್ಟ - ನಷ್ಟಗಳುಂಟಾದರೂ ತಡೆದುಕೊಳ್ಳಬಹುದು.

ಆರೋಗ್ಯವು ನಷ್ಟವಾಯಿತೆಂದರೆ ತಳಪಾಯವಿಲ್ಲದ ಮನೆಯಂತಾಗುವುದು. ಆದುದರಿಂದ ಮಾನವರು ಸರ್ವಪ್ರಯತ್ನದಿಂದಲೂ ಆರೋಗ್ಯವನ್ನು ನಷ್ಟವಾಗಗೊಡದೇ ಅದನ್ನು ಕಾಪಾಡಿಕೊಂಡು ಬರುವುದರಲ್ಲಿ ಎಚ್ಚರಿಕೆಯನ್ನು ವಹಿಸಬೇಕು.

ಈ ಶ್ಲೋಕದಲ್ಲಿ ಯಕ್ಷನ ಕಡೆಯ ಪ್ರಶ್ನೆ : **'ಸುಖಾನಾಂ ಸ್ಯಾತ್ಕಿ ಮುತ್ತಮಮ್** = ಸುಖಗಳಲ್ಲಿ ಉತ್ತಮವಾದುದು ಯಾವುದು?' ಇದಕ್ಕೆ ಧರ್ಮಜನ ಉತ್ತರ–**'ಸುಖಾನಾಂ ತುಷ್ಟಿರುತ್ತಮಾ** = ಸುಖಗಳಲ್ಲಿ ಸಂತೃಪ್ತಿಯೇ ಉತ್ತಮವಾದ ಸುಖವು.' ಈ ಸುಖವು ವಸ್ತುಗತವಾದುದೆಂದು ಸರ್ವತ್ರ ಮೂಡಿರುವ ಭ್ರಾಂತಿಯೇ ಇಂದು ಸರ್ವತ್ರ ಅಸುಖಕ್ಕೆ ಕಾರಣವಾಗಿದೆ. ಆಶೆ ಎಂಬುದು ಮಾನವನ ಶತ್ರು.

**ಆಶಾಯಾ ಯೇ ದಾಸಾಃ ತೇ ದಾಸಾಃ ಸರ್ವಲೋಕಸ್ಯ ।**
**ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥**

ಆಶೆಗೆ ದಾಸನಾದವನು ಎಲ್ಲರಿಗೂ ದಾಸನಾಗಬೇಕಾಗುವುದು. ಆಶೆ ಯನ್ನೇ ದಾಸಿಯನ್ನಾಗಿ ಮಾಡಿಕೊಂಡವನು ಎಲ್ಲ ಜಗತ್ತುಗಳನ್ನೂ ಆಳಲು ಸಮರ್ಥನಾಗುತ್ತಾನೆ. ಆಶೆ ಎಂಬುದಕ್ಕೆ ಪಾರವಿಲ್ಲ. ಅದರ ಸೀಮೆಯು ಮುಂದುವರಿಯುತ್ತಾ ಹೋಗುವುದು. ಒಂದು ಆಶೆಯು ಪೂರ್ಣವಾಯಿ ತೆಂದರೆ ಅದರೊಡನೆ ಹತ್ತಾರು ಆಶೆಗಳು ಮೊಳೆಯುತ್ತವೆ. ಈ ವಿಧವಾದ ಆಶೆಯು ಮಾನವನ ಮನಸ್ಸನ್ನು ಆಕ್ರಮಿಸಿರುವವರೆಗೂ ಅವನಿಗೆ ಯಾವುದರಲ್ಲಿಯೂ ಸುಖವು ಕಾಣುವುದಿಲ್ಲ. ಲಕ್ಷಾಧಿಕಾರಿಯಾಗಿದ್ದರೂ ತನಗಿನ್ನೂ ಸಾಲದೆಂಬ ಭಾವನೆಯು ಅವನಲ್ಲಿರುತ್ತದೆ. ಇಂತಹವನ ಮನಸ್ಸು ಯಾವಾಗಲೂ ಹೆಚ್ಚು ಹೆಚ್ಚು ಆಶೆ-ಆಕಾಂಕ್ಷೆಗಳಿಂದ ಕೂಡಿರುವುದಾಗಿರುವುದರಿಂದ ಶಾಂತಿ-ಸುಖಗಳೆರಡೂ ಅವನ ಜನ್ಮ ದಲ್ಲಿಯೇ ಲಭಿಸಲಾರವು. ಸುಖಿಯಾಗಿರಬೇಕಾದರೆ ಧರ್ಮಜನು ಹೇಳಿರುವಂತೆ ಲಭ್ಯವಾದುದರಲ್ಲಿ ತುಷ್ಟಿಯಿರಬೇಕು. ಅದರಲ್ಲಿಯೇ ಸಂತೃಪ್ತಿಪಟ್ಟುಕೊಳ್ಳಬೇಕು. ಲಾಭಕ್ಕೆ ಅನುಗುಣವಾಗಿ ವೆಚ್ಚಮಾಡುವ ದ್ರವ್ಯ ದಿಂದಲೇ ಸಂತೃಪ್ತಿಪಟ್ಟುಕೊಳ್ಳುವುದು ಉತ್ತಮಸುಖವೆಂಬುದು ಶತಾಂಶ

ಸತ್ಯವಾದರೂ ಇದನ್ನು ಆಚರಣೆಯಲ್ಲಿ ತರುವುದು ಬಹಳ ಕಷ್ಟವೇ ಸರಿ. ಈ ವಿಷಯದಲ್ಲಿ ಶ್ರೀಶಂಕರಭಗವತ್ಪಾದರು ಮಾಡಿರುವ ಉಪದೇಶ ವೊಂದನ್ನು ಇಲ್ಲಿ ಸ್ಮರಣೆಗೆ ತಂದುಕೊಳ್ಳಬಹುದಾಗಿದೆ.

**ಮೂಢ ಜಹೀಹಿ ಧನಾಗಮತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಮ್ ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಮ್ ॥**

"ಮೂಢನೇ! 'ಹಣ ಬೇಕು ; ಹಣ ಬೇಕು' ಎಂಬ ಹಣದ ದಾಹವನ್ನು ಬಿಟ್ಟುಬಿಡು. ಹಣದ ದಾಹವಿಲ್ಲದ ಸದ್ಬುದ್ಧಿಯನ್ನು ಸಾಧಿಸು. ನಿಜಕರ್ಮಗಳೆಂದರೆ ಪಾಪ-ಪುಣ್ಯಕರ್ಮಗಳು. ಹಿಂದಿನ ಜನ್ಮದಲ್ಲಿ ಮಾಡಿದ ಪಾಪ-ಪುಣ್ಯಕರ್ಮಗಳ ಫಲಾನುಸಾರವಾಗಿ ಈ ಜನ್ಮದಲ್ಲಿ ನೀನೇನು ಪಡೆದುಕೊಳ್ಳುತ್ತಿರುವೆಯೋ ಆ ಧನದಿಂದಲೇ ನಿನ್ನ ಮನಸ್ಸನ್ನು ಸಂತೋಷ ಗೊಳಿಸು."

ಯಕ್ಷನು ಪುನಃ ಪ್ರಶ್ನಿಸುತ್ತಾನೆ :

**ಕಶ್ಚ ಧರ್ಮಃ ಪರೋ ಲೋಕೇ ಕಶ್ಚ ಧರ್ಮಃ ಸದಾಫಲಃ ।**
**ಕಿಂ ನಿಯಮ್ಯ ನ ಶೋಚನ್ತಿ ಕೈಶ್ಚ ಸಂಧಿರ್ನ ಜೀರ್ಯತೇ ॥೭೫॥**

"ಲೋಕದಲ್ಲಿ ಶ್ರೇಷ್ಠವಾದ ಧರ್ಮವು ಯಾವುದು? ನಿರಂತರವಾಗಿ ಫಲವನ್ನು ಕೊಡತಕ್ಕ ಧರ್ಮವು ಯಾವುದು? ಯಾವುದನ್ನು ನಿಗ್ರಹಿಸುವುದ ರಿಂದ ಜನರು ಶೋಕಕ್ಕೆ ಒಳಗಾಗುವುದಿಲ್ಲ ಮತ್ತು ಯಾರೊಡನೆ ಮಾಡುವ ಸ್ನೇಹವು ಕ್ಷಯಿಸುವುದಿಲ್ಲ?"

ಇದಕ್ಕೆ ಧರ್ಮಜನ ಉತ್ತರವು ಈ ರೀತಿಯಾಗಿದೆ :

**ಆನೃಶಂಸ್ಯಂ ಪರೋ ಧರ್ಮಃ ತ್ರಯೀಧರ್ಮಃ ಸದಾಫಲಃ ।**
**ಮನೋ ಯಾಮ್ಯ ನ ಶೋಚನ್ತಿ ಸಂಧಿಃ ಸದ್ಭಿರ್ನ ಜೀರ್ಯತೇ ॥೭೬॥**

"ಪ್ರಾಣಿದಯೆ-ಪಶ್ಚಾತ್ತಾಪಗಳು ಮನುಷ್ಯನಿಗಿರಬೇಕಾದ ಮುಖ್ಯ ಗುಣಗಳು. ಇದೇ ಮುಖ್ಯಧರ್ಮವೆಂದು ಧರ್ಮರಾಜನಿಲ್ಲಿ ಹೇಳುತ್ತಾನೆ.

ನೃಶಂಸ್ಯ ಎಂದರೆ ಕ್ರೌರ್ಯ. ಕ್ರೌರ್ಯವಿಲ್ಲದಿರುವುದು ಆನೃಶಂಸ್ಯ. ಅರ್ಥಾತ್ ಯಾರೊಬ್ಬರ ವಿಷಯದಲ್ಲಿಯೂ ಕ್ರೌರ್ಯವನ್ನು ತೋರದಿರುವುದು ಮತ್ತು ಎಲ್ಲರಲ್ಲಿಯೂ ದಯೆತೋರುವುದು ಮನುಷ್ಯನ ಮುಖ್ಯಧರ್ಮವಾಗಿರುತ್ತದೆ. ತ್ರಯೀ ಎಂದರೆ ವೇದಗಳು. ವೇದವಿಹಿತಕರ್ಮಗಳು (ಯಜ್ಞ-ಯಾಗಾದಿಗಳು) ಸರ್ವಕಾಲಗಳಲ್ಲಿಯೂ ಫಲದಾಯಕ ವಾದುವುಗಳು. ಮನಸ್ಸನ್ನು ನಿಗ್ರಹಿಸುವುದರಿಂದ ಶೋಕವುಂಟಾಗುವುದಿಲ್ಲ ವೆಂಬುದು ಸಹಜ. ಆದರೆ ಮನಸ್ಸನ್ನು ನಿಗ್ರಹಿಸಲು ಹೆಚ್ಚಿನ ಸಾಮರ್ಥ್ಯವು ಬೇಕು. ಮನಸ್ಸು ಚಂಚಲವಾದುದು. ಕಪಿಯಂತೆ ಕುಣಿಯುತ್ತಿರುತ್ತದೆ. ಅಂತೆಯೇ ತನಗೆ ಅಧೀನನಾದವನನ್ನೂ ಕುಣಿಸುತ್ತದೆ. ಇಂತಹ ಮನಸ್ಸನ್ನು ನಿಗ್ರಹಿಸಲು ಸತತವಾಗಿ ಸಾಧನೆಮಾಡಬೇಕು. ವಯಸ್ಸಿಗೆ ಅನುಗುಣವಾಗಿ, ಅಂತಸ್ತಿಗೆ ಅನುಗುಣವಾಗಿ ಸ್ನೇಹಿತರು ಆಗುತ್ತಿರುತ್ತಾರೆ. ಒಂದೊಂದು ಅಂತಸ್ತನ್ನೂ ಮತ್ತು ವಯಸ್ಸನ್ನೂ ಕಳೆದಂತೆ ಸ್ನೇಹಿತರು ಬದಲಾವಣೆ ಹೊಂದುತ್ತಿರುತ್ತಾರೆ. ಸ್ನೇಹದ ಲಕ್ಷಣವೇನೆಂದರೆ ಆಜೀವಪರ್ಯಂತವಾಗಿ ತನ್ನ ಒಡನಾಡಿಯೊಡನೆ ಸೇರಿಕೊಂಡೇ ಇರುವುದು. ಆದರೆ ಸ್ನೇಹವು ವ್ಯಾವಹಾರಿಕವಾಗಿ ಉಂಟಾಗಿದ್ದರೆ ಹೆಚ್ಚು ಕಾಲ ಉಳಿಯುವುದಿಲ್ಲ. ವ್ಯವಹಾರವು ಮುಗಿದನಂತರ ಸ್ನೇಹವೂ ಕ್ಷಯಿಸುತ್ತದೆ. ಆಧ್ಯಾತ್ಮಿಕವಾದ ಸಂಬಂಧದಿಂದ ಸ್ನೇಹವುಂಟಾಗಿದ್ದರೆ ಅಂತಹ ಸ್ನೇಹವು ಶಾಶ್ವತವಾಗಿ ಉಳಿಯುತ್ತದೆ. ಆದುದರಿಂದಲೇ ಯುಧಿಷ್ಠಿರನಿಲ್ಲಿ ಸತ್ಪುರುಷರೊಡನೆ ಮಾಡುವ ಸ್ನೇಹವು ಶಾಶ್ವತವಾಗಿ ಉಳಿಯುವುದೆಂದು ಸ್ಪಷ್ಟವಾಗಿ ಹೇಳಿದ್ದಾನೆ.

ಈ ಶ್ಲೋಕಕ್ಕೆ ಆಧ್ಯಾತ್ಮಿಕವಾದ ಅರ್ಥವನ್ನು ವ್ಯಾಖ್ಯಾನಕಾರರು ಮಾಡಿರುತ್ತಾರೆ :

ಆನೃಶಂಸ್ಯಂ ಎಂಬುದಕ್ಕೆ ಪರ್ಯಾಯಾಂತರವಾಗಿ ಸಂನ್ಯಾಸ ಧರ್ಮವೆಂದು ಅರ್ಥಮಾಡಿರುತ್ತಾರೆ. ಆನೃಶಂಸ್ಯಂ ಸರ್ವಭೂತಾಭಯ ದಾನಂ ಸಂನ್ಯಾಸ ಇತ್ಯರ್ಥಃ–ಅರ್ಥಾತ್ ಸಂನ್ಯಾಸಧರ್ಮವೇ ಪರಮ ಶ್ರೇಷ್ಠವಾದ ಧರ್ಮ. ತ್ರಯೀ ಎಂದರೆ ಮೋಕ್ಷಮನ್ತ್ರಸ್ತ್ರಯೀ ಎಂಬ

ಶ್ರುತ್ಯುಕ್ತಿಯಂತೆ ಮೋಕ್ಷಮಂತ್ರಕ್ಕೆ ತ್ರಯೀ ಎಂದು ಹೆಸರು. ತ್ರಯೀ ಎಂಬುದು ಅಕಾರ-ಉಕಾರ-ಮಕಾರಾತ್ಮಕವಾದ "ಓಂ" ಕಾರ ಅಥವಾ ಪ್ರಣವ. ಸತತವಾದ ಪ್ರಣವೋಚ್ಚಾರಣೆಯೇ ಶಾಶ್ವತವಾದ ಸುಖಪ್ರಾಪ್ತಿಗೆ ಸಾಧಕವಾದುದು. ಪ್ರಣವೋಚ್ಚಾರಣೆಯ ಜೊತೆಗೆ ಚಿತ್ತೈಕಾಗ್ರತೆಯೂ ಇರಬೇಕು. ಮನಸ್ಸನ್ನು ತಡೆಹಿಡಿಯಬೇಕು. ಹೀಗೆ ಮಾಡುವುದರಿಂದ ಆತ್ಮಸಾಕ್ಷಾತ್ಕಾರವಾಗುವುದು. ಆತ್ಮವಿದನಿಗೆ ಶೋಕವೆಂಬುದೇ ಇರುವುದಿಲ್ಲ. **ತರತಿ ಶೋಕಮಾತ್ಮವಿತ್**–ಆತ್ಮವಿದನಾದವನು ಶೋಕಸಾಗರವನ್ನು ದಾಟುತ್ತಾನೆಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ. ಸತ್ಪುರುಷರೊಡನೆ ಮಾಡುವ ಸ್ನೇಹವು ಅಳಿಸಿ ಹೋಗುವುದಿಲ್ಲ. ಅಂತಹ ಸತ್ಪುರುಷರೊಡನೆ ಮಾಡುವ ಸ್ನೇಹವು ಆತ್ಮೋದ್ಧಾರಕ್ಕೆ ಕಾರಣವಾಗುತ್ತದೆ.

ಯಕ್ಷನ ಮರುಪ್ರಶ್ನೆ :

**ಕಿಂ ನು ಹಿತ್ವಾ ಪ್ರಿಯೋ ಭವತಿ ಕಿಂ ನು ಹಿತ್ವಾ ನ ಶೋಚತಿ ।**
**ಕಿಂ ನು ಹಿತ್ವಾರ್ಥವಾನ್ಭವತಿ ಕಿಂ ನು ಹಿತ್ವಾ ಸುಖೀ ಭವೇತ್ ॥೭೭॥**

"ಯಾವುದನ್ನು ಬಿಟ್ಟರೆ ಮನುಷ್ಯನು ಜನರಿಗೆ ಪ್ರಿಯನಾಗುತ್ತಾನೆ? ಯಾವುದನ್ನು ಬಿಟ್ಟರೆ ಮನುಷ್ಯನು ಶೋಕಿಸುವುದಿಲ್ಲ? ಯಾವುದನ್ನು ಬಿಟ್ಟರೆ ಮನುಷ್ಯನು ಧನಿಕನಾಗುತ್ತಾನೆ? ಯಾವುದನ್ನು ಬಿಟ್ಟರೆ ಮನುಷ್ಯನು ಸುಖಿಯಾಗುತ್ತಾನೆ?"

ಇದಕ್ಕೆ ಯುಧಿಷ್ಠಿರನ ಉತ್ತರ :

**ಮಾನಂ ಹಿತ್ವಾ ಪ್ರಿಯೋ ಭವತಿ ಕ್ರೋಧಂ ಹಿತ್ವಾ ನ ಶೋಚತಿ ।**
**ಕಾಮಂ ಹಿತ್ವಾರ್ಥವಾನ್ಭವತಿ ಲೋಭಂ ಹಿತ್ವಾ ಸುಖೀ ಭವೇತ್ ॥**

"ಅಭಿಮಾನವನ್ನು ಬಿಟ್ಟರೆ ಮನುಷ್ಯನು ಸರ್ವರಿಗೂ ಪ್ರಿಯನಾಗುತ್ತಾನೆ. ಕೋಪವನ್ನು ಬಿಟ್ಟರೆ ಮನುಷ್ಯನು ಶೋಕಿಸಬೇಕಾಗುವುದಿಲ್ಲ. ಆಶೆಯನ್ನು ಬಿಟ್ಟರೆ ಮನುಷ್ಯನು ಧನಿಕನಾಗುತ್ತಾನೆ. ಲೋಭವನ್ನು ಬಿಟ್ಟರೆ ಮಾನವನು ಸುಖಿಯಾಗುತ್ತಾನೆ."

ಯಕ್ಷನು ಕೇಳುವ ಪ್ರಶ್ನೆಯು ಬಹಳ ಸ್ವಾರಸ್ಯವಾಗಿದೆ. ಯಾವುದನ್ನು

ಬಿಟ್ಟರೆ ಮನುಷ್ಯನು ಸರ್ವಪ್ರಿಯನೂ, ದುಃಖರಹಿತನೂ, ಧನಿಕನೂ, ಸುಖಿಯೂ ಆಗುವನೆಂದು ಕೇಳುತ್ತಾನೆ. ಇರುವುದನ್ನು ಬಿಡಬೇಕೇ ಹೊರತು ಇಲ್ಲದಿರುವುದನ್ನು ಬಿಡಲು ಸಾಧ್ಯವಿಲ್ಲ. ಮೇಲಾಗಿ ಯಕ್ಷನು ಉದ್ದೇಶಿಸಿದ್ದ ವಿಷಯಗಳು ಮನುಷ್ಯಸಾಮಾನ್ಯರಿಗೆ ಬಿಡಲು ಅಸಾಧ್ಯವಾದುವು ಗಳಾಗಿರಬೇಕು. ಏಕೆಂದರೆ ಈ ವಿಷಯಗಳು ಸುಲಭವಾಗಿ ಬಿಡುವಂತಾ ಗಿದ್ದರೆ ಯಕ್ಷನು ಈ ಪ್ರಶ್ನೆಗಳನ್ನೇ ಕೇಳುತ್ತಿರಲಿಲ್ಲ. ಇಂಗಿತಜ್ಞನಾದ ಯುಧಿಷ್ಠಿರನು ಒಡನೆಯೇ ಇದಕ್ಕೆ ಅನುರೂಪವಾದ ಉತ್ತರಗಳನ್ನೇ ಕೊಡುತ್ತಾನೆ.

ಯಕ್ಷನ ಮೊದಲನೆಯ ಪ್ರಶ್ನೆಗೆ ಯುಧಿಷ್ಠಿರನ ಉತ್ತರ : **ಮಾನಂ ಹಿತ್ವಾ ಪ್ರಿಯೋ ಭವತಿ.** ಇಲ್ಲಿ ಮಾನವೆಂದರೆ ದುರಭಿಮಾನ ಅಥವಾ ಅಹಂಕಾರ. 'ನಾನು ಬೇರೆಯವನಿಗೆ ಕಡಿಮೆಯಲ್ಲ' ಎಂಬ ಭಾವನೆ ಯಿರುವುದು. ಮನುಷ್ಯನ ಅಂತಸ್ತಿಗೆ ತಕ್ಕಂತೆ ಅಹಂಕಾರವೂ ಕೂಡಿಬರು ತ್ತದೆ. ಸರಳತೆ-ಸೌಜನ್ಯಗಳು ದೂರಸರಿಯುತ್ತವೆ. ತಾನು ಅಹಂಕಾರಿ ಯೆಂದು ಅಹಂಕಾರವಿರುವವನು ಭಾವಿಸುವುದಿಲ್ಲ. ತನ್ನ ಅಂತಸ್ತಿಗೆ ತಕ್ಕಂತೆ ನಡೆದುಕೊಳ್ಳುತ್ತಿರುವೆನೆಂದು ಅವನು ಭಾವಿಸುತ್ತಾನೆ. ಆ ಸಮಯದಲ್ಲಿ ಅವನ ನಡೆ-ನುಡಿಗಳನ್ನು ಕಾಣುವವರಿಗೆ ಅವನು ಅಹಂಕಾರಿಯೆಂಬುದು ಅರಿವಾಗುತ್ತದೆ. ಆದುದರಿಂದ ಸಾಮಾನ್ಯಜನರು ಅವನ ಹತ್ತಿರವೂ ಸುಳಿಯುವುದಿಲ್ಲ. ಇಂತಹ ಅಹಂಕಾರವನ್ನು ಬಿಡಲು ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ. ಅಹಂಕಾರವನ್ನು ಬಿಡುವುದೆಂದರೆ ತನ್ನ ಅಧಿಕಾರವನ್ನು ಬಿಡುವುದೆಂಬ ಅಥವಾ ತಾನಿರುವ ಸ್ಥಾನದಿಂದ ಚ್ಯುತನಾಗುವುದೆಂಬ ಭಾವನೆಯು ಅವನಲ್ಲಿ ಸ್ಥಿರವಾಗಿರುತ್ತದೆ. ದೊಡ್ಡ ಅಧಿಕಾರದಲ್ಲಿದ್ದರೂ ಉನ್ನತಸ್ಥಾನದಲ್ಲಿದ್ದರೂ ಅಹಂಕಾರಹೀನರಾಗಿ ಸೌಜನ್ಯದಿಂದಿರುವವರು ಲಕ್ಷಕ್ಕೊಬ್ಬರಾದರೂ ಇರುತ್ತಾರೆ. ಅಂತಹವರು ನಿಶ್ಚಯವಾಗಿಯೂ ಜನಪ್ರಿಯರಾಗಿರುತ್ತಾರೆ. ಜನರು ತಮ್ಮ ಕುಂದು-ಕೊರತೆಗಳನ್ನು ಹೇಳಿ ಕೊಳ್ಳಲು ಅವರಲ್ಲಿಗೆ ಹೋಗಿಬರುತ್ತಾರೆ. ಆದುದರಿಂದ ದುರಭಿಮಾನ ವನ್ನು ತೊರೆದರೆ ಸರ್ವಜನಪ್ರಿಯನಾಗುವನೆಂಬ ಯುಧಿಷ್ಠಿರನ ಉತ್ತರವು ಸರ್ವಸಮಂಜಸವಾಗಿದೆ.

ಯಕ್ಷನ ಎರಡನೆಯ ಪ್ರಶ್ನೆಗೆ ಯುಧಿಷ್ಠಿರನ ಉತ್ತರ : **'ಕ್ರೋಧಂ ಹಿತ್ವಾ ನ ಶೋಚತಿ–ಕೋಪವನ್ನು ತ್ಯಜಿಸುವುದರಿಂದ ಮನುಷ್ಯನು ಶೋಕಿಸುವುದಿಲ್ಲ'**–ಎಂದರೆ ಶೋಕಕ್ಕೆ ಕೋಪವೇ ಮೂಲ–ಎಂದಾಯಿತು. ಆದರೆ ಕೋಪವನ್ನು ಸಂಪೂರ್ಣವಾಗಿ ಬಿಟ್ಟುಬಿಡುವ ಸಾಧ್ಯತೆಯಿಲ್ಲ. ಅಭಿಮಾನದ ಜೊತೆಯಲ್ಲಿಯೇ ಕ್ರೋಧವೂ ಸೇರಿರುತ್ತದೆ. ಅಭಿಮಾನದಿಂದ ಅಭಿಭೂತನಾದವನು ತನ್ನ ವಿಷಯದಲ್ಲಾಗುವ ಅತ್ಯಲ್ಪವಾದ ನ್ಯೂನತೆ ಯನ್ನೂ ಸಹಿಸಿಕೊಳ್ಳಲಾರನು. ಕೋಪವು ಅನರ್ಥಕಾರಿಯೆಂಬುದು ಪರಿಣಾಮದಲ್ಲಿ ಅವನಿಗೆ ತಿಳಿದುಬಂದರೂ ಕೋಪವನ್ನು ವರ್ಜಿಸಲು ಮಾತ್ರ ಸರ್ವಥಾ ಸಾಧ್ಯವಾಗುವುದಿಲ್ಲ. ಅದಕ್ಕೆ ಅವನಿಗಿರುವ ಸ್ವಾತ್ಮಾಭಿಮಾನ ಅಥವಾ ದುರಹಂಕಾರವೇ ಕಾರಣವಾಗಿರುತ್ತದೆ. ನಿರಭಿಮಾನಿಗೆ ನಿಂದಾ-ಸ್ತುತಿಗಳ ಪರಿವೆಯೇ ಇರುವುದಿಲ್ಲವಲ್ಲವೇ? ಕೋಪದ ವಿಷಯದಲ್ಲಿ ವಿದುರನು ಹೀಗೆ ಹೇಳಿದ್ದಾನೆ :

**ಕೋಪವೆಂಬುದನರ್ಥಸಾಧನ**
**ಕೋಪವೇ ಸಂಸಾರಬಂಧನ**
**ಕೋಪದಿಂದುರುತರದ ಸುಕೃತವು ಲಯವನೈದುವುದು ।**
**ಕೋಪವನು ವರ್ಜಿಸಲು ಬೇಹುದು**
**ಕೋಪವುಳ್ಳವನಾವನಾಗಲಿ**
**ಕಾಪುರುಷನಿಹಪುರಕೆ ಚಿತ್ತೈಸೆಂದನಾ ವಿದುರ ॥**

( ಕುಮಾರವ್ಯಾಸ )

ಕೋಪಾಗ್ನಿಯು ಆಶ್ರಯದಾತನನ್ನು ದಹಿಸುವುದು ಮಾತ್ರವಲ್ಲದೇ ಇತರರಿಗೂ ಕೋಪಗೊಂಡವನಿಂದ ಹೆಚ್ಚು ತೊಂದರೆಯಾಗುವುದು. ಇದು ಸಾಮಾನ್ಯವಾಗಿ ಸರ್ವರ ಅನುಭವದಲ್ಲಿಯೂ ಇರುವ ವಿಷಯವೇ ಆಗಿದೆ. ಹಾಗಿದ್ದರೂ–ಕೋಪವು ಅನರ್ಥಸಾಧನವೆಂಬುದನ್ನು ಅಡಿಗಡಿಗೂ ಮನು ಷ್ಯನು ಪರಿಣಾಮಗಳಿಂದ ತಿಳಿದುಕೊಂಡರೂ ಕೋಪವನ್ನು ತ್ಯಜಿಸಲು ಸಮರ್ಥನಾಗುವುದಿಲ್ಲ. ಈ ಕಾರಣಗಳಿಂದ–ಕೋಪವನ್ನು ತ್ಯಜಿಸುವುದರಿಂದ

ಮನುಷ್ಯನು ಶೋಕದಿಂದ ವಿಮುಕ್ತನಾಗುವನೆಂಬ–ಯುಧಿಷ್ಠಿರನ ಉತ್ತರವು ಹೃದಯಂಗಮವಾಗಿದೆ.

ಯಕ್ಷನ ಮೂರನೆಯ ಪ್ರಶ್ನೆಗೆ ಯುಧಿಷ್ಠಿರನ ಉತ್ತರ : **ಕಾಮಂ ಹಿತ್ವಾರ್ಥವಾನ್ಭವತಿ**–ಆಶೆಯನ್ನು ತೊರೆದರೆ ಐಶ್ವರ್ಯವಂತನಾಗುತ್ತಾನೆ. ಈ ಉತ್ತರವು ಶತಾಂಶ ಸತ್ಯವಾಗಿದ್ದರೂ–ಮೇಲ್ನೋಟಕ್ಕೆ ನಮ್ಮ ಇಂದಿನ ಪರಿಸ್ಥಿತಿಯಲ್ಲಿ ವಿರೋಧಾಭಾಸಗಳಿಂದ ಕೂಡಿರುವಂತೆ ಕಾಣುತ್ತದೆ. ಆಶೆಯನ್ನು ತೊರೆದರೆ ಐಶ್ವರ್ಯವನ್ನು ಪಡೆಯುವುದೆಂತು? ಸಂಪಾದಿಸಬೇಕೆಂಬ ಆಶೆಯು ಅಥವಾ ಸಂಕಲ್ಪವಿದ್ದು ಅದಕ್ಕಾಗಿ ಕಾರ್ಯಮಾಡಿದರಲ್ಲವೇ ಸಂಪಾದಿಸಲು ಸಾಧ್ಯವಾಗುವುದು? ಆಶೆಯನ್ನೇ ತೊರೆದರೆ ಸಂಪಾದಿಸುವುದಾದರೂ ಹೇಗೆ? ಐಶ್ವರ್ಯವು ಹೇಗೆತಾನೇ ಕೂಡಿಬಂದೀತು?–ಇತ್ಯಾದಿ ಪ್ರಶ್ನೆಗಳೇಳುವುದು ಸ್ವಾಭಾವಿಕ. ಇದನ್ನು ಎರಡು ವಿಧವಾಗಿ ವಿಶ್ಲೇಷಣೆ ಮಾಡಬಹುದು. ಮನುಷ್ಯನು ಒಂದು ವಸ್ತುವಿನ ಮೇಲೆ ಆಶೆಪಟ್ಟರೆ ಪ್ರಾಯಶಃ ಆ ವಸ್ತುವು ಅವನಿಗೆ ಸುದುರ್ಲಭವೇ ಆಗಿರುತ್ತದೆ. ತನ್ನಲ್ಲಿರುವ ವಸ್ತುಗಳಿಗೆ ಮನುಷ್ಯನು ಸ್ವಾಭಾವಿಕವಾಗಿಯೇ ಆಶೆಪಡಲಾರನು. ತನ್ನಲ್ಲಿರದ ವಸ್ತುಗಳಿಗೇ ಆಶೆಪಡುತ್ತಾನೆ. ನಾಲ್ಕು ಹೆಣ್ಣುಮಕ್ಕಳನ್ನು ಹೊಂದಿರುವವನು ಒಂದು ಗಂಡುಮಗುವುಬೇಕೆಂದು ಅಪೇಕ್ಷಿಸುತ್ತಾನೆ. ನಾಲ್ಕು ಗಂಡುಮಕ್ಕಳಿಂದ ಕೂಡಿರುವವನು ಒಂದು ಹೆಣ್ಣುಮಗುವುಬೇಕೆಂದು ಅಪೇಕ್ಷಿಸುತ್ತಾನೆ. ಸ್ವಂತಮನೆಯಿರುವವನು ನಾಲ್ಕಾರು ಮನೆಗಳನ್ನು ಕಟ್ಟಿಸಿ ಬಾಡಿಗೆಗೆ ಕೊಟ್ಟು ಸಂಪಾದಿಸಬೇಕೆಂದು ಅಪೇಕ್ಷಿಸುತ್ತಾನೆ. ಮನೆಯೇ ಇಲ್ಲದವನು ಒಂದು ಮನೆಗಾಗಿ ಆಶೆಪಡುತ್ತಾನೆ. ಹೀಗೆಯೇ ಆಶೆಯೆಂಬುದು ಪ್ರತಿಯೊಬ್ಬನಲ್ಲಿಯೂ ಪ್ರತಿಯೊಂದು ಹಂತದಲ್ಲಿಯೂ ಬೆಳೆಯುತ್ತಾ ಹೋಗುತ್ತದೆ. ಆಶೆಯೆಂಬುದು ಮಾನವನ ಮನಸ್ಸಿನಲ್ಲಿ ಮೂಡುವ ಮೊದಲು ಸ್ವರ್ಗಲೋಕವು ಹತ್ತಿರದಲ್ಲಿಯೇ ಇರುತ್ತಿದ್ದಿತು. ಸ್ವರ್ಗದ ಸುಖವನ್ನು ಅನುಭವಿಸಬೇಕೆನ್ನುವ ಆಶೆಯು ಮಾನವನ ಮನಸ್ಸಿನಲ್ಲಿ ಮೂಡಿದೊಡನೆಯೇ ಅದು ದೂರಕ್ಕೆ ಹೊರಟುಹೋಯಿತು. ಆಶೆ–ಎಂಬುದು ಇರುವವರೆಗೆ ಮನುಷ್ಯನು ಐಶ್ವರ್ಯವಂತನಾಗಲಾರನು. ಇತರರ ಕಣ್ಣಿಗೆ ಅವನು ಐಶ್ವರ್ಯ

ವಂತನಂತೆ ಕಂಡುಬಂದರೂ ಅವನು–ತಾನಿನ್ನೂ ಪೂರ್ಣವಾಗಿ ಐಶ್ವರ್ಯವಂತನಾಗಿಲ್ಲ–ಎಂದೇ ಭಾವಿಸುತ್ತಾನೆ. ಇದು ಮಾನವನ ಸ್ವಭಾವ. ಆಶೆಯನ್ನು ತೊರೆದವನು ಐಶ್ವರ್ಯವಂತನಾಗುವುದು ಹೇಗೆ? ತ್ಯಾಗಿಯ ಸಮೀಪಕ್ಕೆ ಅರ್ಥಾತ್ ಆಶೆಯನ್ನು ತೊರೆದವನ ಸಮೀಪಕ್ಕೆ ಐಶ್ವರ್ಯವು ತಾನಾಗಿಯೇ ಬರುವುದು. ವಿರಕ್ತರಾದ ಸಂನ್ಯಾಸಿಗಳಿಗೆ ನಾವು ಕಾಣಿಕೆಗಳನ್ನು ಅರ್ಪಿಸುತ್ತೇವೆ. ಆದರೆ ಅದರಿಂದಲೇ ಸಂನ್ಯಾಸಿಗಳಾಗಲೀ, ತ್ಯಾಗಿಗಳಾಗಲೀ ಐಶ್ವರ್ಯವಂತರಾಗುವರೆಂದು ಹೇಳಲಾಗುವುದಿಲ್ಲ. ಆಶೆಯನ್ನು ಪೂರ್ಣವಾಗಿ ತೊರೆದವನು ಬಡವನಾದರೂ ಐಶ್ವರ್ಯವಂತನೇ ಸರಿ. ಅವನು ಯಾರೊಬ್ಬರಿಗೂ ದಾಸನಾಗುವುದಿಲ್ಲ. ತನ್ನ ಅಪೇಕ್ಷೆಯ ಪೂರಣಕ್ಕಾಗಿ ಯಾರೊಬ್ಬರ ಸೇವೆಯನ್ನೂ ಮಾಡುವುದೂ ಇಲ್ಲ.

ಈ ಅಖಂಡಪ್ರಪಂಚವೇ ಅವನದಾಗಿರುತ್ತದೆ. ಒಬ್ಬನು ಲಕ್ಷಾಧಿಪತಿಯಾಗಿದ್ದರೂ ಮಾನಸಿಕಶಾಂತಿಯನ್ನು ಅಥವಾ ಸುಖವನ್ನು ಪಡೆಯಲಾರನು. ಆದರೆ ಆಶೆಯನ್ನು ತೊರೆದವನು ಭಿಕ್ಷಾಧಿಕಾರಿಯಾಗಿದ್ದರೂ ಶಾಂತಮನಸ್ಕನಾಗಿರುತ್ತಾನೆ. ಅದರಿಂದಲೇ ಅವನು ಪರಮಸುಖಿಯಾಗಿರುತ್ತಾನೆ.

ಆಶೆಯನ್ನು ತೊರೆಯುವುದರಿಂದ ಯಾರಿಗೂ ದಾಸನಾಗದೇ ಯಾರ ಹಂಗಿಗೂ ಸಿಕ್ಕಿಕೊಳ್ಳದೇ ನಿತ್ಯತೃಪ್ತನಾಗಿರುವವನೇ ಮಹೈಶ್ವರ್ಯವಂತನು. ಐಶ್ವರ್ಯವಂತನೆನಿಸಿಕೊಂಡವನು ಅನುಭವಿಸಲಾಗದ ಪರಮಸುಖವನ್ನೂ–ಕಾಮನೆಗಳನ್ನು ತೊರೆದವನು ಅನುಭವಿಸಬಲ್ಲನು. ವಸ್ತುಗತವಾದ ಅನೇಕ ಸುಖ-ಸೌಲಭ್ಯಗಳಿದ್ದರೂ ಐಶ್ವರ್ಯವಂತನಾದವನಿಗೆ 'ಆಶೆ' ಎಂಬುದೊಂದಿರುವುದರಿಂದ ಮಾನಸಿಕಸೌಖ್ಯವಿರುವ ಸಾಧ್ಯತೆಯೇ ಇಲ್ಲ. ಆದುದರಿಂದ ಆಶೆಯನ್ನು ತೊರೆಯುವುದರಿಂದ ಅವನು ನಿಜವಾದ ಅರ್ಥವಂತನಾಗುತ್ತಾನೆ.

**ಸ ತು ಭವತಿ ದರಿದ್ರೋ ಯಸ್ಯ ತು ತೃಷ್ಣಾ ವಿಶಾಲಾ ।**
**ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ ॥**

ಯಾವನಿಗೆ ಆಶೆ-ಆಕಾಂಕ್ಷೆಗಳು ಬಹಳವಾಗಿವೆಯೋ ಅವನು ದರಿದ್ರನು. (ಅವನು ಹಣವಂತನಾದರೂ ದರಿದ್ರನೇ ಸರಿ.) ಮನಸ್ಸು ಸಂತುಷ್ಟ

ವಾಗಿದ್ದರೆ ; ಸಂತೃಪ್ತಿಹೊಂದಿದ್ದರೆ–ಐಶ್ವರ್ಯವಂತನಾರು? ಬಡವನಾರು? (ಮನಸ್ಸಂತುಷ್ಟಿಯಿರುವ ಬಡವನೇ ಐಶ್ವರ್ಯವಂತನು. ವಿಪುಲವಾದ ಆಶೆ-ಆಕಾಂಕ್ಷೆಗಳಿರುವ ಐಶ್ವರ್ಯವಂತನೇ ದರಿದ್ರನು.)

ಈ ಉತ್ತರವನ್ನು ಮತ್ತೊಂದು ರೀತಿಯಲ್ಲಿಯೂ ವಿಚಾರಮಾಡಬಹುದು. ಹಣವನ್ನೇ ಸಂಪಾದಿಸಬೇಕೆನ್ನುವ ಹಂಬಲವಿರುವವನಿಗೆ ಕಾಮೋಪಭೋಗಗಳ ಮೇಲಿನ ಲಾಲಸೆಯಿರುವುದಿಲ್ಲ. ತಾನು ಅರ್ಜಿಸಿದುದರಲ್ಲಿ ಚಿಕ್ಕಾಸನ್ನೂ ವ್ಯಯಮಾಡಲು ಅವನಿಗೆ ಬಹಳ ಸಂಕಟವಾಗುತ್ತದೆ. **ಅರ್ಥಾತುರಾಣಾಂ ನ ಸುಖಂ ನ ನಿದ್ರಾ**–ಎಂಬಂತೆ ಹಣವನ್ನು ಸಂಪಾದಿಸುವ ಇಚ್ಛೆಯುಳ್ಳವರಿಗೆ ಯಾವ ಸುಖವೂ ಇಲ್ಲ. ನಿದ್ರೆಯೂ ಇಲ್ಲ. ನಿದ್ರೆಯನ್ನು ತೊರೆದು ಊಟ-ಉಪಚಾರಗಳನ್ನೂ ತೊರೆದು ಸಂಪಾದನೆ ಮಾಡುತ್ತಾರೆ. ಆದುದರಿಂದ **ಕಾಮಂ ಹಿತ್ವಾ** ಎಂದರೆ ಸುಖೋಪಭೋಗಗಳನ್ನು ತೊರೆಯುವುದರಿಂದ ಐಶ್ವರ್ಯವಂತನಾಗುತ್ತಾನೆ ಎಂದೂ ಅರ್ಥಮಾಡಬಹುದಾಗಿದೆ. ಯಕ್ಷನ ನಾಲ್ಕನೆಯ ಪ್ರಶ್ನೆಗೆ ಯುಧಿಷ್ಠಿರನ ಉತ್ತರ : **ಲೋಭಂ ಹಿತ್ವಾ ಸುಖೀ ಭವೇತ್ ।** ಲೋಭವೆಂದರೆ ಅತ್ಯಾಸೆ (ದುರಾಸೆ.) ವೆಚ್ಚಮಾಡದೇ ಇರುವುದು ಲೋಭಿಯ ಸ್ವಭಾವ. ಸುಖೋಪಭೋಗಗಳನ್ನು ತೊರೆದು, ದೇಹ-ಮನಸ್ಸುಗಳೆರಡನ್ನೂ ದಂಡಿಸಿ, ಬಂಧು- ಬಾಂಧವರಲ್ಲಿ ವೈರವನ್ನೂ ಕಟ್ಟಿಕೊಂಡು, ದಯಾ-ದಾಕ್ಷಿಣ್ಯಗಳಿಲ್ಲದೇ ಐಶ್ವರ್ಯವನ್ನು ಸಂಪಾದಿಸುತ್ತಾನೆ. ಸಂಪಾದಿಸಿ ಕೂಡಿಡುವುದೇ ಅವನ ಅಂತಿಮಧ್ಯೇಯವಾಗಿರುತ್ತದೆ. ಆ ಐಶ್ವರ್ಯವನ್ನೂ ತನಗೆ ಆಗಲೀ ತನ್ನವರಿಗೇ ಆಗಲೀ (ಅವನಿಗೆ ತನ್ನವರು ಎನ್ನುವವರು ಇನ್ನೂ ಇದ್ದರೆ), ಎಂತಹ ಕಷ್ಟಬಂದರೂ ವೆಚ್ಚಮಾಡಲೂ ಇಷ್ಟಪಡುವುದಿಲ್ಲ. ಪ್ರಾಣವನ್ನಾದರೂ ಕೊಟ್ಟಾನೆಯೇ ಹೊರತು ಐಶ್ವರ್ಯವನ್ನು ತ್ಯಾಗಮಾಡಲಾರನು. ಇದೇ ಲೋಭ. **ಯೇನ ಕೇನ ಪ್ರಕಾರೇಣ**, ಧರ್ಮಾಧರ್ಮ, ನ್ಯಾಯಾನ್ಯಾಯಗಳ ವಿವೇಚನೆಯಿಲ್ಲದೇ ಸಂಪಾದಿಸಲು ದುರಾಸೆಯೇ ಮುಖ್ಯವಾದ ಕಾರಣ. ಸಂಪಾದಿಸಲು ದುರಾಸೆ ; ಅದನ್ನು ಕೂಡಿಟ್ಟು ವೆಚ್ಚಮಾಡದಿರುವ ಸ್ವಭಾವ

ಲೋಭವೆನಿಸಿಕೊಳ್ಳುತ್ತದೆ. ಸಂಸಾರದಲ್ಲಿ ವಿತ್ತದ ಸ್ಥಾನವನ್ನು ಸರಿಯಾಗಿ ತಿಳಿದುಕೊಳ್ಳದೇ, ಅದಕ್ಕೆ ಅತಿ ಹೆಚ್ಚಿನ ಮಹತ್ತ್ವವನ್ನು ಕೊಡುವುದೇ ಲೋಭ. ಇಂತಹ ಲೋಭವನ್ನು ತ್ಯಜಿಸುವುದರಿಂದ ಸುಖವುಂಟಾಗುತ್ತದೆಂಬುದು ನಿಶ್ಚಯ. ಆದರೆ ಲೋಭವು ಮಾನವಸಾಮಾನ್ಯನನ್ನು ಸುಲಭವಾಗಿ ಬಿಟ್ಟುಹೋಗದು. ತಾನು ಪೂರ್ವಜನ್ಮದಲ್ಲಿ ಮಾಡಿದ ಕರ್ಮಾನುಸಾರವಾಗಿ ತನಗೆ ಈ ಜನ್ಮದಲ್ಲಿ ಫಲಪ್ರಾಪ್ತಿಯಾಗುತ್ತಿದೆಯೆಂದೂ, ಉತ್ತಮ ಫಲಗಳನ್ನು ಪಡೆಯಲು ತಾನು ಈ ಜನ್ಮದಲ್ಲಿಯೂ ಕಾಮ-ಕ್ರೋಧ-ಲೋಭಗಳನ್ನು ತ್ಯಜಿಸಿ ಸತ್ಕಾರ್ಯಗಳಲ್ಲಿ ನಿರತನಾಗಿರಬೇಕೆಂದೂ ನಿಶ್ಚಯಿಸಿ ಕಾರ್ಯಮಾಡುವವರು ಅತಿವಿರಳ.

ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ಮಂದಿ ಶತ್ರುಗಳು ಮನುಷ್ಯನ ಶರೀರದಲ್ಲಿಯೇ ಇದ್ದಾರೆ. ಆ ಆರು ಶತ್ರುಗಳನ್ನೂ ದಮನಮಾಡಬೇಕಾದುದು ಮನುಷ್ಯನ ಆದ್ಯಕರ್ತವ್ಯವಾಗಿರುತ್ತದೆ. ಅದರಿಂದವನಿಗೆ ಶಾಶ್ವತವಾದ ಶಾಂತಿಯು ಲಭ್ಯವಾಗುತ್ತದೆ. ಶ್ರೀ ಶಂಕರ ಭಗವತ್ಪಾದರು ಹೀಗೆ ಹೇಳಿದ್ದಾರೆ :

**ಕಾಮಂ ಕ್ರೋಧಂ ಲೋಭಂ ಮೋಹಂ**
**ತ್ಯಕ್ತ್ವಾತ್ಮಾನಂ ಭಾವಯ ಕೋಽಹಮ್ ।**
**ಆತ್ಮಜ್ಞಾನವಿಹೀನಾ ಮೂಢಾ-**
**ಸ್ತೇ ಪಚ್ಯನ್ತೇ ನರಕನಿಗೂಢಾಃ ॥**

ಕಾಮ-ಕ್ರೋಧ-ಲೋಭ-ಮೋಹಾದಿಗಳನ್ನು ತೊರೆದು ಆತ್ಮಸ್ವರೂಪವನ್ನು ಕುರಿತು ಚಿಂತಿಸು. ನಾನಾರೆಂದು ಜಿಜ್ಞಾಸೆಮಾಡು. ಆತ್ಮಜ್ಞಾನವಿಲ್ಲದವರು ಗಾಂಪರು, ಗಾವಿಲರು. ಅಂತಹ ಮೂಢರು ನರಕವೆಂಬ ಗುಡಾಣದಲ್ಲಿ ಬಿದ್ದು ಬೆಂದುಹೋಗುವರು.

ಯಕ್ಷನು ಮುಂದೆ ಕೇಳುವ ಪ್ರಶ್ನೆಗಳಿವು :

**ಕಿಮರ್ಥಂ ಬ್ರಾಹ್ಮಣೇ ದಾನಂ ಕಿಮರ್ಥಂ ನಟನರ್ತಕೇ ।**
**ಕಿಮರ್ಥಂ ಚೈವ ಭೃತ್ಯೇಷು ಕಿಮರ್ಥಂ ಚೈವ ರಾಜಸು ॥೭೬॥**

"ಯಾವ ಪ್ರಯೋಜನಕ್ಕಾಗಿ ಬ್ರಾಹ್ಮಣನಿಗೆ ದಾನಮಾಡಬೇಕು? ಯಾವ ಕಾರಣಕ್ಕಾಗಿ ನಟ-ನರ್ತಕರಿಗೆ ಬಹುಮಾನಗಳನ್ನು ನೀಡಬೇಕು? ಯಾವ ಕಾರಣಕ್ಕಾಗಿ ಸೇವಕರಿಗೆ ವೇತನವನ್ನು ಕೊಡಬೇಕು ಮತ್ತು ಯಾವ ಪ್ರಯೋಜನಕ್ಕಾಗಿ ರಾಜರಿಗೆ ಕಾಣಿಕೆಯನ್ನು ಕೊಡಬೇಕು?"

ಯುಧಿಷ್ಠಿರನ ಉತ್ತರ :

**ಧರ್ಮಾರ್ಥಂ ಬ್ರಾಹ್ಮಣೇ ದಾನಂ ಯಶೋಽರ್ಥಂ ನಟನರ್ತಕೇ ।**
**ಭೃತ್ಯೇಷು ಭರಣಾರ್ಥಂ ವೈ ಭಯಾರ್ಥಂ ಚೈವ ರಾಜಸು ॥೮೦॥**

"ಧರ್ಮದ ಕಾರಣಕ್ಕಾಗಿ ಅಥವಾ ಪುಣ್ಯಪ್ರಾಪ್ತಿಗಾಗಿ ಬ್ರಾಹ್ಮಣನಿಗೆ ದಾನಮಾಡಬೇಕು. ಯಶಸ್ಸಿನ ಪ್ರಾಪ್ತಿಗಾಗಿ ನಟ-ನರ್ತಕರಿಗೆ ಸಮಾರಂಭ ಗಳಲ್ಲಿ ಪಾರಿತೋಷಕಗಳನ್ನು ಕೊಡಬೇಕು. ಪೋಷಣಾರ್ಥವಾಗಿ ಸೇವಕರಿಗೆ ವೇತನಗಳನ್ನು ಕೊಡಬೇಕು. ಕಳ್ಳ-ಕಾಕರ ಭಯಕ್ಕೋಸ್ಕರ (ಅವರಿಂದ ರಕ್ಷಣೆ ಪಡೆಯಲು) ಮತ್ತು ದಂಡನೆಯಾಗುವುದೆಂಬ ಭಯದಿಂದ ರಾಜರಿಗೆ ಆಯಾ ಕಾಲಗಳಲ್ಲಿ ಕಾಣಿಕೆಗಳನ್ನು ಅರ್ಪಿಸುತ್ತಿರಬೇಕು."

ಧರ್ಮಾರ್ಥವಾಗಿ ಬ್ರಾಹ್ಮಣನಿಗೆ ದಾನಮಾಡಬೇಕೆಂದು ಯುಧಿ ಷ್ಠಿರನು ಹೇಳಿದ್ದಾನೆ. ಬ್ರಾಹ್ಮಣನಿಗೆ ದಾನಕೊಡಬೇಕೆಂಬ ಪದ್ಧತಿಯು ಇಂದಿನವರೆಗೆ ನಡೆದುಬಂದಿದೆ. ದಾನ-ದಕ್ಷಿಣೆಗಳನ್ನು ಬ್ರಾಹ್ಮಣನಿಗೇ ಕೊಡ ಬೇಕೆಂಬುದಕ್ಕೆ ಕಾರಣವನ್ನು ಹೀಗೆ ನಿರೂಪಿಸಬಹುದಾಗಿದೆ. ಯಜ್ಞಗಳಲ್ಲಿ ಆರ್ತ್ವಿಜ್ಯವನ್ನು ವಹಿಸುವ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡುವುದೂ ಮತ್ತು ಯಥೋಚಿತವಾದ ಸಂಭಾವನೆಗಳನ್ನು ಕೊಡುವುದೂ ಶಾಸ್ತ್ರ ವಿಹಿತವಾಗಿದೆ. ಆದರೆ ದಾನವೆಂಬುದು ಈ ಪರ್ಯಾಯಕ್ಕೆ ಸೇರಿದ್ದಲ್ಲ. ಪುಣ್ಯಕಾಲಗಳಲ್ಲಿ, ಪರ್ವಕಾಲಗಳಲ್ಲಿ, ವ್ರತಾದಿಗಳಲ್ಲಿ ಪುಣ್ಯಸಂಚಯನಕ್ಕಾಗಿ ಅಥವಾ ಪಾಪಪರಿಹಾರಕ್ಕಾಗಿ ದಾನಕೊಡುವ ಪದ್ಧತಿಯಿದೆ. ಇಲ್ಲಿ ಬ್ರಾಹ್ಮಣನೆಂದರೆ ವೇದಾಧ್ಯಯನಸಂಪನ್ನ ಅಥವಾ ಸದಾಚಾರಿಯಾದವ ನೆಂದೇ ಅರ್ಥಮಾಡಬೇಕು. ಸದಾಚಾರಿಯಾದ ವೇದಾಧ್ಯಯನಸಂಪನ್ನ ನಿಗೆ ದಾನಮಾಡಬೇಕು. ಯಜಮಾನನು ಕೊಡುವ ದ್ರವ್ಯದಾನವು ಬ್ರಾಹ್ಮ ಣನು ಅರ್ಜಿಸಿದ ತಪಃಫಲದೊಡನೆ ವಿನಿಮಯವಾಗುವುದೆಂಬುದು ನಮ್ಮ

ಸಿದ್ಧಾಂತ. ಬ್ರಾಹ್ಮಣನು ಅನುದಿನವೂ ವೇದಾಧ್ಯಯನಮಾಡುವುದರಿಂದ ಮತ್ತು ಗಾಯತ್ರೀಮಹಾಮಂತ್ರವನ್ನು ಪುನಶ್ಚರಣೆಮಾಡುವುದರಿಂದ ಅವನಲ್ಲಿ ಅನಿರ್ವಚನೀಯವಾದ ಫಲವು ಕೇಂದ್ರೀಕೃತವಾಗಿರುವುದು. ಆ ಫಲದಲ್ಲಿ ಸ್ವಲ್ಪ ಭಾಗವು ದಾನಕೊಟ್ಟ ಯಜಮಾನನಿಗೆ ಸೇರುತ್ತದೆ. ಸತ್ಪಾತ್ರರಲ್ಲಿ-ಶ್ರೋತ್ರಿಯರಲ್ಲಿ ದಾನಮಾಡಬೇಕೆಂದು ಸ್ಮೃತಿಗಳು ಯಜಮಾನನಿಗೆ ಹೇಳಿರುವಂತೆ–ಶ್ರೋತ್ರಿಯನಾದವನು ದಾನತೆಗೆದುಕೊಂಡರೆ ಮಾಡಿಕೊಳ್ಳಬೇಕಾದ ಪ್ರಾಯಶ್ಚಿತ್ತವನ್ನೂ ಹೇಳಿದೆ. ಒಂದು ದಿನ ಒಂದು ದಾನತೆಗೆದುಕೊಂಡರೆ ವ್ರತನಿಷ್ಠನಾದ ಬ್ರಾಹ್ಮಣನು ನಾಲ್ಕಾರು ದಿನಗಳ ಪರ್ಯಂತವಾಗಿ ಮಹಾಮಂತ್ರದ ಪುನಶ್ಚರಣೆಮಾಡಬೇಕಾಗುವುದು. ಕೆಲವು ಮಹಾದಾನಗಳನ್ನು ತೆಗೆದುಕೊಂಡರೆ ತೀರ್ಥಯಾತ್ರೆಮಾಡಿ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಬೇಕಾಗುವುದು. ಅದು ಹೊರತಾಗಿ ಅಸತ್ಪಾತ್ರನಲ್ಲಿ ದಾನಮಾಡಿದರೆ ದಾನಿಯು ಆ ಅಸತ್ಪಾತ್ರನ ಪಾಪದಲ್ಲಿ ಪಾಲುಗೊಳ್ಳಬೇಕಾಗುವುದು. ಆದುದರಿಂದಲೇ ವಿದುರನಿದನ್ನು ಬಹುಸ್ಪಷ್ಟವಾಗಿ ಹೇಳಿದ್ದಾನೆ :

**ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀ ಎರಡರಿಂ ।**
**ಸಂಹರಣವೈದುವುದಾರ್ಜಿಸಿದ ಧನವರಸ ಕೇಳೆಂದ**

(ಕುಮಾರವ್ಯಾಸ ಭಾರತ)

ವಿವಾಹಾದಿ ಸಮಾರಂಭಗಳಲ್ಲಿ ಗಾಯಕರನ್ನು ಕರೆಸಿ ಗಾಯನ ಮಾಡಿಸಿ ಸಮ್ಮಾನಿಸುವ ಪದ್ಧತಿಯು ಇಂದೂ ನಡೆಯುತ್ತಿದೆ. ಸೇವಕರನ್ನು ವೇತನಗಳಿಂದ ತೃಪ್ತಿಪಡಿಸುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ರಾಜನಿಗೆ ಕಾಣಿಕೆಗಳನ್ನು ಸಕಾಲದಲ್ಲಿ ಸಲ್ಲಿಸಬೇಕು. ಈಗಿನ ಕಾಲದಲ್ಲಿಯೂ ಸರ್ಕಾರಕ್ಕೆ ಸಲ್ಲಬೇಕಾದ ತೆರಿಗೆಗಳನ್ನು ಆಯಾ ಕಾಲಗಳಲ್ಲಿ ಸಲ್ಲಿಸಬೇಕು. ಸಲ್ಲಿಸದಿದ್ದರೆ ರಾಜದಂಡನೆಯಾಗುತ್ತದೆ. ಈ ಭಯದಿಂದಲೇ ನಾವು ತೆರಿಗೆಗಳನ್ನು ಸಲ್ಲಿಸಬೇಕಾಗಿದೆ. ರಾಜನು ಅಥವಾ ಸರ್ಕಾರವು ನಮ್ಮನ್ನು ದುಷ್ಟರಿಂದ ರಕ್ಷಿಸುವುದರಿಂದ ಸರ್ಕಾರವು ವಿಧಿಸುವ ತೆರಿಗೆಗಳನ್ನು ಕೊಡಬೇಕೆಂಬುದು ನ್ಯಾಯಬದ್ಧವಾದರೂ ದಂಡನೆಯ ಭಯವಿಲ್ಲದಿದ್ದರೆ ತೆರಿಗೆಯ ಸಂಗ್ರಹವು ಸುಗಮವಾಗುವುದಿಲ್ಲ.

ಯಕ್ಷನು ಮುಂದುವರಿದು ಪ್ರಶ್ನಿಸುತ್ತಾನೆ :

**ಕೇನಸ್ವಿದಾವೃತೋ ಲೋಕಃ ಕೇನಸ್ವಿನ್ನ ಪ್ರಕಾಶತೇ ।**
**ಕೇನ ತ್ಯಜತಿ ಮಿತ್ರಾಣಿ ಕೇನ ಸ್ವರ್ಗಂ ನ ಗಚ್ಛತಿ ॥೮೧॥**

"ಲೋಕವು ಯಾವುದರಿಂದ ಆವೃತವಾಗಿದೆ? ಯಾವ ಕಾರಣದಿಂದ ಅದು ಪ್ರಕಾಶಿಸುವುದಿಲ್ಲ? ಯಾವ ನಿಮಿತ್ತದಿಂದ ಮನುಷ್ಯನು ತನ್ನ ಮಿತ್ರರನ್ನು ತ್ಯಜಿಸುತ್ತಾನೆ? ಯಾವ ನಿಮಿತ್ತದಿಂದ ಸ್ವರ್ಗವನ್ನು ಸೇರುವುದಿಲ್ಲ?"

ಇದಕ್ಕೆ ಧರ್ಮಜನ ಉತ್ತರ :

**ಅಜ್ಞಾನೇನಾವೃತೋ ಲೋಕಸ್ತಮಸಾ ನ ಪ್ರಕಾಶತೇ ।**
**ಲೋಭಾತ್ತ್ಯಜತಿ ಮಿತ್ರಾಣಿ ಸಂಗಾತ್ಸ್ವರ್ಗಂ ನ ಗಚ್ಛತಿ ॥೮೨॥**

"ಲೋಕವು ಅಜ್ಞಾನದಿಂದ ಆವೃತವಾಗಿದೆ. ಕತ್ತಲೆಯಿಂದ ಅದು ಪ್ರಕಾಶಿಸುವುದಿಲ್ಲ. ಮಾನವನು ಲೋಭದಿಂದ ಮಿತ್ರರನ್ನು ತ್ಯಜಿಸುತ್ತಾನೆ. ಸಂಗದಿಂದ ಸ್ವರ್ಗವನ್ನು ಸೇರುವುದಿಲ್ಲ."

ಮನುಷ್ಯನು ಅಜ್ಞಾನದಿಂದ ಆವೃತನಾಗಿದ್ದಾನೆ–ಎಂಬುದು ಯಥಾರ್ಥವಾಗಿದೆ. ಅಜ್ಞಾನದ ಆವರಣವು ಮನುಷ್ಯನ ಶರೀರಕ್ಕಿರಲು ಸಾಧ್ಯವಿಲ್ಲ. ಮನುಷ್ಯನಲ್ಲಿರುವ ಚೈತನ್ಯವು ಅಜ್ಞಾನದಿಂದ ಆವೃತವಾಗಿದೆ.

ಇದನ್ನು ಗೀತೆಯಲ್ಲಿ ಹೀಗೆ ಹೇಳಿದೆ :

**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ।**

ಜ್ಞಾನವು ಅಜ್ಞಾನದಿಂದ ಅಥವಾ ಅವಿದ್ಯೆಯಿಂದ ಅಥವಾ ಮಾಯೆಯಿಂದ ಆವೃತವಾಗಿರುವುದರಿಂದ ಮನುಷ್ಯರು ಮೋಹಗೊಳ್ಳುತ್ತಾರೆ. ಜನರು ಸ್ಥೂಲ-ಸೂಕ್ಷ್ಮ ಶರೀರಗಳನ್ನೇ ಆತ್ಮನೆಂದು ಭ್ರಮಿಸಿದ್ದಾರೆ. ಯದ್ಯಪಿ ಆತ್ಮನು ಸ್ವಯಂಪ್ರಕಾಶವಿರುವವನು. ತಥಾಪಿ ತಮಸ್ಸಿನ ಅಥವಾ ಅಜ್ಞಾನದ ಆವರಣವಿರುವುದರಿಂದ ಪ್ರಕಾಶಿಸುತ್ತಿಲ್ಲ. ದೇಹಾತ್ಮಭಾವವಿರುವವರೆಗೂ ಆತ್ಮನು ಅಗೋಚರನಾಗಿಯೇ ಇರುತ್ತಾನೆ.

ಧನದ ಆಸೆಯು ಹೆಚ್ಚಿದಂತೆ ಮಾನವನು ಬಂಧು-ಮಿತ್ರರನ್ನೂ ಪರಿತ್ಯಜಿಸುವನೆಂಬುದು ನಿಶ್ಚಯ. ಆಧ್ಯಾತ್ಮಿಕಪರ್ಯಾಯದಲ್ಲಿ: ಆತ್ಮಸಾಕ್ಷಾತ್ಕಾರಕ್ಕೆ ಶಮ-ದಮಾದಿಗಳೇ ಮನುಷ್ಯನಿಗೆ ಮಿತ್ರರಾಗುತ್ತಾರೆ. ಶಮ-ದಮಾದಿಗಳ ಸಾಧನೆಯು ಆತ್ಮಸಾಕ್ಷಾತ್ಕಾರಕ್ಕೆ ಮಾರ್ಗಮಾಡಿಕೊಡುತ್ತದೆ. ಲೋಭಿಯಾದವನಿಗೆ ಇಂದ್ರಿಯಗಳನ್ನು ಜಯಿಸುವ ಮತ್ತು ಮನಸ್ಸನ್ನು ನಿಯಮನಮಾಡುವ ಸಾಧ್ಯತೆಯಿಲ್ಲ. ಆದುದರಿಂದ ಲೋಭಿಯು ಆತ್ಮಸಾಕ್ಷಾತ್ಕಾರಕ್ಕೆ ಮಾರ್ಗದರ್ಶಿಗಳಾದ ಶಮ-ದಮಾದಿ ಮಿತ್ರರನ್ನು ಪರಿತ್ಯಜಿಸುತ್ತಾನೆ. ಸಂಗವೆಂದರೆ ಸಂಸಾರದ ಮೇಲಿನ ಆಸಕ್ತಿ, ಸಂಸಾರದ ಮೇಲೆ ಆಸಕ್ತಿಯಿರುವವನಿಗೆ ಸ್ವರ್ಗವಾಗಲೀ ಮೋಕ್ಷವಾಗಲೀ ಲಭಿಸುವುದಿಲ್ಲ.

ಸಂಗದ ವಿಷಯವಾಗಿ ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ :

**ಧ್ಯಾಯತೋ ವಿಷಯಾನ್ಪುಂಸಃ ಸಙ್ಗಸ್ತೇಷೂಪಜಾಯತೇ ।**
**ಸಙ್ಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ॥**

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥**

ಅಧ್ಯಾಯ ೨, ಶ್ಲೋಕ ೬೨ - ೬೩

ಇಂದ್ರಿಯಗಳು ಆಶಿಸಿದ ವಸ್ತುಗಳ ಮೇಲೆ ಮನಸ್ಸನ್ನು ಹರಿಸುವುದರಿಂದ ಆ ವಸ್ತುಗಳ ಸಂಗವುಂಟಾಗುತ್ತದೆ. ಮನಸ್ಸಿನೊಳಗೆ ಆ ವಸ್ತುವು ಹೊಕ್ಕೊಡನೆಯೇ ಅದನ್ನು ಪಡೆದುಕೊಳ್ಳಬೇಕೆಂಬ ಆಶೆಯುಂಟಾಗುತ್ತದೆ. ಆ ಆಶೆಗೇನಾದರೂ ವಿಘಾತವು ಸಂಭವಿಸಿದಲ್ಲಿ ಕ್ರೋಧವುಂಟಾಗುತ್ತದೆ. ವಸ್ತುವನ್ನು ಪಡೆಯಬೇಕೆಂಬ ಆಶೆಯೂ ಉತ್ಕಟವಾಗುತ್ತದೆ. ಮನುಷ್ಯನು ಭ್ರಾಂತನಾಗುತ್ತಾನೆ. ಅವನ ಸ್ಮರಣಶಕ್ತಿಯು ಕುಗ್ಗಿಹೋಗುತ್ತದೆ. ಅದರಿಂದಾಗಿ ಬುದ್ಧಿಹೀನನಾಗುತ್ತಾನೆ. ಕಡೆಯದಾಗಿ ವಿನಾಶವನ್ನೂ ಹೊಂದುತ್ತಾನೆ. ಆದುದರಿಂದ ಪ್ರಾಪಂಚಿಕವ್ಯವಹಾರದಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸುವವನಿಗೆ ಮೋಕ್ಷದ ಪ್ರಾಪ್ತಿಯಿಲ್ಲ. ಸಂಸಾರದಲ್ಲಿ ನಿಸ್ಸಂಗನಾಗಿದ್ದರೂ ಸತ್ಸಂಗಮಾಡಬೇಕೆಂದು ಶಂಕರಭಗವತ್ಪಾದರು ಹೇಳುತ್ತಾರೆ. ಇದಕ್ಕೆ

ಕಾರಣವೇನೆಂದರೆ ಸಾಂಸಾರಿಕರ ಸಂಗವು ವಿನಾಶಕ್ಕೆಡೆಕೊಟ್ಟರೆ ಸತ್ಪುರುಷರ ಸಂಗವು ಸಂಸಾರದಿಂದ ನಿವೃತ್ತಿಯನ್ನು ಪಡೆಯಲು ಸಾಧಕವಾಗುತ್ತದೆ. ಸತ್ಪುರುಷರು ಯಾವಾಗಲೂ ಅಧ್ಯಾತ್ಮಚಿಂತನೆಯಲ್ಲಿಯೇ ಇರುತ್ತಾರೆ. ಅವರ ಸಹವಾಸಮಾಡಿದರೆ ಅಧ್ಯಾತ್ಮಚಿಂತನೆಯ ಫಲವು ನಮಗೂ ಲಭಿಸುತ್ತದೆ.

**ಸತ್ಸಙ್ಗತ್ವೇ ನಿಃಸಙ್ಗತ್ವಂ ನಿಃಸಙ್ಗತ್ವೇ ನಿರ್ಮೋಹತ್ವಮ್ ।**
**ನಿರ್ಮೋಹತ್ವೇ ನಿಶ್ಚಲತತ್ತ್ವಂ ನಿಶ್ಚಲತತ್ತ್ವೇ ಜೀವನ್ಮುಕ್ತಿಃ ॥**

ಸತ್ಪುರುಷರ ಸಹವಾಸದಿಂದ ವಿಷಯೋಪಭೋಗವಸ್ತುಗಳ ಸಂಬಂಧವು ಕಡಿದುಹೋಗುತ್ತದೆ. ವಿಷಯಸಂಗವಿವರ್ಜನೆಯಿಂದಾಗಿ ಮೋಹವೆಂಬ ಆವರಣವು ಕಳಚಿಬೀಳುತ್ತದೆ. ಮೋಹವು ಹೋದೊಡನೆಯೇ ತತ್ತ್ವಜ್ಞಾನವುಂಟಾಗುತ್ತದೆ. ತತ್ತ್ವಜ್ಞಾನವಾದೊಡನೆಯೇ ಜೀವನ್ಮುಕ್ತಿಯು ಲಭ್ಯವಾಗುತ್ತದೆ. ಆದುದರಿಂದ ಜೀವನ್ಮುಕ್ತಿಗೆ ಸತ್ಸಂಗವೇ ಮೂಲ.

ಆದುದರಿಂದ ಸಂಗದೋಷವನ್ನು ಕಳೆದುಕೊಳ್ಳಬೇಕಾದರೆ ಸತ್ಸಂಗವನ್ನು ಮಾಡಬೇಕು.

ಯಕ್ಷನ ಮುಂದಿನ ಪ್ರಶ್ನೆಗಳು :

**ಮೃತಃ ಕಥಂ ಸ್ಯಾತ್ಪುರುಷಃ ಕಥಂ ರಾಷ್ಟ್ರಂ ಮೃತಂ ಭವೇತ್ ।**
**ಶ್ರಾದ್ಧಂ ಮೃತಂ ಕಥಂ ವಾ ಸ್ಯಾತ್ಕಥಂ ಯಜ್ಞೋ ಮೃತೋ ಭವೇತ್ ॥೮೩॥**

"ಪುರುಷನು ಮೃತನಾಗುವುದು ಹೇಗೆ? ರಾಷ್ಟ್ರವು ಮೃತವಾಗುವುದು ಹೇಗೇ? ಶ್ರಾದ್ಧವು ನಷ್ಟವಾಗುವುದು ಹೇಗೆ? ಯಜ್ಞವು ನಷ್ಟವಾಗುವುದು ಹೇಗೆ?"

ಯುಧಿಷ್ಠಿರನು ಉತ್ತರಿಸುತ್ತಾನೆ :

**ಮೃತೋ ದರಿದ್ರಃ ಪುರುಷೋ ಮೃತಂ ರಾಷ್ಟ್ರಮರಾಜಕಮ್ ।**
**ಮೃತಮಶ್ರೋತ್ರಿಯಂ ಶ್ರಾದ್ಧಂ ಮೃತೋ ಯಜ್ಞಸ್ತ್ವದಕ್ಷಿಣಃ ॥೮೪॥**

"ಪುರುಷನು ದರಿದ್ರನಾದರೆ ಮೃತಪ್ರಾಯನಾಗುವನು. ರಾಜನಿಲ್ಲದಿದ್ದರೆ ರಾಷ್ಟ್ರವು ಮೃತವಾಗುವುದು. ಶ್ರೋತ್ರಿಯನಿಲ್ಲದಿದ್ದರೆ ಶ್ರಾದ್ಧವು ನಷ್ಟವಾಗುವುದು. ದಕ್ಷಿಣೆಯಿಲ್ಲದಿದ್ದರೆ ಯಜ್ಞವು ನಷ್ಟವಾಗುವುದು."

ದರಿದ್ರನಾದವನು ಬದುಕಿದ್ದರೂ ಮೃತಪ್ರಾಯನಂತಿರುವನೆಂಬುದು ಅನುಭವೈಕವೇದ್ಯವಾದುದು. ಧನಹೀನನಾದವನನ್ನು ತಾಯಿ-ತಂದೆಗಳೂ ಪ್ರೀತಿಸುವುದಿಲ್ಲ. ಮಕ್ಕಳೂ ಗೌರವಿಸುವುದಿಲ್ಲ. ಪತ್ನಿಯೂ ತಿರಸ್ಕರಿಸು ತ್ತಾಳೆ. ಸಮಾಜದಲ್ಲಿ ಅವನಿಗೆ ಸ್ಥಾನ-ಮಾನಗಳಿರುವುದಿಲ್ಲ. ಬಡವನಾದವ ನನ್ನು ಎಲ್ಲರೂ ಅಸ್ಪೃಶ್ಯನಂತೆಯೇ ಕಾಣುತ್ತಾರೆ. ದರಿದ್ರನಾದವನಿಗೆ ಅನೇಕ ಸಮಯಗಳಲ್ಲಿ ಬದುಕಿದ್ದು ಸತ್ತವನಂತಿರುವುದಕ್ಕಿಂತಲೂ ಸತ್ತುಹೋಗು ವುದೇ ಲೇಸೆನಿಸುತ್ತದೆ.

ರಾಜನಿಲ್ಲದಿದ್ದರೆ ರಾಷ್ಟ್ರವು ಮೃತವಾಗುವುದು. ಪ್ರಜಾಪ್ರಭುತ್ವದಲ್ಲಿ ಸುಭದ್ರವಾದ ಸರ್ಕಾರವಿಲ್ಲದಿದ್ದರೆ ರಾಷ್ಟ್ರವು ಮೃತವಾದಂತೆ–ಎಂದು ಅರ್ಥ ಮಾಡಬೇಕಾಗಿದೆ. ಸುಭದ್ರವಾದ ಸರ್ಕಾರವಿಲ್ಲದಿದ್ದರೆ ದೇಶದಲ್ಲಿ ಅನಾಯ ಕತ್ವವುಂಟಾಗಿ ಕಳ್ಳ-ಕಾಕರ ಭಯವು ಹೆಚ್ಚುತ್ತದೆ. ಜನಸಾಮಾನ್ಯರಿಗೆ ದೈನಂದಿನಜೀವನವೇ ದುಃಸಹವಾಗುತ್ತದೆ. ದೇಶವು ಅರಾಜಕವಾದಾಗ ಆಗುವ ದುಷ್ಪರಿಣಾಮಗಳೆಲ್ಲವನ್ನೂ ವಿವರಿಸಿ ಕಡೆಯಲ್ಲಿ ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ಹೀಗೆ ಹೇಳಿದೆ :

**ಅಹೋ ತಮ ಇವೇದಂ ಸ್ಯಾನ್ನ ಪ್ರಜಾಯೇತ ಕಿಂಚನ ।**
**ರಾಜಾ ಚೇನ್ನ ಭವೇಲ್ಲೋಕೇ ವಿಭಜನ್ಸಾಧ್ವಸಾಧುನೀ ॥**

ಸಾಧುವಾದ ಕಾರ್ಯವು ಯಾವುದು? ಅಸಾಧುವಾದ ಕಾರ್ಯವು ಯಾವುದು?–ಎಂಬುದನ್ನು ವಿವೇಚಿಸಿ ವ್ಯವಹರಿಸುವ ರಾಜನೇ ಈ ಲೋಕ ದಲ್ಲಿರದಿದ್ದರೆ–ಪ್ರಪಂಚವು ಸೂರ್ಯನಿಲ್ಲದೇ ಗಾಢಾಂಧಕಾರದಲ್ಲಿ ಮುಚ್ಚಿ ಹೋಗುವಂತೆ–ರಾಜನೆಂಬ ಸೂರ್ಯನಿಲ್ಲದೇ ಈ ಲೋಕವು ಅಜ್ಞಾನಾಂಧ ಕಾರದಲ್ಲಿ ಮುಳುಗಿಯೇ ಹೋಗುತ್ತಿದ್ದಿತು. ಒಬ್ಬನಿಗಾದರೂ ಕರ್ತವ್ಯಾ ಕರ್ತವ್ಯವಿವೇಚನೆಯೇ ಇರುತ್ತಿರಲಿಲ್ಲ.

ಆದುದರಿಂದ ರಾಜನಿಲ್ಲದಿದ್ದರೆ ಅಥವಾ ಸುಭದ್ರಸರ್ಕಾರವಿಲ್ಲದಿದ್ದರೆ ರಾಷ್ಟ್ರಕ್ಕೆ ಅಪಾರವಾದ ಹಾನಿಯುಂಟಾಗುವುದು.

ಈಗಿನ ಕಾಲದಲ್ಲಿ ಸಂಧ್ಯಾದಿಕರ್ಮಗಳನ್ನು ಅನೇಕರು ಬಿಟ್ಟಿದ್ದರೂ ಸಾಂವತ್ಸರಿಕವಾದ ಪಿತೃ-ಮಾತೃಶ್ರಾದ್ಧಗಳನ್ನು ಪ್ರಾಯಶಃ ಎಲ್ಲರೂ ತಪ್ಪದೇ ಮಾಡುತ್ತಾರೆ. ಶ್ರದ್ಧೆಯಿಂದ ಮಾಡುವ ಕಾರ್ಯಕ್ಕೆ ಶ್ರಾದ್ಧವೆಂದು ಹೆಸರು. ಶ್ರಾದ್ಧಕ್ಕೆ ಶ್ರೋತ್ರಿಯರಾದ ಬ್ರಾಹ್ಮಣರನ್ನು ಆಹ್ವಾನಿಸಬೇಕೆಂಬ ನಿಯಮವಿದೆ. ಶ್ರೋತ್ರಿಯರಾದ ಬ್ರಾಹ್ಮಣರನ್ನು ಕರೆಯದೇ ಮಾಡುವ ಶ್ರಾದ್ಧವು ನಿಷ್ಪ್ರಯೋಜಕವೆಂದು ಯುಧಿಷ್ಠಿರನು ಉತ್ತರಿಸುತ್ತಾನೆ. ಇದೇ ವಿಷಯವಾಗಿ ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ :

**ಬ್ರಾಹ್ಮಣಸ್ತ್ವನಧೀಯಾನಸ್ತೃಣಾಗ್ನಿರಿವ ಶಾಮ್ಯತಿ ।**
**ತಸ್ಮೈ ಹವ್ಯಂ ನ ದಾತವ್ಯಂ ಸ ಚ ಭಸ್ಮನಿ ಹೂಯತೇ ॥**

ಅಧ್ಯಯನಮಾಡದಿರುವ ಬ್ರಾಹ್ಮಣನು ಹುಲ್ಲಿನಲ್ಲಿರುವ ಬೆಂಕಿಯಂತೆ ಬೇಗ ಉಪಶಮನಹೊಂದುತ್ತಾನೆ. (ಸತ್ವಹೀನನಾಗುತ್ತಾನೆ.) ಅಂತಹವನನ್ನು ಹವ್ಯ-ಕವ್ಯಾದಿಗಳಲ್ಲಿ ಆಹ್ವಾನಿಸಬಾರದು. ಅಂತಹವನನ್ನು ಆಹ್ವಾನಿಸಿದರೆ ಬೂದಿಯಲ್ಲಿ ಮಾಡಿದ ಹೋಮದಷ್ಟೇ ಪ್ರಯೋಜನವಾಗು ತ್ತದೆ.

**ಯಥೇರಿಣೇ ಬೀಜಮುಪ್ತ್ವಾ ನ ವಪ್ತಾ ಲಭತೇ ಫಲಮ್ ।**
**ತಥಾಽನೃಚೇ ಹವಿರ್ದತ್ವಾ ನ ದಾತಾ ಲಭತೇ ಫಲಮ್ ॥**

ಊಷರ (ಚೌಳು) ಭೂಮಿಯಲ್ಲಿ ಬೀಜಬಿತ್ತಿದವನು ಹೇಗೆ ಬೆಳೆಯನ್ನು ಪಡೆಯುವುದಿಲ್ಲವೋ–ಅದೇ ರೀತಿಯಲ್ಲಿ ವೇದಾಧ್ಯಯನಮಾಡದವನಿಗೆ ಹವಿರ್ದಾನಮಾಡುವುದರಿಂದ ಶ್ರಾದ್ಧಕರ್ತನು ಯಾವ ವಿಧವಾದ ಫಲವನ್ನೂ ಹೊಂದುವುದಿಲ್ಲ. ಫಲವಾಗದಿರುವುದು ಮಾತ್ರವಲ್ಲದೇ–ಅನಧೀತನಾದ ಬ್ರಾಹ್ಮಣನನ್ನು ಆಹ್ವಾನಿಸುವುದರಿಂದ ದುಷ್ಫಲವು ಪ್ರಾಪ್ತವಾಗುವುದೆಂದೂ ಮನುವು ಹೇಳುತ್ತಾನೆ.

ಆದರೆ ಈ ನಿಯಮವನ್ನೇ ಈಗ ಅನುಸರಿಸಬೇಕಾದಲ್ಲಿ ಯಾರೊ

ಬ್ಬರೂ ಶ್ರಾದ್ಧವನ್ನು ಮಾಡುವಂತೆಯೇ ಇಲ್ಲ. **ಯುಗರೂಪಾ ಹಿ ತೇ ದ್ವಿಜಾ**–ಎಂಬಂತೆ ಯುಗಾನುಸಾರವಾಗಿ ಬ್ರಾಹ್ಮಣರೂ ವ್ಯತ್ಯಾಸ ಹೊಂದುತ್ತಿರುವುದು ಅನಿವಾರ್ಯವೆಂದೇ ಭಾವಿಸಬೇಕಾಗಿದೆ.

**ಕಥಂ ಯಜ್ಞೋ ಮೃತೋ ಭವೇತ್** ಎಂಬ ಪ್ರಶ್ನೆಗೆ **ಮೃತೋ ಯಜ್ಞಸ್ತ್ವದಕ್ಷಿಣಃ**–ಎಂಬುದು ಧರ್ಮರಾಜನ ಉತ್ತರ. ದಕ್ಷಿಣೆಯನ್ನು ಕೊಡದಿರುವ ಯಜ್ಞವು ಮೃತಪ್ರಾಯವಾದುದು.

ಯಜ್ಞಮಾಡಲು ಋತ್ವಿಜರನ್ನು ಆಹ್ವಾನಿಸಬೇಕು. ಯಜ್ಞದ ಮಾಧ್ಯಂದಿನಸವನಾನಂತರದಲ್ಲಿ ಋತ್ವಿಜರಿಗೆ ಯಥಾಯೋಗ್ಯವಾಗಿ ದಕ್ಷಿಣೆ ಯನ್ನು ಕೊಡಬೇಕು. ಯಥಾಯೋಗ್ಯವಾದ ದಕ್ಷಿಣೆಯನ್ನು ಕೊಡುವ ಸಾಮರ್ಥ್ಯವಿಲ್ಲದಿದ್ದರೆ ಯಜ್ಞವನ್ನೇ ಮಾಡಬಾರದೆಂದೂ ಮನುವು ಹೇಳುತ್ತಾನೆ :

**ಪುಣ್ಯಾನ್ಯನ್ಯಾನಿ ಕುರ್ವೀತ ಶ್ರದ್ಧಧಾನೋ ಜಿತೇನ್ದ್ರಿಯಃ ।**
**ನ ತ್ವಲ್ಪದಕ್ಷಿಣೈರ್ಯಜ್ಞೈರ್ಯಜೇತೇಹ ಕಥಞ್ಚನ ॥**

ಜಿತೇಂದ್ರಿಯನಾದ ಶ್ರದ್ಧಾಳುವು ತೀರ್ಥಯಾತ್ರಾದಿ ಪುಣ್ಯಕಾರ್ಯ ಗಳನ್ನಾದರೂ ಮಾಡಬಹುದು. ಆದರೆ ಯಥಾಯೋಗ್ಯವಾದ ದಕ್ಷಿಣೆಯನ್ನು ಋತ್ವಿಜರಿಗೆ ಕೊಡಲಾರದೇ ಅಲ್ಪದಕ್ಷಿಣೆಯುಳ್ಳ ಯಜ್ಞಗಳನ್ನು ಮಾತ್ರ ಮಾಡಲೇಬಾರದು.

ದಕ್ಷಿಣೆಯನ್ನು ಕೊಡದಿರುವುದರಿಂದ ಅಥವಾ ಅಲ್ಪವಾದ ದಕ್ಷಿಣೆಯನ್ನು ಕೊಡುವುದರಿಂದ ಆಗುವ ಅನರ್ಥವನ್ನು ಮನುವು ಮುಂದಿನ ಎರಡು ಶ್ಲೋಕಗಳಲ್ಲಿ ವಿವರಿಸಿರುತ್ತಾನೆ :

**ಇನ್ದ್ರಿಯಾಣಿ ಯಶಃ ಸ್ವರ್ಗಮಾಯುಃ ಕೀರ್ತಿಂ ಪ್ರಜಾಃ ಪಶೂನ್ ।**
**ಹನ್ತ್ಯಲ್ಪದಕ್ಷಿಣೋ ಯಜ್ಞಸ್ತಸ್ಮಾನ್ನಾಲ್ಪಧನೋ ಯಜೇತ್ ॥**

ಇಂದ್ರಿಯ, ಯಶಸ್ಸು, ಸ್ವರ್ಗ, ಆಯುಸ್ಸು, ಕೀರ್ತಿ, ಮಕ್ಕಳು ಮತ್ತು ಪಶುಗಳು–ಇವುಗಳೆಲ್ಲವನ್ನೂ ಅಲ್ಪದಕ್ಷಿಣೆಯನ್ನು ಕೊಡುವ ಯಜ್ಞವು ವಿನಾಶಗೊಳಿಸುತ್ತದೆ. ಆದುದರಿಂದ ಸ್ವಲ್ಪವೇ ಐಶ್ವರ್ಯವಿರುವವನು ಶಕ್ತಿಗೆ ಮೀರಿದ ಯಜ್ಞಗಳನ್ನು ಮಾಡಬಾರದು.

**ಅನ್ನಹೀನೋ ದಹೇದ್ರಾಷ್ಟ್ರಂ ಮನ್ತ್ರಹೀನಸ್ತು ಋತ್ವಿಜಃ ।**
**ದೀಕ್ಷಿತಂ ದಕ್ಷಿಣಾಹೀನೋ ನಾಸ್ತಿ ಯಜ್ಞಸಮೋ ರಿಪುಃ ॥**

ಯಜ್ಞವನ್ನು ಸುವಿಹಿತವಾಗಿ ಆಚರಿಸಿದರೆ ಸಂಕಲ್ಪಿಸಿದ ಕಾಮನೆಗಳೆಲ್ಲವೂ ಲಭ್ಯವಾಗುವುದರಲ್ಲಿ ಸಂಶಯವಿಲ್ಲ. ಆದರೆ ದುಷ್ಟವಾದ ಯಜ್ಞವನ್ನು ಮಾಡಿದರೆ ಆ ಯಜ್ಞವು ಶತ್ರುಸಮವಾಗುವುದು (ಸರ್ವವಿನಾಶಕ್ಕೆ ಕಾರಣವಾಗುವುದು.) ಯಜ್ಞಕಾಲದಲ್ಲಿ ಯಥೇಚ್ಛವಾಗಿ ಅನ್ನದಾನ ಮಾಡಬೇಕು. ಅನ್ನದಾನವಿಲ್ಲದ ಯಜ್ಞವು ರಾಷ್ಟ್ರವನ್ನು ವಿನಾಶಗೊಳಿಸುತ್ತದೆ. ಮಂತ್ರಲೋಪವಾದಲ್ಲಿ ಋತ್ವಿಜರನ್ನು ವಿನಾಶಗೊಳಿಸುತ್ತದೆ. ಋತ್ವಿಜರಿಗೆ ದಕ್ಷಿಣೆಯನ್ನು ಕೊಡದಿದ್ದಲ್ಲಿ ಅಥವಾ ಅಲ್ಪದಕ್ಷಿಣೆಯನ್ನು ಕೊಟ್ಟಲ್ಲಿ ಯಜ್ಞದೀಕ್ಷಿತನನ್ನೇ ವಿನಾಶಗೊಳಿಸುತ್ತದೆ. ಆದುದರಿಂದ ಯಜ್ಞಕ್ಕೆ ಸಮಾನವಾದ ಶತ್ರುವೇ ಇಲ್ಲವೆಂಬ ಭಾವನೆಗೆ ಕಾರಣವಾಗುತ್ತದೆ.

ಯಜ್ಞಕ್ಕೂ ಮತ್ತು ದಕ್ಷಿಣೆಗೂ ಪತಿ-ಪತ್ನಿಯರ ಸಂಬಂಧವಿದೆ. **ಯಜ್ಞೋ ಗನ್ಧರ್ವಸ್ತಸ್ಯ ದಕ್ಷಿಣಾ ಅಪ್ಸರಸಃ** –ಎಂಬ ಶ್ರುತ್ಯುಕ್ತಿಯಂತೆ ಯಜ್ಞಪುರುಷನು ಗಂಧರ್ವನಾದರೆ ಯಜ್ಞದ ದಕ್ಷಿಣೆಗಳು ಅಪ್ಸರೆಯರಿದ್ದಂತೆ. ಯೋಗ್ಯವಾದ ದಕ್ಷಿಣೆಯನ್ನು ಕೊಡದಿದ್ದರೆ ಯಜ್ಞವು ಮೃತವಾದಂತೆ– ಎಂದು ಸರ್ವಸಮಂಜಸವಾದ ಉತ್ತರವನ್ನು ಯುಧಿಷ್ಠಿರನು ಕೊಟ್ಟಿರುತ್ತಾನೆ.

ಯಕ್ಷನ ಮುಂದಿನ ಪ್ರಶ್ನೆ :

**ಕಾ ದಿಕ್ಕಿಮುದಕಂ ಪ್ರೋಕ್ತಂ ಕಿಮನ್ನಂ ಕಿಂ ಚ ವೈ ವಿಷಮ್ ।**
**ಶ್ರಾದ್ಧಸ್ಯ ಕಾಲಮಾಖ್ಯಾಹಿ ತತಃ ಪಿಬ ಹರಸ್ವ ಚ ॥೮೫॥**

"ದಿಕ್ಕು ಯಾವುದು? ಜಲವು ಎಂತಹುದು? ಅನ್ನವು ಯಾವುದು? ವಿಷವಾವುದು? ಶ್ರಾದ್ಧಕ್ಕೆ ಯೋಗ್ಯಕಾಲವನ್ನು ಹೇಳು. ಅನಂತರ ನೀರನ್ನು ಕುಡಿ. ತೆಗೆದುಕೊಂಡೂ ಹೋಗು."

ಯುಧಿಷ್ಠಿರನ ಉತ್ತರ :

**ಸನ್ತೋ ದಿಗ್ಜಲಮಾಕಾಶಂ ಗೌರನ್ನಂ ಪ್ರಾರ್ಥನಾ ವಿಷಮ್ ।**
**ಶ್ರಾದ್ಧಸ್ಯ ಬ್ರಾಹ್ಮಣಃ ಕಾಲಃ ಕಥಂ ವಾ ಯಕ್ಷ ಮನ್ಯಸೇ ॥೮೬॥**

"ಸಜ್ಜನರೇ ದಿಕ್ಕು. ಆಕಾಶವೇ ಜಲ. ಹಸುವೇ ಅನ್ನ. ಪ್ರಾರ್ಥನೆಯೇ ವಿಷ. ಬ್ರಾಹ್ಮಣನೇ ಶ್ರಾದ್ಧಕ್ಕೆ ಕಾಲ. ಇದು ನನ್ನ ಅಭಿಪ್ರಾಯ ; ನಿನ್ನ ಅಭಿಮತ ವೇನು? ಯಕ್ಷ!"

ಮೋಕ್ಷಾರ್ಥಿಗೆ ಸತ್ಪುರುಷರೇ ದಿಕ್ಕು. ಸತ್ಪುರುಷರ ಸಹವಾಸದಿಂದ ನಿಸ್ಸಂಗವುಂಟಾಗುವುದೆಂಬ ವಿಷಯವನ್ನು ಈ ಹಿಂದೆಯೇ ವಿವರಿಸಲಾಗಿದೆ. ಶಂಕರಭಗವತ್ಪಾದರು ಮತ್ತೊಂದು ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ :

**ಗೇಯಂ ಗೀತಾನಾಮಸಹಸ್ರಂ**
**ಧ್ಯೇಯಂ ಶ್ರೀಪತಿರೂಪಮಜಸ್ರಮ್ ।**
**ನೇಯಂ ಸಜ್ಜನಸಂಗೇ ಚಿತ್ತಂ**
**ದೇಯಂ ದೀನಜನಾಯ ಚ ವಿತ್ತಮ್ ॥**

ಭಗವದ್ಗೀತೆಯನ್ನು ಬಾರಿ-ಬಾರಿಗೂ ಹಾಡುತ್ತಲೇ ಇರಬೇಕು. ವಿಷ್ಣು ಸಹಸ್ರನಾಮವನ್ನು ಜಪಿಸುತ್ತಲೇ ಇರಬೇಕು. ಯಾವಾಗಲೂ ಶ್ರೀಪತಿಯ ರೂಪವನ್ನು ಧ್ಯಾನಮಾಡುತ್ತಲೇ ಇರಬೇಕು. ಮನಸ್ಸನ್ನು ಸಜ್ಜನರ ಸಂಗಕ್ಕೆ ಒಯ್ಯಬೇಕು. (ಸಜ್ಜನರ ಸಂಗಮಾಡಬೇಕು.) ದೀನಜನರಿಗೆ ತನ್ನಲ್ಲಿರುವ ವಿತ್ತವನ್ನು ದಾನಮಾಡಬೇಕು.

ವಾಯು, ಅಗ್ನಿ, ಜಲ, ಪೃಥ್ವೀ–ಇವುಗಳೆಲ್ಲಕ್ಕೂ ಆಕಾಶವೇ ಮೂಲ ಸ್ಥಾನ. ಆದುದರಿಂದ ಜಲವೆಂದರೆ ಆಕಾಶವೂ ಆಗುತ್ತದೆ. **ಆಕಾಶಾದ್ವಾಯುಃ। ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ** ಪೃಥಿವೀ–ಎಂಬ ಉಪನಿಷದ್ವಾಕ್ಯಗಳೇ ಇದಕ್ಕೆ ಆಧಾರ. (ಆಕಾಶದಲ್ಲಿ ಮೋಡಗಳು ಒಟ್ಟುಗೂಡಿ ಮಳೆಸುರಿಸುವುದರಿಂದ ಆಕಾಶವನ್ನೇ ಉದಕವೆನ್ನಬಹುದು.)

**ಗೌರನ್ನಂ** ಎಂದರೆ ಗೋಸಂಬಂಧವಾದ ಹಾಲು, ಮೊಸರು, ತುಪ್ಪ ಇವುಗಳೇ ಮಾನವನಿಗೆ ಅತಿಶ್ರೇಷ್ಠವಾದ ಆಹಾರ. ದೇವತೆಗಳಿಗೂ ಹಸುವಿನ ತುಪ್ಪವು ಶ್ರೇಷ್ಠವಾದ ಹವ್ಯವೆನಿಸಿದೆ.

ಯಾಚನೆ ಅಥವಾ ಬೇಡಿಕೆಯೇ ವಿಷವೆಂದು ಧರ್ಮಜನ ಅಭಿಪ್ರಾಯ. ಯಾಚಕನು ಆತ್ಮಾಭಿಮಾನವನ್ನೂ ತೊರೆದು ಯಾಚನೆಮಾಡುತ್ತಾನೆ.

ಎಂದರೆ ಅವನು ಸಂನ್ಯಾಸಿಯಲ್ಲ. ಜೀವನ ಹೊರೆಯಲು ಅವನಿಗೆ ಇದು ದಾರಿ. ಮಾರುದ್ದದ ದೇಹವನ್ನು ಗೇಣುದ್ದ ಮಾಡಿಕೊಂಡು ಧನಿಕನನ್ನು ಯಾಚಿಸುತ್ತಾನೆ. ಧನಿಕನಾದರೋ ಈಗ ಬಾ, ಆಗ ಬಾ, ಹೋಗಿ ಬಾ– ಎಂದು ಹತ್ತಾರು ಬಾರಿ ಹೇಳಿದ ನಂತರದಲ್ಲಿ ಯತ್ಕಿಂಚಿದ್ದ್ರವ್ಯವನ್ನು ಕೊಟ್ಟರೂ ಕೊಡಬಹುದು ; ಬಿಟ್ಟರೂ ಬಿಡಬಹುದು.

ಈ ಕಾರಣದಿಂದಲೇ ಮಹಾಕವಿಯೊಬ್ಬನು ಹೀಗೆ ಹೇಳುತ್ತಾನೆ :

**ತೃಣಾದಪಿ ಲಘೂಸ್ತೂಲಸ್ತೂಲಾದಪಿ ಚ ಯಾಚಕಃ**

ಹುಲ್ಲಿಗಿಂತಲೂ ಹಗುರವಾದುದು ಹತ್ತಿ. ಹತ್ತಿಗಿಂತಲೂ ಹಗುರನಾದವನು ಯಾಚಕ. ಯಾಚನೆಯು ಅಥವಾ ಪ್ರಾರ್ಥನೆಯು ವಿಷರೂಪವೆಂದು ಧರ್ಮಜನ ಅಭಿಪ್ರಾಯ.

**ಶ್ರಾದ್ಧಸ್ಯ ಕಾಲಮಾಖ್ಯಾಹಿ**–ಎಂಬ ಯಕ್ಷನ ಪ್ರಶ್ನೆಗೆ ಯುಧಿಷ್ಠಿರನು **ಶ್ರಾದ್ಧಸ್ಯ ಬ್ರಾಹ್ಮಣಃ ಕಾಲಃ** –ಎಂದು ಉತ್ತರಿಸುತ್ತಾನೆ. ಶ್ರೋತ್ರಿಯನಾದ ಬ್ರಾಹ್ಮಣನು ಸಿಕ್ಕಿದಾಗಲೇ ಶ್ರಾದ್ಧಮಾಡಲು ಪ್ರಶಸ್ತವಾದ ಕಾಲವೆಂಬುದು ಯುಧಿಷ್ಠಿರನ ಅಭಿಪ್ರಾಯ.

ಆದರೆ ನಾವೀಗ ಮೃತತಿಥಿಯ ದಿನವೇ ಶ್ರಾದ್ಧಮಾಡಬೇಕೆಂಬ ಪದ್ಧತಿಯನ್ನಿಟ್ಟುಕೊಂಡಿರುತ್ತೇವೆ. ಯಾವುದಾದರೂ ಕಾರಣದಿಂದ ಅಂದು ಶ್ರಾದ್ಧಮಾಡದಿದ್ದರೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕಾಗುತ್ತದೆ. ಈ ವಿಧಾನವು ಇತರ ಧರ್ಮಶಾಸ್ತ್ರಗಳಿಗೆ ಅನುಸಾರವಾಗಿದೆಯೆಂದು ಭಾವಿಸಬಹುದಾಗಿದೆ. ಏಕೆಂದರೆ : ಮನುವೂ ಸಹ ಶ್ರಾದ್ಧಕಾಲವು ಯಾವುದೆಂಬುದನ್ನು ನಿರೂಪಿಸುತ್ತಾ ಹೀಗೆ ಹೇಳಿದ್ದಾನೆ :

**ಕೃಷ್ಣಪಕ್ಷೇ ದಶಮ್ಯಾದಿ ವರ್ಜಯಿತ್ವಾ ಚತುರ್ದಶೀಮ್ ।**
**ಶ್ರಾದ್ಧಪ್ರಶಸ್ತಾ ತಿಥಯೋ ತಥೈತಾ ನ ತಥೇತರಾಃ ॥**

ಕೃಷ್ಣಪಕ್ಷದಲ್ಲಿ ದಶಮಿಯೇ ಆದಿಯಾಗಿ ಚತುರ್ದಶಿಯನ್ನು ವರ್ಜಿಸಿ ಎಂದರೆ ದಶಮೀ, ಏಕಾದಶೀ, ದ್ವಾದಶೀ, ತ್ರಯೋದಶೀ ಮತ್ತು ಅಮಾವಾಸ್ಯೆಗಳು ಶ್ರಾದ್ಧಮಾಡಲು ಎಷ್ಟು ಶ್ರೇಷ್ಠವಾದುವುಗಳೋ ಉಳಿದ ತಿಥಿಗಳು ಅಷ್ಟು ಶ್ರೇಷ್ಠವಾದುವುಗಳಲ್ಲ.

ಆಪಸ್ತಂಬಗೃಹ್ಯಸೂತ್ರದಲ್ಲಿಯೂ–'**ಮಾಸಿಶ್ರಾದ್ಧಸ್ಯ ಅಪರಪಕ್ಷೇ ಯಥೋಪದೇಶಂ ಕಾಲಾಃ** –ಮಾಸಿಶ್ರಾದ್ಧಕ್ಕೆ ಕೃಷ್ಣಪಕ್ಷದಲ್ಲಿ ಯಥೋಪ ದಿಷ್ಟವಾದ ಕಾಲಗಳು ಹೇಳಲ್ಪಟ್ಟಿವೆ'–ಎಂದು ಹೇಳಿದ್ದಾರೆ. ಈಗಲೂ ಸಹ ಗಯೆಯಲ್ಲಿ ಮತ್ತು ಬ್ರಹ್ಮಕಪಾಲದಲ್ಲಿ ಹೋಗಿ ಪಿಂಡಪ್ರದಾನಮಾಡುವವರು ಸ್ಮೃತ್ಯುಕ್ತವಾದ ದಿನಗಳಲ್ಲಿಯೇ ಶ್ರಾದ್ಧವನ್ನು ಮಾಡುತ್ತಾರೆಯೇ ಹೊರತು ಸತ್ತದಿನದಂದೇ ಅಲ್ಲಿಗೆ ಹೋಗಿ ಮಾಡಲಾರರು. ಅರ್ಥಾತ್ ಮೃತತಿಥಿಯ ದಿನವಲ್ಲದೇ ಬೇರೆಯ ದಿನಗಳಲ್ಲಿಯೂ ಶ್ರಾದ್ಧಮಾಡುವ ಪದ್ಧತಿಯನ್ನು ನಾವೂ ಇಟ್ಟುಕೊಂಡಿದ್ದೇವೆ. ಆದರೆ ತೀರ್ಥಕ್ಷೇತ್ರಗಳಲ್ಲಿ ಯಾವಾಗಲಾದರೊಮ್ಮೆ ಶ್ರಾದ್ಧಮಾಡಿದರೂ ಸಾಂವತ್ಸರಿಕಶ್ರಾದ್ಧವನ್ನು ಮಾತ್ರ ಮೃತತಿಥಿಯಂದೇ ಮಾಡುತ್ತೇವೆ.

ವ್ಯಾಖ್ಯಾನಕಾರರು ಈ ಶ್ಲೋಕಕ್ಕೆ ಹೀಗೆ ವ್ಯಾಖ್ಯಾನಮಾಡಿದ್ದಾರೆ : **ಸನ್ತಃ** –ಎಂದರೆ ವೇದಪ್ರಮಾಣನಿಷ್ಠರಾದ ಸತ್ಪುರುಷರು, **ದಿಕ್ ದಿಶತಿ ಉಪದಿಶತೀತಿ–ದಿಕ್**-ಉಪದೇಶಮಾಡಲು ಅಥವಾ ಗುರುಗಳಾಗಲು ಅರ್ಹರು. ಜಲವೆಂಬುದಕ್ಕೆ ವ್ಯಾಖ್ಯಾನಕಾರರು ಪರ್ಯಾಯಾಂತರವಾಗಿ ವ್ಯಷ್ಟಿ-ಸಮಷ್ಟಿರೂಪವಾದ ಜೀವವೆಂದು ಅರ್ಥಮಾಡಿದ್ದಾರೆ. ಆಕಾಶವೆಂದರೆ ಬ್ರಹ್ಮ. **ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ** ಬ್ರಹ್ಮನಿಂದ ಆಕಾಶವು ಉತ್ಪತ್ತಿಯಾಗಿದೆ. ಆದುದರಿಂದ ಆಕಾಶವೆಂದರೆ ಈಶ್ವರ. ಜೀವಬ್ರಹ್ಮರ ಐಕ್ಯವೇ ಇಲ್ಲಿ ಮುಖ್ಯಪ್ರಮೇಯ. **ಗೌಃ** ಎಂದರೆ ಇಂದ್ರಿಯಗಳು. ಇವುಗಳನ್ನೇ ಅನ್ನವಾಗಿ ಕಲ್ಪಿಸಿಕೊಳ್ಳಬೇಕು. ಎಂದರೆ ಬ್ರಹ್ಮವಸ್ತುವಿನಲ್ಲಿ ಇಂದ್ರಿಯಗಳು ಕರಗಿಹೋಗುವಂತೆ ವಿಲೀನಗೊಳಿಸಬೇಕು. ಪ್ರಾರ್ಥನೆಯೆಂದರೆ ಕಾಮ. ಕಾಮವು ಜನನ-ಮರಣಹೇತುವಾದುದರಿಂದ ವಿಷಕ್ಕೆ ಸಮಾನವಾದುದು. ಕಾಮದ ವಿಷಯವಾಗಿ ಗೀತೆಯಲ್ಲಿ ಹೀಗೆ ಹೇಳಿದೆ :

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥**

ಮಹಾಶನಃ–ಬಹಳವಾಗಿ, ಅತಿಯಾಗಿ ತಿನ್ನುವ ಎಂದರೆ–ಎಂದಿಗೂ ತೀರದ ಹಸಿವೆಯಿಂದ ಕೂಡಿರುವ ಕಾಮ, ಪರಹಿಂಸೆಯಲ್ಲಿ ಪರಿಣಾಮ ಹೊಂದುವ ಮಹಾಪಾಪಿಯಾದ ಕ್ರೋಧ–ಇವೆರಡೂ ರಜೋಗುಣಸಮುದ್ಭವಗಳು. ಇವುಗಳನ್ನೇ ಮನುಷ್ಯನ ವೈರಿಗಳೆಂದು ತಿಳಿಯುವವನಾಗು.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನ ಚ ॥**

ಜ್ಞಾನಿಗಳಿಗೂ ನಿತ್ಯವೈರಿಯಾದ, ಬಹಳ ಕಷ್ಟದಿಂದ ತೃಪ್ತವಾಗುವ, ಕಾಮರೂಪವಾದ ಅಗ್ನಿಯಿಂದ ಜ್ಞಾನವು ಆವೃತವಾಗಿದೆ.

ಶ್ರದ್ಧೆಯಿಂದ ಸಾಧಿಸಬೇಕಾದುದು ಶ್ರಾದ್ಧ ಅಥವಾ ಆತ್ಮಜ್ಞಾನ. ಆತ್ಮಜ್ಞಾನದ ಸಾಧನೆಗೆ ಬ್ರಹ್ಮಜ್ಞನಾದ ಬ್ರಾಹ್ಮಣನ ಆಗಮನವೇ ಸುಸಮಯ. ಅರ್ಥಾತ್ ಸದ್ಗುರುವು ಆಗಮಿಸಿದಾಗ ಬ್ರಹ್ಮಜ್ಞಾನದ ಉಪದೇಶವನ್ನು ಪಡೆಯಬೇಕು.

ಯಕ್ಷನ ಮುಂದಿನ ಪ್ರಶ್ನೆ :

**ತಪಃ ಕಿಂಲಕ್ಷಣಂ ಪ್ರೋಕ್ತಂ ಕೋ ದಮಶ್ಚ ಪ್ರಕೀರ್ತಿತಃ ।**
**ಕ್ಷಮಾ ಚ ಕಾ ಪರಾ ಪ್ರೋಕ್ತಾ ಕಾ ಚ ಹ್ರೀಃ ಪರಿಕೀರ್ತಿತಾ ॥೮೭॥**

"ತಪಸ್ಸಿನ ಲಕ್ಷಣವೇನು? ದಮವೆಂದರೆ ಯಾವುದು? ಉತ್ತಮವಾದ ಕ್ಷಮೆ ಎಂದರೆ ಯಾವುದು? ಲಜ್ಜೆಯೆಂದರೇನು?"

ಇದಕ್ಕೆ ಧರ್ಮಜನ ಉತ್ತರ :

**ತಪಃ ಸ್ವಧರ್ಮವರ್ತಿತ್ವಂ ಮನಸೋ ದಮನಂ ದಮಃ ।**
**ಕ್ಷಮಾ ದ್ವನ್ದ್ವಸಹಿಷ್ಣುತ್ವಂ ಹ್ರೀರಕಾರ್ಯನಿವರ್ತನಮ್ ॥೮೮॥**

"ಸ್ವಧರ್ಮಾಚರಣೆಯೇ ತಪಸ್ಸು. ಮನಸ್ಸನ್ನು ತಡೆಹಿಡಿಯುವುದೇ ದಮ. ಶೀತೋಷ್ಣಾದಿ ದ್ವಂದ್ವಗಳನ್ನು ಸಹಿಸುವುದೇ ಕ್ಷಮೆ. ಕೆಟ್ಟ ಕೆಲಸದಿಂದ ಹಿಂಜರಿಯುವುದೇ ಲಜ್ಜೆ."

ಯಕ್ಷನು ಕೇಳುವ ತಪಸ್ಸಿನ ಲಕ್ಷಣವೇನೆಂಬ ಪ್ರಶ್ನೆಗೆ ಯುಧಿಷ್ಠಿರನ

ಉತ್ತರ : 'ಸ್ವಧರ್ಮವರ್ತಿಯಾಗಿರುವುದೇ ತಪಸ್ಸು'. ಸ್ವಧರ್ಮವೆಂದರೆ ವರ್ಣಾಶ್ರಮಧರ್ಮಗಳು. ಜನ್ಮಪ್ರಾಪ್ತವಾದ ವರ್ಣಧರ್ಮದಲ್ಲಿರುವುದೇ ತಪಸ್ಸೆಂಬ ಅಭಿಪ್ರಾಯ. ಶ್ರೀಕೃಷ್ಣನು ಗೀತೆಯಲ್ಲಿ ಇದನ್ನೇ ಹೇಳಿದ್ದಾನೆ :

**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ।**

ಸ್ವಧರ್ಮದಲ್ಲಿಯೇ ಇದ್ದು ಅದರಿಂದ ಒಂದು ವೇಳೆ ಮರಣ ಹೊಂದುವ ಸಂದರ್ಭವೊದಗಿದರೂ–ಅದು ಶ್ರೇಯಸ್ಕರವೇ ಸರಿ. ಆದರೆ ಪರಧರ್ಮವನ್ನೆಂದಿಗೂ ಅವಲಂಬಿಸಕೂಡದು. ಪರಧರ್ಮವನ್ನು ಅವಲಂಬಿಸುವುದು ಮರಣಕ್ಕಿಂತಲೂ ಭಯಾನಕವಾದುದು.

ಸ್ವಧರ್ಮವೆಂದರೆ ಆತ್ಮಧರ್ಮವೂ ಆಗುತ್ತದೆ. ಆತ್ಮಧರ್ಮದಲ್ಲಿ ಅಥವಾ ಆತ್ಮಾನುಸಂಧಾನದಲ್ಲಿರುವುದೇ ಮಹಾತಪಸ್ಸೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆತ್ಮಾನುಸಂಧಾನಕ್ಕೆ ಬಹುಮುಖ್ಯವಾಗಿರಬೇಕಾದುದು ಮನಸ್ಸಿನ ದಮನ. ದಮಶಬ್ದಕ್ಕೆ ಪಳಗಿಸುವುದು ಎಂದರ್ಥವಾದರೂ ಮನಸ್ಸನ್ನು ಜಯಿಸುವುದು–ಎಂಬ ಅರ್ಥವೇ ರೂಢಿಯಲ್ಲಿ ಬಂದಿದೆ. ಅದನ್ನೇ ಧರ್ಮಜನೂ–**ಮನಸೋ ದಮನಂ ದಮಃ** –ಎಂದು ಸ್ಪಷ್ಟವಾಗಿ ಹೇಳಿರುತ್ತಾನೆ.

**ನಿಗ್ರಹೋ ಬಾಹ್ಯವೃತ್ತೀನಾಂ ದಮ ಇತ್ಯಭಿಧೀಯತೇ ।**

ಮನಸ್ಸಿನ ಬಾಹ್ಯಪ್ರವೃತ್ತಿಯನ್ನು ನಿಗ್ರಹಿಸುವುದಕ್ಕೆ ದಮವೆಂದು ಹೆಸರು.

**ಕುತ್ಸಿತಾತ್ಕರ್ಮಣೋ ವಿಪ್ರ ಯಚ್ಚ ಚಿತ್ತನಿವಾರಣಮ್ ।**
**ಸ ಕೀರ್ತಿತೋ ದಮ ಇತಿ......**

ಕುತ್ಸಿತವಾದ ಕರ್ಮದಿಂದ ಚಿತ್ತವನ್ನು ಯಾವುದು ಪರಾಙ್ಮುಖಗೊಳಿಸುವುದೋ ಅದಕ್ಕೆ ದಮವೆಂದು ಹೆಸರು. ಆತ್ಮಾನುಸಂಧಾನಕ್ಕೆ ಮನಸ್ಸಿನ ದಮನವು ಬಹುಮುಖ್ಯವಾದುದು.

ಮನೋನಿಗ್ರಹದಿಂದ ಅಥವಾ ಮನಸ್ಸಿನ ದಮನದಿಂದ ಪ್ರಾಪ್ತವಾಗುವ ಮುಖ್ಯಗುಣವೆಂದರೆ ಕ್ಷಮೆ. ಕ್ಷಮೆಯ ಲಕ್ಷಣ ದ್ವಂದ್ವಸಹಿಷ್ಣುತ್ವ.

ಶೀತ-ಉಷ್ಣ, ಸುಖ-ದುಃಖ, ಲಾಭ-ಅಲಾಭ, ಜಯ-ಅಪಜಯ, ಮಾನ-ಅಪಮಾನ, ಇವುಗಳಿಗೆ ದ್ವಂದ್ವಗಳೆಂದು ಹೆಸರು. ಇವುಗಳ ಸಹಿಷ್ಣುತೆಯೆಂದರೆ ಎರಡನ್ನೂ ಸಾಮರಸ್ಯವಾಗಿ ಪರಿಗ್ರಹಿಸುವುದು. ಮಾನವನು ಶೀತಕಾಲದಲ್ಲಿ ನಡುಗುತ್ತಾನೆ. ಶೀತಕಾಲವು ಮುಗಿದುಹೋದರೆ ಸಾಕೆನ್ನುತ್ತಾನೆ. ಬೇಸಿಗೆಕಾಲವು ಬಂದರೆ ಬಿಸಿಲಿನ ಬೇಗೆಯಿಂದ ಸೊರಗಿಹೋಗುತ್ತಾನೆ. ಇವೆರಡನ್ನೂ ಒಂದೇ ಎಂದು ಭಾವಿಸಬೇಕಾದರೆ ದೇಹಾಭಿಮಾನವನ್ನು ಸಂಪೂರ್ಣವಾಗಿ ತೊರೆಯಬೇಕು. ಇದರ ಅಭ್ಯಾಸಕ್ಕಾಗಿ ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ಕುಳಿತು ತಪಸ್ಸನ್ನೂ, ಚಳಿಗಾಲದಲ್ಲಿ ಕೊರೆಯುವ ನೀರಿನಲ್ಲಿ ನಿಂತು ತಪಸ್ಸನ್ನೂ ಜಿತೇಂದ್ರಿಯರಾದವರು ಮಾಡುತ್ತಾರೆ.

ಸುಖ-ದುಃಖದ್ವಂದ್ವದಲ್ಲಿಯೂ ಇದೇ ರೀತಿಯಾಗಿ ವರ್ತಿಸಬೇಕು. ಸುಖವು ಬಂದರೆ ಹಿಗ್ಗಬಾರದು ; ದುಃಖವು ಬಂದರೆ ಕುಗ್ಗಬಾರದು. ಸುಖ-ದುಃಖಗಳು ಹಗಲು-ರಾತ್ರಿಗಳಂತೆ ಒಂದಾದರ ಮೇಲೊಂದು ಬರುತ್ತಲೇ ಇರುತ್ತವೆ. ಇವುಗಳು ಐಶ್ವರ್ಯವಂತರನ್ನೂ ಬಿಡುವುದಿಲ್ಲ. ರಾಜಾಧಿರಾಜರನ್ನೂ ಬಿಡುವುದಿಲ್ಲ. ಅಧಿಕಾರಿಗಳನ್ನೂ ಬಿಡುವುದಿಲ್ಲ. ಸುಖ-ದುಃಖಗಳಿಗೆ ತಾರತಮ್ಯವಿಲ್ಲ. ವಿಧಿಪ್ರಚೋದನೆಯಂತೆ ಅನಿರೀಕ್ಷಿತವಾಗಿ ಅಥವಾ ನಿರೀಕ್ಷಿತವಾಗಿ ಸುಖ-ದುಃಖಗಳು ಮನುಷ್ಯನನ್ನು ಕಾಡಿಸುತ್ತವೆ. ಎರಡನ್ನೂ ಒಂದಾಗಿ ತಿಳಿಯಬೇಕು. ಎರಡೂ ಅಶಾಶ್ವತವೆಂದು ಭಾವಿಸಬೇಕು ಮತ್ತು ಶಾಶ್ವತವಾದ ಆತ್ಮಸುಖಕ್ಕೆ ಸತತವಾಗಿ ಪ್ರಯತ್ನ ಮಾಡುತ್ತಿರಬೇಕು. ಲಾಭ-ಅಲಾಭ, ಜಯ-ಅಪಜಯ ಇವುಗಳು ಅದೃಷ್ಟಾಯತ್ತವಾದುವುಗಳು. ಮನುಷ್ಯನು ಲಾಭಕ್ಕಾಗಿ ಅಥವಾ ಜಯಕ್ಕಾಗಿ ಪ್ರಯತ್ನಿಸುವುದು ಸ್ವಾಭಾವಿಕ. ಅವನ ಪ್ರಯತ್ನಕ್ಕೆ ಅನುರೂಪವಾದ ಫಲವು ಕೆಲವು ಸಮಯಗಳಲ್ಲಿ ಸಿಕ್ಕಬಹುದು ಅಥವಾ ಸಿಕ್ಕದೆಯೂ ಇರಬಹುದು. ಲಾಭವಾದರೆ ಅಥವಾ ಜಯಗಳಿಸಿದರೆ ಹಿಗ್ಗಬಾರದು ; ನಷ್ಟವಾದರೆ ಅಥವಾ ಪರಾಜಿತನಾದರೆ ಕುಗ್ಗಬಾರದು. ತನ್ನ ಗುರಿಯ ಸಾಧನೆಗೆ ಪುನಃ-ಪುನಃ ಪ್ರಯತ್ನಿಸಬೇಕು.

ಮಾನ-ಅಪಮಾನ ಎಂಬುದು ಮತ್ತೊಂದು ದ್ವಂದ್ವ. ಮನುಷ್ಯನು

ಮಾನಿಯಾಗಿರಲು ಇಚ್ಛೆಪಡುವುದು ಸ್ವಾಭಾವಿಕ. ಮಾನಂ ತ್ಯಕ್ತ್ವಾ ಪ್ರಿಯೋ ಭವತಿ–ಅಭಿಮಾನವನ್ನು ತೊರೆದರೆ ಮನುಷ್ಯನು ಸರ್ವರಿಗೂ ಪ್ರಿಯ ನಾಗುವನೆಂದು ಧರ್ಮಜನು ಈ ಹಿಂದೆಯೇ ಹೇಳಿದ್ದಾನೆ. ಅಭಿಮಾನವನ್ನು ತೊರೆದವನಿಗೆ ಅಪಮಾನದ ಭೀತಿಯೂ ಇರುವುದಿಲ್ಲ. ಆದರೆ ಅಭಿಮಾನ ವನ್ನು ತೊರೆಯುವುದು ಅಷ್ಟು ಸುಲಭವಲ್ಲ. ಮಾನ-ಅಪಮಾನ ಎರಡರಲ್ಲಿಯ ಏಕತೆಯನ್ನು ತೋರಬೇಕೆಂದರೆ ಸ್ವಾಭಿಮಾನವನ್ನೇ ಸಂಪೂರ್ಣವಾಗಿ ತೊರೆಯಬೇಕೆಂದರ್ಥ.

ಈ ದ್ವಂದ್ವಗಳ ವಿಷಯವಾಗಿ ಗೀತೆಯಲ್ಲಿ ಹತ್ತಾರು ವಾಕ್ಯಗಳಿವೆ. ದ್ವಂದ್ವಾತೀತನಾಗಿರಬೇಕೆಂದು ಶ್ರೀಕೃಷ್ಣನು ಅರ್ಜುನನಿಗೆ ಪದೇ ಪದೇ ಹೇಳುತ್ತಲೇ ಇರುತ್ತಾನೆ.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವನ್ದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

ಅಧ್ಯಾಯ ೨, ಶ್ಲೋಕ ೪೫

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವನ್ದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ಪ್ರಮುಚ್ಯತೇ ॥**

ಅಧ್ಯಾಯ ೫, ಶ್ಲೋಕ ೩

**ಯೇಷಾಂ ತ್ವನ್ತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವನ್ದ್ವಮೋಹನಿರ್ಮುಕ್ತಾ ಭಜನ್ತೇ ಮಾಂ ದೃಢವ್ರತಾಃ ॥**

ಅಧ್ಯಾಯ ೭, ಶ್ಲೋಕ ೨೮

ನಿರ್ಮಾನಮೋಹಾ ಜಿತಸಙ್ಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವನ್ದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-
ರ್ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥

ಅಧ್ಯಾಯ ೭, ಶ್ಲೋಕ ೫

ಕಾ ಚ ಹ್ರೀಃ ಪರಿಕೀರ್ತಿತಾ–ಎಂಬ ಪ್ರಶ್ನೆಗೆ–ಹ್ರೀರಕಾರ್ಯ ನಿವರ್ತನಂ–ಎಂದು ಧರ್ಮಜನು ಉತ್ತರಿಸುತ್ತಾನೆ. ಹ್ರೀಃ–ಎಂದರೆ ಲಜ್ಜೆ. ಲಜ್ಜೆಯು ಅಕಾರ್ಯಮಾಡುವುದನ್ನು ತಡೆಯುತ್ತದೆ. ಲಜ್ಜೆ ತೊರೆದ

ಮಾನವನು ಮನುಷ್ಯನೆನಿಸಲಾರನು. ಸ್ತ್ರೀಯು ಲಜ್ಜೆಯಿಂದ ಭೂಷಿತಳಾಗುತ್ತಾಳೆ. ಯಾವುದೇ ಅಕಾರ್ಯವನ್ನು ಮಾಡಹೋದರೂ ಲಜ್ಜೆಯು ಮನುಷ್ಯನನ್ನು ಬಾಧಿಸುತ್ತದೆ. ಅಕಾರ್ಯವನ್ನು ಮಾಡಿದ ನಂತರವೂ ಮಾಡಿದ ಅಕಾರ್ಯವು ಇತರರಿಗೆ ತಿಳಿಯಿತೆಂದರೆ ಅವರೆದುರಿನಲ್ಲಿಯೂ ಅಪರಾಧ ಮಾಡಿದವನು ಸುಳಿಯಲಾರನು. ಇದಕ್ಕೆ ಲಜ್ಜೆ ಅಥವಾ ನಾಚಿಕೆಯೇ ಕಾರಣ. ಸ್ತ್ರೀ-ಪುರುಷರಿಗೆ ಜನ್ಮತಃ ಬಂದಿರುವ ಲಜ್ಜೆಯೆಂಬುದೊಂದಿರುವುದರಿಂದ ಅನೇಕಾಪರಾಧಗಳನ್ನು ಲಜ್ಜೆಯೇ ತಡೆಯುತ್ತದೆ. ಲಜ್ಜೆಗೆಟ್ಟ ಸ್ತ್ರೀಯಾಗಲೀ, ಪುರುಷನಾಗಲೀ ಯಾವ ಅಪರಾಧವನ್ನೂ ಮಾಡಲು ಹಿಂಜರಿಯರು. ಆದುದರಿಂದಲೇ ಲಜ್ಜೆಯೆಂಬುದು ದೈವೀಸಂಪತ್ತೆಂದು ಭಗವದ್ಗೀತೆಯಲ್ಲಿ ಹೇಳಿದೆ :

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾನ್ತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್ ॥**

ಯಕ್ಷನು ಕೇಳುವ ಮುಂದಿನ ಪ್ರಶ್ನೆ :

**ಕಿಂ ಜ್ಞಾನಂ ಪ್ರೋಚ್ಯತೇ ರಾಜನ್ಕಃ ಶಮಶ್ಚ ಪ್ರಕೀರ್ತಿತಃ ।**
**ದಯಾ ಚ ಕಾ ಪರಾ ಪ್ರೋಕ್ತಾ ಕಿಂ ಚಾರ್ಜವಮುದಾಹೃತಮ್ ॥**

"ಧರ್ಮಜ! ಜ್ಞಾನವೆಂದರೆ ಯಾವುದು? ಶಮವೆಂದರೆ ಯಾವುದು? ಉತ್ತಮವಾದ ದಯೆಯೆಂದರೆ ಯಾವುದು? ಆರ್ಜವವೆಂದರೆ ಯಾವುದು?"

ಇದಕ್ಕೆ ಧರ್ಮಜನ ಉತ್ತರ :

**ಜ್ಞಾನಂ ತತ್ತ್ವಾರ್ಥಸಮ್ಬೋಧಃ ಶಮಶ್ಚಿತ್ತಪ್ರಶಾನ್ತತಾ ।**
**ದಯಾ ಸರ್ವಸುಖೈಷಿತ್ವಮಾರ್ಜವಂ ಸಮಚಿತ್ತತಾ ॥೬೦॥**

"ಪರಮಾರ್ಥವನ್ನು ತಿಳಿಯುವುದೇ ಜ್ಞಾನ. ಮನಸ್ಸಿನ ಶಾಂತಿಯೇ ಶಮ. ಸರ್ವರಿಗೂ ಸುಖವನ್ನು ಬಯಸುವುದೇ ದಯೆ. ಆರ್ಜವವೆಂದರೆ ಸಮತ್ವಬುದ್ಧಿ."

ತತ್ತ್ವಾರ್ಥವನ್ನು ಅಥವಾ ಪರಬ್ರಹ್ಮವಸ್ತುವನ್ನು ತಿಳಿಯುವುದೇ ಜ್ಞಾನ. ಈ ತತ್ತ್ವವನ್ನು ತಿಳಿದವನೇ ಜ್ಞಾನಿ. ಜ್ಞಾನಿನಸ್ತತ್ತ್ವ ದರ್ಶಿನಃ.

ಜಿತೇಂದ್ರಿಯರಾದ ಜ್ಞಾನಿಗಳು ತತ್ತ್ವವನ್ನು (ಆತ್ಮವಸ್ತುವನ್ನು) ಕಂಡಿರುವರು. ಮನಸ್ಸಿನ ಶಾಂತಿಯೇ ಶಮ. ಮನಸ್ಸಿನಲ್ಲಿ ಶಾಂತಿಯು ಹುಟ್ಟಬೇಕಾದರೆ ಮೊದಲು ಓಡಿಯೋಡಿ ಹೋಗುವ ಮನಸ್ಸನ್ನು ದಮನ ಮಾಡಿ ಹಿಂದಕ್ಕೆ ಸೆಳೆದುಕೊಂಡು ಬುದ್ಧಿಯ ಮೂಲಕವಾಗಿ ಆತ್ಮನಲ್ಲಿ ಲೀನಗೊಳಿಸಬೇಕು. ತದನಂತರ ಮನಸ್ಸಿಗೆ ಶಾಂತಿಯೆಂಬುದುಂಟಾಗುತ್ತದೆ. ಕಾಮ-ಕ್ರೋಧಾದಿಗಳು ಹತ್ತಿರವೂ ಸುಳಿಯಲಾರವು. ಮನಸ್ಸು ತಿಳಿಯಾಗಿರುತ್ತದೆ. ಇದು ಸಾಧನೆಯಿಂದ ಮಾತ್ರವೇ ಸಾಧ್ಯವಾಗುವುದು.

ದಯೆ–ಎಂದರೆ ಕರುಣೆ, ಸರ್ವರ ವಿಷಯದಲ್ಲಿಯೂ ಕರುಣೆಯಿಡುವುದು. ಯಾವ ವಿಧವಾದ ತಾರತಮ್ಯವೂ ಇಲ್ಲದೇ ಸರ್ವರೂ ಸುಖವಾಗಿರಬೇಕೆಂದು ಇಚ್ಛಿಸುವುದು ಶ್ರೇಷ್ಠವಾದ ದಯೆ. ಈ ವಿಧವಾದ ದಯೆಯು ಪರಮಾತ್ಮನಿಗೆ–ಪರಮಯೋಗಿಗಳಿಗೆ ಮಾತ್ರವೇ ಇರಲು ಸಾಧ್ಯ. ಆದುದರಿಂದಲೇ ನಾವು ಪರಮಾತ್ಮನನ್ನು 'ದಯಾಸಿಂಧೋ!' ಎಂದು ಸಂಬೋಧಿಸುತ್ತೇವೆ. **ನಿರ್ಗುಣೇಷ್ವಪಿ ಸತ್ತ್ವೇಷು ದಯಾಂ ಕುರ್ವನ್ತಿ ಸಾಧವಃ** –ನಿರ್ಗುಣರಾದವರಲ್ಲಿಯೂ ಸತ್ಪುರುಷರು ದಯೆಯನ್ನು ತೋರುತ್ತಾರೆ.

ಆರ್ಜವ–ಎಂದರೆ ಸಮಚಿತ್ತತೆ. ಸಮ–ಎಂದರೆ ನೆಟ್ಟಗಿರುವುದು ನೆಟ್ಟಗಿರುವ ಬುದ್ಧಿ; ವಕ್ರವಿಲ್ಲದ ಬುದ್ಧಿ. ಸರಳತೆ. ಸಮಬುದ್ಧಿಯಿದ್ದವನು ಎಲ್ಲರನ್ನೂ ಒಂದೇ ಸಮನಾಗಿ ಕಾಣುತ್ತಾನೆ. ಯಾವ ವಿಧವಾದ ಭೇದವನ್ನೂ ಎಣಿಸುವುದಿಲ್ಲ.

ಇದನ್ನೇ ಶ್ರೀಶಂಕರಭಗವತ್ಪಾದರು ಹೀಗೆ ಹೇಳಿದ್ದಾರೆ :

**ಶತ್ರೌ ಮಿತ್ರೇ ಪುತ್ರೇ ಬನ್ಧೌ ಮಾ ಕುರು ಯತ್ನಂ ವಿಗ್ರಹಸನ್ಧೌ ।**
**ಭವ ಸಮಚಿತ್ತಃ ಸರ್ವತ್ರ ತ್ವಂ ವಾಂಛಸ್ಯಚಿರಾದ್ಯದಿ ವಿಷ್ಣುತ್ವಮ್ ॥**

ನೀನೇನಾದರೂ ವಿಷ್ಣುವಿನ ಪದವನ್ನು (ಮೋಕ್ಷವನ್ನು) ಶೀಘ್ರದಲ್ಲಿಯೇ ಆಶಿಸುವೆಯಾದರೆ–ಶತ್ರುಗಳು-ಮಿತ್ರರು-ಮಕ್ಕಳು-ಬಂಧುಗಳು,

ಇವರಲ್ಲಿ–ಭೇದವನ್ನೆಣಿಸಬೇಡ. ಒಬ್ಬರೊಡನೆ ಜಗಳವಾಡಲೂ ಬೇಡ. ಮತ್ತೊಬ್ಬರೊಡನೆ ವಿಶ್ವಾಸಬೆಳೆಸಲೂ ಯತ್ನಿಸಬೇಡ. ಶತ್ರುಗಳನ್ನೂ–ಮಿತ್ರರನ್ನೂ ಸಮಾನವಾಗಿ ಕಾಣು. ಎಂದರೆ ಎಲ್ಲರಲ್ಲಿಯೂ ಅಂತರ್ಯಾಮಿಯಾಗಿರುವ ಬ್ರಹ್ಮವಸ್ತುವನ್ನು ಕಾಣಲು ಪ್ರಯತ್ನಿಸು.

ಈ ಶ್ಲೋಕದಲ್ಲಿ ಹೇಳಿರುವ ಎಲ್ಲ ಗುಣಗಳೂ ಪರಮಾರ್ಥತತ್ತ್ವವನ್ನು ತಿಳಿಸುವ ಜ್ಞಾನಕ್ಕೆ ಹೊಂದಿಕೊಂಡಿರುತ್ತವೆ. ಅರ್ಥಾತ್ ಜ್ಞಾನಿಯಾದವನಲ್ಲಿ ಈ ಎಲ್ಲ ಗುಣಗಳೂ ಇರುತ್ತವೆ.

ಯಕ್ಷನ ಮುಂದಿನ ಪ್ರಶ್ನೆ :

**ಕಃ ಶತ್ರುರ್ದುರ್ಜಯಃ ಪುಂಸಾಂ ಕಶ್ಚ ವ್ಯಾಧಿರನನ್ತಕಃ ।**
**ಕೀದೃಶಶ್ಚ ಸ್ಮೃತಃ ಸಾಧುರಸಾಧುಃ ಕೀದೃಶಃ ಸ್ಮೃತಃ ॥೯೧॥**

"ಮನುಷ್ಯರಿಗೆ ಜಯಿಸಲು ಅಸಾಧ್ಯವಾದ ಶತ್ರುವು ಯಾರು? ಕೊನೆಯಿಲ್ಲದ ರೋಗವು ಯಾವುದು? ಸಾಧುಪುರುಷನು ಯಾರು? ಅಸಾಧು ಪುರುಷನು ಯಾರು?"

ಯುಧಿಷ್ಠಿರನ ಉತ್ತರ :

**ಕ್ರೋಧಃ ಸುದುರ್ಜಯಃ ಶತ್ರುರ್ಲೋಭೋ ವ್ಯಾಧಿರನನ್ತಕಃ ।**
**ಸರ್ವಭೂತಹಿತಃ ಸಾಧುರಸಾಧುರ್ನಿರ್ದಯಃ ಸ್ಮೃತಃ ॥೯೨॥**

"ಕೋಪವು ದುರ್ಜಯವಾದ ಶತ್ರು. ಲೋಭವು ಕೊನೆಯಿಲ್ಲದ ರೋಗ. ಸರ್ವಪ್ರಾಣಿಗಳ ಹಿತವನ್ನೂ ಬಯಸತಕ್ಕವನು ಸಾಧುಪುರುಷ. ದಯಾಹೀನನು ಅಸಾಧುಪುರುಷ."

ಕೋಪವು ಯಾವಾಗ ಹೇಗೆ ಬರುತ್ತದೆ?–ಎಂದು ಯಾರೂ ಹೇಳಲಾರರು. ಕಾಮ-ಕ್ರೋಧಾದಿ ಆರು ಶತ್ರುಗಳು ಮನುಷ್ಯನ ಮನಸ್ಸನ್ನೇ ಮನೆಯನ್ನಾಗಿ ಮಾಡಿಕೊಂಡಿರುತ್ತವೆ. ಅಹಂಕಾರಕ್ಕೆ ಸ್ವಲ್ಪವೇ ಘಾತವಾದರೂ ಕೋಪವು ಮನುಷ್ಯನನ್ನೇ ತನ್ನ ಹತೋಟಿಗೆ ತೆಗೆದುಕೊಂಡು ಬಿಡುತ್ತದೆ. ಮನುಷ್ಯನ ವಿವೇಚನಾಸಾಮರ್ಥ್ಯವೇ ಹಾಳಾಗಿಹೋಗುತ್ತದೆ. ಇದರಿಂದಾಗಿ ಅನೇಕವಾದ ಅಕಾರ್ಯಗಳೂ ನಡೆದುಹೋಗುತ್ತವೆ. ಅವನಲ್ಲಿರುವ ಕೋಪಾಗ್ನಿಯು ಅವನನ್ನು ದಹಿಸುವುದು ಮಾತ್ರವಲ್ಲದೇ ಪರರಿಗೂ

ಹಾನಿಯನ್ನುಂಟುಮಾಡುತ್ತದೆ. ಕೋಪದಿಂದ ವಂಶವೇ ವಿನಾಶವಾಗಿಬಿಡಬಹುದು. ಆದುದರಿಂದಲೇ ಕೋಪವನ್ನು ಧರ್ಮಜನು ದುರ್ಜಯವಾದ ಶತ್ರು–ಎಂದಿದ್ದಾನೆ.

ಇದರಿಂದ ಕೋಪವನ್ನು ಮಾಡಿಕೊಳ್ಳಲೇಬಾರದೆಂದಲ್ಲ. ಅದನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ಜಿತಕ್ರೋಧನಾಗಬೇಕು. ಸಮಯ ಬಂದಾಗ ಎಷ್ಟುಬೇಕೋ ಅಷ್ಟು ಮಾತ್ರವೇ ಉಪಯೋಗಿಸಬೇಕು. ಕೋಪಿಷ್ಠನ ಉತ್ತಮಾಧಮಾದಿಗಳನ್ನು ಹೀಗೆ ವಿವರಿಸಿದ್ದಾರೆ :

**ಉತ್ತಮಂ ಕ್ಷಣಕೋಪಃ ಸ್ಯಾನ್ಮಧ್ಯಮಂ ಘಟಿಕಾದ್ವಯಮ್ ।**
**ಅಧಮಂ ಸ್ಯಾದಹೋರಾತ್ರಂ ಪಾಪಿಷ್ಠಂ ಮರಣಾನ್ತಿಕಮ್ ॥**

ಉತ್ತಮಪುರುಷನು ಕ್ಷಣಕೋಪಿ. ಅವನು ಮಾಡಿಕೊಳ್ಳುವ ಕ್ಷಣ ಕೋಪವೇ ಜನರ ಮನಸ್ಸಿನಲ್ಲಿ ಮಹತ್ತರವಾದ ಪರಿವರ್ತನೆಯನ್ನುಂಟು ಮಾಡುತ್ತದೆ. ಅದರಿಂದ ಯಾರಿಗೂ ಕೇಡುಂಟಾಗುವುದಿಲ್ಲ. ಎರಡು ತಾಸುಗಳು ಕೋಪವಿರುವುದು ಮಧ್ಯಮಪರ್ಯಾಯಕ್ಕೆ ಸೇರಿದುದು. ಇದರಿಂದ ಎಷ್ಟೋ ಅನಾಹುತಗಳಾಗುತ್ತವೆ. ಇಡೀ ಒಂದು ದಿನ ಕೋಪಿಸಿ ಕೊಂಡಿರುವುದು ಅಧಮಪರ್ಯಾಯ. ಆಮರಣಾಂತವಾದ ಕೋಪವು ಅಧಮಾಧಮವಾದುದು ; ಮಹಾಪಾಪಿಷ್ಠವಾದುದು. ಅದರ ಪರಿಣಾಮವೇ ನೆಂಬುದನ್ನು ವರ್ಣಿಸುವ ಸಾಧ್ಯತೆಯೇ ಇಲ್ಲ. ತಮಗೆ ಬಂದಿರುವ ಕೋಪವು ತಮಗೇ ಶತ್ರುಪ್ರಾಯವಾದುದು–ಎಂಬುದನ್ನು ಯಾರೇ ಆಗಲೀ ಯಾವಾ ಗಲೂ ಯೋಚಿಸುವುದಿಲ್ಲ. ಕೋಪದಿಂದುಂಟಾಗುವ ಛಲದ ಕಾರಣಕ್ಕಾಗಿ ಸರ್ವಸ್ವವನ್ನೂ ಹಾಳುಮಾಡಿಕೊಳ್ಳಲು ಅಥವಾ ಬೇರೆಯವರ ಸರ್ವಸ್ವವನ್ನೂ ಹಾಳುಮಾಡಲು ಸಿದ್ಧರಾಗುತ್ತಾರೆ. ಕಟ್ಟಕಡೆಯವರೆಗೂ ಇಂತಹವರಿಗೆ ಇದು ಕೋಪದಿಂದುಂಟಾದ ಅನರ್ಥ–ಎಂಬ ವಿವೇಕವುಂಟಾಗುವುದಿಲ್ಲ. ಆದುದರಿಂದ ಕೋಪವು ದುರ್ಜಯವಾದ ಶತ್ರುವೆಂಬುದರಲ್ಲಿ ಲೇಶವೂ ಸಂಶಯವಿಲ್ಲ.

ಲೋಭವು ಕೊನೆಯಿಲ್ಲದ ರೋಗ. ಲೋಭವು ಅಥವಾ ಆಶೆಯು ಮಾನವನಿಗಿರುವ ನಿಜವಾದ ರೋಗ. ಸತ್ತರೂ ಈ ರೋಗವು ಹೋಗುವು

ದಿಲ್ಲ. ಮುಂದಿನ ಜನ್ಮಕ್ಕೂ ಅಂಟಿಯೇ ಇರುತ್ತದೆ. ಆಶೆಯ ಅಥವಾ ಲೋಭದ ವಿಷಯದಲ್ಲಿ ಶ್ರೀಶಂಕರಭಗವತ್ಪಾದರು ಹೀಗೆ ಹೇಳಿದ್ದಾರೆ :

**ದಿನಯಾಮಿನ್ಯೌ ಸಾಯಂಪ್ರಾತಃ ಶಿಶಿರವಸನ್ತೌ ಪುನರಾಯಾತಃ ।**
**ಕಾಲಃ ಕ್ರೀಡತಿ ಗಚ್ಛತ್ಯಾಯುಃ ತದಪಿ ನ ಮುಞ್ಚತ್ಯಾಶಾವಾಯುಃ ॥**

ಹಗಲು, ಇರುಳು, ಸಂಜೆ, ಮುಂಜಾನೆ, ಶಿಶಿರರ್ತು, ವಸಂತರ್ತು, ಇವುಗಳು ಮತ್ತೆ ಮತ್ತೆ ಬರುತ್ತವೆ. ಈ ಎಲ್ಲ ಕಾಲಗಳೂ ಕುಣಿ-ಕುಣಿಯುತ್ತಾ ಮುಂದೋಡುತ್ತಿರುತ್ತವೆ. ಪ್ರಾಣವಾಯುವೇ ಹಾರಿಹೋಗುವ ಸಮಯವೊದಗಿಬಂದರೂ ಆಶಾವಾಯುವು ಮಾತ್ರ ಶರೀರವನ್ನು ಬಿಟ್ಟು ಹೋಗುವುದಿಲ್ಲ.

**ಅಙ್ಗಂ ಗಲಿತಂ ಪಲಿತಂ ಮುಣ್ಡಂ**
**ದಶನವಿಹೀನಂ ಜಾತಂ ತುಣ್ಡಮ್ ।**
**ವೃದ್ಧೋ ಯಾತಿ ಗೃಹೀತ್ವಾ ದಣ್ಡಂ**
**ತದಪಿ ನ ಮುಞ್ಚತ್ಯಾಶಾಪಿಣ್ಡಮ್ ॥**

ಶರೀರವೆಲ್ಲವೂ ಸುಕ್ಕಿಹೋಗಿದೆ. ತಲೆಯು ನರೆತುಹೋಗಿದೆ. ಇದ್ದ ಹಲ್ಲುಗಳೆಲ್ಲವೂ ಉದುರಿ ಬೊಚ್ಚುಬಾಯಾಗಿದೆ. ಇಂತಹ ಲಕ್ಷಣಗಳುಳ್ಳ ಮುದುಕನು ನಡೆಯಲಾರದೇ ದೊಣ್ಣೆಯನ್ನು ಹಿಡಿದು ಮೆಲ್ಲ-ಮೆಲ್ಲನೆ ಹೋಗುತ್ತಾನೆ. ಅಂತಹ ಹಣ್ಣು-ಹಣ್ಣು ಮುದುಕನಿಗೂ ಪಿಂಡರೂಪ ವಾಗಿರುವ ( ಗಟ್ಟಿಯಾಗಿರುವ ) ಆಶೆಯು ಬಿಟ್ಟುಹೋಗದು.

**ಅಗ್ರೇ ವಹ್ನಿಃ ಪೃಷ್ಠೇ ಭಾನೂ ರಾತ್ರೌ ಚುಬುಕಸಮರ್ಪಿತಜಾನುಃ।**
**ಕರತಲಭಿಕ್ಷಸ್ತರುತಲವಾಸಸ್ತದಪಿ ನ ಮುಞ್ಚತ್ಯಾಶಾಪಾಶಃ ॥**

ಹಿಂಭಾಗದಲ್ಲಿ ಸೂರ್ಯನಿದ್ದಾನೆ. (ಸೂರ್ಯನು ಅಸ್ತಂಗತನಾಗು ತ್ತಿದ್ದಾನೆ.) ಸೂರ್ಯನ ಬಿಸಿಲಿನಿಂದ ಹಗಲನ್ನು ಕಳೆದಾಯಿತು. ಬೆಂಕಿಯ ಸಾಮೀಪ್ಯವಿಲ್ಲದೇ ರಾತ್ರಿಯನ್ನು ಕಳೆಯುವ ಸಾಧ್ಯತೆಯೇ ಇಲ್ಲ. ಮುಂದೆ ಬೆಂಕಿಯನ್ನಿಟ್ಟುಕೊಂಡಿದ್ದಾನೆ. ಆದರೂ ಚಳಿಯನ್ನು ಸಹಿಸಲಾರನು. ಗಲ್ಲವನ್ನು ಮೊಣಕಾಲುಗಳ ಮಧ್ಯದಲ್ಲಿ ತೂರಿಸಿಕೊಂಡು ಸಂಕುಚಿಸಿ

ಕುಳಿತಿದ್ದಾನೆ. ದಿನವೂ ಕೈಯಲ್ಲಿ ಭಿಕ್ಷೆ ತಂದೇ ಇವನ ಜೀವನ. ವೃಕ್ಷದ ಬುಡದಲ್ಲಿಯೇ ಇವನ ವಾಸ. ಇಂತಹ ದುರವಸ್ಥೆಯಲ್ಲಿರುವವನೂ ಆಶೆ ಯೆಂಬ ಪಾಶದಿಂದ ಮುಕ್ತನಾಗಿರುವುದಿಲ್ಲ.

ಇಷ್ಟಕ್ಕೇ ನನ್ನ ಆಶೆಯು ಪೂರ್ಣವಾದಂತಾಯಿತು–ಎಂದು ಹೇಳು ವವರು ಯಾರೂ ಇಲ್ಲ. ಒಂದು ಆಶೆಯು ಪೂರ್ಣವಾಗುವುದರೊಳಗೆ ನೂರಾರು ಆಶೆಗಳು ಮೊಳೆತಿರುತ್ತವೆ. ಇದು ನಿಶ್ಚಯವಾಗಿಯೂ ಸಕಲ ಮಾನವರಿಗೂ ಇರುವ ಚಿಕಿತ್ಸೆಗೊಳಪಡದಂತಹ ರೋಗವೇ ಸರಿ.

**ಸರ್ವಭೂತಹಿತಃ ಸಾಧುಃ**

ಸರ್ವಪ್ರಾಣಿಗಳಿಗೂ ಹಿತವನ್ನು ಅಪೇಕ್ಷಿಸುವವನೇ ಸಾಧು. ಹಿಂದೆಯೇ ಒಂದೆಡೆಯಲ್ಲಿ ಹೇಳಿದಂತೆ–'**ದುರ್ಜನೇಷ್ವಪಿ ಸತ್ತ್ವೇಷು ದಯಾಂ ಕುರ್ವನ್ತಿ ಸಾಧವಃ**'–'ಸಾಧುಗಳಾದವರು ದುರ್ಜನರಲ್ಲಿಯೂ ದಯೆಯನ್ನು ತೋರುತ್ತಾರೆ.' ಸಾಧುಶಬ್ದಕ್ಕೆ ಬಂದಿರುವ ರೂಢ್ಯರ್ಥದಂತೆ ಯಾರಿಗೇ ಆಗಲೀ ಯಾವ ತೊಂದರೆಯನ್ನೂ ಯಾವಾಗಲೂ ಯಾವ ಕಾರಣದಿಂದಲೂ ಮಾಡದಿರುವವನೇ ಸಾಧು. ಅಸಾಧುವೆಂದರೆ ಇದಕ್ಕೆ ವ್ಯತಿರಿಕ್ತ ನಾದವನು–ನಿರ್ದಯ, ನಿಷ್ಕರುಣಿ.

ಯಕ್ಷನು ಕೇಳುವ ಮುಂದಿನ ಪ್ರಶ್ನೆ :

**ಕೋ ಮೋಹಃ ಪ್ರೋಚ್ಯತೇ ರಾಜನ್ಕಶ್ಚ ಮಾನಃ ಪ್ರಕೀರ್ತಿತಃ ।**
**ಕಿಮಾಲಸ್ಯಂ ಚ ವಿಜ್ಞೇಯಂ ಕಶ್ಚ ಶೋಕಃ ಪ್ರಕೀರ್ತಿತಃ ॥೯೩॥**

"ಮಹಾರಾಜ! ಮೋಹವೆಂದರೆ ಯಾವುದು? ಮಾನವೆಂದರೆ ಯಾವುದು? ಯಾವುದನ್ನು ಆಲಸ್ಯವೆಂದು ತಿಳಿಯಬೇಕು? ಶೋಕವು ಯಾವುದು?"

ಇದಕ್ಕೆ ಯುಧಿಷ್ಠಿರನ ಉತ್ತರ :

**ಮೋಹೋ ಹಿ ಧರ್ಮಮೂಢತ್ವಂ ಮಾನಸ್ತ್ವಾತ್ಮಾಭಿಮಾನತಾ ।**
**ಧರ್ಮನಿಷ್ಕ್ರಿಯತಾಲಸ್ಯಂ ಶೋಕಸ್ತ್ವಜ್ಞಾನಮುಚ್ಯತೇ ॥೯೪॥**

"ಧರ್ಮದ ವಿಷಯದಲ್ಲಿ ಮೌಢ್ಯವೇ ಮೋಹ. ಆತ್ಮಾಭಿಮಾನವೇ

ಮಾನ. ಧರ್ಮವನ್ನು ಆಚರಿಸದೇ ಇರುವುದೇ ಆಲಸ್ಯ. ಅಜ್ಞಾನವೇ ಶೋಕ.”

ಧರ್ಮವೆಂದರೆ ಆತ್ಮಧರ್ಮ. ಆತ್ಮಧರ್ಮದಲ್ಲಿ ಮೌಢ್ಯವೇ ಮೋಹ. ಮೋಹದ ವಿಷಯವಾಗಿ ಗೀತೆಯಲ್ಲಿ ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ.

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನನ್ದನ ॥**

ಅಧ್ಯಾಯ ೧೪, ಶ್ಲೋಕ ೧೩

ತಮೋಗುಣವು ಹೆಚ್ಚಾದಾಗ ವಿವೇಚನಾರಾಹಿತ್ಯ, ಆಲಸ್ಯ, ಕರ್ತವ್ಯದ ಅಜ್ಞಾನ ಮತ್ತು ಮೌಢ್ಯಗಳು ಉತ್ಪನ್ನವಾಗುತ್ತವೆ.

**ಸತ್ತ್ವಾತ್ಸಞ್ಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥**

ಅಧ್ಯಾಯ ೧೪, ಶ್ಲೋಕ ೧೭

ಸತ್ತ್ವದಿಂದ ಜ್ಞಾನವೂ–ರಜಸ್ಸಿನಿಂದ ಲೋಭವೂ–ತಮಸ್ಸಿನಿಂದ ಪ್ರಮಾದ, ಮೋಹ ಮತ್ತು ಅಜ್ಞಾನಗಳೂ ಜನಿಸುತ್ತವೆ.

ಆದುದರಿಂದ ತಮಸ್ಸಿನಿಂದ ಜನಿಸುವುದು ಮೋಹ. ಮನುಷ್ಯನ ಮನಸ್ಸು ನಿದ್ರಾಹಾರ-ಮೈಥುನಾದಿಗಳಲ್ಲಿಯೇ ಪ್ರವರ್ತಿಸುತ್ತಿರುತ್ತದೆ. ವರ್ಣಾಶ್ರಮೋಕ್ತವಾದ ಧರ್ಮದ ವಿಷಯದಲ್ಲಾಗಲೀ, ಆತ್ಮಧರ್ಮದ ವಿಷಯದಲ್ಲಾಗಲೀ–ಅವನ ಮನಸ್ಸು ಪ್ರವರ್ತಿಸುವುದಿಲ್ಲ.

ಮಾನವೆಂದರೆ ಅಭಿಮಾನ, ಅಹಂಕಾರ-ಮಮಕಾರಗಳು–ದೇಹಾತ್ಮ ಬುದ್ಧಿಯಿಂದ ಈ ದೇಹವೇ ಶಾಶ್ವತವೆಂದು ಭ್ರಮಿಸಿ, ಪೂರ್ವಕರ್ಮಾನುಸಾರವಾಗಿ ಪ್ರಾಪ್ತವಾಗಿರುವ ಐಶ್ವರ್ಯ-ಪದವಿಗಳಿಂದ ದುರಭಿಮಾನವನ್ನು ಹೊಂದುವುದು. ಅಹಂಕಾರ ಅಥವಾ ಗರ್ವವು, ಧನ-ಜನ-ಯೌವನಗಳಿಂದ ಪ್ರಾಪ್ತವಾಗುತ್ತದೆ. ಈ ವಿಷಯದಲ್ಲಿ ಭ್ರಮಿಸಬಾರದೆಂದು ಶ್ರೀಶಂಕರ ಭಗವತ್ಪಾದರು ಉಪದೇಶಿಸಿರುತ್ತಾರೆ :

**ಮಾ ಕುರು ಧನಜನಯೌವನಗರ್ವಂ**
**ಹರತಿ ನಿಮೇಷಾತ್ಕಾಲಃ ಸರ್ವಮ್ ।**

**ಮಾಯಾಮಯಮಿದಮಖಿಲಂ ಹಿತ್ವಾ**
**ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ ||**

'ಐಶ್ವರ್ಯವಿದೆಯೆಂದು ಗರ್ವಪಡಬೇಡ ; ಜನರಿದ್ದಾರೆಂದು (ಅನುಯಾಯಿಗಳಿದ್ದಾರೆಂದು) ಅಹಂಕಾರಪಡಬೇಡ ; ಇಂದು ಯೌವನ ವಿದೆಯೆಂದು ಅಹಂಕಾರಿಯಾಗಬೇಡ. ಕಾಲವು ಧನ-ಜನ-ಯೌವನಗಳನ್ನು ಕ್ಷಣಮಾತ್ರದಲ್ಲಿ ಅಪಹರಿಸಿಬಿಡುತ್ತದೆ. ಮಾಯಾಮಯವಾದ ಈ ಎಲ್ಲವನ್ನೂ ಪರಿತ್ಯಜಿಸಿ ಬ್ರಹ್ಮಸಾಕ್ಷಾತ್ಕಾರದ ಮಾರ್ಗವನ್ನರಿತು ಅದನ್ನು ಪ್ರವೇಶಿಸು, ಆ ಮಾರ್ಗವನ್ನು ಹಿಡಿಯುವವನಾಗು.'

'ಆಲಸ್ಯವೆಂದರೆ ಧರ್ಮದ ವಿಷಯದಲ್ಲಿ ಔದಾಸೀನ್ಯ'–ಎಂದು ಧರ್ಮಜನು ಉತ್ತರಿಸುತ್ತಾನೆ. **ಶಕ್ತಸ್ಯ ಚಾಪ್ಯನುತ್ಸಾಹಃ ಕರ್ಮಸ್ವಾಲಸ್ಯ ಮುಚ್ಯತೇ**–ಶಕ್ತನಾಗಿದ್ದರೂ ಕಾರ್ಯಗಳನ್ನು ಮಾಡಲು ಉಂಟಾಗುವ ನಿರುತ್ಸಾಹಕ್ಕೆ ಆಲಸ್ಯವೆಂದು ಆಲಸ್ಯಲಕ್ಷಣಗಳನ್ನು ಹೇಳಿದ್ದಾರೆ. (ಧರ್ಮದ ವಿಷಯದಲ್ಲಿ ಆಲಸ್ಯವು ಸಾಮಾನ್ಯವಾಗಿ ಎಲ್ಲರಿಗೂ ಇರುತ್ತದೆ. ಆತ್ಮೋದ್ಧಾರಕ್ಕೆ ಯೋಗ್ಯವಾದ ಕರ್ಮಕ್ಕೆ ಧರ್ಮವೆಂದು ಹೆಸರು.) ಈಗಿನ ಕಾಲದಲ್ಲಿ ಮಾನವನು ಮತ್ತಾವ ವಿಷಯದಲ್ಲಿ ಆಲಸ್ಯ ತಾಳಿದರೂ ನಡೆಯುವುದಿಲ್ಲ. ಅನುದಿನವೂ ಅವನು ತನ್ನ ಜೀವಿಕೆಯನ್ನು ನಡೆಸಲು ಮತ್ತು ಹೆಂಡತಿ-ಮಕ್ಕಳನ್ನು ಸಾಕಲು ಯಾವುದಾದರೊಂದು ಉದ್ಯೋಗಕ್ಕೆ ಹೋಗಿಯೇ ತೀರಬೇಕು. ವರಮಾನವನ್ನು ಹೆಚ್ಚಿಸಿಕೊಂಡಷ್ಟೂ ಪ್ರಾಪಂಚಿಕ ವಸ್ತುಗಳ ಮೇಲಿನ ಆಶೆಯೂ ಹೆಚ್ಚುತ್ತದೆ. ವರಮಾನಕ್ಕೆ ತಕ್ಕುದಾದ ವೆಚ್ಚವೂ ಇದ್ದೇ ಇರುತ್ತದೆ. ಪ್ರಾಪಂಚಿಕವಾದ ಆಶೆಗಳನ್ನು ಪೂರ್ಣಮಾಡಿಕೊಳ್ಳು ವುದರಲ್ಲಿಯೇ ಮನುಷ್ಯನ ಆಯುಷ್ಯವು ಮುಗಿದುಹೋಗುತ್ತದೆ. ಕಡೆಯ ವರೆಗೂ ಮಾನವನು ಇದೊಂದು ವಿಷಯವನ್ನು ಮಾತ್ರ ಯೋಚಿಸುವುದಿಲ್ಲ. ತನಗಾಗಿ ದುಡಿದುದು ಎಷ್ಟು? ತನ್ನ ಸಂಸಾರಕ್ಕಾಗಿ ದುಡಿದುದು ಎಷ್ಟು?–ಎಂಬುದನ್ನು ಸ್ವಲ್ಪಕಾಲ ವಿವೇಚಿಸಿದರೆ ತನಗಾಗಿ ಎಂದರೆ ತನ್ನ ಆತ್ಮೋದ್ಧಾರಕ್ಕಾಗಿ ದಿನಕ್ಕೆ ಹತ್ತು ನಿಮಿಷಗಳನ್ನೂ ಮೀಸಲಾಗಿಡುವುದಿಲ್ಲ. ಏಕೆಂದರೆ ಈ ಹತ್ತು ನಿಮಿಷಗಳನ್ನಾದರೂ ದೇವತಾಧ್ಯಾನದಲ್ಲಿ ಕಳೆಯ ಬೇಕೆಂದು ಮನೆಯವರು ಯಾವ ಕಾರಣದಿಂದಲೂ ಬಲಾತ್ಕಾರಮಾಡುವು

ದಿಲ್ಲ. ಅವರಿಗದು ಬೇಕಾಗಿಲ್ಲ. ಆತ್ಮೋದ್ಧಾರಕ್ಕಾಗಿ ತಾನೇ ದಿನಕ್ಕೆ ಸ್ವಲ್ಪ ಕಾಲ ಮೀಸಲಿಡಬೇಕು. ಮಹಾಭಾರತ-ರಾಮಾಯಣಗಳನ್ನೂ ಸಾಯುವ ಕಡೆ ಗಾಲಕ್ಕೆ ಓದಬೇಕಾದ ಗ್ರಂಥಗಳೆಂದು ಅವನು ಭಾವಿಸುತ್ತಾನೆ. ಅವನು ಅವುಗಳನ್ನು ಓದುವವರೆಗೂ ಸಾವು ಕಾದಿರುವುದಿಲ್ಲ. ಇದನ್ನವನು ಒಂದು ಕ್ಷಣವಾದರೂ ಯೋಚಿಸುವುದಿಲ್ಲ. ಯಾವ ಕಾರ್ಯಕ್ಕೆ ಆಲಸ್ಯವಿಲ್ಲದಿದ್ದರೂ ಧಾರ್ಮಿಕಕಾರ್ಯಕ್ಕೆ ಮಾತ್ರ ಅತಿಯಾದ ಆಲಸ್ಯವುಂಟಾಗುತ್ತದೆ.

ಶೋಕವೆಂದರೆ ಯಾವುದೆಂಬ ಯಕ್ಷನ ಪ್ರಶ್ನೆಗೆ ಧರ್ಮಜನು ಅಜ್ಞಾನವೇ ಶೋಕ–ಎಂದಿದ್ದಾನೆ. ಅಜ್ಞಾನಮೂಲವಾದುದು ಸಂಸಾರ. ಸಂಸಾರವು ಶೋಕರೂಪವಾದುದು. ಸಂಸಾರದ ವಿಷಯವಾಗಿ ಶ್ರೀಶಂಕರಭಗವತ್ಪಾದರು ಹೀಗೆ ಹೇಳುತ್ತಾರೆ :

**ಪುನರಪಿ ಜನನಂ ಪುನರಪಿ ಮರಣಂ**
**ಪುನರಪಿ ಜನನೀಜಠರೇ ಶಯನಮ್ ।**
**ಇಹ ಸಂಸಾರೇ ಬಹುದುಸ್ತಾರೇ**
**ಕೃಪಯಾಽಪಾರೇ ಪಾಹಿ ಮುರಾರೇ ॥**

ಇದೊಂದು ಸಂಸಾರಚಕ್ರ. ಪುನಃ ಹುಟ್ಟುವುದು ; ಪುನಃ ಸಾಯು ವುದು. ಪುನಃ ತಾಯಿಯ ಹೊಟ್ಟೆಯಲ್ಲಿ ಮಲಗುವುದು–ಇದು ಸಾಧಾರಣ ವಾದ ಸಂಸಾರಚಕ್ರವಲ್ಲ. ದುಸ್ತರವಾದ, ತಪ್ಪಿಸಿಕೊಳ್ಳಲು ಸಾಧ್ಯವಾಗದ ಸಂಸಾರಚಕ್ರ. ಇಂತಹ ಸಂಸಾರಚಕ್ರದಿಂದ ಪಾರುಮಾಡು ದೇವ!

ಆತ್ಮವಿದನಾದವನು ಮಾತ್ರವೇ ಈ ಶೋಕದಿಂದ ಪಾರಾಗಬಲ್ಲನು. **ತರತಿ ಶೋಕಮಾತ್ಮವಿತ್ ।**

ಯಕ್ಷನ ಮುಂದಿನ ಪ್ರಶ್ನೆ :

**ಕಿಂ ಸ್ಥೈರ್ಯಮೃಷಿಭಿಃ ಪ್ರೋಕ್ತಂ**
**ಕಿಂ ಚ ಧೈರ್ಯಮುದಾಹೃತಮ್ ।**
**ಸ್ನಾನಂ ಚ ಕಿಂ ಪರಂ ಪ್ರೋಕ್ತಂ**
**ದಾನಂ ಚ ಕಿಮಿಹೋಚ್ಯತೇ ॥೬೫॥**

"ಋಷಿಗಳು ಯಾವುದನ್ನು ಸ್ಥೈರ್ಯವೆಂದು ಕರೆಯುತ್ತಾರೆ?

ಯಾವುದು ಧೈರ್ಯವೆಂದೆನಿಸಿಕೊಳ್ಳುತ್ತದೆ? ಉತ್ತಮವಾದ ಸ್ನಾನವೆಂದರೆ ಯಾವುದು? ದಾನವೆಂದರೆ ಯಾವುದು?"

ಯುಧಿಷ್ಠಿರನ ಉತ್ತರ :

**ಸ್ವಧರ್ಮೇ ಸ್ಥಿರತಾ ಸ್ಥೈರ್ಯಂ ಧೈರ್ಯಮಿನ್ದ್ರಿಯನಿಗ್ರಹಃ ।**
**ಸ್ನಾನಂ ಮನೋಮಲತ್ಯಾಗೋ ದಾನಂ ವೈ ಭೂತರಕ್ಷಣಮ್ ॥೯೬॥**

"ಸ್ವಧರ್ಮದಲ್ಲಿ ಸ್ಥಿರವಾಗಿ ನಿಲ್ಲುವುದೇ ಸ್ಥೈರ್ಯವೆನಿಸಿಕೊಳ್ಳುತ್ತದೆ. ಇಂದ್ರಿಯನಿಗ್ರಹವೇ ಧೈರ್ಯವೆನಿಸಿಕೊಳ್ಳುತ್ತದೆ. ಮನಸ್ಸಿನ ಕೊಳೆಯನ್ನು ತ್ಯಜಿಸುವುದೇ ಸ್ನಾನ. ಪ್ರಾಣಿಗಳನ್ನು ರಕ್ಷಿಸುವುದೇ ದಾನ."

ಸ್ಥೈರ್ಯವೆಂದರೆ ಸ್ಥಿರತೆ, ದೃಢತೆ. ಯಾವುದನ್ನು ಋಷಿಗಳು ಸ್ಥೈರ್ಯವೆಂದು ಹೇಳುತ್ತಾರೆ? ಎಂಬ ಪ್ರಶ್ನೆಗೆ ಉತ್ತರ ; ಸ್ವಧರ್ಮದಲ್ಲಿರುವುದೇ ಸ್ಥೈರ್ಯ ಎಂದು. ಸ್ಥೈರ್ಯವಂತನೆಂದರೆ ಸ್ವಧರ್ಮದಲ್ಲಿಯೇ ಸ್ಥಿರವಾಗಿರುವವನು–ಎಂದು ಅರ್ಥವಾಗುತ್ತದೆ.

ಶ್ರೀಕೃಷ್ಣನೂ ಗೀತೆಯಲ್ಲಿ :

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥**
**ಸಹಜಂ ಕರ್ಮ ಕೌನ್ತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥**

ಅಧ್ಯಾಯ ೧೮, ಶ್ಲೋಕ ೪೭-೪೮

ತನ್ನ ಧರ್ಮವನ್ನು ಆಚರಿಸುವಾಗ ಸ್ವಲ್ಪ ನ್ಯೂನತೆ ಬಂದರೂ, ಸ್ವಧರ್ಮವು–ಚೆನ್ನಾಗಿ ಆಚರಿಸಲ್ಪಡುವ ಪರಧರ್ಮಕ್ಕಿಂತಲೂ– ಶ್ರೇಯಸ್ಕರವಾದುದು. ಸ್ವಭಾವಜನ್ಯವಾಗಿ ನಿಯತವಾಗಿರುವ ಕರ್ಮವನ್ನು ಆಚರಿಸಿದರೆ ಪಾಪವು ಘಟಿಸುವುದಿಲ್ಲ.

ಸಹಜವಾದ ಕರ್ಮವು ದೋಷಯುಕ್ತವಾಗಿದ್ದರೂ ಅದನ್ನು ತ್ಯಜಿಸಬಾರದು. ಅಗ್ನಿಯು ಹೊಗೆಯಿಂದ ಆವರಿಸಲ್ಪಡುವಂತೆ–ಸಕಲಕರ್ಮಗಳೂ ದೋಷದಿಂದ ವ್ಯಾಪ್ತವಾಗಿರುತ್ತವೆ.

ಈ ಮಾತುಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವನು.

ಅರ್ಜನನು ಕ್ಷಾತ್ರಧರ್ಮವು ಹಿಂಸೆಗೆ ಕಾರಣವಾಗುವುದೆಂಬ ಅಭಿಪ್ರಾಯ ವನ್ನು ಸೂಚಿಸಿದುದೇ ಈ ಮಾತುಗಳನ್ನು ಹೇಳಲು ಕಾರಣವಾಯಿತು. ಸಾಮಾನ್ಯವಾಗಿ ಕ್ಷಾತ್ರಧರ್ಮದಲ್ಲಿ ಹಿಂಸೆಯಿದ್ದರೂ ಅದು ಸ್ವಧರ್ಮವಾಗಿ ದ್ದರೆ ಖಂಡಿತವಾಗಿಯೂ ಅದನ್ನು ಬಿಡಬಾರದು. ಸಹಜಕರ್ಮದಲ್ಲಿರುವ ದೋಷವು ಅವನಿಗೆ ಅಂಟುವುದಿಲ್ಲ. ಆದರೆ ಬ್ರಾಹ್ಮಣನೊಬ್ಬನು ಕ್ಷತ್ರಿಯ ಕರ್ಮವನ್ನು ಮಾಡಿದರೆ ಅವನಿಗೆ ಪ್ರಾಣಿಗಳನ್ನು ಹಿಂಸೆಮಾಡಿದ ದೋಷವು ಪ್ರಾಪ್ತವಾಗಬಹುದು. ಆದುದರಿಂದ ಪ್ರತಿಯೊಬ್ಬನೂ ತನ್ನ ಜನ್ಮವನ್ನು ಪೂರ್ವಾರ್ಜಿತವಾದ ಸುಕೃತದ ಕಾರಣದಿಂದ ಪ್ರಾಪ್ತವಾಗಿರುವುದೆಂದು ಭಾವಿಸಿ ಆ ವರ್ಣದಲ್ಲಿಯೇ ಇರಬೇಕು ಮತ್ತು ಆ ವರ್ಣಕ್ಕೆ ಉಕ್ತವಾದ ಕರ್ಮಗಳನ್ನೇ ಮಾಡಬೇಕು. ಧರ್ಮವ್ಯಾಧನದೂ ಇದೇ ಅಭಿಪ್ರಾಯ ವಾಗಿತ್ತು. ಅವನು ಬ್ರಹ್ಮಜ್ಞಾನಿಯಾಗಿದ್ದರೂ ತಾನು ಬ್ರಾಹ್ಮಣನೆಂದು ಹೇಳಿಕೊಳ್ಳಲಿಲ್ಲ. ಮಾಂಸಮಾರುವ ತನ್ನ ವೃತ್ತಿಯನ್ನೂ ಬಿಡಲಿಲ್ಲ.

ಇಲ್ಲಿ ಹೇಳಿರುವ ಸ್ಥಿರತೆಯನ್ನು ಸ್ವಧರ್ಮ–ಎಂದರೆ ಆತ್ಮಧರ್ಮದಲ್ಲಿ ಸ್ಥಿರತೆ–ಎಂದೂ ಅರ್ಥಮಾಡಬಹುದು.

ಆತ್ಮಧರ್ಮದ ಸಾಧನೆಗೆ ಹೆಚ್ಚು ಸ್ಥಿರತೆ ಅಥವಾ ದೃಢತೆಯಿರಬೇಕು. ಧರ್ಮಜನ ಮುಂದಿನ ಉತ್ತರವೂ ಆತ್ಮಧರ್ಮದ ಸಾಧನೆಗೆ ಅನುರೂಪ ವಾಗಿಯೇ ಇದೆ. ಧೈರ್ಯವೆಂದರೆ ಯಾವುದೆಂಬ ಯಕ್ಷನ ಪ್ರಶ್ನೆಗೆ **ಧೈರ್ಯ ಮಿನ್ದ್ರಿಯನಿಗ್ರಹಃ**–ಎಂದು ಉತ್ತರಿಸಿದ್ದಾನೆ. ಇಂದ್ರಿಯಗಳನ್ನು ನಿಗ್ರಹಿಸು ವುದೇ ಧೈರ್ಯ.

ಮೊದಲನೆಯದಾಗಿ ನಾವು ಇಂದ್ರಿಯಗಳು ನಮ್ಮ ಶತ್ರುಗಳೆಂದೇ ಭಾವಿಸುವುದಿಲ್ಲ. ಇಂದ್ರಿಯಾಧೀನರಾಗುತ್ತೇವೆ. ನಾವು ಇಂದ್ರಿಯಗಳನ್ನು ಗೆಲ್ಲುವ ಬದಲು ನಮ್ಮನ್ನೇ ಇಂದ್ರಿಯಗಳು ಗೆಲ್ಲುತ್ತವೆ. ನಾವು ಮೊದಲು ಇಂದ್ರಿಯಗಳೇ ನಮ್ಮ ನಿಜವಾದ ಶತ್ರುಗಳೆಂಬುದನ್ನು ಸತ್ಸಂಗದಿಂದಲೂ, ವೇದಾಂತಶ್ರವಣದಿಂದಲೂ ತಿಳಿದುಕೊಳ್ಳಬೇಕು. ಅನಂತರದಲ್ಲಿ ಅವು ಗಳೊಡನೆ ಸತತವಾಗಿ ಹೋರಾಟವನ್ನು ನಡೆಸಿ ಧೈರ್ಯದಿಂದ ಅವುಗಳನ್ನು ನಿಗ್ರಹಿಸಬೇಕು. ಇಂದ್ರಿಯಗಳ ನಿಗ್ರಹವಾದನಂತರವೇ ನಮಗೆ ಆತ್ಮ ದರ್ಶನವಾಗುವುದೆಂಬ ದೃಢತೆ ಅಥವಾ ಸ್ಥೈರ್ಯವುಂಟಾಗುತ್ತದೆ.

ಯಕ್ಷನ **ಸ್ನಾನಂ ಕಿಂ**–ಎಂಬ ಪ್ರಶ್ನೆಗೆ ಧರ್ಮಜನು **ಮನೋಮಲ ತ್ಯಾಗಃ**–ಎಂದು ಉತ್ತರಿಸಿದ್ದಾನೆ. ಸ್ನಾನವೆಂದರೆ ಕೇವಲ ದೇಹಶುದ್ಧಿಯೆಂದು ಭಾವಿಸಿದ್ದೇವೆ. 'ಸ್ನಾನಮಾಡಿ ಮಡಿಬಟ್ಟೆಯನ್ನುಟ್ಟುಬಿಟ್ಟರೆ ಸಾಲದು. ಮನಸ್ಸೂ ಶುದ್ಧವಾಗಿರಬೇಕು'–ಎಂದು ತರುಣರು ಹಾಸ್ಯಮಾಡುವುದನ್ನೂ ಕೇಳಿದ್ದೇವೆ. ಮನಃಶುದ್ಧಿಯು ಅಷ್ಟು ಸುಲಭವಾದುದಲ್ಲ. ಮನಃಶುದ್ಧಿಯೆಂದರೆ ಏನೆಂಬುದನ್ನು ಯಾರೂ ವಿವರಿಸಿ ಹೇಳಲಾಗುವುದಿಲ್ಲ. ಅನುದಿನವೂ ಉಷಃಕಾಲದಲ್ಲೆದ್ದು, ಶೌಚ-ಮುಖಮಾರ್ಜನಾದಿಗಳನ್ನು ಮುಗಿಸಿ, ಸ್ನಾನ-ಸಂಧ್ಯಾದಿಗಳನ್ನು ಮಾಡುತ್ತಾ ಹೋಗುವುದರಿಂದ ಮನಸ್ಸಿಗೂ ಒಂದು ವಿಧವಾದ ಸಂಸ್ಕಾರವಾಗಿ ಕಾಲಾನುಗುಣವಾಗಿ ಮನಃಶುದ್ಧಿಯಾಗುವುದೆಂಬ ಅಭಿಪ್ರಾಯದಿಂದ ಹಿಂದಿನ ಮಹರ್ಷಿಗಳು ನಮಗೆ ನಿತ್ಯ-ನೈಮಿತ್ತಿಕಕರ್ಮಗಳನ್ನು ವಿಧಿಸಿದ್ದಾರೆ. ಮನಸ್ಸಿನ ಮಲವನ್ನು ತ್ಯಜಿಸ ಬೇಕಾದರೆ ಬಹಳ ಸಂಸ್ಕಾರವಾಗಿರಬೇಕು. ಮನೋಮಲತ್ಯಾಗವು ಅಷ್ಟು ಸುಲಭಸಾಧ್ಯವಲ್ಲ. ಜನ್ಮ-ಜನ್ಮಾಂತರಗಳ ವಾಸನೆಯಿರುವ ಮನಸ್ಸನ್ನು ಶುದ್ಧಿಮಾಡಲು ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ ಇಂದ್ರಿಯಗಳನ್ನು ನಿಗ್ರಹಿಸಬೇಕು. ಮನೋಮಲತ್ಯಾಗ, ಇಂದ್ರಿಯನಿಗ್ರಹ ಮತ್ತು ಸ್ವಧರ್ಮದಲ್ಲಿ ಸ್ಥಿರತೆ–ಇವುಗಳು ಒಂದಕ್ಕೊಂದು ಪೂರಕಗಳಾಗಿವೆ. ಆತ್ಮಧರ್ಮದಲ್ಲಿ ದೃಢತೆಯಿರಬೇಕಾದರೆ ಮನೋಮಲತ್ಯಾಗ ಮತ್ತು ಇಂದ್ರಿಯನಿಗ್ರಹಗಳು ಅತ್ಯವಶ್ಯವಾಗಿ ಇರಲೇಬೇಕು. ಇವುಗಳಿಂದ ಮಾತ್ರವೇ ಆತ್ಮಾನುಸಂಧಾನ ವನ್ನು ಮಾಡಬಹುದಾಗಿದೆ. ಆದುದರಿಂದ ನಿಜವಾದ ಸ್ನಾನವೆಂದರೆ ಮನಸ್ಸಿನ ಕಲ್ಮಷವನ್ನು ಹೋಗಲಾಡಿಸುವುದೆಂಬ ಅರ್ಥವು–ಧೈರ್ಯ ಮತ್ತು ಸ್ಥೈರ್ಯಗಳಿಗೆ ಕೊಟ್ಟಿರುವ ಅರ್ಥಗಳಿಗೆ ಅನುರೂಪವಾಗಿಯೇ ಇರುವುದು.

ದಾನವೆಂದರೆ ಏನೆಂಬ ಯಕ್ಷನ ಪ್ರಶ್ನೆಗೆ ಯುಧಿಷ್ಠಿರನು–**ದಾನಂ ವೈ ಭೂತರಕ್ಷಣಂ**–ಎಂದು ಉತ್ತರಿಸುತ್ತಾನೆ. ದಾನಶಬ್ದಕ್ಕೆ ರೂಢವಾಗಿರುವ ಅರ್ಥ: ಒಬ್ಬನಿಗೆ ಹಣಕೊಡುವುದು, ಭೂಮಿಯನ್ನು ಕೊಡುವುದು, ಧಾನ್ಯಾದಿಗಳನ್ನು ಕೊಡುವುದು–ಇತ್ಯಾದಿ. '**ತುಭ್ಯಮಹಂ ಸಂಪ್ರದದೇ ನ**

**ಮಮ ನ ಮಮ**'–'ನಾನು ನಿನಗೆ ಇದನ್ನು ಕೊಡುತ್ತೇನೆ. ಇದು ನನ್ನದಲ್ಲ. ಇದು ನನ್ನದಲ್ಲ'–ಎಂದು ಹೇಳಿ ಕೊಡುವುದು ದಾನವೆನಿಸಿಕೊಳ್ಳುತ್ತದೆ.

ಆದರೆ ಧರ್ಮರಾಜನಲ್ಲಿ ದಾನಶಬ್ದಕ್ಕೆ 'ಭೂತರಕ್ಷಣೆ' ಎಂದು ಹೇಳಿದ್ದಾನೆ. ಎಂದರೆ ಸಾಮೂಹಿಕವಾಗಿ ದಾನಮಾಡುವುದು, ಊರು-ಕೇರಿಗಳಲ್ಲಿ ಬಾವಿಗಳನ್ನು ತೋಡಿಸುವುದು, ಕೆರೆಗಳನ್ನು ಕಟ್ಟಿಸುವುದು ಇತ್ಯಾದಿ. ಇದರಿಂದ ಸಕಲಪ್ರಜೆಗಳಿಗೂ ದಾನದ ಫಲವು ಸಿಕ್ಕಿದಂತಾಗುತ್ತದೆ. ಅದರಿಂದಲೇ ಭೂತರಕ್ಷಣೆಯೂ ಆಗುತ್ತದೆ. ಇದು ರಾಜನು ಮಾಡಬೇಕಾದ ಮುಖ್ಯಕರ್ತವ್ಯ.

ದಮ, ದಾನ, ದಯೆ–ಈ ಮೂರಕ್ಕೂ ಬೃಹದಾರಣ್ಯಕೋಪನಿಷತ್ತಿನಲ್ಲಿ ಒಂದು ಕಥೆಯಿದೆ. ಬ್ರಹ್ಮನ ಬಳಿಗೆ ದೇವತೆಗಳು ಹೋಗಿ ಸಂದೇಶವೊಂದನ್ನು ಅಪೇಕ್ಷಿಸಿದರು. ಬ್ರಹ್ಮನು ದೇವತೆಗಳನ್ನು ಕುರಿತು 'ದ' ಎಂದನು. ಆ ಅಕ್ಷರದಿಂದಲೇ ಅವರು '**ದಾಮ್ಯತ**'–'ದಮನಮಾಡಿ' ಎಂದು ಹೇಳಿದನೆಂದು ಅರ್ಥಮಾಡಿಕೊಂಡರು. ಮನುಷ್ಯರೂ ಸಂದೇಶವನ್ನು ಅಪೇಕ್ಷಿಸಿದರು. ಬ್ರಹ್ಮನು ಪುನಃ 'ದ' ಎಂದನು. ಮನುಷ್ಯರದನ್ನು '**ದತ್ತ**'–'ದಾನಮಾಡಿ' ಎಂದು ಹೇಳಿದನೆಂದು ಅರ್ಥಮಾಡಿಕೊಂಡರು. ಅಸುರರೂ ಸಂದೇಶವನ್ನು ಅಪೇಕ್ಷಿಸಿದರು. ಅವರನ್ನೂ ಕುರಿತು ಬ್ರಹ್ಮನು ಹೇಳಿದುದು 'ದ' ಎಂದು ಮಾತ್ರ. ಅದೇ 'ದ' ಕಾರವನ್ನವರು '**ದಯಧ್ವಂ**'–'ದಯಾವಂತರಾಗಿರಿ' ಎಂದು ಹೇಳಿದನೆಂದು ಅರ್ಥಮಾಡಿಕೊಂಡರು. ಅವರವರ ಗುಣ-ಕರ್ಮಗಳಿಗೆ ಅನುಗುಣವಾಗಿ ಒಂದೇ 'ದ' ಕಾರವನ್ನು ಮೂವರೂ ಮೂರು ವಿಧವಾಗಿ ಅರ್ಥಮಾಡಿಕೊಂಡರು. (ಭೋಗಿಗಳಾದ ದೇವತೆಗಳಿಗೆ ಮನಸ್ಸನ್ನು ದಮನಮಾಡುವುದು ಕಷ್ಟ. ಲೋಭಿಗಳಾದ ಮನುಷ್ಯರಿಗೆ ದಾನಕೊಡುವುದು ಕಷ್ಟ. ಕ್ರೂರಿಗಳಾದ ಅಸುರರಿಗೆ ದಯಾಪರತೆಯು ದುಸ್ಸಾಧ್ಯ.)

ಯಕ್ಷನ ಮುಂದಿನ ಪ್ರಶ್ನೆ :

**ಕಃ ಪಣ್ಡಿತಃ ಪುಮಾಞ್ಜ್ಞೇಯೋ ನಾಸ್ತಿಕಃ ಕಶ್ಚ ಉಚ್ಯತೇ ।**
**ಕೋ ಮೂರ್ಖಃ ಕಶ್ಚ ಕಾಮಃ ಸ್ಯಾತ್ಕೋ ಮತ್ಸರ ಇತಿ ಸ್ಮೃತಃ ॥೯೭॥**

"ಯಾರನ್ನು ಪಂಡಿತನೆಂದು ತಿಳಿಯಬೇಕು? ನಾಸ್ತಿಕನೆಂದರೆ ಯಾರು? ಮೂರ್ಖನು ಯಾರು? ಕಾಮವು ಎಂತಹುದು? ಮತ್ಸರವೆಂಬುದು ಯಾವುದು?"

ಇದಕ್ಕೆ ಧರ್ಮಜನ ಉತ್ತರ :

**ಧರ್ಮಜ್ಞಃ ಪಣ್ಡಿತೋ ಜ್ಞೇಯೋ**
**ನಾಸ್ತಿಕೋ ಮೂರ್ಖ ಉಚ್ಯತೇ ।**
**ಕಾಮಃ ಸಂಸಾರಹೇತುಶ್ಚ**
**ಹೃತ್ತಾಪೋ ಮತ್ಸರಃ ಸ್ಮೃತಃ ॥೯೮॥**

"ಧರ್ಮಜ್ಞನನ್ನು ಪಂಡಿತನೆಂದು ತಿಳಿಯಬೇಕು. ನಾಸ್ತಿಕನೇ ಮೂರ್ಖನು ; ಮೂರ್ಖನೇ ನಾಸ್ತಿಕನು. ಜನನ-ಮರಣರೂಪವಾದ ಸಂಸಾರಕ್ಕೆ ಕಾಮವೇ ಮೂಲಕಾರಣ. ಹೃದಯದ ಸಂತಾಪವೇ ಮತ್ಸರ."

ಧರ್ಮಜ್ಞನಾದವನು ಪಂಡಿತನು.

ಗೀತೆಯಲ್ಲಿ ಪಂಡಿತರ ಲಕ್ಷಣವನ್ನು ಹೀಗೆ ಹೇಳಿದೆ :

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ ॥**

"ಬ್ರಹ್ಮಜ್ಞಾನಿಗಳು (ಪಂಡಿತರು) ವಿದ್ಯಾ-ವಿನಯಗಳಿಂದ ಕೂಡಿರುವ ಬ್ರಾಹ್ಮಣನಲ್ಲಿಯೂ, ಹಸುವಿನಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ಚಂಡಾಲನಲ್ಲಿಯೂ ಸಮವಾದ ಎಂದರೆ ಏಕವೂ ಅವಿಕ್ರಿಯವೂ ಆದ ಬ್ರಹ್ಮವಸ್ತುವನ್ನೇ ಕಾಣುತ್ತಾರೆ."

ನಾಸ್ತಿಕನೆಂದರೆ ಮೂರ್ಖ. ಮೂರ್ಖನೆಂದರೆ ನಾಸ್ತಿಕನೆಂಬುದನ್ನು ಧರ್ಮಜನು ಪ್ರತ್ಯೇಕವಾಗಿ ಹೇಳದಿದ್ದರೂ ನಾವು ಈ ಉತ್ತರವನ್ನು ಊಹಿಸಿಕೊಳ್ಳಬಹುದಾಗಿದೆ. ಪರಲೋಕವಿರುವುದೆಂಬುದನ್ನು ನಂಬದವನೇ ನಾಸ್ತಿಕ. ಪರಲೋಕವಿರುವುದೆಂಬುದನ್ನು ನಂಬುವವನು ಆಸ್ತಿಕ. ನಾಸ್ತಿಕನು ಮೂರ್ಖನೆಂದು ಧರ್ಮಜನ ಅಭಿಪ್ರಾಯ. ಆಸ್ತಿಕನಾದವನು ಪರಲೋಕವಿದೆಯೆಂಬ ದೃಢನಂಬಿಕೆಯಿಂದ ಸತ್ಕರ್ಮಾನುಷ್ಠಾನಗಳನ್ನು ಮಾಡುತ್ತಾ ಹೋಗುತ್ತಾನೆ. ಪರಲೋಕವಿದೆ ; ಪಾಪ-ಪುಣ್ಯಕರ್ಮಗಳಿಗೆ ಫಲವಿದೆ–ಎಂಬ ನಂಬಿಕೆಯೇ ಮಾನವನನ್ನು ಅನೇಕ ಕುತ್ಸಿತಕರ್ಮಗಳಿಂದ

ಹಿಮ್ಮೆಟ್ಟಿಸುತ್ತದೆ. ನಾಸ್ತಿಕನಾದವನು ದಯಾಳುವಾಗಿರಬಹುದಾದರೂ ಪಾಪ-ಪುಣ್ಯಗಳಿಗೆ ಫಲವಿರುವುದೆಂಬುದನ್ನು ನಂಬದೇ ಇರುವುದರಿಂದ ನಾಸ್ತಿಕರಲ್ಲಿ ಮೌಢ್ಯವೇ ಹೆಚ್ಚು. ಅವರ ಧ್ಯೇಯ-ಧೋರಣೆಗಳೆಲ್ಲವೂ ಪ್ರಾಪಂಚಿಕಸುಖಗಳಲ್ಲಿಯೇ ಕೇಂದ್ರೀಕೃತವಾಗಿರುತ್ತವೆ. ಪ್ರಾಪಂಚಿಕ ಸೌಖ್ಯಕ್ಕಾಗಿ ಏನಾದರೂ ಮಾಡಬಹುದೆಂಬ ಭಾವನೆಯು ಅವರಿಗಿರುತ್ತದೆ. ಪ್ರಪಂಚದಲ್ಲಿ ನಾಸ್ತಿಕರಿಂದಲೇ ಹೆಚ್ಚು ಉಪಟಳ. ಆದುದರಿಂದಲೇ ಯುಧಿಷ್ಠಿರನು ಅವರನ್ನು ಮೂರ್ಖರೆಂದು ಕರೆದಿದ್ದಾನೆ.

ಕಾಮವು ಸಂಸಾರಹೇತುವಾದುದು. ಆಶೆಯೆಂಬುದೇ ಸಂಸಾರ. ಆಶೆ ತೊರೆದವನಿಗೆ ಸಂಸಾರವಿದ್ದರೂ ಸಂಸಾರವಿಲ್ಲದಂತೆಯೇ ಸರಿ. ಮದುವೆ ಮಾಡಿಕೊಂಡು ಪತ್ನಿಯೊಡನೆ ವಿಹರಿಸಬೇಕೆಂಬ ಒಂದು ಕಾಮನೆಯು ಮನುಷ್ಯನನ್ನು ಅಪಾರವಾದ ಸಂಸಾರದಲ್ಲಿ ತೊಡಗಿಸುತ್ತದೆ. ಆದರೆ ಗೃಹಸ್ಥನಾಗಬೇಕಾದುದು ಧರ್ಮ. ಧರ್ಮದ ಹಿನ್ನೆಲೆಯಲ್ಲಿ ಸಂಸಾರದ ನಿರ್ವಹಣೆಯನ್ನು ಮಾಡಬೇಕು. ಕಾಮಮೋಹಿತನಾಗಿ ಕರ್ತವ್ಯಗಳನ್ನು ಮರೆಯಬಾರದು ಮತ್ತು ಬಿಡಬಾರದು. ವಿವಾಹಕಾಲದಲ್ಲಿ ಮಾಡುವ ಸಂಕಲ್ಪದಂತೆ **ಧರ್ಮಪ್ರಜಾಸಂಪತ್ಸಮೃದ್ಧ್ಯರ್ಥಂ**–ಧರ್ಮಕ್ಕಾಗಿ, ಪ್ರಜಾ ಸಂಪತ್ತಿಗಾಗಿ ಮದುವೆಮಾಡಿಕೊಳ್ಳುತ್ತಾನೆ. ಯಜ್ಞೇಶ್ವರನ ಮುಂದೆ **ಧರ್ಮೇ ಚ, ಅರ್ಥೇ ಚ, ಕಾಮೇ ಚ, ಇಮಾಂ ನಾತಿಚರಾಮಿ**– ಧರ್ಮದಲ್ಲಿಯೂ, ಅರ್ಥದಲ್ಲಿಯೂ, ಕಾಮದಲ್ಲಿಯೂ–ಇವಳನ್ನು ಬಿಟ್ಟು ನಾನು ಏನನ್ನೂ ಮಾಡುವುದಿಲ್ಲ–ಎಂದು ಕನ್ಯಾಪಿತೃವಿಗೆ ವರನು ಪ್ರಮಾಣವಚನವನ್ನು ಕೊಡುತ್ತಾನೆ. ಇಲ್ಲಿಯೂ ಧರ್ಮವೇ ಮೊದಲಾಗಿದೆ. ಅನಂತರ ಅರ್ಥ-ಕಾಮಗಳು ಧರ್ಮಗಳನ್ನೇ ಅನುಸರಿಸಿ ಬರುತ್ತವೆ. ಈ ಹಿನ್ನೆಲೆಯಲ್ಲಿ ಸಂಸಾರಿಯಾಗುವುದು ಯುಕ್ತವೇ ಆಗಿರುತ್ತದೆ. ಸಂಸಾರಿಗೆ ಮೋಕ್ಷವು ಸಿಗುವುದಿಲ್ಲವೆಂಬ ವಿಷಯವೇ ಇಲ್ಲ.

ಇದನ್ನೇ ಶ್ರೀಶಂಕರಭಗವತ್ಪಾದರು ಹೀಗೆ ಹೇಳಿದ್ದಾರೆ :

**ಯೋಗರತೋ ವಾ ಭೋಗರತೋ ವಾ ಸಙ್ಗರತೋ ವಾ ಸಙ್ಗವಿಹೀನಃ ।**
**ಯಸ್ಯ ಬ್ರಹ್ಮಣಿ ರಮತೇ ಚಿತ್ತಂ ನನ್ದತಿ ನನ್ದತಿ ನನ್ದತ್ಯೇವ ॥**

ಯೋಗರತನಾಗಿಯೂ ಇರಬಹುದು ; ಭೋಗರತನಾಗಿಯೂ ಇರಬಹುದು ; ಸಂಸಾರದಲ್ಲಿಯೂ ಇರಬಹುದು. ಸಂಗವನ್ನು ಸೇರಿರಬಹುದು; ಸಂಗವನ್ನು (ಸಂಸಾರವನ್ನು) ಬಿಟ್ಟಿರಲೂಬಹುದು. ಕೆಲವೊಂದು ವೇಳೆ ಯೋಗರತತ್ವವೂ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧಕವಾಗದಿರಬಹುದು ; ಕೆಲವೊಂದು ವೇಳೆ ಭೋಗಲಾಲಸೆಯಲ್ಲಿರುವುದೂ ಬ್ರಹ್ಮಸಾಕ್ಷಾತ್ಕಾರಕ್ಕೆ ಬಾಧಕವಾಗದಿರಬಹುದು. ಈ ವಿಪರ್ಯಾಸಕ್ಕೆ ಮುಖ್ಯ ಕಾರಣ ಮನಸ್ಸು. ಮೊಲೆಯ ಮೇಲಿನ ಯೋಗಿಗಳುಂಟು–ಶಿಲೆಯ ಮೇಲಿನ ಭೋಗಿಗಳುಂಟು–ಎಂಬಂತೆ. ಯೋಗರತನಾಗಿದ್ದೂ ಮನಸ್ಸು ನಿಶ್ಚಲವಾಗಿ ಪರಿಶುದ್ಧವಾಗಿಲ್ಲದಿದ್ದರೆ ಅವನು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದಿಲ್ಲ. ಸಂಸಾರಿಯಾಗಿದ್ದೂ ಸುಖೋಪಭೋಗಗಳನ್ನೇ ಅನುಭವಿಸುತ್ತಿದ್ದರೂ ಕೂಡ ಮನಸ್ಸು ಪರಿಶುದ್ಧವಾಗಿದ್ದು ನಿಶ್ಚಲವಾಗಿದ್ದರೆ–ತದೇಕಾಗ್ರತೆಯಿಂದಿದ್ದರೆ ಬ್ರಹ್ಮಸಾಕ್ಷಾತ್ಕಾರವಾಗುವುದು. ಈ ಕಾರಣದಿಂದ ಯಾವನ ಮನಸ್ಸು ಪರಬ್ರಹ್ಮವಸ್ತುವಿನಲ್ಲಿಯೇ ಲೀನವಾಗಿ ರಮಿಸುತ್ತಿರುತ್ತದೆಯೋ– ಅವನು ಆನಂದಿಸುತ್ತಾನೆ ; ಬ್ರಹ್ಮಾನಂದವನ್ನೇ ಅನುಭವಿಸುತ್ತಾನೆ. ಇದರಲ್ಲಾವ ಸಂಶಯವೂ ಇಲ್ಲ.

ಅನೇಕರಿಗೆ ಹೆಂಡತಿ-ಮಕ್ಕಳೆಂಬ ಸಂಸಾರವೇ ಇಲ್ಲದಿದ್ದರೂ ಸಂಸಾರಿಗಳಿಗಿಂತಲೂ ಹೆಚ್ಚಿನ ಕೋಟಲೆಗಳಲ್ಲಿ ಸಿಕ್ಕಿಕೊಂಡಿರುತ್ತಾರೆ. ಅವರ ಮನಸ್ಸು ಕಾಮಾಭಿಭೂತವಾಗಿರುವುದೇ ಇದಕ್ಕೆ ಕಾರಣ. ಈಗಿನ ಕಾಲದಲ್ಲಿ ಸಂನ್ಯಾಸಿಗಳಿಗೂ ಸಂಸಾರತಾಪತ್ರಯಗಳು ತಪ್ಪಿದ್ದಲ್ಲ. 'ಸಂನ್ಯಾಸೀ ಸಂಸಾರ' ಎಂಬುದು ಇದರಿಂದ ಪ್ರಸಿದ್ಧಿಗೆ ಬಂದಿದೆ. ಅವರೂ ಯಾವುದಾದರೂ ಕಾಮನೆಯಿಂದ ಪೀಡಿತರಾಗಿರುತ್ತಾರೆ. ಆದುದರಿಂದ ಕಾಮವೆಂಬುದು ಯಾವ ರೂಪದಲ್ಲಿಯೇ ಇದ್ದರೂ ಸಂಸಾರಕ್ಕೆ ಕಾರಣವಾಗುತ್ತದೆ. ಧರ್ಮದ ಹಿನ್ನಲೆಯಲ್ಲಿ ಕಾಮವಿದ್ದರೆ ಕಮಲದೆಲೆಯ ಮೇಲಿನ ನೀರಿನಂತೆ ಸಂಸಾರದಲ್ಲಿದ್ದರೂ ನಿರ್ಲಿಪ್ತರಾಗಿರಬಲ್ಲರು.

**ಕೋ ಮತ್ಸರ ಇತಿ ಸ್ಮೃತಃ** –ಎಂಬ ಯಕ್ಷನ ಪ್ರಶ್ನೆಗೆ–**ಹೃತ್ತಾಪೋ ಮತ್ಸರಃ ಸ್ಮೃತಃ** –ಎಂದು ಯುಧಿಷ್ಠಿರನ ಉತ್ತರ. ಹೃದಯದ ಸಂತಾಪಕ್ಕೆ ಮತ್ಸರವೆಂದು ಹೆಸರು. ಮಾತ್ಸರ್ಯವೆಂಬುದು ಮನುಷ್ಯನ ಆರನೆಯ ಶತ್ರು. ತನಗೆ ಸಮಾನನಾಗಿರುವವನು ಯಾವುದಾದರೂ ಕಾರಣದಿಂದ ಯಾವುದಾದರೂ

ರೀತಿಯಲ್ಲಿ ಉಚ್ಛ್ರಾಯಸ್ಥಿತಿಗೆ ಬಂದರೆ ಅವನ ವಿಷಯದಲ್ಲಿ ಮಾತ್ಸರ್ಯವುಂಟಾಗುತ್ತದೆ. ಇಂತಹ ಮಾತ್ಸರ್ಯವು ಅಥವಾ ಹೊಟ್ಟೇಕಿಚ್ಚು ಮನುಷ್ಯನ ಹೃದಯವನ್ನು ಯಾವಾಗಲೂ ಸುಡುತ್ತಿರುತ್ತದೆ. ಅವನು ತನ್ನ ಪ್ರತಿಸ್ಪರ್ಧಿಯ ಅಧಃಪತನವನ್ನೇ ಸರ್ವದಾ ಬಯಸುತ್ತಿರುತ್ತಾನೆ. ಮತ್ತೊಬ್ಬನ ಏಳಿಗೆಯಿಂದ ನಷ್ಟವಾಗಲೀ, ಅಧಃಪತನದಿಂದ ಲಾಭವಾಗಲೀ ಇಲ್ಲದಿದ್ದರೂ ಮಾತ್ಸರ್ಯವು ಮಾತ್ರ ಹೃದಯವನ್ನು ಸುಡುತ್ತಲೇ ಇರುತ್ತದೆ. ಇದೇ ಅದರ ವಿಶೇಷ. ಕಾಮ-ಕ್ರೋಧಾದಿಗಳಲ್ಲಿ ಲಾಭ-ನಷ್ಟಗಳ ಪ್ರಶ್ನೆಯಿರಬಹುದು. ಮಾತ್ಸರ್ಯದಲ್ಲಿಲ್ಲ. ಆದರೂ ಪ್ರತಿಸ್ಪರ್ಧಿಗೆ ಸಾಧ್ಯವಾದಷ್ಟು ಕಿರುಕುಳಕೊಡುವುದು, ಅವನ ವಿಷಯದಲ್ಲಿ ಇಲ್ಲ-ಸಲ್ಲದ ಅಪಪ್ರಚಾರ ಮಾಡುವುದು–ಇತ್ಯಾದಿಗಳು ಮತ್ಸರದ ಲಕ್ಷಣಗಳು. ಪ್ರತಿಯೊಬ್ಬನೂ ತನ್ನ ಔನ್ನತ್ಯಕ್ಕೆ ತಾನು ಪ್ರಯತ್ನಿಸಿಯೇ ತೀರಬೇಕು. ಆದರೆ ತನ್ನ ಜೀವನದ ಮಟ್ಟವನ್ನು ತನಗಿಂತಲೂ ಕೆಳಮಟ್ಟದಲ್ಲಿ ಜೀವನ ನಡೆಸುತ್ತಿರುವವರೊಡನೆ ಹೋಲಿಸಿಕೊಳ್ಳಬೇಕು. ಇದರಿಂದ ಮಾತ್ರವೇ ಮನುಷ್ಯನ ಮನಸ್ಸಿಗೆ ಸಮಾಧಾನವೆಂಬುದು ಸಿಕ್ಕುತ್ತದೆ. 'ಏನಷ್ಟು ದೊರಕುವುದೋ ಸಹಜಕರ್ಮದಿ ನಿನಗೆ ಅಷ್ಟು ಹಣದಿಂದಲೇ ತಣಿಸಿಕೊಳ್ಳು ಮನವ'–ಎಂಬ ಶ್ರೀಶಂಕರರ ಉಪದೇಶವನ್ನು ಪದೇ-ಪದೇ ಸ್ಮರಿಸಿಕೊಳ್ಳುತ್ತಿರಬೇಕು.

ಯಕ್ಷನ ಮುಂದಿನ ಪ್ರಶ್ನೆ :

**ಕೋಽಹಙ್ಕಾರ ಇತಿ ಪ್ರೋಕ್ತಃ ಕಶ್ಚ ದಮ್ಭಃ ಪ್ರಕೀರ್ತಿತಃ ।**
**ಕಿಂ ತದ್ದೈವಂ ಪರಂ ಪ್ರೋಕ್ತಂ ಕಿಂ ತತ್ಪೈಶುನ್ಯಮುಚ್ಯತೇ ॥೯೯॥**

"ಅಹಂಕಾರವೆಂದರೆ ಯಾವುದು? ದಂಭವೆಂದರೆ ಯಾವುದು? ದೈವವೆಂದರೇನು? ಪೈಶುನ್ಯವೆಂದರೇನು?"

ಯುಧಿಷ್ಠಿರನ ಉತ್ತರ :

**ಮಹಾಜ್ಞಾನಮಹಙ್ಕಾರೋ**
**ದಮ್ಭೋ ಧರ್ಮೋ ಧ್ವಜೋಚ್ಛ್ರಯಃ ।**
**ದೈವಂ ದಾನಫಲಂ ಪ್ರೋಕ್ತಂ**
**ಪೈಶುನ್ಯಂ ಪರದೂಷಣಮ್ ॥೧೦೦॥**

"ಮಹತ್ತರವಾದ ಅಜ್ಞಾನವೇ ಅಹಂಕಾರ. ಧ್ವಜದಂತೆ–ಕೈಮೇಲೆತ್ತಿ

ಜಗತ್ತಿಗೆ ತೋರಿಸಿಕೊಳ್ಳುವಂತೆ ಮಾಡುವ ಧರ್ಮವೇ ದಂಭ. ದಾನದ ಫಲವೇ ದೈವ. ಪರರನ್ನು ದೂಷಿಸುವುದೇ ಪೈಶುನ್ಯ."

ಮಹತ್ತರವಾದ ಅಜ್ಞಾನವೇ ಅಹಂಕಾರವೆಂದು ಯುಧಿಷ್ಠಿರನು ಹೇಳಿದ್ದಾನೆ. ಅರ್ಥಾತ್ ಅಹಂಕಾರಿಗಳಿಗೆ ಮಹತ್ತರವಾದ ಅಜ್ಞಾನ ವಿರುತ್ತದೆಂದು ಹೇಳಿದ ಹಾಗಾಯಿತು. ಮಹತ್ತರವಾದ ಅಜ್ಞಾನಕ್ಕೆ ಕಾರಣ ವೇನೆಂಬುದನ್ನು ವಿಶ್ಲೇಷಿಸೋಣ. ಬೀದಿಯ ಭಿಕಾರಿಯು ಅಹಂಕಾರಿಯಾಗ ಲಾರನು ; ಪ್ರತ್ಯುತ ಅವನ ಅಹಂಕಾರವು ಅವನ ಅನ್ನಕ್ಕೇ ಕುಂದನ್ನುಂಟು ಮಾಡುತ್ತದೆ. ಉಚ್ಚಪದವಿಯಲ್ಲಿರುವವನನ್ನೂ, ಧನವಂತನನ್ನೂ, ವಿದ್ಯಾಪಾರಂಗತನನ್ನೂ, ಯೌವನದಲ್ಲಿರುವವನನ್ನೂ–ಅಹಂಕಾರವು ಬೆನ್ನಟ್ಟುತ್ತದೆ. ಉಚ್ಚಪದವಿಯಲ್ಲಿರುವವನು, ತಾನು ಹಿಂದೆ ಉನ್ನತಪದವಿ ಯಲ್ಲಿರಲಿಲ್ಲವೆಂಬುದನ್ನು ಜ್ಞಾಪಿಸಿಕೊಳ್ಳುವುದಿಲ್ಲ ಅಥವಾ ಮುಂದೆ ಒಂದು ದಿನ ಆ ಪದವಿಯಿಂದ ತಾನು ನಿವೃತ್ತಿಹೊಂದಬೇಕಾಗುವುದೆಂಬುದನ್ನೂ ಮನಸ್ಸಿಗೆ ತಂದುಕೊಳ್ಳುವುದಿಲ್ಲ. ತನಗೆ ಲಭಿಸಿರುವ ಅಧಿಕಾರವು ಶಾಶ್ವತ ವೆಂಬ ಭಾವನೆಯೇ ಅವನ ಮನಸ್ಸಿನಲ್ಲಿ ಬೇರೂರಿರುತ್ತದೆ. 'ತಾನು ಅಧಿಕಾರ ದಿಂದ ನಿವೃತ್ತನಾದರೆ?'–ಎಂದು ಜ್ಞಾಪಿಸಿಕೊಳ್ಳಲೂ ಅವನಿಗೆ ಭಯ ವಾಗುವುದು. ಅಧಿಕಾರದ ದರ್ಪದಲ್ಲಿ ಸೌಜನ್ಯವನ್ನೇ ಸಂಪೂರ್ಣವಾಗಿ ಕಳೆದುಕೊಳ್ಳುತ್ತಾನೆ. ಹಣವಂತನೂ ಅಂತೆಯೇ. ಕಷ್ಟಪಡುವವರೆಲ್ಲರಿಗೂ ಹಣವು ಲಭ್ಯವಾಗುವುದಿಲ್ಲ. ಪೂರ್ವಜನ್ಮಸುಕೃತದಿಂದಾಗಿ ಅಲ್ಪಪ್ರಯತ್ನ ದಿಂದಲೇ ಐಶ್ವರ್ಯವಂತನಾಗಬಹುದು. ಹಣದೊಡನೆ ಅಹಂಕಾರವೂ ಅವನಲ್ಲಿ ಬಂದು ಸೇರಿಕೊಳ್ಳುತ್ತದೆ. ತನ್ನ ಹಿಂದಿನ ಸ್ಥಿತಿಯನ್ನು ಒಮ್ಮೆಯಾದರೂ ಅವನು ಜ್ಞಾಪಿಸಿಕೊಳ್ಳುವ ಗೊಡವೆಗೇ ಹೋಗುವುದಿಲ್ಲ. ಹೆಚ್ಚಿನ ಪ್ರಯತ್ನವಿಲ್ಲದೇ ಬಂದ ಹಣವು ಅಷ್ಟೇ ಸುಲಭವಾಗಿ ಹೋಗಬಹುದೆಂದೂ ಅವನು ಯೋಚಿಸುವುದಿಲ್ಲ. ಅದೇ ಅವನ ಮಹತ್ತರವಾದ ಅಜ್ಞಾನ. ವಿದ್ಯಾವಂತರಾದವರು ವಾಸ್ತವವಾಗಿ ಸೌಜನ್ಯದಿಂದಿರಬೇಕು. ವಿನಯವು ವಿದ್ಯಾವಂತರಿಗೆ ಭೂಷಣವಾದುದು. ವಿನಯವೇ ವಿದ್ಯೆಯ ಲಕ್ಷಣ. ಆದರೆ ಸಾಮಾನ್ಯವಾಗಿ ವಿದ್ಯಾವಂತನು ಗರ್ವಿಷ್ಠನಾಗಿರುತ್ತಾನೆ. ತಾನು ವಿದ್ಯಾವಂತನಾದುದಕ್ಕೆ 'ಅಹಂ' ಎಂಬುದನ್ನು ತೋರೆಯಬೇಕೆಂಬ ಭಾವನೆಯು ಅವನಲ್ಲಿ ಒಮ್ಮೆ

ಯಾದರೂ ಮೂಡುವುದಿಲ್ಲ. ಅದಕ್ಕೆ ಪ್ರತಿಯಾಗಿ ಅಹಂಕಾರವನ್ನು ತೊರೆಯಬೇಕೆಂದು ಇತರರಿಗೆ ದಿನಗಟ್ಟಲೆ ಪ್ರವಚನವನ್ನಿವನು ಕೊಡಬಲ್ಲನು. ಯೌವನದ ಗರ್ವವೂ ಇಂತಹುದೇ ಆಗಿರುತ್ತದೆ. ಯುವಕನಿಗೆ ತಾನು ಹಿಂದೆ ಬಾಲಕನಾಗಿದ್ದುದು ಮರೆತುಹೋಗುತ್ತದೆ. ಮುಂದೆ ತಾನೂ ಮುದುಕನಾಗಬೇಕೆಂಬುದು ಸ್ಮರಣೆಗೇ ಬರುವುದಿಲ್ಲ. ಮುದುಕರನ್ನು ಕಂಡು ಪರಿಹಾಸ್ಯಮಾಡುತ್ತಾನೆ.

**ಮಾ ಕುರು ಧನಜನಯೌವನಗರ್ವಂ**
**ಹರತಿ ನಿಮೇಷಾತ್ಕಾಲಃ ಸರ್ವಮ್ ।**
**ಮಾಯಾಮಯಮಿದಮಖಿಲಂ ಹಿತ್ವಾ**
**ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ ॥**

ಇದನ್ನೇ ಶ್ರೀಶಂಕರಭಗವತ್ಪಾದರು ಅರ್ಥಗರ್ಭಿತವಾಗಿ ಬಹಳ ಸ್ಪಷ್ಟವಾಗಿ ಹೇಳಿದ್ದಾರೆ :

(ಈ ಶ್ಲೋಕಕ್ಕೆ ಈ ಹಿಂದೆ ಅರ್ಥಕೊಡಲಾಗಿದೆ.) (ಪುಟ-೪೧೧೬)

ತಾನು ಮಾಡಿದ ಧರ್ಮವನ್ನು ಜಗತ್ತಿಗೆ ತೋರಿಸಿಕೊಳ್ಳಲಿಚ್ಛಿಸುವುದೇ ದಂಭವೆಂದು ಧರ್ಮಜನು ಉತ್ತರಿಸುತ್ತಾನೆ. ಮಾಡುವ ಧರ್ಮವು ಅಲ್ಪವೇ ಆದರೂ ಅದರಿಂದ ತಾನು ಪ್ರಸಿದ್ಧಿ ಪಡೆಯಬೇಕೆಂಬ ಆಶಯವು ಸಾಮಾನ್ಯವಾಗಿ ಜನಸಾಮಾನ್ಯರಲ್ಲಿರುತ್ತದೆ. 'ಇಂತಹವರ ಧರ್ಮಾರ್ಥ' ಎಂದು ಸೂಚಿಸುವ ಕಲ್ಲಿನ ಫಲಕಗಳನ್ನು ನಾವು ಅಲ್ಲಲ್ಲಿ ನೋಡುತ್ತಲೇ ಇರುತ್ತೇವೆ. ಧರ್ಮಕಾರ್ಯಮಾಡಿದವನನ್ನು ಜನರು ಹೊಗಳುವರಾದರೂ–ಆ ಕಾರ್ಯದಿಂದ ತಾನು ಪ್ರಸಿದ್ಧಿಗೆ ಬರಬೇಕೆಂಬ ಆಶಯವು ಧಾರ್ಮಿಕನಿಗಿರಬಾರದು. ಕೀರ್ತಿಕಾಮನೆಯಿಂದಲೇ ಧರ್ಮಮಾಡುವವನು ಯುಧಿಷ್ಠಿರನ ಅಭಿಪ್ರಾಯದಂತೆ ದಾಂಭಿಕನೆನಿಸಿಕೊಳ್ಳುತ್ತಾನೆ. ಆಸ್ಪತ್ರೆಗಳನ್ನು ಕಟ್ಟಿಸುವುದು, ಬಾವಿಗಳನ್ನು ತೋಡಿಸುವುದು, ಛತ್ರಗಳನ್ನು ಕಟ್ಟಿಸುವುದು– ಇತ್ಯಾದಿಗಳು ಧರ್ಮಕಾರ್ಯಗಳೇ ಸರಿ. ಪೂಜೆ-ಪುರಸ್ಕಾರಗಳನ್ನೂ, ಯಜ್ಞಗಳನ್ನೂ ಮಾಡುವ ಸೋಗಿನಲ್ಲಿ ದ್ರವ್ಯಸಂಚಯನಮಾಡುವವರು ಮತ್ತೊಂದು ವಿಧದ ಧರ್ಮದ ವ್ಯಾಪಾರಿಗಳು. ಪೂಜೆ-ಪುರಸ್ಕಾರಗಳೂ, ಯಜ್ಞ, ಯಾಗಾದಿಗಳೂ ನಡೆಯಕೂಡದೆಂಬ ಅಭಿಪ್ರಾಯವಲ್ಲ. ಪ್ರತಿ

ಯೊಬ್ಬ ಗೃಹಸ್ಥನೂ ತನ್ನ ಮನೆಯಲ್ಲಿ ಅನುದಿನವೂ ಪೂಜಾದಿಗಳನ್ನೂ, ನಿತ್ಯ-ನೈಮಿತ್ತಿಕಗಳಾದ ಕರ್ಮಗಳನ್ನೂ ಮಾಡಲೇಬೇಕು. ಲೋಕಶಾಂತಿಗೆಂದು ಹೇಳಿಕೊಂಡು ಮಾಡುವ ಯಜ್ಞ-ಯಾಗಾದಿಗಳಲ್ಲಿ ಪೂಜೆ-ಪುರಸ್ಕಾರಗಳಲ್ಲಿ ವಿಧ್ಯುಕ್ತವಾದ ಕರ್ಮಗಳಿಗಿಂತಲೂ ದಾಂಭಿಕತೆಯೇ ಹೆಚ್ಚಾಗಿರುತ್ತದೆ. ಎಷ್ಟೋ ಲೋಪ-ದೋಷಗಳೂ ಉಂಟಾಗುತ್ತವೆ. ಆದರೆ ಅವುಗಳ ಪ್ರವರ್ತಕರು ಪತ್ರಿಕೆಗಳಿಗೆ ಆಟಾಟೋಪದ ವರದಿಗಳನ್ನು ಕೊಡುವುದರಲ್ಲಿಯೇ ಹೆಚ್ಚು ಆಸಕ್ತಿವಹಿಸುತ್ತಾರೆ. ದೇವತೆಗಳ ಅನುಗ್ರಹವು ಬೇಕಾದರೆ ದೇವತೆಗಳಿಗೆ ಏಕಾಂತದ ಪೂಜೆಯಲ್ಲಿಯೇ ಹೆಚ್ಚು ಪ್ರೀತಿಯೆಂಬುದನ್ನು ಮನಗಾಣಬೇಕು.

**ಪರೋಕ್ಷಪ್ರಿಯಾ ಇವ ಹಿ ದೇವಾಃ** –ಎಂದು ಶ್ರುತಿಯು ಸಾರುತ್ತದೆ.

ಶ್ರೇಷ್ಠವಾದ ದೈವವೆಂದರೆ ಯಾವುದು?–ಎಂಬುದಕ್ಕೆ '**ದೈವಂ ದಾನಫಲಂ**' ದಾನದ ಫಲವೇ ದೈವ–ಎಂದು ಧರ್ಮಜನು ಉತ್ತರಿಸುತ್ತಾನೆ. ದೈವಕ್ಕೂ-ದಾನಕ್ಕೂ ನಿಕಟಸಂಬಂಧವಿದೆ. ನಾವು ಯಾವುದೇ ವ್ರತಾದಿಗಳನ್ನು ಮಾಡಿದರೂ ವಾಯನದಾನದಿಂದ ಆ ವ್ರತವನ್ನು ಮುಗಿಸುತ್ತೇವೆ. ಅರ್ಥಾತ್ ವಾಯನದಾನವನ್ನು ಕೊಡುವುದರಿಂದ ನಾವು ಆರಾಧಿಸಿದ ದೇವನು ಸುಪ್ರೀತನಾಗುವನೆಂದೂ ಮತ್ತು ನಮಗೆ ಫಲಕೊಡುವನೆಂದೂ ನಾವು ಭಾವಿಸುತ್ತೇವೆ. ಯಜ್ಞದಲ್ಲಿಯೂ ಹೀಗೆಯೇ. ಯಜ್ಞದ ಫಲವು ಲಭ್ಯವಾಗಬೇಕಾದರೆ ಋತ್ವಿಜರಿಗೆ ಯಥೋಕ್ತವಾದ ದಕ್ಷಿಣೆಯನ್ನು ಕೊಡಬೇಕು. ನವಗ್ರಹಗಳ ಪ್ರೀತಿಗಾಗಿ ಗೋಧಿ, ಅಕ್ಕಿ–ಮೊದಲಾದ ಧಾನ್ಯಗಳನ್ನು ದಕ್ಷಿಣಾಸಮೇತವಾಗಿ ದಾನಮಾಡುತ್ತಾರೆ.

ಒಂದು ದೇವತೆಯ ಪ್ರೀತ್ಯರ್ಥವಾಗಿ ಇಂತಹುದೇ ವಸ್ತುವನ್ನು ದಾನ ಮಾಡಬೇಕೆಂಬ ವಿಧಿನಿಯಮವಿದೆ. ಅನ್ನದಾನವನ್ನು ಮಾಡುವಾಗಲೂ **ಕುಲದೇವತಾಪ್ರೀತ್ಯರ್ಥವಾಗಿ**–ಎಂದು ಸಂಕಲ್ಪಿಸುತ್ತೇವೆ. ಅನ್ನದಾನಮಾಡುವುದರಿಂದ ನಮ್ಮ ಕುಲದೇವರು ಸುಪ್ರೀತನಾಗುವನೆಂಬ ನಂಬಿಕೆಯು ನಮಗಿದೆ. ದಾನಕೊಡದಿದ್ದರೆ ಕಾಮ್ಯಗಳಾದ ವ್ರತೋದ್ಯಾಪನೆಗಳೂ, ಯಜ್ಞ-ಯಾಗಾದಿಗಳೂ ಫಲಿಸುವುದಿಲ್ಲವೆಂದೂ ಹೇಳುತ್ತಾರೆ. ಆದುದರಿಂದ

ದೈವದ ಕೃಪೆಯು ಲಭಿಸಬೇಕಾದರೆ ದಾನಮಾಡುವುದೇ ಅತಿಮುಖ್ಯ. ದಾನವು ಪರಮಶ್ರೇಷ್ಠವಾದುದೆಂಬುದಕ್ಕೆ ಶ್ರುತಿಪ್ರಮಾಣವಿದೆ.

**ದಾನಂ ಯಜ್ಞಾನಾಂ ವರೂಥಂ ದಕ್ಷಿಣಾ ಲೋಕೇ ದಾತಾರಗ್ಂ ಸರ್ವಭೂತಾನ್ಯುಪಜೀವನ್ತಿ। ದಾನೇನಾರಾತೀರಪಾನುದನ್ತದಾನೇನ ದ್ವಿಷನ್ತೋ ಮಿತ್ರಾಭವನ್ತಿ । ದಾನೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ದಾನಂ ಪರಮಂ ವದನ್ತಿ ।**

ಯಜ್ಞಗಳಿಗೆ ದಾನವೆಂಬುದು ಒಂದು ಕವಚವಿದ್ದಂತೆ. ದಾತೃವನ್ನು ಅನುಸರಿಸಿಯೇ ಪ್ರಾಣಿಗಳು ಜೀವಿಸುತ್ತವೆ. ಅನೇಕ ವಿಧವಾದ ತೊಂದರೆಗಳೂ ದಾನದಿಂದ ಪರಿಹಾರವಾಗುತ್ತವೆ. ದಾನದಿಂದ ಶತ್ರುಗಳೂ ಮಿತ್ರರಾಗುತ್ತಾರೆ. ದಾನದಲ್ಲಿಯೇ ಸರ್ವವೂ ಪ್ರತಿಷ್ಠಿತವಾಗಿದೆ. ಆದುದರಿಂದಲೇ ದಾನವು ಸರ್ವಶ್ರೇಷ್ಠವೆಂದು ಹೇಳುತ್ತಾರೆ.

ಪೈಶುನ್ಯಂ–ಎಂಬುದಕ್ಕೆ 'ಚಾಡಿ ಹೇಳುವುದು', ' ಮಿಥ್ಯಾಪವಾದ' ಎಂಬುದೇ ಅರ್ಥ. ಅದನ್ನೇ ಧರ್ಮರಾಜನಿಲ್ಲಿ ಪೈಶುನ್ಯಂ ಪರದೂಷಣಂ ಪರರ ನಿಂದೆಯೇ ಪೈಶುನ್ಯವೆಂದು ಹೇಳಿದ್ದಾನೆ. ನಿಂದೆಯಲ್ಲಿ ಹಲವು ವಿಧಗಳಿವೆ. 'ನಿಂದಕರಿರಬೇಕು', ಎಂದು ದಾಸರು ಹೇಳಿದ್ದಾರೆ. ಹೊಗಳುವವರಿರುವಂತೆ ನಿಂದಕರೂ ಇರಬೇಕೆಂಬುದು ಒಂದು ಪಂಥ. ಏಕೆಂದರೆ ಮನುಷ್ಯನಿಗೆ ತನ್ನ ಲೋಪ-ದೋಷಗಳು ಸಾಮಾನ್ಯವಾಗಿ ತಿಳಿಯುವುದಿಲ್ಲ. ತನ್ನ ಲೋಪ-ದೋಷಗಳು ತಿಳಿಯಬೇಕಾದರೆ ಅದು ಇತರರಿಂದಲೇ ತಿಳಿಯುತ್ತವೆ. ಮನುಷ್ಯನು ಲೋಪ-ದೋಷಗಳನ್ನೆಸಗಿದರೂ ಅವನು ಮಾಡಿದುದು ಸರಿಯೆಂದು ಹೇಳುವ ಹೊಗಳುಭಟರೂ ಇರುತ್ತಾರೆ. ಅಂತಹ ಸಂದರ್ಭದಲ್ಲಿ ನಿಂದಕರಿಂದ ತನ್ನ ಲೋಪ-ದೋಷಗಳು ತಿಳಿದರೂ ಅಹಂಕಾರಿಯಾದವನು ಅದನ್ನು ಸರಿಯಾದ ರೀತಿಯಲ್ಲಿ ತೆಗೆದುಕೊಳ್ಳದೆಯೂ ಇರಬಹುದು. ಆದರೆ ಕೆಲವು ಸಂದರ್ಭಗಳಲ್ಲಿ ಸರಿಪಡಿಸಿಕೊಳ್ಳಲೂ ಬಹುದು. ಅರ್ಥಪರರಾದ ಮನುಷ್ಯರು ಇತರರ ಮೇಲೆ ಇಲ್ಲ-ಸಲ್ಲದ ಗುಣಗಳನ್ನು ಆರೋಪಿಸಿ ಹೊಗಳುವವರೇ ಹೊರತು ಅವನ ದೋಷಗಳನ್ನು ಹೇಳಲು ಹೋಗುವುದಿಲ್ಲ. ದೋಷಗಳನ್ನು ಹೇಳುವುದರಿಂದ ಕೆಲವು ವೇಳೆಯಲ್ಲಿ ಅವನು ತನ್ನ ದೋಷಗಳನ್ನು ತಿದ್ದಿಕೊಳ್ಳಲೂಬಹುದು.

ಕೆಲವು ಸಮಯಗಳಲ್ಲಿ ನಿಂದಿಸುವವನ ಮೇಲೆಯೇ ತಿರುಗಿಬೀಳಬಹುದು. ಆದುದರಿಂದ ಮನುಷ್ಯರು ಸಾಮಾನ್ಯವಾಗಿ ಹೊಗಳಿಕೆಯಲ್ಲಿ ಉದ್ಯುಕ್ತರಾಗಿರುತ್ತಾರೆಯೇ ಹೊರತು ಮನುಷ್ಯನ ದೋಷಗಳನ್ನು ಹೇಳಲು ಇಚ್ಛೆಪಡುವುದಿಲ್ಲ.

'ನಿಂದಕರಿರಬೇಕು' ಎಂಬುದನ್ನು ನಾವು ಮತ್ತೊಂದು ದೃಷ್ಟಿಯಿಂದಲೂ ನೋಡಬಹುದಾಗಿದೆ. ಸಾಮಾನ್ಯವಾಗಿ ಎಲ್ಲ ಸಮಯಗಳಲ್ಲಿಯೂ ಯಥಾರ್ಥವನ್ನೇ ಹೇಳುವರೆಂದೂ ನಂಬಲಾಗುವುದಿಲ್ಲ. ಮಾತ್ಸರ್ಯದಿಂದ ಪ್ರೇರಿತರಾದ ಜನರು ತಮ್ಮ ವಿರೋಧಿಗಳನ್ನು ಸಲ್ಲದ ಅಪನಿಂದೆಗೆ ಗುರಿಪಡಿಸುತ್ತಾರೆ. ಅಪನಿಂದೆಯನ್ನು ಸಹಿಸಿಕೊಳ್ಳುವುದು ಬಹಳ ಕಷ್ಟಕರ. ಸಮಾಜವೂ ಅವನನ್ನು ದೂರೀಕರಿಸುವುದು. ಆದರೆ ಅಪನಿಂದೆಗಳಿಗೊಳಗಾದವನು ತನ್ನ ಪಾಪಗಳೆಲ್ಲವನ್ನೂ ನಿಂದೆಮಾಡತಕ್ಕವರಿಗೆ ಹಂಚಿಕೊಡುತ್ತಾನೆಂಬುದು ಶತಾಂಶ ಸತ್ಯವಾದುದು.

'ಮಾಡಿದವನ ಪಾಪ ಆಡಿದವನ ಬಾಯಲ್ಲಿ' ಎಂಬ ನಾಣ್ನುಡಿಯಿದೆ. ಒಬ್ಬನು ಮಾಡಿದ ಪಾಪವನ್ನೇ ಅವನು ಮಾಡಿದ ಪಾಪಕರ್ಮವನ್ನು ಪ್ರಸ್ತಾಪಿಸುವವರು ಹಂಚಿಕೊಂಡರೆ–ಪಾಪವನ್ನೇ ಮಾಡದವನನ್ನು ಅಪನಿಂದೆಗೆ ಗುರಿಮಾಡಿದರೆ–ಅವನು ಎಲ್ಲ ಪಾಪಗಳಿಂದಲೂ ವಿಮುಕ್ತಿ ಹೊಂದುವುದೇನೋ ನಿಶ್ಚಯ. ಅಪನಿಂದೆಯನ್ನು ಅನುಭವಿಸಿದ ಕಾರಣದಿಂದ ರಾಜನೊಬ್ಬನು ಪೂರ್ವಜನ್ಮದ ಪಾಪಕರ್ಮಾನುಸಾರವಾಗಿ ಪ್ರಾಪ್ತವಾದ ಮಹಾರೋಗವನ್ನು ಕಳೆದುಕೊಂಡನೆಂಬ ಇತಿಹಾಸವಿದೆ. ಆದರೆ ಅಪನಿಂದೆಯನ್ನು ಸಹಿಸಿಕೊಳ್ಳುವುದು ಬಹಳ ಕಷ್ಟಕರವಾದುದು. ಅಪನಿಂದೆಯ ಕಾರಣದಿಂದಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವವರಿದ್ದಾರೆ. ಭರ್ತೃಹರಿಯು ಪರನಿಂದಕನನ್ನು ಬಹಳ ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ :

**ಅಹೋ ಖಲಭುಜಙ್ಗಸ್ಯ ವಿಚಿತ್ರೋಽಯಂ ವಧಕ್ರಮಃ ।**
**ಅನ್ಯಸ್ಯ ದಶತಿ ಶ್ರೋತ್ರಮನ್ಯಃ ಪ್ರಾಣೈರ್ವಿಯುಜ್ಯತೇ ॥**

ಹಾವಿನ ವಧಕ್ರಮವು ನೇರವಾದುದು. ಹಾವಿನಿಂದ ಕಚ್ಚಲ್ಪಟ್ಟವನು ಸಾಯುತ್ತಾನೆ. ಆದರೆ ಖಲಭುಜಂಗನಿಂದ ಅಂದರೆ ಮಿಥ್ಯಾಪವಾದಕನಿಂದ

ಕಚ್ಚಲ್ಪಟ್ಟವನು ಸಾಯುವುದಿಲ್ಲ. ಅವನು ಒಬ್ಬನ ಕಿವಿಕಚ್ಚಿದರೆ ಮತ್ತೊಬ್ಬನು ಸಾಯುತ್ತಾನೆ. ಆದುದರಿಂದ ಪರನಿಂದನೆಯೆಂಬುದನ್ನು ಸಂಪೂರ್ಣವಾಗಿ ವರ್ಜಿಸಬೇಕು. ಒಬ್ಬನಲ್ಲಿ ದೋಷವಿದೆಯೆಂದು ತಿಳಿದುಬಂದರೂ ಅದನ್ನು ತಿಳಿದು, ಪ್ರಾಮಾಣಿಕವಾಗಿ ಅವನನ್ನು ದೋಷವಿಮುಕ್ತನನ್ನಾಗಿ ಮಾಡುವ ಸದುದ್ದೇಶದಿಂದ ಅವನ ದೋಷವೇನೆಂಬುದನ್ನು ನೇರವಾಗಿ ಅವನಲ್ಲಿಯೇ ಹೇಳುವುದು ಅಯುಕ್ತವೆನಿಸುವುದಿಲ್ಲ. ಅದು ಹೊರತಾಗಿ ಒಬ್ಬನು ಮತ್ತೊಬ್ಬನ ವಿಷಯವಾಗಿ ಹೇಳಿದ್ದನ್ನು ನಿಜವೇ ಸುಳ್ಳೇ—ಎಂಬುದನ್ನೂ ವಿವೇಚಿಸದೇ ಬೇರೊಬ್ಬನಿಗೆ ಹೇಳುತ್ತಾ ಹೋದರೆ ಮಹಾಪಾಪಕ್ಕೆ ಗುರಿಯಾಗಬೇಕಾಗುತ್ತದೆ.

ಯಕ್ಷನ ಮುಂದಿನ ಪ್ರಶ್ನೆ :

**ಧರ್ಮಶ್ಚಾರ್ಥಶ್ಚ ಕಾಮಶ್ಚ ಪರಸ್ಪರವಿರೋಧಿನಃ ।**
**ಏಷಾಂ ನಿತ್ಯವಿರುದ್ಧಾನಾಂ ಕಥಮೇಕತ್ರ ಸಂಗಮಃ ॥೧೦೧॥**

"ಧರ್ಮಾರ್ಥ-ಕಾಮಗಳು ಅನ್ಯೋನ್ಯವಿರೋಧಿಗಳು. ಒಂದನ್ನು ಮತ್ತೊಂದು ಹೊಂದಿಕೊಂಡಿರುವುದು ಬಹಳ ಕಷ್ಟವಾದುದು. ನಿತ್ಯ ವಿರೋಧಿಗಳಾದ ಈ ಮೂರೂ ಒಂದೆಡೆ ಸೇರುವುದು ಹೇಗೆ? ಎಂದರೆ ಒಬ್ಬನೇ ಈ ಮೂರನ್ನೂ ಅನುಷ್ಠಾನಮಾಡಲು ಸಾಧ್ಯವೇ?"

ಇದಕ್ಕೆ ಧರ್ಮಜನ ಉತ್ತರ :

**ಯದಾ ಧರ್ಮಶ್ಚ ಭಾರ್ಯಾ ಚ ಪರಸ್ಪರವಶಾನುಗೌ ।**
**ತದಾ ಧರ್ಮಾರ್ಥಕಾಮಾನಾಂ ತ್ರಯಾಣಾಮಪಿ ಸಂಗಮಃ ॥೧೦೨॥**

"ಧರ್ಮವೂ ಮತ್ತು ಪತ್ನಿಯೂ ಪರಸ್ಪರವಾಗಿ ಹೊಂದಿಕೊಂಡಲ್ಲಿ ಧರ್ಮ, ಅರ್ಥ, ಕಾಮ—ಇವು ಮೂರೂ ಒಂದೆಡೆ ಸೇರಿರುತ್ತವೆ."

ನಾವು ಯಾವಾಗ ಸಂಕಲ್ಪಮಾಡಬೇಕಾದರೂ **ಧರ್ಮಾರ್ಥ-ಕಾಮ-ಮೋಕ್ಷಚತುರ್ವಿಧಫಲಪುರುಷಾರ್ಥಸಿದ್ಧ್ಯರ್ಥಂ**—ಎಂದೇ ಸಂಕಲ್ಪಮಾಡುತ್ತೇವೆ. ಆದರೆ ಸರ್ವಕ್ಕೂ ಮೂಲವಾದ ಧರ್ಮವನ್ನು ಕೈಬಿಟ್ಟು ಅರ್ಥ-ಕಾಮಗಳಲ್ಲಿಯೇ ಆಸಕ್ತರಾಗುತ್ತೇವೆ. ಮೊದಲನೆಯದಾದ ಧರ್ಮವಿಲ್ಲದಿದ್ದರೆ ಕಡೆಯದಾದ ಮೋಕ್ಷವೂ ಇಲ್ಲ. ನಮ್ಮ ಜೀವನವೆಲ್ಲವೂ

ಅರ್ಥ-ಕಾಮಗಳಲ್ಲಿಯೇ ಪರ್ಯವಸಾನಹೊಂದುತ್ತದೆ. ಇವುಗಳಲ್ಲಿ ಪರಸ್ಪರ ವಿರೋಧವು ಈ ರೀತಿಯಾಗಿರುತ್ತದೆ. ಧರ್ಮದ ಹಿನ್ನೆಲೆಯಲ್ಲಿ ಹೆಚ್ಚಿನ ಹಣಸಂಪಾದನೆಗೆ ಅವಕಾಶವಾಗುವುದಿಲ್ಲ. ಅರ್ಥಾರ್ಥಿಯು ಹಣ ಗಳಿಸುವುದರಲ್ಲಿ ಆಸಕ್ತಿಯನ್ನು ವಹಿಸುವನೇ ಹೊರತು ತನ್ನ ಸುಖಕ್ಕಾಗಿಯೂ ಗಳಿಸಿದ ಹಣವನ್ನು ವೆಚ್ಚಮಾಡಲು ಇಷ್ಟಪಡುವುದಿಲ್ಲ.

ಭಗವಾನ್ ಶ್ರೀಶಂಕರರ ಮಾತುಗಳಲ್ಲಿ :

**ಅರ್ಥಮನರ್ಥಂ ಭಾವಯ ನಿತ್ಯಂ**
**ನಾಸ್ತಿ ತತಃ ಸುಖಲೇಶಃ ಸತ್ಯಮ್ ।**
**ಪುತ್ರಾದಪಿ ಧನಭಾಜಾಂ ಭೀತಿಃ**
**ಸರ್ವತ್ರೈಷಾ ವಿಹಿತಾ ರೀತಿಃ ॥**

ಅರ್ಥವನ್ನು ಅನರ್ಥಕಾರೀ ಎಂದು ಭಾವಿಸು. ಒಮ್ಮೆ ಮಾತ್ರ ಭಾವಿಸಿದರೆ ಸಾಲದು. ಅನುದಿನವೂ 'ಅರ್ಥವು ಅನರ್ಥಕಾರೀ' ಎಂಬುದನ್ನೇ ಮೂಲಮಂತ್ರವನ್ನಾಗಿಟ್ಟುಕೊ. ಆ ಹಣದಿಂದ ಸುಖಲೇಶವಾದರೂ ಸಿಕ್ಕುವುದಿಲ್ಲ. ಇದು ಸತ್ಯವಾದ ಮಾತು. ಅರ್ಥದ ಪ್ರಭಾವವೆಂತಹುದೆಂಬು ದನ್ನು ಹೇಳುವೆನು ಕೇಳು. ಹಣವಂತರು ತಮ್ಮ ಮಕ್ಕಳ ವಿಷಯದಲ್ಲಿಯೇ ಭಯಪಡಬೇಕಾಗುತ್ತದೆ. ತಾನು ಸಂಪಾದಿಸಿದ ಹಣವನ್ನು ಮಗನೆಲ್ಲಿ ಪೋಲುಮಾಡಿಬಿಡುವನೋ ಎಂದು ಹಗಲಿರುಳೂ ಕಾತರಿಸುತ್ತಿರುತ್ತಾರೆ. ರಾಜ್ಯಕ್ಕಾಗಿ ತಂದೆಯನ್ನೇ ಸೆರೆಯಲ್ಲಿಟ್ಟ ಮತ್ತು ಕೊಲೆಮಾಡಿಸಿದ ಮಕ್ಕಳೂ ಉಂಟು. ಆಸ್ತಿಗಾಗಿ ಮಾಡಬಾರದ–ಮಾಡಲಾಗದ ಕೆಟ್ಟ ಕೆಲಸವೇ ಇಲ್ಲ ವೇನೋ! ಈ ವಿಚಾರವು ಹೊಸದಲ್ಲ. ಧನವಂತರ ಪರಿಸ್ಥಿತಿಯೇ ಸಾರ್ವತ್ರಿಕವಾಗಿ ಹೀಗಿರುತ್ತದೆ.

ಕಾಮಿಯಾದವನಿಗೆ ಅರ್ಥದ ಲಕ್ಷ್ಯವೂ ಇರುವುದಿಲ್ಲ. ಧರ್ಮದ ಪರಿವೆಯೂ ಇರುವುದಿಲ್ಲ. ಅರ್ಥ-ಕಾಮಗಳೆರಡೂ ಧರ್ಮದ ಚೌಕಟ್ಟಿನಲ್ಲಿ ಸೇರಿದರೆ ವ್ಯವಸ್ಥಿತವಾಗಿರುತ್ತವೆ. ಆದರೆ ಮನುಷ್ಯನ ಧರ್ಮಾಚರಣೆಯು ಪತ್ನಿಯನ್ನೇ ಅವಲಂಬಿಸಿರುತ್ತದೆ. ಧರ್ಮ ಮತ್ತು ಪತ್ನಿಯರು ಪರಸ್ಪರ ಹೊಂದಿಕೊಂಡಲ್ಲಿ ಧರ್ಮಾರ್ಥ-ಕಾಮಗಳೂ ಒಂದಾಗಿ ಸೇರುತ್ತವೆಂದು ಧರ್ಮಜನು ಉತ್ತರಿಸುತ್ತಾನೆ. ಈ ಉತ್ತರವು ಹೃದಯಂಗಮವಾಗಿದೆ.

ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು ಗೃಹಸ್ಥ ನಾದವನಿಂದ ಮಾತ್ರವೇ ಸಾಧಿಸತಕ್ಕುವುಗಳಾಗಿವೆ. ಏಕಾಕಿಯಾಗಿರುವ ಬ್ರಹ್ಮಚಾರಿಗಾಗಲೀ–ಸಂನ್ಯಾಸಿಗಾಗಲೀ ಈ ಪುರುಷಾರ್ಥಗಳ (ಅರ್ಥ-ಕಾಮಗಳ) ಸಾಧನೆಯಾಗಲಾರದು ಅಥವಾ ಇವುಗಳ ಅವಶ್ಯಕತೆಯೂ ಇಲ್ಲ. ಗೃಹಸ್ಥನಾದವನು ಧರ್ಮಮೂಲವಾಗಿ ಅರ್ಥ-ಕಾಮಗಳಲ್ಲಿ ಪ್ರವೃತ್ತನಾಗ ಬೇಕು. ಆದರೆ ಗೃಹಸ್ಥನೊಬ್ಬನ ಸಂಕಲ್ಪಮಾತ್ರದಿಂದ ಇದು ಸಾಧ್ಯವಾಗ ಲಾರದು. ಧರ್ಮಕಾರ್ಯಕ್ಕೆ ಸಹಧರ್ಮಿಣಿಯ ಸಹಕಾರವು ಬಹುಮುಖ್ಯ ವಾದುದು. ಗೃಹಸ್ಥನಾದವನು ಪತ್ನಿಯನ್ನು ಬಿಟ್ಟು ಯಾವ ಕಾರ್ಯವನ್ನೂ ಮಾಡುವಂತೆಯೂ ಇಲ್ಲ. ಸಾಮಾನ್ಯವಾಗಿ ಪತ್ನಿಯು (ಸಾಮಾನ್ಯ ಸ್ತ್ರೀಯು) ಅರ್ಥ-ಕಾಮಗಳಲ್ಲಿ ಆಸಕ್ತಿವಹಿಸುವಳೇ ಹೊರತು ಧರ್ಮದ ಕಡೆಗೆ ಹೆಚ್ಚು ಆಸಕ್ತಿಯನ್ನು ವಹಿಸುವುದಿಲ್ಲ. ಧರ್ಮದೆಡೆಗೆ ಹೆಚ್ಚು ಲಕ್ಷ್ಯಕೊಟ್ಟರೆ ಸ್ವಾರ್ಥತ್ಯಾಗ ಮಾಡಬೇಕಾಗುವುದು.

ಪತಿಶುಶ್ರೂಷೆ, ಅತ್ತೆ-ಮಾವಂದಿರ ಸೇವೆ, ಅತಿಥಿಸತ್ಕಾರ, ಪತಿಯು ನಿತ್ಯ-ನೈಮಿತ್ತಿಕವಾಗಿ ಮಾಡಬೇಕಾದ ಕರ್ಮಾನುಷ್ಠಾನಗಳಿಗೆ ಸಿದ್ಧಮಾಡಿ ಕೊಡುವುದು–ಇತ್ಯಾದಿಗಳು ಪತ್ನಿಯ ಕರ್ತವ್ಯಗಳಾಗಿರುತ್ತವೆ. ಪತ್ನಿಯಾದ ವಳು ಎಲ್ಲ ಪ್ರಕಾರಗಳಲ್ಲಿಯೂ ಪತಿಯನ್ನು ನಿಯಂತ್ರಿಸಬಲ್ಲಳು. ಪತಿ ಯನ್ನು ಧರ್ಮದೊಡನೆ ನಿಯೋಜಿಸಲೂ ಪತ್ನಿಗೆ ಸಾಧ್ಯವಿದೆ. ಆದುದರಿಂದ ನಾವು ಸಾಮಾನ್ಯವಾಗಿ ಪತ್ನಿಯನ್ನು ಧರ್ಮಪತ್ನಿಯೆಂದೇ ಕರೆಯುತ್ತೇವೆ. ಧರ್ಮಕ್ಕೂ–ಪತ್ನಿಗೂ ಹೊಂದಾಣಿಕೆಯಿದೆ. ಅದು ಕೃತಿಯಲ್ಲಾದರೆ ಧರ್ಮಾರ್ಥ-ಕಾಮಗಳು ಒಂದಾಗುವುದೆಂದು ಧರ್ಮಜನ ಉತ್ತರ. ಅದೇ ಧರ್ಮಪತ್ನಿಯು ಅರ್ಥ-ಕಾಮಗಳಿಗೆ ಮನಸೋತು ಪತಿಯನ್ನು ಅಧರ್ಮ ಪ್ರವೃತ್ತನನ್ನಾಗಿಯೂ ಮಾಡಬಲ್ಲಳು. ಹಿಂದೆಯೇ ಹೇಳಿದಂತೆ ಅರ್ಥ-ಕಾಮ ಗಳ ಲಾಲಸೆಯು ಮನುಷ್ಯನನ್ನು ಅಧರ್ಮಮಾರ್ಗಕ್ಕೆ ತಿರುಗಿಸುತ್ತದೆ. ಈ ಹಿಂದೆ 'ಭಾರ್ಯಾ ದೈವಕೃತಃ ಸಖಾ' 'ದೇವರು ಕೊಟ್ಟಿರುವ ಸ್ನೇಹಿತ ನೆಂದರೆ–ಪತ್ನೀ' ಎಂದೂ, 'ಭಾರ್ಯಾ ಮಿತ್ರಂ ಗೃಹೇ ಸತಃ' 'ಮನೆಯಲ್ಲಿ ಇರತಕ್ಕವನಿಗೆ ಪತ್ನಿಯೇ ಮಿತ್ರ' ಎಂದೂ, ಎರಡು ಪ್ರಕರಣಗಳಲ್ಲಿ ಧರ್ಮಜನು ಉತ್ತರಿಸಿದ್ದಾನೆ. ಇಲ್ಲಿ ಭಾರ್ಯೆಯು ಧರ್ಮದೊಡನೆ

ಯುಕ್ತಳಾದರೆ ಧರ್ಮಾರ್ಥ-ಕಾಮಗಳು ಒಂದಾಗುವುವೆಂದೂ ಹೇಳಿದ್ದಾನೆ. ಆದುದರಿಂದ ಸಂಸಾರದಲ್ಲಿ ಪತ್ನಿಯ ಪಾತ್ರವು ಎಷ್ಟು ಮಹತ್ತ್ವಪೂರ್ಣವೆಂದು ನಾವು ಅರ್ಥಮಾಡಿಕೊಳ್ಳಬಹುದಾಗಿದೆ.

ಭಾರತದಲ್ಲಿ ಸ್ತ್ರೀಯರೇ ನಮ್ಮ ಧರ್ಮವನ್ನು ಉಳಿಸಿದ್ದಾರೆನ್ನಬಹುದು. ಉಡುಗೆ-ತೊಡುಗೆಗಳಲ್ಲಿ, ನುಡಿ-ನಡೆಗಳಲ್ಲಿ ಪುರುಷರು ಸಂಪೂರ್ಣವಾಗಿ ವಿದೇಶೀಯರನ್ನು ಅನುಕರಣೆಮಾಡುತ್ತಿದ್ದರೂ ಸ್ತ್ರೀಯರು ಭಾರತೀಯರಿಗೆ ಸಹಜವಾದ ಉಡುಗೆ-ತೊಡುಗೆಗಳನ್ನು ಇನ್ನೂ ಬಿಟ್ಟಿಲ್ಲ. ಅವರ ಆಚಾರ-ವ್ಯವಹಾರಗಳೂ ಭಾರತೀಯವಾಗಿಯೇ ಮುಂದುವರಿಯುತ್ತಿವೆ. ಪುರುಷ ನಿಗಿಷ್ಟವಿರಲಿ ; ಇಲ್ಲದಿರಲಿ ಮನೆಯಲ್ಲಿ ಹಬ್ಬ-ಹರಿದಿನಗಳನ್ನೂ, ವ್ರತ ಕಥೆಗಳನ್ನೂ ಸ್ತ್ರೀಯರು ಯಥಾನುಕ್ರಮವಾಗಿ ಆಚರಿಸುತ್ತಾರೆ. ಇದೊಂದು ಭಾರತದ ಪುಣ್ಯವಿಶೇಷವೆಂದೇ ಹೇಳಬೇಕಾಗಿದೆ.

ಯಕ್ಷನ ಮುಂದಿನ ಪ್ರಶ್ನೆ :

**ಅಕ್ಷಯೋ ನರಕಃ ಕೇನ ಪ್ರಾಪ್ಯತೇ ಭರತರ್ಷಭ ।**
**ಏತನ್ಮೇ ಪೃಚ್ಛತಃ ಪ್ರಶ್ನಂ ತಚ್ಛೀಘ್ರಂ ವಕ್ತುಮರ್ಹಸಿ ॥೧೦೩॥**

"ಭರತಶ್ರೇಷ್ಠನೇ! ಯಾವುದರಿಂದ ಮನುಷ್ಯನಿಗೆ ಅಕ್ಷಯವಾದ ನರಕವು ಪ್ರಾಪ್ತವಾಗುತ್ತದೆ? ಈ ಪ್ರಶ್ನೆಗೆ ನನಗೆ ಉತ್ತರವನ್ನು ಬೇಗ ಹೇಳು."

ಯುಧಿಷ್ಠಿರನು ಒಡನೆಯೇ ಉತ್ತರಿಸುತ್ತಾನೆ :

**ಬ್ರಾಹ್ಮಣಂ ಸ್ವಯಮಾಹೂಯ ಯಾಚಮಾನಮಕಿಞ್ಚನಮ್ ।**
**ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ಸೋಽಕ್ಷಯಂ ನರಕಂ ವ್ರಜೇತ್ ॥**

"ಯಾಚಕನಾದ ದರಿದ್ರಬ್ರಾಹ್ಮಣನನ್ನು ತಾನಾಗಿಯೇ ಕರೆತಂದು ಅನಂತರ–'ಏನೂ ಇಲ್ಲ'–ಎಂದು ಹೇಳಿ ಅವನಿಗೆ ಏನನ್ನೂ ಕೊಡದೇ ಹಿಂದಕ್ಕೆ ಕಳುಹಿಸುವವನು ಶಾಶ್ವತವಾಗಿ ನರಕದಲ್ಲಿರುತ್ತಾನೆ."

ಆಗ ಬಾ, ಹೋಗಿ ಬಾ–ಎಂದು ಹೇಳುವುದು ಕೆಲವರಿಗೆ ಸ್ವಭಾವವಾಗಿ ರುತ್ತದೆ. ಹಾಗೆ ಹೇಳುವುದೇ ತಮಗೆ ಗೌರವವೆಂದೂ ಅವರು ಭಾವಿಸುತ್ತಾರೆ. ಯಾಚಕನಾದವನು ಅನ್ಯಥಾ ವಿಧಿಯಿಲ್ಲದೇ ಎಷ್ಟು ಬಾರಿ ಹೋಗಿ

ಬಾರೆಂದರೂ ಬರುತ್ತಲೇ ಇರುತ್ತಾನೆ. ಆದರೆ ನಿರಾಶೆಯಿಂದುಂಟಾಗುವ ಅವನ ಹೃದಯದ ತಾಪವು ಅವರ್ಣನೀಯವಾದುದು. ಅವನ ಹೃದಯದ ತಾಪವೇ ಧನಿಕನ ಅಧಃಪತನಕ್ಕೆ ಕಾರಣವಾಗುತ್ತದೆ. ಆದುದರಿಂದಲೇ ದೊಡ್ಡವರು–"ದಾನಕೊಡಲಿಚ್ಛಿಸುವವರು 'ನಾಳೆ' ಎನ್ನಬಾರದು : ನಿಧಾನಿಸಬಾರದು : ದಾನಪಡೆಯುವವನಿಗೂ ಹೆಚ್ಚು ನಿರಾಶೆಗೆ ಕಾರಣವಾಗಬಹುದು"–ಎನ್ನುತ್ತಾರೆ.

**ವೇದೇಷು ಧರ್ಮಶಾಸ್ತ್ರೇಷು ಮಿಥ್ಯಾ ಯೋ ವೈ ದ್ವಿಜಾತಿಷು ।**
**ದೇವೇಷು ಪಿತೃಧರ್ಮೇಷು ಸೋಽಕ್ಷಯಂ ನರಕಂ ವ್ರಜೇತ್ ॥**

ವೇದಗಳಲ್ಲಿ, ಧರ್ಮಶಾಸ್ತ್ರಗಳಲ್ಲಿ, ಬ್ರಾಹ್ಮಣರಲ್ಲಿ, ದೇವತೆಗಳಲ್ಲಿ, ಪಿತೃಸಂಬಂಧವಾದ ಶ್ರಾದ್ಧಾದಿಗಳಲ್ಲಿ ಯಾವನಿಗೆ ಮಿಥ್ಯಾಬುದ್ಧಿಯಿರುವುದೋ (ನಂಬಿಕೆಯಿರುವುದಿಲ್ಲವೋ) ಅವನು ಕ್ಷಯರಹಿತವಾದ ನರಕಕ್ಕೆ ಹೋಗುತ್ತಾನೆ. (ಅನಂತಕಾಲದವರೆಗೂ ನರಕದಲ್ಲಿಯೇ ಬಿದ್ದು ಒದ್ದಾಡುತ್ತಿರುತ್ತಾನೆ.)

**ವಿದ್ಯಮಾನೇ ಧನೇ ಲೋಭಾದ್ದಾನಭೋಗವಿವರ್ಜಿತಃ ।**
**ಪಶ್ಚಾನ್ನಾಸ್ತೀತಿ ಯೋ ಬ್ರೂಯಾತ್ಸೋಽಕ್ಷಯಂ ನರಕಂ**
**ವ್ರಜೇತ್ ॥೧೦೬॥**

ಸಮೃದ್ಧವಾದ ಐಶ್ವರ್ಯವಿದ್ದರೂ ಧನಲೋಭದಿಂದ ಯಾವ ದಾನವನ್ನೂ ಮಾಡದೇ ತಾನೂ ಅನುಭವಿಸದೇ ಇರುತ್ತಾನೆಯೋ ಮತ್ತು ಯಾಚಕರಿಗೆ ಮೊದಲು ಕೊಡುವೆನೆಂದು ವಾಗ್ದಾನವಿತ್ತು ಅನಂತರದಲ್ಲಿ ಇಲ್ಲವೆಂದು ಹೇಳಿಬಿಡುತ್ತಾನೆಯೋ–ಅವನು ಕ್ಷಯರಹಿತವಾದ ( ವಿಮೋಚನೆಯೇ ಇಲ್ಲದ ) ನರಕಕ್ಕೆ ಹೋಗುತ್ತಾನೆ."

ಯಕ್ಷನ ಮುಂದಿನ ಪ್ರಶ್ನೆ :

**ರಾಜನ್ಕುಲೇನ ವೃತ್ತೇನ ಸ್ವಾಧ್ಯಾಯೇನ ಶ್ರುತೇನ ವಾ ।**
**ಬ್ರಾಹ್ಮಣ್ಯಂ ಕೇನ ಭವತಿ ಪ್ರಬ್ರೂಹ್ಯೇತತ್ಸುನಿಶ್ಚಿತಮ್ ॥೧೦೭॥**

"ಮಹಾರಾಜ! ಬ್ರಾಹ್ಮಣತ್ವಸಿದ್ಧಿಗೆ ಕಾರಣವು ಯಾವುದು?

ಕುಲವೋ? ನಡತೆಯೋ? ವೇದಾಧ್ಯಯನವೋ? ವಿದ್ಯೆಯೋ?– ಇದನ್ನು ನಿಶ್ಚಯಿಸಿ ಹೇಳು.”

ಯುಧಿಷ್ಠಿರನ ಉತ್ತರ :

**ಶೃಣು ಯಕ್ಷ ಕುಲಂ ತಾತ ನ ಸ್ವಾಧ್ಯಾಯೋ ನ ಚ ಶ್ರುತಮ್ ।**
**ಕಾರಣಂ ಹಿ ದ್ವಿಜತ್ವೇ ಚ ವೃತ್ತಮೇವ ನ ಸಂಶಯಃ ॥೧೦೮॥**

“ಯಕ್ಷ! ಬ್ರಾಹ್ಮಣ್ಯಕ್ಕೆ ಕುಲ, ವೇದಾಧ್ಯಯನ, ವಿದ್ಯೆ–ಇವಾವುದೂ ಕಾರಣವಲ್ಲ. ನಡತೆಯೇ (ಸದಾಚಾರವೇ) ಬ್ರಾಹ್ಮಣ್ಯಕ್ಕೆ ಮುಖ್ಯ ಕಾರಣವಾಗಿರುತ್ತದೆ. ಇದರಲ್ಲಿ ಸಂಶಯವೇ ಇಲ್ಲ.

**ವೃತ್ತಂ ಯತ್ನೇನ ಸಂರಕ್ಷ್ಯಂ ಬ್ರಾಹ್ಮಣೇನ ವಿಶೇಷತಃ ।**
**ಅಕ್ಷೀಣವೃತ್ತೋ ನ ಕ್ಷೀಣೋ ವೃತ್ತತಸ್ತು ಹತೋ ಹತಃ ॥೧೦೯॥**

ನಡತೆಯನ್ನು (ಸದಾಚಾರವನ್ನು) ಪ್ರಯತ್ನಪೂರ್ವಕವಾಗಿ ಸಂರಕ್ಷಿಸಿಕೊಳ್ಳಬೇಕು. ಅದರಲ್ಲಿಯೂ ಬ್ರಾಹ್ಮಣನು ವಿಶೇಷವಾಗಿ ತನ್ನ ನಡೆ-ನುಡಿಗಳನ್ನು ಧರ್ಮವಿಹಿತವಾದ ರೀತಿಯಲ್ಲಿ ಸಂರಕ್ಷಿಸಿಕೊಳ್ಳಬೇಕು. ನಡತೆಯು ಉತ್ತಮವಾಗಿದ್ದರೆ ಅವನೆಂದಿಗೂ ಕ್ಷೀಣನಾಗುವುದಿಲ್ಲ. (ಉತ್ತಮನೇ ಆಗುತ್ತಾನೆ.) ನಡತೆಯು ಕೆಟ್ಟರೆ ಮಾತ್ರ ಅವನು ಸಂಪೂರ್ಣವಾಗಿ ಹಾಳಾದಂತೆಯೇ ಸರಿ.

**ಪಠಕಾಃ ಪಾಠಕಾಶ್ಚೈವ ಯೇ ಚಾನ್ಯೇ ಶಾಸ್ತ್ರಚಿನ್ತಕಾಃ ।**
**ಸರ್ವೇ ವ್ಯಸನಿನೋ ಮೂರ್ಖಾ ಯಃ ಕ್ರಿಯಾವಾನ್ಸ ಪಣ್ಡಿತಃ ॥೧೧೦॥**

ದುರ್ವ್ಯಸನವುಳ್ಳವರು–ಸ್ವಯಂ ವ್ಯಾಸಂಗಿಗಳಾಗಿರಲೀ ; ಪಾಠ ಹೇಳಿಕೊಡುವವರಾಗಲೀ ; ಶಾಸ್ತ್ರಪರಿಶೀಲಕರಾಗಲೀ–ಅವರೆಲ್ಲರೂ ಮೂರ್ಖರೇ ಸರಿ. ಕ್ರಿಯಾಶೀಲನಾದ ಆಚಾರವಂತನೇ ಪಂಡಿತನು.

**ಚತುರ್ವೇದೋಽಪಿ ದುರ್ವೃತ್ತಃ ಸ ಶೂದ್ರಾದತಿರಿಚ್ಯತೇ ।**
**ಯೋಽಗ್ನಿಹೋತ್ರಪರೋ ದಾನ್ತಃ ಸ ಬ್ರಾಹ್ಮಣ ಇತಿ ಸ್ಮೃತಃ ॥೧೧೧॥**

ಚತುರ್ವೇದಗಳನ್ನೂ ಅಧ್ಯಯನಮಾಡಿದ್ದರೂ ಅವನು ದುರ್ವೃತ್ತಿಯುಳ್ಳವನಾಗಿದ್ದರೆ ಶೂದ್ರನಿಗಿಂತಲೂ ಕೀಳೆನಿಸಿಕೊಳ್ಳುತ್ತಾನೆ. ಅಗ್ನಿ

ಹೋತ್ರಾದಿಗಳನ್ನು ಮಾಡುತ್ತಾ ಜಿತೇಂದ್ರಿಯನಾಗಿರುವವನೇ ಬ್ರಾಹ್ಮಣ ನೆನಿಸಿಕೊಳ್ಳುತ್ತಾನೆ.

ಯಕ್ಷನು ಕೇಳಿದ ಒಂದು ಪ್ರಶ್ನೆಗೆ ಯುಧಿಷ್ಠಿರನು ನಾಲ್ಕು ಶ್ಲೋಕಗಳಿಂದ ಉತ್ತರಿಸುತ್ತಾನೆ ; ಅರ್ಥಾತ್ ಯಕ್ಷನು ಕೇಳಿರುವ ಪ್ರಶ್ನೆಯು ಅಷ್ಟು ಮಹತ್ತ್ವವುಳ್ಳದ್ದಾಗಿದೆ. ಯಾವುದರಿಂದ ಬ್ರಾಹ್ಮಣನೆನಿಸಿಕೊಳ್ಳುತ್ತಾನೆ? ಕುಲದಿಂದಲೋ? ಅಧ್ಯಯನ-ಅಧ್ಯಾಪನಗಳಿಂದಲೋ? ಮುಂತಾಗಿ ಯಕ್ಷನು ಪ್ರಶ್ನಿಸುತ್ತಾನೆ. ಜನ್ಮತಃ ಬ್ರಾಹ್ಮಣನಾಗುವನೆಂದು ನಾವು ಭಾವಿಸುತ್ತೇವೆ. ಬ್ರಾಹ್ಮಣಪುರುಷನಿಗೆ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದವನು ಬ್ರಾಹ್ಮಣ. ಒಂದು ಜಾತಿಗೆ ಅಥವಾ ಪಂಗಡಕ್ಕೆ ಸೇರಿದವನೆಂದು ಬಹುಸುಲಭವಾಗಿ ಹೇಳಬಹುದಾದರೂ ಬ್ರಾಹ್ಮಣನ ವಿಷಯದಲ್ಲಿ ಮಾತ್ರ ಕೇವಲ ಹುಟ್ಟಿನಿಂದಲೇ ಬ್ರಾಹ್ಮಣನಾಗಲಾರನೆಂಬುದು ಯುಧಿಷ್ಠಿರನ ಅಭಿಪ್ರಾಯವಾಗಿದೆ.

ಈ ಪ್ರಶ್ನೆಯು ಬ್ರಾಹ್ಮಣನ ವಿಷಯದಲ್ಲಿ ಮಾತ್ರವೇ ಕೇಳಲ್ಪಡುವುದೇ ಹೊರತು ಮತ್ತಾವ ವರ್ಣಗಳ ವಿಷಯದಲ್ಲಿಯೂ ಈ ಪ್ರಶ್ನೆಯು ಉದ್ಭವಿಸುವುದಿಲ್ಲ. ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದವನು ಬ್ರಾಹ್ಮಣನೆಂದು ನಾವು ಸಾಮಾನ್ಯಾಭಿಪ್ರಾಯವನ್ನು ಇಟ್ಟುಕೊಂಡಿದ್ದರೂ ಉಪನಯನವಾಗದೇ ಅವನು ಬ್ರಾಹ್ಮಣನಾಗಲಾರನೆಂದು ನಾವೂ ಭಾವಿಸುತ್ತೇವೆ. ನಾವು ಅಂತಹವನನ್ನು ಅಬ್ರಾಹ್ಮಣನೆಂದು ಹೇಳುವುದಿಲ್ಲ. ಬ್ರಾಹ್ಮಣನ ಮನೆ ಯಲ್ಲಿಯೇ ಹುಟ್ಟಿದ್ದರೂ ಬ್ರಾಹ್ಮಣನೆಂದು ಗೌರವಿಸುವುದಿಲ್ಲ. ಅವನು ಉಪನೀತನಾಗುವವರೆಗೂ ಶೂದ್ರನೇ ಆಗಿರುವನೆಂದು ಶಾಸ್ತ್ರಗಳು ಹೇಳುತ್ತವೆ.

**ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರೈರ್ದ್ವಿಜ ಉಚ್ಯತೇ ।**
**ವಿದ್ಯಯಾ ಯಾತಿ ವಿಪ್ರತ್ವಂ ತ್ರಿಭಿಃ ಶ್ರೋತ್ರಿಯ ಉಚ್ಯತೇ ॥**

ಹುಟ್ಟುವಾಗ ಶೂದ್ರನಾಗಿಯೇ ಹುಟ್ಟುತ್ತಾನೆ. ಜಾತಕರ್ಮ ನಾಮಕರಣಾದಿ ಸಂಸ್ಕಾರಗಳಿಂದ ದ್ವಿಜನಾಗುತ್ತಾನೆ. ವಿದ್ಯೆಯಿಂದ ವಿಪ್ರ ನಾಗುತ್ತಾನೆ. ಬ್ರಾಹ್ಮಣವರ್ಣದಲ್ಲಿ ಜನ್ಮ, ಜಾತಕರ್ಮಾದಿ ಸಂಸ್ಕಾರಗಳು

ಮತ್ತು ವೇದಾಧ್ಯಯನ–ಇವು ಮೂರೂ ಇದ್ದರೆ ಅವನು ಶ್ರೋತ್ರಿಯನೆನಿಸಿ ಕೊಳ್ಳುತ್ತಾನೆ.

**ಜಾತ್ಯಾ ಕುಲೇನ ವೃತ್ತೇನ ಸ್ವಾಧ್ಯಾಯೇನ ಶ್ರುತೇನ ಚ ।**
**ಏಭಿರ್ಯುಕ್ತೋ ಹಿ ಯಸ್ತಿಷ್ಠನ್ನಿತ್ಯಂ ಸ ದ್ವಿಜ ಉಚ್ಯತೇ ॥**

ಜನ್ಮ, ಕುಲ, ವೃತ್ತ, ಅಧ್ಯಯನ ಮತ್ತು ತತ್ತ್ವಜ್ಞಾನ–ಇವುಗಳಿರುವವನು ದ್ವಿಜನೆಂದು ಹೇಳಲ್ಪಡುತ್ತಾನೆ.

ಉಪನಯನವಾದೊಡನೆಯೇ ಗುರುಶುಶ್ರೂಷೆಯನ್ನು ಮಾಡಿ ಕೊಂಡು ವಿದ್ಯೆಯನ್ನು ಕಲಿಯುವುದು. ಬ್ರಹ್ಮಚರ್ಯದ ಕಾಲದಲ್ಲಿ ಭಿಕ್ಷಾವೃತ್ತಿ ಯಿಂದ ಜೀವನ–ಇತ್ಯಾದಿ ಬ್ರಾಹ್ಮಣನಿಗೆ ವಿಧಿಸಿರುವ ಸಂಸ್ಕಾರಗಳು ಅವನನ್ನು ಸನ್ಮಾರ್ಗದಲ್ಲಿ ಪ್ರವರ್ತಿಸಲು ಸಹಾಯಕವಾಗುತ್ತವೆ. ಅವನ ಜೀವನವೇ ಧಾರ್ಮಿಕವಾದ ಚೌಕಟ್ಟಿನಲ್ಲಿ ನಡೆಯುತ್ತಿರುತ್ತದೆ. ಬ್ರಾಹ್ಮಣ ನಾದವನಿಗೆ ವಿಧಿಸಿರುವ ಸಂಸ್ಕಾರಗಳೆಲ್ಲವೂ ಅವನ ಜೀವನವನ್ನು ಸಂಸ್ಕೃತ ಗೊಳಿಸುತ್ತವೆ. ಆತ್ಮಸಾಕ್ಷಾತ್ಕಾರ ಅಥವಾ ಮೋಕ್ಷಕ್ಕಾಗಿಯೇ ಬ್ರಾಹ್ಮಣಜನ್ಮ. ಇಷ್ಟು ಸಂಸ್ಕಾರಗಳಾಗಿಯೂ ಅವನು ದುರ್ವೃತ್ತನಾಗಿದ್ದರೆ ಅವನು ಬ್ರಾಹ್ಮಣ ನಾಗಲಾರನೆಂದು ಹೇಳಿರುವುದು ಸಾಧುವಾಗಿಯೇ ಇದೆ.

**ಬ್ರಾಹ್ಮಣಸ್ಯ ಹಿ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।**
**ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ ॥**

ಭಾಗವತ–ಸ್ಕಂ. 11-ಅ. 17-ಶ್ಲೋ. 42

ಬ್ರಾಹ್ಮಣನ ದೇಹವು ಕ್ಷುದ್ರವಾದ ಕಾಮನೆಗಳನ್ನು ಪಡೆದುಕೊಳ್ಳಲು ತಕ್ಕುದಾಗಿಲ್ಲ. ಈ ಜನ್ಮದಲ್ಲಿ ಬಹುಕ್ಲೇಶಕರವಾದ ತಪಸ್ಸನ್ನು ಮಾಡುವುದಕ್ಕೂ ಪರಲೋಕದಲ್ಲಿ ಅನಂತಸುಖವನ್ನು ಪಡೆಯುವುದಕ್ಕೂ ತಕ್ಕುದಾಗಿದೆ.

ಬ್ರಾಹ್ಮಣನು ಸ್ವಾಧ್ಯಾಯವ್ರತನಿಷ್ಠನಾಗಿರಬೇಕು. ಸತ್ತ್ವಗುಣ ಸಂಪನ್ನನೂ ಆಗಿರಬೇಕೆಂಬುದು ಯುಧಿಷ್ಠಿರನ ಅಭಿಪ್ರಾಯವಾಗಿದೆ.

ಸತ್ತ್ವಗುಣಸಂಪನ್ನತೆಯು ಮಾತ್ರವೇ ಬ್ರಾಹ್ಮಣತ್ವವನ್ನುಂಟುಮಾಡುವುದೆಂದು ಯುಧಿಷ್ಠಿರರಾಜನ ಅಭಿಪ್ರಾಯವಲ್ಲ. ಬ್ರಾಹ್ಮಣನು ತನ್ನ ಸದ್ವೃತ್ತಿಯನ್ನು ಎಂದೆಂದಿಗೂ ಬಿಡಬಾರದು. ಬ್ರಾಹ್ಮಣನಿಗೆ ಸದ್ವೃತ್ತಿಯೇ ಭೂಷಣ. ವೇದ-ವೇದಾಂಗಪಾರಂಗತನಾಗಿದ್ದರೂ ದುರ್ವೃತ್ತನಾಗಿದ್ದರೆ ಅಂತಹವನು ಶೂದ್ರನಿಗಿಂತಲೂ ಕಡೆಯೇ ಸರಿ. ಏಕೆಂದರೆ : ವೇದ- ವೇದಾಂತಗಳಲ್ಲಿನ ಮುಖ್ಯಸಾರಾಂಶವು–'ಮನುಷ್ಯನು ಶಮ-ದಮಾದಿ ಗುಣಗಳಿಂದ ಕೂಡಿರಬೇಕು ಮತ್ತು ಸದ್ವೃ ತ್ತಿಯುಳ್ಳವನಾಗಿರಬೇಕು'–ಎಂದು ಹೇಳುವುದೇ ಆಗಿದೆ. ಹೆಜ್ಜೆ-ಹೆಜ್ಜೆಗೂ ಜಿತೇಂದ್ರಿಯನಾಗಿರಬೇಕೆಂದು ವೇದೋಪನಿಷತ್ತುಗಳು ಉದ್ಘೋಷಿಸುತ್ತವೆ. ಅದನ್ನು ತಿಳಿದೂ ಚತುರ್ವೇದಪಾರಂಗತನು ದುರ್ವೃತ್ತನಾದರೆ ನಾಯಿಯ ಮೊಲೆಯಲ್ಲಿ ಹಾಲಿದ್ದಷ್ಟೇ ಪ್ರಯೋಜನವಾಗುತ್ತದೆ. ಅಂತಹವನು ಪತಿತನೆಂದೂ ಧರ್ಮಶಾಸ್ತ್ರಗಳು ತಿಳಿಸುತ್ತವೆ. ತಿಳಿಯದೇ ತಪ್ಪುಮಾಡಬಹುದು. ಅದಕ್ಕೆ ಮಾಡಿಕೊಳ್ಳಬೇಕಾದ ಪ್ರಾಯಶ್ಚಿತ್ತವು ಅತ್ಯಲ್ಪವಾದುದು. ತಿಳಿದೂ ಮಾಡುವ ತಪ್ಪಿಗೆ ಪ್ರಾಯಶ್ಚಿತ್ತವೇ ಇಲ್ಲ. ಈ ಕಾರಣದಿಂದಲೇ ನಮ್ಮಲ್ಲಿ–'ಪುರಾಣ ಹೇಳಲಿಕ್ಕೆ ಬದನೆಕಾಯಿ ತಿನ್ನಲಿಕ್ಕೆ' 'ಹೇಳುವುದು ವೇದ ಹಾಕುವುದು ಗಾಳ'–ಇತ್ಯಾದಿ ಗಾದೆಗಳು ಹುಟ್ಟಿಕೊಂಡಿವೆ. ಈಗಲಂತೂ ಇಂತಹ ಅನೇಕ ಧರ್ಮವಂಚಕರನ್ನು ನಾವು ಕಾಣುತ್ತಿದ್ದೇವೆ. ಹೇಳುವುದು ಧರ್ಮ–ಅನುಸರಿಸುವುದು ಅಧರ್ಮ. ಅಂತಹವನ ದುರ್ವೃತ್ತವು ಜನಸಾಮಾನ್ಯಕ್ಕೆ ತಿಳಿಯದಿರಬಹುದು. ಆದರೆ ಅಂತಹವನು ಪುನಃ ಮನುಷ್ಯಜನ್ಮವನ್ನು ಎಂದಿಗೂ ಪಡೆಯಲಾರನು.

**ವೃತ್ತತಸ್ತು ಹತೋ ಹತಃ** = ನಡತೆಯು ಕೆಟ್ಟರೆ ಹಾಳಾಗಿಯೇ ಹೋಗುತ್ತಾನೆ–ಎಂದು ಯುಧಿಷ್ಠಿರನು ಉದ್ಘೋಷಿಸಿ ಹೇಳುತ್ತಾನೆ. ಒಬ್ಬನು ಅನೇಕಧರ್ಮಶಾಸ್ತ್ರಗಳನ್ನೂ ಓದಿರಬಹುದು. ಪ್ರವಚನ ಪಾಂಡಿತ್ಯದಲ್ಲಿ ಅದ್ವಿತೀಯನೆನಿಸಿಕೊಂಡಿರಬಹುದು. ಸಕಲಶಾಸ್ತ್ರಗಳಲ್ಲಿಯೂ ನಿಷ್ಣಾತನಾಗಿರಬಹುದು. ಅನೇಕಾನೇಕ ಪುರಸ್ಕಾರಗಳನ್ನೂ ಪಡೆದಿರಬಹುದು. ಆದರೆ ಅಂತಹವನು ದುರ್ವ್ಯಸನಿಯಾದರೆ ಮೂರ್ಖನೇ ಸರಿ. ಯಾವಾತನು ಪರರಿಗೆ ಹೇಳುವುದನ್ನು ತಾನೂ ಅನುಷ್ಠಾನದಲ್ಲಿಟ್ಟು

ಕೊಳ್ಳುವನೋ, ಸದ್ವೃತ್ತಿಯಲ್ಲಿರುವನೋ–ಅವನೇ ಪಂಡಿತನು. ಅವನೇ ಜ್ಞಾನೀ.

**ಪರಬೋಧನವೇಳಾಯಾಂ ಸರ್ವೇಽಪಿ ವಿಬುಧಾ ಜನಾಃ ।**
**ಸ್ವಾನುಷ್ಠಾನಸ್ಯ ಸಮಯೇ ಮುನಯೋಽಪಿ ನ ಪಣ್ಡಿತಾಃ ॥**

ಪರರಿಗೆ ಬೋಧನೆಮಾಡುವಾಗ ಎಲ್ಲರೂ ವಿದ್ವಾಂಸರೇ ಆಗಿರುತ್ತಾರೆ. ಇತರರಿಗೆ ಹೇಳುವುದನ್ನು ತಾವೇ ಅನುಷ್ಠಾನಮಾಡಬೇಕಾಗಿ ಬಂದಾಗ ಅವರು ಮುನಿಗಳೇ ಆಗಿದ್ದರೂ ಪಂಡಿತರಾಗುವುದಿಲ್ಲ. ತಮ್ಮ ಪಾಂಡಿತ್ಯದ ಪ್ರೌಢಿಮೆಯನ್ನು ಅನುಷ್ಠಾನದಲ್ಲಿ ತೋರಿಸುವುದಿಲ್ಲ.

ಕಟ್ಟಕಡೆಯಲ್ಲಿ ಯುಧಿಷ್ಠಿರನು ತನ್ನ ಅಭಿಪ್ರಾಯವನ್ನು ಬಹಳ ಸ್ಪಷ್ಟವಾಗಿಯೇ ಯಕ್ಷನ ಮುಂದಿಡುತ್ತಾನೆ. ಅಗ್ನಿಹೋತ್ರಪರನಾದ, ಇಂದ್ರಿಯಗಳನ್ನು ದಮನಮಾಡಿರುವ ಬ್ರಾಹ್ಮಣನು ನಿಜವಾದ ಬ್ರಾಹ್ಮಣ ನೆನಿಸಿಕೊಳ್ಳುತ್ತಾನೆ. ಅರ್ಥಾತ್ ಬ್ರಾಹ್ಮಣನಿಗೆ ವಿಧಿಸಿರುವ ಸಕಲಕರ್ಮ ಗಳೂ ಅವನು ಜಿತೇಂದ್ರಿಯನಾಗಲೂ ಮತ್ತು ಆತ್ಮಸಾಕ್ಷಾತ್ಕಾರಮಾಡಿ ಕೊಳ್ಳಲೂ ಅನುವಾಗುತ್ತವೆ. ಆದರೆ ಅದಕ್ಕೆ ವಿದ್ಯೆಯೂ ಮತ್ತು ತದನು ರೂಪವಾದ ನಡವಳಿಕೆಯೂ ಅತ್ಯವಶ್ಯಕ. ಕೇವಲ ವಿದ್ಯೆಯಿದ್ದು ನಡವಳಿಕೆ ಯಿಲ್ಲದಿದ್ದರೆ ಪತಿತನಾಗುತ್ತಾನೆ. ಹೆಚ್ಚು ವಿದ್ಯೆಯಿಲ್ಲದಿದ್ದರೂ ನಡವಳಿಕೆ ಯಿದ್ದರೆ ಉದ್ಧಾರವಾಗುತ್ತಾನೆ. ಹೇಗೆಂದರೆ : ವಿದ್ಯೆಯ ಮುಖ್ಯಪ್ರಯೋಜನ ನಡತೆಯೇ ಆಗಿದೆ. ಆದುದರಿಂದ ಬ್ರಾಹ್ಮಣನಾದವನು ಬ್ರಾಹ್ಮಣ ನೆನಿಸಿಕೊಳ್ಳಬೇಕಾದರೆ ಅವನಲ್ಲಿ ಮುಖ್ಯವಾಗಿ ಸದ್ವೃತ್ತಿಯಿರಬೇಕು. ಅವನು ಜಿತೇಂದ್ರಿಯನಾಗಿರಬೇಕು ಮತ್ತು ನಿತ್ಯ-ನೈಮಿತ್ತಿಕವಾದ ಔಪಾಸನೆ, ಅಗ್ನಿಹೋತ್ರ, ವೈಶ್ವದೇವ, ಅತಿಥಿಸತ್ಕಾರ–ಇತ್ಯಾದಿಗಳನ್ನು ಮಾಡಬೇಕು– ಎಂಬುದು ಧರ್ಮರಾಜನ ಖಚಿತವಾದ ಅಭಿಪ್ರಾಯವಾಗಿದೆ.

ಯಕ್ಷನ ಮುಂದಿನ ಪ್ರಶ್ನೆ :

**ಪ್ರಿಯವಚನವಾದೀ ಕಿಂ ಲಭತೇ**
**ವಿಮೃಶಿತಕಾರ್ಯಕರಃ ಕಿಂ ಲಭತೇ ।**

**ಬಹುಮಿತ್ರಕರಃ ಕಿಂ ಲಭತೇ**
**ಧರ್ಮರತಃ ಕಿಂ ಲಭತೇ ಕಥಯ ॥೧೧೨॥**

"ಪ್ರಿಯವಾದ ಮಾತನ್ನಾಡುವವನಿಗೆ ದೊರಕುವುದೇನು? ಕಾರ್ಯವನ್ನು ವಿಮರ್ಶಿಸಿ ಮಾಡುವವನಿಗೆ ಸಿಕ್ಕುವ ಫಲವೇನು? ಹಲವು ಮಂದಿ ಮಿತ್ರರನ್ನು ಸಂಪಾದಿಸಿಕೊಳ್ಳುವವನಿಗೆ ಸಿಕ್ಕುವ ಲಾಭವೇನು? ಧರ್ಮರತನಿಗೆ ದೊರಕುವುದೇನು? ಹೇಳು."

ಯುಧಿಷ್ಠಿರನ ಉತ್ತರ :

**ಪ್ರಿಯವಚನವಾದೀ ಪ್ರಿಯೋ ಭವತಿ**
**ವಿಮೃಶಿತಕಾರ್ಯಕರೋಽಧಿಕಂ ಜಯತಿ ।**
**ಬಹುಮಿತ್ರಕರಃ ಸುಖಂ ವಸತೇ**
**ಯಶ್ಚ ಧರ್ಮರತಃ ಸ ಗತಿಂ ಲಭತೇ ॥೧೧೩॥**

"ಪ್ರಿಯವಾದ ಮಾತನ್ನಾಡುವವನು ಎಲ್ಲರಿಗೂ ಪ್ರಿಯನಾಗಿರುತ್ತಾನೆ. ಕಾರ್ಯವನ್ನು ವಿಮರ್ಶಿಸಿ ಮಾಡುವವನು ಹೆಚ್ಚು ಜಯಶೀಲನಾಗುತ್ತಾನೆ. ಹಲವು ಮಂದಿ ಮಿತ್ರರುಳ್ಳವನು ಸುಖಿಯಾಗಿರುತ್ತಾನೆ. ಧರ್ಮರತನು ಸದ್ಗತಿಯನ್ನು ಪಡೆಯುತ್ತಾನೆ."

**ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾತ್ ।**
**ನ ಬ್ರೂಯಾತ್ಸತ್ಯಮಪ್ರಿಯಮ್ ॥**

ಸತ್ಯವನ್ನೂ ಹೇಳಬೇಕು : ಪ್ರಿಯವನ್ನೂ ಹೇಳಬೇಕು. ಆದರೆ ಕೆಲವು ಸಮಯಗಳಲ್ಲಿ ಸತ್ಯವನ್ನು ಹೇಳುವುದು ಅಪ್ರಿಯವಾಗುವುದಾದರೆ ಏನೂ ಹೇಳದೆಯೇ ಇರಬೇಕೇ ಹೊರತು ಅಪ್ರಿಯವಾಗುವುದನ್ನು ಮಾತ್ರ ಹೇಳಬಾರದು. ಅಥವಾ ಅಪ್ರಿಯವಾದ ರೀತಿಯಲ್ಲಿ ಸತ್ಯವನ್ನು ಹೇಳಬಾರದು.

ವಿಮರ್ಶೆಮಾಡಿ ಕಾರ್ಯಮಾಡುವವನು ಅಧಿಕವಾದ ಜಯಗಳಿಸುತ್ತಾನೆ. ವಿಮರ್ಶೆಮಾಡುವುದೆಂದರೆ ತಾನು ಮಾಡುವ ಕಾರ್ಯದಿಂದ ಆಗುವ ಸಾಧಕ-ಬಾಧಕಗಳನ್ನು ಸಂಪೂರ್ಣವಾಗಿ ವಿವೇಚಿಸುವುದು. ರಾಜ್ಯಾಧಿಕಾರ

ಮಾಡುವವರಿಗೆ ಈ ವಿಷಯವು ಬಹುಮುಖ್ಯವಾದುದು. ಹೊಸ-ಹೊಸ ಸುಧಾರಣೆಗಳನ್ನು ಮಾಡುವಾಗ, ಇರುವ ವಿಧಾಯಕವನ್ನು ವ್ಯತ್ಯಸ್ತಗೊಳಿಸುವಾಗ, ಅದರಿಂದ ಆಗಬಹುದಾದ ಪ್ರತಿಕ್ರಿಯೆಗಳನ್ನು ಮೊದಲೇ ಮನದಟ್ಟು ಮಾಡಿಕೊಂಡಿರಬೇಕು. ಕೆಲವು ವಿಧಾಯಕಗಳು ದುಷ್ಟವಾದ ಪರಿಣಾಮವನ್ನು ಉಂಟುಮಾಡಬಹುದು. ಕೋಪ, ಅಸೂಯೆ–ಇತ್ಯಾದಿಗಳಿಗೆ ಬಲಿಯಾಗಿ ಯಾವ ಕಾರ್ಯವನ್ನೂ ಮಾಡಲು ಹೋಗಬಾರದು. ಉದ್ವೇಜಿತನಾದ ಸಮಯದಲ್ಲಿ ಕಾರ್ಯಮಾಡಬಾರದು. ಯಾವ ಸಮಯದಲ್ಲೇ ಆಗಲೀ ವಿವೇಚಿಸಿ ಕಾರ್ಯಮಾಡುವುದರಿಂದ ಜಯವು ಖಂಡಿತವಾಗಿಯೂ ಲಭಿಸುವುದು.

ಅನೇಕಮಿತ್ರರಿರುವವನು ಕ್ಲಿಷ್ಟಸಮಯಗಳಲ್ಲಿ ಸುಖಿಯಾಗುತ್ತಾನೆ. ಮಿತ್ರರೆಂದರೆ ಸನ್ಮಿತ್ರರೆಂಬ ಭಾವನೆ. ಏಕೆಂದರೆ : ಧನವಂತನಾದವನಿಗೆ ದುರ್ಮಿತ್ರರು ಸ್ವಾಭಾವಿಕವಾಗಿಯೇ ಲಭ್ಯರಾಗುತ್ತಾರೆ. ಅಂತಹ ದುರ್ಮಿತ್ರರಿಂದ ದುರ್ವ್ಯಸನಗಳುಂಟಾಗಿ ಅವನು ಕಷ್ಟಕ್ಕೆ ಗುರಿಯಾಗುವನೇ ಹೊರತು ಸುಖಿಯಾಗಿರಲು ಸಾಧ್ಯವೇ ಇಲ್ಲ. ಆದುದರಿಂದ ಬಹುಮಂದಿ ಸನ್ಮಿತ್ರರನ್ನು ಹೊಂದಿರುವವನು ನಿಶ್ಚಯವಾಗಿಯೂ ಸುಖಿಯಾಗಿರುವನು.

ಧರ್ಮರತನಾದವನು ಸದ್ಗತಿಯನ್ನು ಪಡೆಯುತ್ತಾನೆ. ಕೋಟ್ಯಾನುಕೋಟಿ ಜನ್ಮಗಳನ್ನು ಪಡೆದು ಸೊರಗಿಹೋಗಿರುವ ಜೀವವನ್ನು ಸುಸಂಸ್ಕೃತನನ್ನಾಗಿ ಮಾಡಿ ನೆಲೆಯನ್ನು ಸೇರುವಂತೆ ಮಾಡುವುದೇ ಧರ್ಮದ ಉದ್ದೇಶ. **'ಧಾರಣಾದ್ಧರ್ಮ ಉಚ್ಯತೇ'**–ಧರ್ಮವು ತನ್ನ ಮಡಿಲಲ್ಲಿ ಬಿದ್ದವರೆಲ್ಲರನ್ನೂ ಧರಿಸುವುದರಿಂದ ಮತ್ತು ಅಂತಹವರನ್ನು ಸದ್ಗತಿಗೊಯ್ಯುವುದರಿಂದ ಅದಕ್ಕೆ ಧರ್ಮವೆಂದು ಹೆಸರು. **'ಧರ್ಮೋ ರಕ್ಷತಿ ರಕ್ಷಿತಃ'**–ಧರ್ಮವನ್ನು ಯಾರು ರಕ್ಷಿಸುತ್ತಾರೆಯೋ–ಅವರನ್ನು ಧರ್ಮವೇ ಸಂರಕ್ಷಿಸುತ್ತದೆ. ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿ ಕೌಸಲ್ಯೆಯು ಶ್ರೀರಾಮನನ್ನು ಕುರಿತು ಹೇಳುವಾಗ ಧರ್ಮವೇ ನಿನ್ನನ್ನು ಸಂರಕ್ಷಿಸಲೆಂದು ಹರಸುತ್ತಾಳೆ :

**ಯಂ ಪಾಲಯಸಿ ಧರ್ಮಂ ತ್ವಂ ಧೃತ್ಯಾ ಚ ನಿಯಮೇನ ಚ ।**
**ಸ ವೈ ರಾಘವಶಾರ್ದೂಲ ಧರ್ಮಸ್ತ್ವಾಮಭಿರಕ್ಷತು ॥**

"ರಾಘವಶಾರ್ದೂಲ! ನೀನು ಯಾವ ಧರ್ಮವನ್ನು ದೃಢತೆಯಿಂದಲೂ, ನಿಯಮದಿಂದಲೂ ಪರಿಪಾಲಿಸುತ್ತಿರುವೆಯೋ ಆ ಧರ್ಮವೇ ನಿನ್ನನ್ನು ಕಾಪಾಡಲಿ."

ಆದುದರಿಂದ ಧರ್ಮರತನಾದವನು ಸದ್ಗತಿಯನ್ನು ಹೊಂದುವನೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಯಕ್ಷನ ಮುಂದಿನ ಪ್ರಶ್ನೆ :

**ಕೋ ಮೋದತೇ ಕಿಮಾಶ್ಚರ್ಯಂ ಕಃ ಪನ್ಥಾಃ ಕಾ ಚ ವಾರ್ತಿಕಾ ।**
**ಮಮೈತಾಂಶ್ಚತುರಃ ಪ್ರಶ್ನಾನ್ಕಥಯಿತ್ವಾ ಜಲಂ ಪಿಬ ॥೧೧೪॥**

"ಯಾವನು ಆನಂದದಿಂದ ಇರುತ್ತಾನೆ? ಜಗತ್ತಿನಲ್ಲಿ ಆಶ್ಚರ್ಯವು ಯಾವುದು? ಯೋಗ್ಯವಾದ ಮಾರ್ಗವು ಯಾವುದು? ನಡೆಯುತ್ತಿರುವ ಮುಖ್ಯವಾದ ಸಂಗತಿಯು ಯಾವುದು? ಈ ನಾಲ್ಕು ಪ್ರಶ್ನೆಗಳಿಗೆ ಉತ್ತರವನ್ನು ಹೇಳು. ಅನಂತರ ನೀರನ್ನು ಕುಡಿ."

ಯುಧಿಷ್ಠಿರನ ಉತ್ತರ :

**ಪಞ್ಚಮೇಽಹನಿ ಷಷ್ಠೇ ವಾ ಶಾಕಂ ಪಚತಿ ಸ್ವೇ ಗೃಹೇ ।**
**ಅನೃಣೀ ಚಾಪ್ರವಾಸೀ ಚ ಸ ವಾರಿಚರ ಮೋದತೇ ॥೧೧೫॥**

"ಜಲಚರನಾದ ಯಕ್ಷನೇ! ಹಗಲಿನ ಐದನೆಯ ಅಥವಾ ಆರನೆಯ ಮುಹೂರ್ತದಲ್ಲಿ ಯಾವನು ತನ್ನ ಮನೆಯಲ್ಲಿ ಅಡಿಗೆಯನ್ನು ಮಾಡಿಸಿ ಊಟಮಾಡುತ್ತಾನೆಯೋ, ಯಾವನು ಸಾಲಗಾರನಲ್ಲವೋ, ಯಾವನು ಪ್ರವಾಸಶೀಲನಲ್ಲವೋ ಅಂತಹವನೇ ಪರಮಸುಖೀ."

ಯುಧಿಷ್ಠಿರನಿಲ್ಲಿ ಒಂದೊಂದು ಪ್ರಶ್ನೆಗೂ ಒಂದೊಂದು ಶ್ಲೋಕದ ಮೂಲಕವಾಗಿ ಉತ್ತರಿಸುತ್ತಾನೆ. ಯಾರು ಸರ್ವದಾ ಸಂತುಷ್ಟನಾದ ಪುರುಷನೆಂಬುದಕ್ಕೆ ಯುಧಿಷ್ಠಿರನ ಉತ್ತರವಿದು :

ಯಾರು ಐದು ಅಥವಾ ಆರನೆಯ ಮುಹೂರ್ತದಲ್ಲಿ ಅರ್ಥಾತ್

ಮಧ್ಯಾಹ್ನದ ವೇಳೆಯಲ್ಲಿ ಪರಾನ್ನಕ್ಕಾಗಿ ಮನೆ-ಮನೆಗೂ ಅಲೆಯದೇ ತನ್ನ ಮನೆಯಲ್ಲಿಯೇ ಲಭ್ಯವಾದ ಕಾಯಿಪಲ್ಯಗಳಿಂದ ಅಡಿಗೆಯನ್ನು ಮಾಡಿಸಿ ಅತಿಥಿಗಳಿಗೆ ಬಡಿಸಿ ತಾನೂ ಊಟಮಾಡುವನೋ ಅವನೇ ಸುಖಿ.

ಕಂಡ-ಕಂಡಲ್ಲಿ ಆಹಾರವನ್ನು ತೆಗೆದುಕೊಳ್ಳುವುದು ದೋಷಾವಹ ವಾದುದು. ಪರಾನ್ನವೂ ದೂಷ್ಯವೆಂದು ಹೇಳುತ್ತಾರೆ. ಪ್ರಾತಃಕಾಲದಲ್ಲಿ ಔಪಾಸನಾಗ್ನಿಹೋತ್ರಾದಿಗಳನ್ನು ಮುಗಿಸಿ ಮಧ್ಯಾಹ್ನದ ವೇಳೆಯಲ್ಲಿ ತನ್ನ ಮನೆಯಲ್ಲಿಯೇ ಆಹಾರವನ್ನು ಸಿದ್ಧಗೊಳಿಸಿ ಊಟಮಾಡುವುದು ಶ್ರೇಷ್ಠ ವಾದುದು. ಇದರಿಂದ ಮನಸ್ಸಿಗೆ ತೃಪ್ತಿಯುಂಟಾಗುವುದೆಂದು ಯುಧಿಷ್ಠಿರನ ಅಭಿಪ್ರಾಯ. ಸಾಲವಿಲ್ಲದವನೇ ಸುಖೀ–ಎಂಬುದು ಅನುಭವೈಕವೇದ್ಯ ವಾದುದು.

**ಸಾಲವನು ಕೊಂಬಾಗ ಪಾಲೋಗರುಂಡಂತೆ ।**
**ಸಾಲಿಗನು ಬಂದು ಎಳೆವಾಗ ಕಿಬ್ಬದಿಯ**
**ಕೀಲು ಮುರಿದಂತೆ ಸರ್ವಜ್ಞ**

ಎಂಬ ಸರ್ವಜ್ಞಪದವು ಎಲ್ಲರ ಅನುಭವದಲ್ಲಿಯೂ ಇದೆ. ಸಾಲ ಮಾಡಿ ಮೃಷ್ಟಾನ್ನವನ್ನು ತಿನ್ನುವುದಕ್ಕಿಂತಲೂ, ಸಾಲಮಾಡಿ ಸುಖೋಪ ಭೋಗಗಳನ್ನು ಅನುಭವಿಸುವುದಕ್ಕಿಂತಲೂ ಸಾಲಮಾಡದೇ ಅನ್ನದ ಗಂಜಿ ಯನ್ನಾದರೂ ತಿಂದುಕೊಂಡು ಗುಡಿಸಿಲಿನಲ್ಲಿ ವಾಸಮಾಡಿಕೊಂಡಿರುವುದೇ ಪರಮಶ್ರೇಷ್ಠವಾದುದು.

ಸರ್ವದಾ ಪ್ರವಾಸಮಾಡುತ್ತಿರುವವನಿಗೆ ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾಡುವ ಸಾಧ್ಯತೆಯಿಲ್ಲ. ಯಾವುದೋ ಸಂಪಾದನೆಗಾಗಿ ಊರೂರು ಅಲೆಯಬಾರದೆಂದೂ ಹಿರಿಯರು ಹೇಳುತ್ತಾರೆ. ಸರ್ವದಾ ಪ್ರವಾಸಮಾಡುವುದರಿಂದ ಪರಾನ್ನಭೋಜನವನ್ನು ಮಾಡಬೇಕಾಗುತ್ತದೆ. ಸಕಾಲದಲ್ಲಿ ಮಾಡಬೇಕಾದ ವಿಧ್ಯುಕ್ತಕರ್ಮಗಳನ್ನೂ ಬಿಡಬೇಕಾಗುತ್ತದೆ. ಆದುದರಿಂದ ಸಂಪಾದನೆಗಾಗಿ ಊರೂರನ್ನು ಅಲೆಯದೇ ಸಾಲಮಾಡದೇ ಯದೃಚ್ಛಾಲಾಭಸಂತುಷ್ಟನಾಗಿರುವವನು ಪರಮಸುಖೀ.

ಅನೃಣೀ–ಎಂಬುದಕ್ಕೆ ಯಜ್ಞ-ಯಾಗಾದಿಗಳನ್ನು ಮಾಡಿ ದೇವ

ಋಣವನ್ನೂ, ಸಂತಾನವನ್ನು ಪಡೆದು ಪಿತೃಋಣವನ್ನೂ, ಅಧ್ಯಯನಾ ಧ್ಯಾಪನಗಳಿಂದ ಋಷಿಋಣವನ್ನೂ ಕಳೆದುಕೊಳ್ಳುವವನು–ಎಂದೂ ಅರ್ಥ ಮಾಡಬಹುದಾಗಿದೆ.

**ಕಿಮಾಶ್ಚರ್ಯಂ–ಎಂಬ ಯಕ್ಷನ ಪ್ರಶ್ನೆಗೆ ಧರ್ಮಜನ ಉತ್ತರ :**

**ಅಹನ್ಯಹನಿ ಭೂತಾನಿ ಗಚ್ಛನ್ತೀಹ ಯಮಾಲಯಮ್ ।**
**ಶೇಷಾಃ ಸ್ಥಾವರಮಿಚ್ಛನ್ತಿ ಕಿಮಾಶ್ಚರ್ಯಮತಃ ಪರಮ್ ॥೧೧೬॥**

"ಪ್ರಾಣಿಗಳು ಪ್ರತಿದಿನವೂ ಯಮಲೋಕಕ್ಕೆ ಹೋಗುತ್ತಲೇ ಇವೆ. ಆದರೂ ಉಳಿದ ಜನರು ತಾವು ಸ್ಥಿರವಾಗಿ ಇರಬೇಕೆಂದು ಇಚ್ಛಿಸುತ್ತಾರೆ. ಇದಕ್ಕಿಂತಲೂ ಆಶ್ಚರ್ಯಕರವಾದುದು ಏನಿದೆ?"

ಇದಕ್ಕಿಂತಲೂ ಆಶ್ಚರ್ಯಕರವಾದ ವಿಷಯವನ್ನು ಹೇಳಲು ಯಾರಿಗೂ ಸಾಧ್ಯವಿಲ್ಲ. ಮನುಷ್ಯನು ತನ್ನ ಜೀವಿತದಲ್ಲಿ ಒಮ್ಮೆಯಾದರೂ ತಾನು ಸಾಯುವೆನೆಂದು ಭಾವಿಸನು. ತನ್ನ ಬಂಧು-ಬಳಗದವರು ಸತ್ತರೂ, ನೆರೆಹೊರೆಯವರು ಸತ್ತರೂ, ತನ್ನ ಮನೆಯಲ್ಲಿಯೇ ಸಾವುಗಳುಂಟಾದರೂ ಸಹ ತನ್ನ ಸಾವು ಸದ್ಯಕ್ಕಿಲ್ಲವೆಂದೇ ಭಾವಿಸಿ ಮುಂದಿನ ಆಗು-ಹೋಗುಗಳನ್ನು ಯೋಚಿಸುತ್ತಿರುತ್ತಾನೆ. ಕೋಟ್ಯಧೀಶ್ವರನಾಗಿದ್ದರೂ ಸಾಯುವಾಗ ತನ್ನೊಡನೆ ಏನೊಂದನ್ನೂ ತೆಗೆದುಕೊಂಡು ಹೋಗದೇ ಗತಪ್ರಾಣನಾಗಿ ಚಿತೆಯಲ್ಲಿ ಬೆಂದು ಭಸ್ಮವಾಗುವುದನ್ನು ಪ್ರತ್ಯಕ್ಷವಾಗಿಯೇ ಕಂಡರೂ ಅರ್ಥಾರ್ಥಿಗೆ ದ್ರವ್ಯಸಂಚಯನಮಾಡಬೇಕೆನ್ನುವ ಯೋಚನೆಯು ದೂರ ವಾಗುವುದಿಲ್ಲ. ಸಾವು ಸಮೀಪಿಸಿದೆಯೆಂದು ತಿಳಿದರೂ ಹಣದ ಗಂಟನ್ನು ಪಕ್ಕದಲ್ಲಿಯೇ ಇಟ್ಟುಕೊಳ್ಳುವುದನ್ನಾಗಲೀ, ಪೆಟ್ಟಿಗೆಯ ಕೀಲಿಯನ್ನು ಭದ್ರಪಡಿಸುವುದನ್ನಾಗಲೀ, ಮರೆಯುವುದಿಲ್ಲ. 'ಅಹಂಕಾರ-ಮಮಕಾರ ಗಳೆಲ್ಲವೂ ದೇಹದಿಂದ ಉಸಿರು ಹೊರಹೋಗುವವರೆಗೆ ಮಾತ್ರ'–ಎಂಬು ದನ್ನವನು ಭಾವಿಸುವುದಿಲ್ಲ. ಪತ್ನಿ-ಪುತ್ರರಿಗಾಗಿ ಹಾತೊರೆಯುತ್ತಾನೆ. ಮರಣಾನಂತರದಲ್ಲಿ ತನ್ನ ಗತಿಯೇನಾಗುವುದೆಂಬುದು ಅವನಿಗೆ ಸ್ವಲ್ಪ ವಾದರೂ ತಿಳಿಯುವುದಿಲ್ಲ. ತಾನು ಮೃತನಾದರೆ ತನ್ನ ಪತ್ನೀ-ಪುತ್ರರು ತನಗೇನಾಗಬೇಕೆಂಬುದನ್ನವನು ಕ್ಷಣಕಾಲವೂ ಯೋಚಿಸುವುದಿಲ್ಲ. ಈ ವ್ಯಾಮೋಹವು ಜಗತ್ತಿನಲ್ಲಿ ಸರ್ವತ್ರ ವ್ಯಾಪಿಸಿದೆ. ಇಂತಹ ವ್ಯಾಮೋಹವನ್ನು

ಪಂಡಿತನೂ ಕಳೆದುಕೊಳ್ಳಲಾರನು. ಇದಕ್ಕೇ ಮಾಯೆಯೆಂದೂ ಹೆಸರು. ಶ್ರೀಶಂಕರರೂ ಮಾಯೆಯ ವಿಷಯದಲ್ಲಿ ನಾಲ್ಕಾರು ಹಿತೋಕ್ತಿಗಳನ್ನು ಸಾಧಾರಣಮನುಷ್ಯನ ಮನಸ್ಸಿಗೂ ನಾಟುವಂತೆ ಹೇಳಿದ್ದಾರೆ :

**ಯಾವತ್ಪವನೋ ನಿವಸತಿ ದೇಹೇ**
**ತಾವತ್ಪೃಚ್ಛತಿ ಕುಶಲಂ ಗೇಹೇ ।**
**ಗತವತಿ ವಾಯೌ ದೇಹಾಪಾಯೇ**
**ಭಾರ್ಯಾ ಬಿಭ್ಯತಿ ತಸ್ಮಿನ್ಕಾಯೇ ॥**

ಎಲ್ಲಿಯವರೆಗೆ ಪ್ರಾಣವಾಯುವು ದೇಹದಲ್ಲಿ ನಿವಾಸಮಾಡಿಕೊಂಡಿರುವುದೋ–ಅಲ್ಲಿಯವರೆಗೂ ಮನೆಯವರೆಲ್ಲರೂ ಅವನ ಯೋಗ-ಕ್ಷೇಮಗಳನ್ನು ವಿಚಾರಿಸುತ್ತಲೇ ಇರುತ್ತಾರೆ. ಶರೀರಕ್ಕೆ ಅಪಾಯವೊದಗಿ ಪ್ರಾಣವಾಯುವು ಶರೀರವನ್ನು ತೊರೆದು ಹೋದೊಡನೆಯೇ ಹಿಂದೆ ಅದೇ ಶರೀರವನ್ನೇ ಬಹುವಾಗಿ ಪ್ರೀತಿಸುತ್ತಿದ್ದ ನಿಜಸತಿಯೂ ಕೂಡ ಗತಪ್ರಾಣನಾದ ಗಂಡನ ಶರೀರದ ಹತ್ತಿರ ಹೋಗಲೂ ಭಯಪಡುತ್ತಾಳೆ.

**ಕಾ ತೇ ಕಾನ್ತಾ ಕಸ್ತೇ ಪುತ್ರಃ ಸಂಸಾರೋಽಯಮತೀವ ವಿಚಿತ್ರಃ ।**
**ಕಸ್ಯ ತ್ವಂ ಕಃ ಕುತ ಆಯಾತಃ ತತ್ತ್ವಂ ಚಿನ್ತಯ ತದಿಹ ಭ್ರಾನ್ತಃ ॥**

ನಿನ್ನ ಹೆಂಡತಿಯು ಯಾರು? ನಿನ್ನ ಮಗನಾರು? ಈ ಸಂಸಾರವು ನಿಶ್ಚಯವಾಗಿಯೂ ವಿಚಿತ್ರತರವಾದುದು. ನೀನು ಯಾರವನು? ನೀನೆಲ್ಲಿಂದ ಬಂದೆ? ಭ್ರಾಂತನಾಗದೇ ಈ ಪ್ರಶ್ನೆಗಳನ್ನು ನೀನೇ ಹಾಕಿಕೊಂಡು ತತ್ತ್ವವನ್ನರಸು. ( ಆಗ ನಿನಗೆ ನೀನಾರೆಂಬ ಅರಿವುಂಟಾಗುತ್ತದೆ. )

ಇಂತಹ ಸೂಕ್ತಿಗಳನ್ನು ಸರ್ವತ್ರ ಹರಡಿದರೂ ಮಾಯೆಯ ನಿರಸನವಾಗಲಾರದು. ನಿರಸನವಾಗಕೂಡದೆಂಬುದೂ ವಿಧಿನಿಯಮ. ಪ್ರಪಂಚವು ಮುಂದುವರಿಯಬೇಕಾದರೆ ಮನುಷ್ಯನು ಮಾಯೆಯಿಂದ ಆವೃತನಾಗಿಯೇ ಇರಬೇಕು. ಮಾಯೆಯನ್ನು ತೊರೆದವನಿಗೆ ಪ್ರಪಂಚವೇ ಇಲ್ಲ.

**ಕಃ ಪಂಥಾಃ** –ಯೋಗ್ಯವಾದ ಮಾರ್ಗವಾವುದು?–ಎಂಬ ಯಕ್ಷನ ಪ್ರಶ್ನೆಗೆ ಧರ್ಮಜನ ಉತ್ತರ :

**ತರ್ಕೋऽಪ್ರತಿಷ್ಠಃ ಶ್ರುತಯೋ ವಿಭಿನ್ನಾ**
**ನೈಕೋ ಋಷಿರ್ಯಸ್ಯ ಮತಂ ಪ್ರಮಾಣಮ್ ।**
**ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಂ**
**ಮಹಾಜನೋ ಯೇನ ಗತಃ ಸ ಪನ್ಥಾಃ ॥೧೧೭॥**

"ಯುಕ್ತಿವಾದಕ್ಕೆ ಕೊನೆಯೇ ಇಲ್ಲ. ವೇದವಾಕ್ಕುಗಳು ಬೇರೆ ಬೇರೆ ಯಾಗಿದ್ದು ಭಿನ್ನ-ಭಿನ್ನವಾದ ಅರ್ಥಗಳನ್ನು ಕೊಡತಕ್ಕುವುಗಳಾಗಿವೆ. ಋಷಿಗಳು ಅನೇಕರಿರುವುದರಿಂದ ಅವರ ವಿಭಿನ್ನಮತಗಳನ್ನೂ ಪ್ರಮಾಣ ವನ್ನಾಗಿಟ್ಟುಕೊಳ್ಳುವುದೂ ಕಷ್ಟ. ಆದುದರಿಂದ ಧರ್ಮದ ರಹಸ್ಯವು ಗುಹೆಯಲ್ಲಿ ಅಡಗಿ ಕುಳಿತಿದೆ. ( ನಿಗೂಢವಾಗಿದೆ ) ಮಹಾಜನರೆಂದರೆ ಶಿಷ್ಟರು ಯಾವ ದಾರಿಯಲ್ಲಿ ಹೋಗುವರೋ–ಅದೇ ಯೋಗ್ಯವಾದ ಮಾರ್ಗ."

ತರ್ಕದಿಂದ ಯಾವುದೊಂದನ್ನೂ ಸಿದ್ಧಾಂತಮಾಡುವ ಸಾಧ್ಯತೆಯಿಲ್ಲ. ಪ್ರತಿತರ್ಕವಿದ್ದೇ ಇರುತ್ತದೆ. ಮೇಲಾಗಿ ಆತ್ಮನು ಅತರ್ಕ್ಯನು. ತರ್ಕಕ್ಕೆ ಸಿಕ್ಕತಕ್ಕವನೂ ಅಲ್ಲ. ಆತ್ಮತತ್ತ್ವವನ್ನು ಹೇಳುವ ಅನೇಕ ಶ್ರುತಿಗಳಿವೆ. ಆ ಎಲ್ಲ ಶ್ರುತಿಗಳ ಒಳಹೊಕ್ಕು ನಾವು ಆತ್ಮತತ್ತ್ವವನ್ನು ತಿಳಿಯುವ ಸಾಧ್ಯತೆಯಿಲ್ಲ. ಆತ್ಮತತ್ತ್ವವನ್ನು ತಿಳಿಯಲು ಒಬ್ಬೊಬ್ಬ ಋಷಿಗಳೂ ಒಂದೊಂದು ಮಾರ್ಗವನ್ನು ಅನುಸರಿಸಿ ಹೋಗಿದ್ದಾರೆ. ಯಾವ ಮತವು ಸರಿ ಅಥವಾ ಸುಲಭವೆಂದು ವಿವೇಚಿಸುವ ಸಾಧ್ಯತೆಯೂ ನಮಗಿರುವುದಿಲ್ಲ. ಇದಕ್ಕೆ ಮುಖ್ಯಕಾರಣವೆಂದರೆ: ಧರ್ಮದ ತತ್ತ್ವವು ಹೃದಯಕುಹರದಲ್ಲಡಗಿದೆ. ಆದುದರಿಂದ ಮಹಾಜನರು ಎಂದರೆ ಶಿಷ್ಟರು ಯಾವ ಮಾರ್ಗವನ್ನು ಅನುಸರಿಸಿ ಹೋಗುವರೋ–ಅದೇ ಮಾರ್ಗದಲ್ಲಿ ಹೋಗುವುದೇ ನಮ್ಮ ಕರ್ತವ್ಯವಾಗಿದೆ.

**ಮಹಾಜನಸ್ಯ ಸಂಸರ್ಗಃ ಕಸ್ಯ ನೋನ್ನತಿಕಾರಕಃ ।**
**ಪದ್ಮಪತ್ರಸ್ಥಿತಂ ತೋಯಂ ಧತ್ತೇ ಮುಕ್ತಾಫಲಶ್ರಿಯಮ್ ॥**

ಮಹಾಶಿಷ್ಟರಾದವರ ಸಂಸರ್ಗವು ಯಾರಿಗೆ ತಾನೇ ಔನ್ನತ್ಯವನ್ನುಂಟು

ಮಾಡುವುದಿಲ್ಲ? ಶಿಷ್ಟರ ಸಂಸರ್ಗವು ಯಶಸ್ಸಿಗೆ ಕಾರಣವಾಗುತ್ತದೆ. ಪದ್ಮ ಪತ್ರದ ಸಂಸರ್ಗಹೊಂದಿದ ನೀರಿನ ಕಣಗಳು ಮುತ್ತಿನ ಕಾಂತಿಯನ್ನು ಹೊರ ಸೂಸುತ್ತವೆ. ಆದುದರಿಂದ ಶಿಷ್ಟರ ಸಜ್ಜನರ ಮಾರ್ಗವೊಂದೇ ಹೃದಯ ಗುಹೆಯಲ್ಲಡಗಿರುವ ಧರ್ಮತತ್ತ್ವವನ್ನು ತಿಳಿಯಲು ಸಾಧ್ಯವಾಗುವಂತೆ ಮಾಡುತ್ತದೆ.

ತ್ರಿಜಗತಿ ಸಜ್ಜನಸಂಗತಿರೇಕಾ ಭವತಿ ಭವಾರ್ಣವತರಣೇ ನೌಕಾ ॥

ಮೂರು ಲೋಕಗಳಲ್ಲಿಯೂ ಸಜ್ಜನರ ಸಹವಾಸವೊಂದೇ ಸಂಸಾರ ಸಾಗರವನ್ನು ದಾಟಲು ಶ್ರೇಷ್ಠವಾದ ನಾವೆಯಾಗಬಲ್ಲುದು.

ಯಕ್ಷನ ನಾಲ್ಕನೆಯ ಪ್ರಶ್ನೆ–'ಕಾ ಚ ವಾರ್ತಿಕಾ?–ದೈನಂದಿನ ವಾರ್ತೆಯೇನು?'

ಇದಕ್ಕೆ ಧರ್ಮಜನ ಉತ್ತರ :

ಅಸ್ಮಿನ್ಮಹಾಮೋಹಮಯೇ ಕಟಾಹೇ
ಸೂರ್ಯಾಗ್ನಿನಾ ರಾತ್ರಿದಿವೇನ್ಧನೇನ ।
ಮಾಸರ್ತುದರ್ವೀಪರಿಘಟ್ಟನೇನ
ಭೂತಾನಿ ಕಾಲಃ ಪಚತೀತಿ ವಾರ್ತಾ ॥೧೧೮॥

"ಕಾಲನೆಂಬ ಪುರುಷನು ಮಹಾಮೋಹವೆಂಬ ಬ್ರಹ್ಮಾಂಡಕಟಾಹದಲ್ಲಿ ಸಮಸ್ತಪ್ರಾಣಿಗಳನ್ನೂ ತುಂಬಿ, ಹಗಲು-ರಾತ್ರಿಗಳೆಂಬ ಇಂಧನಗಳಿಂದ ಸೂರ್ಯನೆಂಬ ಅಗ್ನಿಯನ್ನು ಪ್ರಜ್ವಲಿಸುತ್ತಾ, ಮಾಸ-ಋತು ಎಂಬ ಸಟ್ಟುಗದಿಂದ ಪ್ರಾಣಿಗಳನ್ನು ಅಡಿ-ಮೇಲು ಮಾಡುತ್ತಾ ಬೇಯಿಸುತ್ತಾನೆ–ಎಂಬುದೇ ಪ್ರತಿನಿತ್ಯದ ಮುಖ್ಯವಾರ್ತೆಯಾಗಿದೆ."

ವಾರ್ತೆಯೆಂದರೆ ಹೊಸ ಸಮಾಚಾರ ; ಹೊಸ ವಿಷಯ. ಕಾಲ ಪುರುಷನು ನಮ್ಮ ಆಯುಷ್ಯವನ್ನು ಕಬಳಿಸುತ್ತಿರುತ್ತಾನೆ. ಇದೊಂದು ಹೊಸ ವಿಷಯವೇ ಆಗಿದೆ. ಮನುಷ್ಯನು ತನ್ನ ಆಶೆ-ಆಕಾಂಕ್ಷೆಗಳ ಬವಣೆಯಲ್ಲಿ ನಾಳೆಯೆಂಬುದನ್ನು ನಂಬಿ ಕುಳಿತಿರುವನೇ ಹೊರತು ಇಂದು ಕಳೆದು

ಹೋದುದನ್ನು ಖಂಡಿತವಾಗಿಯೂ ಯೋಚಿಸುವುದಿಲ್ಲ. ಕಾಲಪುರುಷನು ಹಗಲು-ರಾತ್ರಿಗಳೆಂಬ ವ್ಯಾಜದಿಂದ ತನ್ನ ಆಯುಷ್ಯವನ್ನು ಕಬಳಿಸುತ್ತಿರುವನೆಂದು ಒಮ್ಮೆಯಾದರೂ ಭಾವಿಸುವುದಿಲ್ಲ. ಒಂದು ತಾಸು ಕಳೆದರೆ ತನ್ನ ಆಯುಃಪ್ರಮಾಣದಲ್ಲಿ ಒಂದು ತಾಸು ಕಳೆದುಹೋಯಿತೆಂದು ಯಾರೂ ಯೋಚಿಸುವುದಿಲ್ಲ. ಕಾರ್ಯಾಲಯದಲ್ಲಿ ಕಾರ್ಯಮಾಡದೆಯೇ ಕಾಲ ಕಳೆದು ಬಂದೆನೆಂದು ಹರ್ಷಚಿತ್ತನಾಗಿ ಹೇಳಿಕೊಳ್ಳುತ್ತಾನೆ. ಇದೇ ಒಂದು ವಾರ್ತೆಯಲ್ಲವೇ? ಒಂದು ಕ್ಷಣವಾಗಲೀ, ಒಂದು ಘಂಟೆಯಾಗಲೀ ವ್ಯರ್ಥವಾಗಿ ಹೋಯಿತಲ್ಲಾ–ಎಂದು ಯೋಚಿಸುವ ಮಹಾನುಭಾವರು ಯಾರಿದ್ದಾರೆ? ಆಯುಃಪ್ರಮಾಣದ ಅಳತೆಗೋಲನ್ನು ಮುಂದಿಟ್ಟು ನೋಡಿಕೊಳ್ಳುತ್ತಿದ್ದರೆ ತಾನು ಕಳೆದ ಒಂದು ತಾಸಿನ ಅಥವಾ ಒಂದು ದಿನದ ಬೆಲೆಯೇನೆಂಬುದರ ಅರಿವು ಅವನಿಗಾಗುತ್ತದೆ. ಕಾಲದ ಬೆಲೆಯನ್ನರಿಯಬೇಕು. ಕಾಲವು ಕಳೆದುಹೋಗುತ್ತಿರುವುದೆಂಬ ಧಾವಂತದಿಂದ ಆತ್ಮಜ್ಞಾನದ ಸಾಧನೆಯನ್ನು ಮಾಡಬೇಕು. ಪ್ರಾಪಂಚಿಕವಾದ ಸುಖ-ಸಂಪತ್ತುಗಳಿಗೂ ಇದೇ ವಿಧವಾದ ಧಾವಂತವಿರಬೇಕು. ಹಾಗೆ ಮಾಡದಿದ್ದರೆ ಅಮೋಘವಾದ ಮನುಷ್ಯ ಜನ್ಮವೇ ವ್ಯರ್ಥವಾಗಿ ಹೋಗುವುದು.

ಯಕ್ಷನು ಪುನಃ ಪ್ರಶ್ನಿಸುತ್ತಾನೆ :

**ವ್ಯಾಖ್ಯಾತಾ ಮೇ ತ್ವಯಾ ಪ್ರಶ್ನಾ ಯಾಥಾತಥ್ಯಂ ಪರಂತಪ ।**
**ಪುರುಷಂ ತ್ವಿದಾನೀಂ ವ್ಯಾಖ್ಯಾಹಿ ಯಶ್ಚ ಸರ್ವಧನೀ ನರಃ ॥೧೧೯॥**

"ಎಲೈ ವೀರನೇ! ನನ್ನ ಪ್ರಶ್ನೆಗಳಿಗೆ ನೀನು ಸರಿಯಾದ ಉತ್ತರಗಳನ್ನೇ ಕೊಟ್ಟಿರುವೆ. ಆದುದರಿಂದ ಮತ್ತೂ ಪ್ರಶ್ನೆಗಳನ್ನು ಕೇಳಲು ಆಸಕ್ತನಾಗಿದ್ದೇನೆ. ಪುರುಷನೆಂದರೆ ಯಾರು? ಸರ್ವಶ್ರೇಷ್ಠನಾದ ಧನಿಕನಾರು?–ಎಂಬೀ ಪ್ರಶ್ನೆಗಳಿಗೆ ಉತ್ತರಿಸು, ಯುಧಿಷ್ಠಿರ!"

ಯುಧಿಷ್ಠಿರನು ಎರಡು ಪ್ರಶ್ನೆಗಳಿಗೂ ಪ್ರತ್ಯೇಕವಾಗಿಯೇ ಉತ್ತರಿಸುತ್ತಾನೆ :

**ದಿವಂ ಸ್ಪೃಶತಿ ಭೂಮಿಂ ಚ ಶಬ್ದಃ ಪುಣ್ಯೇನ ಕರ್ಮಣಾ ।**
**ಯಾವತ್ಸ ಶಬ್ದೋ ಭವತಿ ತಾವತ್ಪುರುಷ ಉಚ್ಯತೇ ॥೧೨೦॥**

"ಯಾವನ ಪುಣ್ಯಕರ್ಮದಿಂದ ಉದ್ಭೂತವಾದ ಕೀರ್ತಿಘೋಷಣೆಯು ಸ್ವರ್ಗ ಮತ್ತು ಭೂಮಿಗಳಲ್ಲಿ ಎಂದಿನವರೆಗೂ ವ್ಯಾಪಿಸಿರುವುದೋ–ಅಂದಿನ ವರೆಗೂ ಆ ಮನುಷ್ಯನು 'ಪುರುಷ' 'ಪುರುಷ' ಎಂದು ಕರೆಯಲ್ಪಡುತ್ತಾನೆ."

ಜೀವಿಗಳಲ್ಲಿ ಪುರುಷರು-ಸ್ತ್ರೀಯರು ಎಂಬ ಭೇದವಿದೆ. ಆದರೆ ಇಲ್ಲಿ ಸ್ತ್ರೀ-ಪುರುಷಸಾಧಾರಣವಾದ ಮನುಷ್ಯಮಾತ್ರಕ್ಕೇ ಪುರುಷ–ಎಂಬ ಅರ್ಥ ದಲ್ಲಿ ಹೇಳಿದೆ. ಪುಣ್ಯಾತ್ಮನೇ ಪುರುಷನೆಂಬುದು ಯುಧಿಷ್ಠಿರನ ಅಭಿಪ್ರಾಯ ವಾಗಿದೆ. ಅವನು ಮಾಡಿದ ಪುಣ್ಯಕರ್ಮದ ಕೀರ್ತಿಯು ಕೇವಲ ಭೂಮಿ ಯಲ್ಲಿ ಮಾತ್ರವಲ್ಲ ; ಸ್ವರ್ಗದಲ್ಲಿಯೂ ಮೊಳಗಬೇಕು. ಯಾವತ್ತಿನವರೆಗೆ ಪುಣ್ಯಮಾಡಿದವನ ಕೀರ್ತಿಯು ಭೂಮಿ ಮತ್ತು ಸ್ವರ್ಗಗಳಲ್ಲಿ ಮೊಳಗು ತ್ತಿರುವುದೋ ಅಂದಿನವರೆಗೆ ಅವನು ಪುರುಷನೆನಿಸಿಕೊಳ್ಳುತ್ತಾನೆ. ಅಂತಹ ಪುರುಷರು ಅಥವಾ ಮಹಾತ್ಮರು ಹೆಚ್ಚು ಮಂದಿ ಸಿಗಲಾರರು. ಶ್ರೀರಾಮ, ಶ್ರೀಕೃಷ್ಣ–ಇಂತಹವರನ್ನು ಮಾತ್ರವೇ ನಾವು ಮಹಾಪುರುಷರೆಂದು ಹೇಳ ಬೇಕಾಗುತ್ತದೆ. ಒಬ್ಬ ಮನುಷ್ಯನು ತನ್ನ ಪುಣ್ಯಕರ್ಮಗಳಿಂದ ಒಂದೆರಡು ಶತಮಾನಗಳವರೆಗೆ ಪ್ರಸಿದ್ಧನಾಗಿರಲು ಸಾಧ್ಯವಿದೆ. ಆದರೂ ಭೂಮಿಯ ಎಲ್ಲೆಡೆಗಳಲ್ಲಿಯೂ ಅವನ ಕೀರ್ತಿಯಿರುತ್ತದೆಂದು ಹೇಳಲಾಗುವುದಿಲ್ಲ. ಅದು ಒಂದು ಪ್ರಾಂತಕ್ಕೆ ಅಥವಾ ಒಂದೇ ಒಂದು ಪಟ್ಟಣಕ್ಕೆ ಸೀಮಿತವಾಗಿರ ಬಹುದು. ಒಟ್ಟಿನಲ್ಲಿ ಪುಣ್ಯಕರ್ಮಮಾಡಿದವನನ್ನು ಪುರುಷನೆಂದು ಕರೆಯ ಬೇಕೆಂದು ಯುಧಿಷ್ಠಿರನ ಅಭಿಪ್ರಾಯವಾಗಿದೆ.

ಸರ್ವಶ್ರೇಷ್ಠನಾದ ಧನಿಕನಾರೆಂಬ ಯಕ್ಷನ ಪ್ರಶ್ನೆಗೆ ಯುಧಿಷ್ಠಿರನು ಉತ್ತರಿಸುತ್ತಾನೆ :

**ತುಲ್ಯೇ ಪ್ರಿಯಾಪ್ರಿಯೇ ಯಸ್ಯ ಸುಖದುಃಖೇ ತಥೈವ ಚ ।**
**ಅತೀತಾನಾಗತೇ ಚೋಭೇ ಸ ವೈ ಸರ್ವಧನೀ ನರಃ ॥೧೨೧॥**

"ಪ್ರಿಯ ಮತ್ತು ಅಪ್ರಿಯಗಳೂ, ಸುಖ-ದುಃಖಗಳೂ, ಭೂತ-ಭವಿ

ಷ್ಯತ್ತುಗಳೂ ಯಾರಿಗೆ ಸಮಾನವಾಗಿರುತ್ತವೆಯೋ–ಅವನೇ ಸರ್ವಶ್ರೇಷ್ಠನಾದ ಧನಿಕನು."

ಸಕಲೈಶ್ವರ್ಯಸಂಪನ್ನನಾರೆಂಬುದಕ್ಕೆ ಯುಧಿಷ್ಠಿರನು ಹೇರಳವಾದ ಧನವಿರುವವನೆಂದು ಉತ್ತರಕೊಡುವುದಿಲ್ಲ. ಪ್ರಿಯವಾದುದನ್ನೂ ಅಪ್ರಿಯವಾದುದನ್ನೂ ಒಂದೇ ಎಂದು ಭಾವಿಸುವವನನ್ನು ಐಶ್ವರ್ಯವಂತನೆಂದು ಹೇಳುತ್ತಾನೆ. ಯುಧಿಷ್ಠಿರನು ಹೇಳುವ ಧನಿಕತೆಯು ದ್ರವ್ಯವನ್ನು ಅವಲಂಬಿಸಿದ್ದಲ್ಲ. ಮನಸ್ಸನ್ನು ಅವಲಂಬಿಸಿದ್ದು. ಅಪ್ರಿಯವಾದ ವಾರ್ತೆಯನ್ನು ಕೇಳಿ ದುಃಖಿಸದವನು ಧನವಂತ. ಸಂತೋಷವು ಪ್ರಾಪ್ತವಾದಾಗ ಹಿಗ್ಗದವನು ಧನವಂತ. ಸಂತೋಷಬಂದಾಗ ಹಿಗ್ಗಬಾರದು ; ದುಃಖಬಂದಾಗ ಕುಗ್ಗಬಾರದು. ಹಗಲು-ರಾತ್ರಿಗಳು ಸುಖ-ದುಃಖಗಳು ಬಂದು ಹೋಗುತ್ತವೆಯೆಂದೇ ಭಾವಿಸಬೇಕು. ದುಃಖಬಂದಾಗ ಕಂಗೆಟ್ಟು ಸಂಕಟಪಟ್ಟರೆ ಬಂದ ದುಃಖವು ಒಡನೆಯೇ ಹೋಗಿಬಿಡುವುದಿಲ್ಲ. ಹಾಗೆ ಹೋಗುವುದಾಗಿದ್ದಲ್ಲಿ ಕಂಗೆಟ್ಟು ಅಳಬಹುದಾಗಿತ್ತು. ದೈವಿಕವಾಗಿ ಬಂದ ದುಃಖವು ಮನುಷ್ಯನನ್ನು ಕಾಡಿಸಿಯೇ ತೀರುವುದು. ಆದರೆ ಸುಖ-ದುಃಖಗಳೆರಡೂ ಸಮವೆಂದು ತಿಳಿದವನಿಗೆ ದುಃಖದ ಪರಿಣಾಮವೇ ಆಗುವುದಿಲ್ಲ. ಸಂಯಮಿಗೆ ಸುಖ-ದುಃಖಗಳೆರಡೂ ಒಂದೇ ವಿಧವಾದ ಪರಿಣಾಮವನ್ನುಂಟುಮಾಡುತ್ತವೆ. ಅವನು ಕಳೆದುಹೋದುದಕ್ಕೆ ಪಶ್ಚಾತ್ತಾಪಪಡುವುದಿಲ್ಲ. ಮುಂದೇನಾದೀತೆಂದು ಭಯಪಡುವುದೂ ಇಲ್ಲ. ಸಂಯಮಿಯು ಯಾವಾಗಲೂ ಕರ್ತವ್ಯನಿಷ್ಠನಾಗಿರುವನೇ ಹೊರತು ಫಲಾಫಲಗಳ ವಿಷಯದಲ್ಲಿ ಒಮ್ಮೆಯಾದರೂ ಯೋಚಿಸುವುದಿಲ್ಲ. ನಿಜಕರ್ಮಾನುಸಾರವಾಗಿ ಪ್ರಾಪ್ತವಾದುದರಲ್ಲಿಯೇ ಆನಂದಿಸುತ್ತಾನೆ. ಇದಕ್ಕೆ ಮುಖ್ಯಕಾರಣವೇನೆಂದರೆ : ಸಂಯಮಿಯಾದವನು ಯಾವಾಗಲೂ ಇಂದ್ರಿಯಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುತ್ತಾನೆ. ಅವನ ಮನಸ್ಸು ಯಾವಾಗಲೂ ಇಂದ್ರಿಯಗಳ ಅಧೀನವಾಗಿರುವುದಿಲ್ಲ. ಮನಸ್ಸು ಇಂದ್ರಿಯಗಳ ಅಧೀನವಾಗುವುದೇ ದಾಸ್ಯ. ಅದೇ ಮನಸ್ಸು ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಳ್ಳುವುದೇ ರಾಜತ್ವ. ಇಂತಹ ದೃಢವಾದ ಮನಸ್ಸನ್ನು ಹೊಂದಿರುವವನೇ ಐಶ್ವರ್ಯವಂತ.

ಪ್ರಿಯವಾದುದು ಮತ್ತು ಅಪ್ರಿಯವಾದುದು–ಈ ಎರಡನ್ನೂ ಸಮಾನವಾಗಿ ಕಾಣುವ ಮುನಿಗಳ ವಿಷಯದಲ್ಲಿ ಸೀತೆಯು ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿ ಹೀಗೆ ಹೇಳಿದ್ದಾಳೆ :

**ಧನ್ಯಾಃ ಖಲು ಮಹಾತ್ಮಾನೋ ಮುನಯಃ ಸತ್ಯಸಂಮತಾಃ ।**
**ಜಿತಾತ್ಮಾನೋ ಮಹಾಭಾಗಾಃ ಯೇಷಾಂ ನ ಸ್ತಃ ಪ್ರಿಯಾಪ್ರಿಯೇ ॥**

"ಪ್ರಿಯ ಮತ್ತು ಅಪ್ರಿಯಗಳನ್ನು ಸಮಾನವಾಗಿ ಕಾಣುವ (ಪ್ರಿಯಾಪ್ರಿಯಗಳೇ ಇಲ್ಲದ), ಜಿತೇಂದ್ರಿಯರಾದ, ಮಹಾಭಾಗರಾದ, ಸತ್ಯನಿಷ್ಠರಾದ, ಮಹಾತ್ಮರಾದ ಮುನಿಗಳು ನಿಶ್ಚಯವಾಗಿಯೂ ಧನ್ಯರೇ ಸರಿ."

**ಪ್ರಿಯಾನ್ನ ಸಂಭವೇದ್ದುಃಖಮಪ್ರಿಯಾನ್ನಾಧಿಕಂ ಭಯಮ್ ।**

ನಮಗೆ ಪ್ರಿಯವಾಗಿರುವ ವಸ್ತುವಿನ ವಿಯೋಗದಿಂದ ದುಃಖವುಂಟಾಗುತ್ತದೆ. ಪ್ರಿಯವಾಗಿರುವ ವಸ್ತುವಿಗೆ ಅಥವಾ ಪ್ರಾಣಿಗೆ ಸ್ವಲ್ಪ ತೊಂದರೆಯುಂಟಾದರೂ ನಾವು ದುಃಖಪಡುತ್ತೇವೆ. ಅಪ್ರಿಯವಾದ ವಸ್ತುವಿನ ಅಥವಾ ಪ್ರಾಣಿಯ ವಿಷಯವಾಗಿ ನಾವು ಭಯಪಡುತ್ತೇವೆ. ಜಿತೇಂದ್ರಿಯರಿಗೆ ಈ ದುಃಖ-ಭಯಗಳಿಲ್ಲ.

ಈ ವಿಷಯವನ್ನೇ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ:

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಞ್ಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ॥**

ಅಧ್ಯಾಯ ೧೪, ಶ್ಲೋಕ ೨೪

"ಯಾವನಿಗೆ ಸುಖ-ದುಃಖಗಳೆರಡೂ ಒಂದೇ ಸಮನಾಗಿರುವುದೋ, (ಮನಸ್ಸಿನ ಸಮತೋಲನವನ್ನು ಕೆಡಿಸುವುದಿಲ್ಲವೋ) ಯಾವನಿಗೆ ಮಣ್ಣಿನ ಮುದ್ದೆಯೂ, ಕಲ್ಲೂ ಮತ್ತು ಚಿನ್ನವು ಸಮಾನವೋ, ಪ್ರಿಯವಾದುದು ಮತ್ತು ಅಪ್ರಿಯವಾದುದು ಯಾವನಿಗೆ ಸಮಾನವೋ, ಯಾವನು ನಿಂದೆ ಮತ್ತು ಸ್ತುತಿಗಳನ್ನು ಒಂದೇ ರೀತಿಯಲ್ಲಿ ಪರಿಗಣಿಸುವನೋ ಅವನೇ ಧೀರನು."

ಅಂತಹವನೇ ನಿಜವಾದ ತ್ಯಾಗಿ. ಯಾವನು ಆಶೆಯನ್ನು ತೊರೆದಿರುವನೋ ಅವನೇ ಧನಿಕನೆಂದು ಹಿಂದೆಯೇ ಹೇಳಲಾಗಿದೆ. ಆಶೆಯನ್ನು ತೊರೆಯದವನು ಧನಿಕನಾಗಿದ್ದರೂ ದರಿದ್ರನೇ ಆಗಿರುತ್ತಾನೆ.

ಯುಧಿಷ್ಠಿರನಿಲ್ಲಿ ಜ್ಞಾನಿಯನ್ನು ಕುರಿತು ಹೇಳಿದ್ದಾನೆ. ಜ್ಞಾನಿಯಾದವನಿಗೆ ಮಾತ್ರವೇ ಸುಖ-ದುಃಖಗಳಲ್ಲಿ, ಪ್ರಿಯಾಪ್ರಿಯಗಳಲ್ಲಿ ಯಾವ ವ್ಯತ್ಯಾಸವನ್ನೂ ಕಾಣದಿರುವ ಸಾಧ್ಯತೆಯಿದೆ. ಮನುಷ್ಯಸಾಮಾನ್ಯನಿಗೆ ಇದು ಅಸಾಧ್ಯವಾದುದು. ಆದುದರಿಂದ ಯುಧಿಷ್ಠಿರನ ಅಭಿಪ್ರಾಯದಲ್ಲಿ ಜ್ಞಾನಿಯಾದವನೇ ಸರ್ವಧನೀ–ಎನಿಸಿಕೊಳ್ಳುತ್ತಾನೆ. ಇಂತಹ ಜ್ಞಾನಿಯನ್ನೇ ಗೀತೆಯಲ್ಲಿ ಗುಣಾತೀತಃ –ಎಂದು ಕರೆಯಲಾಗಿದೆ.

**'ಕಿಂಸ್ವಿದಾದಿತ್ಯಮುನ್ನಯತಿ'**–ಎಂಬ ಪ್ರಶ್ನೆಯಿಂದ–**'ಯಶ್ಚ ಸರ್ವಧನೀ ನರಃ'**–ಎನ್ನುವವರೆಗೆ ಯಕ್ಷನು ೧೨೧ ಪ್ರಶ್ನೆಗಳನ್ನು ಕೇಳಿರುತ್ತಾನೆ. ಯುಧಿಷ್ಠಿರನು ಅಷ್ಟಕ್ಕೂ ಉತ್ತರಿಸಿರುತ್ತಾನೆ. ಪ್ರಶ್ನೋತ್ತರಗಳು ಸಾಮಾನ್ಯವಾಗಿ ಆಧ್ಯಾತ್ಮಿಕವಿಷಯಗಳನ್ನೇ ಒಳಗೊಂಡಿವೆ. ಪ್ರಶ್ನೋತ್ತರಮಾಲಿಕೆಯನ್ನು ಪದೇ-ಪದೇ ಓದುವುದರಿಂದ ಮನಸ್ಸಿಗೂ ಸಂಸ್ಕಾರವಾಗುವುದರಲ್ಲಿ ಸಂಶಯವೇ ಇಲ್ಲ. ಬಹುಕಲುಷಿತವಾಗಿರುವ ವಾತಾವರಣದಲ್ಲಿರುವ ನಮಗೆ ಸಾಕ್ಷಾತ್ ಪರಮಾತ್ಮನೇ ಬಂದು ಉಪದೇಶಿಸಿದರೂ ಮನದಟ್ಟಾಗುವುದು ಕಷ್ಟವೇ ಸರಿ. ಹೀಗಿರುವಾಗ ಓದಿದಮಾತ್ರದಿಂದಲೇ ನಮ್ಮ ಮನಸ್ಸು ಶುದ್ಧಿಯಾಗುವುದೆಂದು ಹೇಳುವ ಸಾಧ್ಯತೆಯಿಲ್ಲದಿದ್ದರೂ ಕಾಲಾನುಕ್ರಮವಾಗಿಯಾದರೂ ಇಂತಹ ಪ್ರವಚನಗಳ ಶ್ರವಣ-ಪಠನಗಳು ನಮ್ಮನ್ನು ಸನ್ಮಾರ್ಗಕ್ಕೆ ಒಯ್ಯುತ್ತವೆಂಬುದರಲ್ಲಿ ಸಂಶಯಪಡುವ ಕಾರಣವಿಲ್ಲ.

**ಬ್ರಹ್ಮಾದಿತ್ಯಮುನ್ನಯತಿ**–ಎಂಬ ಮೊದಲನೆಯ ಶ್ಲೋಕಕ್ಕೆ ನಮ್ಮ ಸುಹೃದಯರು ಹೇಳಿರುವ ಮತ್ತೊಂದು ಅರ್ಥವನ್ನೂ ಇಲ್ಲಿ ಕೊಡಲಾಗಿದೆ:

ಆದಿತ್ಯನೆಂದರೆ ಜೀವನೆಂದೇ ಅರ್ಥವಾಗುತ್ತದೆ. **ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ। ಸೂರ್ಯ ಇತ್ಯಾಚಾರ್ಯಃ। ಸಪ್ತಾಶ್ವಃ ಸಪ್ತ**

ರಜ್ಜುಶ್ಚ–ಇತ್ಯಾದಿ ವಾಕ್ಯಗಳು ಸೂರ್ಯನನ್ನು ಕುರಿತು ಹೇಳುತ್ತವೆ. ಸೂರ್ಯರೂಪನಾದ ಜೀವನಿಗೆ ಅಶ್ವರೂಪಗಳಾದ ಪ್ರಾಣಾಪಾನಾದಿ ಸಪ್ತ ವಾಯುಗಳಿವೆ. ಸಪ್ತವಾಯುಗಳಿಂದ ಕೂಡಿರುವ ಜೀವನು ಸರ್ವರ ಶರೀರ ಗಳಲ್ಲಿಯೂ ಇದ್ದಾನೆ. ಜೀವನಿಗೆ ದೇವತೆಗಳೆಂದರೆ ಇಂದ್ರಿಯಗಳು ಅಭಿತಶ್ಚರರು=ಜೀವನ ಸುತ್ತಲೂ ತಿರುಗುವವರು. ಅರ್ಥಾತ್ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಜೀವನು ಇಂದ್ರಿಯಸಮೇತನಾಗಿ ಪ್ರಪಂಚದಲ್ಲಿ ಹುಟ್ಟುತ್ತಾನೆ. ಧರ್ಮದಿಂದ ಅವನು ಅಸ್ತವನ್ನೂ ( ಮೋಕ್ಷವನ್ನೂ ) ಹೊಂದುತ್ತಾನೆ. ಆದರೆ ಕಡೆಯಲ್ಲಿ ಆ ಜೀವನು ಸತ್ಯದಲ್ಲಿಯೇ ( ಪರಮಾತ್ಮನಲ್ಲಿಯೇ ) ಪ್ರತಿಷ್ಠಾನಹೊಂದುತ್ತಾನೆ. ( ಐಕ್ಯಹೊಂದುತ್ತಾನೆ ). ಈ ಶ್ಲೋಕವು ಆಧ್ಯಾತ್ಮಸಂಹಿತೆಯೆನಿಸಿದ ಯಕ್ಷಪ್ರಶ್ನೆಗೆ ಮಂಗಳಶ್ಲೋಕವೆಂದೂ ಹೇಳಬಹುದು.

ಧರ್ಮಜನ ಉತ್ತರಗಳನ್ನು ಕೇಳಿ ಯಕ್ಷನು ಹರ್ಷಿತನಾದನು. ಅಂತೆಯೇ ಧರ್ಮಜನನ್ನು ಕುರಿತು ಹೇಳಿದನು :

**ವ್ಯಾಖ್ಯಾತಃ ಪುರುಷೋ ರಾಜನ್ಯಶ್ಚ ಸರ್ವಧನೀ ನರಃ ।**
**ತಸ್ಮಾತ್ತ್ವಮೇಕಂ ಭ್ರಾತೄಣಾಂ ಯಮಿಚ್ಛಸಿ ಸ ಜೀವತು ॥೧೨೨॥**

"ಯುಧಿಷ್ಠಿರ! ನೀನೀಗ ಪುರುಷನಾರೆಂಬುದನ್ನೂ–ಸರ್ವಧನಿಯಾದ ನರನಾರೆಂಬುದನ್ನೂ ಯಥಾತಥ್ಯವಾಗಿ ವ್ಯಾಖ್ಯಾನಮಾಡಿರುವೆ. ನೀನು ಹೇಳಿರುವ ಉತ್ತರಗಳಿಂದ ಸಂತುಷ್ಟನಾಗಿರುವ ನಾನು ನಿನ್ನೊಬ್ಬ ತಮ್ಮನನ್ನು ಬದುಕಿಸಿಕೊಡಲು ಇಚ್ಛಿಸಿದ್ದೇನೆ. ನಿನಗೆ ಯಾವ ತಮ್ಮನನ್ನು ಬದುಕಿಸಿಕೊಳ್ಳಬೇಕೆಂದು ಇಚ್ಛೆಯಿರುವುದೋ ಹೇಳು ; ಅವನೊಬ್ಬನನ್ನು ಬದುಕಿಸಿಕೊಡುತ್ತೇನೆ."

ಯುಧಿಷ್ಠಿರನು ಕ್ಷಣಮಾತ್ರವಾದರೂ ಯೋಚಿಸದೇ ಹೇಳಿದನು :

"ಯಕ್ಷನೇ! ಶ್ಯಾಮಲವರ್ಣನಾಗಿಯೂ, ರಕ್ತಾಕ್ಷನಾಗಿಯೂ, ಶಾಲ ವೃಕ್ಷದಂತೆ ದೀರ್ಘಕಾಯನಾಗಿಯೂ, ಅಗಲವಾದ ವಕ್ಷಃಸ್ಥಳವುಳ್ಳವ ನಾಗಿಯೂ, ಮಹಾಬಾಹುವಾಗಿಯೂ ಇರುವ ನಕುಲನು ನಿನ್ನ ದಯೆ ಯಿಂದಾಗಿ ಜೀವಂತನಾಗಲಿ."

ಯಕ್ಷನು ಯುಧಿಷ್ಠಿರನ ಮಾತಿಗೆ ತನ್ನ ಅಚ್ಚರಿಯನ್ನು ವ್ಯಕ್ತಪಡಿಸುತ್ತಾ ಹೇಳಿದನು : "ಯುಧಿಷ್ಠಿರ! ಭೀಮಸೇನನು ನಿನಗೆ ಅತ್ಯಂತಪ್ರಿಯನಾದವನು. ಅರ್ಜುನನು ನಿಮ್ಮೆಲ್ಲರಿಗೂ ಆಶ್ರಯನು. ಮುಂದಿನ ನಿನ್ನ ವಿಜಯಕ್ಕೆ ನೀನು ಅವನನ್ನೇ ಸಂಪೂರ್ಣವಾಗಿ ಅವಲಂಬಿಸಿರುವೆ. ಹೀಗಿರುವಾಗ ಭೀಮಾರ್ಜುನರನ್ನು ಬಿಟ್ಟು ನಿನ್ನ ಮಲತಾಯಿಯ ಮಗನಾದ ನಕುಲನನ್ನೇತಕ್ಕೆ ಜೀವಂತನನ್ನಾಗಿ ಮಾಡುವಂತೆ ಪ್ರಾರ್ಥಿಸುವೆ?

ಪರಾಕ್ರಮದಲ್ಲಿಯೂ ಭೀಮನಿಗೆ ನಕುಲನು ಸಮಾನನಾಗುವನೇ? ಯಾವನಿಗೆ ಹತ್ತು ಸಾವಿರ ಆನೆಗಳ ಬಲವಿರುವುದೋ ಅಂತಹ ಮಹಾಪರಾಕ್ರಮಿಯಾದ ಭೀಮಸೇನನನ್ನು ಬಿಟ್ಟು ನಕುಲನನ್ನೇಕೆ ಬದುಕಿಸಿಕೊಳ್ಳಲಿಚ್ಛಿಸುವೆ? ಮೇಲಾಗಿ ಭೀಮನು ನಿನಗೆ ಪರಮಪ್ರಿಯನಾದವನೆಂದು ಎಲ್ಲರೂ ಹೇಳುತ್ತಾರೆ. ಇಂತಹ ಪರಮಪ್ರಿಯನಾದ ಮಹಾಪರಾಕ್ರಮಿಯಾದ ಭೀಮನನ್ನು ಪರಿತ್ಯಜಿಸಿ ನಕುಲನನ್ನು ಬದುಕಿಸಿಕೊಳ್ಳುವ ನಿನ್ನ ಆಶಯವಾದರೂ ಏನು? ಸವ್ಯಸಾಚಿಯಾದ ಅರ್ಜುನನ ಬಾಹುಬಲದಲ್ಲಿಯೇ ಪಾಂಡುಪುತ್ರರಾದ ನೀವೆಲ್ಲರೂ ಭರವಸೆಯಿಂದಿದ್ದೀರಿ. ಅವನ ಬಾಹುಬಲದಿಂದಲೇ ನಿಮಗಿಂದು ಪ್ರಾಪ್ತವಾಗಿರುವ ಕಷ್ಟದಿಂದ ವಿಮೋಚನೆಯಾಗುವುದೆಂಬ ದೃಢವಿಶ್ವಾಸವೂ ನಿಮಗಿದೆ. ಹೀಗಿರುವಾಗ ನಿನ್ನ ಪ್ರಿಯನಾದ ಭೀಮನನ್ನಾಗಲೀ, ನಿಮಗೆ ಆಶ್ರಯಭೂತನಾದ ಅರ್ಜುನನ್ನಾಗಲೀ ಬದುಕಿಸಿಕೊಳ್ಳಲು ಅಪೇಕ್ಷಿಸದೇ ಮಲತಾಯಿಯ ಮಗನಾದ ನಕುಲನನ್ನೇಕೆ ಬದುಕಿಸಿಕೊಳ್ಳಲಿಚ್ಛಿಸಿರುವೆ?"

ಯಕ್ಷನು ಹೇಳಿದುದೇನೋ ತಾರ್ಕಿಕವಾಗಿದೆ. ಆದರೆ ಅದಕ್ಕೆ ಧರ್ಮಮೂರ್ತಿಯಾದ ಧರ್ಮಜನ ಉತ್ತರವೂ ಹೃದಯಂಗಮವಾಗಿದೆ.

**ಧರ್ಮ ಏವ ಹತೋ ಹನ್ತಿ ಧರ್ಮೋ ರಕ್ಷತಿ ರಕ್ಷಿತಃ ।**
**ತಸ್ಮಾದ್ಧರ್ಮಂ ನ ತ್ಯಜಾಮಿ ಮಾ ನೋ ಧರ್ಮೋ**
**ಹತೋಽವಧೀತ್ ॥೧೨೮॥**

**ಆನೃಶಂಸ್ಯಂ ಪರೋ ಧರ್ಮಃ ಪರಮಾರ್ಥಾಚ್ಚ ಮೇ ಮತಮ್ ।**
**ಆನೃಶಂಸ್ಯಂ ಚಿಕೀರ್ಷಾಮಿ ನಕುಲೋ ಯಕ್ಷ ಜೀವತು ॥೧೨೯॥**

**ಧರ್ಮಶೀಲಃ ಸದಾ ರಾಜಾ ಇತಿ ಮಾಂ ಮಾನವಾ ವಿದುಃ ।**
**ಸ್ವಧರ್ಮಾನ್ನ ಚಲಿಷ್ಯಾಮಿ ನಕುಲೋ ಯಕ್ಷ ಜೀವತು ॥೧೩೦॥**

**ಕುನ್ತೀ ಚೈವ ತು ಮಾದ್ರೀ ಚ ದ್ವೇ ಭಾರ್ಯೇ ತು ಪಿತುರ್ಮಮ ।**
**ಉಭೇ ಸಪುತ್ರೇ ಸ್ಯಾತಾಂ ವೈ ಇತಿ ಮೇ ಧೀಯತೇ ಮತಿಃ ॥೧೩೧॥**

**ಯಥಾ ಕುನ್ತೀ ತಥಾ ಮಾದ್ರೀ ವಿಶೇಷೋ ನಾಸ್ತಿ ಮೇ ತಯೋಃ ।**
**ಮಾತೃಭ್ಯಾಂ ಸಮಮಿಚ್ಛಾಮಿ ನಕುಲೋ ಯಕ್ಷ ಜೀವತು ॥೧೩೨॥**

“ಧರ್ಮವು ಹತವಾದರೆ ( ಧರ್ಮವನ್ನು ನಾಶಮಾಡಿದರೆ ಅಥವಾ ಧರ್ಮಕ್ಕೆ ವಿರುದ್ಧವಾದುದನ್ನು ಮಾಡಿದರೆ ) ಧರ್ಮಹಂತಕನನ್ನು ಧರ್ಮವು ಹನನಮಾಡುತ್ತದೆ. ( ವಿನಾಶಗೊಳಿಸುತ್ತದೆ ). ಧರ್ಮರಕ್ಷಕನನ್ನು (ಧರ್ಮಾಚರಣೆಯನ್ನು ಮಾಡುವವನನ್ನು ) ಧರ್ಮವು ಸಂರಕ್ಷಿಸುತ್ತದೆ. ಆ ಕಾರಣದಿಂದಾಗಿ ನಾನೆಂದಿಗೂ ಧರ್ಮವನ್ನು ತ್ಯಜಿಸುವುದಿಲ್ಲ. ನಷ್ಟವಾದ ಧರ್ಮನು ನಮ್ಮನ್ನು ಕೊಲ್ಲದಿರಲಿ.

ದಯಾಪರತೆಯೇ ಎಲ್ಲ ಅತ್ಯುಚ್ಚಧರ್ಮಗಳಿಗಿಂತಲೂ ಶ್ರೇಷ್ಠವಾದುದೆಂದು ನನ್ನ ಅಭಿಮತವಾಗಿದೆ. ಆದುದರಿಂದ ನಾನು ಯಾವಾಗಲೂ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಯಾಪರನಾಗಿರಬೇಕೆಂದು ಪ್ರಯತ್ನಿಸುತ್ತೇನೆ. ಯಕ್ಷನೇ! ಆದುದರಿಂದ ನಕುಲನು ಜೀವಂತನಾಗಲಿ.

ಧರ್ಮರಾಜನು ಧರ್ಮಶೀಲನೆಂದು ಮಾನವರೆಲ್ಲರೂ ತಿಳಿದುಕೊಂಡಿರುತ್ತಾರೆ. ಆ ಕಾರಣದಿಂದ ನಾನು ಸ್ವಧರ್ಮವನ್ನೆಂದಿಗೂ ತ್ಯಜಿಸತಕ್ಕವನಲ್ಲ. ಆದುದರಿಂದ ನಕುಲನು ಜೀವಂತನಾಗಲಿ.

ನಾನು ನಕುಲನನ್ನು ಬದುಕಿಸಿಕೊಡುವಂತೆ ಹೇಳುವುದರಲ್ಲಿ ಧರ್ಮಸೂಕ್ಷ್ಮವೇನೆಂಬುದನ್ನು ವಿವರಿಸಿ ಹೇಳುತ್ತೇನೆ ಕೇಳು, ಯಕ್ಷ!

ನನ್ನ ತಂದೆಗೆ ಕುಂತೀ, ಮಾದ್ರಿ–ಎಂಬ ಇಬ್ಬರು ಪತ್ನಿಯರು. ಅವರಿಬ್ಬರೂ ಪುತ್ರವತಿಯರಾಗಿರಬೇಕು. ಇದು ನನ್ನ ಇಚ್ಛೆಯಾಗಿದೆ, ನಿನ್ನ ಅಭಿಪ್ರಾಯದಂತೆ ನಾನು ಭೀಮನನ್ನಾಗಲೀ, ಅರ್ಜುನನನ್ನಾಗಲೀ ಬದುಕಿಸಿ

ಕೊಂಡರೆ ಮಾದ್ರಿಯು ಅಪುತ್ರವತಿಯಾಗುವಳು. ಕುಂತಿಯು ಹೇಗೆ ನನಗೆ ತಾಯಿಯೋ–ಅಂತೆಯೇ ಮಾದ್ರಿಯೂ ನನಗೆ ತಾಯಿಯಾಗಿರುತ್ತಾಳೆ. ಅವರಿಬ್ಬರಲ್ಲಿ ನಾನು ಯಾವ ವಿಧವಾದ ತಾರತಮ್ಯವನ್ನೂ ಕಾಣದವ ನಾಗಿದ್ದೇನೆ. ಅವರಿಬ್ಬರ ವಿಷಯದಲ್ಲಿಯೂ ಒಂದೇ ವಿಧವಾದ ಗೌರವ-ವಿಶ್ವಾಸಗಳಿಂದ ನಡೆದುಕೊಳ್ಳಬೇಕೆಂದಿದ್ದೇನೆ. ಯಕ್ಷನೇ! ಆದುದರಿಂದ ನೀನು ಕೂಡಲೇ ನಕುಲನನ್ನು ಬದುಕಿಸಿಕೊಡು.”

ಯುಧಿಷ್ಠಿರನ ಧರ್ಮನಿಷ್ಠೆಯನ್ನು ನೋಡಿ ಸಂತುಷ್ಟನಾದ ಯಕ್ಷನು ಹೇಳಿದನು :

**ತಸ್ಯ ತೇಽರ್ಥಾಚ್ಚ ಕಾಮಾಚ್ಚ ಆನೃಶಂಸ್ಯಂ ಪರಂ ಮತಮ್ ।**
**ತಸ್ಮಾತ್ತೇ ಭ್ರಾತರಃ ಸರ್ವೇ ಜೀವಂತು ಭರತರ್ಷಭ ॥೧೩೩॥**

“ಭರತಶ್ರೇಷ್ಠನೇ! ನಿನಗೆ ಅರ್ಥ-ಕಾಮಗಳಿಗಿಂತಲೂ ದಯಾಪರ ತೆಯೇ ಶ್ರೇಷ್ಠವಾದ ಧರ್ಮವಾಗಿರುವುದರಿಂದ ನಿನ್ನ ನಾಲ್ಕು ಮಂದಿ ಅನುಜರೂ ಜೀವಂತರಾಗಲಿ.”

೩೨೩ನೆಯ ಅಧ್ಯಾಯವು ಮುಗಿಯಿತು.

೩೨೪ನೆಯ ಅಧ್ಯಾಯ ಆರಣೇಯಪರ್ವ (ಮುಂದುವರಿದಿದೆ.)

## ಭೀಮನೇ ಮೊದಲಾದ ನಾಲ್ವರನ್ನೂ ಯಕ್ಷನು ಬದುಕಿಸಿದುದು : ಧರ್ಮಮೂರ್ತಿಯಾದ ಯುಧಿಷ್ಠಿರನಿಗೆ ಯಕ್ಷನಿಂದ ವರಪ್ರದಾನ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

“ಮಹಾರಾಜ! ಯಕ್ಷನು–‘ಭ್ರಾತರಃ ಸರ್ವೇ ಜೀವಂತು’ ಎಂದು ಹೇಳಿದೊಡನೆಯೇ ಭೀಮಾರ್ಜುನ-ನಕುಲ-ಸಹದೇವರುಗಳು ನಿದ್ದೆಯಿಂದ ಎಚ್ಚೆತ್ತವರಂತೆ ಮೇಲೆದ್ದು ಕುಳಿತರು. ಆ ಸಮಯದಲ್ಲವರಿಗೆ ಹಸಿವು-ಬಾಯಾರಿಕೆಗಳಾವುವೂ ಇರಲಿಲ್ಲ. ತಮ್ಮಂದಿರು ಜೀವಂತರಾದು ದನ್ನು ನೋಡಿ ಆನಂದಭರಿತನಾದ ಯುಧಿಷ್ಠಿರನು ಯಕ್ಷನನ್ನು ಪ್ರಶ್ನಿಸಿದನು :

"ಮಹಾನುಭಾವ! ಈ ಸರೋವರದಲ್ಲಿ ಒಂದೇ ಕಾಲಿನಲ್ಲಿ ನಿಂತಿರುವ ಅಪರಾಜಿತನಾದ ನಿನ್ನ ನೈಜಸ್ವರೂಪವನ್ನು ತಿಳಿಯಲು ನಿನ್ನನ್ನು ಪ್ರಶ್ನಿಸುತ್ತೇನೆ. ನೀನು ಯಾರು? ನೀನು ಯಾವ ದೇವತೆಯಾಗಿರುವೆ? ನೀನು ಈ ಮೊದಲು ಹೇಳಿದಂತೆ ಯಕ್ಷನಲ್ಲವೆಂದು ನಾನು ನಿಶ್ಚಯಿಸಿದ್ದೇನೆ. ನೀನೇನಾದರೂ ಅಷ್ಟವಸುಗಳಲ್ಲಿ ಒಬ್ಬನಾಗಿರುವೆಯಾ? ಅಥವಾ ಏಕಾದಶರುದ್ರರಲ್ಲಿ ಒಬ್ಬನಾಗಿರುವೆಯಾ? ಸಪ್ತಮರುತ್ತುಗಳಲ್ಲಿ ಶ್ರೇಷ್ಠನಾದ ಮರುತ್ತನಾಗಿರುವೆಯಾ? ಅಥವಾ ನೀನೇನು ವಜ್ರಪಾಣಿಯಾದ, ತ್ರಿದಶೇಶ್ವರನಾದ ಮಹೇಂದ್ರನೇ? ನನ್ನ ಒಬ್ಬೊಬ್ಬ ತಮ್ಮನೂ ಒಂದೊಂದು ಲಕ್ಷ ಸೈನ್ಯದೊಡನೆ ಸೆಣಸಾಡುವ ಸಾಮರ್ಥ್ಯವುಳ್ಳವನಾಗಿರುತ್ತಾನೆ. ಆದರೆ ಈ ನಾಲ್ವರನ್ನೂ ಏಕಕಾಲದಲ್ಲಿ ಸಂಹರಿಸಲು ಸಾಮರ್ಥ್ಯವಿರುವ ಪರಾಕ್ರಮಿಯನ್ನು ನಾನು ಇದುವರೆಗೂ ಕಂಡಿಲ್ಲ : ಕೇಳಿಯೂ ಇಲ್ಲ. ಮೇಲಾಗಿ ನಿನ್ನ ಆಣತಿಯಂತೆ ಮೇಲೆದ್ದು ಕುಳಿತಿರುವ ಇವರು ಸುಖನಿದ್ರೆಯಿಂದ ಎಚ್ಚೆತ್ತವರಂತೆ ಕಾಣುತ್ತಿದ್ದಾರೆ. ಇವರ ಮುಖಗಳಲ್ಲಿ ಆಯಾಸದ ಕುರುಹೂ ಕಾಣುತ್ತಿಲ್ಲ. ಇದು ನಿನ್ನ ದಯೆಯಲ್ಲದೇ ಮತ್ತೇನು? ಮಹಾನುಭಾವ! ನೀನು ನಮ್ಮೈವರ ಸುಹೃದನಾಗಿರುವೆ : ಅಥವಾ ನಮ್ಮ ತಂದೆಯೇ ಆಗಿರುವೆ. ಇದರಲ್ಲಿ ನನಗಾವ ಸಂಶಯವೂ ಇರುವುದಿಲ್ಲ."

"ಪ್ರಚಂಡಪರಾಕ್ರಮಿಯಾದ ಭರತರ್ಷಭನೇ! ನೀನು ಊಹಿಸಿರುವಂತೆಯೇ ನಾನು ನಿನ್ನ ತಂದೆಯೇ ಆಗಿರುತ್ತೇನೆ. ನಾನೇ ಯಮಧರ್ಮನು. ನಾನು ನಿನ್ನನ್ನು ನೋಡುವ ಸಲುವಾಗಿಯೇ ಇಲ್ಲಿಗೆ ಬಂದೆನೆಂದು ತಿಳಿಯುವವನಾಗು.

ಮಗು! ಯುಧಿಷ್ಠಿರ! ನನಗೆ ನಾನಾವಿಧವಾದ ಶರೀರಗಳಿವೆ.

**ಯಶಃ ಸತ್ಯಂ ದಮಃ ಶೌಚಮಾರ್ಜವಂ ಹ್ರೀರಚಾಪಲಮ್ ।**
**ದಾನಂ ತಪೋ ಬ್ರಹ್ಮಚರ್ಯಮಿತ್ಯೇತಾಸ್ತನವೋ ಮಮ ॥೭॥**

ಯಶಸ್ಸು, ಸತ್ಯ, ದಮ, ಶೌಚ, ಋಜುತ್ವ, ಲಜ್ಜೆ, ಅಚಪಲತೆ, ದಾನ, ತಪಸ್ಸು, ಬ್ರಹ್ಮಚರ್ಯ–ಇವುಗಳೇ ನನ್ನ ಶರೀರಗಳು. ಅಹಿಂಸೆ, ಶೀತೋಷ್ಣ-ಸುಖ-ದುಃಖಗಳಲ್ಲಿ ಸಮತೆ, ಶಾಂತಿ, ತಪಸ್ಸು, ಅಂತಃಶುದ್ಧಿ,

ಬಹಿಃಶುದ್ಧಿಗಳು, ಮಾತ್ಸರ್ಯವಿಲ್ಲದಿರುವಿಕೆ–ಇವುಗಳ ಮೂಲಕವಾಗಿ ನನ್ನನ್ನು ಕಾಣಬಹುದಾಗಿದೆ. ಈ ಎಲ್ಲ ಗುಣಗಳಿಂದಲೂ ಕೂಡಿರುವ ನೀನು ನನಗೆ ಬಹಳ ಪ್ರಿಯನಾಗಿರುವೆ. ನೀನು ಶಾಂತನಾಗಿರುವೆ. ದಾಂತನಾಗಿರುವೆ. ಉಪರತನಾಗಿರುವೆ. ತಿತಿಕ್ಷುವಾಗಿರುವೆ ಮತ್ತು ಸಮಾಹಿತನೂ ಆಗಿರುವೆ. ಆತ್ಮದರ್ಶನಸಾಧಕಗಳಾದ ಈ ಐದು ಸಾಧನೆಗಳಲ್ಲಿ ನೀನು ಯಾವಾಗಲೂ ನಿರತನಾಗಿರುವೆ. ಇದಲ್ಲದೇ ನೀನು ಅದೃಷ್ಟವಶಾತ್ ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ವಿಧವಾದ ಶತ್ರುಗಳನ್ನೂ ಜಯಿಸಿರುವೆ. ಈ ಅರಿಷಡ್ವರ್ಗದಲ್ಲಿ ಮೊದಲನೆಯ ಎರಡನ್ನು (ಕಾಮ-ಕ್ರೋಧಗಳನ್ನು ) ಬಾಲ್ಯದಲ್ಲಿಯೇ ಜಯಿಸಬೇಕು. ಲೋಭ-ಮೋಹ ಗಳನ್ನು ಯೌವನದಲ್ಲಿ ಪರಿತ್ಯಜಿಸಬೇಕು. ಮದ-ಮಾತ್ಸರ್ಯಗಳನ್ನು ಅಂತ್ಯಕಾಲದಲ್ಲಿ ಪರಿತ್ಯಜಿಸಬೇಕು. ಈ ಆರು ಶತ್ರುಗಳನ್ನೂ ನೀನು ಈಗಾಗಲೇ ಜಯಿಸಿ ಶಾಂತನಾಗಿರುವೆ.

ಮಗು! ನಿನಗೆ ಮಂಗಳವಾಗಲಿ! ನಾನು ನಿನ್ನ ತಂದೆಯಾದ ಯಮಧರ್ಮನು. ನಾನಿಲ್ಲಿಗೆ ನಿನ್ನ ಸತ್ತ್ವವನ್ನು ಪರೀಕ್ಷಿಸುವ ಸಲುವಾಗಿಯೇ ಆಗಮಿಸಿದೆನು. ನಿನ್ನಲ್ಲಿರುವ ದಯಾಪರತ್ವದಿಂದ ಸಂತುಷ್ಟನಾಗಿದ್ದೇನೆ. ಪಾಪರಹಿತನೇ! ರಾಜೇಂದ್ರ! ನಿನಗೆ ಯಾವ ವರವು ಬೇಕೆಂಬುದನ್ನು ಕೇಳು. ನಿನಗೆ ಬೇಕಾದ ವರವನ್ನು ಕೊಡುತ್ತೇನೆ.

**ಯೇ ಹಿ ಮೇ ಪುರುಷಾ ಭಕ್ತಾ ನ ತೇಷಾಮಸ್ತಿ ದುರ್ಗತಿಃ ॥೧೧॥**

ನನ್ನ ಭಕ್ತರು ಯಾರಿದ್ದಾರೆಯೋ ಅವರಿಗೆ ಖಂಡಿತವಾಗಿಯೂ ದುರ್ಗತಿಯುಂಟಾಗುವುದಿಲ್ಲ."

"ದೇವದೇವ! ಅರಣೀಸಹಿತವಾದ ಮಂಥನದಂಡವನ್ನು ಜಿಂಕೆ ಯೊಂದು ಕೊಂಬಿನಲ್ಲಿ ಎತ್ತಿಕೊಂಡು ಓಡಿಹೋಯಿತು. ಆ ಕಾರಣದಿಂದಾಗಿ ಬ್ರಾಹ್ಮಣನ ಅಗ್ನಿಹೋತ್ರಗಳು ಲೋಪವಾಗದಿರುವಂತೆ ನನಗೆ ಮೊದಲನೆಯ ವರವನ್ನು ದಯಪಾಲಿಸು."

"ಅರಣೀಸಹಿತವಾದ ಮಂಥನದಂಡವನ್ನು ಜಿಂಕೆಯ ವೇಷವನ್ನು ಧರಿಸಿ ನಾನೇ ಅಪಹರಿಸಿದೆನು. ನಿನ್ನೊಡನೆ ಜಿಜ್ಞಾಸೆ ಮಾಡುವ ಆಶಯ ದಿಂದಾಗಿ ನಾನು ಹೀಗೆ ಮಾಡಿದೆನು, ಮಗು!"

ಹೀಗೆಂದು ನಿಜಾಂಶವನ್ನು ಹೇಳಿದ ನಂತರಲಿದಲ್ಲಿ ಯಮಧರ್ಮನು ಧರ್ಮಜನನ್ನು ಕುರಿತು ಪುನಃ ಹೇಳಿದನು :

"ಯುಧಿಷ್ಠಿರ! ನಾನೀ ವರವನ್ನು ನಿನಗೆ ಕೊಟ್ಟಿದ್ದೇನೆ. ನಿನಗೆ ಮಂಗಳವಾಗಲಿ. ಅಮರೋಪಮನೇ! ಮತ್ತೊಂದು ವರವನ್ನು ಕೇಳು. ಅದನ್ನೂ ಕೊಡಲಿಚ್ಛಿಸಿದ್ದೇನೆ."

"ಮಹಾನುಭಾವ! ಅರಣ್ಯವಾಸದಲ್ಲಿ ನಾವೀಗ ಹನ್ನೆರಡು ವರ್ಷಗಳನ್ನು ಕಳೆದಿರುತ್ತೇವೆ. ಮುಂದೆ ಅಜ್ಞಾತವಾಸದಲ್ಲಿ ಒಂದು ವರ್ಷವನ್ನು ಕಳೆಯಬೇಕಾಗಿದೆ. ಆ ಒಂದು ವರ್ಷದಲ್ಲಿ ನಮ್ಮನ್ನು ಯಾವ ಮನುಷ್ಯರೂ ಕಂಡುಹಿಡಿಯದಂತೆ ಅಥವಾ ಯಾರೊಬ್ಬರಿಗೂ ನಮ್ಮನ್ನು ಗುರುತಿಸಲು ಸಾಧ್ಯವಾಗದಂತೆ ವರವನ್ನು ದಯಪಾಲಿಸು".

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ಧರ್ಮಜನ ಪ್ರಾರ್ಥನೆಯನ್ನು ಕೇಳಿದ ಭಗವಂತನಾದ ಯಮಧರ್ಮನು 'ದದಾನಿ' 'ಕೊಡುವೆನು' ಎಂದು ಒಡನೆಯೇ ಅಭಿವಚನವನ್ನಿತ್ತು ಸತ್ಯವಿಕ್ರಮನಾದ, ಕುಂತೀಪುತ್ರನಾದ ಧರ್ಮಜನನ್ನು ಪ್ರಿಯವಾಕ್ಯಗಳಿಂದ ಆಶ್ವಸಿಸುತ್ತಾ ಹೇಳಿದನು :

"ಧರ್ಮಜ! ನನ್ನ ವರಪ್ರಭಾವದಿಂದಾಗಿ ನೀವು ನಿಮ್ಮ ಸಹಜವಾದ ರೂಪಿನಲ್ಲಿ ವಿಶ್ವವನ್ನೇ ಪರ್ಯಟನೆಮಾಡಿದರೂ ಯಾರೂ ನಿಮ್ಮನ್ನು ಗುರುತಿಸಲಾರರು. ಕುರುಕುಲಾವತಂಸರೇ! ನೀವು ನಿಮ್ಮ ಹದಿಮೂರನೆಯ ವರ್ಷದ ಅಜ್ಞಾತವಾಸವನ್ನು ವಿರಾಟರಾಜನ ರಾಜ್ಯದಲ್ಲಿ ಕಳೆಯಿರಿ. ಅಲ್ಲಿ ನಿಮ್ಮ ಗುರುತು ಯಾರಿಗೂ ಸಿಗದಂತೆ ನಿಮಗಿಚ್ಛೆಬಂದ ವೇಷಗಳನ್ನು ಧರಿಸಿರಿ. ನೀವಿಚ್ಛಿಸುವ ವೇಷಗಳು ಸಂಕಲ್ಪಮಾತ್ರದಿಂದಲೇ ನಿಮಗೆ ಲಭ್ಯವಾಗುತ್ತವೆ. ನೀವೀಗಲೇ ಆ ಬ್ರಾಹ್ಮಣನಿಗೆ ಈ ಅರಣಿಯನ್ನು ಕೊಂಡೊಯ್ದು ಕೊಡಿರಿ. ನಿಮ್ಮೊಡನೆ ಜಿಜ್ಞಾಸೆಮಾಡುವ ಆಶಯದಿಂದಲೇ ನಾನೀ ಅರಣಿಯನ್ನು ಜಿಂಕೆಯ ರೂಪವನ್ನು ಧರಿಸಿ ಅಪಹರಿಸಿದ್ದೆನು.

ಮಗು, ಯುಧಿಷ್ಠಿರ! ನೀನು ನಿನಗಿಷ್ಟವಾದ ಮತ್ತೊಂದು ವರವನ್ನೂ

ಪ್ರಾರ್ಥಿಸು. ನಿನಗಿತ್ತ ಹಿಂದಿನ ಎರಡು ವರಗಳಿಂದ ನನ್ನ ಮನಸ್ಸು ತೃಪ್ತಿ ಹೊಂದಲಿಲ್ಲ. ನೀನು ಕೇಳಲಿರುವ ಮೂರನೆಯ ವರವಾದರೋ ಅಪ್ರತಿಮ ವಾಗಿರಬೇಕು ಮತ್ತು ಅತಿಮಹತ್ವಯುಕ್ತವಾಗಿಯೂ ಇರಬೇಕು. ತಿಳಿಯಿತೇ? ನೀನು ನನ್ನ ಅನುಗ್ರಹದಿಂದಲೇ ಹುಟ್ಟಿರುವೆ. ವಿದುರನೂ ನನ್ನ ಅಂಶದಿಂದಲೇ ಹುಟ್ಟಿರುವನು."

ಯಮಧರ್ಮನ ಮಾತುಗಳನ್ನು ಕೇಳಿ ಯುಧಿಷ್ಠಿರನು ಹೇಳಿದನು :

**ದೇವದೇವೋ ಮಯಾ ದೃಷ್ಟೋ ಭವಾನ್ಸಾಕ್ಷಾತ್ಸನಾತನಃ ।**
**ಯಂ ದದಾಸಿ ವರಂ ತುಷ್ಟಸ್ತಂ ಗ್ರಹೀಷ್ಯಾಮ್ಯಹಂ ಪಿತಃ ॥೨೩॥**

"ತಂದೆಯೇ! ದೇವದೇವನಾದ ನಿನ್ನನ್ನು ಪ್ರತ್ಯಕ್ಷವಾಗಿ ಕಂಡೆನು. ನೀನು ಸಾಕ್ಷಾತ್ ಸನಾತನನೇ ಆಗಿರುವೆ. ಸಂತುಷ್ಟನಾದ ನೀನು ಯಾವ ವರವನ್ನು ದಯಪಾಲಿಸುವೆಯೋ–ಅದನ್ನು ನಾನು ಕೃತಜ್ಞತೆಯಿಂದ ಸ್ವೀಕರಿಸುತ್ತೇನೆ. ನಾನು ಮುಖ್ಯವಾಗಿ ನಿನ್ನಿಂದ ಅಭಿಲಾಷಿಸುವ ವರವೆಂದರೆ :

**ಜಯೇಯಂ ಲೋಭಮೋಹೌ ಚ ಕ್ರೋಧಂ ಚಾಹಂ ಸದಾ ವಿಭೋ ।**
**ದಾನೇ ತಪಸಿ ಸತ್ಯೇ ಚ ಮನೋ ಮೇ ಸತತಂ ಭವೇತ್ ॥೨೪॥**

ನಾನು ನಿನ್ನ ಅನುಗ್ರಹದಿಂದ ಲೋಭ-ಮೋಹ-ಕ್ರೋಧಗಳೆಂಬ ಮಹಾಶತ್ರುಗಳನ್ನು ಎಲ್ಲ ಕಾಲಗಳಲ್ಲಿಯೂ ಜಯಿಸುವಂತಾಗಬೇಕು. ದಾನ, ತಪಸ್ಸು ಮತ್ತು ಸತ್ಯನಿಷ್ಠೆಗಳಲ್ಲಿ ನನ್ನ ಮನಸ್ಸು ಸದಾ ನಿರತವಾಗಿರಬೇಕು."

ಧರ್ಮಜನ ಮಾತನ್ನು ಕೇಳಿ ಯಮಧರ್ಮನು ಬಹಳ ಸಂತುಷ್ಟನಾಗಿ ಹೇಳಿದನು :

"ಪಾಂಡವ! ನೀನು ಪ್ರಾರ್ಥಿಸಿರುವ ಈ ಗುಣಗಳು ನಿನಗೆ ಹುಟ್ಟಿನಿಂದಲೇ ಬಂದಿವೆ. ನೀನು ಸಾಕ್ಷಾತ್ ಧರ್ಮಮೂರ್ತಿಯೇ ಆಗಿರುವೆ. ಆದರೂ ನೀನು ಪ್ರಾರ್ಥಿಸಿರುವುದನ್ನು ನಾನು ಅನುಗ್ರಹಿಸುತ್ತೇನೆ. ನೀನು

ನನ್ನ ಅನುಗ್ರಹದಿಂದಾಗಿ ಲೋಭ-ಮೋಹ-ಕ್ರೋಧಗಳನ್ನು ಸರ್ವದಾ ಜಯಿಸುವೆ ಮತ್ತು ನಿನ್ನ ಮನಸ್ಸು ಯಾವಾಗಲೂ ದಾನ, ತಪಸ್ಸು ಮತ್ತು ಸತ್ಯಗಳಲ್ಲಿಯೇ ಪ್ರತಿಷ್ಠಿತವಾಗಿರುತ್ತದೆ."

ಲೋಕಪಾವನನಾದ, ಸಕಲಲೋಕವಂದ್ಯನಾದ ಯಮಧರ್ಮನು ಧರ್ಮಾತ್ಮನಾದ ಯುಧಿಷ್ಠಿರನಿಗೆ ಹೀಗೆ ಹೇಳಿ ಅಂತರ್ಹಿತನಾದನು. ಗತ ಪ್ರಾಣರಾದರೆಂಬ ವ್ಯಾಜದಿಂದ ಸುಖವಾಗಿ ಮಲಗಿದ್ದ ಭೀಮಾರ್ಜುನ-ನಕುಲ-ಸಹದೇವರು ಮೇಲೆದ್ದು ತಮಗಿದ್ದ ಬಳಲಿಕೆಯನ್ನು ಸಂಪೂರ್ಣವಾಗಿ ಪರಿಹರಿಸಿಕೊಂಡವರಾಗಿ, ಅಣ್ಣನಾದ ಧರ್ಮಾತ್ಮನಾದ ಯುಧಿಷ್ಠಿರನೊಡನೆ ಆಶ್ರಮಕ್ಕೆ ಹೋಗಿ, ಅರಣಿಗಾಗಿ ಕಾಯುತ್ತಿದ್ದ ಬ್ರಾಹ್ಮಣನಿಗೆ ಅದನ್ನು ಸಮರ್ಪಿಸಿದರು.

ಜನಮೇಜಯ! ಈ ಪ್ರಕರಣದ ಪಠನ-ಶ್ರವಣಗಳು ಬಹಳ ಪುಣ್ಯ ದಾಯಕವಾದುವುಗಳು.

**ಇದಂ ಸಮುತ್ಥಾನಸಮಾಗತಂ ಮಹ-**
**ತ್ಪಿತುಶ್ಚ ಪುತ್ರಸ್ಯ ಚ ಕೀರ್ತಿವರ್ಧನಮ್ ।**
**ಪಠನ್ನರಃ ಸ್ಯಾದ್ವಿಜಿತೇನ್ದ್ರಿಯೋ ವಶೀ**
**ಸಪುತ್ರಪೌತ್ರಃ ಶತವರ್ಷಭಾಗ್ಭವೇತ್ ॥೨೮॥**

**ನ ಚಾಪ್ಯಧರ್ಮೇ ನ ಸುಹೃದ್ವಿಭೇದನೇ**
**ಪರಸ್ವಹಾರೇ ಪರದಾರಮರ್ಶನೇ ।**
**ಕದರ್ಯಭಾವೇ ನ ರಮೇನ್ಮನಃ ಸದಾ**
**ನೃಣಾಂ ಸದಾಖ್ಯಾನಮಿದಂ ವಿಜಾನತಾಮ್ ॥೨೯॥**

ಗತಪ್ರಾಣರಾಗಿದ್ದ ಭೀಮಾದಿಗಳು ಪುನಃ ಚೇತನವನ್ನು ಪಡೆದುದು ಮತ್ತು ತಂದೆ-ಮಕ್ಕಳ ಸಮಾಗಮ—ಈ ಆಖ್ಯಾನಗಳನ್ನೊಳಗೊಂಡ ಈ ಪ್ರಕರಣವನ್ನು ಓದುವುದರಿಂದ ಅಥವಾ ಕೇಳುವುದರಿಂದ ಅಪಾರವಾದ ಕೀರ್ತಿಯು ಲಭ್ಯವಾಗುತ್ತದೆ. ಮನುಷ್ಯನು ಜಿತೇಂದ್ರಿಯನಾಗುತ್ತಾನೆ. ಬಂಧನ ಮತ್ತು ಮೋಕ್ಷಗಳೆರಡಕ್ಕೂ ಕಾರಣವಾದ ಮನಸ್ಸನ್ನು ಹತೋಟಿ

ಯಲ್ಲಿಟ್ಟುಕೊಳ್ಳುತ್ತಾನೆ. ಪುತ್ರ-ಪೌತ್ರ-ಪ್ರಪೌತ್ರರನ್ನು ಹೊಂದಿದವನಾಗಿ ನೂರು ವರ್ಷಗಳ ಪರ್ಯಂತವಾಗಿ ದೀರ್ಘಾಯುಷ್ಮಂತನಾಗಿರುತ್ತಾನೆ. ಈ ಆಖ್ಯಾನವನ್ನು ಓದಿ ವಿಷಯವನ್ನು ಮನದಟ್ಟುಮಾಡಿಕೊಂಡವರ ಮನಸ್ಸು ಖಂಡಿತವಾಗಿಯೂ ಅಧರ್ಮಕಾರ್ಯದಲ್ಲಿ ಪ್ರವರ್ತಿಸುವುದಿಲ್ಲ. ಮಿತ್ರರಿಬ್ಬರಲ್ಲಿ ಭೇದವನ್ನುಂಟುಮಾಡಲು ಯತ್ನಿಸುವುದಿಲ್ಲ. ಪರಸ್ವತ್ತನ್ನು ಅಪಹರಿಸಲು ಪ್ರಯತ್ನಿಸುವುದಿಲ್ಲ. ಪರಪತ್ನಿಯರನ್ನು ಕಾಮುಕತೆಯಿಂದ ನೋಡುವುದಿಲ್ಲ. ಅಂತಹವರ ಮನಸ್ಸಿನಲ್ಲಿ ಕ್ಷುದ್ರವಾದ ವಿಚಾರಗಳೇ ಸುಳಿಯುವುದಿಲ್ಲ. ಅವರು ಯಾವಾಗಲೂ ಸತ್ಪುರುಷರಾಗಿಯೇ ಇದ್ದು ಜೀವನವನ್ನು ನಡೆಸುತ್ತಾರೆ."

ಃ೧೪ನೆಯ ಅಧ್ಯಾಯವು ಮುಗಿಯಿತು.

ಃ೧೫ನೆಯ ಅಧ್ಯಾಯ ಆರಣೇಯಪರ್ವ (ಮುಂದುವರಿದಿದೆ)

## ಅಜ್ಞಾತವಾಸಕ್ಕೆ ಅನುಮತಿಯನ್ನು ಪಡೆಯುವ ಸಮಯದಲ್ಲಿ ಶೋಕಾಕುಲನಾದ ಯುಧಿಷ್ಠಿರನನ್ನು ಧೌಮ್ಯರು ಸಮಾಧಾನ ಪಡಿಸಿದುದು : ಅಜ್ಞಾತವಾಸವನ್ನು ಹೇಗೆ ಕಳೆಯಬೇಕೆಂಬ ವಿಷಯವಾಗಿ ಪರಸ್ಪರ ಸಮಾಲೋಚನೆ

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಮಹಾರಾಜ! ಯಮಧರ್ಮನು ಧರ್ಮರಾಜನನ್ನು ಕುರಿತು ವಿರಾಟನಗರದಲ್ಲಿ ಒಂದು ವರ್ಷದ ಅಜ್ಞಾತವಾಸವನ್ನು ಕಳೆಯಬೇಕೆಂದು ಸೂಚಿಸಿದ್ದ ವಿಷಯವನ್ನು ಈ ಹಿಂದೆಯೇ ಹೇಳಿರುವೆನಲ್ಲವೇ? ಯಮ ಧರ್ಮನ ಆಣತಿಯಂತೆ ಪಾಂಡವರು ಹದಿಮೂರನೆಯ ವರ್ಷ ತಮ್ಮ ವೇಷವನ್ನು ಬದಲಾಯಿಸಿಕೊಂಡು ಅಜ್ಞಾತವಾಸದಲ್ಲಿದ್ದರು. ಅಜ್ಞಾತವಾಸಕ್ಕೆ ಹೊರಡುವ ಮುನ್ನ ಕಳೆದ ಹನ್ನೆರಡು ವರ್ಷಗಳಿಂದಲೂ ಅವರೊಂದಿಗೆ ಅರಣ್ಯದಲ್ಲಿಯೇ ವಾಸಮಾಡುತ್ತಿದ್ದ ವಿದ್ವಾಂಸರಾದ ಬ್ರಾಹ್ಮಣರನ್ನೂ, ವ್ರತನಿಷ್ಠರಾದ ಮುನಿಗಳನ್ನೂ, ತಪೋನಿಷ್ಠರಾದ ತಪಸ್ವಿಗಳನ್ನೂ ಬದ್ಧಾಂಜಲಿಪುಟರಾಗಿ ನಮಿಸಿ ಹೇಳಿದರು :

"ತಾಪಸೋತ್ತಮರೇ! ದುರ್ಯೋಧನಾದಿಗಳು ಮೋಸದಿಂದ ನಮ್ಮ ರಾಜ್ಯವನ್ನು ಅಪಹರಿಸಿರುವ ವಿಷಯವೂ ಮತ್ತು ನಮ್ಮನ್ನು ಅನೇಕರೀತಿಗಳಲ್ಲಿ ಕಷ್ಟಕ್ಕೀಡುಮಾಡಿರುವ ವಿಷಯವೂ ನಿಮಗೆ ತಿಳಿದೇ ಇದೆ. ಹನ್ನೆರಡು ವರ್ಷಗಳ ಕಾಲ ನಾವು ಬಹುಕಷ್ಟದಿಂದ ಈ ಅರಣ್ಯವಾಸವನ್ನು ಕಳೆದೆವು. ಹದಿಮೂರನೆಯ ವರ್ಷಪೂರ್ತಿ ಅಜ್ಞಾತವಾಸದಲ್ಲಿರುವುದೊಂದು ಮಾತ್ರವೇ ಉಳಿದಿರುವುದು. ಈ ಒಂದು ವರ್ಷಕಾಲ ನಾವು ಯಾರಿಗೂ ತಿಳಿಯದಂತೆ ಕಳೆಯಲು ತಾವು ಅನುಜ್ಞೆಯನ್ನು ದಯಪಾಲಿಸಿರಿ.

ನಮ್ಮ ಪರಮವೈರಿಗಳಾದ ದುರ್ಯೋಧನ-ಕರ್ಣ-ಶಕುನಿಗಳು ನಮ್ಮನ್ನು ಹುಡುಕಲು ಎಲ್ಲೆಡೆಗಳಲ್ಲಿಯೂ ಸಕಲಪ್ರಯತ್ನಗಳನ್ನೂ ಮಾಡುವರು. ಒಂದು ವೇಳೆ ಅವರು ನಮ್ಮನ್ನು ಕಂಡುಹಿಡಿಯುವುದರಲ್ಲಿ ಯಶಸ್ವಿಗಳಾದರೆ ನಮಗೂ ನಮ್ಮ ಹಿತಚಿಂತಕರಿಗೂ ಬಹಳ ಕೇಡುಂಟಾಗುವುದು. ಪುನಃ ನಾವು ನಮ್ಮ ರಾಜ್ಯವನ್ನು ಪಡೆದು ಬ್ರಾಹ್ಮಣರೊಡನೆ ಸುಖವಾಗಿರುವ ಸಂಭವವಿರುವುದೇ?"–ಹೀಗೆಂದು ಹೇಳುತ್ತಿದ್ದಾಗ ಯುಧಿಷ್ಠಿರನಿಗೆ ಬಹಳ ದುಃಖವುಂಟಾಯಿತು. ದುಃಖಶೋಕಾರ್ತನಾದ, ನಿಷ್ಕಲ್ಮಷಹೃದಯನಾದ ಧರ್ಮಸುತನು ಕ್ಷಣಕಾಲ ಮೂರ್ಛಿತನಾದನು. ಕಣ್ಣುಗಳಲ್ಲಿ ನೀರು ಹರಿಯುತ್ತಿದ್ದಿತು. ಮುಂದೆ ಮಾತನಾಡಲೂ ಅವನಿಗೆ ಸಾಧ್ಯವಾಗಲಿಲ್ಲ. ಶೈತ್ಯೋಪಚಾರಗಳಾದ ನಂತರ ಮೇಲೆದ್ದು ಕುಳಿತ ಯುಧಿಷ್ಠಿರನನ್ನು ಸುತ್ತಲೂ ಕುಳಿತಿದ್ದ ಬ್ರಾಹ್ಮಣರೂ ಮತ್ತು ಭೀಮಾದಿಗಳೂ ಬಹಳವಾಗಿ ಸಂತೈಸಿದರು. ಅನಂತರದಲ್ಲಿ ಪುರೋಹಿತರಾದ ಧೌಮ್ಯರು ಯುಧಿಷ್ಠಿರನನ್ನು ಕುರಿತು ಮಹಾರ್ಥಪೂರ್ಣವಾದ ಈ ಮಾತುಗಳನ್ನು ಹೇಳಿದರು :

"ಮಹಾರಾಜ! ನೀನು ವಿದ್ವಾಂಸನೂ, ದಾಂತನೂ, ಸತ್ಯಸಂಧನೂ ಮತ್ತು ಜಿತೇಂದ್ರಿಯನೂ ಆಗಿರುವೆ. ನಿನ್ನಂತಹವರು ಆಪತ್ಕಾಲದಲ್ಲಿ ಖಂಡಿತವಾಗಿಯೂ ಅಧೀರರಾಗಕೂಡದು."

ಆಪತ್ಕಾಲವೆಂಬುದು ದೇವತೆಗಳಿಗಾದರೂ ತಪ್ಪಿದ್ದಲ್ಲ. ಶತ್ರುಗಳ ಉಪಟಳವನ್ನು ತಪ್ಪಿಸಿಕೊಳ್ಳಲು ಅನೇಕ ಮಹಾತ್ಮರು ವೇಷಾಂತರಗಳನ್ನು

ಧರಿಸಿ ತ್ರಿಭುವನಗಳಲ್ಲಿಯೂ ಅಲೆದಾಡಿರುವ ಇತಿಹಾಸಗಳಿವೆ. ಶತ್ರುಗಳ ವಿನಾಶ ಕ್ಕಾಗಿ ಒಮ್ಮೆ ದೇವೇಂದ್ರನೂ ವೇಷವನ್ನು ಬದಲಾಯಿಸಿಕೊಂಡು ನಿಷಧ ದೇಶಕ್ಕೆ ಹೋಗಿ ಗಿರಿಪ್ರಸ್ಥವೆಂಬ ಆಶ್ರಮದಲ್ಲಿ ವಾಸವಾಗಿದ್ದನು. ವಿಷ್ಣುವೂ ದೈತ್ಯರ ವಧಾರ್ಥವಾಗಿ ತನ್ನ ವೇಷವನ್ನು ಮರೆಯಿಸಿ ಕುದುರೆಯ ಶಿರಸ್ಸನ್ನು ಧರಿಸಿ ಹಯಗ್ರೀವನಾಗಿ ಅದಿತಿಯ ಗರ್ಭದಲ್ಲಿ ಚಿರಕಾಲ ಇರಬೇಕಾಯಿತು. ವಾಮನಾವತಾರದ ಕಥೆಯನ್ನಾದರೂ ಕೇಳಿಲ್ಲವೇ? ಮಹಾರಾಜ! ಮಹಾ ವಿಷ್ಣುವೇ ವಾಮನಾವತಾರವನ್ನು ಧರಿಸಿದವನಾಗಿ ಬಲಿಯಿಂದ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಕೇಳಿ ಒಡನೆಯೇ ತ್ರಿವಿಕ್ರಮನಾಗಿ ಬಲಿಚಕ್ರ ವರ್ತಿಯನ್ನು ಪಾತಾಳಕ್ಕೆ ಮೆಟ್ಟಿ ಅವನ ರಾಜ್ಯ-ಕೋಶಾದಿಗಳನ್ನು ಅಪಹರಿಸಿದನು. ಅಗ್ನಿದೇವನೂ ಒಮ್ಮೆ ತನ್ನ ವೇಷವನ್ನು ಬದಲಾಯಿಸಿ ನೀರಿನಲ್ಲಿ ಅನೇಕ ವರ್ಷಗಳವರೆಗೆ ಹುದುಗಿ ಕೊಂಡಿದ್ದು ದೇವತೆಗಳ ಕಾರ್ಯವನ್ನು ಸಾಧಿಸಿಕೊಟ್ಟ ಇತಿಹಾಸವನ್ನೂ ನೀನು ಕೇಳಿರುವೆ. ಹರಿಯು ದೇವತೆಗಳ ಶತ್ರುಗಳಾದ ಅಸುರರ ವಿನಾಶಕಾಲದಲ್ಲಿ ಒಮ್ಮೆ ಇಂದ್ರನ ವಜ್ರಾಯುಧದಲ್ಲಿ ಸೇರಿಕೊಂಡು ಶತ್ರುಗಳ ವಿನಾಶವನ್ನು ಮಾಡಿರುವ ವಿಷಯವೂ ನಿನಗೆ ತಿಳಿ ದಿರುವುದು. ಬ್ರಹ್ಮರ್ಷಿಯಾದ ಔರ್ವನು ತನ್ನ ತಾಯಿಯ ತೊಡೆಯಲ್ಲಿದ್ದು ದೇವತೆಗಳ ಕಾರ್ಯದಲ್ಲಿ ಹೇಗೆ ನೆರವಾದನೆಂಬ ವಿಷಯವೂ ನಿನಗೆ ತಿಳಿದಿರುವುದು. ಇದೇ ರೀತಿಯಲ್ಲಿ ವಿವಸ್ವಂತನೂ ಕೂಡ ಭೂಮಿಯ ಎಲ್ಲೆಡೆಗಳಲ್ಲಿಯೂ ತೇಜೋರೂಪ ನಾಗಿದ್ದು ಸರ್ವಶತ್ರುಗಳನ್ನೂ ಸುಟ್ಟು ಭಸ್ಮಮಾಡಿದ ವಿಷಯವೂ ನಿನಗೆ ತಿಳಿದಿರುವುದು. ಭೀಮಪರಾಕ್ರಮಿಯಾದ ಮಹಾವಿಷ್ಣುವು ತನ್ನ ವೇಷವನ್ನು ಬದಲಾಯಿಸಿ ದಶರಥನ ಮನೆಯಲ್ಲಿ ರಾಮನೆಂಬ ಅಭಿಧಾನದಿಂದ ಜನ್ಮತಾಳಿ ದಶಗ್ರೀವನನ್ನು ಸಂಹರಿಸಿದನು. ಇದೇ ರೀತಿಯಲ್ಲಿ ಅನೇಕ ಮಹಾತ್ಮರು ತಮ್ಮ-ತಮ್ಮ ವೇಷಗಳನ್ನು ಬದಲಾಯಿಸಿ ಅಲ್ಲಲ್ಲಿ ಜನ್ಮತಾಳಿ ಯುದ್ಧದಲ್ಲಿ ಶತ್ರುಗಳನ್ನು ವಿನಾಶ ಗೊಳಿಸಿದರು. ಅದೇ ರೀತಿಯಲ್ಲಿ ನೀನೂ ಒಂದು ವರ್ಷಕಾಲ ಅಜ್ಞಾತವಾಸ ವನ್ನು ಕಳೆದನಂತರ ಶತ್ರುಗಳನ್ನು ಜಯಿಸುವೆ."

ಇವೇ ಮುಂತಾದ ಮಹಾರ್ಥಯುಕ್ತವಾದ, ಸಮಯೋಚಿತವಾದ ಧೌಮ್ಯರ ಮಾತುಗಳಿಂದ ಸಂತುಷ್ಟನಾದ ಯುಧಿಷ್ಠಿರನು ಸ್ವಬುದ್ಧಿ

ಯಿಂದಲೂ ಮತ್ತು ಶಾಸ್ತ್ರಬುದ್ಧಿಯಿಂದಲೂ ವಿಚಲಿತನಾಗಲಿಲ್ಲ. (ಚಿತ್ತ ಚಾಂಚಲ್ಯವನ್ನು ಹೊಂದಲಿಲ್ಲ.)

ಧೌಮ್ಯರು ಮಾತನಾಡಿದನಂತರ ಮಹಾಬಲನಾದ, ಮಹಾಬಾಹುವಾದ ಬಲಿಷ್ಠರಲ್ಲಿ ಶ್ರೇಷ್ಠನಾದ ಭೀಮಸೇನನು ಯುಧಿಷ್ಠಿರನನ್ನು ಸಂತಸಗೊಳಿಸುತ್ತಾ ಹೇಳಿದನು : "ನಿನ್ನ ಆಜ್ಞೆಯನ್ನು ನಿರೀಕ್ಷಿಸುತ್ತಿರುವ ನಮ್ಮ ಗಾಂಡೀವಿಯು ಧರ್ಮಾನುಗತವಾದ ಬುದ್ಧಿಯಿಂದ ಕೂಡಿದವನಾಗಿ ಯಾವ ವಿಧವಾದ ಸಾಹಸಕಾರ್ಯವನ್ನೂ ಮಾಡಲು ಪ್ರಯತ್ನಿಸಿಲ್ಲ. ನಕುಲ-ಸಹದೇವರೂ ಶತ್ರುವಿನ ವಿಧ್ವಂಸನದಲ್ಲಿ ಉತ್ಸುಕರಾಗಿದ್ದರೂ ನಾನವರನ್ನು ಪದೇ ಪದೇ ತಡೆಯುತ್ತಲೇ ಇದ್ದೇನೆ. ಅವರಿಗೆ ಅನುಮತಿಯನ್ನಿತ್ತರೆ ಭೀಮಪರಾಕ್ರಮವುಳ್ಳ ಅವರು ಶತ್ರುಗಳ ವಿಧ್ವಂಸನದಲ್ಲಿ ಸಂಪೂರ್ಣಸಮರ್ಥರಾಗಿರುತ್ತಾರೆ. ನೀನು ನಮಗೆ ಯಾವ ವಿಧವಾದ ನಿರ್ದೇಶನವನ್ನು ನೀಡುವೆಯೋ ಅದರಂತೆಯೇ ನಾವು ನಡೆಯಲು ಸಿದ್ಧರಿದ್ದೇವೆ. ಖಂಡಿತವಾಗಿಯೂ ಅದಕ್ಕೆ ತಪ್ಪಿನಡೆಯುವುದಿಲ್ಲ. ನಾವು ಏನು ಮಾಡಬೇಕಾಗಿದೆಯೆಂಬುದನ್ನು ಹೇಳು. ಮುಂದೆ ಮಾಡಬೇಕಾದ ಕಾರ್ಯವನ್ನು ಮಾಡು. ನಿನ್ನ ಆಜ್ಞಾಧಾರಕರಾಗಿ ನಾವು ನಡೆಯುವೆವು. ಬೇಗನೆ (ಒಂದು ವರ್ಷ ಕಳೆದ ಕೂಡಲೇ) ಶತ್ರುಗಳನ್ನು ಗೆಲ್ಲುವೆವು."

ಭೀಮಸೇನನು ಅಣ್ಣನನ್ನು ಕುರಿತು ಹೀಗೆ ಹೇಳಿದನಂತರ ಸುತ್ತಲೂ ಕುಳಿತಿದ್ದ ಬ್ರಾಹ್ಮಣರು ಸ್ವಸ್ತಿವಾಚನಮಾಡಿ ಪಾಂಡವರ ಅನುಜ್ಞೆಯನ್ನು ಪಡೆದು ತಮ್ಮ-ತಮ್ಮ ಆಶ್ರಮಗಳಿಗೆ ತೆರಳಿದರು. ವೇದವಿದರಾದ ಬ್ರಾಹ್ಮಣರು, ಮುನಿಗಳು, ಯತಿಗಳು–ಎಲ್ಲರೂ ಮುಂದೆ ಪಾಂಡವರನ್ನು ಬಹುಶೀಘ್ರವಾಗಿ ಕಾಣುವ ಆಶಯವನ್ನು ಹೊಂದಿದವರಾಗಿ ಆಶ್ರಮಗಳಿಗೆ ತೆರಳಿದರು. ಧೌಮ್ಯಸಹಿತರಾದ, ವಿದ್ವಾಂಸರಾದ ಧನುಷ್ಪಾಣಿಗಳಾದ ಐವರು ಪಾಂಡವರೂ ಮೇಲೆದ್ದು ದ್ರೌಪದಿಯೊಡಗೂಡಿದವರಾಗಿ ಅರಣ್ಯದ ಒಂದು ಮಾರ್ಗವನ್ನನುಸರಿಸಿ ತೆರಳಿದರು.

ಪಾಂಡವರು ಅಲ್ಲಿಂದ ಕಾಲುಯೋಜನ (ಕ್ರೋಶ) ದೂರದವರೆಗೆ ಪ್ರಯಾಣಮಾಡಿ ಮರುದಿನದಿಂದಲೇ ಕೈಗೊಳ್ಳಬೇಕಾಗಿದ್ದ ಅಜ್ಞಾತವಾಸದ

ವ್ಯವಸ್ಥೆಮಾಡುವ ಸಲುವಾಗಿ ಪರಸ್ಪರವಾಗಿ ಸಮಾಲೋಚನೆ ನಡೆಸಲು ಒಂದೆಡೆಯಲ್ಲಿ ಉಪವಿಷ್ಟರಾದರು.

ಜನಮೇಜಯ! ಪಾಂಡವರಲ್ಲಿ ಪ್ರತಿಯೊಬ್ಬರೂ ಶಸ್ತ್ರಾಸ್ತ್ರಗಳನ್ನು ಸಂಪೂರ್ಣವಾಗಿ ತಿಳಿದವರಾಗಿದ್ದರು. ಅಸ್ತ್ರವಿದ್ಯೆಗೆ ಬೇಕಾದ ಮಹಾಮಂತ್ರಗಳನ್ನು ತಿಳಿದವರಾಗಿದ್ದರು. ಸಂಧಿ-ವಿಗ್ರಹಾದಿ ರಾಜನೀತಿಗಳನ್ನು ಸಂಪೂರ್ಣವಾಗಿ ಬಲ್ಲವರಾಗಿದ್ದರು. ಧೀಮಂತರಾದ ಐವರೂ ದ್ರೌಪದಿಯೊಡನೆ ಕುಳಿತು ಮರುದಿನದಿಂದ ಕೈಗೊಳ್ಳಬೇಕಾದ ಕರ್ತವ್ಯದ ವಿಷಯವಾಗಿ ಸಮಾಲೋಚಿಸತೊಡಗಿದರು."

ಽ೧೫ನೆಯ ಅಧ್ಯಾಯವು ಮುಗಿಯಿತು.

## ವನಪರ್ವವು ಮುಗಿಯಿತು.

---

## ವನಪರ್ವದ ಪ್ರವಚನ ಮತ್ತು ಶ್ರವಣಗಳ ಫಲಶ್ರುತಿ

**ಇದಮಾರಣ್ಯಕಂ ಶ್ರುತ್ವಾ ಮಹಾಪಾಪೈಃ ಪ್ರಮುಚ್ಯತೇ ।**
**ಅಧನೋ ಧನಮಾಪ್ನೋತಿ ಪುತ್ರಪೌತ್ರಸಮನ್ವಿತಃ ॥೧॥**

**ಯಂ ಯಂ ಪ್ರಾರ್ಥಯತೇ ಕಾಮಂ**
**ತಂ ತಂ ಪ್ರಾಪ್ನೋತ್ಯಸಂಶಯಮ್ ।**
**ನಾರೀ ವಾ ಪುರುಷೋ ವಾಪಿ**
**ಶುಚಿಃ ಪ್ರಯತಮಾನಸಃ ॥೨॥**

**ಆರಣ್ಯಕೇ ಶ್ರುತೇಽಧೀತೇ ಬ್ರಾಹ್ಮಣಾನ್ಪಾಯಸಾದಿಭಿಃ ।**
**ಭೋಜಯೇದ್ವಸ್ತ್ರಗೋಸ್ವರ್ಣದಾನೈ ರತ್ನೈಃ ಪ್ರಪೂಜಿತಾನ್ ॥೩॥**

**ಬ್ರಾಹ್ಮಣೇಷು ಚ ತುಷ್ಟೇಷು ಸಂತುಷ್ಟಾಃ ಪಾಣ್ಡುನನ್ದನಾಃ ।**
**ಬ್ರಹ್ಮಾ ವಿಷ್ಣುಸ್ತಥಾ ರುದ್ರಃ ಶಕ್ರೋ ದೇವಗಣಾಸ್ತಥಾ ॥೪॥**

**ಭೂತಾನಿ ಮುನಯೋ ದೇವ್ಯಸ್ತಥಾ ಪಿತೃಗಣಾಶ್ಚ ಯೇ ।**
**ವಾಚಕಂ ಪೂಜಯೇಚ್ಛಕ್ತ್ಯಾ ವಸ್ತ್ರಾನ್ನೈಃ ಸ್ವರ್ಣಭೂಷಣೈಃ ॥೫॥**

**ವಿಶೇಷತಸ್ತು ಕಪಿಲಾ ದೇಯಾ ತು ಜಯಪಾಠಕೇ ।**
**ಕಾಂಸ್ಯದೋಹಾ ರೌಪ್ಯಖುರಾ ಸ್ವರ್ಣಶೃಙ್ಗೀ ಸಭೂಷಣಾ ।**
**ಪಾಣ್ಡೂನಾಂ ಪರಿತೋಷಾರ್ಥಂ ದದ್ಯಾದನ್ನಂ ದ್ವಿಜಾಯತೇ ॥೬॥**

**ಆರಣ್ಯಕಾಖ್ಯಮಾಖ್ಯಾನಂ ಶೃಣುಯಾದ್ಯೋ ನರೋತ್ತಮಃ ।**
**ಸ ಸರ್ವಕಾಮಮಾಪ್ನೋತಿ ಪುನಃ ಸ್ವರ್ಗತಿಮಾಪ್ನುಯಾತ್ ॥೭॥**

**ಇತ್ಯಾರಣ್ಯಕಶ್ರವಣ–ಮಹಿಮಾ–ದಾನವಿಧಿಶ್ಚ ಸಮಾಪ್ತಃ**

ಈ ಆರಣ್ಯಕಪರ್ವವನ್ನು ಪಾರಾಯಣಮಾಡಿದರೆ ಮತ್ತು ಪಾಠಕರಿಂದ ಕೇಳಿದರೆ ಮಾನವನು ಸರ್ವಪಾಪಗಳಿಂದಲೂ ವಿಮುಕ್ತನಾಗುತ್ತಾನೆ. ನಿರ್ಧನನು ಧನಿಕನಾಗುತ್ತಾನೆ. ಅಪುತ್ರವಂತನು ಪುತ್ರವಂತನಾಗುತ್ತಾನೆ. ಯಾವ ಯಾವ ಕಾಮನೆಗಳನ್ನು ಸಂಕಲ್ಪಿಸಿ ಪಾರಾಯಣಮಾಡಿದರೂ–ಆಯಾ ಕಾಮನೆಗಳನ್ನು ಪಡೆಯುವುದರಲ್ಲಿ ಸಂಶಯವೇ ಇಲ್ಲ. ಸ್ತ್ರೀಯಾಗಲೀ, ಪುರುಷನಾಗಲೀ–ಶುಚೀಭೂತರಾಗಿ ಏಕಾಗ್ರಚಿತ್ತದಿಂದ ಈ ಅರಣ್ಯಪರ್ವವನ್ನು ಶ್ರವಣಮಾಡಬೇಕು. ಆರಣ್ಯಕಪರ್ವಶ್ರವಣಾನಂತರದಲ್ಲಿ ಬ್ರಾಹ್ಮಣರನ್ನು ಮೃಷ್ಟಾನ್ನದಿಂದ ತೃಪ್ತಿಪಡಿಸಿ–ವಸ್ತ್ರದಾನ, ಗೋದಾನ, ಸ್ವರ್ಣದಾನ, ರತ್ನದಾನಗಳನ್ನು ಮಾಡಬೇಕು. ಬ್ರಾಹ್ಮಣರು ತುಷ್ಟರಾದರೆ ಪಾಂಡುನಂದನರು ತುಷ್ಟರಾಗುತ್ತಾರೆ. ಬ್ರಹ್ಮ, ವಿಷ್ಣು, ರುದ್ರ, ಶಕ್ರ, ದೇವಗಣಗಳು, ಋಷಿಗಳು, ದೇವಿಯರು, ಪಿತೃಗಣಗಳು–ಎಲ್ಲರೂ ಸಂತುಷ್ಟರಾಗುತ್ತಾರೆ. ಅರಣ್ಯಪರ್ವವನ್ನು ಪ್ರವಚನಮಾಡುವವನನ್ನು ವಸ್ತ್ರ, ಭೋಜನ, ಸ್ವರ್ಣ ಮತ್ತು ಭೂಷಣಾದಿಗಳಿಂದ ಗೌರವಿಸಬೇಕು. ಸರ್ವಾಲಂಕಾರಭೂಷಿತವಾದ ಕಪಿಲವರ್ಣದ ಹಸುವನ್ನು ಹಾಲುಕರೆಯುವ ಕಂಚಿನ ಪಾತ್ರೆಯೊಡನೆ ದಾನಮಾಡುವುದು ಶ್ರೇಷ್ಠವಾದುದು. ಪಾಂಡವರ ಸಂತೋಷಾರ್ಥವಾಗಿ ಸಾಧ್ಯವಾದಷ್ಟೂ ಅನ್ನದಾನಮಾಡಬೇಕು. ಅರಣ್ಯಪರ್ವವನ್ನು

ಶ್ರವಣಮಾಡಿದವನು ಐಹಿಕವಾದ ಸಕಲಸೌಖ್ಯಗಳನ್ನು ಅನುಭವಿಸಿ ಅವಸಾನಾನಂತರದಲ್ಲಿ ಸ್ವರ್ಗವನ್ನೂ ಪಡೆಯುತ್ತಾನೆ.

**ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ**
**ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।**
**ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ**
**ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥**

**ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।**
**ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥**

**ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।**
**ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥**

ಶ್ರೀಕೃಷ್ಣಾರ್ಪಣಮಸ್ತು । ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಹರಿಃ ಓಂ ತತ್ಸತ್

---

## ವಿರಾಟಪರ್ವ

ಜನಮೇಜಯ ಉವಾಚ :

**ಕಥಂ ವಿರಾಟನಗರೇ ಮಮ ಪೂರ್ವಪಿತಾಮಹಾಃ ।**
**ಅಜ್ಞಾತವಾಸಮುಷಿತಾ ದುರ್ಯೋಧನಭಯಾರ್ದಿತಾಃ ॥೧॥**



ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ವಿರಾಟಪರ್ವ

೧ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ

## ವಿರಾಟನಗರದಲ್ಲಿ ಅಜ್ಞಾತವಾಸದ ಒಂದು ವರ್ಷವನ್ನು ಕಳೆಯಲು ಪಾಂಡವರ ಪರಸ್ಪರ ಸಮಾಲೋಚನೆ : ಧರ್ಮಜನು ತನ್ನ ಕಾರ್ಯಕ್ರಮವನ್ನು ವಿವರಿಸಿದುದು

ಪವಿತ್ರಾಸನದಲ್ಲಿ ವೈಶಂಪಾಯನರು ಕುಳಿತಿದ್ದರು. ಜನಮೇಜಯನು ಮಹಾಭಾರತದ ಮುಂದಿನ ಕಥೆಯನ್ನು ಕೇಳಲು ಉತ್ಸುಕನಾಗಿ ಪರಿವಾರ ಸಮೇತನಾಗಿ ಕುಳಿತಿದ್ದನು. ಪ್ರವಚನವನ್ನು ಪ್ರಾರಂಭಿಸುವ ಮೊದಲು ಧ್ಯಾನಾಸಕ್ತರಾಗಿ ಕುಳಿತಿದ್ದ ವೈಶಂಪಾಯನರು ಕಣ್ತೆರೆದೊಡನೆಯೇ ಜನಮೇಜಯನು ವೈಶಂಪಾಯನರನ್ನು ವಿನಮ್ರನಾಗಿ ಪ್ರಶ್ನಿಸುತ್ತಾನೆ :

**ಕಥಂ ವಿರಾಟನಗರೇ ಮಮ ಪೂರ್ವಪಿತಾಮಹಾಃ ।**
**ಅಜ್ಞಾತವಾಸಮುಷಿತಾ ದುರ್ಯೋಧನಭಯಾರ್ದಿತಾಃ ॥೨॥**

**ಪತಿವ್ರತಾ ಮಹಾಭಾಗಾ ಸತತಂ ಬ್ರಹ್ಮವಾದಿನೀ ।**
**ದ್ರೌಪದೀ ಚ ಕಥಂ ಬ್ರಹ್ಮನ್ನಜ್ಞಾತಾ ದುಃಖಿತಾವಸತ್ ॥೩॥**

“ಬ್ರಾಹ್ಮಣೋತ್ತಮರೇ! ದುರ್ಯೋಧನನ ಭಯದಿಂದ ಪೀಡಿತರಾದ ನನ್ನ ಪ್ರಪಿತಾಮಹರು ವಿರಾಟನಗರದಲ್ಲಿ ಯಾವ ರೀತಿಯಲ್ಲಿ ಅಜ್ಞಾತವಾಸದಲ್ಲಿ ತಮ್ಮ ಕಾಲವನ್ನು ಕಳೆದರು? ಬ್ರಹ್ಮವಾದಿನಿಯಾದ, ಪತಿವ್ರತೆಯಾದ, ಮಹಾಭಾಗೆಯಾದ ದ್ರೌಪದಿಯು ಕೂಡ ಯಾವ ರೀತಿಯಲ್ಲಿ ಯಾರಿಗೂ ತಿಳಿಯದಂತೆ ತನ್ನ ವೇಷವನ್ನು ಮರೆಸಿ ದುಃಖಿತಳಾಗಿ ವಿರಾಟನಗರದಲ್ಲಿ ವಾಸಮಾಡಿದಳು?”

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ನಿನ್ನ ಪ್ರಪಿತಾಮಹರು ಒಂದು ವರ್ಷ ಯಾವ ರೀತಿಯಲ್ಲಿ ಅಜ್ಞಾತರಾಗಿದ್ದು ಕಾಲಕಳೆದರೆಂಬ ವಿಷಯವನ್ನು ಹೇಳುತ್ತೇನೆ. ಸಾವಧಾನದಿಂದ ಕೇಳುವವನಾಗು. ನಾನು ಈ ಹಿಂದೆಯೇ ಹೇಳಿದಂತೆ ಧರ್ಮಜನು ಯಮಧರ್ಮನಿಂದ ಅಜ್ಞಾತವಾಸದ ಕಾಲದಲ್ಲಿ ತಾವು ಯಾರಿಂದಲೂ ಗುರುತಿಸಲ್ಪಡಬಾರದೆಂಬ ವರವನ್ನು ಪಡೆದವನಾಗಿ, ಅನುಜರೊಡನೆ ಆಶ್ರಮಕ್ಕೆ ಹೋಗಿ ಎಲ್ಲ ವಿಷಯಗಳನ್ನೂ ಬ್ರಾಹ್ಮಣರ ಸಮ್ಮುಖದಲ್ಲಿ ಹೇಳಿದನು. ಬ್ರಾಹ್ಮಣರಿಗೆ ಹೇಳಬೇಕಾದ ವಿಷಯಗಳೆಲ್ಲವನ್ನೂ ಹೇಳಿ ಅರಣಿಯನ್ನೂ ಮಂಥನದಂಡವನ್ನೂ ಬ್ರಾಹ್ಮಣರಿಗೆ ಸಮರ್ಪಿಸಿದನು. ಬ್ರಾಹ್ಮಣರೆಲ್ಲರೂ ತಮ್ಮ-ತಮ್ಮ ಮನೆಗಳನ್ನು ಕುರಿತು ಹೊರಟುಹೋಗಲಾಗಿ ತನ್ನ ತಮ್ಮಂದಿರನ್ನು ಒಂದೆಡೆಯಲ್ಲಿ ಕುಳ್ಳಿರಿಸಿಕೊಂಡು ಅವರನ್ನು ಕುರಿತು ಧರ್ಮಜನು ಹೀಗೆಂದು ಹೇಳಿದನು :

"ಸಹೋದರರರೇ! ನಮ್ಮ ರಾಜ್ಯದಿಂದ ಹೊರಬಂದ ನಾವು ಹನ್ನೆರಡು ವರ್ಷಗಳ ಪರ್ಯಂತವಾಗಿ ಅರಣ್ಯಗಳಲ್ಲಿ ಕಳೆದೆವು. ಈಗ ಹದಿಮೂರನೆಯ ವರ್ಷವು ಪ್ರಾರಂಭವಾಗಿದೆ. ಈ ಹದಿಮೂರನೆಯ ಒಂದು ವರ್ಷವನ್ನು ನಾವು ಯಾರಿಗೂ ತಿಳಿಯದ ರೀತಿಯಲ್ಲಿ ಕಳೆಯಬೇಕಾಗಿರುವುದರಿಂದ ಈ ವರ್ಷವು ನಿಶ್ಚಯವಾಗಿಯೂ ಬಹಳ ಕಷ್ಟದಿಂದಲೇ ಕಳೆಯಬೇಕಾದ ವರ್ಷವಾಗಿರುತ್ತದೆ. ಕೌಂತೇಯ! ಅರ್ಜುನ! ನಾವು ವಾಸಮಾಡಲು ಯೋಗ್ಯವಾಗಿರಬೇಕು ಮತ್ತು ಅಲ್ಲಿರುವುದರಿಂದ ನಾವು ಶತ್ರುಗಳಿಗೂ ಗೋಚರರಾಗಬಾರದು. ಅಂತಹ ಒಂದು ಸ್ಥಳವನ್ನು ಚೆನ್ನಾಗಿ ಯೋಚಿಸಿ ಹೇಳುವವನಾಗು."

"ನರೇಶ್ವರನೇ! ಯಮಧರ್ಮನ ವರಪ್ರಸಾದದಿಂದಾಗಿ ನಾವು ಈ ಪೃಥ್ವಿಯಲ್ಲಿ ಎಲ್ಲೇ ಸಂಚರಿಸಿದರೂ ಯಾರೊಬ್ಬರಿಗೂ ಗೋಚರರಾಗುವುದಿಲ್ಲವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದರೂ ಗುಪ್ತವಾಗಿಯೂ ರಮಣೀಯವಾಗಿಯೂ ಇರುವ ಕುರುರಾಜ್ಯದ ಸುತ್ತಲಿನ ಕೆಲವಾರು ರಾಷ್ಟ್ರಗಳನ್ನು ನಿನಗೆ ಹೇಳುತ್ತೇನೆ. ಪಾಂಚಾಲ, ಚೇದಿ, ಮತ್ಸ್ಯ,

ಶೂರಸೇನ, ಪಟಚ್ಚರ, ದಶಾರ್ಣ, ನವರಾಷ್ಟ್ರ, ಮಲ್ಲ, ಶಾಲ್ವ, ಯುಗಂಧರ, ವಿಶಾಲ, ಕುಂತಿರಾಷ್ಟ್ರ, ಸೌರಾಷ್ಟ್ರ ಮತ್ತು ಆವಂತೀ–ಹೀಗೆ ಅನೇಕ ರಾಷ್ಟ್ರಗಳಿವೆ. ಆ ರಾಷ್ಟ್ರಗಳಲ್ಲಿ ನಿನಗೆ ಯಾವುದು ಅಭಿಮತವೋ ಆ ರಾಷ್ಟ್ರಕ್ಕೆ ಹೋಗಿ ಒಂದು ವರ್ಷದ ಅಜ್ಞಾತವಾಸವನ್ನು ಕಳೆಯೋಣ."

"ಮಹಾಬಾಹೋ! ನೀನು ಹೇಳಿದ ಸಕಲರಾಷ್ಟ್ರಗಳ ಪರಿಸ್ಥಿತಿಯನ್ನೂ ನಾನು ಮನಸ್ಸಿನಲ್ಲಿಯೇ ತರ್ಕಿಸಿದ್ದೇನೆ. ಸರ್ವಭೂತೇಶ್ವರನಾದ, ಪ್ರಭುವಾದ, ಭಗವಂತನಾದ ಯಮಧರ್ಮನ ನಿರ್ದೇಶನದಂತೆಯೇ ನಾವು ನಡೆಯಬೇಕಾಗಿದೆ. ಅವನು ಹೇಳಿದುದರ ವಿರುದ್ಧವಾಗಿ ಏನೂ ನಡೆಯುವುದಿಲ್ಲ. ಆದರೂ ನಾವು ಭಯರಹಿತರಾಗಿ ಒಂದು ವರ್ಷಪರ್ಯಂತವಾಗಿ ವಾಸಮಾಡಿಕೊಂಡಿರಲು ರಮಣೀಯವಾದ, ಸುಖಕರವಾದ ಮತ್ತು ಮಂಗಳಕರವಾದ ಸ್ಥಳವೊಂದನ್ನು ಪರಸ್ಪರವಾಗಿ ಸಮಾಲೋಚಿಸಿ ಇತ್ಯರ್ಥ ಮಾಡಬೇಕಾದುದು ನಮ್ಮ ಕರ್ತವ್ಯವಾಗಿರುತ್ತದೆ. ನೀನು ಹೇಳಿದ ದೇಶಗಳಲ್ಲಿ ಮತ್ಸ್ಯದೇಶವು ನಾವು ವಾಸಮಾಡಲು ಅನುಕೂಲವಾಗಿರುವುದೆಂದು ನಾನು ಭಾವಿಸುತ್ತೇನೆ. ಮತ್ಸ್ಯದೇಶಾಧಿಪತಿಯಾದ ವಿರಾಟರಾಜನು ಬಹಳ ಬಲಿಷ್ಠನು. ಮಿಗಿಲಾಗಿ ನಮ್ಮ ವಿಷಯದಲ್ಲಿಯೂ ಅವನಿಗೆ ಹೆಚ್ಚಿನ ಅನುರಾಗವಿದೆ. ಅವನು ಸ್ವಭಾವತಃ ಧರ್ಮಾತ್ಮನು, ಉದಾರನು. ಅವನೀಗ ವೃದ್ಧನಾಗಿದ್ದಾನೆ. ಮೊದಲಿನಿಂದಲೂ ಅವನಿಗೆ ನನ್ನ ಮೇಲೆ ವಿಶೇಷವಾದ ಪ್ರೀತಿಯಿದೆ. ಆದುದರಿಂದ, ಮಗು! ಈ ಒಂದು ವರ್ಷ ವಿರಾಟರಾಜನ ಪಟ್ಟಣದಲ್ಲಿ ರಾಜನ ಕೆಲಸಕಾರ್ಯಗಳನ್ನು ಮಾಡಿಕೊಡುತ್ತಾ ಕಳೆಯೋಣ. ಆದರೆ ಮತ್ಸ್ಯರಾಜನ ಬಳಿಗೆ ಹೋಗಿ ನಾವು ಯಾವ ಕಾರ್ಯಗಳನ್ನು ಮಾಡುತ್ತೇವೆಂಬುದನ್ನು ಅವನಿಗೆ ತಿಳಿಯಪಡಿಸಬೇಕೋ ಅಂತಹ ನಾವು ಕೈಗೊಳ್ಳಬೇಕಾದ ಕಾರ್ಯಗಳನ್ನೂ ಈಗಲೇ ನಿಶ್ಚಯಿಸಬೇಕು. ಆದುದರಿಂದ ನೀವುಗಳೆಲ್ಲರೂ ರಾಜನಲ್ಲಿಗೆ ಹೋಗಿ ಯಾವ ಯಾವ ಕೆಲಸಗಳನ್ನು ಕೇಳುವಿರೆಂಬುದನ್ನು ವಿವರಿಸಿ ಹೇಳಿರಿ."

ಇಲ್ಲಿ ಧರ್ಮಜನು ತಾನು ಯಾವ ಕಾರ್ಯಮಾಡುವೆನೆಂಬುದನ್ನು ವಿವರಿಸಿ ಹೇಳಲಿಲ್ಲ. ತಮ್ಮಂದಿರನ್ನು ಮಾತ್ರ ಕೇಳಿದನು. ಖಿನ್ನನಾದ

ಅರ್ಜುನನು ಅಣ್ಣನ ವಿಷಯವಾಗಿ ಪರಿತಪಿಸುತ್ತಾ ಯುಧಿಷ್ಠಿರನನ್ನು ಕುರಿತು ಹೇಳುತ್ತಾನೆ :

"ಅಣ್ಣ! ನಾವು ಯಾವ ಕಾರ್ಯವನ್ನು ಮಾಡುತ್ತೇವೆಂಬ ವಿಷಯವು ಹಾಗಿರಲಿ. ರಾಜಾಧಿರಾಜನಾದ, ಚಕ್ರವರ್ತಿಯಾದ ನೀನಲ್ಲಿಗೆ ಹೋಗಿ ಯಾವ ಕಾರ್ಯಮಾಡುವೆ? ಯಾವ ಕಾರ್ಯವನ್ನು ಮಾಡುವುದರಿಂದ ನಿನ್ನ ಮನಸ್ಸಿಗೂ ತೃಪ್ತಿಯುಂಟಾಗುವುದು? ನೀನಾದರೋ ಮೃದುಸ್ವಭಾವದವನು; ಉದಾರನು ; ಲಜ್ಜಾಶೀಲನು ; ಧರ್ಮಪರಾಯಣನು ಮತ್ತು ಸತ್ಯಪರಾಕ್ರಮನು. ಇಂತಹ ನೀನು ಇಂದು ಆಪತ್ತಿನಲ್ಲಿ ಸಿಕ್ಕಿಕೊಂಡಿರುವೆ. ಧರ್ಮಾತ್ಮನಾದ ನೀನು ಆ ರಾಜನ ಬಳಿಯಲ್ಲಿ ಮಾಡಬೇಕಾದ ಕಾರ್ಯ ವೇನಿದೆ? ಯಾವ ಕಾರ್ಯಮಾಡಲು ನಿಶ್ಚಯಿಸಿರುವೆಯಣ್ಣಾ? ಸಾಧಾರಣ ಮನುಷ್ಯರಂತೆ ನೀನು ಮತ್ಸ್ಯರಾಜನ ಸೇವಾಕಾರ್ಯವನ್ನೆಂದಿಗೂ ಮಾಡಬಾರದು. ಅಂತಹ ದುಃಖಕರವಾದ ಕಾರ್ಯವು ನಿನಗೆ ಖಂಡಿತ ವಾಗಿಯೂ ಉಚಿತವಲ್ಲ. ಮೇಲಾಗಿ ಜನಗಳಿಗೂ ನೀನಾರೆಂಬುದು ತಿಳಿಯಬಾರದು. ನಾವು ಅಜ್ಞಾತವಾಸವನ್ನು ಪೂರೈಸಿ ಈ ಆಪತ್ತಿನಿಂದ ಹೇಗೆ ಪಾರಾಗುವೆವು?"

"ಅಧೀರನಾಗಬೇಡ ಅರ್ಜುನ! ವಿರಾಟರಾಜನ ಬಳಿಗೆ ಹೋಗಿ ನಾನು ಯಾವ ಕೆಲಸವನ್ನು ಅಪೇಕ್ಷಿಸುವೆನೆಂಬ ವಿಷಯವಾಗಿ ಹೇಳುವೆನು; ಎಲ್ಲರೂ ಕೇಳಿರಿ. ನಾನು ಮಹಾತ್ಮನಾದ ವಿರಾಟರಾಜನ ಸಭಾಸದಸ್ಯನಾಗುತ್ತೇನೆ. ಬ್ರಾಹ್ಮಣನ ವೇಷವನ್ನು ಧರಿಸಿ ಕಂಕನೆಂಬ ಹೆಸರಿನಿಂದ ರಾಜನಿಗೆ ನನ್ನ ಪರಿಚಯವನ್ನು ಮಾಡಿಕೊಡುತ್ತೇನೆ.

ನನಗೆ ಪಗಡೆಯಾಟದ ರಹಸ್ಯವೂ ಚೆನ್ನಾಗಿ ತಿಳಿದಿರುವುದು. ಪಗಡೆ ಯಾಟದ ಮೂಲಕವಾಗಿ ಜೂಜಾಡುವುದರಲ್ಲಿಯೂ ನನಗೆ ಹೆಚ್ಚಿನ ಆಸಕ್ತಿ ಯಿದೆ. ರಾಜನಿಗೆ ಈ ವಿಷಯಗಳೆಲ್ಲವನ್ನೂ ತಿಳಿಸಿ ಅವನೊಡನೆ ಕುಳಿತು ನಯನಮನೋಹರವಾದ ಪಗಡೆಯ ಹಾಸಿನಲ್ಲಿ ವೈಡೂರ್ಯದಂತೆ ಹಸಿರು ಬಣ್ಣದ, ಸುವರ್ಣದಂತೆ ಹಳದೀ ಬಣ್ಣದ, ದಂತದಿಂದ ನಿರ್ಮಿತವಾದ ದಾಳಗಳನ್ನು ಹಾಕಿ ಕಪ್ಪು ಮತ್ತು ಕೆಂಪುಬಣ್ಣಗಳ ಸುವರ್ಣಬಿಂದುಗಳಿಂದ

ಯುಕ್ತವಾದ ಪಗಡೇಕಾಯಿಗಳನ್ನು ದಾಳಗಳಿಂದ ಬೀಳುವ ಗರಗಳಿಗೆ ಅನುಸಾರವಾಗಿ ನಡೆಸುತ್ತೇನೆ. ಈ ಒಂದು ಆಟದಿಂದಲೇ ನಾನು ವಿರಾಟರಾಜನನ್ನೂ, ಅವನ ಅಮಾತ್ಯರನ್ನೂ ಮತ್ತು ಬಂಧುಮಿತ್ರರನ್ನೂ ಸಂತೋಷಗೊಳಿಸುತ್ತೇನೆ. ಆ ಸಮಯದಲ್ಲಿ ನನ್ನನ್ನು ಯಾರೂ ಗುರುತಿಸಲಾರರು. ಸಮಯೋಚಿತವಾದ ಮಾತುಗಳಿಂದಲೂ ನಾನು ರಾಜನನ್ನು ತುಷ್ಟಿಪಡಿಸುತ್ತೇನೆ. ವಿರಾಟನೇನಾದರೂ ನನ್ನನ್ನು–'ನೀನು ಯಾರು? ಮೊದಲೆಲ್ಲಿದ್ದೆ?'–ಮುಂತಾಗಿ ಪ್ರಶ್ನಿಸಿದರೆ ಮೊದಲು ಯುಧಿಷ್ಠಿರನ ಬಳಿಯಲ್ಲಿದ್ದೆನೆಂದೂ–ಯುಧಿಷ್ಠಿರನು ನನಗೆ ಪ್ರಾಣಸಮನಾದ ಪ್ರಿಯಸಖನಾಗಿದ್ದನೆಂದೂ ಹೇಳುತ್ತೇನೆ. ಈ ರೀತಿಯಾಗಿ ನಾನು ವಿರಾಟರಾಜನೊಡನಿರುತ್ತೇನೆ." ಹೀಗೆಂಬುದಾಗಿ ಯುಧಿಷ್ಠಿರನು ಅನುಜರಿಗೆ ತನ್ನ ವಿಷಯವನ್ನು ಹೇಳಿದ ನಂತರ ಭೀಮನನ್ನು ಪ್ರಶ್ನಿಸಿದನು :

"ಭೀಮಸೇನ! ನೀನು ಮತ್ಸ್ಯರಾಷ್ಟ್ರಕ್ಕೆ ಹೋಗಿ ಅಲ್ಲಿ ಯಾವ ವಿಧವಾದ ಕಾರ್ಯಮಾಡುವೆ? ನಿನ್ನ ಪರಾಕ್ರಮವು ಅಪ್ರತಿಮವಾದುದು. ನೀನು ಮಹಾಕಾಯನು. ಅಪ್ರತಿಮಸಾಹಸೀ. ನಿನ್ನ ಸಾಹಸವನ್ನೂ, ಶರೀರವನ್ನೂ ಒಂದು ವರ್ಷದವರೆಗೆ ಮುಚ್ಚಿಟ್ಟುಕೊಂಡಿರಲು ಸಾಧ್ಯವಾಗುವುದೇ? ಗಂಧಮಾದನಪರ್ವತದಲ್ಲಿ ಕ್ರೋಧವಶರೆಂಬ ರಾಕ್ಷಸರನ್ನು ಏಕಾಕಿಯಾಗಿ ಸಂಹಾರಮಾಡಿದವನು ನೀನು. ಕ್ರೋಧದಿಂದ ರಕ್ತಾಕ್ಷರಾಗಿ ನಿನ್ನೊಡನೆ ಯುದ್ಧಮಾಡಲು ಬಂದ ಯಕ್ಷ-ರಾಕ್ಷಸಸೈನಿಕರನ್ನು ಸಂಹರಿಸಿ ಗಂಧಮಾದನ ಪರ್ವತದ ಸರೋವರದಲ್ಲಿದ್ದ ಸೌಗಂಧಿಕಪುಷ್ಪಗಳನ್ನು ಕೃಷ್ಣೆಗೆ ತಂದುಕೊಟ್ಟ ಧೀರನು ನೀನು. ಬ್ರಾಹ್ಮಣನೊಬ್ಬನ ಸಲುವಾಗಿ ರಾಕ್ಷಸರಾಜನಾದ, ಬಹುಭೀಷಣನಾದ, ನರಭಕ್ಷಕನಾದ ಬಕಾಸುರನನ್ನು ಕೊಂದು ಏಕಚಕ್ರ ನಗರಕ್ಕೆ ಕ್ಷೇಮವನ್ನೂ ಮತ್ತು ಅಭಯವನ್ನೂ ಪ್ರದಾನಮಾಡಿದ ಮಹಾನುಭಾವನು ನೀನು. ಹಿಡಿಂಬನನ್ನೂ, ಮಹಾವೀರನಾದ ಕಿರ್ಮೀರನನ್ನೂ ಸಂಹರಿಸಿ ನೀನು ಆ ಅರಣ್ಯಗಳನ್ನು ನಿಷ್ಕಂಟಕಗೊಳಿಸಿದೆ. ದುಷ್ಟನಾದ ಜಟಾಸುರನು ಚಾರುಹಾಸಿನಿಯಾದ ದ್ರೌಪದಿಯನ್ನು ಕದ್ದೊಯ್ದು ಸಂಕಟಕ್ಕೊಳಪಡಿಸಿದ್ದನು. ಅವನನ್ನೂ ಕೊಂದು ಮಹಾಭಾಗೆಯಾದ

ದ್ರೌಪದಿಯನ್ನು ವಿಮೋಚಿಸಿದ ಮಹಾವೀರನು ನೀನು. ಇಂತಹ ಅಪ್ರತಿಮ ವೀರನಾದ, ಕೋಪವನ್ನು ತಡೆದುಕೊಳ್ಳಲಾರದ ನೀನು ಮತ್ಸ್ಯರಾಜನ ಸಮೀಪದಲ್ಲಿ ಹೇಗೆ ವರ್ತಿಸುವೆ? ವಿರಾಟರಾಜನ ಕೆಲಸಗಾರನಾಗಿದ್ದು ಪ್ರಸನ್ನತೆಯಿಂದಿರಲು ನಿನಗೆ ಸಾಧ್ಯವಾಗುವುದೇ? ಭೀಮ!"

೧ನೆಯ ಅಧ್ಯಾಯವು ಮುಗಿಯಿತು.



## ಭೀಮಾರ್ಜುನರು ವಿರಾಟನಗರದಲ್ಲಿ ತಾವು ಕೈಗೊಳ್ಳಲಿರುವ ಕಾರ್ಯದ ವಿಷಯವಾಗಿ ಹೇಳಿದುದು

ಪಾರಿಕ್ಷಿತ! ಭೀಮಸೇನನು ಹೇಳುತ್ತಾನೆ :

"ಅಣ್ಣ! ನನ್ನ ವಿಷಯವಾಗಿ ನೀನೇನೂ ಯೋಚಿಸಬೇಕಾಗಿಲ್ಲ. ಆಪತ್ಕಾಲದಲ್ಲಿ ಹೇಗಿರಬೇಕೆಂಬ ವಿಷಯವು ನನಗೆ ಚೆನ್ನಾಗಿ ತಿಳಿದಿರುವುದು. ನನ್ನ ಸ್ವಭಾವಕ್ಕೆ ಅನುಗುಣವಾದ ವೇಷವನ್ನೇ ನಾನೂ ಧರಿಸುವೆನು. ನಾನು ವಿರಾಟನಲ್ಲಿಗೆ ಪಾಕಶಾಲೆಯ ಅಧ್ಯಕ್ಷನೆಂಬ ವ್ಯಾಜದಿಂದ ತೆರಳುವೆನು. ಪಾಕಶಾಲಾಧ್ಯಕ್ಷ ಪದವಿಯನ್ನು ವಹಿಸಿಕೊಡಬೇಕೆಂದು ಕೇಳುವೆನು. ನಾನು 'ಬಲ್ಲವ' ನೆಂಬ ಹೆಸರಿನವನೆಂದು ಹೇಳಿ ನನ್ನ ಪರಿಚಯಮಾಡಿಕೊಳ್ಳುವೆನು. ಪಾಕಾಶಾಲಾಧ್ಯಕ್ಷತ್ವಕ್ಕೆ ಇರಬೇಕಾದ ಗುಣಗಳೆಲ್ಲವೂ ನನ್ನಲ್ಲಿವೆಯೆಂದು ರಾಜನಿಗೆ ನಾನು ವಿವರಿಸಿ ಹೇಳುವೆನು. ಹುಳಿ, ತೊವ್ವೆ, ಸಾರು–ಮುಂತಾದುವನ್ನು ತಯಾರಿಸುವುದರಲ್ಲಿ ನಾನು ಬಹಳ ಚತುರನೆಂದೂ ಹೇಳುವೆನು. ಸುಶಿಕ್ಷಿತರಾದ ಅಡಿಗೆಯವರು ಅಲ್ಲಿ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಾದಿಗಳನ್ನು ಮಾಡುತ್ತಿರಬಹುದು. ಅವರು ಸಿದ್ಧಮಾಡುವುದಕ್ಕಿಂತಲೂ ಬಹಳ ರುಚಿಕರವಾಗಿ ಅಡಿಗೆಯನ್ನು ಸಿದ್ಧಗೊಳಿಸುವ ಸಾಮರ್ಥ್ಯವು ನನಗಿರುವುದೆಂದು ಹೇಳಿಕೊಳ್ಳುವೆನು. ರಾಜನು ಪರೀಕ್ಷಿಸಲು ಅಪೇಕ್ಷಿಸಿದರೆ ಅಮೃತೋಪಮವಾದ ಅಡಿಗೆಯನ್ನು ಸಿದ್ಧಗೊಳಿಸುವೆನು.

ಇಷ್ಟು ಮಾತ್ರವಲ್ಲ. ವಿರಾಟರಾಜನಿಗೆ ನಾನು ಅಸಾಧಾರಣವಾದ ಮತ್ತು ಅತಿಮಾನುಷವಾದ ಕಾರ್ಯಗಳನ್ನೂ ಮಾಡಿ ತೋರಿಸುತ್ತೇನೆ. ಹತ್ತಾರು ಜನರಿಂದಲೂ ಎತ್ತಲಾಗದ ಸೌದೆಯ ಹೊರೆಯನ್ನು ಹೊತ್ತು ತರುತ್ತೇನೆ. ಅಂತಹ ನನ್ನ ಅದ್ಭುತಕಾರ್ಯಗಳನ್ನು ಕಂಡು ವಿರಾಟನು ನನ್ನನ್ನು ಇನ್ನೂ ಉನ್ನತಮಟ್ಟದ ಕಾರ್ಯಗಳಲ್ಲಿಯೂ ನಿಯೋಜಿಸಬಹುದು. ರಾಜಸೇವಕರು ರಾಜನನ್ನು ಯಾವ ರೀತಿಯಲ್ಲಿ ಗೌರವಿಸುವರೋ ನನ್ನನ್ನೂ ಅದೇ ರೀತಿಯಲ್ಲವರು ಗೌರವಿಸುವಂತೆ ಮಾಡುತ್ತೇನೆ. ಪಾಕಶಾಲೆಯಲ್ಲಿ ಮಾಡುವ ಭಕ್ಷ್ಯ, ಅನ್ನ, ರಸ-ಪಾನಾದಿಗಳೆಲ್ಲಕ್ಕೂ ನಾನೇ ಒಡೆಯನಾಗಿರುತ್ತೇನೆ. ಮದಿಸಿದ ಆನೆಗಳನ್ನಾಗಲೀ, ಬಲಿಷ್ಠವಾದ ಎತ್ತುಗಳನ್ನಾಗಲೀ ರಾಜನು ಪಳಗಿಸಲು ಹೇಳಿದರೆ ನಾನು ಅವುಗಳ ಮದವನ್ನು ಕ್ಷಣಮಾತ್ರದಲ್ಲಿ ನಿಗ್ರಹಿಸಿ ಪಳಗಿಸುತ್ತೇನೆ. ಮಲ್ಲಯುದ್ಧವನ್ನು ಮಾಡುವವರು ಅರಮನೆಗೆ ಬಂದಾಗ ಅರಮನೆಯ ಪರವಾಗಿ ನಾನು ಅವರೊಡನೆ ಮಲ್ಲಯುದ್ಧಮಾಡಿ ಅವರೆಲ್ಲರನ್ನೂ ಸೋಲಿಸಿ ರಾಜನಿಗೆ ಅಮಿತಾನಂದವನ್ನುಂಟುಮಾಡುತ್ತೇನೆ.

ಮಹಾರಾಜ! ಆದರೆ ನನ್ನೊಡನೆ ಮಲ್ಲಯುದ್ಧಮಾಡಲು ಬರುವವರನ್ನು ನಾನು ಖಂಡಿತವಾಗಿಯೂ ಕೊಲ್ಲುವುದಿಲ್ಲ. ಅವರು ಸೋಲುವಂತೆ ಮಾತ್ರ ಮಾಡುತ್ತೇನೆ. ಸೋಲನ್ನೊಪ್ಪಿಕೊಳ್ಳುವಂತೆ ಮಾಡುತ್ತೇನೆ.

ವಿರಾಟನೇನಾದರೂ ನನ್ನ ಪೂರ್ವಪರಿಚಯವನ್ನು ಕೇಳಿದರೆ– ಯುಧಿಷ್ಠಿರನ ಆಸ್ಥಾನದಲ್ಲಿ ಗಜ-ವೃಷಭಗಳ ನಿಯಂತ್ರಕನಾಗಿದ್ದೆನೆಂದೂ, ಪಾಕಶಾಲೆಯ ಅಧ್ಯಕ್ಷನಾಗಿದ್ದೆನೆಂದೂ, ಕೆಲವೊಮ್ಮೆ ಮಲ್ಲಯುದ್ಧವನ್ನೂ ಮಾಡುತ್ತಿದ್ದೆನೆಂದೂ–ಹೇಳುತ್ತೇನೆ. ಈ ರೀತಿಯಲ್ಲಿ ನಿಜಸ್ವರೂಪದಿಂದ ನಾನು ನನ್ನನ್ನು ಮರೆಸಿಕೊಂಡು ಕಾಲಕಳೆಯುತ್ತೇನೆ. ಈ ಪ್ರಕಾರವಾಗಿ ಒಂದು ವರ್ಷಕಾಲ ಅಜ್ಞಾತವಾಸದಲ್ಲಿ ಸುಖವಾಗಿರುವ ವಿಶ್ವಾಸವು ನನಗಿರುವುದಣ್ಣ!"

ಜನಮೇಜಯ! ಭೀಮಸೇನನು ಹೀಗೆಂದು ಆಶ್ವಾಸನೆಯಿತ್ತ ನಂತರ ಯುಧಿಷ್ಠಿರನು ಅರ್ಜುನನ ವಿಷಯವಾಗಿ ಹೇಳತೊಡಗಿದನು :

"ಹಿಂದೊಮ್ಮೆ ಮಹಾಬಲನಾದ, ಮಹಾಬಾಹುವಾದ, ಅನ್ಯರಿಂದ

ಜಯಿಸಲ್ಪಡದವನಾದ, ಕುರುನಂದನನಾದ, ಶ್ರೀಕೃಷ್ಣನೊಡನೆ ಕುಳಿತಿದ್ದ ಈ ನಮ್ಮ ಅರ್ಜುನನ ಬಳಿಗೊಮ್ಮೆ ಖಾಂಡವವನವನ್ನು ದಹಿಸಲಿಚ್ಛಿಸಿದ ಯಜ್ಞೇಶ್ವರನು ಬ್ರಾಹ್ಮಣವೇಷವನ್ನು ಧರಿಸಿ ಬಂದು ಖಾಂಡವದಹನದ ಕಾಲದಲ್ಲಿ ರಕ್ಷಣೆಯನ್ನು ಪ್ರಾರ್ಥಿಸಿದನು. ಅಂತಹ ಪರಮವೀರನಾದ ಅರ್ಜುನನು ವಿರಾಟರಾಜನ ಆಸ್ಥಾನದಲ್ಲಿ ಯಾವ ಕಾರ್ಯವನ್ನು ಮಾಡು ತ್ತಾನೆ? ಇವನಿಗಲ್ಲಿ ಯೋಗ್ಯವೆನಿಸುವ ಕಾರ್ಯವು ಯಾವುದು? ಅಗ್ನಿದೇವನ ಪ್ರಾರ್ಥನೆಯಂತೆ ಪಾರ್ಥನು ಕೃಷ್ಣಸಮೇತನಾಗಿ ಹೋಗಿ ಖಾಂಡವ ವನವನ್ನು ಸಂಪೂರ್ಣವಾಗಿ ದಹಿಸಲೆಡೆಮಾಡಿಕೊಟ್ಟು ಅಗ್ನಿದೇವನಿಗೆ ಸಂತೃಪ್ತಿಯನ್ನುಂಟುಮಾಡಿದನು. ದಹನವನ್ನು ತಪ್ಪಿಸಲು ಕಾರ್ಮುಗಿಲು ಗಳೊಡನೆ ಆಗಮಿಸಿದ ಇಂದ್ರನನ್ನೂ ಪರಾಜಯಗೊಳಿಸಿ ಆ ವನದಿಂದ ತಪ್ಪಿಸಿಕೊಂಡು ಹೋಗಲು ಯತ್ನಿಸಿದ ಪನ್ನಗ-ರಾಕ್ಷಸರನ್ನೂ ಸಂಹರಿಸಿ ಯಜ್ಞೇಶ್ವರನನ್ನು ತೃಪ್ತಿಗೊಳಿಸಿದನು. ಅಂತಹ ಮಹಾಧೀರನಾದ ಅರ್ಜುನ ನೀಗ ಯಾವ ಕಾರ್ಯವನ್ನು ಮಾಡುವನು? ಸರ್ಪರಾಜನಾದ ವಾಸುಕಿಯ ತಂಗಿಯಾದ ಉಲೂಪಿಯ ಚಿತ್ತವನ್ನು ಅಪಹರಿಸಿದ ಸವ್ಯಸಾಚಿಯು ವಿರಾಟನ ಆಸ್ಥಾನದಲ್ಲಿ ಮಾಡುವ ಕಾರ್ಯವಾದರೂ ಏನಿದೆ?

**ಸೂರ್ಯಃ ಪ್ರತಪತಾಂ ಶ್ರೇಷ್ಠೋ ದ್ವಿಪದಾಂ ಬ್ರಾಹ್ಮಣೋ ವರಃ ।**
**ಆಶೀವಿಷಶ್ಚ ಸರ್ಪಾಣಾಮಗ್ನಿಸ್ತೇಜಸ್ವಿನಾಂ ವರಃ ॥೧೫॥**

**ಆಯುಧಾನಾಂ ವರಂ ವಜ್ರಂ ಕಕುದ್ಮೀ ಚ ಗವಾಂ ವರಃ ।**
**ಹ್ರದಾನಾಮುದಧಿಃ ಶ್ರೇಷ್ಠಃ ಪರ್ಜನ್ಯೋ ವರ್ಷತಾಂ ವರಃ ॥೧೬॥**

**ಧೃತರಾಷ್ಟ್ರಶ್ಚ ನಾಗಾನಾಂ ಹಸ್ತಿಷ್ವೈರಾವತೋ ವರಃ ।**
**ಪುತ್ರಃ ಪ್ರಿಯಾಣಾಮಧಿಕೋ ಭಾರ್ಯಾ ಚ ಸುಹೃದಾಂ ವರಾ ॥೧೭॥**

**ಗಿರೀಣಾಂ ಪ್ರವರೋ ಮೇರುರ್ದೇವಾನಾಂ ಮಧುಸೂದನಃ ।**
**ಗ್ರಹಾಣಾಂ ಪ್ರವರಶ್ಚನ್ದ್ರಃ ಸರಸಾಂ ಮಾನಸಂ ವರಮ್ ॥೧೮॥**

**ಯಥೈತಾನಿ ವಿಶಿಷ್ಟಾನಿ ಜಾತ್ಯಾಂ ಜಾತ್ಯಾಂ ವೃಕೋದರ ।**
**ಏವಂ ಯುವಾ ಗುಡಾಕೇಶಃ ಶ್ರೇಷ್ಠಃ ಸರ್ವಧನುಷ್ಮತಾಮ್ ॥೧೯॥**

ಭೀಮಸೇನ! ಪ್ರಜ್ವಲಿಸುವವರಲ್ಲಿ ಸೂರ್ಯನು ಶ್ರೇಷ್ಠನು. ಮನುಷ್ಯರಲ್ಲಿ ಬ್ರಾಹ್ಮಣನು ಶ್ರೇಷ್ಠನು. ಸರ್ಪಗಳಲ್ಲಿ ಆಶೀವಿಷವೆಂಬ ನಾಗರಹಾವು ಶ್ರೇಷ್ಠವಾದುದು. ತೇಜಸ್ವಿಗಳಲ್ಲಿ ಅಗ್ನಿಯು ಶ್ರೇಷ್ಠನಾದವನು. ಆಯುಧಗಳಲ್ಲಿ ವಜ್ರಾಯುಧವು ಶ್ರೇಷ್ಠವಾದುದು. ಗೋವುಗಳಲ್ಲಿ ಎತ್ತರವಾದ ಹಿಳಲುಳ್ಳ ವೃಷಭವು ಶ್ರೇಷ್ಠವಾದುದು. ಜಲಾಶಯಗಳಲ್ಲಿ ಸಮುದ್ರವು ಶ್ರೇಷ್ಠವಾದುದು. ಮೇಘಗಳಲ್ಲಿ ಮಳೆಗರೆಯುವ ಪರ್ಜನ್ಯನು ಶ್ರೇಷ್ಠನು. ಆನೆಗಳಲ್ಲಿ ಐರಾವತವು ಶ್ರೇಷ್ಠವಾದುದು. ಪ್ರಿಯವಸ್ತುಗಳಲ್ಲಿ ಪುತ್ರನು ಪ್ರಿಯತಮನಾಗಿರುತ್ತಾನೆ. ಸುಹೃದರಲ್ಲಿ ಪತ್ನಿಯು ಶ್ರೇಷ್ಠಳು. ಪರ್ವತಗಳಲ್ಲಿ ಮೇರುಪರ್ವತವು ಶ್ರೇಷ್ಠವಾದುದು. ದೇವತೆಗಳಲ್ಲಿ ನಾರಾಯಣನು ಶ್ರೇಷ್ಠನು. ಗ್ರಹಗಳಲ್ಲಿ ಚಂದ್ರನು ಶ್ರೇಷ್ಠನು. ಸರೋವರ ಗಳಲ್ಲಿ ಮಾನಸಸರೋವರವು ಶ್ರೇಷ್ಠವಾದುದು. ಆಯಾಯಾ ಜಾತಿಗಳಲ್ಲಿ ಪೂರ್ವೋಕ್ತವಸ್ತುಗಳು ಶ್ರೇಷ್ಠವೆನಿಸಿರುವಂತೆ ಯುವಕನಾದ ಈ ನಮ್ಮ ಅರ್ಜುನನು ಪ್ರಪಂಚದಲ್ಲಿರುವ ಸರ್ವಧನುರ್ಧಾರಿಗಳಲ್ಲಿ ಶ್ರೇಷ್ಠನಾಗಿರು ತ್ತಾನೆ. ಈ ನಮ್ಮ ಅರ್ಜುನನು ಇಂದ್ರನಿಗಾಗಲೀ–ವಾಸುದೇವನಿಗಾಗಲೀ ಯಾವ ವಿಧದಲ್ಲೂ ಕಡಿಮೆಯವನಲ್ಲ. ಇಂದ್ರ-ವಾಸುದೇವರಿಗೆ ಸಮಾನನೆನಿ ಸಿದ್ದಾನೆ. ಗಾಂಡೀವಧನುಸ್ಸನ್ನು ಧರಿಸಿರುವ, ಬಿಳಿಯ ಕುದುರೆಗಳಿಂದ ಸಜ್ಜಾದ ರಥದಲ್ಲಿ ಕುಳಿತು ಯುದ್ಧಮಾಡುವ ಈ ಬೀಭತ್ಸುವು ವಿರಾಟನ ಅರಮನೆಯಲ್ಲಿ ಯಾವ ಕೆಲಸವನ್ನು ಮಾಡುತ್ತಾನೆ? ಕಿರೀಟಿಯು ಪೃಥ್ವಿಯ ಲ್ಲಿರುವ ಮನುಷ್ಯರಿಂದ ಸಾಧಿಸಲು ಅಸಾಧ್ಯವಾದ ಕಾರ್ಯವನ್ನು ಸಾಧಿಸಿ ದ್ದಾನೆ. ತ್ರಿಭುವನೇಶ್ವರನಾದ ಇಂದ್ರನ ಅರಮನೆಯಲ್ಲಿ ಐದು ವರ್ಷಗಳ ಪರ್ಯಂತವಾಗಿ ವಾಸಿಸುತ್ತಿದ್ದು ಸಕಲವಾದ ದಿವ್ಯಾಸ್ತ್ರಗಳನ್ನೂ ಪಡೆದು ಬಂದಿರುತ್ತಾನೆ. ದೇವರೂಪಿಯಾದ, ಮಹಾತೇಜಸ್ವಿಯಾದ ಈ ಅರ್ಜುನ ನಿಂದ ಅದ್ಭುತವಾದ ಕಾರ್ಯಗಳು ಸಾಧಿಸಲ್ಪಟ್ಟಿವೆ. ಭೀಮಸೇನ! ನಾನಿವ ನನ್ನು ನಿಶ್ಚಯವಾಗಿಯೂ ಕೇವಲ ನನ್ನ ತಮ್ಮನೆಂದು ಭಾವಿಸುವುದಿಲ್ಲ. ಇವನು ಹನ್ನೆರಡನೆಯ ರುದ್ರನಾಗಿರಬಹುದು; ಹದಿಮೂರನೆಯ ಆದಿತ್ಯ ನಾದರೂ ಆಗಿರಬಹುದು ಅಥವಾ ಒಂಬತ್ತನೆಯ ವಸುವಾದರೂ ಆಗಿರ ಬಹುದೆಂದು ಭಾವಿಸುತ್ತೇನೆ. ಹತ್ತನೆಯ ಗ್ರಹವಾದರೂ ಆಗಿರಬಹುದು.

ರುದ್ರಾದಿತ್ಯ-ವಸು-ಗ್ರಹಗಳ ತೇಜಸ್ಸು, ಪರಾಕ್ರಮ–ಮುಂತಾದುವುಗಳೆಲ್ಲವೂ ಇವನಲ್ಲಿರುವುವು. ಇವನೆರಡು ತೋಳುಗಳೂ ಸಮಪ್ರಮಾಣವಾಗಿಯೂ ಸುದೀರ್ಘವಾಗಿಯೂ ಇವೆ. ಧನುಸ್ಸಿನ ಶಿಂಜಿನಿಯನ್ನು ಸೆಳೆದೆಳೆಯುವಾಗ ಉಂಟಾಗಿರುವ ಸತತವಾದ ಜ್ಯಾಘಾತದಿಂದ ಒರಟಾಗಿ ಹೋಗಿರುವ ಚರ್ಮದಿಂದ ಕೂಡಿರುವ ಇವನ ಎರಡು ತೋಳುಗಳ ಮೇಲ್ಭಾಗಗಳೂ ಹೋರಿಯ ಹಿಳಿಲಿನಂತೆ ಉಬ್ಬಿಬಿಟ್ಟಿವೆ. ಇವುಗಳನ್ನಿವನು ಹೇಗೆ ಗೋಪ್ಯವಾಗಿಟ್ಟುಕೊಳ್ಳಬಲ್ಲನು?

**ಹಿಮವಾನಿವ ಶೈಲಾನಾಂ ಸಮುದ್ರಃ ಸರಿತಾಮಿವ ।**
**ತ್ರಿದಶಾನಾಂ ಯಥಾ ಶಕ್ರೋ ವಸೂನಾಮಿವ ಹವ್ಯವಾಟ್ ॥೨೩॥**

**ಮೃಗಾಣಾಮಿವ ಶಾರ್ದೂಲೋ ಗರುಡಃ ಪತತಾಮಿವ ।**
**ವರಃ ಸಂನಹ್ಯಮಾನಾನಾಂ ಸೋಽರ್ಜುನಃ ಕಿಂ ಕರಿಷ್ಯತಿ ॥೨೪॥**

ಪರ್ವತಗಳಲ್ಲಿ ಹಿಮವಂತನು ಶ್ರೇಷ್ಠನಾಗಿರುವಂತೆ–ಸರಿತ್ತುಗಳಿಗೆ ಸಮುದ್ರನು ಒಡೆಯನಾಗಿರುವಂತೆ–ದೇವತೆಗಳಲ್ಲಿ ಇಂದ್ರನು ಶ್ರೇಷ್ಠನಾಗಿರುವಂತೆ–ವಸುಗಳಲ್ಲಿ ಅಗ್ನಿದೇವನು ಶ್ರೇಷ್ಠನಾಗಿರುವಂತೆ–ಮೃಗಗಳಲ್ಲಿ ಶಾರ್ದೂಲವು ಶ್ರೇಷ್ಠವಾಗಿರುವಂತೆ–ಪಕ್ಷಿಗಳಲ್ಲಿ ಗರುಡನು ಶ್ರೇಷ್ಠನಾಗಿರುವಂತೆ–ಯುದ್ಧಮಾಡುವವರಲ್ಲಿ ಶ್ರೇಷ್ಠನಾದ ನಮ್ಮ ಅರ್ಜುನನು ವಿರಾಟನಗರದಲ್ಲೇನು ಮಾಡುವನು?"

ಅಣ್ಣನ ವ್ಯಾಕುಲವನ್ನು ಕಂಡು ಅರ್ಜುನನು ಸಮಾಧಾನವನ್ನು ಹೇಳುತ್ತಾನೆ :

"ಅಣ್ಣ! ನಾನು ವಿರಾಟನ ಅರಮನೆಗೆ ಹೋಗಿ ನಪುಂಸಕನಂತೆ ವರ್ತಿಸುತ್ತೇನೆ. ನೀನು ಹೇಳಿದಂತೆ ಜ್ಯಾಘಾತಗಳಿಂದ ಉಂಟಾಗಿರುವ ಚಿಹ್ನೆಗಳನ್ನು ಮುಚ್ಚಿಕೊಳ್ಳಲು ಪ್ರಯತ್ನಿಸುತ್ತೇನೆ. ನನ್ನೆರಡು ಕಿವಿಗಳಿಗೂ ಯಜ್ಞೇಶ್ವರನಂತೆ ಪ್ರಜ್ವಲಿಸಿದ ಕರ್ಣಕುಂಡಲಗಳನ್ನು ತೊಟ್ಟುಕೊಳ್ಳುತ್ತೇನೆ. ಚಿಪ್ಪಿನಿಂದ ಮಾಡಿದ ಬಳೆಗಳನ್ನು ತೊಟ್ಟುಕೊಳ್ಳುತ್ತೇನೆ. ತಲೆತುಂಬ ಕೂದಲನ್ನು ಬಿಟ್ಟುಕೊಳ್ಳುತ್ತೇನೆ. ಈ ರೀತಿಯಾಗಿ ನಪುಂಸಕನ ವೇಷವನ್ನು

ಧರಿಸಿ ಬೃಹನ್ನಳೆಯೆಂಬ ಅಂಕಿತದಿಂದ ರಾಜನ ಅರಮನೆಯನ್ನು ಪ್ರವೇಶಿಸುತ್ತೇನೆ. ಅಂತಃಪುರದ ಸ್ತ್ರೀಯರಿಗೆ ಅನೇಕಾನೇಕ ಕಥೆಗಳನ್ನು ಪದೇ ಪದೇ ಹೇಳುತ್ತಾ ಅವರುಗಳನ್ನು ಸಂತೃಪ್ತಿಗೊಳಿಸಿ ನಾನೂ ಸಂತಸದಿಂದ ಕಾಲ ಕಳೆಯುತ್ತೇನೆ. ವಿರಾಟನ ಅರಮನೆಯ ಹೆಣ್ಣುಮಕ್ಕಳಿಗೆ ಗೀತೆಗಳನ್ನೂ, ವಿಚಿತ್ರವಾಗಿ ನಾಟ್ಯವಾಡುವುದನ್ನೂ, ವಾದ್ಯಸಂಗೀತವನ್ನೂ ಹೇಳಿಕೊಡುತ್ತೇನೆ. ನಾನಾದೇಶಗಳಲ್ಲಿರುವ ಶೂರರ ಚರಿತ್ರೆಗಳನ್ನೂ ಅವರುಗಳು ಮಾಡಿರುವ ಸಾಹಸಕಾರ್ಯಗಳನ್ನೂ ವಿವರಿಸಿ ಹೇಳುತ್ತಾ ಬೃಹನ್ನಳಾವೇಷದಿಂದ ನನ್ನನ್ನು ನಾನು ಖಂಡಿತವಾಗಿಯೂ ಮುಚ್ಚಿಕೊಳ್ಳುತ್ತೇನೆ. ರಾಜನ ಪರಿವಾರದವರಿಗೆ ನಾನು ಬೃಹನ್ನಳೆಯಲ್ಲದೇ ಬೇರೊಬ್ಬರಿರಬಹುದೆಂಬ ಸಂಶಯವೇ ಬಾರದಂತೆ ವರ್ತಿಸುತ್ತೇನೆ.

ರಾಜನೇನಾದರೂ ನನ್ನನ್ನು–'ನೀನಾರು? ಇದುವರೆವಿಗೂ ಎಲ್ಲಿದ್ದೆ? ನಿನ್ನ ಅನುಭವವೇನು?' ಮುಂತಾಗಿ ಕೇಳಿದರೆ ನಾನು ಯುಧಿಷ್ಠಿರನ ಅರಮನೆಯಲ್ಲಿ ದ್ರೌಪದಿಗೆ ಪರಿಚಾರಕಳಾಗಿದ್ದೆನೆಂದು ಹೇಳುತ್ತೇನೆ.

ಅಣ್ಣ! ಕೃತಕವಾದ ಈ ನಪುಂಸಕವೇಷವನ್ನು ಧರಿಸಿರುವ ನಾನು ಬೂದಿಮುಚ್ಚಿದ ಯಜ್ಞೇಶ್ವರನಂತೆ–ಋತುಪರ್ಣನ ಮನೆಯಲ್ಲಿ ನಲಮಹಾರಾಜನಿದ್ದಂತೆ–ವಿರಾಟನ ಅರಮನೆಯಲ್ಲಿ ಸುಖವಾಗಿ ಕಾಲಕಳೆಯುತ್ತೇನೆ. ಆದುದರಿಂದ ನೀನು ನನ್ನ ವಿಷಯವಾಗಿ ಯೋಚನೆಮಾಡುವ ಕಾರಣವಿಲ್ಲ."

೨ನೆಯ ಅಧ್ಯಾಯವು ಮುಗಿಯಿತು.

# ನಕುಲ-ಸಹದೇವ-ದ್ರೌಪದಿಯರು ತಮ್ಮ-ತಮ್ಮ ಕರ್ತವ್ಯಗಳ ವಿಷಯವಾಗಿ ಹೇಳಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಧರ್ಮಾತ್ಮರಲ್ಲಿ ಶ್ರೇಷ್ಠನಾದ, ಪುರುಷಪ್ರವೀರನಾದ ಅರ್ಜುನನು ಧರ್ಮರಾಜನಿಗೆ ತನ್ನ ನಿರ್ಧಾರವನ್ನು ಹೇಳಿ ವಿರಮಿಸಿದನು. ಯುಧಿಷ್ಠಿರನು ಅರ್ಜುನನ ಸಂಬಂಧವಾಗಿ ತನಗಿದ್ದ ಆತಂಕವನ್ನು ದೂರ ಮಾಡಿ ತನ್ನ ಮೂರನೆಯ ತಮ್ಮನಾದ ನಕುಲನನ್ನು ಕೇಳಿದನು :

"ನಕುಲ! ನೀನಿನ್ನೂ ಸುಕುಮಾರನು. ಸುಖವಾಗಿರಲು ಅರ್ಹನಾಗಿ ರುವೆ. ನೀನು ಸಕಲರಿಗೂ ನೇತ್ರಾನಂದಕರನು. ಎಂತಹವರಿಗೂ ನಿನ್ನ ಕೋಮಲರೂಪವನ್ನು ಪದೇ ಪದೇ ನೋಡಬೇಕೆನಿಸುತ್ತದೆ. ಮೇಲಾಗಿ ನೀನು ಮಹಾಶೂರನೂ ಆಗಿರುವೆ. ನೀನು ರಾಜನ ಅರಮನೆಯಲ್ಲಿ ಯಾವ ವಿಧವಾದ ಕಾರ್ಯವನ್ನು ಮಾಡಿಕೊಂಡಿರುವೆ? ನಿನ್ನೀ ಸುಕೋಮಲವಾದ ಶರೀರವನ್ನು ಹೇಗೆ ಮುಚ್ಚಿಕೊಳ್ಳುವೆ? ಹೇಳು, ನಕುಲ!"

"ಅಣ್ಣ! ನಾನು ವಿರಾಟರಾಜನ ಅರಮನೆಯಲ್ಲಿ ಅಶ್ವಪಾಲಕನಾಗಿರು ತ್ತೇನೆ. ನನಗೆ ಅಶ್ವಲಕ್ಷಣವು ಸಂಪೂರ್ಣವಾಗಿ ತಿಳಿದಿರುವುದು. ಎಂತಹ ಕುದುರೆಯನ್ನು ಹೇಗೆ ಪಳಗಿಸಬೇಕೆಂಬುದನ್ನು ನಾನು ಚೆನ್ನಾಗಿ ತಿಳಿದಿರುವೆನು. ನಾನು ಗ್ರಂಥಿಕನೆಂಬ ಅಭಿಧಾನದಿಂದ ವಿರಾಟನ ಅರಮನೆಗೆ ಹೋಗುತ್ತೇನೆ. ಅಶ್ವಶಿಕ್ಷೆಯೆಂಬುದು ನನಗೆ ಬಹುಪ್ರಿಯವಾದ ಕಾರ್ಯವಾಗಿದೆ. ಅಶ್ವಶಿಕ್ಷೆಯಲ್ಲಿ ಮತ್ತು ಕುದುರೆಗಳ ಚಿಕಿತ್ಸೆಯಲ್ಲಿ ನಾನು ಬಹಳ ಕುಶಲನು. ನೀನು ಕುದುರೆಗಳನ್ನು ಬಹುವಾಗಿ ಪ್ರೀತಿಸುವಂತೆಯೇ ನಾನೂ ಕುದುರೆಗಳನ್ನು ಬಹುವಾಗಿ ಪ್ರೀತಿಸುವೆನು.

ವಿರಾಟನಗರದ ಪ್ರಜೆಗಳು ನನ್ನ ಹಿಂದಿನ ವೃತ್ತಾಂತವನ್ನೇನಾದರೂ ಕೇಳಿದರೆ–ಹಿಂದೆ ನಾನು ಯುಧಿಷ್ಠಿರನ ಅಶ್ವಶಾಲೆಯ ಅಧ್ಯಕ್ಷನಾಗಿದ್ದೇನೆಂದು

ಹೇಳಿಬಿಡುತ್ತೇನೆ. ಈ ರೀತಿಯಾಗಿ ನಾನು ನನ್ನ ವೇಷವನ್ನು ಮರೆಸಿಕೊಂಡು ವಿರಾಟನಗರದಲ್ಲಿ ಒಂದು ವರ್ಷವನ್ನು ಸುಖವಾಗಿ ಕಳೆಯುತ್ತೇನೆ."

ನಕುಲನು ಹೀಗೆಂದು ಹೇಳಿದ ನಂತರ ಯುಧಿಷ್ಠಿರನು ಸಹದೇವನನ್ನು ಕೇಳಿದನು :

**ಸಹದೇವ ಕಥಂ ತಸ್ಯ ಸಮೀಪೇ ವಿಹರಿಷ್ಯಸಿ ।**
**ಕಿಂ ವಾ ತ್ವಂ ಕರ್ಮ ಕುರ್ವಾಣಃ ಪ್ರಚ್ಛನ್ನೋ ವಿಹರಿಷ್ಯಸಿ ॥೭॥**

"ಸಹದೇವ! ನೀನು ವಿರಾಟರಾಜನ ಸಮೀಪದಲ್ಲಿ ಹೇಗೆ ವರ್ತಿಸುವೆ? ನೀನಲ್ಲಿ ಯಾವ ವಿಧವಾದ ಕಾರ್ಯವನ್ನು ಮಾಡಿಕೊಂಡು ನಿಗೂಢನಾಗಿರುವೆ?"

"ಅಣ್ಣ! ನಾನು ವಿರಾಟರಾಜನ ಅರಮನೆಯಲ್ಲಿ ಹಸುಗಳಿಗೆ ಸಂಬಂಧಿಸಿದ ಲೆಕ್ಕಪತ್ರಗಳ ಪರಿಶೀಲಕನಾಗುತ್ತೇನೆ. ಉತ್ತಮ-ಮಧ್ಯಮ-ಅಧಮ ಜಾತಿಗಳಿಗೆ ಅನುಗುಣವಾಗಿ ಅವುಗಳನ್ನು ವಿಂಗಡಿಸುವ ವಿದ್ಯೆಯು ನನಗೆ ಚೆನ್ನಾಗಿ ತಿಳಿದಿರುವುದು. ಹಸುಗಳ ಹಾಲು ಕರೆಯುವುದರಲ್ಲಿ ನಾನು ಕುಶಲನಾಗಿರುತ್ತೇನೆ. ಮದಿಸಿದ ಹೋರಿಗಳನ್ನಾಗಲೀ, ಹಸುಗಳನ್ನಾಗಲೀ, ಪಳಗಿಸುವ ವಿಧಾನವೂ ನನಗೆ ತಿಳಿದಿರುವುದು. ತಂತಿಪಾಲನೆಂಬ ನಾಮಧೇಯವನ್ನಿಟ್ಟುಕೊಂಡು ನನ್ನ ನಿಜಸ್ವರೂಪವು ಯಾರಿಗೂ ತಿಳಿಯದಂತೆ ನೈಪುಣ್ಯದಿಂದ ವರ್ತಿಸುತ್ತೇನೆ. ನನ್ನ ವಿಷಯವಾಗಿ ನಿನ್ನ ಮನಸ್ಸಿನ ಆತಂಕವನ್ನು ದೂರಮಾಡಣ್ಣ!

ನಾನು ಗೋಶಾಲೆಯ ಅಧ್ಯಕ್ಷನಾದರೆ ಹಸುಗಳು ನೀರೋಗದೃಢಕಾಯಗಳಾಗಿರುತ್ತವೆ. ಯಥೇಚ್ಛವಾಗಿ ಹಾಲು ಕರೆಯುತ್ತವೆ. ಹಸುಗಳು ರೋಗರಹಿತಗಳಾಗಿರುವುದರಿಂದ ಅವುಗಳು ಕೊಡುವ ಹಾಲೂ ದೋಷರಹಿತವಾಗಿರುತ್ತದೆ. ಹಸುಗಳು ಸತ್ತ್ವಯುಕ್ತಗಳಾಗಿದ್ದು ಹೆಚ್ಚು ಸಂಖ್ಯೆಯಲ್ಲಿ ಕರುಗಳನ್ನೀಯುತ್ತವೆ. ಕಳ್ಳ-ಕಾಕರ, ವ್ಯಾಘ್ರಾದಿಗಳ ಭಯವೂ ಇರುವುದಿಲ್ಲ. ಹಸುಗಳು ಯಾವ ವಿಧವಾದ ಭಯ-ಭೀತಿಗಳೂ ಇಲ್ಲದೆ ಸಂತಸದಿಂದ

ಕೂಡಿರುತ್ತವೆ. ಹಿಂದೆಯೂ ನಾನು ನಿನ್ನಿಂದ ಗೋವುಗಳ ಮೇಲ್ವಿಚಾರಣೆಯಲ್ಲಿಯೇ ನಿಯುಕ್ತನಾಗಿದ್ದೆನು. ಆ ಸಮಯದಲ್ಲಿ ನಾನು ಎಷ್ಟು ದಕ್ಷತೆಯಿಂದ ಗೋವುಗಳ ರಕ್ಷಣೆಯನ್ನು ಮಾಡಿದೆನೆಂಬ ವಿಷಯವು ನಿನಗೇ ತಿಳಿದಿರುವುದು. ಹಸುಗಳನ್ನು ನೋಡಿದೊಡನೆಯೇ ಅವುಗಳ ಶುಭಾಶುಭ ಲಕ್ಷಣಗಳನ್ನು ನಾನು ತಿಳಿಯಬಲ್ಲೆನು. ಅವುಗಳ ಚಲನದಿಂದಲೇ ಶುಭಾಶುಭಯೋಗಗಳನ್ನು ತಿಳಿಯುತ್ತೇನೆ. ಎತ್ತುಗಳಲ್ಲಿಯೂ ಶುಭಲಕ್ಷಣಯುಕ್ತವಾದ ಎತ್ತುಗಳಾವುವೆಂಬುದನ್ನು ಅವುಗಳ ಮುಖಚರ್ಯೆ, ಕೊಂಬುಗಳು, ಗಮನ–ಇತ್ಯಾದಿಗಳಿಂದ ಗುರುತಿಸಬಲ್ಲೆನು. ಸರ್ವಲಕ್ಷಣಯುಕ್ತವಾದ ಯಾವ ಹೋರಿಯ ಮೂತ್ರವನ್ನು ಆಘ್ರಾಣಮಾಡುವುದರಿಂದಲೇ ಬಂಜೆಯರು ಮಕ್ಕಳನ್ನು ಪಡೆಯುತ್ತಾರೆಯೋ–ಬರಡುಹಸುಗಳೂ ಕರುಹಾಕುತ್ತವೆಯೋ–ಅಂತಹ ಉತ್ಕೃಷ್ಟಜಾತಿಯ ಹೋರಿಯನ್ನು ನಾನು ಮುಖಲಕ್ಷಣದಿಂದಲೇ ತಿಳಿಯಬಲ್ಲವನಾಗಿದ್ದೇನೆ. ಮೇಲಾಗಿ ಗೋರಕ್ಷಣೆಯಲ್ಲಿ ನನಗೆ ಹೆಚ್ಚಿನ ಆಸಕ್ತಿಯಿರುವುದು. ಇದು ನನಗೆ ಅತ್ಯಂತಪ್ರಿಯವಾದ ಕಾರ್ಯವಾಗಿದೆ. ನಾನು ಗೋಪಾಲನ ಅಥವಾ ಗೋಪಾಲಾಧ್ಯಕ್ಷನ ವೇಷವನ್ನು ಧರಿಸಿದೆನಾದರೆ ನನ್ನನ್ನು ಯಾರೂ ಗುರುತಿಸಲಾರರು. ನನ್ನ ಕೌಶಲ್ಯದ ಕಾರ್ಯಗಳಿಂದ ರಾಜನನ್ನೂ ಸಂತೋಷಗೊಳಿಸುತ್ತೇನೆ. ಈ ವಿಷಯದಲ್ಲಿ ನೀನು ಸ್ವಲ್ಪವಾದರೂ ಸಂಶಯಿಸುವ ಕಾರಣವಿಲ್ಲ."

ಐವರೂ ಐದು ಕೆಲಸಗಳನ್ನು ಹಂಚಿಕೊಂಡರು. ಅವರೊಡನೆ ದ್ರೌಪದಿಯೂ ಅಜ್ಞಾತವಾಸದಲ್ಲಿಯೇ ಇರಬೇಕಾಗಿದೆ. ಆ ವಿಷಯವಾಗಿ ಯುಧಿಷ್ಠಿರನು ಚಿಂತಿಸಿ ಹೇಳಿದನು :

"ದ್ರೌಪದಿಯು ನಮ್ಮ ಪ್ರಿಯಭಾರ್ಯೆಯಾಗಿದ್ದಾಳೆ. ಇವಳು ನಮಗೆ ಪ್ರಾಣಗಳಿಗಿಂತಲೂ ಹೆಚ್ಚಿನವಳು. ತಾಯಿಯನ್ನು ಪರಿಪಾಲಿಸುವಂತೆಯೇ ನಾನಿವಳ ಪರಿಪಾಲನೆಯನ್ನು ಮಾಡಬೇಕು. ಹಿರಿಯ ಅಕ್ಕನಂತಿವಳು ಪರಮಪೂಜ್ಯಳೂ ಆಗಿರುತ್ತಾಳೆ. ಸಾಧಾರಣ ಸ್ತ್ರೀಯರು ಮಾಡುವ ಯಾವ ಕೆಲಸವನ್ನೂ ಇವಳು ತಿಳಿಯಳು. ಇಂತಹವಳು ಯಾವ ಕಾರ್ಯವನ್ನು ಮಾಡಿಕೊಂಡು ವಿರಾಟರಾಜನ ಅರಮನೆಯಲ್ಲಿರಬಲ್ಲಳು? ಮೇಲಾಗಿ ಇವಳು

ಸುಕೋಮಲವಾದ ಶರೀರವನ್ನು ಪಡೆದಿರುತ್ತಾಳೆ. ಅತ್ಯಲ್ಪವಾದ ಕಷ್ಟವನ್ನೂ ಇವಳ ಸುಕೋಮಲಶರೀರವು ಸಹಿಸಲಾರದು. ಕುಟಿಲತೆಯ ಜೀವನವು ಇವಳಿಗೆ ತಿಳಿಯದು. ಇವಳಿನ್ನೂ ಯುವಾವಸ್ಥೆಯಲ್ಲಿಯೇ ಇದ್ದಾಳೆ. ಯಶಸ್ವಿನಿಯಾದ ರಾಜಪುತ್ರಿಯಾಗಿದ್ದಾಳೆ. ಮಹಾಭಾಗೆಯಾದ ಇವಳು ಮಹಾಪತಿವ್ರತೆಯೂ ಆಗಿರುತ್ತಾಳೆ. ಇಂತಹವಳು ವಿರಾಟರಾಜನ ಅರಮನೆ ಯಲ್ಲಿ ದಾಸ್ಯವೃತ್ತಿಯಿಂದ ಹೇಗೆತಾನೇ ಜೀವಿಸುವಳು?

ಹುಟ್ಟಿದಾಗಿನಿಂದಲೂ ಇವಳು ಅನುದಿನವೂ ದಿವ್ಯಮಾಲೆಗಳನ್ನು ಧರಿ ಸುತ್ತಾ, ಸುಗಂಧವನ್ನು ಲೇಪಿಸಿಕೊಳ್ಳುತ್ತಾ, ವಿಧ-ವಿಧವಾದ ಪೀತಾಂಬರ ಗಳನ್ನುಡುತ್ತಾ ಕಾಲಕಳೆಯುತ್ತಿದ್ದಾಳೆ. ಮಾಲ್ಯ, ಗಂಧ, ಬಗೆ-ಬಗೆಯ ವಸ್ತ್ರಗಳು ಇವುಗಳ ವಿಷಯವನ್ನು ಮಾತ್ರ ಇವಳು ತಿಳಿದಿರುತ್ತಾಳೆ. ಬೇರೇನೂ ಇವಳಿಗೆ ತಿಳಿಯದು. ಇಂತಹವಳು ವಿರಾಟನ ಅರಮನೆಯಲ್ಲಿ ಹೇಗೆ ತಾನೇ ಇರಬಲ್ಲಳು?"

ದ್ರೌಪದಿಯು ಹೇಳಿದಳು :

"ಮಹಾರಾಜ! ಲೋಕದಲ್ಲಿ ಸೈರಂಧ್ರಿಯರೆಂಬ ಸ್ತ್ರೀಯರು ಯಾವಾ ಗಲೂ ಇತರರಿಂದಲೇ ರಕ್ಷಿಸಲ್ಪಡುತ್ತಿರುತ್ತಾರೆ. ಅನೇಕ ಕುಶಲವಿದ್ಯೆಗಳಲ್ಲಿ ನಿಪುಣೆಯರಾದ ಸೈರಂಧ್ರಿಯರೆಂಬ ಸ್ತ್ರೀಯರು ರಾಜರ ಅಥವಾ ಐಶ್ವರ್ಯ ವಂತರ ಮನೆಗಳಿಗೆ ಹೋಗಿ ಅಲ್ಲಿಯ ಸ್ತ್ರೀಯರಿಗೆ ತಮ್ಮ ಕುಶಲವಿದ್ಯೆಯನ್ನು ಹೇಳಿಕೊಡುತ್ತಾ, ಕುಶಲವಿದ್ಯೆಯಿಂದ ಅಂತಃಪುರದ ಸ್ತ್ರೀಯರನ್ನು ಸಿಂಗರಿಸುತ್ತಾ ತಮ್ಮ ಜೀವನವನ್ನು ಕಳೆಯುತ್ತಾರೆ. ನಾನಾದರೋ ಹೆಂಗಸರ ಕೇಶರಾಶಿಯನ್ನು ನಾನಾರೀತಿಗಳಲ್ಲಿ ಸಿಂಗರಿಸುವ ಕಲೆಯಲ್ಲಿ ಬಹುಕುಶಲೆಯಾದ ಸೈರಂಧ್ರಿಯೆಂದು ಹೇಳಿಕೊಂಡು ರಾಜನ ಅರಮನೆಗೆ ಹೋಗುವೆನು. ರಾಜನೇನಾದರೂ ನನ್ನನ್ನು-'ನೀನಾರು? ಎಲ್ಲಿಯವಳು? ಇದುವರೆಗೆ ಎಲ್ಲಿದ್ದೆ?'-ಮುಂತಾಗಿ ಪ್ರಶ್ನಿಸಿದರೆ ನಾನು ಯುಧಿಷ್ಠಿರನ ಅರಮನೆಯಲ್ಲಿ ದ್ರೌಪದಿಯ ಪರಿಚಾರಿಕೆಯಾಗಿದ್ದೆನೆಂದು ಹೇಳುತ್ತೇನೆ.

'ನೀನೆಲ್ಲಿರುವೆ? ಏನು ಕಾರ್ಯಮಾಡುವೆ?'-ಎಂದು ನೀನು ಕೇಳಿದೆ

ಯಲ್ಲವೇ? ಅದಕ್ಕಾಗಿ ನಾನು ರಾಜನ ಅರಮನೆಯಲ್ಲಿ ಮಾಡಲಿರುವ ಕಾರ್ಯವನ್ನು ಹೇಳಿದೆನು. ರಾಜನ ಭಾರ್ಯೆಯಾದ, ಯಶಸ್ವಿನಿಯಾದ ಸುದೇಷ್ಣೆಯೊಡನಿರುತ್ತೇನೆ. ಅಯಾಚಿತವಾಗಿ ಪ್ರಾಪ್ತಳಾದ ನನ್ನನ್ನು ಅವಳು ಖಂಡಿತವಾಗಿಯೂ ಸಂರಕ್ಷಿಸುತ್ತಾಳೆ. ಆದುದರಿಂದ ನೀನು ನನ್ನ ವಿಷಯ ವಾಗಿ ದುಃಖಿಸುವ ಕಾರಣವಿಲ್ಲ, ಮಹಾರಾಜ!"

ದ್ರೌಪದಿಯ ಮಾತುಗಳನ್ನು ಕೇಳಿ ಯುಧಿಷ್ಠಿರನಿಗೆ ಆನಂದವಾಯಿತು. ಅತಿಕಷ್ಟದಲ್ಲಿಯೂ ಸಹಚಾರಿಣಿಯಾಗಿದ್ದು ಪತಿಯ ಕಷ್ಟದಲ್ಲಿ ಪಾಲ್ಗೊಳ್ಳುವ ಪತ್ನಿಯೇ ನಿಜವಾದ ಅರ್ಧಾಂಗಿ. ಸಾಧ್ವಿಯಾದ, ಮಹಾರಾಣಿಯಾದ, ಸುಖೋಚಿತಳಾದ ದ್ರೌಪದಿಯು ತಾನು ಇತರರ ಮನೆಯಲ್ಲಿ ಸೇವಿಕಾ ಜೀವನವನ್ನು ನಡೆಸಬೇಕಾಗಿ ಬಂದರೂ ಸ್ವಲ್ಪವಾದರೂ ದುಃಖವನ್ನು ಸೂಚಿಸ ಲಿಲ್ಲ. ಅದಕ್ಕೆ ಪ್ರತಿಯಾಗಿ ದುಃಖಿತನಾಗಿದ್ದ ಯುಧಿಷ್ಠಿರನನ್ನು ತನ್ನ ಸವಿ ಮಾತುಗಳಿಂದಲೂ–ಸಮಯೋಚಿತವಾದ ಮಾತುಗಳಿಂದಲೂ ಸಮಾಧಾನ ಗೊಳಿಸಿದಳು. ಹೃಷ್ಟನಾದ ಧರ್ಮಜನು ಧರ್ಮಪತ್ನಿಯನ್ನು ಕುರಿತು ಹೇಳಿದನು:

"ಶುಭಾಂಗಿ! ಮಂಗಳಕರವಾದ ಮತ್ತು ಶುಭಸೂಚಕವಾದ ಮಾತು ಗಳನ್ನೇ ಆಡಿರುವೆ. ಉತ್ತಮಕುಲಪ್ರಸೂತೆಯಾಗಿರುವ ನಿನಗಿದು ಅನುರೂಪವಾಗಿಯೇ ಇದೆ. ಸಾಧ್ವಿಯಾದ ಮತ್ತು ಸತ್ಪುರುಷರ ಸದ್ವೃತ್ತಿ ಯಲ್ಲಿಯೇ ಕಾಲಕಳೆಯುತ್ತಿರುವ ನಿನಗೆ ಪಾಪಕರ್ಮದ ಅಥವಾ ಪಾಪ ಕರ್ಮಿಗಳ ತಿಳಿವಳಿಕೆಯು ಸ್ವಲ್ಪವಾದರೂ ಇರುವುದಿಲ್ಲ. ಎಲ್ಲೆಡೆಗಳಲ್ಲಿಯೂ ಪಾಪಕರ್ಮಿಗಳೂ ದುರ್ವೃತ್ತಿಯವರೂ ಇದ್ದೇ ಇರುತ್ತಾರೆ. ಈ ವಿಷಯದಲ್ಲಿ ನೀನು ಬಹಳ ಜಾಗರೂಕಳಾಗಿರಬೇಕು. (ಪಾಪಿಗಳಾದ ಕೌರವರು ನಮ್ಮನ್ನು ಗುರುತಿಸಿ ಪುನಃ ಕಾಡಿಗಟ್ಟುವಂತೆ ಮಾಡಬೇಡ.) ನೀನು 'ದ್ರೌಪದೀ' ಎಂಬುದನ್ನು ಯಾರೂ ಯಾವಾಗಲೂ ಯಾವ ಕಾರಣದಿಂದಲೂ ತಿಳಿಯ ಲಾಗದ ರೀತಿಯಲ್ಲಿ ನೀನು ವರ್ತಿಸಬೇಕು. ನಿನ್ನ ಮೂಲಕವಾಗಿ ನಮ್ಮ ಗುಟ್ಟು ರಟ್ಟಾಯಿತೆಂದರೆ–**'ದುರ್ಹೃದಃ ಪಾಪಾ ಭವಿಷ್ಯನ್ತಿ ಸುಖಿನಃ ಪುನಃ'**– ದುರ್ಹೃದರಾದ ಪಾಪಿಷ್ಠರಾದ ದುರ್ಯೋಧನಾದಿಗಳು ಪುನಃ ಸುಖಿಗಳಾಗು ತ್ತಾರೆ. ಹಾಗಾಗದ ರೀತಿಯಲ್ಲಿ ನೀನು ವರ್ತಿಸಬೇಕು, ಭಾಮಿನಿ!"

(ದ್ರೌಪದಿಯ ವಿಷಯದಲ್ಲಿ ಯುಧಿಷ್ಠಿರನು ವಿಶೇಷವಾದ ಎಚ್ಚರಿಕೆ ನೀಡಿದ್ದಾನೆ. ದ್ರೌಪದಿಯು ತಾನು ಸೈರಂಧ್ರಿಯೆಂದು ಹೇಳಿಕೊಂಡರೂ ಅವಳ ಅನುಪಮವಾದ ಸೌಂದರ್ಯವನ್ನು ಮುಚ್ಚಿಡಲು ಸಾಧ್ಯವಿಲ್ಲ. ಮೇಲಾಗಿ ಹೆಂಗಸರಿಗೆ ತಮ್ಮ ಸ್ಥಾನ-ಮಾನಗಳ ಪ್ರಜ್ಞೆಯು ಬಹಳವಾಗಿರುತ್ತದೆ. ಆತ್ಮ ಮರ್ಯಾದೆಗೆ ಕುಂದುಂಟಾಗುವುದನ್ನು ಅವರೆಂದಿಗೂ ಸಹಿಸಿಕೊಳ್ಳಲಾರರು. ಮೂರನೆಯದಾಗಿ : ಸಾಮಾನ್ಯವಾಗಿ ಗುಟ್ಟು ರಟ್ಟಾಗುವುದು ಹೆಂಗಸರಿಂದಲೇ. ಈ ಎಲ್ಲ ಕಾರಣಗಳಿಂದಲೂ ಯುಧಿಷ್ಠಿರನು ದ್ರೌಪದಿಗೆ ವಿಶೇಷವಾದ ಎಚ್ಚರಿಕೆಯನ್ನು ನೀಡುತ್ತಾನೆ.)

ಪಾಂಡವರೈವರೂ ವಿರಾಟನಗರದಲ್ಲಿ ಅಜ್ಞಾತರಾಗಿರಲು ಉಪನಾಮಗಳನ್ನಿಟ್ಟುಕೊಂಡರೂ ಆ ಉಪನಾಮಗಳೂ ಸತ್ಯದಿಂದ ದೂರವಾಗಿಲ್ಲವೆಂಬುದನ್ನು ವ್ಯಾಖ್ಯಾನಕಾರರು ಪ್ರತಿಪಾದಿಸಿರುತ್ತಾರೆ. ಮೇದಿನೀಕೋಶದಲ್ಲಿ **‘ಕಂಕ’**–ಶಬ್ದಕ್ಕೆ ಯಮಧರ್ಮನೆಂಬ ಅರ್ಥವಿದೆ. **“ಆತ್ಮಾ ವೈ ಜಾಯತೇ ಪುತ್ರಃ’**–ಎಂಬ ಶ್ರುತ್ಯುಕ್ತಿಯಂತೆ ತಂದೆಯೇ ಮಗನ ರೂಪದಲ್ಲಿ ಹುಟ್ಟುತ್ತಾನೆ. ಆದುದರಿಂದ ಯಮಧರ್ಮನ ಮಗನಾದ ಯುಧಿಷ್ಠಿರನೂ ಯಮಧರ್ಮನಿಗೆ ಅನುರೂಪನು ಅಥವಾ ಯಮಧರ್ಮನೇ ಆಗುತ್ತಾನೆ. ಈ ಕಾರಣದಿಂದಾಗಿ ಕಂಕನೆಂದು ಹೆಸರಿಟ್ಟುಕೊಳ್ಳಲಿಚ್ಛಿಸಿದ ಯುಧಿಷ್ಠಿರನು ತಾನು ಯಮಧರ್ಮನ ಮಗನೆಂಬ ಸತ್ಯಸ್ಥಿತಿಯನ್ನೇ ಹೇಳಿಕೊಂಡಂತಾಯಿತು. ಯದ್ಯಪಿ ಅಜ್ಞಾತದಲ್ಲಿರುವ ಇಚ್ಛೆಯಿದ್ದರೂ ತಥಾಪಿ ಅಲ್ಲಿ ಸಲ್ಲದ ಹೆಸರುಗಳನ್ನಿಟ್ಟುಕೊಳ್ಳುವ ಅಥವಾ ಸುಳ್ಳುಹೇಳುವ ಇಚ್ಛೆಯು ಧರ್ಮಜನಿಗಿರಲಿಲ್ಲ. **ಆಸಂ ಯುಧಿಷ್ಠಿರಸ್ಯಾಹಂ ಪುರಾ ಪ್ರಾಣಸಮಃ ಸಖಾ**–ನಾನು ಹಿಂದೆ ಯುಧಿಷ್ಠಿರನ ಪ್ರಾಣಸಖನಾಗಿದ್ದೆನು–ಎಂಬುದಕ್ಕೂ ವ್ಯಾಖ್ಯಾನಕಾರರು ಇದೇ ವಿಧವಾದ ಅರ್ಥನಿರೂಪಣೆಯನ್ನು ಮಾಡಿರುತ್ತಾರೆ. ‘ಯುಧಿಷ್ಠಿರನಾಮಕ ಶರೀರಕ್ಕೆ ನಾನು ಪ್ರಾಣಸಮನಾದ ಸಖನಾಗಿದ್ದೆನು. ಅರ್ಥಾತ್ ಪ್ರಾಣವೇ ಆಗಿದ್ದೆನು’ ಹೀಗೆ ಹೇಳಿದುದರಿಂದ ಅನೃತಭಾಷಣದ ದೋಷವೂ ಯುಧಿಷ್ಠಿರನಿಗುಂಟಾಗದೆಂಬುದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.

ಭೀಮನು ಪೌರೋಗವನೆಂದು ವಿರಾಟನೊಡನೆ ಹೇಳಿಕೊಳ್ಳುವುದಾಗಿ ಹೇಳುತ್ತಾನೆ. 'ಪೌರೋಗವ' ಎಂಬುದಕ್ಕೆ ಪಾಕಶಾಲಾಧ್ಯಕ್ಷನೆಂದು ಅರ್ಥವಾದರೂ ವಾಯುಪುತ್ರನೆಂದೂ ಅರ್ಥಮಾಡಬಹುದಾಗಿದೆ. ವಾಯುವನ್ನು 'ಪುರೋಗುಃ' ಎಂದೂ ಕರೆಯುತ್ತಾರೆ. ಪುರೋಗುವಿನ ಮಗ ಪೌರೋಗವ. ಭೀಮನು ಹೇಳಿಕೊಂಡಿರುವ ಹೆಸರು 'ಬಲ್ಲವ' ಎಂಬುದೂ ಸಹ ಯಥಾರ್ಥವಾಗಿಯೇ ಇದೆ. ಸಂಸ್ಕೃತದಲ್ಲಿ 'ಬಲ್ಲವ' ಎಂದರೆ ಪರಿಣತನಾದ ಅಡಿಗೆಯವನೆಂದಾಗುತ್ತದೆ.

ಬೃಹನ್ನಲಾ–ಶಬ್ದದಲ್ಲಿಯೂ ಇದೇ ವಿಧವಾದ ಐತಿಹ್ಯವಿದೆಯೆಂದು ವ್ಯಾಖ್ಯಾನಕಾರರು ಹೇಳುತ್ತಾರೆ. ಬೃಹನ್ನಲ–ಎಂಬುದು ಬೃಹನ್ನಲಾ ಶಬ್ದದ ಮೂಲರೂಪ. 'ಲ' ಕಾರ ಮತ್ತು ರೇಫಗಳಿಗೆ ಭೇದವಿಲ್ಲವೆಂಬುದು ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಬೃಹನ್ನಲ ಶಬ್ದದ ಕಡೆಯಲ್ಲಿರುವ 'ಲ' ಕಾರವನ್ನು ರೇಫವಾಗಿ ಪರಿವರ್ತಿಸಿದರೆ 'ಬೃಹನ್ನರಃ' ಎಂದಾಗುತ್ತದೆ. ಅರ್ಥಾತ್ ನರಶ್ರೇಷ್ಠ. ನಾರಾಯಣನಿಗೆ ಪರಮಮಿತ್ರನಾದ ಅರ್ಜುನನು ನರಶ್ರೇಷ್ಠನೆಂದೂ ಪ್ರಸಿದ್ಧಿ ಹೊಂದಿರುತ್ತಾನೆ.

ನಕುಲನು ತನ್ನ ಹೆಸರನ್ನು 'ಗ್ರಂಥಿಕ' ಎಂದಿಟ್ಟುಕೊಳ್ಳುವುದಾಗಿ ಹೇಳುತ್ತಾನೆ. ಗ್ರಂಥಿಕವೆಂದರೆ ಆಯುರ್ವೇದ ಮತ್ತು ಅಧ್ವರ್ಯುವಿದ್ಯೆಗಳ ಸಂಬಂಧಿಯಾದ ಗ್ರಂಥ. ಆಯುರ್ವೇದ ಮತ್ತು ಅಧ್ವರ್ಯುವಿದ್ಯೆಗಳು ಅಶ್ವಿನೀದೇವತೆಗಳಿಗೆ ಸಂಬಂಧಿಸಿದುವುಗಳು. ಅವರಿಗೆ 'ಅಧ್ವರ್ಯೂ' ಎಂಬ ಹೆಸರೂ ಇರುವುದು. 'ಅಶ್ವಿನೌ ವೈ ದೇವಾನಾಮಧ್ವರ್ಯೂ ಆಸ್ತಾಂ' 'ಅಶ್ವಿನಾವಧ್ವರ್ಯೂ' –ಎಂಬ ಶ್ರುತಿವಚನಗಳೂ ಇವೆ. ನಕುಲನು ಅಶ್ವಿನೀದೇವತೆಗಳ ಮಗನಲ್ಲವೇ? ಅಶ್ವಿನೀದೇವತೆಗಳ ಪುತ್ರನೆಂಬುದನ್ನು ನಿರೂಪಿಸಲು ನಕುಲನು ಅಶ್ವಿನೀದೇವತೆಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ತಿಳಿದಿರುವನೆಂಬುದನ್ನು ಗ್ರಂಥಿಕನೆಂಬ ಹೆಸರಿನಿಂದ ಬಹಿರಂಗಪಡಿಸಿರುತ್ತಾನೆ.

ಸಹದೇವನು 'ತಂತಿಪಾಲ' ನೆಂದು ಹೆಸರಿಟ್ಟುಕೊಳ್ಳುತ್ತಾನೆ. ತಂತಿಪಾಲನೆಂದರೆ ಎತ್ತುಗಳಿಗೆ ಕಟ್ಟುವ ಹಗ್ಗವನ್ನು ರಕ್ಷಿಸುವವನು–ಎಂದು

ಅರ್ಥವಾಗುತ್ತದೆ. ಸಹದೇವನ ಕಾರ್ಯವೂ ಅದೇ ಆಗಿರುತ್ತದೆ. ಎರಡನೆಯದಾಗಿ, 'ತಂತಿ' ಎಂಬ ಪದಕ್ಕೆ 'ತಸ್ಯ ಕಾಕ್ತನ್ತಿ ರ್ನಾವಲಾನಿ ದಾಮಾನಿ' ಎಂಬ ಶ್ರುತಿಗೆ ಅನುಸಾರವಾಗಿ 'ವಾಣೀ' ಎಂಬ ಅರ್ಥವನ್ನೂ ಪರ್ಯಾಯಾಂತರವಾಗಿ ಮಾಡಬಹುದಾಗಿದೆ. ಸಹದೇವನು ತಂತಿಪಾಲನೆಂದು ಹೇಳಿಕೊಂಡು–'ವಿರಾಟನ ಅರಮನೆಯಲ್ಲಿ ಕೂಡ ನಾನು ನಿನ್ನ (ಯುಧಿಷ್ಠಿರನ) 'ವಾಣೀ' ಎಂದರೆ ಆಜ್ಞೆಯನ್ನು ಪರಿಪಾಲಿಸುತ್ತೇನೆ' ಎಂದು ಸೂಚಿಸುತ್ತಾನೆ.

(ಕೆಲವು ವಿಶೇಷಲಕ್ಷಣಗಳುಳ್ಳ ಹೋರಿಗಳ ಮೂತ್ರದ ಆಘ್ರಾಣ ಮಾತ್ರದಿಂದ ಬಂಜೆಯರೂ ಪುತ್ರವತಿಯರಾಗುತ್ತಾರೆ. ಇದು ಇಂದಿನ ವೈಜ್ಞಾನಿಕರು ಪರಿಶೀಲಿಸಬೇಕಾದ ವಿಷಯವಾಗಿದೆ. ಈಗಿನ ನಮ್ಮ ಪಶುಪಾಲನೆಯು ಹೆಚ್ಚು ಹಾಲನ್ನು ಪಡೆಯುವುದರಲ್ಲಿ ಪರ್ಯವಸಾನ ಹೊಂದಿರುವುದೇ ಹೊರತು ಉತ್ತಮ ಜಾತಿ, ಅವುಗಳು ಕೊಡುವ ಹಾಲಿನಲ್ಲಿರುವ ಸತ್ತ್ವ–ಇತ್ಯಾದಿಗಳಿಗೆ ಗಮನಕೊಡುತ್ತಿಲ್ಲ. ಎತ್ತುಗಳ ವಿಷಯದಲ್ಲಿ ಅವುಗಳ ಶುಭಲಕ್ಷಣಗಳನ್ನು ತಿಳಿದು ಹೇಳುವ ಹಳ್ಳಿಯ ಜನರು ಈಗಲೂ ಇದ್ದಾರೆ. ಆದರೆ ಈ ವಿದ್ಯೆಯು ಅವರೊಡನೆಯೇ ಹೊರಟುಹೋಗುವುದೇ ಹೊರತು ಆ ವಿದ್ಯೆಯನ್ನು ಇತರರಿಗೆ ಹೇಳಿಕೊಡುವ ಸಾಧ್ಯತೆಯಾಗಲೀ ಅವರಿಂದ ಇತರರು ಕಲಿತುಕೊಳ್ಳುವ ಸಾಧ್ಯತೆಯಾಗಲೀ ಇರುವುದಿಲ್ಲ. ಇಂತಹವರಿಗಿರುವ ಈ ಕಲೆಯೊಡನೆ ಪ್ರಾಚೀನಲಕ್ಷಣಶಾಸ್ತ್ರಗಳನ್ನು ಸಮಾಯೋಜಿಸಬೇಕು. ಇಂತಹ ಪರಿಣತರನ್ನು ಒಂದೆಡೆಯಲ್ಲಿ ಸೇರಿಸಬೇಕು. ಹಾಗೆ ಮಾಡಿದಲ್ಲಿ ಇಂತಹ ಅಪೂರ್ವವಿದ್ಯೆಗಳ ಪುನರುತ್ಥಾನವು ಸಾಧ್ಯವಾಗಬಹುದು.)

೩ನೆಯ ಅಧ್ಯಾಯವು ಮುಗಿಯಿತು.

## ಪಾಂಡವರಿಗೆ ಧೌಮ್ಯರ ಹಿತವಚನಗಳು : ವಿರಾಟನಗರಕ್ಕೆ ಪಾಂಡವರ ಪ್ರಯಾಣ

ಜನಮೇಜಯ! ಭೀಮಾದಿಗಳು ತಮ್ಮ-ತಮ್ಮ ಕಾರ್ಯಗಳನ್ನು ತಾವೇ ಹೊಂದಿಸಿಕೊಂಡು ಅಣ್ಣನೊಡನೆ ಹೇಳಿದನಂತರ ಸಂತೃಪ್ತನಾದ ಯುಧಿಷ್ಠಿರನು ಪುನಃ ತನ್ನ ಅನುಜರನ್ನು ಕುರಿತು ಹೇಳುತ್ತಾನೆ :

“ಸೌಮ್ಯರೇ! ನೀವುಗಳು ವಿರಾಟರಾಜನ ಅರಮನೆಯಲ್ಲಿ ಮಾಡಬೇಕಾದ ಕಾರ್ಯಗಳನ್ನು ನಿಮಗೆ ಉಚಿತವಾದ ರೀತಿಯಲ್ಲಿ ಹಂಚಿಕೊಂಡಿರುವಿರಿ. ನಾನೂ ಕೂಡ ನನ್ನ ಬುದ್ಧಿಗೆ ಉಚಿತವೆನಿಸಿದ ರೀತಿಯಲ್ಲಿ ಹಿಂದೆ ಹೇಳಿದಂತೆ ಕೈಗೊಳ್ಳಬೇಕಾದ ಕಾರ್ಯವನ್ನು ನಿರ್ಧರಿಸಿರುವೆನು. ನಮ್ಮ ಈ ಕಾರ್ಯಗಳೆಲ್ಲವೂ ವಿಧಿನಿಶ್ಚಿತವಾದುವುಗಳೇ ಆಗಿವೆ. ನಾವು ಅವನ್ನು ಅನ್ಯಥಾಮಾಡುವ ಸಾಧ್ಯತೆಯಿಲ್ಲ. ನಾವಿನ್ನು ಧೌಮ್ಯರೇ ಮೊದಲಾದ ಮಹಾತ್ಮರನ್ನೂ, ನಮ್ಮ ಪರಿವಾರದವರನ್ನೂ ಉಚಿತವಾದ ಸ್ಥಳಗಳಿಗೆ ಕಳುಹಿಸಿಕೊಡಬೇಕಾಗಿದೆ. ನಮ್ಮ ಪುರೋಹಿತರಾದ ಧೌಮ್ಯರು ಅಡಿಗೆಯವರಿಂದಲೂ ಮತ್ತು ಪಾಕಶಾಲಾಧ್ಯಕ್ಷರಿಂದಲೂ ಕೂಡಿದವರಾಗಿ ದ್ರುಪದರಾಜನ ಪಟ್ಟಣಕ್ಕೆ ಹೋಗಿ ಅಲ್ಲಿ ನಮ್ಮ ಅಗ್ನಿಹೋತ್ರಾದಿಗಳನ್ನು ರಕ್ಷಿಸಿಕೊಂಡಿರಲಿ. ಇಂದ್ರಸೇನನೇ ಮೊದಲಾದ ಸೇವಕರು ನಮ್ಮ ರಥಗಳೊಡನೆ ದ್ವಾರವತಿಯನ್ನು ಸೇರಲಿ. ಹೀಗೆ ಮಾಡುವುದು ಸಾಧುವೆಂದು ನನಗನ್ನಿಸುತ್ತದೆ. ದ್ರೌಪದಿಯ ಪರಿಚಾರಿಕೆಯರಾದ ಸ್ತ್ರೀಯರೂ ಕೂಡ ಅಡಿಗೆಯವರು ಮತ್ತು ಪಾಕಶಾಲಾಧ್ಯಕ್ಷರೊಡನೆ ಪಾಂಚಾಲದೇಶಕ್ಕೆ ಪ್ರಯಾಣಮಾಡಲಿ. ಕಳೆದ ಹನ್ನೆರಡು ವರ್ಷಗಳಿಂದ ನಮ್ಮೊಡನಿದ್ದ ಇವರೆಲ್ಲರೂ ದ್ವಾರವತಿಗಾಗಲೀ ಪಾಂಚಾಲನಗರಿಗಾಗಲೀ ಪ್ರಯಾಣಮಾಡಿದರೆ ಪಾಂಡವರೆಲ್ಲಿದ್ದಾರೆಂದು ಅಲ್ಲಿಯ ಪ್ರಜೆಗಳೂ ಮತ್ತು ನಮ್ಮ ಬಂಧು-ಬಾಂಧವರೂ ಪ್ರಶ್ನಿಸುವುದು ಸ್ವಾಭಾವಿಕ. ನಾವು ಇವರುಗಳನ್ನು ಕಳುಹಿಸಿಕೊಡುವಾಗ ಈ ಒಂದು ವಿಷಯವನ್ನು ಮಾತ್ರ ಇವರಿಗೆ ಸ್ಪಷ್ಟವಾಗಿ ಹೇಳಿ ಕಳುಹಿಸಬೇಕು. ಆ ಪ್ರಶ್ನೆಗಳಿಗೆಲ್ಲಕ್ಕೂ ಇವರು ಈ ಒಂದೇ ಉತ್ತರವನ್ನು ಹೇಳಬೇಕು. ‘ಗತಾ

ಹ್ಯಸ್ಮಾನಪಾಹಾಯ ಸರ್ವೇ ದ್ವೈತವನಾದಿತಿ' 'ಪಾಂಡವರು ಎಲ್ಲಿದ್ದಾರೆಂಬ ವಿಷಯವೇನೂ ನಮಗೆ ತಿಳಿಯದು. ಅವರೆಲ್ಲರೂ ನಮ್ಮನ್ನು ಬಿಟ್ಟು ದ್ವೈತವನದಿಂದ ಹೊರಟುಹೋದರು'–ಎಂದು ಮಾತ್ರ ಹೇಳುವಂತೆ ಅವರಿಗೆ ನಾವು ತಿಳಿಯಹೇಳಬೇಕು."

ಜನಮೇಜಯ! ಹೀಗೆಂಬುದಾಗಿ ಪಾಂಡವರು ಪರಸ್ಪರವಾಗಿ ಸಮಾಲೋಚಿಸಿ ತಮ್ಮ-ತಮ್ಮ ಕರ್ತವ್ಯಗಳನ್ನು ನಿರ್ಧರಿಸಿಕೊಂಡನಂತರ ಆಶ್ರಮದಲ್ಲಿದ್ದ ಪುರೋಹಿತರಾದ ಧೌಮ್ಯರೊಡನೆ ಸಮಾಲೋಚಿಸಿದರು. ಧೌಮ್ಯರು ಯುಧಿಷ್ಠಿರನ ಆಶಯವನ್ನು ತಿಳಿದು ಪಾಂಡವರನ್ನು ಕುರಿತು ಹೇಳಿದರು : "ಬ್ರಾಹ್ಮಣರ ವಿಷಯದಲ್ಲಿ, ಸುಹೃದರ ವಿಷಯದಲ್ಲಿ, ರಥಗಳ ಮತ್ತು ಆಯುಧಗಳ ವಿಷಯದಲ್ಲಿ ಮತ್ತು ಅಗ್ನಿಗಳ ವಿಷಯದಲ್ಲಿ ನೀವು ಮಾಡಲಿಚ್ಛಿಸಿರುವ ವ್ಯವಸ್ಥೆಯು ಬಹಳ ಸಮರ್ಪಕವಾಗಿದೆ. ಆದರೆ ಈ ಒಂದು ವಿಷಯವನ್ನು ಮಾತ್ರ ನಿಮ್ಮೊಡನೆ ಒತ್ತಿಹೇಳಲಪೇಕ್ಷಿಸುತ್ತೇನೆ. ನೀನೂ ಮತ್ತು ಅರ್ಜುನನೂ ದ್ರೌಪದಿಯನ್ನು ಸರ್ವಕಾಲಗಳಲ್ಲಿಯೂ ಸಂರಕ್ಷಿಸಬೇಕು. ಲೋಕವ್ಯವಹಾರವು ಹೇಗಿರುವುದು ಮತ್ತು ಸಾಮಾನ್ಯಮನುಷ್ಯರ ನಡೆನುಡಿಗಳು ಹೇಗಿರುವುವು ಎಂಬ ವಿಷಯವು ನಿಮಗೆ ತಿಳಿದೇ ಇರುವುದು. ಈ ವಿಷಯಗಳೆಲ್ಲವೂ ನಿಮಗೆ ತಿಳಿದಿದ್ದರೂ ಅನುರಾಗದ ಕಾರಣದಿಂದಾಗಿ ಸುಹೃದರಾದವರು ಇಂತಹ ವಿಷಯಗಳನ್ನು ಪದೇ-ಪದೇ ಹೇಳಬೇಕು. ಈ ವಿಧವಾದ ಧರ್ಮಾನುಸರಣೆಯಿಂದಲೇ ಕಾಮಾರ್ಥಗಳೂ ಲಭ್ಯವಾಗುತ್ತವೆ. ಈ ಕಾರಣದಿಂದಲೇ ನಾನು ನಿಮಗೆ ಒಂದೆರಡು ಮಾತುಗಳನ್ನು ಹೇಳಲಿದ್ದೇನೆ, ಕೇಳಿರಿ : ವಿರಾಟರಾಜನ ಅರಮನೆಯಲ್ಲಿ ನಿಮ್ಮ ವಸತಿಯ ವಿಷಯವಾಗಿ ಹೇಳುತ್ತೇನೆ. ಪರಗೃಹದಲ್ಲಿ ವಾಸಮಾಡುವುದು ಅಷ್ಟು ಸುಲಭಸಾಧ್ಯವಲ್ಲ. ಕಾಲಾನುಕ್ರಮದಲ್ಲಿ ನಾನಾವಿಧವಾದ ಕಷ್ಟ-ಕೋಟಲೆಗಳಿಗೆ ಒಳಗಾಗಲು ಕಾರಣವಾಗುತ್ತದೆ.

ರಾಜನ ಅರಮನೆಯಲ್ಲಿ ನೀವು ವಾಸಮಾಡುತ್ತಿರುವಾಗ ಅಲ್ಲಿ ಉಂಟಾಗಬಹುದಾದ ತೊಂದರೆಗಳಿಂದ ಹೇಗೆ ಪಾರಾಗಬೇಕೆಂಬ ವಿಷಯವನ್ನು ಕುರಿತು ಹೇಳುತ್ತೇನೆ. ಏಕೆಂದರೆ : 'ದುರ್ವಸಂ ಚೈವ ಕೌರವ್ಯ

**ಜಾನತಾ ರಾಜವೇಶ್ಮನಿ'** 'ರಾಜನ ಅರಮನೆಯಲ್ಲಿ ವಾಸಮಾಡುವುದು ವಿವೇಕಿಯಾಗಿರುವವನಿಗೂ ಕೆಲವು ಸಮಯಗಳಲ್ಲಿ ದುಸ್ಸಹವೆನಿಸುತ್ತದೆ.' ನೀವು ಪರಗೃಹದಲ್ಲಿ ಮಾನಿತರಾದರೂ–ಅವಮಾನಿತರಾದರೂ ಸಹನೆಯಿಂದ ಇದ್ದು ಈ ಒಂದು ವರ್ಷದ ಅಜ್ಞಾತವಾಸವನ್ನು ಮುಗಿಸಿಕೊಂಡರೆ ಹದಿನಾಲ್ಕನೆಯ ವರ್ಷ ನೀವು ಸುಖವಾಗಿ–ನಿರ್ಭೀತರಾಗಿ ಈ ಪೃಥ್ವಿಯಲ್ಲಿ ಸಂಚರಿಸಬಹುದಾಗಿದೆ.

ರಾಜನ ಅರಮನೆಯಲ್ಲಿ ವಾಸಮಾಡುವಾಗ ಈ ಕೆಲವು ನಿಯಮಗಳನ್ನೂ ನೀವು ಪರಿಪಾಲಿಸಬೇಕು.

**ದೃಷ್ಟದ್ವಾರೋ ಲಭೇದ್ದ್ರಷ್ಟುಂ ರಾಜಸ್ವೇಷು ನ ವಿಶ್ವಸೇತ್ ।**
**ತದೇವಾಸನಮನ್ವಿಚ್ಛೇದ್ಯತ್ರ ನಾಭಿಪತೇತ್ಪರಃ ॥೧೩॥**

ರಾಜನನ್ನು ಕಾಣಲು ಹೋಗುವಾಗ ಮೊದಲು ದ್ವಾರಪಾಲಕನನ್ನು ಕಂಡು, ಅವನ ಮೂಲಕವಾಗಿ ರಾಜನಿಗೆ ಹೇಳಿಕಳುಹಿಸಿ, ರಾಜನ ಅನುಜ್ಞೆಯನ್ನು ಪಡೆದು ಅನಂತರವೇ ಅರಮನೆಯೊಳಗೆ ಪ್ರವೇಶಮಾಡಬೇಕು. ರಾಜನ ಆತ್ಮೀಯರಲ್ಲಿ ಪೂರ್ಣವಿಶ್ವಾಸವನ್ನೆಂದಿಗೂ ಇಡಬಾರದು. ಇತರರು ಯಾರೂ ಕುಳಿತುಕೊಳ್ಳದ ಆಸನದಲ್ಲೇ ಕುಳಿತುಕೊಳ್ಳಬೇಕು.

**ಯೋ ನ ಯಾನಂ ನ ಪರ್ಯಙ್ಕಂ ನ ಪೀಠಂ ನ ಗಜಂ ರಥಮ್ ।**
**ಆರೋಹೇತ್ಸಮ್ಮತೋಽಸ್ಮೀತಿ ಸ ರಾಜವಸತಿಂ ವಸೇತ್ ॥೧೪॥**

ರಾಜನಿಗೆ ಪ್ರಿಯನಾಗಿರುವೆನೆಂದು ಭ್ರಮಿಸಿ ರಾಜನು ಕುಳಿತುಕೊಳ್ಳುವ (ರಾಜಯೋಗ್ಯವಾದ) ಪಲ್ಲಕ್ಕಿಯಲ್ಲಾಗಲೀ, ಮಂಚದಲ್ಲಾಗಲೀ, ಸಿಂಹಾಸನದಲ್ಲಾಗಲೀ, ಆನೆಯ ಮೇಲಾಗಲೀ, ರಥದಲ್ಲಾಗಲಿ, ಕುಳಿತುಕೊಳ್ಳಲು ಹೋಗಬಾರದು. ಅಂತಹ ಸಂಯಮಿಯೇ ರಾಜನ ಅರಮನೆಯಲ್ಲಿ ವಾಸಮಾಡಲು ಯೋಗ್ಯನಾಗುತ್ತಾನೆ.

**ಯತ್ರ ಯತ್ರೈನಮಾಸೀನಂ ಶಙ್ಕೇರನುದ್ದಿಷ್ಟಚಾರಿಣಃ ।**
**ನ ತತ್ರೋಪವಿಶೇದ್ಯೋ ವೈ ಸ ರಾಜವಸತಿಂ ವಸೇತ್ ॥೧೫॥**

ರಾಜಗೃಹದ ಯಾವ ಗುಪ್ತಸ್ಥಳದಲ್ಲಿ ಅಥವಾ ಏಕಾಂತಸ್ಥಳದಲ್ಲಿ ಕುಳಿತುಕೊಳ್ಳುವುದರಿಂದ ದುಷ್ಟಚಾರಿಗಳಾದ ರಾಜನ ಊಳಿಗದವರು ಸಂಶಯಪಡುವರೋ ಅಂತಹ ಸ್ಥಳಗಳಲ್ಲಿ ಸರ್ವಥಾ ಕುಳಿತುಕೊಳ್ಳಬಾರದು. ಈ ನಿಯಮವನ್ನು ಪರಿಪಾಲಿಸುವವನು ರಾಜನ ಅರಮನೆಯಲ್ಲಿ ವಾಸಮಾಡಬಲ್ಲನು.

**ನ ಚಾನುಶಿಷ್ಯಾದ್ರಾಜಾನಮಪೃಚ್ಛನ್ತಂ ಕದಾಚನ ।**
**ತೂಷ್ಣೀಂ ತ್ವೇನಮುಪಾಸೀತ ಕಾಲೇ ಸಮಭಿಪೂಜಯೇತ್ ॥೧೬॥**

ತಾನಾಗಿ ಕೇಳದಿರುವ ರಾಜನಿಗೆ ಯಾವ ಸಂದರ್ಭದಲ್ಲಿಯೂ ಸಲಹೆಗಳನ್ನು ಕೊಡಲು ಹೋಗಬಾರದು. ಮೌನವಾಗಿದ್ದು ರಾಜನ ಸೇವೆಯನ್ನು ಯಥೋಚಿತವಾಗಿ ಮಾಡಬೇಕು. ಸಮಯೋಚಿತವಾಗಿ ರಾಜನನ್ನು ಪ್ರಶಂಸಿಸುತ್ತಿರಬೇಕು. (ಗೌರವಿಸಬೇಕು.)

**ಅಸೂಯನ್ತಿ ಹಿ ರಾಜಾನೋ ಜನಾನನೃತವಾದಿನಃ ।**
**ತಥೈವ ಚಾವಮನ್ಯನ್ತೇ ಮನ್ತ್ರಿಣಂ ವಾದಿನಂ ಮೃಷಾ ॥೧೭॥**

ಇಲ್ಲ-ಸಲ್ಲದ ಸುಳ್ಳುಗಳನ್ನು ಸೇರಿಸಿಕೊಂಡು ಮಾತಾಡುವ ಜನರನ್ನು ರಾಜರು ದೋಷದೃಷ್ಟಿಯಿಂದ ಕಾಣುತ್ತಾರೆ. (ಅವರಲ್ಲಿ ದೋಷವೆಣಿಸುತ್ತಾರೆ.) ಹಾಗೆಯೇ ಸುಳ್ಳುಹೇಳುವ ಮಂತ್ರಿಯನ್ನು ರಾಜರು ಅಪಮಾನಗೊಳಿಸುತ್ತಾರೆ.

**ನೈಷಾಂ ದಾರೇಷು ಕುರ್ವೀತ ಮೈತ್ರೀಂ ಪ್ರಾಜ್ಞಃ ಕದಾಚನ ।**
**ಅನ್ತಃಪುರಚರಾ ಯೇ ಚ ದ್ವೇಷ್ಟಿ ಯಾನಹಿತಾಶ್ಚ ಯೇ ॥೧೮॥**

ಪ್ರಾಜ್ಞನಾದವನು ರಾಜಪತ್ನಿಯರೊಡನಾಗಲೀ, ಅಂತಃಪುರದಲ್ಲಿರುವ ಇತರರೊಡನಾಗಲೀ, ರಾಜನು ದ್ವೇಷಿಸುವವರೊಡನಾಗಲೀ, ರಾಜನಿಗೆ ಅಹಿತರಾಗಿರುವವರೊಡನಾಗಲೀ–ಮೈತ್ರಿಯನ್ನು ಬೆಳೆಸಬಾರದು.

**ವಿದಿತೇ ಚಾಸ್ಯ ಕುರ್ವೀತ ಕಾರ್ಯಾಣಿ ಸುಲಘೂನ್ಯಪಿ ।**
**ಏವಂ ವಿಚರತೋ ರಾಜ್ಞಿ ನ ಕ್ಷತಿರ್ಜಾಯತೇ ಕ್ವಚಿತ್ ॥೧೯॥**

ರಾಜನಿಗೆ ಸಂಬಂಧಿಸಿದ ಕಾರ್ಯವು ಬಹಳ ಅಲ್ಪವಾದುದೇ ಆಗಿದ್ದರೂ ಆ ಕಾರ್ಯವನ್ನು ರಾಜನ ಗಮನಕ್ಕೆ ತಂದೇ ಮಾಡಬೇಕು. ರಾಜನ ವಿಷಯದಲ್ಲಿ ಹೀಗೆ ವರ್ತಿಸುತ್ತಿದ್ದರೆ ಅಂತಹ ಮನುಷ್ಯನಿಗೆ ಯಾವ ಸಮಯದಲ್ಲಿಯೂ ಹಾನಿಯುಂಟಾಗುವುದಿಲ್ಲ.

**ಗಚ್ಛನ್ನಪಿ ಪರಾಂ ಭೂಮಿಮಪೃಷ್ಟೋ ಹ್ಯನಿಯೋಜಿತಃ ।**
**ಜಾತ್ಯನ್ಧ ಇವ ಮನ್ಯೇತ ಮರ್ಯಾದಾಮನುಚಿನ್ತಯನ್ ॥೨೦॥**

ರಾಜನ ಸಮೀಪದಲ್ಲಿಯೇ ಒಂದು ಆಸನವನ್ನು ತನಗಾಗಿ ಸಿದ್ಧಗೊಳಿಸಿರಬಹುದು. ಆ ಆಸನವು ತನಗಾಗಿಯೇ ಇಡಲ್ಪಟ್ಟಿರುವುದೆಂದು ತಿಳಿದಿದ್ದರೂ–'ಬನ್ನಿ ; ಈ ಪೀಠದಲ್ಲಿ ಕುಳಿತುಕೊಳ್ಳಿ'–ಎಂದು ಹೇಳುವ ಮುನ್ನವೇ ಆ ಪೀಠದಲ್ಲಿ ಕುಳಿತುಕೊಳ್ಳಲು ಹೋಗಬಾರದು. ಎದುರಿಗೇ ಪೀಠವಿದ್ದರೂ ರಾಜಸಭಾಮರ್ಯಾದೆಯನ್ನು ಗಮನಿಸುತ್ತಾ ಆ ಪೀಠವನ್ನು ತಾನು ಕಾಣುತ್ತಿಲ್ಲವೋ ಎಂಬಂತೆ–ಜಾತ್ಯಂಧನಂತೆ ವರ್ತಿಸಬೇಕು.

**ನ ಹಿ ಪುತ್ರಂ ನ ನಪ್ತಾರಂ ನ ಭ್ರಾತರಮರಿಂದಮಾಃ ।**
**ಸಮತಿಕ್ರಾನ್ತಮರ್ಯಾದಂ ಪೂಜಯನ್ತಿ ನರಾಧಿಪಾಃ ॥೨೧॥**

ಹೇಳದೇ-ಕೇಳದೇ ಅವರ ಸಮೀಪದಲ್ಲಿ ಹೋಗಿ ಕುಳಿತರೆ ರಾಜರು ಅದನ್ನು ಅಗೌರವಸೂಚಕವೆಂದು ಭಾವಿಸುವರು. ಪುತ್ರನನ್ನಾಗಲೀ, ಪೌತ್ರನನ್ನಾಗಲೀ, ತಮ್ಮನನ್ನೇ ಆಗಲೀ–ರಾಜಮರ್ಯಾದೆಯನ್ನು ಮೀರಿ ನಡೆಯುವವನನ್ನು ರಾಜರಾದವರು ಖಂಡಿತವಾಗಿಯೂ ಆದರಿಸುವುದಿಲ್ಲ.

**ಯತ್ನಾಚ್ಚೋಪಚರೇದೇನಮಗ್ನಿವದ್ದೇವವತ್ತ್ವಿಹ ।**
**ಅನೃತೇನೋಪಚೀರ್ಣೋ ಹಿ ಹನ್ಯಾದೇವ ನ ಸಂಶಯಃ ॥೨೨॥**

ರಾಜನನ್ನು ಸಾಕ್ಷಾತ್ ಯಜ್ಞೇಶ್ವರನೆಂದೇ ಭಾವಿಸಿ ಅವನನ್ನು ಪ್ರಯತ್ನಪೂರ್ವಕವಾಗಿ ಉಪಚರಿಸಬೇಕು. ಅನುಗ್ರಹಿಸುವ ದೇವತಾರೂಪನೆಂದೇ ಭಾವಿಸಿ ಯಥೋಚಿತವಾಗಿ ಕೌಟಿಲ್ಯರಹಿತನಾಗಿ ಅವನ ಸೇವೆ

ಯನ್ನು ಮಾಡಬೇಕು. ಒಬ್ಬನು ತನ್ನ ಸೇವೆಯನ್ನು ಕೇವಲ ಕಾಪಟ್ಯದಿಂದ ಮಾಡುತ್ತಿರುವನೆಂಬುದು ರಾಜನಿಗೆ ತಿಳಿಯಿತೆಂದರೆ ಆ ಕ್ಷಣದಲ್ಲಿಯೇ ಕಪಟ ಮಿತ್ರನನ್ನು ರಾಜನು ಧ್ವಂಸಮಾಡಿಬಿಡುವನು.

**ಯದ್ಯದ್ಭರ್ತಾನುಯುಞ್ಜೀತ ತತ್ತದೇವಾನುವರ್ತಯೇತ್ ।**
**ಪ್ರಮಾದಮವಲೇಪಂ ಚ ಕೋಪಂ ಚ ಪರಿವರ್ಜಯೇತ್ ॥೨೩॥**

ರಾಜನಾದವನು ಅಥವಾ ಸ್ವಾಮಿಯಾದವನು ಯಾವ ಕಾರ್ಯವನ್ನು ಮಾಡಲು ಹೇಳುವನೋ ಆ ಕಾರ್ಯವನ್ನೇ ಮಾಡಬೇಕು. ಯಾವ ಮಾತನ್ನು ಹೇಳುವನೋ ಆ ಮಾತಿನಂತೆಯೇ ನಡೆಯಬೇಕು. ರಾಜನ ಸೇವೆ ಮಾಡುವಾಗ ಎಚ್ಚರ ತಪ್ಪುವಿಕೆ, ಅಹಂಕಾರ ಮತ್ತು ಕೋಪ–ಇವುಗಳನ್ನು ಸಂಪೂರ್ಣವಾಗಿ ವರ್ಜಿಸಬೇಕು.

**ಸಮರ್ಥನಾಸು ಸರ್ವಾಸು ಹಿತಂ ಚ ಪ್ರಿಯಮೇವ ಚ ।**
**ಸಂವರ್ಣಯೇತ್ತದೇವಾಸ್ಯ ಪ್ರಿಯಾದಪಿ ಹಿತಂ ಭವೇತ್ ॥೨೪॥**

ಒಂದು ವಿಷಯವನ್ನು ಪ್ರತಿಪಾದನೆಮಾಡುವಾಗ ರಾಜರಿಗೆ ಸಾಧ್ಯವಾದ ಮಟ್ಟಿಗೂ ಹಿತವಾಗುವುದನ್ನೂ ಮತ್ತು ಪ್ರಿಯವಾಗುವುದನ್ನೂ ನಿಶ್ಚಯಿಸಿ ಹೇಳಬೇಕು. ಆದರೆ ಕೆಲವು ಸಮಯಗಳಲ್ಲಿ ಪ್ರಿಯವಾದುದು ಹಿತವಾಗದಿರಬಹುದು ; ಹಿತವಾದುದು ಪ್ರಿಯವಾಗದೆಯೂ ಇರಬಹುದು. ಅಂತಹ ಸಂದರ್ಭದಲ್ಲಿ ರಾಜನಿಗೆ ಪ್ರಿಯವಾದುದನ್ನು ಹೇಳದೇ ಹಿತವಾದುದನ್ನೇ ಹೇಳಬೇಕು.

**ಅನುಕೂಲೋ ಭವೇಚ್ಚಾಸ್ಯ ಸರ್ವಾರ್ಥೇಷು ಕಥಾಸು ಚ ।**
**ಅಪ್ರಿಯಂ ಚಾಹಿತಂ ಯತ್ಸ್ಯಾತ್ತದಸ್ಮೈ ನಾನುವರ್ಣಯೇತ್ ॥೨೫॥**

ದೇಶಕ್ಕೆ ಸಂಬಂಧಿಸಿದ ಸಕಲವಾದ ಆರ್ಥಿಕ ವಿಷಯಗಳಲ್ಲಿಯೂ ಕಥಾಪ್ರಸಂಗಗಳಲ್ಲಿಯೂ ಮತ್ತು ಮಾತುಕತೆಗಳಲ್ಲಿಯೂ ರಾಜನಿಗೆ ಅನುಕೂಲನಾಗಿರಬೇಕು. (ಪ್ರತಿಕೂಲನಾಗಿರಬಾರದು.) ರಾಜನಿಗೆ ಅಪ್ರಿಯವಾದ ಮತ್ತು ಅಹಿತವಾದ ವಿಷಯಗಳನ್ನು ಬಿಟ್ಟುಬಿಡಬೇಕು.

**ನಾಹಮಸ್ಯ ಪ್ರಿಯೋಸ್ಮೀತಿ ಮತ್ವಾ ಸೇವೇತ ಪಣ್ಡಿತಃ ।**
**ಅಪ್ರಮತ್ತಶ್ಚ ಸತತಂ ಹಿತಂ ಕುರ್ಯಾತ್ಪ್ರಿಯಂ ಚ ಯತ್ ॥೨೬॥**

ಪಂಡಿತನಾದವನು ಯಾವಾಗಲೂ 'ರಾಜನಿಗೆ ನಾನು ಪ್ರಿಯನಲ್ಲ' ಎಂಬುದನ್ನು ಮನದಟ್ಟುಮಾಡಿಕೊಂಡೇ ಅವನ ಸೇವೆಯನ್ನು ಜಾಗರೂಕತೆಯಿಂದ ಮಾಡಬೇಕು ಮತ್ತು ಅವನಿಗೆ ಹಿತವನ್ನೂ ಮತ್ತು ಪ್ರಿಯವನ್ನೂ ಮಾಡಬೇಕು. (ರಾಜನು ತನ್ನನ್ನು ಬಹುವಾಗಿ ಪ್ರೀತಿಸುವನೆಂದು ಭಾವಿಸಿಬಿಟ್ಟರೆ ಅವನ ಸೇವೆಯಲ್ಲಿ ಔದಾಸೀನ್ಯವು ತಲೆದೋರಬಹುದು ಮತ್ತು ಅವನಿಗೆ ತೋರಬೇಕಾದ ಗೌರವದಲ್ಲಿ ನ್ಯೂನತೆಯೂ ಉಂಟಾಗಬಹುದು.)

**ನಾಸ್ಯಾನಿಷ್ಟಾನಿ ಸೇವೇತ ನಾಹಿತೈಃ ಸಹ ಸಂವದೇತ್ ।**
**ಸ್ವಸ್ಥಾನಾನ್ನ ವಿಕಮ್ಪೇತ ಸ ರಾಜವಸತಿಂ ವಸೇತ್ ॥೨೭॥**

ರಾಜನಿಗೆ ಇಷ್ಟರಾಗದವರನ್ನು ಸೇವಿಸಲು ಹೋಗಬಾರದು. ರಾಜನಿಗೆ ಅಹಿತರಾದವರೊಡನೆ ಮಾತನಾಡಲೂ ಬಾರದು. ತಾನಿರುವ ಸ್ಥಾನದಿಂದ ವಿಚಲಿತನಾಗಬಾರದು. ( ತನಗೆ ಉನ್ನತಮಟ್ಟದ ಸ್ಥಾನಬೇಕೆಂಬ ಆಶೆಯನ್ನು ತೋರಬಾರದು. ) ಇಂತಹವನು ರಾಜನ ಅರಮನೆಯಲ್ಲಿ ವಾಸಮಾಡ ಬಲ್ಲನು.

**ದಕ್ಷಿಣಂ ವಾಥ ವಾಮಂ ವಾ ಪಾರ್ಶ್ವಮಾಸೀತ ಪಣ್ಡಿತಃ ।**
**ರಕ್ಷಿಣಾಂ ಹ್ಯಾತ್ತಶಸ್ತ್ರಾಣಾಂ ಸ್ಥಾನಂ ಪಶ್ಚಾದ್ವಿಧೀಯತೇ ॥೨೮॥**

ಪಂಡಿತನಾದವನು ಯಾವಾಗಲೂ ರಾಜನ ಬಲಪಾರ್ಶ್ವದಲ್ಲಾಗಲೀ ಎಡಪಾರ್ಶ್ವದಲ್ಲಾಗಲೀ ಕುಳಿತುಕೊಳ್ಳಬೇಕು. ರಾಜನ ಹಿಂಭಾಗವು ಶಸ್ತ್ರಧಾರಿಗಳಾದ ರಾಜನ ಅಂಗರಕ್ಷಕರು ನಿಂತುಕೊಳ್ಳುವ ಸ್ಥಾನವಾಗಿದೆ.

**ನಿತ್ಯಂ ಹಿ ಪ್ರತಿಷಿದ್ಧಂ ತು ಪುರಸ್ತಾದಾಸನಂ ಮಹತ್ ।**
**ನ ಚ ಸಂದರ್ಶನೇ ಕಿಞ್ಚಿತ್ಪ್ರವೃತ್ತಮಪಿ ಸಂಜಯೇತ್ ।**
**ಅಪಿ ಹ್ಯೇತದ್ದರಿದ್ರಾಣಾಂ ವ್ಯಲೀಕಸ್ಥಾನಮುತ್ತಮಮ್ ॥೨೯॥**

ರಾಜನೆದುರಿನಲ್ಲಿರುವ ಉಚ್ಚಾಸನದಲ್ಲಿ ಯಾವಾಗಲೂ ಕುಳಿತು

ಕೊಳ್ಳಲೇಬಾರದು. ರಾಜನನ್ನು ಸಂದರ್ಶಿಸುವಾಗಲೂ ಎಡಪಾರ್ಶ್ವದಲ್ಲಿ ಅಥವಾ ಬಲಪಾರ್ಶ್ವದಲ್ಲಿ ನಿಂತು ರಾಜನನ್ನು ಸಂದರ್ಶಿಸಬೇಕೇ ಹೊರತು ಎದುರಿಗೆ ನಿಂತು ರಾಜನನ್ನು ಸಂದರ್ಶಿಸಬಾರದು. ರಾಜನು ಬೇರೊಬ್ಬರನ್ನು ಸಂದರ್ಶಿಸುತ್ತಿರುವಾಗ, ಬೇರೊಬ್ಬರೊಡನೆ ಮಾತನಾಡುತ್ತಿರುವಾಗ ಮಧ್ಯೆ ಪ್ರವೇಶಿಸಬಾರದು. ಪರಸ್ಪರ ಮಾತನಾಡುತ್ತಿರುವಾಗ ಮಧ್ಯೆ ಪ್ರವೇಶಿಸಿ ಮಾತನಾಡಿದರೆ ರಾಜರಾದವರು ಮಾತ್ರವೇ ಕೋಪಿಸಿಕೊಳ್ಳುತ್ತಾರೆಂಬುದಲ್ಲ. ಸಾಮಾನ್ಯಜನರೂ ತಮ್ಮ ಗೆಳೆಯರೊಡನೆ ಅಥವಾ ಹಿತಚಿಂತಕರೊಡನೆ ಮಾತನಾಡುವಾಗ ಅನಾಹೂತರು ಮಧ್ಯೆ ಪ್ರವೇಶಿಸಿ ಮಾತನಾಡಿದರೆ ಅವರೂ ಅಸಮಾಧಾನಪಟ್ಟುಕೊಳ್ಳುತ್ತಾರೆ.

**ನ ಮೃಷಾಭಿಹಿತಂ ರಾಜ್ಞಾಂ ಮನುಷ್ಯೇಷು ಪ್ರಕಾಶಯೇತ್ ॥೩೦॥**

ಕೆಲವು ಸಮಯಗಳಲ್ಲಿ ರಾಜರೂ ಸುಳ್ಳು ಹೇಳುವುದುಂಟು. ಆದರೆ ರಾಜರು ಸುಳ್ಳು ಹೇಳಿದರೆಂಬುದನ್ನು ಮಾತ್ರ ಪ್ರಜೆಗಳಲ್ಲಿ ಪ್ರಕಟಿಸಬಾರದು. (ಪ್ರಜೆಗಳಿಗೆ ತಿಳಿಯುವಂತೆ ಮಾಡಬಾರದು.)

**ಅಸೂಯನ್ತಿ ಹಿ ರಾಜಾನೋ ನರಾನನೃತವಾದಿನಃ ।**
**ತಥೈವ ಚಾವಮನ್ಯನ್ತೇ ನರಾನ್ಪಣ್ಡಿತಮಾನಿನಃ ॥೩೧॥**

ತಮ್ಮ ಸುತ್ತ-ಮುತ್ತಲ ಪರಿವಾರದವರೂ, ಅಮಾತ್ಯ-ಸ್ನೇಹಿತರೂ ಸುಳ್ಳು ಹೇಳುವುದನ್ನು ರಾಜರು ಸಹಿಸುವುದಿಲ್ಲ. ಅಂತೆಯೇ ಅಹಂಭಾವವಿರುವ ಪಂಡಿತರನ್ನೂ (ತಾವೇ ಪಂಡಿತರೆಂದು ಭಾವಿಸುವವರನ್ನೂ) ರಾಜರು ಸಮಯಗಳಲ್ಲಿ ಅವಮಾನಗೊಳಿಸುವರು. (ಪಂಡಿತನಾದವನೂ ರಾಜನ ಸಮೀಪದಲ್ಲಿ ವಿನೀತನಾಗಿಯೇ ವರ್ತಿಸಬೇಕು.)

**ಶೂರೋಽಸ್ಮೀತಿ ನ ದೃಪ್ತಃ ಸ್ಯಾದ್ಬುದ್ಧಿಮಾನಿತಿ ವಾ ಪುನಃ ।**
**ಪ್ರಿಯಮೇವಾಚರನ್ರಾಜ್ಞಃ ಪ್ರಿಯೋ ಭವತಿ ಭೋಗವಾನ್ ॥೩೨॥**

ತಾನು ಮಹಾಶೂರನಾಗಿದ್ದೇನೆಂದು ಅಹಂಕಾರಪಡಕೂಡದು ಅಥವಾ ತಾನೇ ಮಹಾಬುದ್ಧಿಶಾಲಿಯೆಂಬುದನ್ನೂ ರಾಜನ ಮುಂದೆ ತೋರಿಸಿ ಕೊಳ್ಳಬಾರದು. ರಾಜನಿಗೆ ಯಾವಾಗಲೂ ಪ್ರಿಯವನ್ನೇ ಮಾಡುತ್ತಿರಬೇಕು.

ಅಂತಹವನು ರಾಜನಿಗೆ ಪರಮಪ್ರಿಯನೂ ಆಗುವನಲ್ಲದೇ–ರಾಜನೊಡನೆ ಮೈತ್ರಿಯ ಕಾರಣದಿಂದಾಗಿ ರಾಜಮಿತ್ರನಿಗೆ ಯೋಗ್ಯವಾದ ಸುಖೋಪ ಭೋಗಗಳನ್ನೂ ಪಡೆಯುತ್ತಾನೆ.

**ಐಶ್ವರ್ಯಂ ಪ್ರಾಪ್ಯ ದುಷ್ಪ್ರಾಪಂ ಪ್ರಿಯಂ ಪ್ರಾಪ್ಯ ಚ ರಾಜತಃ ।**
**ಅಪ್ರಮತ್ತೋ ಭವೇದ್ರಾಜ್ಞಃ ಪ್ರಿಯೇಷು ಚ ಹಿತೇಷು ಚ ॥೩೩॥**

ಮೇಲೆ ಹೇಳಿದಂತೆ ರಾಜನೊಡನೆ ನಡೆದುಕೊಂಡು ಅವನ ಮೈತ್ರಿಯನ್ನು ಸಂಪಾದಿಸಿದರೆ ಬಹಳ ಕಷ್ಟದಿಂದಲೂ ಪಡೆಯಲಾಗದ ಐಶ್ವರ್ಯವನ್ನೂ ಪಡೆಯಬಹುದು. ರಾಜನಿಗೆ ಹಿತವನ್ನೇ ಬಯಸಿ ಅದಕ್ಕಾಗಿಯೇ ಶ್ರಮಿಸಿ ಕಾರ್ಯಮಾಡುತ್ತಿದ್ದರೆ ರಾಜನ ಇನ್ನೂ ಹೆಚ್ಚಿನ ಪ್ರೀತಿಯನ್ನೂ ಗಳಿಸಬಹುದು. ಆದರೆ ಹೆಚ್ಚು ಐಶ್ವರ್ಯವನ್ನು ಪಡೆದ ಕಾರಣದಿಂದ ಅಥವಾ ರಾಜನ ವಿಶೇಷ ಪ್ರೀತಿಗೆ ಕಾರಣನಾಗಿರುವೆನೆಂಬ ಭಾವನೆಯಿಂದ ರಾಜನಿಗೆ ಪ್ರಿಯವಾದ ಮತ್ತು ಹಿತವಾದ ಕಾರ್ಯಗಳ ವಿಷಯದಲ್ಲಿ ಔದಾಸೀನ್ಯವನ್ನು ತೋರಬಾರದು.

**ಯಸ್ಯ ಕೋಪೋ ಮಹಾಬಾಧಃ ಪ್ರಸಾದಶ್ಚ ಮಹಾಫಲಃ ।**
**ಕಸ್ತಸ್ಯ ಮನಸಾಪೀಚ್ಛೇದನರ್ಥಂ ಪ್ರಾಜ್ಞಸಮ್ಮತಃ ॥೩೪॥**

ಯಾವನ ಕೋಪವು ಮಹತ್ತಾದ ಉಪದ್ರವಕ್ಕೆ ಕಾರಣವಾಗುವುದೋ ಮತ್ತು ಯಾವನ ಪ್ರಸನ್ನತೆಯು ಮಹಾಫಲದಾಯಕವೋ–ಅಂತಹ ರಾಜನ ವಿಷಯದಲ್ಲಿ ಅನರ್ಥಕಾರಿಯಾದ ವಿಷಯವನ್ನು ಯಾವ ಬುದ್ಧಿವಂತನು ತಾನೇ ತನ್ನ ಮನಸ್ಸಿನಲ್ಲಾದರೂ ಆಲೋಚಿಸುತ್ತಾನೆ?

**ನ ಚೋಷ್ಠೌ ನ ಭುಜೌ ಜಾನೂ ನ ಚ ವಾಕ್ಯಂ ಸಮಾಕ್ಷಿಪೇತ್ ।**
**ಸದಾ ವಾತಂ ಚ ವಾಚಂ ಚ ಷ್ಠೀವನಂ ಚಾಚರೇಚ್ಛನೈಃ ॥೩೫॥**

ರಾಜನ ಮುಂದೆ ನಿಂತಿರುವಾಗ ತುಟಿಗಳನ್ನು ಆಡಿಸುತ್ತಿರಬಾರದು. ತೋಳುಗಳನ್ನೂ ಮಂಡಿಗಳನ್ನೂ (ಕಾಲುಗಳನ್ನೂ) ವೃಥಾ ಆಡಿಸಬಾರದು. ವ್ಯರ್ಥಾಲಾಪವನ್ನು ಮಾಡಲಾಗದು. ಇನ್ನೊಬ್ಬರ ಮಾತಿನ ಮಧ್ಯದಲ್ಲಿ ಆಕ್ಷೇಪಿಸಬಾರದು. ಆಕಳಿಸಬೇಕಾದರೆ ನಿಧಾನವಾಗಿ ಶಬ್ದವಾಗದ ರೀತಿಯಲ್ಲಿ

ಬಟ್ಟೆಯನ್ನು ಬಾಯಿಗೆ ಮುಚ್ಚಿಕೊಂಡು ಆಕಳಿಸಬೇಕು. ಅಂತೆಯೇ ಬಹಳ ಮೃದುವಾಗಿಯೂ, ನಿಧಾನವಾಗಿಯೂ ಮಾತನಾಡಬೇಕು. ಎಂಜಲನ್ನೂ ಪದೇ ಪದೇ ಉಗುಳಲು ಹೋಗಬಾರದು. ಜೊಲ್ಲು ಸುರಿಸಬಾರದು.

('ಅಪಾನವಾಯುವನ್ನು ಬಿಡಬೇಕಾಗಿ ಬಂದರೂ ಶಬ್ದವಾಗದಂತೆ ಮತ್ತೊಬ್ಬರಿಗೆ ತಿಳಿಯದ ರೀತಿಯಲ್ಲಿ ಬಿಡಬೇಕು' ಎಂದೂ ಈ ವಾಕ್ಯಕ್ಕೆ ಅರ್ಥಮಾಡಬಹುದು.)

**ಹಾಸ್ಯವಸ್ತುಷು ಚಾನ್ಯಸ್ಯ ವರ್ತಮಾನೇಷು ಕೇಷುಚಿತ್ ।**
**ನಾತಿಗಾಢಂ ಪ್ರಹೃಷ್ಯೇತ ನ ಚಾಪ್ಯುನ್ಮತ್ತವದ್ಧಸೇತ್ ॥೩೬॥**

**ನ ಚಾತಿಧೈರ್ಯೇಣ ಚರೇದ್ಗುರುತಾಂ ಹಿ ವ್ರಜೇತ್ತತಃ ।**
**ಸ್ಮಿತಂ ತು ಮೃದುಪೂರ್ವೇಣ ದರ್ಶಯೇತ ಪ್ರಸಾದಜಮ್ ॥೩೭॥**

ಯಾವುದಾದರೂ ಹಾಸ್ಯಕಾರಕವಾದ ಪ್ರಸಂಗವು ರಾಜಸಭೆಯಲ್ಲಿ ನಡೆದಾಗ ಉನ್ಮತ್ತನಂತೆ ಗಹಗಹಿಸಿ ನಗಬಾರದು. (ಅತಿಯಾಗಿ ಸಂತೋಷಿಸಬಾರದು.) ಬಹಳ ಸ್ಥೈರ್ಯವನ್ನು ತೋರುವ ಸಲುವಾಗಿ ಜಡನಂತೆಯೂ ಕುಳಿತುಕೊಳ್ಳಬಾರದು. ಮನಸ್ಸಿನಲ್ಲಿ ಪ್ರಸನ್ನತೆಯನ್ನು ಹೊಂದಿ ಮೃದುವಾದ ಮುಗುಳ್ನಗೆಯನ್ನು ಮಾತ್ರ ಸೂಚಿಸಬೇಕು.

**ಲಾಭೇ ನ ಹರ್ಷಯೇದ್ಯಸ್ತು ನ ವ್ಯಥೇದ್ಯೋಽವಮಾನಿತಃ ।**
**ಅಸಮ್ಮೂಢಶ್ಚ ಯೋ ನಿತ್ಯಂ ಸ ರಾಜವಸತಿಂ ವಸೇತ್ ॥೩೮॥**

ಯಾವನು ತಾನು ಅಪೇಕ್ಷಿಸಿದ ವಸ್ತುವನ್ನು ಪಡೆದುದರಿಂದ ಹೆಚ್ಚು ಸಂತುಷ್ಟನಾಗುವುದಿಲ್ಲವೋ, ಯಾವನು ಯಾವುದೋ ಕಾರಣದಿಂದ ತನಗೆ ಅಪಮಾನವಾದುದಕ್ಕಾಗಿ ವ್ಯಥೆಪಡುವುದಿಲ್ಲವೋ, ಯಾವನು ಯಾವಾಗಲೂ ಮೋಹಶೂನ್ಯನಾಗಿ ಜಾಗರೂಕತೆಯಿಂದಿರುವನೋ–ಅಂತಹವನು ರಾಜನ ಮನೆಯಲ್ಲಿ ವಾಸಿಸಬಹುದು.

**ರಾಜಾನಂ ರಾಜಪುತ್ರಂ ವಾ ಸಂವರ್ಣಯತಿ ಯಃ ಸದಾ ।**
**ಅಮಾತ್ಯಃ ಪಣ್ಡಿತೋ ಭೂತ್ವಾ ಸ ಚಿರಂ ತಿಷ್ಠತೇ ಪ್ರಿಯಃ ॥೩೯॥**

ಪಂಡಿತನಾದ ಯಾವ ಅಮಾತ್ಯನು ರಾಜನನ್ನಾಗಲೀ ರಾಜಪುತ್ರ ನನ್ನಾಗಲೀ ಸರ್ವಕಾಲದಲ್ಲಿಯೂ ಪ್ರಶಂಸೆಮಾಡುತ್ತಿರುವನೋ-ಅವನು ರಾಜನ ಪ್ರೀತಿಗೆ ಪಾತ್ರನಾಗಿ ಚಿರಕಾಲ ಸುಖವಾಗಿರುವನು.

**ಪ್ರಗೃಹೀತಶ್ಚ ಯೋಽಮಾತ್ಯೋ ನಿಗೃಹೀತಸ್ತ್ವಕಾರಣೈಃ ।**
**ನ ನಿರ್ವದತಿ ರಾಜಾನಂ ಲಭತೇ ಸಮ್ಪದಂ ಪುನಃ ॥೪೧॥**

ಒಬ್ಬ ಮಂತ್ರಿಯು ಮೊದಲು ರಾಜನಿಂದ ಪುರಸ್ಕೃತನಾಗಿರಬಹುದು. ಅದೇ ಮಂತ್ರಿಯು ಕಾಲಕರ್ಮಸಂಯೋಗದಿಂದ ನಿಷ್ಕಾರಣವಾಗಿ ರಾಜನ ಕೋಪಕ್ಕೆ ಪಾತ್ರನಾಗಿ ರಾಜನಿಂದ ನಿಗೃಹೀತನೂ ಆಗಬಹುದು ( ಶಿಕ್ಷಿತನಾಗ ಬಹುದು. ) ಶಿಕ್ಷೆಯನ್ನು ಅನುಭವಿಸುವ ಕಾಲದಲ್ಲಿಯೂ ( ಅಧಿಕಾರ ಹೀನನಾದ ಕಾಲದಲ್ಲಿಯೂ ) ಬುದ್ಧಿವಂತನಾದ ಆ ಮಂತ್ರಿಯು ರಾಜನನ್ನು ನಿಂದಿಸದಿದ್ದರೆ ( ತನಗೆ ಒದಗಿರುವ ಕಷ್ಟವು ದೈವಾಯತ್ತವಾದುದೆಂದು ಸಮಾಧಾನಪಟ್ಟುಕೊಂಡು ಬಂದ ಕಷ್ಟವನ್ನು ಅನುಭವಿಸಿದರೆ ) ಅಂತಹ ಕ್ಷಮಾಶೀಲನು ಪುನಃ ಸಂಪತ್ತನ್ನು ( ಸರ್ವಸುಖವನ್ನು ) ಪಡೆಯುತ್ತಾನೆ. (ಮತ್ತೊಂದು ಸಮಯದಲ್ಲಿ ರಾಜನೇ ತನ್ನ ತಪ್ಪನ್ನು ತಿಳಿದು ವ್ಯರ್ಥವಾಗಿ ಶಿಕ್ಷಿಸಿದ ಮಂತ್ರಿಯನ್ನು ಯಥಾಪೂರ್ವಕವಾಗಿ ಪುರಸ್ಕರಿಸುತ್ತಾನೆ.)

**ಪ್ರತ್ಯಕ್ಷಂ ಚ ಪರೋಕ್ಷಂ ಚ ಗುಣವಾದೀ ವಿಚಕ್ಷಣಃ ।**
**ಉಪಜೀವೀ ಭವೇದ್ರಾಜ್ಞೋ ವಿಷಯೇ ಯೋಽಪಿ ವಾ ಭವೇತ್ ॥**

ಯಾವನು ರಾಜಾಶ್ರಯವನ್ನು ಪಡೆದು ಅರಮನೆಯಲ್ಲಾಗಲೀ, ರಾಜ್ಯದಲ್ಲಾಗಲೀ ಜೀವಿಸಿರುತ್ತಾನೆಯೋ-ಅಂತಹವನು ರಾಜನ ಪ್ರತ್ಯಕ್ಷ ದಲ್ಲಿಯೇ ಆಗಲೀ, ಪರೋಕ್ಷದಲ್ಲಿಯೇ ಆಗಲೀ-ಬುದ್ಧಿವಂತಿಕೆಯಿಂದ ರಾಜನ ಗುಣಗಳನ್ನೇ ಕೊಂಡಾಡುತ್ತಿರಬೇಕು.

**ಅಮಾತ್ಯೋ ಹಿ ಬಲಾದ್ಭೋಕ್ತುಂ ರಾಜಾನಂ ಪ್ರಾರ್ಥಯೇತ ಯಃ ।**
**ನ ಸ ತಿಷ್ಠೇಚ್ಚಿರಂ ಸ್ಥಾನಂ ಗಚ್ಛೇಚ್ಚ ಪ್ರಾಣಸಂಶಯಮ್ ॥೪೨॥**

ಯಾವ ಮಂತ್ರಿಯು ತಾನು ಇಚ್ಛಿಸುವ ವಸ್ತುವನ್ನು ಬಲಪ್ರಯೋಗ ದಿಂದಲಾದರೂ ಪಡೆಯುವ ದಿಟ್ಟತನದಿಂದ ರಾಜನನ್ನು ಪ್ರಾರ್ಥಿಸುತ್ತಾ

ಹೋಗುತ್ತಾನೆಯೋ ಅಂತಹವನು ತಾನಿರುವ ಸ್ಥಾನದಲ್ಲಿ ಚಿರಕಾಲವಿರುವುದಿಲ್ಲ. ಇಷ್ಟು ಮಾತ್ರವಲ್ಲ ; ಅವನ ಪ್ರಾಣವುಳಿಯುವುದೂ ಸಂಶಯವೇ ಸರಿ.

**ಶ್ರೇಯಃ ಸದಾऽತ್ಮನೋ ದೃಷ್ಟ್ವಾ ಪರಂ ರಾಜ್ಞಾ ನ ಸಂವದೇತ್ ।**
**ವಿಶೇಷಯೇಚ್ಚ ರಾಜಾನಂ ಯೋಗ್ಯಭೂಮಿಷು ಸರ್ವದಾ ॥೪೩॥**

ತನ್ನ ಶ್ರೇಯಸ್ಸಿನ ಮೇಲೆಯೇ ಸದಾ ದೃಷ್ಟಿಯುಳ್ಳವನು ರಾಜನೊಡನೆ ಹೆಚ್ಚಾಗಿ ಮಾತನಾಡಲು ಹೋಗಬಾರದು. ಯೋಗ್ಯವಾದ ಸ್ಥಳಗಳಲ್ಲಿ, ಯೋಗ್ಯರಾದವರೊಡನೆ, ರಾಜನಿಗೆ ಹಿತರಾದವರೊಡನೆ ರಾಜನನ್ನು ವಿಶೇಷವಾಗಿ ಹೊಗಳಬೇಕು. ರಾಜನಿಗೆ ವಿಶೇಷಗೌರವವನ್ನೂ ತೋರಿಸಬೇಕು. ರಾಜನು ತನಗಿಂತಲೂ ಮೇಲು ; ತಾನು ಕೀಳು–ಎಂಬಂತೆ ನಡೆದುಕೊಳ್ಳಬೇಕು.

**ಅಮ್ಲಾನೋ ಬಲವಾಞ್ಶೂರಶ್ಛಾಯೇವಾನುಗತಃ ಸದಾ ।**
**ಸತ್ಯವಾದೀ ಮೃದುರ್ದಾನ್ತಃ ಸ ರಾಜವಸತಿಂ ವಸೇತ್ ॥೪೪॥**

ಯಾವನು ಉತ್ಸಾಹಶೀಲನಾಗಿರುವನೋ, ಬುದ್ಧಿಬಲಯುಕ್ತನಾಗಿರುವನೋ, ಸತ್ಯಸಂಧನಾಗಿಯೂ–ಮೃದುಸ್ವಭಾವದವನಾಗಿಯೂ–ಜಿತೇಂದ್ರಿಯನಾಗಿಯೂ ಇರುವನೋ, ನೆಳಲಿನಂತೆ ರಾಜನನ್ನು ಸರ್ವಕಾಲದಲ್ಲಿಯೂ ಅನುಸರಿಸಿಕೊಂಡಿರುವನೋ–ಅಂತಹವನು ರಾಜನ ಅರಮನೆಯಲ್ಲಿ ವಾಸಮಾಡಬಲ್ಲನು.

**ಅನ್ಯಸ್ಮಿನ್ಪ್ರೇಷ್ಯಮಾಣೇ ತು ಪುರಸ್ತಾದ್ಯಃ ಸಮುತ್ಪತೇತ್ ।**
**ಅಹಂ ಕಿಂ ಕರವಾಣೀತಿ ಸ ರಾಜವಸತಿಂ ವಸೇತ್ ॥೪೫॥**

ರಾಜನು ಯಾವುದಾದರೂ ಕೆಲಸಕ್ಕಾಗಿ ಒಬ್ಬನನ್ನು ಕರೆದು ಕೆಲಸದ ವಿಷಯವಾಗಿ ಹೇಳುತ್ತಿರುವಾಗ ಕರೆಯದೆಯೇ ರಾಜನ ಬಳಿಗೆ ಹೋಗಿ 'ನಾನೇನು ಮಾಡಲಿ, ಪ್ರಭೋ!'–ಎಂದು ಪ್ರಾರ್ಥಿಸಿ ರಾಜಾಜ್ಞೆಯನ್ನು ನಿರ್ವಹಿಸುವ ಆಸಕ್ತಿಯಿರುವವನು ರಾಜನ ಅರಮನೆಯನ್ನು ತನ್ನ ವಾಸದ ಮನೆಯನ್ನಾಗಿ ಮಾಡಿಕೊಳ್ಳಬಲ್ಲನು.

**ಅನ್ತರೇ ಚೈವ ಬಾಹ್ಯೇ ಚ ರಾಜ್ಞಾ ಯಶ್ಚಾಥ ಸರ್ವದಾ ।**
**ಆದಿಷ್ಟೋ ನೈವ ಕಮ್ಪೇತ ಸ ರಾಜವಸತಿಂ ವಸೇತ್ ॥೪೬॥**

ಆಂತರಿಕವಾದ ಕಾರ್ಯವನ್ನಾಗಲೀ ( ಅಂತಃಪುರ-ಕೋಶಾಗಾರ ರಕ್ಷಣೆ) ಬಾಹ್ಯವಾದ ರಕ್ಷಣಾಕಾರ್ಯವನ್ನಾಗಲೀ ರಾಜನು ಒಪ್ಪಿಸಿದ ನಂತರ ಯಾವಾತನು ಸ್ವಲ್ಪವೂ ಭಯಪಡದೇ ತನ್ನ ಕಾರ್ಯವನ್ನು ವಿಚಕ್ಷಣತೆಯಿಂದ ನಿರ್ವಹಿಸುತ್ತಾನೆಯೋ–ಅಂತಹವನು ರಾಜನ ಅರಮನೆಯಲ್ಲಿರಲು ಯೋಗ್ಯನಾಗಿರುತ್ತಾನೆ.

**ಯೋ ವೈ ಗೃಹೇಭ್ಯಃ ಪ್ರವಸನ್ಪ್ರಿಯಾಣಾಂ ನಾನುಸಂಸ್ಮರೇತ್ ।**
**ದುಃಖೇನ ಸುಖಮನ್ವಿಚ್ಛೇತ್ಸ ರಾಜವಸತಿಂ ವಸೇತ್ ॥೪೭॥**

ಮನೆಯಿಂದ ಹೊರಟು ದೂರದೇಶಕ್ಕೆ ಪ್ರಯಾಣಮಾಡಿದವನು ಮನೆಯಲ್ಲಿರುವ ತನಗೆ ಪ್ರಿಯರಾದ ಬಂಧುಜನರನ್ನು ಪದೇ ಪದೇ ಸ್ಮರಿಸ ಬಾರದು. ಪರದೇಶದಲ್ಲುಂಟಾಗಬಹುದಾದ ಕಷ್ಟಗಳನ್ನೂ ಸಹಿಸಿಕೊಂಡು ಸುಖಪ್ರಾಪ್ತಿಗೆ ಸತತವಾಗಿ ಪ್ರಯತ್ನಿಸುವವನು ರಾಜನ ಅರಮನೆಯಲ್ಲಿರಲು ಅರ್ಹನಾಗುತ್ತಾನೆ.

**ಸಮವೇಷಂ ನ ಕುರ್ವೀತ ನೋಚ್ಚೈಃ ಸಂನಿಹಿತೋ ವಸೇತ್ ।**
**ನ ಮನ್ತ್ರಂ ಬಹುಧಾ ಕುರ್ಯಾದೇವಂ ರಾಜ್ಞಃ ಪ್ರಿಯೋ ಭವೇತ್ ॥**

ತನಗೂ ಸಹ ಉತ್ತಮವಾದ ವಸ್ತ್ರಗಳನ್ನು ತೊಡುವ ಸಾಧ್ಯತೆ ಯಿದ್ದರೂ ರಾಜನಿಗೆ ಸರಿಸಮವಾಗಿ ವೇಷ-ಭೂಷಣಗಳನ್ನು ಧರಿಸಬಾರದು. ರಾಜನು ಕುಳಿತುಕೊಂಡಿರುವುದಕ್ಕಿಂತಲೂ ಉನ್ನತವಾಗಿರುವ ಪೀಠದಲ್ಲಿ ಕುಳಿತುಕೊಳ್ಳಬಾರದು. ರಾಜನು ಹೇಳುವ ರಹಸ್ಯವಿಷಯಗಳನ್ನು ಬಹಿರಂಗ ಪಡಿಸಬಾರದು. ಈ ರೀತಿಯಾಗಿ ನಡೆದುಕೊಂಡರೆ ಅಂತಹವನು ರಾಜನಿಗೆ ಪ್ರಿಯನಾಗುತ್ತಾನೆ.

**ನ ಕರ್ಮಣಿ ನಿಯುಕ್ತಃ ಸನ್ಧನಂ ಕಿಞ್ಚಿದಪಿ ಸ್ಪೃಶೇತ್ ।**
**ಪ್ರಾಪ್ನೋತಿ ಹಿ ಹರನ್ದ್ರವ್ಯಂ ಬನ್ಧನಂ ಯದಿ ವಾ ವಧಮ್ ॥೪೯॥**

ರಾಜಕಾರ್ಯದಲ್ಲಿ ನಿಯುಕ್ತನಾದವನು ತನ್ನ ಸ್ವಂತ ಉಪಯೋಗಕ್ಕಾಗಿ ಅಲ್ಪದ್ರವ್ಯವನ್ನೂ ಉಪಯೋಗಿಸಿಕೊಳ್ಳಬಾರದು. ಆಗಾಗ ರಾಜನಿಗೆ

ತಿಳಿಯದಂತೆ ರಾಜಧನವನ್ನು ಅಪಹಾರಮಾಡಬಹುದಾದ ಸಂಭವವಿದ್ದರೂ ಅವನು ಮಾಡುವ ದ್ರವ್ಯಾಪಹರಣವು ಕ್ರಮೇಣ ರಾಜನಿಗೆ ತಿಳಿಯುತ್ತದೆ. ದ್ರವ್ಯಾಪಹಾರಕನು ಬಂಧಿತನಾಗುತ್ತಾನೆ ಅಥವಾ ವಧಿಸಲ್ಪಡುತ್ತಾನೆ.

**ಯಾನಂ ವಸ್ತ್ರಮಲಜ್ಕಾರಂ ಯಚ್ಚಾನ್ಯತ್ಸಮ್ಪ್ರಯಚ್ಛತಿ ।**
**ತದೇವ ಧಾರಯೇನ್ನಿತ್ಯಮೇವಂ ಪ್ರಿಯತರೋ ಭವೇತ್ ॥೫೦॥**

ರಾಜನು ಸುಪ್ರೀತನಾಗಿ ಕೊಡುವ ವಸ್ತ್ರಾಲಂಕಾರಗಳನ್ನು ಅನುದಿನವೂ ತೊಟ್ಟುಕೊಳ್ಳಬೇಕು. ರಾಜನು ಕೊಟ್ಟ ವಾಹನದಲ್ಲಿಯೇ ಪ್ರಯಾಣಮಾಡ ಬೇಕು ಮತ್ತು ರಾಜನು ಕೊಡುವ ಯಾವ ಪಾರಿತೋಷಿಕಗಳನ್ನೇ ಆಗಲಿ– ರಾಜನಿಗೂ ತಿಳಿಯುವಂತೆ, ರಾಜನ ಕೊಡುಗೆಗಳು ಇತರರಿಗೂ ತಿಳಿಯುವಂತೆ ಉಪಯೋಗಿಸುತ್ತಿರಬೇಕು. ಹೀಗೆ ಮಾಡುವುದರಿಂದ ರಾಜನಿಗೆ ಬಹಳ ಪ್ರಿಯನಾಗುತ್ತಾನೆ.

ಪಾಂಡುನಂದನರೇ! ನಾನು ಹೇಳಿದ ರೀತಿಯಲ್ಲಿ ನೀವು ನಿಮ್ಮ ಮನಸ್ಸುಗಳನ್ನು ಪ್ರಯತ್ನಪೂರ್ವಕವಾಗಿ ಹತೋಟಿಯಲ್ಲಿಟ್ಟುಕೊಂಡು ಈ ಒಂದು ವರ್ಷವನ್ನು ಕಳೆಯಿರಿ. ರಾಜನ ಅರಮನೆಯಲ್ಲಿರುವಾಗ ನಿಮ್ಮ ಗುಣ-ಶೀಲಗಳು ನಾನು ಹೇಳಿದಂತೆಯೇ ಇರಬೇಕು. ಅಜ್ಞಾತವಾಸದ ಒಂದು ವರ್ಷವು ಕಳೆದನಂತರ ನಿಮ್ಮ ರಾಜ್ಯಕ್ಕೆ ಹೋಗಿ ಇಚ್ಛಾನುಸಾರವಾಗಿ ಇರಬಹುದು."

('ಅಮಾನಿತ್ಯೈಃ' ಎಂಬ ಶ್ಲೋಕದಿಂದ ಯಾನಂ–ಎಂಬ ಶ್ಲೋಕ ದವರೆಗಿನ 39 ಶ್ಲೋಕಗಳಲ್ಲಿ ಧೌಮ್ಯರು ವಿರಾಟರಾಜನ ಅರಮನೆಯಲ್ಲಿ ಪಾಂಡವರು ಹೇಗಿರಬೇಕೆಂಬುದನ್ನು ನಿರೂಪಿಸಿರುತ್ತಾರೆ. ಇಂದಿನ ಪ್ರಜಾ ಪ್ರಭುತ್ವದಲ್ಲಿ ರಾಜರಿಗೆ ಸ್ಥಾನವಿಲ್ಲದಿದ್ದರೂ ಈಗಿರುವ ಮಂತ್ರಿಗಳೂ, ರಾಜ್ಯಪಾಲರೂ ರಾಜರಿಗಿದ್ದ ಸರ್ವಾಧಿಕಾರಗಳನ್ನೂ ಹಂಚಿಕೊಂಡಿರುತ್ತಾರೆ. ಆದುದರಿಂದ ಈಗಲೂ ನಾವು ಹಿರಿಯ ಅಧಿಕಾರಿಗಳನ್ನು ಸಂದರ್ಶಿಸುವ ಸಮಯದಲ್ಲಿ ಧೌಮ್ಯರು ಹೇಳಿರುವಂತೆಯೇ ವರ್ತಿಸಬೇಕಾಗುತ್ತದೆ. ಅವರ ಉಪದೇಶಗಳು ಎಲ್ಲ ಕಾಲಕ್ಕೂ ಅನ್ವಯಿಸುತ್ತವೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ರಾಜ್ಯಪಾಲರೂ, ಮಂತ್ರಿಗಳೂ ಆದರೂ ತಮ್ಮ-ತಮ್ಮ ಸ್ಥಾನ

ಗಳಿಗೆ ತಕ್ಕ ಮರ್ಯಾದೆಯನ್ನು ಎಲ್ಲರೂ ಅಪೇಕ್ಷಿಸುತ್ತಾರೆ. ಆದುದರಿಂದ ಈಗಲೂ ನಾವು ಅಧಿಕಾರಿಗಳ, ಮಂತ್ರಿಗಳ ಒಲುಮೆಯನ್ನು ಸಂಪಾದಿಸ ಬೇಕಾದರೆ ಧೌಮ್ಯರ ನೀತಿಯನ್ನೇ ಮನದಟ್ಟುಮಾಡಿಕೊಳ್ಳಬೇಕು.

ಧೌಮ್ಯರ ಸಲಹೆಗಳು ಯುಧಿಷ್ಠಿರನಿಗೆ ತಿಳಿದಿರಲಿಲ್ಲವೆಂದಲ್ಲ. ಪ್ರಾಜ್ಞ ನಾದವನಿಗೂ ಸಮಯಗಳಲ್ಲಿ ಹಿತಚಿಂತಕರು ಉಚಿತವಾದ ಹಿತವಾಕ್ಯಗಳನ್ನು ಹೇಳಲೇಬೇಕು. ಅದರಿಂದ ಹೆಚ್ಚು ಪ್ರಯೋಜನವೂ ಆಗುತ್ತದೆ.)

ಧೌಮ್ಯರ ಮಾತುಗಳನ್ನು ಕೇಳಿ ಸುಪ್ರೀತನಾದ ಯುಧಿಷ್ಠಿರನು ಅವರನ್ನು ಕುರಿತು ಹೇಳಿದನು :

"ಬ್ರಾಹ್ಮಣೋತ್ತಮರೇ! ನಿಮ್ಮಿಂದ ನಾವು ಉಪದಿಷ್ಟರಾಗಿದ್ದೇವೆ. ನಮ್ಮ ತಾಯಿಯಾದ ಕುಂತೀ ಮತ್ತು ವಿದುರ–ಇವರನ್ನು ಬಿಟ್ಟು ಇಂತಹ ಹಿತವಚನಗಳನ್ನು ನಮಗೆ ಹೇಳುವವರು ಯಾರೂ ಇರಲಿಲ್ಲ. ನೀವು ಹೇಳಿರುವಂತೆಯೇ ನಾವು ನಡೆದುಕೊಳ್ಳುತ್ತೇವೆ. ಈ ದುಃಖದಿಂದ ಪಾರಾ ಗುವುದಕ್ಕೂ ಸುಖಪ್ರಸ್ಥಾನಕ್ಕೂ ಮತ್ತು ನಮ್ಮ ವಿಜಯಕ್ಕೂ ಯಾವ ಕರ್ತವ್ಯಗಳನ್ನು ಮಾಡಬೇಕೋ ( ಹೋಮ-ಸ್ವಸ್ತಿವಾಚನಾದಿಗಳು ) ಅವು ಗಳನ್ನು ಮಾಡಲು ನೀವೇ ಸಮರ್ಥರಾಗಿರುತ್ತೀರಿ."

ಜನಮೇಜಯ! ಯುಧಿಷ್ಠಿರನು ಹೀಗೆಂದು ಹೇಳಿದ ನಂತರ ಬ್ರಾಹ್ಮಣ ಶ್ರೇಷ್ಠರಾದ ಧೌಮ್ಯರು ಪ್ರಯಾಣಕಾಲದಲ್ಲಿ ಮಾಡಬೇಕಾದ ಹೋಮ-ಸ್ವಸ್ತಿವಾಚನಾದಿಗಳನ್ನು ಯಥಾವಿಧಿಯಾಗಿ ಮಾಡಿಮುಗಿಸಿದರು.

ಪಂಚಪಾಂಡವರ ಅಗ್ನಿಹೋತ್ರಾಗ್ನಿಗಳನ್ನು ಯಥಾವಿಧಿಯಾಗಿ ಪ್ರಜ್ವ ಲಿಸಿ, ಪಾಂಡವರ ಸಂಪತ್ತಿನ ಸಮೃದ್ಧಿಯಾಗಲು, ಕೀರ್ತಿಯು ವರ್ಧಿಸಲು, ರಾಜ್ಯದ ಲಾಭವಾಗಲು ಮತ್ತು ಯುದ್ಧದಲ್ಲಿ ಜಯವಾಗಲು ಮಂತ್ರ ಪೂರ್ವಕವಾಗಿ ಹೋಮಮಾಡಿದರು.

ಅಗ್ನಿಗಳನ್ನು ಪ್ರದಕ್ಷಿಣೆಮಾಡಿ, ಬ್ರಾಹ್ಮಣರನ್ನೂ ಮತ್ತು ತಪೋ ಧನರನ್ನೂ ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಪಾಂಚಾಲಿಯನ್ನು ಮುಂದೆಮಾಡಿಕೊಂಡು ಆರು ಮಂದಿಯೂ ಒಟ್ಟಿಗೆ ( ಪಾಂಡವರೈವರು ಮತ್ತು ದ್ರೌಪದೀ ) ಪ್ರಯಾಣಹೊರಟರು.

ಪಾಂಡವರು ದ್ರೌಪದಿಯೊಡನೆ ಪ್ರಯಾಣಮಾಡಿದನಂತರ ಜಪ ಮಾಡುವವರಲ್ಲಿ ಶ್ರೇಷ್ಠರಾದ ಧೌಮ್ಯರು ಪಾಂಡವರ ಅಗ್ನಿಹೋತ್ರಾಗ್ನಿಗಳನ್ನು ತೆಗೆದುಕೊಂಡು ಪಾಂಚಾಲದೇಶಕ್ಕೆ ಪ್ರಯಾಣಮಾಡಿದರು. ಹಿಂದೆ ಯುಧಿಷ್ಠಿರನು ನಿರ್ದೇಶಿಸಿದ್ದಂತೆ ಇಂದ್ರಸೇನಾದಿ ಸೇವಕರು ರಥಾಶ್ವಗಳೊಡನೆ ದ್ವಾರವತಿಗೆ ಪ್ರಯಾಣಮಾಡಿ, ಅಲ್ಲಿ ಪಾಂಡವರ ರಥಾಶ್ವಗಳನ್ನೂ ಇತರ ವಸ್ತುಗಳನ್ನೂ ರಕ್ಷಣೆಮಾಡುತ್ತಾ ಸುಖವಾಗಿ ಕಾಲಕಳೆಯುತ್ತಿದ್ದರು.

ಳನೆಯ ಅಧ್ಯಾಯವು ಮುಗಿಯಿತು.

೫ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ಪಾಂಡವರು ವಿರಾಟನಗರದ ಸಮೀಪಕ್ಕೆ ಹೋಗಿ ಶ್ಮಶಾನದಲ್ಲಿದ್ದ ಶಮೀವೃಕ್ಷದಲ್ಲಿ ತಮ್ಮ ಆಯುಧಗಳನ್ನಿಟ್ಟುದು

ಜನಮೇಜಯ! ಬ್ರಾಹ್ಮಣರ ಆಶೀರ್ವಾದಗಳನ್ನು ಪಡೆದು ಪ್ರಯಾಣ ಹೊರಟ ಪಾಂಡವರು ಕತ್ತಿಯಿದ್ದ ಒರೆಯನ್ನು ಸೊಂಟಕ್ಕೆ ಕಟ್ಟಿ, ಕೈಯಲ್ಲಿ ಧನುಸ್ಸನ್ನು ಹಿಡಿದು, ಬೆನ್ನಿಗೆ ಬತ್ತಳಿಕೆಯನ್ನು ಬಿಗಿದು, ಕೈಬೆರಳುಗಳಿಗೆ ಚರ್ಮದಿಂದ ಮಾಡಿದ 'ಅಂಗುಲಿತ್ರ' ಗಳನ್ನು ಹಾಕಿಕೊಂಡು ಪ್ರಯಾಣ ಮಾಡುತ್ತಾ ಕಾಲಿಂದೀನದಿಯ ತೀರಪ್ರದೇಶವನ್ನು ಸೇರಿದರು. ಧನುರ್ಧಾರಿ ಗಳಾದ ಪಾಂಡವರು ಕಳೆದ ಹನ್ನೆರಡು ವರ್ಷಗಳಿಂದಲೂ ಗಿರಿದುರ್ಗ-ವನ-ದುರ್ಗಗಳಲ್ಲಿದ್ದು ಬಹಳ ದುಃಖಕರವಾದ ವನವಾಸವನ್ನು ಮುಗಿಸಿದವರಾಗಿ ತಮ್ಮ ರಾಜ್ಯವನ್ನು ಸಾಧ್ಯವಾದಷ್ಟು ಬೇಗ ಪಡೆದುಕೊಳ್ಳುವ ಆಶಯದಿಂದ ಕಾಲ್ನಡಿಗೆಯಲ್ಲಿಯೇ ಕಾಲಿಂದೀನದಿಯ ದಕ್ಷಿಣತೀರವನ್ನು ಸೇರಿದರು. ಆಹಾರಕ್ಕಾಗಿ ಮೃಗಗಳನ್ನು ಬೇಟೆಯಾಡುತ್ತಾ, ಬೇಡರೆಂದು ಹೇಳಿಕೊಳ್ಳುತ್ತಾ, ಯಕೃಲ್ಲೋಮ ಮತ್ತು ಶೂರಸೇನ ದೇಶಗಳ ಮೂಲಕವಾಗಿ ಪ್ರಯಾಣಮಾಡಿದರು. ಪ್ರಯಾಣಕಾಲದಲ್ಲಿ ಅವರಿಗೆ ದಕ್ಷಿಣಭಾಗದಲ್ಲಿ ದಶಾರ್ಣದೇಶಗಳೂ, ಉತ್ತರಭಾಗದಲ್ಲಿ ಪಾಂಚಾಲದೇಶಗಳೂ ಇದ್ದುವು. ಹೀಗೆ ಪ್ರಯಾಣಮಾಡಿ ಮತ್ಸ್ಯದೇಶವನ್ನು ಪ್ರವೇಶಿಸಿದರು.

ಆ ವೇಳೆಗೆ ಅವರು ದಾರಿನಡೆದು ಬಳಲಿದ್ದರು. ಮುಖಗಳು ವಿವರ್ಣ

ವಾಗಿದ್ದುವು. ಗಡ್ಡ-ಮೀಸೆಗಳು ಬೆಳೆದುಹೋಗಿದ್ದುವು. ಮುಂದೆ ಸ್ವಲ್ಪ ದೂರ ಪ್ರಯಾಣಮಾಡಿದನಂತರ ಮತ್ಸ್ಯರಾಜ್ಯದ ಜನಪ್ರದೇಶವನ್ನು ಪ್ರವೇಶಿಸಿದರು. ಜನಗಳು ಓಡಾಡುವ ಕಾಲುದಾರಿಗಳು ಸಿಕ್ಕಿದುವು. ಅದನ್ನು ಕಂಡು ದ್ರೌಪದಿಯು ಯುಧಿಷ್ಠಿರನನ್ನು ಕುರಿತು ಹೇಳಿದಳು :

"ಧರ್ಮಪುತ್ರ! ಈಗತಾನೇ ನಮಗೆ ಅಲ್ಲಲ್ಲಿ ಕಾಲುದಾರಿಗಳೂ, ವಿಶಾಲವಾದ ಹೊಲ-ಗದ್ದೆಗಳೂ ಕಾಣಬರುತ್ತಿವೆ. ಇದರಿಂದಾಗಿ ವಿರಾಟ ರಾಜನ ರಾಜಧಾನಿಯು ಇನ್ನೂ ಬಹಳ ದೂರವಿರಬಹುದೆಂದು ನಾನು ಭಾವಿಸುತ್ತೇನೆ. ನಾನಾದರೋ ದಾರಿನಡೆದು ಬಹಳವಾಗಿ ಬಳಲಿದ್ದೇನೆ. ಆದುದರಿಂದ ಈ ರಾತ್ರಿಯನ್ನು ಇಲ್ಲಿಯೇ ಕಳೆದು ಬೆಳಗಾಗುತ್ತಲೇ ಮುಂದೆ ಪ್ರಯಾಣಮಾಡುವುದು ಯೋಗ್ಯವಾಗಿ ಕಾಣುತ್ತದೆ."

ಆದರೆ ಯುಧಿಷ್ಠಿರನಿಗೆ ಅದು ಸರಿಯೆನಿಸಲಿಲ್ಲ. ದ್ರೌಪದಿಯು ಬಳಲಿ ರುವುದೇನೋ ನಿಜ. ಕ್ಷಣಮಾತ್ರ ಆಲೋಚಿಸಿ ಧರ್ಮಜನು ಅರ್ಜುನನಿಗೆ ಹೇಳಿದನು :

"ಅರ್ಜುನ! ದ್ರೌಪದಿಯು ದಾರಿನಡೆದು ಬಹಳ ಬಳಲಿರುವಳು. ಅವಳನ್ನು ನೀನು ಹೆಗಲ ಮೇಲೆ ಕುಳ್ಳಿರಿಸಿಕೋ. ಈ ವನಪ್ರದೇಶವನ್ನು ದಾಟಿ ನಾವು ವಿರಾಟರಾಜನ ರಾಜಧಾನಿಯಲ್ಲಿಯೇ ತಂಗೋಣ."

ಯುಧಿಷ್ಠಿರನು ಹೀಗೆಂದು ಹೇಳಿದೊಡನೆಯೇ–ಗಜರಾಜನು ಸೊಂಡಿಲಿನಿಂದ ಬಾಲನೊಬ್ಬನನ್ನೆತ್ತಿ ತನ್ನ ಮೇಲೆ ಕುಳ್ಳಿರಿಸಿಕೊಳ್ಳುವಂತೆ– ಅತುಲಪರಾಕ್ರಮಿಯಾದ ಅರ್ಜುನನು ದ್ರೌಪದಿಯನ್ನೆತ್ತಿಕೊಂಡು ಪ್ರಯಾಣ ಮಾಡಿ ರಾಜಧಾನಿಯ ಸಮೀಪದಲ್ಲಿ ಕೆಳಗಿಳಿಸಿದನು. ರಾಜಧಾನಿಯ ಸಮೀಪವನ್ನು ಸೇರಲಾಗಿ ಧರ್ಮಜನು ಅರ್ಜುನನನ್ನು ಪ್ರಶ್ನಿಸಿದನು :

"ಅರ್ಜುನ! ನಾವು ಈ ನಗರವನ್ನು ಪ್ರವೇಶಿಸುವ ಮೊದಲು ನಮ್ಮ ಈ ದಿವ್ಯಾಯುಧಗಳನ್ನು ಒಂದೆಡೆಯಲ್ಲಿ ಜೋಪಾನವಾಗಿಡಬೇಕಾಗಿದೆ. ಯಾವ ಸ್ಥಳದಲ್ಲಿಡುವುದು ಸೂಕ್ತವೆನಿಸುವುದು? ಒಂದು ವೇಳೆ ನಾವು ಆಯುಧಸಮೇತರಾಗಿಯೇ ಪಟ್ಟಣವನ್ನು ಪ್ರವೇಶಿಸಿದರೆ ನಮ್ಮ ದರ್ಶನ

ಮಾತ್ರದಿಂದಲೇ ಪುರಜನರು ಉದ್ವಿಗ್ನರಾಗುತ್ತಾರೆ. ಇದರಲ್ಲಾವ ಸಂಶಯವೂ ಇಲ್ಲ. ನಿನ್ನ ಗಾಂಡೀವವು ಅತ್ಯದ್ಭುತವಾದ ಮಹಾಧನುಸ್ಸಾಗಿರುವುದು. ಗಾಂಡೀವದ ಹೆಸರನ್ನು ಕೇಳದವರೇ ಇಲ್ಲ ಮತ್ತು ಇದರ ಶುಭಲಕ್ಷಣಗಳನ್ನು ತಿಳಿಯದವರೇ ಇಲ್ಲ. ಈ ಧನುಸ್ಸು ದೊಡ್ಡದಾಗಿಯೂ ಭಾರವಾಗಿಯೂ ಇದೆಯೆಂಬುದನ್ನು ಎಲ್ಲರೂ ತಿಳಿದಿರುವರು. ಅರ್ಜುನನು ಮಾತ್ರವೇ ಈ ಧನುಸ್ಸನ್ನು ಧಾರಣೆಮಾಡಲು ಸಮರ್ಥನೆಂಬ ವಿಷಯವೂ ಸರ್ವರಿಗೂ ತಿಳಿದಿರುವುದು.

ಈ ಕಾರಣಗಳಿಂದಾಗಿ ನಾವೇನಾದರೂ ಈ ಧನುಸ್ಸಿನೊಡನೆ ನಗರವನ್ನು ಪ್ರವೇಶಿಸಿದರೆ ಪ್ರಜೆಗಳು ನಮ್ಮನ್ನು ಬಹಳ ಬೇಗ ಪಾಂಡವರೆಂದು ಗುರುತಿಸುವುದರಲ್ಲಿ ಲೇಶಮಾತ್ರವೂ ಸಂಶಯವಿಲ್ಲ. ಹಾಗೆ ನಮ್ಮಲ್ಲಿ ಒಬ್ಬನನ್ನಾದರೂ ಗುರುತಿಸಿಬಿಟ್ಟರೆ ನಮ್ಮ ಪೂರ್ವಪ್ರತಿಜ್ಞೆಯಂತೆ ನಾವು ಪುನಃ ಹನ್ನೆರಡುವರ್ಷಗಳು ಅರಣ್ಯದಲ್ಲಿ ಕಳೆಯಬೇಕಾಗುವುದು."

ಧರ್ಮಜನ ಈ ಮಾತನ್ನು ಕೇಳಿ ಅರ್ಜುನನು ಹೇಳಿದನು :

"ಅಲ್ಲಿ ನೋಡಣ್ಣ! ದೊಡ್ಡದೊಂದು ಶಮೀವೃಕ್ಷವು ( ಬನ್ನೀಮರ ) ಕಾಣುತ್ತಿರುವುದು. ಆ ವೃಕ್ಷದಲ್ಲಿ ದೊಡ್ಡ-ದೊಡ್ಡದಾದ ರೆಂಬೆಗಳಿವೆ. ಮೇಲಾಗಿ ಆ ಶಮೀವೃಕ್ಷವು ಶ್ಮಶಾನದ ಸಮೀಪದಲ್ಲಿಯೂ ಇದೆ. ನಾವು ನಮ್ಮ ಆಯುಧಗಳನ್ನು ಆ ವೃಕ್ಷದ ಮೇಲೆ ಇಡಬಹುದಾಗಿದೆ. ಈ ಸಮಯದಲ್ಲಿ ನಾವು ನಮ್ಮ ಆಯುಧಗಳನ್ನು ಆ ಮರದ ಮೇಲಿಡುವುದನ್ನು ನೋಡುವ ಮನುಷ್ಯರೂ ಇಲ್ಲಿ ಯಾರೂ ಕಾಣುತ್ತಿಲ್ಲ. ಆ ಮರವು ಜನಗಳು ತಿರುಗಾಡುವ ಈ ಹಾದಿಯಿಂದ ಬಹಳ ದೂರದಲ್ಲಿ ದಟ್ಟವಾದ ಮತ್ತು ಮೃಗ-ಸರ್ಪಗಳಿಂದ ನಿಬಿಡವಾದ ಅರಣ್ಯದ ಮಧ್ಯಭಾಗದಲ್ಲಿರುವುದು. ಆದುದರಿಂದ ನಾವು ನಮ್ಮ ಆಯುಧಗಳೆಲ್ಲವನ್ನೂ ಆ ವೃಕ್ಷದ ಮೇಲಿಟ್ಟು ರಾಜಧಾನಿಗೆ ಪ್ರಯಾಣಮಾಡೋಣ."

ಜನಮೇಜಯ! ಧರ್ಮರಾಜನನ್ನು ಕುರಿತು ಅರ್ಜುನನು ಹೀಗೆಂದು ಹೇಳಿದ ನಂತರ ಧರ್ಮರಾಜನೇ ಆದಿಯಾಗಿ ಸರ್ವರೂ ಅರ್ಜುನನ ಸಲಹೆ

ಯಂತೆ ಶಮೀವೃಕ್ಷದ ಸಮೀಪಕ್ಕೆ ಹೋಗಿ ತಮ್ಮ-ತಮ್ಮ ಆಯುಧಗಳನ್ನು ಒಂದೆಡೆಯಲ್ಲಿಡತೊಡಗಿದರು.

ಯಾವ ದಿವ್ಯವಾದ ಧನುಸ್ಸಿನಿಂದ ಅರ್ಜುನನು ರಥದಲ್ಲಿ ಕುಳಿತು ಏಕಾಕಿಯಾಗಿಯೇ ದೇವತೆಗಳನ್ನೂ, ಮನುಷ್ಯರನ್ನೂ ಜಯಿಸಿದನೋ ಮತ್ತು ಅನೇಕ ದೇಶಗಳನ್ನೂ ಧರ್ಮರಾಜನ ಸಲುವಾಗಿ ಗೆದ್ದುಕೊಟ್ಟನೋ– ಅಂತಹ ದಿವ್ಯವಾದ ಗಾಂಡೀವಧನುಸ್ಸಿನ ಹುರಿಯನ್ನು ಅರ್ಜುನನು ಸಡಿಲಿಸಿದನು.

ವೀರನಾದ ಯುಧಿಷ್ಠಿರನು ತನ್ನ ಯಾವ ಧನುಸ್ಸಿನಿಂದ ಕುರುಕ್ಷೇತ್ರವನ್ನು ಶತ್ರುಗಳಿಂದ ಸಂರಕ್ಷಿಸಿದನೋ–ಅಂತಹ ದಿವ್ಯಧನುಸ್ಸಿನ ಹುರಿಯನ್ನು ಸಡಿಲಿಸಿದನು.

ಭೀಮನ ಧನುಸ್ಸೂ ಅಸಾಧಾರಣವಾದ ಬಲದಿಂದ ಕೂಡಿದುದಾಗಿದ್ದಿತು. ಆ ಧನುಸ್ಸಿನ ಸಹಾಯದಿಂದ ಭೀಮನು ಯುದ್ಧದಲ್ಲಿ ಪಾಂಚಾಲರನ್ನು ಗೆದ್ದಿದ್ದನು. ಸಿಂಧುರಾಜನನ್ನು ಗೆದ್ದಿದ್ದನು. ಅನೇಕ ಯುದ್ಧಗಳಲ್ಲಿ ಅಸಂಖ್ಯಾತಶತ್ರುಗಳನ್ನು ಭೀಮನು ಆ ಧನುಸ್ಸಿನ ಸಹಾಯದಿಂದಲೇ ವಿಧ್ವಂಸನಗೊಳಿಸಿದ್ದನು ಮತ್ತು ಆ ಧನುಸ್ಸಿನ ಟೇಂಕಾರವನ್ನು ಕೇಳಿದೊಡನೆಯೇ ಶತ್ರುಗಳು ಭಯದಿಂದ ನಡುಗುತ್ತಿದ್ದರು. ಅಂತಹ ದಿವ್ಯ ಧನುಸ್ಸಿನ ಹುರಿಯನ್ನು ಭೀಮನು ಸಡಿಲಿಸಿದನು.

ಮಾದ್ರೀಪುತ್ರನಾದ, ಮಹಾಬಾಹುವಾದ, ಮೃದುಭಾಷಿಯಾದ, ಕೆಂದಾವರೆಯಂತೆ ಮುಖಕಾಂತಿಯನ್ನು ಹೊಂದಿದ್ದ, ಮಹಾಪರಾಕ್ರಮಿಯಾದ, ಸ್ಫುರದ್ರೂಪಿಯಾದ ನಕುಲನು ಯಾವ ಧನುಸ್ಸಿನಿಂದ ಪಶ್ಚಿಮ ದಿಕ್ಕಿನ ರಾಜರೆಲ್ಲರನ್ನೂ ಯುದ್ಧದಲ್ಲಿ ಗೆದ್ದಿದ್ದನೋ–ಅಂತಹ ದಿವ್ಯಧನುಸ್ಸಿನ ಹುರಿಯನ್ನು ಸಡಿಲಿಸಿದನು.

**ಕುಲೇ ನಾಸ್ತಿ ಸಮೋ ರೂಪೇ ಯಸ್ಯೇತಿ ನಕುಲಃ ಸ್ಮೃತಃ ॥**

ಕುರುವಂಶದಲ್ಲಿಯೇ ಅಂತಹ ಸುಕುಮಾರನೂ ಸ್ಫುರದ್ರೂಪಿಯೂ ಹುಟ್ಟದೇ ಇದ್ದುದರಿಂದ ಅವನಿಗೆ ನಕುಲನೆಂದೇ ನಾಮಕರಣವನ್ನು ಮಾಡಿದ್ದರು.

ಸದಾಚಾರಸಂಪನ್ನನಾದ, ವೀರನಾದ ಸಹದೇವನು ತನ್ನ ಯಾವ ಧನುಸ್ಸಿನಿಂದ ದಕ್ಷಿಣದಿಕ್ಕಿನಲ್ಲಿದ್ದ ದೇಶಗಳೆಲ್ಲವನ್ನೂ ಅಣ್ಣನಿಗಾಗಿ ಗೆದ್ದು ಕೊಟ್ಟಿದ್ದನೋ–ಅಂತಹ ದಿವ್ಯಧನುಸ್ಸಿನ ಹೆದೆಯನ್ನು ಸಡಿಲಿಸಿದನು.

ಈ ರೀತಿಯಲ್ಲಿ ಪಾಂಡವರೆಲ್ಲರೂ ತಮ್ಮ ಧನುಸ್ಸಿನ ಹುರಿಗಳನ್ನು ಸಡಿಲಿಸಿ ಒಂದೆಡೆಯಲ್ಲಿಟ್ಟನಂತರ ಹೊಳೆಯುತ್ತಿರುವ ಮತ್ತು ಸುದೀರ್ಘ ವಾದ ಕತ್ತಿಗಳನ್ನೂ, ಬಹುಮೌಲ್ಯಗಳಾದ ಬತ್ತಳಿಕೆಗಳನ್ನೂ, ಕತ್ತಿಯ ಅಲುಗಿನಂತೆ ತೀಕ್ಷ್ಣವಾಗಿದ್ದ ವಿಪಾಠವೆಂಬ ಬಾಣಗಳನ್ನೂ ಧನುಸ್ಸುಗಳ ಜೊತೆಯಲ್ಲಿಟ್ಟರು.

ಅನಂತರದಲ್ಲಿ ಯುಧಿಷ್ಠಿರನು ನಕುಲನಿಗೆ ಹೇಳಿದನು :

"ನಕುಲ! ಈ ಶಮೀವೃಕ್ಷವನ್ನು ಹತ್ತಿ ಇಲ್ಲಿರುವ ಧನುರ್ಬಾಣಗಳನ್ನೂ, ಬತ್ತಳಿಕೆಗಳನ್ನೂ, ಕತ್ತಿ-ಗುರಾಣಿಗಳನ್ನೂ ಮರದ ಮೇಲಿಡು."

ಅಣ್ಣನ ಮಾತಿನಂತೆ ನಕುಲನು ಮರವನ್ನು ಹತ್ತಿ ದೊಡ್ಡದಾದ ರೆಂಬೆಯ ಮಧ್ಯಭಾಗದಲ್ಲಿ ಎಲ್ಲರ ಧನುಸ್ಸುಗಳನ್ನೂ, ಬಾಣ-ಬತ್ತಳಿಕೆ ಗಳನ್ನೂ, ಕತ್ತಿ-ಗುರಾಣಿಗಳನ್ನೂ ಇಟ್ಟು ಹಗ್ಗದಿಂದ ಬಿಗಿದನು. ಮಳೆಯ ನೀರೂ ಒಳಗೆ ಸೇರದ ರೀತಿಯಲ್ಲಿ ಸುತ್ತಲೂ ಮರದೆಲೆಗಳನ್ನು ದಟ್ಟವಾಗಿ ಹೊದಿಸಿದನು.

ಅನಂತರ ಪಾಂಡವರು ಸಮೀಪದಲ್ಲಿಯೇ ಇದ್ದ ಹೆಣವೊಂದನ್ನು ಶಮೀವೃಕ್ಷಕ್ಕೆ ತೂಗುಹಾಕಿದರು. ಆ ಹೆಣವನ್ನು ದೂರದಿಂದ ನೋಡುತ್ತಲೇ ಮತ್ತು ಅದರ ದುರ್ಗಂಧವು ಮೂಗಿನೊಳಗೆ ಹೋಗುತ್ತಲೇ ಮನುಷ್ಯರಾರೂ ಆ ವೃಕ್ಷದ ಹತ್ತಿರವೂ ಬರುವುದಿಲ್ಲವೆಂಬುದು ಪಾಂಡವರ ಅಭಿಪ್ರಾಯವಾಗಿತ್ತು. ಆಯುಧಗಳನ್ನಿಟ್ಟು ಹೆಣವನ್ನು ಮರಕ್ಕೆ ತೂಗುಹಾಕಿ ಹಿಂದಿರುಗಿದರು. ಅಲ್ಲಿಂದ ಹೊರಟು ದಾರಿಯಲ್ಲಿ ತಮ್ಮ ವಿಷಯ ವನ್ನು ಕೇಳಿದ ಗೊಲ್ಲರಿಗೂ ಮತ್ತು ಕುರುಬರಿಗೂ ಪಾಂಡವರು ಹೀಗೆ ಹೇಳಿದರು :

"ಎಂಭತ್ತು-ನೂರು ವರ್ಷ ವಯಸ್ಸಿನ ನಮ್ಮ ತಾಯಿಯು ಸತ್ತು ಹೋಗಿರುವಳು. ಅವಳ ಶವವನ್ನು ನಾವಿಲ್ಲಿ ಕಟ್ಟಿರುತ್ತೇವೆ. ಹೀಗೆ ಮಾಡು

ವುದು ನಮ್ಮ ಕುಲಧರ್ಮ. ನಮ್ಮ ಪೂರ್ವಜರೆಲ್ಲರೂ ಹೀಗೆಯೇ ಮಾಡುತ್ತಿದ್ದರು."

ಪಾಂಡವರ ಮಾತುಗಳನ್ನು ಕೇಳಿ ಯಾರೊಬ್ಬರೂ ಪುನಃ ಪ್ರಶ್ನಿಸಲಿಲ್ಲ. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಪಾಂಡವರು ದ್ರೌಪದಿಯೊಡನೆ ವಿರಾಟ ನಗರಿಯನ್ನು ಸೇರಿದರು.



ತಾವು ಪ್ರತ್ಯೇಕವಾಗಿ ಏಕಾಂತದಲ್ಲಿ ವ್ಯವಹರಿಸಲು ಅನುಕೂಲ ವಾಗುವಂತೆ ಧರ್ಮಜನು ತಾನು ಜಯನೆಂಬ ಸಂಕೇತನಾಮವನ್ನಿಟ್ಟು ಕೊಂಡು, ಭೀಮನಿಗೆ ಜಯಂತನೆಂದೂ, ಅರ್ಜುನನಿಗೆ ವಿಜಯನೆಂದೂ

ನಕುಲನಿಗೆ ಜಯತ್ಸೇನನೆಂದೂ, ಸಹದೇವನಿಗೆ ಜಯದ್ಬಲನೆಂದೂ ಗುಪ್ತ ನಾಮಗಳನ್ನಿಟ್ಟನು.

ಜನಮೇಜಯ! ತಾವು ಪ್ರತಿಜ್ಞೆಮಾಡಿದ್ದಂತೆ ಹನ್ನೆರಡು ವರ್ಷಗಳ ವನವಾಸವು ಮುಗಿದನಂತರ ಒಂದು ವರ್ಷ ಕಾಲ ಅಜ್ಞಾತವಾಸವನ್ನು ಮಾಡುವ ಸಲುವಾಗಿ ನಿನ್ನ ಪ್ರಪಿತಾಮಹರಾದ ಧರ್ಮಾದಿಗಳು ವೈಭವ ಪೂರ್ಣವಾದ ವಿರಾಟನಗರಿಯನ್ನು ಪ್ರವೇಶಿಸಿದರು.

೫ನೆಯ ಅಧ್ಯಾಯವು ಮುಗಿಯಿತು.

೬ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ದುರ್ಗಾದೇವಿಯನ್ನು ಸ್ತೋತ್ರಮಾಡಿದುದು : ದೇವಿಯು ಪ್ರತ್ಯಕ್ಷಳಾಗಿ ವರಗಳನ್ನು ಕೊಟ್ಟುದು

ಜನಮೇಜಯ! ವಿರಾಟನಗರಾಭಿಮುಖವಾಗಿ ಹೋಗುತ್ತಿದ್ದ ಯುಧಿಷ್ಠಿರನು ಮನಸ್ಸಿನಲ್ಲಿಯೇ ತ್ರಿಭುವನೇಶ್ವರಿಯಾದ ದುರ್ಗಾದೇವಿ ಯನ್ನು ಪ್ರಾರ್ಥಿಸಿದನು :

**ಯಶೋದಾಗರ್ಭಸಮ್ಭೂತಾಂ ನಾರಾಯಣವರಪ್ರಿಯಾಮ್ ।**
**ನನ್ದಗೋಪಕುಲೇ ಜಾತಾಂ ಮಙ್ಗಲ್ಯಾಂ ಕುಲವರ್ಧಿನೀಮ್ ॥೨॥**

**ಕಂಸವಿದ್ರಾವಣಕರೀಮಸುರಾಣಾಂ ಕ್ಷಯಂಕರೀಮ್ ।**
**ಶಿಲಾತಟವಿನಿಕ್ಷಿಪ್ತಾಮಾಕಾಶಂ ಪ್ರತಿಗಾಮಿನೀಮ್ ॥೩॥**

**ವಾಸುದೇವಸ್ಯ ಭಗಿನೀಂ ದಿವ್ಯಮಾಲಾವಿಭೂಷಿತಾಮ್ ।**
**ದಿವ್ಯಾಮ್ಬರಧರಾಂ ದೇವೀಂ ಖಡ್ಗಖೇಟಕಧಾರಿಣೀಮ್ ॥೪॥**

**ಭಾರಾವತರಣೇ ಪುಣ್ಯೇ ಯೇ ಸ್ಮರನ್ತಿ ಸದಾಶಿವಾಮ್ ।**
**ತಾನ್ವೈ ತಾರಯಸೇ ಪಾಪಾತ್ಪಙ್ಕೇ ಗಾಮಿವ ದುರ್ಬಲಾಮ್ ॥೫॥**

"ಯಶೋದೆಯ ಗರ್ಭದಲ್ಲಿ ಹುಟ್ಟಿದ, ಶ್ರೀಮನ್ನಾರಾಯಣನಿಗೆ ಬಹುಪ್ರಿಯಳಾದ, ನಂದಗೋಪಕುಲದಲ್ಲಿ ಜನ್ಮತಾಳಿದ, ಮಂಗಳಸ್ವರೂಪ ಳಾದ, ಕುಲಸಂವರ್ಧಕಳಾದ, ಕಂಸಾಸುರನಿಗೂ ಭಯೋತ್ಪಾದಕಳಾದ,

ಅಸುರರ ಕ್ಷಯಂಕರಳಾದ, ಕಂಸನು ಇವಳನ್ನು ಕೊಲ್ಲಲೆಂದು ಕಲ್ಲಿನ ಮೇಲೆ ರಭಸದಿಂದ ಅಪ್ಪಳಿಸಿದಾಗ ಅದೇ ರಭಸದಿಂದಲೇ ಆಕಾಶಕ್ಕೆ ಹಾರಿ ಕಂಸನನ್ನೇ ಚಕಿತಗೊಳಿಸಿದ, ವಾಸುದೇವನ ಭಗಿನಿಯಾದ, ದಿವ್ಯಮಾಲೆಗಳಿಂದ ಅಲಂಕೃತಳಾದ, ದಿವ್ಯಾಂಬರಧರಳಾದ, ಕತ್ತಿ-ಗುರಾಣಿಗಳನ್ನು ಹಿಡಿದಿರುವ ದುರ್ಗೆಯಾದ ನಿನ್ನನ್ನು ಸ್ತೋತ್ರಮಾಡುತ್ತೇನೆ.

ಭೂಮಿಯ ಭಾರವನ್ನಿಳಿಸುವ ಪುಣ್ಯವತಿಯಾದ ದೇವಿಯೇ! (ಭಾರಾವತರಣವೆಂಬ ಪುಣ್ಯಕ್ಷೇತ್ರದಲ್ಲಿ) ಸದಾ ಮಂಗಳಸ್ವರೂಪಳಾದ ನಿನ್ನನ್ನು ಯಾರು ಸರ್ವಕಾಲಗಳಲ್ಲಿಯೂ ಸ್ಮರಣೆಮಾಡುತ್ತಾರೆಯೋ– ಅವರನ್ನು ಕೆಸರಿನಲ್ಲಿ ಬಿದ್ದ ದುರ್ಬಲವಾದ ಹಸುವನ್ನು ಮೇಲೆತ್ತುವಂತೆ– ಸಕಲಪಾಪಗಳಿಂದಲೂ ವಿಮೋಚನಗೊಳಿಸುವೆ.”

ಜನಮೇಜಯ! ಯುಧಿಷ್ಠಿರನು ದೇವಿಯನ್ನು ಒಲಿಸಿಕೊಳ್ಳುವ ಆಶಯದಿಂದ ಅರ್ಜುನನೊಡನೆ ಪುನಃ ಪುನಃ ನಾನಾವಿಧವಾದ ಸ್ತೋತ್ರಗಳಿಂದ ದೇವಿಯನ್ನು ಸ್ತುತಿಸಲು ಉಪಕ್ರಮಿಸಿದನು :

**ನಮೋಽಸ್ತು ವರದೇ ಕೃಷ್ಣೇ ಕುಮಾರಿ ಬ್ರಹ್ಮಚಾರಿಣಿ ।**
**ಬಾಲಾರ್ಕಸದೃಶಾಕಾರೇ ಪೂರ್ಣಚನ್ದ್ರನಿಭಾನನೇ ॥೭॥**

**ಚತುರ್ಭುಜೇ ಚತುರ್ವಕ್ತ್ರೇ ಪೀನಶ್ರೋಣಿಪಯೋಧರೇ ।**
**ಮಯೂರಪಿಚ್ಛವಲಯೇ ಕೇಯೂರಾಙ್ಗದಧಾರಿಣಿ ॥೮॥**

**ಭಾಸಿ ದೇವಿ ಯಥಾ ಪದ್ಮಾ ನಾರಾಯಣಪರಿಗ್ರಹಃ ।**
**ಸ್ವರೂಪಂ ಬ್ರಹ್ಮಚರ್ಯಂ ಚ ವಿಶದಂ ಗಗನೇಶ್ವರೀ ॥೯॥**

**ಕೃಷ್ಣಚ್ಛವಿಸಮಾ ಕೃಷ್ಣಾ ಸಂಕರ್ಷಣಸಮಾನನಾ ।**
**ಬಿಭ್ರತೀ ವಿಪುಲೌ ಬಾಹೂ ಶಕ್ರಧ್ವಜಸಮುಚ್ಛ್ರಯೌ ॥೧೦॥**

**ಪಾತ್ರೀ ಚ ಪಙ್ಕಜೀ ಘಣ್ಟೀ ಸ್ತ್ರೀವಿಶುದ್ಧಾ ಚ ಯಾ ಭುವಿ ।**
**ಪಾಶಂ ಧನುರ್ಮಹಾಚಕ್ರಂ ವಿವಿಧಾನ್ಯಾಯುಧಾನಿ ಚ ॥೧೧॥**

**ಕುಣ್ಡಲಾಭ್ಯಾಂ ಸುಪೂರ್ಣಾಭ್ಯಾಂ ಕರ್ಣಾಭ್ಯಾಂ ಚ ವಿಭೂಷಿತಾ ।**
**ಚನ್ದ್ರವಿಸ್ಪರ್ಧಿನಾ ದೇವಿ ಮುಖೇನ ತ್ವಂ ವಿರಾಜಸೇ ॥೧೨॥**

ಮುಕುಟೇನ ವಿಚಿತ್ರೇಣ ಕೇಶಬನ್ಧೇನ ಶೋಭಿನಾ ।
ಭುಜಙ್ಗಾಭೋಗವಾಸೇನ ಶ್ರೋಣಿಸೂತ್ರೇಣ ರಾಜತಾ ॥೧೩॥

ವಿಭ್ರಾಜಸೇ ಚಾಬದ್ಧೇನ ಭೋಗೇನೇವೇಹ ಮನ್ದರಃ ।
ಧ್ವಜೇನ ಶಿಖಿಪಿಚ್ಛಾನಾಮುಚ್ಛ್ರಿತೇನ ವಿರಾಜಸೇ ॥೧೪॥



ಕೌಮಾರಂ ವ್ರತಮಾಸ್ಥಾಯ ತ್ರಿದಿವಂ ಪಾವಿತಂ ತ್ವಯಾ ।
ತೇನ ತ್ವಂ ಸ್ತೂಯಸೇ ದೇವಿ ತ್ರಿದಶೈಃ ಪೂಜ್ಯಸೇऽಪಿ ಚ ॥೧೫॥

ತ್ರೈಲೋಕ್ಯರಕ್ಷಣಾರ್ಥಾಯ ಮಹಿಷಾಸುರನಾಶಿನಿ ।
ಪ್ರಸನ್ನಾ ಮೇ ಸುರಶ್ರೇಷ್ಠೇ ದಯಾಂ ಕುರು ಶಿವಾ ಭವ ॥೧೬॥

ಜಯಾ ತ್ವಂ ವಿಜಯಾ ಚೈವ ಸಂಗ್ರಾಮೇ ಚ ಜಯಪ್ರದಾ ।
ಮಮಾಪಿ ವಿಜಯಂ ದೇಹಿ ವರದಾ ತ್ವಂ ಚ ಸಾಮ್ಪ್ರತಮ್ ॥೧೭॥

ವಿನ್ಧ್ಯೇ ಚೈವ ನಗಶ್ರೇಷ್ಠೇ ತವ ಸ್ಥಾನಂ ಹಿ ಶಾಶ್ವತಮ್ ।
ಕಾಲಿ ಕಾಲಿ ಮಹಾಕಾಲಿ ಖಡ್ಗಖಟ್ವಾಙ್ಗಧಾರಿಣಿ ॥೧೮॥

ಕೃತಾನುಯಾತ್ರಾ ಭೂತೈಸ್ತ್ವಂ ವರದಾ ಕಾಮಚಾರಿಣಿ ।
ಭಾರಾವತಾರೇ ಯೇ ಚ ತ್ವಾಂ ಸಂಸ್ಮರಿಷ್ಯನ್ತಿ ಮಾನವಾಃ ॥೧೯॥

ಪ್ರಣಮನ್ತಿ ಚ ಯೇ ತ್ವಾಂ ಹಿ ಪ್ರಭಾತೇ ತು ನರಾ ಭುವಿ ।
ನ ತೇಷಾಂ ದುರ್ಲಭಂ ಕಿಂಚಿತ್ಪುತ್ರತೋ ಧನತೋಽಪಿ ವಾ ॥೨೦॥

ದುರ್ಗಾತ್ತಾರಯಸೇ ದುರ್ಗೇ ತತ್ತ್ವಂ ದುರ್ಗಾ ಸ್ಮೃತಾ ಜನೈಃ ।
ಕಾನ್ತಾರೇಷ್ವವಸನ್ನಾನಾಂ ಮಗ್ನಾನಾಂ ಚ ಮಹಾರ್ಣವೇ ॥೨೧॥

ದಸ್ಯುಭಿರ್ವಾ ನಿರುದ್ಧಾನಾಂ ತ್ವಂ ಗತಿಃ ಪರಮಾ ನೃಣಾಮ್ ।
ಜಲಪ್ರತರಣೇ ಚೈವ ಕಾನ್ತಾರೇಷ್ವಟವೀಷು ಚ ॥೨೨॥

ಯೇ ಸ್ಮರನ್ತಿ ಮಹಾದೇವಿ ನ ಚ ಸೀದನ್ತಿ ತೇ ನರಾಃ ।
ತ್ವಂ ಕೀರ್ತಿಃ ಶ್ರೀರ್ಧೃತಿಃ ಸಿದ್ಧಿರ್ಹ್ರೀರ್ವಿದ್ಯಾ ಸಂತತಿರ್ಮತಿಃ ॥೨೩॥

ಸಂಧ್ಯಾ ರಾತ್ರಿಃ ಪ್ರಭಾ ನಿದ್ರಾ ಜ್ಯೋತ್ಸ್ನಾ ಕಾನ್ತಿಃ ಕ್ಷಮಾ ದಯಾ ।
ನೃಣಾಂ ಚ ಬನ್ಧನಂ ಮೋಹಂ ಪುತ್ರನಾಶಂ ಧನಕ್ಷಯಮ್ ॥೨೪॥

ವ್ಯಾಧಿಂ ಮೃತ್ಯುಂ ಭಯಂ ಚೈವ ಪೂಜಿತಾ ನಾಶಯಿಷ್ಯಸಿ ।
ಸೋಽಹಂ ರಾಜ್ಯಾತ್ಪರಿಭ್ರಷ್ಟಃ ಶರಣಂ ತ್ವಾಂ ಪ್ರಪನ್ನವಾನ್ ॥೨೫॥

ಪ್ರಣತಶ್ಚ ಯಥಾ ಮೂರ್ಧ್ನಾ ತವ ದೇವಿ ಸುರೇಶ್ವರಿ ।
ತ್ರಾಹಿ ಮಾಂ ಪದ್ಮಪತ್ರಾಕ್ಷಿ ಸತ್ಯೇ ಸತ್ಯಾ ಭವಸ್ವ ನಃ ।
ಶರಣಂ ಭವ ಮೇ ದುರ್ಗೇ ಶರಣ್ಯೇ ಭಕ್ತವತ್ಸಲೇ ॥೨೬॥

ಕುಮಾರಿ! ಬ್ರಹ್ಮಚಾರಿಣಿ! ವರದೇ! ಕೃಷ್ಣೇ! ನಿನಗೆ ನಮಸ್ಕಾರಗಳು. ನೀನು ಬಾಲಸೂರ್ಯನಂತೆ ಪ್ರಕಾಶಮಾನವಾದ ಶರೀರವನ್ನು ಹೊಂದಿರುವೆ. ಪೂರ್ಣಚಂದ್ರನಿಗೆ ಸಮಾನವಾದ ಮುಖವನ್ನು ಹೊಂದಿರುವೆ. ನಾಲ್ಕು ಭುಜಗಳನ್ನು ಹೊಂದಿರುವೆ. ನಿನಗೆ ನಾಲ್ಕು

ಮುಖಿಗಳಿವೆ. ನಿನ್ನ ಶ್ರೋಣಿ-ಪಯೋಧರಗಳು ತುಂಬಿಕೊಂಡಿವೆ. ನೀನು ನವಿಲುಗರಿಗಳಿಂದ ಮಾಡಿದ ಬಳೆಗಳನ್ನು ತೊಟ್ಟುಕೊಂಡಿರುವೆ. ಕೇಯೂರಾಂಗದಗಳನ್ನು ಧರಿಸಿರುವೆ. ಶ್ರೀಮನ್ನಾರಾಯಣನ ಪತ್ನಿಯಾದ ಲಕ್ಷ್ಮೀದೇವಿಯಂತೆಯೇ ನೀನು ಕಾಣುತ್ತಿರುವೆ. ನೀನು ಗಗನೇಶ್ವರಿ. ನಿನ್ನ ಸ್ವರೂಪ ಮತ್ತು ಬ್ರಹ್ಮಚರ್ಯೆಗಳು ಉಜ್ವಲವಾಗಿವೆ. ನೀನು ಸಾಕ್ಷಾತ್ ಶ್ರೀಕೃಷ್ಣನ ಶರೀರಕಾಂತಿಯನ್ನೇ ಹೊಂದಿರುವೆ. ನಿನ್ನ ಮುಖವು ಸಂಕರ್ಷಣನ ಮುಖಕ್ಕೆ ಸಮಾನವಾಗಿದೆ. (ಶ್ವೇತವರ್ಣದಿಂದ ಪ್ರಕಾಶಿಸುತ್ತಿದೆ.) ಇಂದ್ರಧ್ವಜದಂತೆ ನೀಳವಾದ ಮತ್ತು ಸ್ಥೂಲವಾದ ಬಾಹುಲತೆಗಳನ್ನು ಹೊಂದಿರುವೆ. ಸ್ತ್ರೀಶ್ರೇಷ್ಠಳಾದ ನೀನು ಪಾತ್ರೆಯನ್ನೂ, ಕಮಲವನ್ನೂ, ಘಂಟೆಯನ್ನೂ, ಪಾಶವನ್ನೂ, ಧನುಸ್ಸನ್ನೂ, ಮಹಾಚಕ್ರವನ್ನೂ, ಅನೇಕ ವಿಧವಾದ ಆಯುಧಗಳನ್ನೂ ಕೈಗಳಲ್ಲಿ ಧರಿಸಿರುವೆ. ಥಳ-ಥಳಿಸುತ್ತಿರುವ ಕರ್ಣಕುಂಡಲಗಳನ್ನೂ ಧರಿಸಿರುವೆ. ಚಂದ್ರನೊಡನೆ ಸ್ಪರ್ಧಿಸುತ್ತಿದೆಯೋ– ಎಂಬಂತಿರುವ ಆಹ್ಲಾದಕರವಾದ ಮುಖದಿಂದ ವಿರಾಜಿಸುತ್ತಿರುವೆ. ಚಿತ್ರ-ವಿಚಿತ್ರವಾದ ಕಿರೀಟವನ್ನು ತಲೆಯಲ್ಲಿ ಧರಿಸಿರುವೆ. ಸುಬದ್ಧವಾದ ಕೇಶದಿಂದ ನೀನು ರಾರಾಜಿಸುತ್ತಿರುವೆ. ಸರ್ಪವೆಂಬ ನೀಳವಾದ ಕಟಿಸೂತ್ರದಿಂದ ರಾರಾಜಿಸುತ್ತಿರುವ ನೀನು ಸಾಕ್ಷಾತ್ ವಾಸುಕಿಯಿಂದ ನಿಬದ್ಧವಾದ ಮಂದರಪರ್ವತದಂತೆಯೇ ಪ್ರಕಾಶಿಸುತ್ತಿರುವೆ. ನವಿಲಿನ ಗರಿಗಳ ಚಿಹ್ನೆಗಳಿಂದ ಕೂಡಿರುವ ನಿನ್ನ ಧ್ವಜವು ನಿನ್ನ ಸಮೀಪದಲ್ಲಿಯೇ ಆಕಾಶದಲ್ಲಿ ಹಾರಾಡುತ್ತಿದ್ದು ನಿನ್ನ ಕಾಂತಿಯನ್ನು ಮತ್ತಷ್ಟು ಹೆಚ್ಚಿಸಿದೆ. ನೀನು ಬ್ರಹ್ಮಚರ್ಯವ್ರತವನ್ನು ಧಾರಣೆಮಾಡಿ ಸ್ವರ್ಗಲೋಕವನ್ನೂ ಪಾವನಗೊಳಿಸಿರುವೆ. ಈ ಕಾರಣದಿಂದಲೇ ನಿನ್ನನ್ನು ದೇವತೆಗಳೂ ಸ್ತೋತ್ರಮಾಡುತ್ತಾರೆ ಮತ್ತು ಪೂಜಿಸುತ್ತಾರೆ. ಮೂರೂ ಲೋಕಗಳ ರಕ್ಷಣೆಗಾಗಿ ಮಹಿಷಾಸುರನನ್ನು ಧ್ವಂಸಮಾಡಿದ ಚಾಮುಂಡೇಶ್ವರಿಯೂ ನೀನೇ. ನನ್ನ ವಿಷಯದಲ್ಲಿ ಪ್ರಸನ್ನಳಾಗು, ತಾಯೇ! ದಯೆತೋರು! ಮಂಗಳಮಯಿಯಾಗು, ತಾಯೇ! ಜಯಾ ಎಂಬುವಳೂ ನೀನೇ. ವಿಜಯಾ ಎಂಬುವಳೂ ನೀನೇ ಆಗಿರುವೆ. ಯುದ್ಧದಲ್ಲಿ ಜಯ ವನ್ನುಂಟುಮಾಡುವ ಮಹಾಕಾಳಿಯೇ ನೀನು. ನನಗೆ ವರದಳಾಗು.

ನನಗೂ ವಿಜಯವನ್ನು ದಯಪಾಲಿಸು. ವಿಂಧ್ಯವೆಂಬ ಶ್ರೇಷ್ಠಪರ್ವತದಲ್ಲಿ ನಿನಗೆ ಶಾಶ್ವತವಾದ ಸ್ಥಾನವಿದೆ. ಕಾಲಿ! ಕಾಲಿ! ಮಹಾಕಾಲಿ! ನೀನು ಖಡ್ಗ-ಖಟ್ವಾಂಗಗಳನ್ನು ಧರಿಸಿರುವೆ. ನೀನು ಸ್ವೇಚ್ಛೆಯಿಂದ ಪ್ರಪಂಚದಲ್ಲಿ ವಿಹರಿಸುವಾಗ ಮಾನವರು (ಭೂತಗಣಗಳು) ನಿನ್ನನ್ನು ಅನುಸರಿಸಿಯೇ ಬರುತ್ತಿರುತ್ತಾರೆ. ಕರುಣಾಮಯಿಯಾದ ನೀನು ಮಾನವರು ಅಪೇಕ್ಷಿಸಿದ ವರಗಳನ್ನು ನೀಡುವೆ. ದಾರಿದ್ರ್ಯದ ಭಾರವನ್ನು ತಪ್ಪಿಸಿಕೊಳ್ಳಲು (ಭಾರಾವರಣ ಕ್ಷೇತ್ರದಲ್ಲಿ) ನಿನ್ನನ್ನು ಯಾರು ಪ್ರತಿಕ್ಷಣದಲ್ಲಿಯೂ ಸ್ಮರಿಸಿಕೊಳ್ಳುತ್ತಾರೆಯೋ ಮತ್ತು ಅನುದಿನವೂ ಪ್ರಾತಃಕಾಲದಲ್ಲಿ ಯಾರು ನಿನ್ನನ್ನು ನಮಸ್ಕರಿಸುತ್ತಾರೆಯೋ–ಅವರಿಗೆ ದುರ್ಲಭವಾದುದೇ ಯಾವುದೂ ಇರುವುದಿಲ್ಲ. ಸುಪುತ್ರರ ಪ್ರಾಪ್ತಿಯಾಗುತ್ತದೆ. ಯಥೇಚ್ಛವಾದ ಧನವೂ ಲಭ್ಯವಾಗುತ್ತದೆ. ದುರ್ಗಾದೇವಿ! ಅತಿದುಸ್ಸಹವಾದ ದುಃಖದಿಂದ ನಿನ್ನ ಭಕ್ತರನ್ನು ಪಾರುಮಾಡುವ ಸಾಮರ್ಥ್ಯವನ್ನು ಪಡೆದಿರುವುದರಿಂದಲೇ 'ದುರ್ಗಾ' ಎಂದು ಜನರಲ್ಲಿ ಪ್ರಸಿದ್ಧಳಾಗಿರುವೆ. ಕಾಡಿನಲ್ಲಿ ಪ್ರಯಾಣ ಮಾಡುವಾಗ ಹಾದಿತಪ್ಪಿದವರಿಗೆ, ಮಹಾಸಮುದ್ರದಲ್ಲಿ ಅಥವಾ ಸಂಸಾರ ಮಹಾಸಮುದ್ರದಲ್ಲಿ ಮುಳುಗುತ್ತಿರುವವರಿಗೆ, ದರೋಡೆಗಾರರ ಕೈಲಿ ಸಿಕ್ಕಿ ಹಾಕಿಕೊಂಡವರಿಗೆ ನೀನೇ ಪರಮಶ್ರೇಷ್ಠಳಾದ ಶರಣ್ಯಳು. ನದಿಗಳನ್ನು ದಾಟುವ ಸಮಯದಲ್ಲಿ, ಭಯಂಕರವಾದ ಅರಣ್ಯದ ಮಧ್ಯದಲ್ಲಿ ಅಪಾಯಕ್ಕೀಡಾದವರು ಒಡನೆಯೇ ನಿನ್ನ ಸ್ಮರಣೆಯನ್ನು ಮಾಡಿದರಾದರೆ ಅಂತಹವರೆಂದಿಗೂ ವಿನಾಶಹೊಂದುವುದಿಲ್ಲ. ಯಾವುದಾದರೂ ರೂಪದಲ್ಲಿ ನೀನು ಬಂದು ಅವರನ್ನು ಕಷ್ಟದಿಂದ ಪಾರುಮಾಡುವೆ.

ಮಹಾದೇವೀ! ಕೀರ್ತಿಸ್ವರೂಪಿಣಿಯೂ ನೀನೇ, ಶ್ರೀಯೂ ನೀನೇ, ಧೃತಿ, ಸಿದ್ಧಿ, ಹ್ರೀ, ವಿದ್ಯಾ, ಸಂತತಿ, ಮತಿ, ಸಂಧ್ಯಾ, ನಿದ್ರಾ, ಜ್ಯೋತ್ಸ್ನಾ, ಕಾಂತಿ, ಕ್ಷಮೆ, ದಯೆ–ಇವುಗಳೆಲ್ಲವೂ ನೀನೇ ಆಗಿರುವೆ. ಭಕ್ತರಿಂದ ಸಂಪೂಜಿತಳಾದ ನೀನು ಅವರ ಸಂಸಾರಬಂಧನ, ಮೋಹ, ಪುತ್ರನಾಶ, ಧನಕ್ಷಯ, ವ್ಯಾಧಿ, ಭಯ–ಇವುಗಳೆಲ್ಲವನ್ನೂ ಪರಿಹರಿಸುವೆ.

ನಾನಾದರೋ ಇಂದು ರಾಜ್ಯಭ್ರಷ್ಟನಾಗಿ ದುಃಖಸಾಗರದಲ್ಲಿ ಮುಳುಗಿದ್ದೇನೆ. ನಾನಿಂದು ನಿನಗೆ ಶರಣಾಗತನಾಗಿದ್ದೇನೆ. ನಿನ್ನ ಪಾದಪದ್ಮಗಳಲ್ಲಿ

ತಲೆಯಿಟ್ಟು ಬೇಡುವೆನು, ಸುರೇಶ್ವರಿ ಪದ್ಮಪತ್ರಾಕ್ಷಿ! ಸತ್ಯಸ್ವರೂಪಿಣಿಯೇ! ಪ್ರತ್ಯಕ್ಷಳಾಗಿ ನನ್ನನ್ನು ಕಾಪಾಡು ತಾಯೇ!

ಭಕ್ತವತ್ಸಲೇ! ದುರ್ಗಾದೇವಿ! ನನಗೆ ಶರಣ್ಯಳಾಗು ತಾಯೇ!"

ಹೀಗೆಂದು ಅನನ್ಯಮನಸ್ಕನಾಗಿ ಯುಧಿಷ್ಠಿರನು ದುರ್ಗೆಯನ್ನು ಸ್ತೋತ್ರ ಮಾಡಿದನಂತರ ಕರುಣಾಮಯಿಯಾದ ದುರ್ಗಾದೇವಿಯು ಪ್ರತ್ಯಕ್ಷಳಾಗಿ ರಾಜನನ್ನು ಸಂಬೋಧಿಸಿ ಹೇಳಿದಳು :

**ಶೃಣು ರಾಜನ್ಮಹಾಬಾಹೋ ಮದೀಯಂ ವಚನಂ ಪ್ರಭೋ ॥೨೭॥**

**ಭವಿಷ್ಯತ್ಯಚಿರಾದೇವ ಸಂಗ್ರಾಮೇ ವಿಜಯಸ್ತವ ।**
**ಮಮ ಪ್ರಸಾದಾನ್ನಿರ್ಜಿತ್ಯ ಹತ್ವಾ ಕೌರವವಾಹಿನೀಮ್ ॥೨೮॥**

**ರಾಜ್ಯಂ ನಿಷ್ಕಣ್ಟಕಂ ಕೃತ್ವಾ ಭೋಕ್ಷ್ಯಸೇ ಮೇದಿನೀಂ ಪುನಃ ।**
**ಭ್ರಾತೃಭಿಃ ಸಹಿತೋ ರಾಜನ್ಪ್ರೀತಿಂ ಪ್ರಾಪ್ಸ್ಯಸಿ ಪುಷ್ಕಲಾಮ್ ।**
**ಮತ್ಪ್ರಸಾದಾಚ್ಚ ತೇ ಸೌಖ್ಯಮಾರೋಗ್ಯಂ ಚ ಭವಿಷ್ಯತಿ ॥೨೯॥**

"ಮಹಾಬಾಹೋ! ಯುಧಿಷ್ಠಿರ! ನಾನು ಹೇಳಲಿರುವ ಈ ಮಾತುಗಳನ್ನು ಕೇಳು. ಮುಂದಿನ ಸ್ವಲ್ಪದಿನಗಳಲ್ಲಿಯೇ ನಡೆಯಲಿರುವ ಮಹಾಯುದ್ಧದಲ್ಲಿ ನೀನು ಖಂಡಿತವಾಗಿಯೂ ಜಯಗಳಿಸುವೆ. ನನ್ನ ಅನುಗ್ರಹದಿಂದಾಗಿ ನೀನು ಕೌರವರನ್ನೂ, ಅವರ ಅಪಾರಸೈನ್ಯವನ್ನೂ ಧ್ವಂಸಗೊಳಿಸಿ, ನಿಷ್ಕಂಟಕವಾದ ರಾಜ್ಯವನ್ನು ಪುನಃ ಪಡೆಯುವೆ. ನಿನ್ನ ಈ ಅನುಜರ ಸಮೇತನಾಗಿ ಹೆಚ್ಚಾದ ಸಂತೋಷವನ್ನೂ ಹೊಂದುವೆ ಮತ್ತು ಯಥೇಚ್ಛವಾಗಿ ಐಶ್ವರ್ಯಗಳನ್ನೂ ಪಡೆದು ಸುಖಿಯಾಗುವೆ. ನನ್ನ ಅನುಗ್ರಹದಿಂದಾಗಿ ನಿನಗೆ ನಿರಂತರಸೌಖ್ಯ ಮತ್ತು ಆರೋಗ್ಯಗಳು ಲಭಿಸುತ್ತವೆ. ಇಷ್ಟು ಮಾತ್ರವಲ್ಲ, ಧರ್ಮಜ!

**ಯೇ ಚ ಸಂಕೀರ್ತಯಿಷ್ಯನ್ತಿ ಲೋಕೇ ವಿಗತಕಲ್ಮಷಾಃ ।**
**ತೇಷಾಂ ತುಷ್ಟಾ ಪ್ರದಾಸ್ಯಾಮಿ ರಾಜ್ಯಮಾಯುರ್ವಪುಃ ಸುತಮ್ ॥**

ಪ್ರವಾಸೇ ನಗರೇ ಚಾಪಿ ಸಂಗ್ರಾಮೇ ಶತ್ರುಸಂಕಟೇ ।
ಅಟವ್ಯಾಂ ದುರ್ಗಕಾನ್ತಾರೇ ಸಾಗರೇ ಗಹನೇ ಗಿರೌ ॥೩೧॥

ಯೇ ಸ್ಮರಿಷ್ಯನ್ತಿ ಮಾಂ ರಾಜನ್ಯಥಾಹಂ ಭವತಾ ಸ್ಮೃತಾ ।
ನ ತೇಷಾಂ ದುರ್ಲಭಂ ಕಿಂಚಿದಸ್ಮಿಲ್ಲೋಕೇ ಭವಿಷ್ಯತಿ ॥೩೨॥

ಇದಂ ಸ್ತೋತ್ರವರಂ ಭಕ್ತ್ಯಾ ಶೃಣುಯಾದ್ವಾ ಪಠೇತ ವಾ ।
ತಸ್ಯ ಸರ್ವಾಣಿ ಕಾರ್ಯಾಣಿ ಸಿದ್ಧಿಂ ಯಾಸ್ಯನ್ತಿ ಪಾಣ್ಡವಾಃ ॥೩೩॥

ಮತ್ಪ್ರಸಾದಾಚ್ಚ ವಃ ಸರ್ವಾನ್ವಿರಾಟನಗರೇ ಸ್ಥಿತಾನ್ ।
ನ ಪ್ರಜ್ಞಾಸ್ಯನ್ತಿ ಕುರವೋ ನರಾ ವಾ ತನ್ನಿವಾಸಿನಃ ॥೩೪॥

ಮನಸ್ಸಿನಲ್ಲಿ ನಾನಾವಿಧವಾದ ಯೋಚನೆಗಳನ್ನು ಮಾಡುತ್ತಿರದೇ ನನ್ನಲ್ಲಿಯೇ ನೆಟ್ಟಮನಸ್ಸುಳ್ಳವರಾಗಿ ಪಾಪರಹಿತರಾದ ಯಾರು ಈ ಸ್ತೋತ್ರವನ್ನು ಹೇಳುತ್ತಾರೆಯೋ ಅವರ ವಿಷಯದಲ್ಲಿ ನಾನು ಸಂತುಷ್ಟಳಾಗಿ ಅವರಿಗೆ ರಾಜ್ಯ, ಆಯುಷ್ಯ, ನೀರೋಗದೃಢಕಾಯತ್ವ ಮತ್ತು ಸತ್ಪುತ್ರರನ್ನು ದಯಪಾಲಿಸುತ್ತೇನೆ. ಯಾರು ಎಲ್ಲಿಯೇ ಇರಲಿ, ಪ್ರವಾಸದಲ್ಲಿರಲಿ, ನಗರದಲ್ಲಿರಲಿ, ಯುದ್ಧಭೂಮಿಯಲ್ಲಿರಲಿ, ಶತ್ರುಗಳಿಂದ ಬಾಧಿತರಾಗಿರಲಿ, ದಟ್ಟವಾದ ಅರಣ್ಯದ ಮಧ್ಯದಲ್ಲಿರಲಿ, ದುರ್ಗಮವಾದ ಹಾದಿಯಲ್ಲಿರಲಿ, ಸಮುದ್ರದ ಮಧ್ಯದಲ್ಲಿರಲಿ, ಗಹನವಾದ ಪರ್ವತದ ಮೇಲಿರಲಿ–ನನ್ನನ್ನು ನೀನೀಗ ಸ್ಮರಿಸಿದಂತೆ ಸ್ಮರಿಸಿಕೊಳ್ಳುತ್ತಾರೆಯೋ–ಅವರೆಲ್ಲರ ಕಷ್ಟಗಳನ್ನೂ ಒಡನೆಯೇ ಪರಿಹರಿಸುತ್ತೇನೆ ಮತ್ತು ಅವರಿಗೆ ದುರ್ಲಭವೆನಿಸುವ ವಸ್ತುವೇ ಈ ಲೋಕದಲ್ಲಿರದಂತೆ ನಾನವರ ಅಪೇಕ್ಷೆಗಳನ್ನು ಈಡೇರಿಸುತ್ತೇನೆ. ನೀನೀಗ ಮಾಡಿದ ಸ್ತೋತ್ರರತ್ನವನ್ನು ಭಕ್ತಿ-ಶ್ರದ್ಧೆಗಳಿಂದ ಯಾವನು ಪಠಿಸುತ್ತಿರುತ್ತಾನೆಯೋ ಮತ್ತು ಯಾವನು ಕೇಳುತ್ತಾನೆಯೋ ಅವನ ಸಕಲಕಾರ್ಯಗಳೂ ಸಿದ್ಧಿಸುತ್ತವೆ. ಯುಧಿಷ್ಠಿರ! ನನ್ನ ಅನುಗ್ರಹದಿಂದಾಗಿ ನೀವುಗಳು ವಿರಾಟರಾಜನ ರಾಜಧಾನಿಯಲ್ಲಿರುವಾಗ ಕೌರವರಾಗಲೀ, ಅಲ್ಲಿಯ ಪೌರರಾಗಲೀ ನಿಮ್ಮನ್ನು ಗುರುತಿಸಲಾರರು."

ಜನಮೇಜಯ! ದುರ್ಗಾದೇವಿಯು ಯುಧಿಷ್ಠಿರನಿಗೆ ಹೀಗೆ ಹೇಳಿ

ಅವರ ರಕ್ಷಣಾಭಾರವನ್ನು ತಾನೇ ವಹಿಸಿಕೊಂಡು ಅಲ್ಲಿಯೇ ಅಂತರ್ಧಾನ ಹೊಂದಿದಳು."

೬ನೆಯ ಅಧ್ಯಾಯವು ಮುಗಿಯಿತು.

೭ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ರಾಜಸಭೆಯನ್ನು ಪ್ರವೇಶಿಸಿ ವಿರಾಟನಿಂದ ಸಮ್ಮಾನಿತನಾದುದು

ವೈಶಂಪಾಯನರು ಕಥೆಯನ್ನು ಮುಂದುವರಿಸಿ ಹೇಳುತ್ತಾರೆ :

"ಜನಮೇಜಯ! ದುರ್ಗಾದೇವಿಯಿಂದ ಅನುಗ್ರಹಪಡೆದನಂತರ ಯುಧಿಷ್ಠಿರನು ಮೊದಲು ತನ್ನ ವೇಷವನ್ನು ಬದಲಾಯಿಸಿಕೊಂಡು ವೈಡೂರ್ಯದಿಂದ ಮತ್ತು ಕಾಂಚನದಿಂದ ನಿರ್ಮಿತವಾದ ಪಗಡೆಯಾಟದ ಕಾಯಿಗಳನ್ನೂ-ದಾಳಗಳನ್ನೂ ಅಂಗವಸ್ತ್ರದಲ್ಲಿ ಸುತ್ತಿ ಕಂಕುಳಿನಲ್ಲಿಟ್ಟುಕೊಂಡು ವಿರಾಟರಾಜನ ಸಭಾಭವನವನ್ನು ಪ್ರವೇಶಿಸಿದನು. ಬ್ರಾಹ್ಮಣವೇಷವನ್ನು ಧರಿಸಿದ್ದರೂ ಅವನಲ್ಲಿದ್ದ ರಾಜಕಳೆಯು ಲುಪ್ತವಾಗಿರಲಿಲ್ಲ. ನರಾಧಿಪನಾದ, ಯಶೋವಂತನಾದ, ಕುರುವಂಶಪ್ರದೀಪನಾದ, ಮಹಾನುಭಾವನಾದ, ಅನೇಕಾನೇಕರಾಜರಿಂದ ಸತ್ಕರಿಸಲ್ಪಡುತ್ತಿದ್ದ, ವಿಷಸರ್ಪದಂತೆ ಶತ್ರುಗಳಿಗೆ ದುರಾಸದನಾದ, ಬಲ-ರೂಪ-ಪರಾಕ್ರಮಗಳಲ್ಲಿ ದೇವತೆಗಳಿಗೆ ಸಮಾನನಾಗಿದ್ದ ಯುಧಿಷ್ಠಿರನಂದು-ಕಾರ್ಮುಗಿಲಿನಿಂದ ಆಚ್ಛಾದಿತನಾದ ಸೂರ್ಯನಂತೆ-ಬೂದಿಮುಚಿದ ಕೆಂಡದಂತೆ-ನಿಜಸ್ವರೂಪವನ್ನು ಮರೆಸಿ ಕೊಂಡು ಯಶೋವಂತನಾದ ವಿರಾಟರಾಜನ ಆಸ್ಥಾನಕ್ಕೆ ತೆರಳಿದನು.

ಮೋಡದ ಮಧ್ಯದಲ್ಲಿ ಚಲಿಸುತ್ತಿರುವ ಚಂದ್ರನಂತೆ-ಸಭಾಮಂದಿರ ದೊಳಗೆ ಬರುತ್ತಿದ್ದ ಯುಧಿಷ್ಠಿರನನ್ನು ವಿರಾಟರಾಜನು ದೂರದಿಂದಲೇ ವೀಕ್ಷಿಸುತ್ತಿದ್ದು ಹತ್ತಿರಕ್ಕೆ ಬಂದನಂತರ-ಪೂರ್ಣಚಂದ್ರಬಿಂಬಕ್ಕೆ ಸಮಾನವಾದ ಮುಖದಿಂದ ಕೂಡಿದ್ದ, ಮಹಾನುಭಾವನಾದ ಯುಧಿಷ್ಠಿರನನ್ನು ಕಣ್ತುಂಬ ನೋಡಿದನು.

ರಾಜನನ್ನು ಕಾಣಲು ಯಾರೇ ಬಂದರೂ ಆಗಮಿಸಿದವರೊಡನೆ

ರಾಜನೇ ನೇರವಾಗಿ ಮಾತನಾಡುವ ಸಂಪ್ರದಾಯವಿಲ್ಲ. ಅಂತೆಯೇ ವಿರಾಟನೂ ತನ್ನ ಅಕ್ಕ-ಪಕ್ಕಗಳಲ್ಲಿ ಕುಳಿತಿದ್ದ ಮಂತ್ರಿ-ದ್ವಿಜ-ಸೂತ-ವೈಶ್ಯರೇ ಮೊದಲಾದವರನ್ನು ಉದ್ದೇಶಿಸಿ ಹೇಳಿದನು :



"ಮಹೋದಯರೇ! ಇವನಾರು? ರಾಜನಂತೆಯೇ ಕಾಣುತ್ತಿರುವ ಇವನು ಇದೇ ಮೊದಲನೆಯ ಬಾರಿ ನಮ್ಮ ಆಸ್ಥಾನಕ್ಕೆ ಆಗಮಿಸಿರುತ್ತಾನೆ. ಇವನು ಬ್ರಾಹ್ಮಣವೇಷವನ್ನು ಧರಿಸಿರುವುದೇನೋ ನಿಜ. ಇವನ ವೇಷ-ಭೂಷಣಗಳನ್ನೇ ನಾವು ವೀಕ್ಷಿಸಿ ಹೇಳುವುದಾದರೆ ಇವನನ್ನು ಬ್ರಾಹ್ಮಣ ನೆಂದೇ ಹೇಳಬೇಕಾಗುತ್ತದೆ. ಆದರೆ ನನ್ನ ಮನಸ್ಸು ಮಾತ್ರ ಇವನು ಬ್ರಾಹ್ಮಣನಲ್ಲವೆಂದೇ ಹೇಳುತ್ತಿದೆ. ಇವನೊಬ್ಬ ಪೃಥ್ವೀಪತಿಯಾದ ನರೋ ತ್ತಮನೇ ಆಗಿರಬೇಕು.

ಆದರೆ ರಾಜಯೋಗ್ಯವಾದ ಭೃತ್ಯ-ರಥ-ಕುಂಜರ-ಅಶ್ವಗಳಾವುವೂ ಇವನ ಸಮೀಪದಲ್ಲಿರುವುದಿಲ್ಲ. ಅವುಗಳಿಲ್ಲದೆಯೇ ಇವನು ಸಾಕ್ಷಾತ್ ಇಂದ್ರನಂತೆಯೇ ವಿರಾಜಿಸುತ್ತಿದ್ದಾನೆ. ಇವನ ಶರೀರದ ಲಕ್ಷಣಗಳನ್ನು ಸೂಕ್ಷ್ಮವಾಗಿ ವೀಕ್ಷಿಸಿದರೆ ಇವನು ಮೂರ್ಧಾಭಿಷಿಕ್ತನಾದ ಮಹಾರಾಜನೇ ಆಗಿರಬೇಕೆಂದು ನನ್ನ ಮನಸ್ಸಿಗನ್ನಿಸುತ್ತದೆ. ಬ್ರಾಹ್ಮಣವೇಷವನ್ನು ಧರಿಸಿದ್ದರೂ ಇವನ ನಡೆಯಲ್ಲಿ ದಿಟ್ಟತನವಿದೆ. ಮದಿಸಿದ ಆನೆಯು ಕಮಲಪುಷ್ಪಗಳಿಂದ ಕೂಡಿರುವ ಸರೋವರವನ್ನು ಪ್ರವೇಶಿಸುವಂತೆ–ಇವನು ಯಾವ ವಿಧವಾದ ಸಂಕೋಚವೂ ಇಲ್ಲದೇ ಗಾಂಭೀರ್ಯದಿಂದ ಬರುತ್ತಿದ್ದಾನೆ."

ಜನಮೇಜಯ! ವಿರಾಟನು ಆಗಮಿಸಿದ ವ್ಯಕ್ತಿಯ ವಿಷಯದಲ್ಲಿ ಈ ವಿಧವಾಗಿ ತರ್ಕಿಸುತ್ತಿದ್ದಾಗ ಯುಧಿಷ್ಠಿರನೇ ವಿರಾಟನ ಮುಂದೆ ನಿಂತು ರಾಜನನ್ನು ಕುರಿತು ಹೇಳಿದನು :

"ಮಹಾರಾಜ! ನಾನೊಬ್ಬ ದ್ವಿಜನು. ನನ್ನಲ್ಲಿದ್ದ ಸರ್ವಸ್ವವನ್ನೂ ಕಳೆದುಕೊಂಡು ನಿನ್ನಲ್ಲಿಗೆ ಇಚ್ಛೆಬಂದಂತೆ ಸಂಚರಿಸುತ್ತಾ ಜೀವನಾರ್ಥವಾಗಿ ಆಗಮಿಸಿದ್ದೇನೆ. ಪಾಪರಹಿತನೇ! ನೀನು ಹೇಳುವ ಕೆಲಸಗಳನ್ನು ಮಾಡಿ ಕೊಂಡು ಇಲ್ಲಿರಲು ಇಚ್ಛಿಸಿ ಬಂದಿರುತ್ತೇನೆ."

ಬ್ರಾಹ್ಮಣನು ಹೀಗೆಂದು ಹೇಳುತ್ತಲೇ ವಿರಾಟನು ಸಂತುಷ್ಟಾಂತ ರಂಗನಾಗಿ–'**ಸ್ವಾಗತಂ ತೇ ಬ್ರಹ್ಮನ್**' 'ಬ್ರಾಹ್ಮಣನೇ! ನಿನಗೆ ಸುಸ್ವಾಗತವು'–ಎಂದು ಹೇಳಿ ಯುಧಿಷ್ಠಿರನನ್ನು ಆದರಪೂರ್ವಕವಾಗಿ ಪರಿಗ್ರಹಿಸಿದನು. ಅವನ ಶರೀರಕಾಂತಿಯನ್ನು ನೋಡಿ ಬಹುಸಂತುಷ್ಟನಾದ ವಿರಾಟನು ಬ್ರಾಹ್ಮಣನನ್ನು ಕುರಿತು ಹೇಳಿದನು :

"ತಾತ! ಕೇವಲ ವಿಶ್ವಾಸದ ಕಾರಣದಿಂದ ನಾನು ನಿನ್ನನ್ನು ಪ್ರಶ್ನಿಸುತ್ತೇನೆ. ಬ್ರಾಹ್ಮಣೋತ್ತಮ! ನೀನಾರು? ಯಾವ ರಾಜನ ರಾಜ್ಯದಿಂದ ನೀನಿಲ್ಲಿಗೆ ಆಗಮಿಸಿರುವೆ? ನಿನ್ನ ಕುಲ-ಗೋತ್ರಗಳೇನು? ನಾಮಧೇಯವೇನು? ನಿನ್ನಲ್ಲಿರುವ ಕುಶಲವಿದ್ಯೆಯೇನು?"

"ವಿರಾಟರಾಜ! ಕಂಕನೆಂದು ನನ್ನ ಹೆಸರು. ವೈಯಾಘ್ರಪದ ಗೋತ್ರೋತ್ಪನ್ನನು. ನಾನು ಹಿಂದೆ ಯುಧಿಷ್ಠಿರನ ಆಸ್ಥಾನದಲ್ಲಿದ್ದೆನು.

ಅವನೊಡನೆ ನನಗೆ ವಿಶೇಷವಾದ ಸಖ್ಯವಿದ್ದಿತು. ನಾನು ಅಕ್ಷವಿದ್ಯೆಯಲ್ಲಿ ನಿಪುಣನಾಗಿದ್ದೇನೆ. ಚತುರತೆಯಿಂದ ದಾಳಬಿಡುವ ಮತ್ತು ಕಾಯಿಗಳನ್ನು ನಡೆಸುವ ಕಲೆಯು ನನಗೆ ಚೆನ್ನಾಗಿ ತಿಳಿದಿರುವುದು. ಜೂಜಾಡುವುದರಲ್ಲಿ ಕುಶಲನೆಂದು ಪ್ರಸಿದ್ಧನಾಗಿರುತ್ತೇನೆ."

(ಪಗಡೆಯಾಟದ ಮೂಲಕವಾಗಿ ಜೂಜಾಡುವುದು ರಾಜವ್ಯಸನಗಳಲ್ಲೊಂದು. ಜೂಜಾಟದ ವ್ಯಸನಿಗಳು ಜೂಜಾಡುವುದರಲ್ಲಿ ಯಾವ ವಿಧವಾದ ತಾರತಮ್ಯವನ್ನೂ ಎಣಿಸುವುದಿಲ್ಲ. ರಾಜನು ಒಬ್ಬ ಧೂರ್ತನೊಡನೆಯೂ ಜೂಜಾಡಬಹುದು. ಮುಂದೆ ಈ ವಿಷಯವನ್ನೇ ವಿರಾಟನು ಸ್ಪಷ್ಟವಾಗಿ ಹೇಳುತ್ತಾನೆ. ವಿರಾಟನಿಗೂ ಜೂಜಾಡುವುದರಲ್ಲಿ ಬಹಳ ಆಸಕ್ತಿಯಿದ್ದಿತು.)

ಯೋಗ್ಯನಾದ ಅಕ್ಷವಿದ್ಯಾನಿಪುಣನೊಬ್ಬನು ತನಗೆ ಸಿಕ್ಕಿದನೆಂದು ವಿರಾಟನು ಆನಂದಭರಿತನಾದನು. ಅಂತೆಯೇ ಅವನು ಧರ್ಮಜನನ್ನು ಕುರಿತು ಹೇಳಿದನು :

"ಬ್ರಾಹ್ಮಣೋತ್ತಮ! ನಿನಗೆ ಬೇಕಾದುದನ್ನು ಕೊಡುವೆನು. ಮತ್ಸ್ಯರಾಜ್ಯವನ್ನೇ ಬೇಕಾದರೂ ನಿನಗೆ ಕೊಟ್ಟುಬಿಡುತ್ತೇನೆ. ನೀನೇ ಈ ರಾಜ್ಯವನ್ನು ಆಳಿಕೊಂಡಿರಬಹುದು. ಇದಕ್ಕೆ ಕಾರಣವಿಷ್ಟೆ : ಜೂಜುಗಾರರು ನನಗೆ ಅತ್ಯಂತಪ್ರಿಯರಾಗಿರುತ್ತಾರೆ. ಅವರು ಅಪೇಕ್ಷಿಸುವುದನ್ನು ನಾನು ಕೊಡುತ್ತಲೇ ಇರುತ್ತೇನೆ. ನೀನಾದರೋ ಬ್ರಾಹ್ಮಣೋತ್ತಮನು. ದೇವಸದೃಶನಾಗಿರುವೆ. ನನಗೆ ಅತ್ಯಂತಪ್ರಿಯವಾಗಿರುವ ಅಕ್ಷವಿದ್ಯೆಯಲ್ಲಿಯೂ ನಿಪುಣನಾಗಿರುವೆ. ಆದುದರಿಂದ ನೀನು ಈ ರಾಜ್ಯವನ್ನೇ ಪಡೆಯಲು ಅರ್ಹನಾಗಿರುವೆ."

"ಮತ್ಸ್ಯರಾಜ! ಉದಾರಿಯಾದ ನಿನಗೆ ಈ ಮಾತುಗಳು ಯೋಗ್ಯವೇ ಆಗಿವೆ. ಆದರೆ ನನ್ನದೊಂದು ಸಣ್ಣ ನಿಬಂಧನೆಯನ್ನು ನೀನು ದಯಮಾಡಿ ನಡೆಸಿಕೊಡಬೇಕಾಗಿದೆ :

ಪ್ರಾಪ್ನೋ ವಿವಾದಂ ಪ್ರಥಮಂ ವಿಶಾಮ್ಪತೇ
ನ ವಿದ್ಯತೇ ಕಂಚನ ಮತ್ಸ್ಯಹೀನತಃ ।

**ನ ಮೇ ಜಿತಃ ಕಶ್ಚನ ಧಾರಯೇದ್ಧನಂ**
**ವರೋ ಮಮೈಷೋಽಸ್ತು ತವ ಪ್ರಸಾದಜಃ ॥೧೪॥**

ಮತ್ಸ್ಯರಾಜ! ಮೊದಲನೆಯದಾಗಿ : ಕೆಳದರ್ಜೆಯ ಜನರೊಡನೆ ನಾನು ಆಟದಲ್ಲಿ ಕುಳಿತು ವಿರಸಕ್ಕೆ ಕಾರಣವಾಗಬಾರದು. (ಹೀನಜನರೊಡನೆ ವಿವಾದಮಾಡಲು ನಾನು ಇಷ್ಟಪಡುವುದಿಲ್ಲ.) ಎರಡನೆದಾಗಿ : ನನ್ನೊಡನೆ ಆಟದಲ್ಲಿ ಸೋತವನು ಹಣವನ್ನು ಉಳಿಸಿಕೊಂಡು ಹೋಗಬಾರದು. (ಅವನಲ್ಲಿ ಹಣವಿರುವವರೆಗೂ ನನ್ನೊಡನೆ ಆಡುತ್ತಲೇ ಇರಬೇಕು.) ಈ ಎರಡು ವರಗಳನ್ನು ದಯಪಾಲಿಸಬೇಕು."

**ಹನ್ಯಾಮವಶ್ಯಂ ಯದಿ ತೇಽಪ್ರಿಯಂ ಚರೇ-**
**ತ್ಪ್ರವ್ರಾಜಯೇಯಂ ವಿಷಯಾದ್ದ್ವಿಜಾಂಸ್ತಥಾ ।**
**ಶೃಣ್ವನ್ತು ಮೇ ಜಾನಪದಾಃ ಸಮಾಗತಾಃ**
**ಕಙ್ಕೋ ಯಥಾಹಂ ವಿಷಯೇ ಪ್ರಭುಸ್ತಥಾ ॥೧೫॥**

"ಕಂಕ! ನಾನೀ ವಿಷಯದಲ್ಲಿ ಸ್ಪಷ್ಟವಾಗಿಯೇ ಪ್ರತಿಜ್ಞೆಮಾಡಿ ಹೇಳುವೆನು ; ಕೇಳು. ಬ್ರಾಹ್ಮಣರಲ್ಲದೇ ಬೇರೆ ಯಾರಾದರೂ ನಿನ್ನ ವಿಷಯ ದಲ್ಲಿ ಅಪರಾಧವನ್ನೆಸಗಿದರೆ ಅವರನ್ನು ಕೊಲ್ಲಿಸುತ್ತೇನೆ. ಬ್ರಾಹ್ಮಣರೇನಾ ದರೂ ನಿನಗೆ ಅಪ್ರಿಯವಾದ ಕಾರ್ಯವನ್ನು ಮಾಡಿದರೆ ಅವರನ್ನು ದೇಶಭ್ರಷ್ಟರನ್ನಾಗಿ ಮಾಡಿಬಿಡುತ್ತೇನೆ. ನಿನಗೆ ಅಪ್ರಿಯವನ್ನೆಸಗಿದವರು ನನ್ನ ರಾಜ್ಯದಲ್ಲಿ ಖಂಡಿತವಾಗಿಯೂ ಉಳಿಯಲಾರರು."

ವಿರಾಟನು ಹೀಗೆಂದು ಕಂಕನಿಗೆ ಆಶ್ವಾಸನೆಯನ್ನಿತ್ತು ನೆರೆದಿದ್ದ ಸಭ್ಯರನ್ನು ಸಂಬೋಧಿಸಿ ಹೇಳಿದನು :

"ಇಲ್ಲಿ ನೆರೆದಿರುವ ಪ್ರಜೆಗಳೆಲ್ಲರೂ ನಾನೀಗ ಹೇಳುವುದನ್ನು ಗಮನ ವಿಟ್ಟು ಆಲಿಸಿರಿ. ನಾನು ಹೇಗೆ ಈ ಮತ್ಸ್ಯದೇಶಕ್ಕೆ ಅರಸನೋ–ಅಂತೆಯೇ ನನ್ನ ಗೆಳೆಯನಾದ ಈ ಕಂಕನೂ ಈ ಮತ್ಸ್ಯದೇಶಕ್ಕೆ ಪ್ರಭುವಾಗಿರುತ್ತಾನೆ."

ಹೀಗೆಂಬುದಾಗಿ ಘೋಷಿಸಿ ಪುನಃ ಯುಧಿಷ್ಠಿರನನ್ನು ಕುರಿತು ವಿರಾಟನು ಹೇಳಿದನು :

"ಕಂಕ! ನೀನು ನನಗೆ ಅತ್ಯಂತಪ್ರಿಯವಾದ ಸಖನಾಗಿರುವೆ. ನಾನು ಉಪಯೋಗಿಸುವ ಪಲ್ಲಕ್ಕಿಯನ್ನೇ ನೀನೂ ಉಪಯೋಗಿಸಬಹುದು. ನಮ್ಮಿಬ್ಬರಲ್ಲಿ ಯಾವ ವಿಧವಾದ ತಾರತಮ್ಯವೂ ಇರುವುದಿಲ್ಲ. ರಾಜ ಯೋಗ್ಯವಾದ ವಸ್ತ್ರಗಳನ್ನು ಉಟ್ಟುಕೊಳ್ಳಬಹುದು. ರಾಜೋಚಿತವಾದ ಭೋಜನವನ್ನೂ ಮಾಡಬಹುದು. ನೀನು ಈ ಅರಮನೆಯಲ್ಲಿ ಎಲ್ಲಿ ಬೇಕಾದರೂ ಇರಬಹುದು. ಎಲ್ಲಿಗೆ ಬೇಕಾದರೂ ಹೋಗಬಹುದು. ನಿನಗಾಗಿ ಈ ಅರಮನೆಯ ಸಕಲದ್ವಾರಗಳೂ ಸರ್ವದಾ ತೆರೆದಿರುತ್ತವೆ. ನಿನ್ನ ಬಳಿಗೆ ಯಾರಾದರೂ ಕಷ್ಟದಲ್ಲಿರುವವರು ಅಥವಾ ವೃತ್ತಿಯಿಲ್ಲದವರು ಆಗಮಿಸಿದರೆ ಅವರಿಗೆ ನೀನು ಆಶ್ವಾಸನೆಕೊಟ್ಟು ಕಳುಹಿಸಬಹುದು. ನನಗೆ ಅವರ ವಿಷಯವನ್ನು ತಿಳಿಸು. ನೀನು ಅವರಿಗೆ ಯಾವ ವಿಧವಾದ ಸಹಾಯ ಸಂಪತ್ತುಗಳನ್ನು ಕೊಡಲು ಸಲಹೆಮಾಡುವೆಯೋ ಅವುಗಳೆಲ್ಲವನ್ನೂ ನಾನು ನಿಸ್ಸಂಶಯವಾಗಿ ನಡೆಸಿಕೊಡುವೆನು. ನಿನಗೆ ನನ್ನ ಸಮೀಪದಲ್ಲಿ ಯಾವ ವಿಧವಾದ ಭಯಕ್ಕೂ ಕಾರಣವಿಲ್ಲ, ಕಂಕ!"–ಎಂದು ಹೇಳಿ ವಿರಾಟನು ಯುಧಿಷ್ಠಿರನಿಗೆ ಪರಿಪೂರ್ಣವಾದ ಆಶ್ವಾಸನೆಯನ್ನಿತ್ತನು.

ಜನಮೇಜಯ! ಈ ರೀತಿಯಲ್ಲಿ ಯುಧಿಷ್ಠಿರನು ವಿರಾಟನನ್ನು ಸಂದರ್ಶಿಸಿದನಲ್ಲದೇ ಅವನಿಂದ ವರಗಳನ್ನೂ ಪಡೆದು ಅರಮನೆಯ ಊಳಿಗದವರಿಂದ ಸರ್ವದಾ ಸಮ್ಮಾನ್ಯನಾಗಿ ಸುಖವಾಗಿದ್ದನು. ಅವನು ವಿರಾಟರಾಜನ ಅರಮನೆಯಲ್ಲಿರುವ ಪರ್ಯಂತವಾಗಿ ಯಾರೊಬ್ಬರೂ ಯುಧಿಷ್ಠಿರನನ್ನು ಗುರುತಿಸಲಿಲ್ಲ. ಅವನ ಚರ್ಯೆಯೂ ಯಾರಿಗೂ ತಿಳಿಯಲಿಲ್ಲ.

೭ನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ಭೀಮಸೇನನು ವಿರಾಟರಾಜನ ಸಭಾಮಂದಿರವನ್ನು ಪ್ರವೇಶಿಸಿದುದು : ವಿರಾಟನು ಅವನಿಗೂ ಆಶ್ವಾಸನೆಯನ್ನಿತ್ತುದು

ಜನಮೇಜಯ! ಅನಂತರದಲ್ಲಿ ಭೀಮಬಲನಾದ, ಸಿಂಹವಿಕ್ರಮನಾದ ಭೀಮಸೇನನು ತನ್ನ ಶರೀರಕಾಂತಿಯಿಂದ ಪ್ರಜ್ವಲಿಸುತ್ತಾ, ಕೈಗಳಲ್ಲಿ ಕಡೆಗೋಲನ್ನೂ–ಸೌಟನ್ನೂ, ಒರೆಯಿಲ್ಲದ, ಕಪ್ಪುಬಣ್ಣದ, ಯಾವ ವಿಧವಾದ ಚಿಹ್ನೆಗಳೂ ಇಲ್ಲದ ಕತ್ತಿಯನ್ನೂ ಹಿಡಿದು ವಿರಾಟರಾಜನ ಸಭಾಭವನಕ್ಕೆ ಆಗಮಿಸಿದನು. ಭೀಮನು ಅಡಿಗೆಯವನ ವೇಷಧರಿಸಿದ್ದರೂ– ಸೂರ್ಯನು ಲೋಕವನ್ನು ಪ್ರಕಾಶಪಡಿಸುವಂತೆ–ತನ್ನ ಶರೀರಶೋಭೆಯಿಂದ ವಿರಾಟರಾಜನ ಸಭೆಯನ್ನು ಪ್ರಕಾಶಗೊಳಿಸುತ್ತಿದ್ದನು. ಕಪ್ಪಾದ ವಸ್ತ್ರವನ್ನುಟ್ಟಿದ್ದ, ಮೇರುಪರ್ವತದಂತೆ ದೃಢಕಾಯನಾಗಿದ್ದ ಭೀಮನು ವಿರಾಟರಾಜನ ಸನ್ನಿಧಾನಕ್ಕೆ ಹೋಗಿ ನಿಂತುಕೊಂಡನು.

ಸಿಂಹದೋಪಾದಿಯಲ್ಲಿ ದಿಟ್ಟತನದಿಂದ ಹೆಜ್ಜೆಗಳನ್ನಿಡುತ್ತಾ ತನ್ನ ಆಸ್ಥಾನಕ್ಕಾಗಮಿಸಿದ ಭೀಮಸೇನನನ್ನು ನೋಡಿ ಸಭೆಯಲ್ಲಿ ನೆರೆದಿದ್ದ ಸಭಾ ಸದರನ್ನು ಕುರಿತು ಮತ್ಸ್ಯರಾಜನು ಹೇಳಿದನು :

"ಮಹೋದಯರೇ! ನಮ್ಮಲ್ಲಿಗೆ ಆಗಮಿಸುತ್ತಿರುವ ಈ ಪುರುಷನ ಹೆಗಲುಗಳು ಸಿಂಹದ ಹೆಗಲಿನಂತೆಯೇ ಉನ್ನತವಾಗಿವೆ. ಮೇಲಾಗಿ ಇವನು ರೂಪವಂತನಾಗಿಯೂ ಇದ್ದಾನೆ. ವೇಷವನ್ನು ಬದಲಾಯಿಸಿಕೊಂಡಿದ್ದರೂ ಇವನು ಯಾವನೋ ಒಬ್ಬ ರಾಜಕುಮಾರನೇ ಆಗಿರಬಹುದಲ್ಲವೇ? ಈ ಪುರುಷನು ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸನ್ನು ಹೊಂದಿರು ತ್ತಾನೆ. ಇವನನ್ನು ನಾನು ಹಿಂದೆ ಯಾವಾಗಲೂ ನೋಡಿದ ಜ್ಞಾಪಕವಿಲ್ಲ. ಎಷ್ಟೇ ಯೋಚಿಸಿದರೂ ಇವನಾರೆಂಬುದನ್ನು ನಿರ್ಧರಿಸಲು ನನಗೆ ಸಾಧ್ಯ ವಾಗಲಿಲ್ಲ. ಇವನು ಇಲ್ಲಿಗೇಕೆ ಬಂದಿರುವನೆಂಬ ವಿಷಯವನ್ನು ಊಹೆ ಮಾಡಲೂ ಅಶಕ್ತನಾಗಿದ್ದೇನೆ. ಇವನ ಅಂಗಸೌಷ್ಠವ, ತೇಜಸ್ಸು, ನಡಿಗೆ ಗಳನ್ನು ನೋಡಿದರೆ ಇವನು ಪುರಂದರನೋ ಅಥವಾ ಯಕ್ಷರಾಜನೋ

ಇರಬೇಕೆಂದೆನಿಸುತ್ತದೆ. ನೀವುಗಳೀಗಲೇ ಇವನ ಕುಲ-ಗೋತ್ರಗಳನ್ನು ಪ್ರಶ್ನಿಸಿ ಇವನು ಇಲ್ಲಿಗೆ ಆಗಮಿಸಿರುವ ಕಾರಣವನ್ನೂ ತಿಳಿಯಿರಿ. ತಾನು ಅಪೇಕ್ಷಿಸುವುದನ್ನು ಇವನು ಸಾವಕಾಶವಿಲ್ಲದೇ ಹೊಂದಲಿ."



ರಾಜನ ಮಾತುಗಳನ್ನು ಕೇಳಿದ ಕೂಡಲೇ ಶೀಘ್ರಗಾಮಿಗಳಾದ ಸೇವಕರು ಭೀಮನ ಸಮೀಪಕ್ಕೆ ಧಾವಿಸಿ ರಾಜನು ಹೇಳಿದುದೆಲ್ಲವನ್ನೂ ವಿಶದವಾಗಿ ಭೀಮನಿಗೆ ಹೇಳಿದರು.

ಭೀಮನು ರಾಜನ ಬಳಿಗೆ ನೇರವಾಗಿ ಹೋಗಿ ರಾಜನನ್ನೇ ಸಂಬೋಧಿಸಿ ಹೇಳಿದನು :

"ರಾಜೇಂದ್ರ! ನಾನು ಬಲ್ಲವನೆಂಬ ಹೆಸರಿನ ಅಡಿಗೆಯವನಾಗಿದ್ದೇನೆ. ನಾನು ಉತ್ತಮವಾದ ವ್ಯಂಜನಗಳನ್ನು (ಪಲ್ಯ, ಸಾರು. ತೊವ್ವೆ, ಇತ್ಯಾದಿಗಳು) ಸಿದ್ಧಪಡಿಸುವುದರಲ್ಲಿ ಬಹಳ ಚತುರನಾಗಿದ್ದೇನೆ. ನನ್ನನ್ನು ನಿನ್ನ ಪಾಕಶಾಲೆಯಲ್ಲಿ ಈ ಕಾರ್ಯಕ್ಕಾಗಿ ನೇಮಿಸು."

ಭೀಮನ ಮಾತುಗಳು ದೈನ್ಯದಿಂದ ಕೂಡಿರಲಿಲ್ಲ. ರಾಜನಿಗೆ ಸಮಾನ ನಾದವನೊಬ್ಬನು ಮಾತನಾಡುತ್ತಿರುವಂತೆಯೇ ಯಾವ ವಿಧವಾದ ಸಂಕೋಚವೂ ಇಲ್ಲದೇ ಭೀಮನು ಮತ್ಸ್ಯರಾಜನೊಡನೆ ಮಾತನಾಡಿದನು.

ಭೀಮಸೇನನ ಮಾತುಗಳನ್ನು ಕೇಳುತ್ತಲೇ ವಿರಾಟನು ಆಶ್ಚರ್ಯ ಚಕಿತನಾಗಿ ಅವನನ್ನೇ ದಿಟ್ಟಿಸಿ ನೋಡುತ್ತಾ ಹೇಳಿದನು :

"ನೀನು ಅಡಿಗೆಯವನೆಂಬುದರಲ್ಲಿ ನನಗೆ ಎಳ್ಳಷ್ಟೂ ನಂಬಿಕೆಯಿಲ್ಲ. ನಿನ್ನನ್ನು ನೋಡಿದರೆ ಸಾಕ್ಷಾತ್ ಶಚೀಪತಿಯಂತೆಯೇ ಕಾಣುತ್ತಿರುವೆ. ನಿನ್ನ ಮುಖದ ಕಾಂತಿ, ಶರೀರಸೌಷ್ಠವ–ಇವುಗಳಿಂದ ನೀನು ನರೇಶನಂತೆಯೇ ಕಾಣುತ್ತಿರುವೆ."

"ನರೇಂದ್ರ! ನಿಶ್ಚಯವಾಗಿಯೂ ನಾನೊಬ್ಬ ಅಡಿಗೆಯವನು. ಇಂದು ನಿನ್ನ ಪರಿಚಾರಕನಾಗಿ ಬಂದಿರುತ್ತೇನೆ. ನಾನು ಮಾಡುತ್ತಿದ್ದ ಅಡಿಗೆಯ ರುಚಿಯನ್ನು ಹಿಂದೆ ಯುಧಿಷ್ಠಿರನೂ ಸವಿಯುತ್ತಿದ್ದನು. ಆದರೆ ನಾನು ಅಡಿಗೆಯವನು ಮಾತ್ರವೇ ಅಲ್ಲ. ನಾನು ಬಹಳ ಬಲಿಷ್ಠನೂ ಆಗಿರುತ್ತೇನೆ. ಬಲದಲ್ಲಿ ನನಗೆ ಸಮಾನರಾದವರು ಯಾರೂ ಇರಲಾರರು. ನನಗೆ ಮಲ್ಲಯುದ್ಧದಲ್ಲಿಯೂ ಹೆಚ್ಚಿನ ಪರಿಶ್ರಮವಿದೆ. ಗಜ-ಸಿಂಹಗಳೊಡನೆ ಅಥವಾ ಜಟ್ಟಿಗಳೊಡನೆ ಮಲ್ಲಯುದ್ಧಮಾಡಿ ನಿನಗೆ ಸಂತೋಷವನ್ನುಂಟು ಮಾಡುತ್ತೇನೆ."

"ಬಲ್ಲವ! ನಿನ್ನ ಅಪೇಕ್ಷೆಯಂತೆಯೇ ನಿನ್ನನ್ನು ಪಾಕಶಾಲೆಯಲ್ಲಿ ನಿಯಮಿಸಿಕೊಳ್ಳುತ್ತೇನೆ. ಏಕೆಂದರೆ : ನೀನು ಪಾಕಶಾಸ್ತ್ರದಲ್ಲಿ ಹೆಚ್ಚಿನ ಪರಿಶ್ರಮವಿರುವುದೆಂದು ಹೇಳುತ್ತಿರುವೆ. ಆದರೆ ಅಡಿಗೆಯ ಕಾರ್ಯವು ನಿನಗೆ ಯೋಗ್ಯವೆಂದು ನನಗನ್ನಿಸುತ್ತಿಲ್ಲ. ನಿನ್ನ ಬಲ-ರೂಪ-ತೇಜಸ್ಸುಗಳನ್ನು ನೋಡಿದರೆ ಸಮುದ್ರಪರ್ಯಂತವಾದ ಪೃಥ್ವಿಯನ್ನೇ ಆಳಲು ನೀನು

ಸಮರ್ಥನಾಗಿರುವೆಯೆಂದು ಭಾವಿಸುತ್ತೇನೆ. ನಿನ್ನ ಆಶಯದಂತೆ ನೀನು ಪಾಕಶಾಲೆಯಲ್ಲಿರಬಹುದು. ಈ ಹಿಂದೆ ನಾನು ಪಾಕಶಾಲೆಯಲ್ಲಿ ನೇಮಿಸಿರುವ ಅಡಿಗೆಯವರಿಗೆಲ್ಲರಿಗೂ ನೀನೇ ಪ್ರಧಾನಾಧಿಕಾರಿಯೂ ಆಗುವೆ.”

ಜನಮೇಜಯ! ವಿರಾಟನಿಂದ ಪಾಕಶಾಲಾಧ್ಯಕ್ಷನಾಗಿ ನಿಯಮಿತನಾದ ಭೀಮಸೇನನು ಅಮೋಘವಾದ, ಅತ್ಯಂತರುಚಿಕರವಾದ ಭೀಮಪಾಕವನ್ನು ಸಿದ್ಧಗೊಳಿಸುತ್ತಿದ್ದುದರಿಂದ ಕೆಲವೇ ದಿನಗಳಲ್ಲಿ ವಿರಾಟರಾಜನಿಗೆ ಅತ್ಯಂತ ಪ್ರಿಯನಾದನು. ಭೀಮನು ವಿರಾಟರಾಜನ ಅರಮನೆಯಲ್ಲಿರುವವರೆಗೂ ಅಲ್ಲಿಯ ಅಡಿಗೆಯವರಾಗಲೀ ಅಥವಾ ಪಟ್ಟಣಿಗರಾಗಲೀ ಅವನನ್ನು ಗುರುತಿಸಲು ಸಾಧ್ಯವಾಗಲಿಲ್ಲ.

೮ನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ದ್ರೌಪದಿಯು ಸೈರಂಧ್ರಿಯ ವೇಷಧರಿಸಿ ಅರಮನೆಯ ಸಮೀಪಕ್ಕೆ ಹೋದುದು : ಸುದೇಷ್ಣೆಯೊಡನೆ ದ್ರೌಪದಿಯ ಸಂಭಾಷಣೆ

ಜನಮೇಜಯ! ದ್ರೌಪದಿಯ ಕೇಶರಾಶಿಯು ಕಪ್ಪಾಗಿಯೂ, ನವಿರಾಗಿಯೂ, ಮೃದುವಾಗಿಯೂ ಇದ್ದಿತು. ಕಪ್ಪಾದ ಕಣ್ಣುಗಳಿಂದ ಕೂಡಿದ್ದ–ಶುಚಿಸ್ಮಿತೆಯಾದ ದ್ರೌಪದಿಯು ಗಾಳಿಗೆ ಹಾರಾಡುತ್ತಿದ್ದ, ಅತಿ ನವುರಾದ, ಅದುಷ್ಟವಾದ ಕೇಶರಾಶಿಯನ್ನು ನಯನಮನೋಹರವಾದ ರೀತಿಯಲ್ಲಿ ಕಟ್ಟಿ, ನೀಳವಾಗಿದ್ದ ಆ ಕೇಶರಾಶಿಯನ್ನು ತನ್ನ ಬಲಪಾರ್ಶ್ವದ ಮುಂಭಾಗಕ್ಕೆ ಸೆಳೆದುಕೊಂಡು ಮಲಿನವಾದೊಂದು ಸೀರೆಯನ್ನುಟ್ಟು ಕೊಂಡು ಸೈರಂಧ್ರಿಯ ವೇಷವನ್ನು ಧರಿಸಿ ದೀನಳಂತೆ ವಿರಾಟನಗರದ ರಾಜಬೀದಿಯಲ್ಲಿ ಕಾಣಿಸಿಕೊಂಡಳು. ಅತ್ತಲಿತ್ತ ತಿರುಗಾಡುತ್ತಿದ್ದ ಸೈರಂಧ್ರಿಯನ್ನು ವಿರಾಟನಗರದ ಸ್ತ್ರೀ-ಪುರುಷರು ನೋಡಿ ಅವಳ ಸಮೀಪಕ್ಕೆ ಹೋಗಿ ಅವಳನ್ನು ಕುರಿತು–‘ನೀನಾರು? ಯಾವ ಕೆಲಸವನ್ನು ಅಪೇಕ್ಷಿಸಿ

ಈ ರಾಜಬೀದಿಯಲ್ಲಿ ತಿರುಗಾಡುತ್ತಿರುವೆ?'–ಮುಂತಾಗಿ ಪ್ರಶ್ನಿಸಿದರು : ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ದ್ರೌಪದಿಯು ಹೇಳಿದಳು :

"ನಾನು ಸೈರಂಧ್ರೀ. (ಮನೆಗೆಲಸದವಳು) ನನ್ನನ್ನು ಕೆಲಸಕ್ಕಿಟ್ಟುಕೊಳ್ಳುವವರ ಮನೆಯಲ್ಲಿ ಅವರು ಹೇಳುವ ಕೆಲಸಗಳನ್ನು ಮಾಡಿಕೊಂಡಿದ್ದು ಜೀವನನಿರ್ವಹಣೆಯನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಬಂದಿರುತ್ತೇನೆ."

ಜನಮೇಜಯ! ಮಲಿನವಾದ ವಸ್ತ್ರವನ್ನುಟ್ಟಿದ್ದರೂ ಅವಳಾಡಿದ ವಿನಮ್ರತೆಯ ಸುಮಧುರವಚನಗಳು, ಅವಳ ನಯನಾನಂದಕರವಾದ ರೂಪ-ಲಾವಣ್ಯಗಳು ಮತ್ತು ಅವಳ ವೇಷ–ಇವುಗಳಿಂದ ಅವಳನ್ನು ನೋಡಿದ ಪುರಜನರು ಅವಳು ಹೇಳಿದ ಮಾತುಗಳಲ್ಲಿ ಶ್ರದ್ಧೆಯಿಡಲಿಲ್ಲ. ಅವಳು ದಾಸಿಯೆಂಬುದನ್ನೂ, ಅನ್ನಕ್ಕಾಗಿ ಅಲ್ಲಿಗೆ ಬಂದಿರುವಳೆಂಬುದನ್ನೂ ಜನರು ನಂಬಲಿಲ್ಲ.

ಆ ಸಮಯಕ್ಕೆ ಸರಿಯಾಗಿ ವಿರಾಟರಾಜನ ಅರಸಿಯಾದ, ಕೇಕಯ ರಾಜನ ಮಗಳಾದ ಸುದೇಷ್ಣೆಯೂ ಸೈರಂಧ್ರಿಯನ್ನು ನೋಡಿದಳು. ಆರ್ತಳಾಗಿದ್ದ, ಏಕವಸ್ತ್ರಧಾರಿಣಿಯಾಗಿದ್ದ ಸ್ತ್ರೀಯನ್ನು ನೋಡಿ ಒಡನೆಯೇ ಅವಳನ್ನು ಅರಮನೆಗೆ ದಾಸಿಯರ ಮೂಲಕವಾಗಿ ಕರೆಸಿಕೊಂಡು ಪ್ರಶ್ನಿಸಿದಳು:

"ಭದ್ರೇ! ನೀನು ಯಾರು? ಯಾವ ಕೆಲಸವನ್ನು ಮಾಡುವೆ?"

"ತಾಯೇ! ನಾನು ಸೈರಂಧ್ರೀ. ಇತರರ ಮನೆಗಳಲ್ಲಿ ಕೆಲಸ ಮಾಡಿಕೊಂಡಿರತಕ್ಕವಳು. ನನ್ನನ್ನು ಯಾರಾದರೂ ಕೆಲಸಕ್ಕಿಟ್ಟುಕೊಂಡರೆ ಅವರು ಹೇಳುವ ಕೆಲಸಗಳನ್ನು ಮಾಡಿಕೊಂಡಿರಲು ಸಿದ್ಧಳಿದ್ದೇನೆ."

"ಭಾಮಿನಿ! ನೀನು ಸೈರಂಧ್ರಿಯ ವೇಷವನ್ನು ಧರಿಸಿರುವುದೇನೋ ನಿಶ್ಚಯ. ಆದರೆ ನಿನ್ನಂತಹ ರೂಪವತಿಯರು, ಶುಭಲಕ್ಷಣಸಂಪನ್ನೆಯರು ಎಂದಿಗೂ ಮನೆಗೆಲಸದವರಾಗಿರಲು ಸಾಧ್ಯವೇ ಇಲ್ಲ. ನಿನ್ನ ಮುಖಲಕ್ಷಣವನ್ನು ನೋಡಿದರೆ ನೂರಾರು ದಾಸ-ದಾಸಿಯರಿಗೆ ನೀನು ಒಡತಿ

ಯಾಗಿದ್ದಂತೆಯೇ ನನಗೆ ತೋರುತ್ತಿದೆ. ಉತ್ತಮಸ್ತ್ರೀಯರಿಗಿರುವ ಸರ್ವ ಲಕ್ಷಣಗಳೂ ನಿನ್ನಲ್ಲಿವೆ, ಶುಭಾಂಗಿ!

**ನೋಚ್ಚಗುಲ್ಫ ಸಂಹತೋರುಸ್ತ್ರಿಗಮ್ಭೀರಾ ಷಡುನ್ನತಾ ।**
**ರಕ್ತಾ ಪಞ್ಚಸು ರಕ್ತೇಷು ಹಂಸಗದ್ಗದಭಾಷಿಣೀ ॥೧೦॥**

**ಸುಕೇಶೀ ಸುಸ್ತನೀ ಶ್ಯಾಮಾ ಪೀನಶ್ರೋಣಿಪಯೋಧರಾ ।**
**ತೇನ ತೇನೈವ ಸಮ್ಪನ್ನಾ ಕಾಶ್ಮೀರೀವ ತುರಙ್ಗಮೀ ॥೧೧॥**

**ಅರಾಲಪಕ್ಷ್ಮನಯನಾ ಬಿಮ್ಬೋಷ್ಠೀ ತನುಮಧ್ಯಮಾ ।**
**ಕಮ್ಬುಗ್ರೀವಾ ಗೂಢಶಿರಾ ಪೂರ್ಣಚನ್ದ್ರನಿಭಾನನಾ ॥೧೨॥**

ಉತ್ತಮಜಾತಿಯ ಸ್ತ್ರೀಯರಿಗೆ ಕಾಲಿನ ಹರಡುಗಳು ಮೇಲೆದ್ದು ಕಾಣಬಾರದು. ಅಂತೆಯೇ ನಿನ್ನ ಕಾಲಿನ ಹರಡುಗಳೂ ಉನ್ನತವಾಗಿರುವುದಿಲ್ಲ. ನಿನ್ನ ತೊಡೆಗಳೂ ಒಂದಕ್ಕೊಂದು ಮಸೆಯುತ್ತವೆ. ಇದೂ ಒಂದು ಉತ್ತಮಸ್ತ್ರೀಲಕ್ಷಣ. ನಿನ್ನ ಮಾತು ಬಹಳ ಗಾಂಭೀರ್ಯದಿಂದ ಕೂಡಿದೆ. ನಿನ್ನ ಬುದ್ಧಿಯೂ ಬಹಳ ಸೂಕ್ಷ್ಮವಾಗಿದೆ. ನಿನ್ನ ನಾಭಿಯೂ ಆಳವಾಗಿದೆ. ಇವೆಲ್ಲವೂ ಉತ್ತಮ ಸ್ತ್ರೀಲಕ್ಷಣಗಳು. ನಿನ್ನ ಕಾಲ್ಬೆರಳುಗಳೂ, ಶ್ರೋಣಿ ಸ್ತನಗಳೂ, ಮುಂಗೈ-ಹಿಂಗೈಗಳೂ, ಬೆನ್ನು ಮತ್ತು ಪಕ್ಕೆಗಳೂ ತುಂಬಿಕೊಂಡಿವೆ. ನಿನ್ನ ಕೈಗಳೂ ಕಾಲುಗಳೂ ಮತ್ತು ಕೈಯುಗುರುಗಳೂ, ಮುಖವೂ ಕೆಂಪುಛಾಯೆಯಿಂದ ಕೂಡಿವೆ. ಹಂಸದ ಧ್ವನಿಯಂತೆ ನಿನ್ನ ವಾಣಿಯು ಕೇಳಲು ಬಹಳ ಇಂಪಾಗಿರುವುದು. ನಿನ್ನ ಕೇಶಲಾವಣ್ಯವಂತೂ ಅನ್ಯಾದೃಶವಾದುದು. ಸುದೀರ್ಘವಾದ ನಿನ್ನ ಕೇಶಗಳ ಸೌಂದರ್ಯವನ್ನು ಸರ್ವದಾ ನೋಡುತ್ತಲೇ ಇರಬೇಕೆನ್ನಿಸುತ್ತದೆ. ಶೋಭಾಯಮಾನವಾದ ಸ್ತನದ್ವಯವನ್ನು ಹೊಂದಿರುವೆ. ಶ್ಯಾಮಲವರ್ಣದಿಂದ ಶೋಭಿಸುತ್ತಿರುವೆ. ಶ್ರೋಣಿ-ಪಯೋಧರಗಳು ತುಂಬಿಕೊಂಡಿವೆ. ಸರ್ವಲಕ್ಷಣಸಂಪನ್ನವಾದ ಕಾಶ್ಮೀರದ ಹೆಣ್ಣುಕುದುರೆಯಂತೆ–ನೀನು ಉತ್ತಮಸ್ತ್ರೀಯರಿಗಿರಬೇಕಾದ ಸರ್ವಲಕ್ಷಣಗಳಿಂದಲೂ ಕೂಡಿರುವೆ. ನಿನ್ನ ಕಣ್ಣುಗಳು ಚಂಚಲವಾಗಿಯೂ, ಕಣ್ಣುಗಳ ಮೇಲಿರುವ ಹುಬ್ಬುಗಳು ಡೊಂಕಾಗಿಯೂ ಇವೆ. ನಿನ್ನ ತುಟಿಗಳು ತೊಂಡೆಹಣ್ಣಿನಂತೆ ಕೆಂಪಾಗಿವೆ. ನಿನ್ನ ಸೊಂಟವು ಕಂಡೂ ಕಾಣಿಸದಷ್ಟು

ಸೂಕ್ಷ್ಮವಾಗಿದೆ. ನಿನ್ನ ಕುತ್ತಿಗೆಯು ಶಂಖದ ಆಕೃತಿಯನ್ನು ಹೊಂದಿದೆ. ಕಂಠನಾಳವು ಹೊರಗೆ ಕಾಣುತ್ತಿಲ್ಲ. ಪೂರ್ಣಚಂದ್ರನಿಗೆ ಸಮಾನವಾದ ಮುಖಕಾಂತಿಯನ್ನು ಹೊಂದಿರುವೆ.

ಮಂಗಳಾಂಗಿ! ಹೆಚ್ಚೇನು ಹೇಳಲಿ? ನೀನು ಮಹಾಲಕ್ಷ್ಮಿಯಂತೆಯೇ ಕಾಣುತ್ತಿರುವೆ.



ಶಾರದೋತ್ಪಲಪತ್ರಾಕ್ಷ್ಯಾ ಶಾರದೋತ್ಪಲಗನ್ಧಯಾ ।
ಶಾರದೋತ್ಪಲಸೇವಿನ್ಯಾ ರೂಪೇಣ ಸದೃಶೀ ಶ್ರಿಯಾ ॥೧೩॥

ಶರದೃತುವಿನಲ್ಲಿ ವಿಕಸಿತವಾದ ಕಮಲದಂತೆ ವಿಶಾಲವಾದ ನೇತ್ರಗಳನ್ನು ಹೊಂದಿರುವ, ಶರದೃತುವಿನ ವಿಕಸಿತವಾದ ಕಮಲದ ಸುಗಂಧಕ್ಕೆ

ಸಮಾನವಾದ ಸೌಗಂಧ್ಯದಿಂದ ಕೂಡಿರುವ, ಶರದೃತುವಿನಲ್ಲಿ ವಿಕಸಿತವಾದ ಕಮಲದಲ್ಲಿಯೇ ಪ್ರತಿಷ್ಠಿತಳಾಗಿರುವ ಮಹಾಲಕ್ಷ್ಮಿಗೆ ಸದೃಶವಾದ ರೂಪ, ಕಾಂತಿ ಮತ್ತು ಶರೀರಸೌಗಂಧ್ಯಗಳಿಂದ ಸುಶೋಭಿತಳಾಗಿರುವೆ.

ಮಂಗಳಾಂಗಿ! ನೀನಾರೆಂಬುದನ್ನು ನಿಜವಾಗಿ ಹೇಳು. ನೀನೀಗ ಹೇಳಿಕೊಳ್ಳುತ್ತಿರುವಂತೆ ಖಂಡಿತವಾಗಿಯೂ ನೀನು ದಾಸಿಯಲ್ಲ. ಸೈರಂಧ್ರಿಯ ಕೆಲಸವೂ ನಿನ್ನದಲ್ಲ. ನೀನೇನು ಯಕ್ಷಿಯೇ? ದೇವಕನ್ಯೆಯೇ? ಗಂಧರ್ವಕನ್ಯೆಯೇ? ಅಥವಾ ಅಪ್ಸರೆಯರಲ್ಲೊಬ್ಬಳು ನೀನಾಗಿರುವೆಯಾ? ನಾಗಕನ್ಯೆಯೇ ಅಥವಾ ಈ ನಗರದ ದೇವತೆಯೇ? ಕಿನ್ನರಿಯೇ ಅಥವಾ ಚಂದ್ರನ ಪತ್ನಿಯಾದ ರೋಹಿಣಿಯೇ ಇಲ್ಲಿಗೆ ಬಂದಿರುವೆಯಾ? ನಿಜ ಹೇಳು, ಮಗಳೇ! ಅಲಂಬುಷಾ, ಮಿತ್ರಕೇಶೀ, ಪುಣ್ಡರೀಕಾ, ಮಾಲಿನೀ, ಇಂದ್ರಾಣೀ, ವಾರುಣೀ–ಇವರುಗಳಲ್ಲಿ ನೀನು ಒಬ್ಬಳಾಗಿರಬೇಕು. ವಿಶ್ವಕರ್ಮನ ಪತ್ನಿಯೇ? ಬ್ರಹ್ಮನ ಪತ್ನಿಯಾದ ಸರಸ್ವತಿಯೇ? ಈ ದೇವಿಯರಲ್ಲಿ ನೀನಾರೆಂಬುದನ್ನು ಮರೆಮಾಚದೇ ಹೇಳು ತಾಯೇ! ದಾಸಿ– ಎಂದಾಗಲೀ, ಸೈರಂಧ್ರೀ–ಎಂದಾಗಲೀ ನನ್ನ ಮುಂದೆ ಹೇಳಿಕೊಳ್ಳಬೇಡ."

"ಮಹಾರಾಣಿ! ಸತ್ಯವಾಗಿ ಹೇಳುವೆನು. ನಾನು ದೇವಕನ್ಯೆಯೂ ಅಲ್ಲ; ಗಾಂಧರ್ವಿಯೂ ಅಲ್ಲ ; ಅಪ್ಸರೆಯೂ ಅಲ್ಲ ; ರಾಕ್ಷಸಿಯೂ ಆಗಿರುವುದಿಲ್ಲ. ಇತರರ ಮನೆಗಳಲ್ಲಿ ಸೇವಾಕಾರ್ಯಗಳನ್ನು ಮಾಡಿ ಜೀವನವನ್ನು ಹೊರೆಯುವ ಸೈರಂಧ್ರಿಯೇ ನಾನು. ಕೇಶವನ್ನು ಸಿಂಗರಿಸಲು ಬೇಕಾಗುವ ಅಂಜನವನ್ನು ಮಾಡುವ ವಿಧಾನವನ್ನು ತಿಳಿದಿರುವೆನು. ಅಂಜನವನ್ನು ನಿನ್ನ ತಲೆಗೆ ಹಚ್ಚಿ ಕೇಶರಾಶಿಯನ್ನು ವಿಧ-ವಿಧವಾಗಿ ಸಿಂಗರಿಸಬಲ್ಲೆನು. ಮೈಗೆ ಪೂಸಿಕೊಳ್ಳುವ ಅಂಗರಾಗಗಳನ್ನು ಮಾಡುವ ಕಲೆಯೂ ನನಗೆ ತಿಳಿದಿದೆ. ಮಲ್ಲಿಗೆ, ಕನ್ನೈದಿಲೆ, ಕಮಲಪುಷ್ಪಗಳಿಂದ ಚಿತ್ರ-ವಿಚಿತ್ರವಾದ, ನಯನ ಮನೋಹರವಾದ, ಶೋಭಾಯಮಾನವಾದ ಹಾರಗಳನ್ನು ಕಟ್ಟುವ ಕಲೆ ಯನ್ನೂ ತಿಳಿದಿರುವೆನು. ಹಿಂದೆ ನಾನು ಶ್ರೀಕೃಷ್ಣನ ಪ್ರೇಯಸಿಯಾದ ಸತ್ಯಭಾಮಾದೇವಿಯನ್ನು ಸೇವಿಸಿದ್ದೆನು. ಕೆಲವು ಕಾಲ ನಾನು ಪಾಂಡವರ

ಧರ್ಮಪತ್ನಿಯಾದ, ಲೋಕದಲ್ಲಿ ಏಕೈಕಸುಂದರಿಯಾದ ದ್ರೌಪದಿಯ ದಾಸಿಯೂ ಆಗಿದ್ದೆನು. ಹೀಗೆಯೇ ನಾನು ಅಲ್ಲಲ್ಲಿ ಸುತ್ತಾಡುತ್ತಾ ಕಾಲ ಕಳೆಯುತ್ತೇನೆ. ಎಲ್ಲಿಯವರೆಗೆ ನನಗೆ ಸುಖಭೋಜನ–ಉಡಲು ಒಳ್ಳೆಯ ವಸ್ತ್ರಗಳು ಸಿಗುವುದೋ–ಅಲ್ಲಿಯವರೆಗೂ ನಾನಿರುತ್ತೇನೆ. ಅನಂತರ ಮುಂದಿನೂರಿಗೆ ಪ್ರಯಾಣಮಾಡುತ್ತೇನೆ. ಇದೇ ನನ್ನ ಚರ್ಯೆಯಾಗಿದೆ. 'ಮಾಲಿನೀ' ಎಂದು ಸ್ವಯಂ ದ್ರೌಪದಿಯೇ ನನಗೆ ನಾಮಕರಣವನ್ನು ಮಾಡಿದಳು. ಆ ಮಾಲಿನಿಯೇ ಇಂದು ವಿರಾಟರಾಜನ ಧರ್ಮಪತ್ನಿಯಾದ ಸುದೇಷ್ಣೆಯ ಸಮೀಪದಲ್ಲಿ ನಿಂತಿರುವಳು. ಈ ವಿಷಯದಲ್ಲಿ ಸಂಶಯಿಸುವ ಕಾರಣವಿಲ್ಲ, ಮಹಾರಾಣಿ!"

"ಶುಭಾಂಗಿ ! ನಿನ್ನಂತಹ ಚೆಲುವೆಯನ್ನು ನಾನು ತಲೆಯ ಮೇಲೆಯೇ ಕುಳ್ಳಿರಿಸಿಕೊಳ್ಳುತ್ತಿದ್ದೆ. ಆದರೆ ಮಹತ್ತರವಾದ ಸಂಶಯವೊಂದು ನನ್ನನ್ನು ಅತಿಯಾಗಿ ಬಾಧಿಸುತ್ತಿದೆ. ವಿರಾಟರಾಜನೇನಾದರೂ ನಿನ್ನನ್ನು ನೋಡಿಬಿಟ್ಟರೆ ತನ್ನ ಸರ್ವಸ್ವವನ್ನೂ ನಿನಗರ್ಪಿಸಿ ನಿನಗೆ ದಾಸಾನುದಾಸನಾಗಿಬಿಡಬಹುದೆಂಬ ಸಂಶಯದಿಂದ ಹಿಂದು-ಮುಂದು ನೋಡುತ್ತಿದ್ದೇನೆ.

**ಸ್ತ್ರಿಯೋ ರಾಜಕುಲೇ ಯಾಶ್ಚ ಯಾಶ್ಚೇಮಾ ಮಮ ವೇಶ್ಮನಿ ।**
**ಪ್ರಸಕ್ತಾಸ್ತ್ವಾಂ ನಿರೀಕ್ಷನ್ತೇ ಪುಮಾಂಸಂ ಕಂ ನ ಮೋಹಯೇಃ ॥೨೬॥**

ರಾಜಕುಲದಲ್ಲಿರುವ ಸಕಲಸ್ತ್ರೀಯರೂ, ನನ್ನ ಅಂತಃಪುರದಲ್ಲಿರುವ ಸಕಲನಾರಿಯರೂ ನಿನ್ನನ್ನು ಎವೆಯಿಕ್ಕದೇ ನೋಡುತ್ತಿದ್ದಾರೆ. ಹೀಗಿರುವಾಗ ಯಾವ ಪುರುಷನನ್ನು ತಾನೇ ನೀನು ಮೋಹಪರವಶನನ್ನಾಗಿ ಮಾಡದಿರುವೆ?

ಸ್ತ್ರೀಯರು ನೋಡುತ್ತಿದ್ದಾರೆಂಬುದಾದರೂ ಹಾಗಿರಲಿ :

**ವೃಕ್ಷಾಂಶ್ಚಾವಸ್ಥಿತಾನ್ಪಶ್ಯ ಯ ಇಮೇ ಮಮ ವೇಶ್ಮನಿ ।**
**ತೇಽಪಿ ತ್ವಾಂ ಸಂನಮನ್ತೀವ ಪುಮಾಂಸಂ ಕಂ ನ ಮೋಹಯೇಃ ॥**

ನನ್ನ ಅರಮನೆಯ ಕೈದೋಟದಲ್ಲಿರುವ ವೃಕ್ಷಗಳೆಲ್ಲವೂ ನಿನ್ನನ್ನು ನೋಡುವ ಸಲುವಾಗಿಯೇ ನಿನ್ನ ಕಡೆಗೆ ಬಾಗಿರುವುವೋ ಎಂಬಂತಿರುವ

ಈ ವೈಚಿತ್ರ್ಯವನ್ನಾದರೂ ನೋಡು, ಮಾಲಿನಿ! ಹೀಗಿರುವಾಗ ನಿನ್ನನ್ನು ನೋಡಿದ ಪುರುಷರ ಪಾಡೇನು? ಯಾವ ಪುರುಷನನ್ನು ತಾನೇ ನೀನು ಮೋಹವಶನನ್ನಾಗಿ ಮಾಡದಿರುವೆ?

**ರಾಜಾ ವಿರಾಟಃ ಸುಶ್ರೋಣಿ ದೃಷ್ಟ್ವಾ ವಪುರಮಾನುಷಮ್ ।**
**ವಿಹಾಯ ಮಾಂ ವರಾರೋಹೇ ಗಚ್ಛೇತ್ಸರ್ವೇಣ ಚೇತಸಾ ॥೨೫॥**

ಸುಶ್ರೋಣಿ! ದಿವ್ಯವಾದ ನಿನ್ನ ಈ ಶರೀರಕಾಂತಿಯನ್ನೇನಾದರೂ ವಿರಾಟರಾಜನು ನೋಡಿಬಿಟ್ಟರೆ ಒಡನೆಯೇ ನನ್ನನ್ನು ಪರಿತ್ಯಜಿಸಿ ತನ್ನ ರಾಜ್ಯ-ಕೋಶಗಳನ್ನೂ ನಿನಗರ್ಪಿಸಿ ಸರ್ವಾತ್ಮನಾ ನಿನ್ನ ದಾಸನಾಗಿಬಿಡುತ್ತಾನೆ.

**ಯಂ ಹಿ ತ್ವಮನವದ್ಯಾಙ್ಗಿ ತರಲಾಯತಲೋಚನೇ ।**
**ಪ್ರಸಕ್ತಮಭಿವೀಕ್ಷೇಥಾಃ ಸ ಕಾಮವಶಗೋ ಭವೇತ್ ॥೨೬॥**

ನೀನು ನಿನ್ನ ಚಂಚಲವಾದ ಕಟಾಕ್ಷಗಳಿಂದ ಸನ್ನಿಹಿತನಾದ ಯಾರನ್ನು ವೀಕ್ಷಿಸುವೆಯೋ ಒಡನೆಯೇ ಅವನು ಮನ್ಮಥನಿಗೆ ಅಧೀನನಾಗಿಬಿಡುತ್ತಾನೆ. ಅಂತಹವನ ಮನಸ್ಸು ನಿನ್ನಲ್ಲಿಯೇ ಅನುರಕ್ತವಾಗಿಬಿಡುತ್ತದೆ. ಮನಸ್ಸಿನ ಮೇಲೆ ಅವನ ಹತೋಟಿಯೇ ತಪ್ಪಿಹೋಗುತ್ತದೆ. ನೀನು ಅಂತಹ ಚೆಲುವೆಯಾಗಿರುವೆ.

**ಯಶ್ಚ ತ್ವಾಂ ಸತತಂ ಪಶ್ಯೇತ್ಪುರುಷಶ್ಚಾರುಹಾಸಿನಿ ।**
**ಏವಂ ಸರ್ವಾನವದ್ಯಾಙ್ಗಿ ಸ ಚಾನಙ್ಗವತೋ ಭವೇತ್ ॥೨೭॥**

ಚಾರುಹಾಸಿನಿಯೇ! ನಿರ್ದೋಷವಾದ ಸರ್ವಾಂಗವುಳ್ಳವಳೇ! ಯಾವ ಪುರುಷನು ದೋಷರಹಿತವಾದ ನಿನ್ನ ಅಂಗಗಳನ್ನು ಸರ್ವದಾ ನೋಡುತ್ತಿರುವನೋ ಅವನು ಅನಂಗನ (ಅಂಗರಹಿತನಾದ ಕಾಮದೇವನ) ವಶನಾಗುತ್ತಾನೆ.

**ಅಧ್ಯಾರೋಹೇದ್ಯಥಾ ವೃಕ್ಷಾನ್ವಧಾಯೈವಾತ್ಮನೋ ನರಃ ।**
**ರಾಜವೇಶ್ಮನಿ ತೇ ಸುಭ್ರು ಗೃಹೇ ತು ಸ್ಯಾತ್ತಥಾ ಮಮ ॥೨೮॥**

**ಯಥಾ ಚ ಕರ್ಕಟೀ ಗರ್ಭಮಾಧತ್ತೇ ಮೃತ್ಯುಮಾತ್ಮನಃ ।**
**ತಥಾವಿಧಮಹಂ ಮನ್ಯೇ ವಾಸಂ ತವ ಶುಚಿಸ್ಮಿತೇ ॥೨೯॥**

ಚಾರುಹಾಸಿನಿಯೇ! ಆತ್ಮಹತ್ಯೆಮಾಡಿಕೊಳ್ಳುವ ಸಲುವಾಗಿ (ಕೆಳಕ್ಕೆ ಬೀಳುವ ಸಲುವಾಗಿ) ಒಬ್ಬನು ಹೇಗೆ ವೃಕ್ಷವನ್ನು ಹತ್ತುತ್ತಾನೆಯೋ, ಹಾಗೆಯೇ ನಿನ್ನನ್ನು ರಾಜಗೃಹದಲ್ಲಿಟ್ಟುಕೊಳ್ಳುವುದು ನನಗೆ ಅನಿಷ್ಟವಾಗಿ ಪರಿಣಮಿಸಬಹುದು. ಮೃತ್ಯುವಶವಾಗುವ ಸಲುವಾಗಿಯೇ ಚೇಳು ಹೇಗೆ ಗರ್ಭವನ್ನು ಧರಿಸುವುದೋ–ಹಾಗೆಯೇ ನಿನ್ನನ್ನು ರಾಜಗೃಹದಲ್ಲಿಟ್ಟುಕೊಳ್ಳುವುದು ನನಗೆ ಅನಿಷ್ಟಕರವಾಗಿ ಪರಿಣಮಿಸಬಹುದು."

ಸುದೇಷ್ಣೆಯು ಇರುವ ವಿಷಯವನ್ನು ಬಹಳ ಸ್ಪಷ್ಟವಾಗಿಯೇ ದ್ರೌಪದಿಯ ಮುಂದಿಟ್ಟಳು. ಕಾಮರೂಪಿಣಿಯಾದ ದ್ರೌಪದಿಯನ್ನು ತನ್ನ ಬಳಿಯಲ್ಲಿಟ್ಟುಕೊಂಡರೆ ಮಡಿಲಲ್ಲಿ ಕೆಂಡವನ್ನಿಟ್ಟುಕೊಂಡಂತಾಗುವುದೆಂದು ಸುದೇಷ್ಣೆಯು ಭಯಪಟ್ಟುದರಲ್ಲಿ ಆಶ್ಚರ್ಯವೇನಿಲ್ಲ. ದ್ರೌಪದಿಯು ಅದಕ್ಕೆ ಸಮಯೋಚಿತವಾಗಿಯೇ ಸಮಾಧಾನವನ್ನು ಹೇಳಿದಳು :

"ಮಹಾರಾಣಿ! ನಾನು ವಿರಾಟರಾಜನಿಗಾಗಲೀ, ಬೇರಾವ ಪುರುಷನಿಗಾಗಲೀ ವಶಳಾಗತಕ್ಕವಳಲ್ಲ. ನನಗೆ ನಿತ್ಯಯೌವನವನ್ನು ಹೊಂದಿರುವ ಐವರು ಗಂಧರ್ವಪತಿಗಳಿದ್ದಾರೆ. ಆ ಐವರೂ ಮಹಾಸತ್ತ್ವನಾದ ಒಬ್ಬ ಗಂಧರ್ವರಾಜನ ಮಕ್ಕಳು. ಅವರು ಅನುದಿನವೂ ನನ್ನನ್ನು ಸಂರಕ್ಷಿಸುತ್ತಿರುತ್ತಾರೆ. ಆದುದರಿಂದ ನನ್ನ ಹತ್ತಿರಕ್ಕೆ ಯಾರೊಬ್ಬರೂ ಸುಳಿಯಲಾರರು.

**ಯೋ ಮೇ ನ ದದ್ಯಾದುಚ್ಛಿಷ್ಟಂ ನ ಚ ಪಾದೌ ಪ್ರಧಾವಯೇತ್ ।**
**ಪ್ರೀಣೇರಂಸ್ತೇನ ವಾಸೇನ ಗನ್ಧರ್ವಾಃ ಪತಯೋ ಮಮ ॥೩೩॥**

ನಾನು ಇತರರ ಮನೆಗಳಲ್ಲಿ ವಾಸಮಾಡುತ್ತಿರುವಾಗ ಉಚ್ಛಿಷ್ಟಾನ್ನವನ್ನು ತಿನ್ನುವುದನ್ನು ಅವರು ಸಹಿಸುವುದಿಲ್ಲ. ಇತರರ ಕಾಲುತೊಳೆಯುವುದನ್ನಾಗಲೀ, ಪಾದಸೇವೆಯನ್ನು ಮಾಡುವುದನ್ನಾಗಲೀ ಅವರು ಸಹಿಸಲಾರರು. ಉಚ್ಛಿಷ್ಟಾನ್ನವನ್ನು ತಿನ್ನಿಸದ ಮತ್ತು ಇತರರ ಕಾಲುತೊಳೆಸದ ಮನೆಯಲ್ಲಿ ನಾನಿರುವುದನ್ನು ನೋಡಿದರೆ ಅವರು ಸುಪ್ರೀತರಾಗುತ್ತಾರೆ.

**ಯೋ ಹಿ ಮಾಂ ಪುರುಷೋ ಗೃಧ್ಯೇದ್ಯಥಾನ್ಯಾಃ ಪ್ರಾಕೃತಾಃ ಸ್ತ್ರಿಯಃ ।**
**ತಾಮೇವ ನಿವಸೇದ್ರಾತ್ರಿಂ ಪ್ರವಿಶ್ಯ ಚ ಪರಾಂ ತನುಮ್ ॥೩೪॥**

ಕಾಮುಕರು ಪ್ರಾಕೃತಸ್ತ್ರೀಯರನ್ನು ಕಾಮಿಸುವಂತೆ ನನ್ನನ್ನೇನಾದರೂ

ಕಾಮಿಸಿದ್ದೇ ಆದರೆ–ನನ್ನ ಪತಿಗಳು ಅಂದಿನ ರಾತ್ರಿಯಲ್ಲಿಯೇ ಅವರನ್ನು ಪರಲೋಕಕ್ಕೆ ಕಳುಹಿಸಿಬಿಡುವರು. ನನ್ನ ಮನಸ್ಸನ್ನು ವಿಚಲಗೊಳಿಸಲಾಗಲೀ ನನ್ನನ್ನು ಸೆಳೆದೊಯ್ಯಲಾಗಲೀ ಯಾರಿಗೂ ಸಾಧ್ಯವಿಲ್ಲ. ನನ್ನ ಗಂಧರ್ವಪತಿಗಳು ಈ ಸಮಯದಲ್ಲಿ ದುಃಖಶೀಲರಾಗಿದ್ದರೂ (ದುಃಖದಲ್ಲಿ ಮುಳುಗಿದ್ದರೂ) ಮಹಾಬಲಿಷ್ಠರು. ಅವರು ಅಪ್ರತ್ಯಕ್ಷವಾಗಿಯೇ ಇದ್ದು ಸರ್ವದಾ ನನ್ನನ್ನು ರಕ್ಷಿಸುತ್ತಿರುತ್ತಾರೆ. ಆದುದರಿಂದ ನನ್ನ ವಿಷಯದಲ್ಲಿ ನೀನು ಸ್ವಲ್ಪವಾದರೂ ಭಯಪಡುವ ಕಾರಣವಿಲ್ಲ.''

ಸುದೇಷ್ಣೆಯ ಮನಸ್ಸಿಗೆ ಸ್ವಲ್ಪ ಸಮಾಧಾನವುಂಟಾಯಿತು. ಅಂತೆಯೇ ಮಾಲಿನಿಯನ್ನು ಕುರಿತು ಹೇಳಿದಳು :

''ನಂದಿನಿ! ವಿಷಯವು ಹೀಗಿರುವುದಾದರೆ ನನಗೆ ನಿನ್ನ ವಿಷಯದಲ್ಲಿ ಹೆಚ್ಚಿನ ಭಯವಿಲ್ಲ. ನಾನು ನಿನಗೆ ಆಶ್ರಯವನ್ನು ನೀಡುವೆನು. ನಿನ್ನ ಗಂಧರ್ವಪತಿಗಳ ಅಪೇಕ್ಷೆಯಂತೆಯೇ ನೀನು ನನ್ನ ಅರಮನೆಯಲ್ಲಿ ಉಚ್ಛಿಷ್ಟಾನ್ನವನ್ನು ತಿನ್ನಬೇಕಾಗಿಲ್ಲ. ಯಾರೊಬ್ಬರ ಪಾದಸೇವೆಯನ್ನೂ ಮಾಡಬೇಕಾಗಿಲ್ಲ. ಸುಖವಾಗಿ ನನ್ನ ಆಶ್ರಯದಲ್ಲಿರು, ಮಗಳೇ!''

ವೈಶಂಪಾಯನರು ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

''ಮಹಾರಾಜ! ಸುದೇಷ್ಣೆಯು ದ್ರೌಪದಿಯನ್ನು ಈ ರೀತಿಯಾಗಿ ಸಂತೈಸಿ ತನ್ನ ಅರಮನೆಯಲ್ಲಿಟ್ಟುಕೊಂಡಳು. ಕೃಷ್ಣೆಯೂ ಪತಿಧರ್ಮಪರಾಯಣೆಯಾಗಿ ಸುಖದಿಂದ ಕಾಲಕಳೆಯುತ್ತಿದ್ದಳು. ವಿರಾಟನ ಅರಮನೆಯಲ್ಲಿರುವ ಪರ್ಯಂತವೂ ಯಾರೊಬ್ಬರೂ ಅವಳನ್ನು ಗುರುತಿಸಲಾಗಲಿಲ್ಲ.

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ಸಹದೇವನು ವಿರಾಟರಾಜನೊಡನೆ ಮಾತನಾಡಿದುದು : ವಿರಾಟನು ಸಹದೇವನನ್ನು ಗೋಶಾಲೆಯ ಅಧ್ಯಕ್ಷನನ್ನಾಗಿ ನಿಯಮಿಸಿದುದು

ಜನಮೇಜಯ! ಸಹದೇವನೂ ಗೋಪಾಲನ ವೇಷವನ್ನು ಧರಿಸಿಕೊಂಡು ವಿರಾಟನನ್ನು ಸಂದರ್ಶಿಸಿದನು. (ಆದರೆ ಕೆಲಸವನ್ನು ಹುಡುಕು

ವುದು ಸಹದೇವನಿಗೆ ಅಷ್ಟು ಸುಲಭವಾಗಿರಲಿಲ್ಲ. ಅವನು ತಾನಾಡುವ ಭಾಷೆಯನ್ನೂ ಗೋಪಾಲರಾಡುವ ಭಾಷೆಗೆ ಅನುಗುಣವಾಗಿಯೇ ಬದಲಾಯಿಸಿಕೊಳ್ಳಬೇಕಾಗಿದ್ದಿತು. ಗೋಪಾಲನ ವೇಷವನ್ನು ಮಾತ್ರವೇ ಧರಿಸಿ ಸುಸಂಸ್ಕೃತವಾದ ಮಾತನ್ನಾಡಿದರೆ ಒಡನೆಯೇ ಸಂಶಯವುಂಟಾಗುವುದಲ್ಲವೇ?) ಆದುದರಿಂದಲೇ 'ಭಾಷಾಂ ಚೈವ ಸಮಾಸ್ಥಾಯ ವಿರಾಟ



ಮುಪಯಾತ್'–ಗೋಪಾಲರಾಡುವ ಭಾಷೆಯನ್ನೇ ತನ್ನ ಭಾಷೆಯನ್ನಾಗಿ ಮಾಡಿಕೊಂಡು ಸಹದೇವನು ವಿರಾಟನನ್ನು ಸಂದರ್ಶಿಸಿದನು. ರಾಜಭವನದ ಸಮೀಪದಲ್ಲಿದ್ದ ಗೋಶಾಲೆಯ ಸಮೀಪದಲ್ಲಿ ದಂಡಧರನಾಗಿ ನಿಂತಿದ್ದ ಸಹದೇವನನ್ನು ಕಂಡು ವಿಸ್ಮಿತನಾದ ವಿರಾಟನು ಅವನನ್ನು ಕರೆತರಲು

ರಾಜಭಟರನ್ನು ಕಳುಹಿಸಿಕೊಟ್ಟನು. ರಾಜಭವನದ ಸಮೀಪಕ್ಕಾಗಮಿಸಿದ, ತೇಜಃಪುಂಜಯುಕ್ತನಾದ ನರಶ್ರೇಷ್ಠನೊಬ್ಬನು ಗೋಪಾಲನ ವೇಷದಲ್ಲಿ ಬರುತ್ತಿರುವುದನ್ನು ಕಂಡ ರಾಜನು ಚಕಿತನಾಗಿ ಸಿಂಹಾಸನದಿಂದಿಳಿದು ಸಹದೇವನ ಸಮೀಪಕ್ಕೆ ಹೋಗಿ ಅವನನ್ನು ಪ್ರಶ್ನಿಸಿದನು :

"ನರರ್ಷಭನೇ! ನೀನಾರು? ಎಲ್ಲಿಂದ ಬಂದಿರುವೆ? ಯಾವ ಪ್ರಯೋಜನಕ್ಕಾಗಿ ಅರಮನೆಯ ಸಮೀಪಕ್ಕಾಗಮಿಸಿರುವೆ? ನಾನು ಈ ಹಿಂದೆ ನಿನ್ನನ್ನು ನೋಡಿದ ಸ್ಮರಣೆಯಿಲ್ಲ. ನೀನು ಇಲ್ಲಿಗೆ ಹೊಸಬನಾಗಿರ ಬೇಕಲ್ಲವೇ?–ಎಲ್ಲ ವಿಷಯಗಳನ್ನೂ ಸ್ಪಷ್ಟವಾಗಿ ಹೇಳು."

ಜನಮೇಜಯ! ಶತ್ರುನಿಷೂದನನಾದ ರಾಜನು ಹೀಗೆಂದು ಪ್ರಶ್ನಿಸಲಾಗಿ, ಗುಡುಗಿಗೆ ಸಮಾನವಾದ ಧ್ವನಿಯಿಂದ ಸಹದೇವನು ಉತ್ತರಿ ಸಿದನು :

"ಮಹಾರಾಜ! ನಾನು ಜಾತಿಯಲ್ಲಿ ವೈಶ್ಯನು. ನನ್ನನ್ನು ಅರಿಷ್ಟ ನೇಮಿಯೆಂದು ಕರೆಯುತ್ತಾರೆ. ಹಿಂದೆ ನಾನು ಕುರುವಂಶಸಂಭೂತರಾದ ಪಾಂಡವರ ಅರಮನೆಯಲ್ಲಿ ಗೋವುಗಳ ಗಣಕನಾಗಿದ್ದೆನು. ಈಗವರ ಸ್ಥಿತಿ-ಗತಿಗಳು ನನಗೆ ತಿಳಿಯದೇ ಇರುವುದರಿಂದ ನಾನು ನಿನ್ನಲ್ಲಿಗೆ ಕೆಲಸಕ್ಕಾಗಿ ಆಗಮಿಸಿದ್ದೇನೆ. ಯಾವುದಾದರೂ ಕಾರ್ಯಮಾಡದೇ ಜೀವನ ಹೊರೆಯಲು ನನಗೆ ಇಷ್ಟವಿಲ್ಲ. ತಮ್ಮೊಬ್ಬರನ್ನು ಬಿಟ್ಟು ಬೇರೆಯ ರಾಜನ ಬಳಿಗೆ ಕೆಲಸಕ್ಕಾಗಿ ಹೋಗುವ ಅಪೇಕ್ಷೆಯೂ ನನಗಿರುವುದಿಲ್ಲ."

"ನರಶ್ರೇಷ್ಠ! ನಿನಗೆ ಕೆಲಸ ಕೊಡುವ ವಿಷಯವಾಗಿ ನಾನು ಸ್ವಲ್ಪ ವಾದರೂ ಯೋಚಿಸುತ್ತಿಲ್ಲ. ಆದರೆ ನೀನು ವೈಶ್ಯಜಾತಿಯವನೆಂದು ಹೇಳಿ ಕೊಂಡಿರುವುದರಲ್ಲಿ ನನಗೆ ಸಂಶಯವಿದೆ. ನಿನ್ನ ದಿವ್ಯತೇಜಸ್ಸನ್ನು ನೋಡಿ ನಾನು ನೀನು ಬ್ರಾಹ್ಮಣನೋ ಅಥವಾ ಕ್ಷತ್ರಿಯನೋ ಆಗಿರಬೇಕೆಂದು ಊಹಿಸುತ್ತೇನೆ. ಸಮುದ್ರಪರ್ಯಂತವಾದ ಭೂಮಿಯನ್ನಾಳಲು ನೀನು ಅರ್ಹನಾಗಿರುವೆ. ಆದುದರಿಂದ ನೀನಾರೆಂಬುದನ್ನು ನಿಶ್ಚಯವಾಗಿ ಹೇಳು. ವೈಶ್ಯನಿಗೆ ಯೋಗ್ಯವಾದ ಕೆಲಸವು ನಿನಗೆ ತಕ್ಕುದಲ್ಲವೆಂದು ನನ್ನ ಅಭಿಪ್ರಾಯ ವಾಗಿದೆ. ನೀನು ಯಾವ ರಾಜನ ರಾಜ್ಯದಿಂದ ಇಲ್ಲಿಗೆ ಆಗಮಿಸಿರು ವೆಯೆಂಬುದನ್ನು ಹೇಳು. ನಿನಗೆ ಯಾವ-ಯಾವ ಕಲೆಗಳಲ್ಲಿ ಪರಿಶ್ರಮವಿದೆ?

ನೀನು ನನ್ನಲ್ಲಿಗೆ ಯಾವ ಕೆಲಸವನ್ನು ಅಪೇಕ್ಷಿಸಿ ಬಂದಿರುವೆ ಮತ್ತು ನೀನಪೇಕ್ಷಿಸುವ ಮಾಸಾಶನವೆಷ್ಟು? ಎಲ್ಲವನ್ನೂ ವಿಶದವಾಗಿ ಹೇಳು.”

“ನಾನು ವೈಶ್ಯಜಾತಿಯಲ್ಲಿ ಜನಿಸಿರುವ ಗೋಪಾಲಕನೆಂಬುದರಲ್ಲಿ ತಾವು ಸಂಶಯಿಸುವ ಕಾರಣವಿಲ್ಲ. ಪಾಂಡವರಲ್ಲಿ ಹಿರಿಯನು ಯುಧಿಷ್ಠಿರ. ಅವನ ಮೊದಲನೆಯ ಗೋಶಾಲೆಯಲ್ಲಿ ಒಂದೇ ತರಹದ ಎಂಟು ಲಕ್ಷ ಹಸುಗಳಿದ್ದುವು. ಅವುಗಳೆಲ್ಲವನ್ನೂ ನೂರು ನೂರು ಹಸುಗಳಿಗೆ ಒಂದೊಂದು ಗುಂಪಿನಂತೆ ವಿಂಗಡಿಸಲಾಗಿತ್ತು. ಎರಡನೆಯ ಗೋಶಾಲೆಯಲ್ಲಿ ಒಂದು ಲಕ್ಷ ಹಸುಗಳಿದ್ದುವು. ಅವುಗಳನ್ನೂ ನೂರು ಹಸುಗಳಿಗೆ ಒಂದು ಗುಂಪಿನಂತೆ ವಿಂಗಡಿಸಲಾಗಿತ್ತು. ಅಷ್ಟೇ ಅಲ್ಲದೆ ಇನ್ನೂ ಎರಡು ಲಕ್ಷ ಹಸುಗಳಿದ್ದುವು. ಆ ಗೋವುಗಳ ಸಂಪೂರ್ಣವ್ಯವಹಾರವನ್ನು ನೋಡುವವನು ಮತ್ತು ವ್ಯವಸ್ಥಾಪಕನು ನಾನೇ ಆಗಿದ್ದೆನು. ನನ್ನನ್ನವರು ತಂತಿಪಾಲನೆಂದು ಕರೆಯುತ್ತಿದ್ದರು. ಹಿಂದಿದ್ದ ಗೋವುಗಳ ಸಂಖ್ಯೆ, ಈಗಿರುವ ಗೋವುಗಳ ಸಂಖ್ಯೆ ಮತ್ತು ಮುಂದಿನ ಹಲವಾರು ವರ್ಷಗಳಲ್ಲಿ ಆಗಬಹುದಾದ ಗೋವುಗಳ ಸಂಖ್ಯೆ–ಇವುಗಳೆಲ್ಲವನ್ನೂ ನಾನು ತಿಳಿದಿದ್ದೆನು. ಹತ್ತು ಯೋಜನಗಳ ವಿಸ್ತೀರ್ಣದೊಳಗಿನ ಗೋವುಗಳ ವರ್ತಮಾನ-ಭೂತ-ಭವಿಷ್ಯದ್ವಿಚಾರಗಳೆಲ್ಲವೂ ನನಗೆ ತಿಳಿದಿರುತ್ತಿತ್ತು. ನನ್ನ ಗುಣ-ಕರ್ಮಗಳೆಲ್ಲವೂ ಯುಧಿಷ್ಠಿರನಿಗೆ ಚೆನ್ನಾಗಿ ತಿಳಿದಿತ್ತು. ಅವನು ನನ್ನ ವಿಷಯದಲ್ಲಿ ಮತ್ತು ನನ್ನ ಕಾರ್ಯದಲ್ಲಿ ಸಂತುಷ್ಟನಾಗಿದ್ದನು.

**ಕ್ಷಿಪ್ರಂ ಚ ಗಾವೋ ಬಹುಲಾ ಭವನ್ತಿ**
**ನ ತಾಸು ರೋಗೋ ಭವತೀಹ ಕಶ್ಚನ ।**
**ತೈಸ್ತೈರುಪಾಯೈರ್ವಿದಿತಂ ಮಮೈತ-**
**ದೇತಾನಿ ಶಿಲ್ಪಾನಿ ಮಯಿ ಸ್ಥಿತಾನಿ ॥೩೧॥**

**ಋಷಭಾಂಶ್ಚಾಪಿ ಜಾನಾಮಿ ರಾಜನ್ಪೂಜಿತಲಕ್ಷಣಾನ್ ।**
**ಯೇಷಾಂ ಮೂತ್ರಮುಪಾಘ್ರಾಯ ಅಪಿ ವನ್ಧ್ಯಾ ಪ್ರಸೂಯತೇ ॥೩೨॥**

ನಾನು ಗೋಶಾಲೆಯ ಅಧ್ಯಕ್ಷನಾದರೆ ಬಹಳ ಬೇಗ ಗೋವುಗಳ ಸಂತತಿಯು ಬೆಳೆಯುತ್ತದೆ. ಗೋವುಗಳಿಗೆ ಯಾವ ವಿಧವಾದ ರೋಗವೂ ಬರುವುದಿಲ್ಲ. ಒಂದು ವೇಳೆ ರೋಗವು ಬಂದರೂ ಅನೇಕವಿಧವಾದ

ಉಪಾಯಗಳಿಂದ ರೋಗವನ್ನು ಪರಿಹರಿಸುತ್ತೇನೆ. ಗೋಸಂಬಂಧವಾದ ಎಲ್ಲ ಕಲೆಗಳೂ ನನಗೆ ಜನ್ಮತಃ ಬಂದಿವೆ. ಶುಭಲಕ್ಷಣಗಳುಳ್ಳ ಹೋರಿಗಳಾವುವೆಂಬುದನ್ನೂ ನಾನು ತಿಳಿದಿರುತ್ತೇನೆ. ಶುಭಲಕ್ಷಣಗಳನ್ನು ಹೊಂದಿರುವ ಹೋರಿಗಳ ಗಂಜಲದ ಆಘ್ರಾಣಮಾತ್ರದಿಂದ ಬಂಜೆಯರೂ ಪುತ್ರವತಿಯರಾಗುತ್ತಾರೆ."

ಇಷ್ಟೆಲ್ಲಾ ವಿವರಣೆಗಳನ್ನು ಕೊಟ್ಟನಂತರ ಆಗಂತುಕನು ವೈಶ್ಯಜಾತಿಯ ಗೋಪಾಲಕನಿರಲಾರನೆಂದು ಸಂಶಯಪಡಲು ಹೇಗೆತಾನೇ ವಿರಾಟನಿಗೆ ಸಾಧ್ಯವಾಗುವುದು? ಸಹದೇವನ ಮಾತುಗಳಿಂದ ವಿರಾಟನು ಅವನನ್ನು ಗೋಪಾಲನೆಂದೇ ಭಾವಿಸಬೇಕಾಯಿತು. ಸಹದೇವನಿಗೆ ಗೋಶಾಲೆಯ ಸರ್ವಾಧಿಕಾರವನ್ನೂ ವಹಿಸಿಕೊಡುತ್ತಾ ವಿರಾಟನು ಹೇಳಿದನು :

"ತಂತಿಪಾಲ! ನನ್ನಲ್ಲಿ ಒಂದು ಲಕ್ಷ ಗೋವುಗಳ ಸಂಗ್ರಹವಿದೆ. ಅವುಗಳಲ್ಲಿ ನಾನಾಜಾತಿಗಳ ಹಸುಗಳು ಸೇರಿಕೊಂಡಿವೆ. ನನ್ನ ಆ ಗೋವುಗಳನ್ನೂ ಮತ್ತು ಗೋಪಾಲಕರನ್ನೂ ನಿನ್ನ ವಶಕ್ಕೊಪ್ಪಿಸುತ್ತಿದ್ದೇನೆ. ಇಲ್ಲಿಂದ ಮುಂದಕ್ಕೆ ನನ್ನ ಗೋವುಗಳು ನಿನ್ನ ಆಶ್ರಯವನ್ನು ಪಡೆಯುವುವು."

ಜನಮೇಜಯ! ಸಹದೇವನು ರಾಜನ ಗೋಶಾಲೆಯ ಸರ್ವಾಧಿಕಾರವನ್ನೂ ವಹಿಸಿಕೊಂಡು ಸುಖವಾಗಿದ್ದನು. ವಿರಾಟರಾಜನ ಅರಮನೆಯಲ್ಲಿರುವವರೆಗೂ ಅವನನ್ನು ಯಾರೂ ಗುರುತಿಸದೇ ಹೋದರು. ಸಹದೇವನ ಇಚ್ಛೆಯಂತೆ ರಾಜನು ಅವನಿಗೆ ಊಟ-ಉಪಚಾರಗಳ ವ್ಯವಸ್ಥೆಯನ್ನು ಸಮರ್ಪಕವಾಗಿ ಏರ್ಪಡಿಸಿದ್ದನು.

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ಅರ್ಜುನನು ಬೃಹನ್ನಳೆಯ ವೇಷವನ್ನು ಧರಿಸಿ ರಾಜನನ್ನು ಸಂಧಿಸಿದುದು: ವಿರಾಟನು ತನ್ನ ಹೆಣ್ಣುಮಕ್ಕಳಿಗೆ ನೃತ್ಯ-ಗಾಯನಗಳನ್ನು ಹೇಳಿಕೊಡಲು ಅವನನ್ನು ನಿಯಮಿಸಿಕೊಂಡುದು

ಪಾರಿಕ್ಷಿತ! ಸಹದೇವನು ವಿರಾಟರಾಜನ ಅರಮನೆಯಲ್ಲಿ ಸೇರಿ

ಕೊಂಡನಂತರ ರೂಪಸಂಪತ್ತಿನಿಂದ ಕೂಡಿದ್ದ, ಸ್ತ್ರೀಯರ ಅಲಂಕಾರವಸ್ತುಗಳಿಂದ ಅಲಂಕೃತನಾಗಿದ್ದ, ಆಜಾನುಬಾಹುವಾದ ಮತ್ತೊಬ್ಬನು ಅರಮನೆಯ ಪ್ರಾಕಾರದ ಸಮೀಪದಲ್ಲಿ ಕಾಣಿಸಿಕೊಂಡನು. ಅವನು ಅಗಲವಾದ ಕರ್ಣಕುಂಡಲಗಳನ್ನು ಧರಿಸಿದ್ದನು. ಶಂಖದಿಂದ ಮಾಡಿದ ತೋಳುಬಳಿಗಳನ್ನು ತೊಟ್ಟಿದ್ದನು. ಆ ಬಳಿಗಳನ್ನು ಚಿನ್ನದ ರೇಕುಗಳಿಂದ ಸಿಂಗರಿಸಲಾಗಿತ್ತು. ಹೆಗಲಿನ ಕೆಳಭಾಗದವರೆಗೂ ದಟ್ಟವಾದ ಕೇಶರಾಶಿಯನ್ನು ಜೋತುಬಿಟ್ಟುಕೊಂಡಿದ್ದನು. ಆನೆಗೆ ಸಮವಾದ ಪರಾಕ್ರಮವಿದ್ದ ಅವನು ಹೆಜ್ಜೆಗಳನ್ನಿಡುತ್ತಾ ಮುಂದೆ ಮುಂದೆ ಹೋದಂತೆ ಭೂಮಿಯು ಕಂಪಿಸುತ್ತಿರುವುದೋ ಎಂಬ ಭ್ರಾಂತಿಯುಂಟಾಗುತ್ತಿದ್ದಿತು.

ಆ ಮಹಾಪುರುಷನು ಸಭೆಯಲ್ಲಿದ್ದ ವಿರಾಟರಾಜನ ಸಮೀಪಕ್ಕೂ ಆಗಮಿಸಿದನು. ಶತ್ರುಗಳ ವಿಮರ್ದಕನಾದ, ಕಾರಣಾಂತರದಿಂದ ವೇಷವನ್ನು ಬದಲಾಯಿಸಿಕೊಂಡಿದ್ದ, ಗಜೇಂದ್ರನಿಗೆ ಸಮಾನವಾದ ನಡಿಗೆಯನ್ನು ಹೊಂದಿದ್ದ, ಶ್ರೇಷ್ಠವಾದ ವರ್ಚಸ್ಸಿನಿಂದ ವಿರಾಜಮಾನನಾಗಿದ್ದ, ಇಂದ್ರನ ಮಗನಾದ ಅರ್ಜುನನನ್ನು ಕಂಡು ರಾಜನು ಸಭೆಯಲ್ಲಿದ್ದವರನ್ನು ಕುರಿತು– "ಈ ಮನುಷ್ಯನಾರು? ನಾನು ಈ ಹಿಂದೆ ಇವನನ್ನು ಈ ಸಭೆಯಲ್ಲಾಗಲೀ ಅಥವಾ ನಮ್ಮ ನಗರದಲ್ಲಾಗಲೀ ನೋಡಿದ ಸ್ಮರಣೆಯು ನನಗಿಲ್ಲ"–ಎಂದು ಹೇಳಿದನು. ಅದಕ್ಕುತ್ತರವಾಗಿ ಸಭ್ಯರೂ ಆ ಮಹಾಪುರುಷನ ಪರಿಚಯವು ತಮಗೂ ಇಲ್ಲವೆಂದರು. ಅವರ ಮಾತನ್ನು ಕೇಳಿ ವಿಸ್ಮಿತನಾದ ವಿರಾಟನು ಆ ಮಹಾಪುರುಷನನ್ನು ಕುರಿತು ಹೇಳಿದನು :

"ನೀನು ಮಹಾಸತ್ತ್ವಸಂಪನ್ನನಂತೆ ಕಾಣುತ್ತಿರುವೆ. ದೇವತೆಗಳಿಗೆ ಸಮಾನವಾದ ಶರೀರಕಾಂತಿಯಿಂದ ಕೂಡಿರುವೆ. ನೀನಿನ್ನೂ ಯುವಕನು. ಶ್ಯಾಮಲವರ್ಣದವನು. ಗಜೇಂದ್ರನಿಗಿರುವ ಠೀವಿಯು ನಿನಗಿದೆ. ಇದಕ್ಕೆ ವ್ಯತಿರಿಕ್ತವಾಗಿ ನೀನು ಶಂಖದಿಂದ ಮಾಡಿದ ಬಳಿಗಳನ್ನು ತೊಟ್ಟಿರುವೆ. ನಿನ್ನ ಕೇಶರಾಶಿಯಿಂದ ಕರ್ಣಕುಂಡಲಗಳನ್ನು ಮುಚ್ಚಿಕೊಂಡಿರುವೆ. ಮಾಲೆಯನ್ನೂ ಧರಿಸಿರುವೆ. ನಿನ್ನ ಕೇಶಗಳು ಸೊಂಪಾಗಿದ್ದು ಸುಂದರವಾಗಿ ಕಾಣುತ್ತಿವೆ. ನೀನು ಈ ರೀತಿಯಲ್ಲಿ ವೇಷವನ್ನು ಹಾಕಿಕೊಂಡಿದ್ದರೂ ಧನುರ್ಧರನಂತೆ, ರಾಜಯೋಗ್ಯವಾದ ಕವಚವನ್ನು ಧರಿಸಿರುವವನಂತೆ,

ಉತ್ತಮೋತ್ತಮವಾದ ಬಾಣಗಳನ್ನು ಹೊಂದಿರುವವನಂತೆ ನನಗೆ ಕಾಣು ತ್ತಿರುವೆ. ನೀನು ಯಾರೆಂಬುದೂ ಮತ್ತು ನಿನ್ನ ಈ ವೇಷ-ಭೂಷಣಗಳಿಗೆ ಕಾರಣವೇನೆಂಬುದೂ ನನಗೆ ತಿಳಿದಿಲ್ಲವಾದರೂ ನೀನು ನನ್ನ ವಾಹನಗಳ ಲ್ಲಿಯೇ ಕುಳಿತು ಇಷ್ಟಬಂದೆಡೆಗಳಲ್ಲಿ ವಿಹರಿಸಬಹುದಾಗಿದೆ. ನೀನು ಇನ್ನು



ಮುಂದೆ ನನ್ನ ಸಮಾನನಾಗಿ ಅಥವಾ ನನ್ನ ಮಕ್ಕಳಿಗೆ ಸಮಾನನಾಗಿ ಇರಬಹುದು. ನಾನೀಗಲೇ ವೃದ್ಧನಾಗಿಬಿಟ್ಟಿದ್ದೇನೆ. ರಾಜ್ಯಭಾರದ ಹೊಣೆ ಯನ್ನು ಸಾಧ್ಯವಾದಷ್ಟು ಬೇಗ ತಪ್ಪಿಸಿಕೊಳ್ಳುವ ಆಶಯವಿದೆ. ಆದುದ ರಿಂದ ನೀನೀಗಲೇ ರಾಜ್ಯಾಧಿಕಾರದ ನಿರ್ವಹಣೆಯನ್ನು ಹೊತ್ತು ಮತ್ಸ್ಯ

ದೇಶದ ಪ್ರಜೆಗಳನ್ನು ಪರಿಪಾಲಿಸು. ನಿನ್ನಂತಹವರು ನಪುಂಸಕರಾಗಿರಲಾರರೆಂದು ನನಗೆ ತೋರುತ್ತದೆ.”

ರಾಜನು ಹೇಳಿದುದೊಂದನ್ನೂ ತನ್ನ ಗಮನಕ್ಕೆ ತೆಗೆದುಕೊಳ್ಳಲಿಲ್ಲವೋ ಎಂಬಂತೆ ಅರ್ಜುನನು ವಿರಾಟನನ್ನು ಸಂಬೋಧಿಸಿ ಹೇಳಿದನು :

“ಮಹಾರಾಜ! ನಾನು ಹಾಡಬಲ್ಲೆನು. ನರ್ತನಮಾಡಬಲ್ಲೆನು. ವಾದ್ಯಗಳನ್ನು ಬಾರಿಸಬಲ್ಲೆನು. ನಿನಗೆ ಮಂಗಳವಾಗಲಿ, ಮಹಾರಾಜ! ನೃತ್ಯ-ಗೀತಗಳಲ್ಲಿ ನಾನು ಬಹಳ ಕುಶಲಳಾಗಿರುವೆನು. ನಿನ್ನ ಮಗಳಾದ ಉತ್ತರೆಗೆ ನೃತ್ಯವನ್ನು ಕಲಿಸಲು ನನ್ನನ್ನು ನಿಯಮಿಸಿಕೊಳ್ಳಬಹುದಲ್ಲವೇ? ನರದೇವ! ನಾನೇ ಅವಳಿಗೆ ನಾಟ್ಯಾಚಾರ್ಯನಾಗುವೆನು. ಮತ್ಸ್ಯೇಂದ್ರ! ನೀನು ನನ್ನ ರೂಪ-ಯೌವನಗಳ ವಿಷಯವಾಗಿ ಮಾತನಾಡಿದೆ. ನಿನ್ನೀ ಮಾತುಗಳು ನನಗೆ ಹೆಚ್ಚಿನ ಶೋಕವನ್ನೇ ಉಂಟುಮಾಡುತ್ತವೆ. ನಪುಂಸಕನಾದವನಿಗೆ ರೂಪ-ಯೌವನಗಳಿದ್ದೇನು ಫಲ? ಇದು ನನ್ನ ದೌರ್ಭಾಗ್ಯ. ನಾನು ಬೃಹನ್ನಳೆ. ಮಾತಾ-ಪಿತೃಹೀನಳಾದ ನನ್ನನ್ನು ನೀನು ಮಗನೆಂದು ಬೇಕಾದರೂ ಭಾವಿಸಬಹುದು ; ಮಗಳೆಂದು ಬೇಕಾದರೂ ಭಾವಿಸಬಹುದು.”

“ಬೃಹನ್ನಳೇ! ನೀನು ಅಪೇಕ್ಷಿಸಿರುವ ಕಾರ್ಯವನ್ನು ನಿನಗೆ ವಹಿಸಿಕೊಡುವೆನು. ನನ್ನ ಮಗಳಾದ ಉತ್ತರೆಗೂ ಮತ್ತು ಅವಳ ಗೆಳತಿಯರಿಗೂ ನೀನು ನೃತ್ಯ-ಗಾಯನಗಳನ್ನು ಹೇಳಿಕೊಡು. ಆದರೆ ಈ ಕಾರ್ಯವು ನಿನಗೆ ಯೋಗ್ಯವಲ್ಲವೆಂದೇ ನನ್ನ ಅಭಿಪ್ರಾಯವಾಗಿದೆ. ಸಮುದ್ರಪರ್ಯಂತವಾದ ಭೂಮಿಗೂ ನೀನು ಒಡೆಯನಾಗಲು ಅರ್ಹನಾಗಿರುವೆಯೆಂದು ನಾನು ಭಾವಿಸುತ್ತೇನೆ.”

ಜನಮೇಜಯ! ವಿರಾಟನು ಒಡನೆಯೇ ಬೃಹನ್ನಳೆಯನ್ನು ಅಂತಃಪುರಕ್ಕೆ ಕಳುಹಿಸಿಬಿಡಲಿಲ್ಲ. ಮೊದಲು ಅವನ ನೃತ್ಯ-ವಾದ್ಯ-ಸಂಗೀತಗಳಲ್ಲಿನ ಪ್ರಾವೀಣ್ಯವನ್ನು ಪರೀಕ್ಷಿಸಿದನು. ಬೃಹನ್ನಳೆಗೆ ಆ ಕಲೆಗಳಲ್ಲಿ ಅತ್ಯದ್ಭುತವಾದ ಪಾಂಡಿತ್ಯವಿದೆಯೆಂಬುದನ್ನು ರಾಜನು ಮನಗಂಡನು. ಅನಂತರದಲ್ಲಿ ಮಂತ್ರಿಗಳೊಡನೆ ಸಮಾಲೋಚಿಸಿ–‘ಬೃಹನ್ನಳೆಯು ನಿಶ್ಚಯವಾಗಿಯೂ ನಪುಂಸಕನೇ’–ಎಂಬುದನ್ನು ಅರಮನೆಯ ಸ್ತ್ರೀಯರ ಮೂಲಕ

ವಾಗಿ ಸ್ಥಿರಪಡಿಸಿಕೊಂಡನಂತರವೇ ಬೃಹನ್ನಳೆಯನ್ನು ರಾಣೀವಾಸಕ್ಕೆ ಕಳುಹಿಸಿ ತನ್ನ ಮಗಳಾದ ಉತ್ತರೆಯನ್ನು ಅವಳ ವಶಕ್ಕೊಪ್ಪಿಸಿದನು.

ಜನಮೇಜಯ! ಪ್ರಭುವಾದ, ನಿನ್ನ ಮುತ್ತಾತನಾದ ಬೃಹನ್ನಳಾ ವೇಷಧಾರಿಯಾಗಿದ್ದ ಧನಂಜಯನು ನೃತ್ಯ-ಗೀತ-ವಾದ್ಯಗಳನ್ನು ಉತ್ತರೆಗೂ ಅವಳ ಗೆಳತಿಯರಿಗೂ ಮತ್ತು ವಿರಾಟರಾಜನ ಅರಮನೆಯಲ್ಲಿದ್ದ ತರುಣಿಯರಾದ ಪರಿಚಾರಿಕೆಯರಿಗೂ ಕಲಿಸಿಕೊಟ್ಟು ಅವರೆಲ್ಲರ ಪ್ರೀತಿಗೂ ಪಾತ್ರನಾದನು.

ಈ ರೀತಿಯಲ್ಲಿ ಜಿತೇಂದ್ರಿಯನಾದ ಧನಂಜಯನು ವಿರಾಟರಾಜನ ಅಂತಃಪುರದಲ್ಲಿನ ಸ್ತ್ರೀಯರಿಗೆ ಸಂತೋಷವನ್ನುಂಟುಮಾಡುತ್ತಾ ಅವರುಗಳೊಡನೆ ಸುಖವಾಗಿದ್ದನು. ಪಟ್ಟಣಿಗರಿಗಾಗಲೀ ಅಂತಃಪುರದ ಸ್ತ್ರೀಯರಿಗಾಗಲೀ ಅವನಾರೆಂಬುದನ್ನು ತಿಳಿಯಲು ಸಾಧ್ಯವಾಗಲಿಲ್ಲ.

೧೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಪಾಣ್ಡವಪ್ರವೇಶಪರ್ವ (ಮುಂದುವರಿದಿದೆ.)

## ನಕುಲನು ಅಶ್ವಶಾಲೆಯ ಅಧ್ಯಕ್ಷನಾದುದು

ಜನಮೇಜಯ! ಧರ್ಮ-ಭೀಮ-ದ್ರೌಪದೀ-ಸಹದೇವ-ಅರ್ಜುನ ಈ ಐವರೂ ವಿರಾಟನ ಅರಮನೆಯಲ್ಲಿ ಪೂರ್ವಯೋಜಿತವಾದ ಕಾರ್ಯಗಳಲ್ಲಿ ನಿಯುಕ್ತರಾದನಂತರ ಕಡೆಯವನಾಗಿ ಉಳಿದಿದ್ದ ನಕುಲನು ಸರಸರನೆ ವಿರಾಟರಾಜನ ಅರಮನೆಗೆ ಅಭಿಮುಖವಾಗಿ ನಡೆದು ಬರುತ್ತಿದ್ದನು. ಮೇಘಮಂಡಲದಿಂದ ವಿಮುಕ್ತನಾಗಿ ಹೊರಬರುತ್ತಿರುವ ಸೂರ್ಯನಂತೆ ತೇಜಃಪುಂಜಯುಕ್ತನಾದ ನಕುಲನು ಅರಮನೆಯ ಕಡೆಗೆ ಧಾವಿಸುತ್ತಿದ್ದುದನ್ನು ಪೌರರೂ ನೋಡಿದರು. ಅವನು ನಡೆದು ಬರುತ್ತಿದ್ದಾಗ ದಾರಿಯಲ್ಲಿ ಕುದುರೆಗಳಿದ್ದರೆ ಅವುಗಳನ್ನು ವೀಕ್ಷಿಸದೇ ಮುನ್ನಡೆಯುತ್ತಿರಲಿಲ್ಲ. ಅವುಗಳ ಅಂಗಾಂಗಗಳೆಲ್ಲವನ್ನೂ ಪರೀಕ್ಷಿಸಿಯೇ ಮುಂದೆ ಹೋಗುತ್ತಿದ್ದನು.

ಅರಮನೆಯ ಉದ್ಯಾನವನದಲ್ಲಿದ್ದ ವಿರಾಟನು ಅದನ್ನು ನೋಡಿ ತನ್ನೊಡನಿದ್ದ ರಾಜದೂತರಿಗೆ ಹೇಳಿದನು :

"ಅಮರೋಪಮನಾಗಿರುವ ಈ ಮನುಷ್ಯನು ಇಲ್ಲಿಗೇಕೆ ಬರುತ್ತಿರುವನೋ ತಿಳಿಯದಾಗಿದೆ. ನಮ್ಮ ಕುದುರೆಗಳನ್ನವನು ಬಹಳ ಕುತೂಹಲದಿಂದ ವೀಕ್ಷಿಸುತ್ತಿದ್ದಾನೆ. ಇವನು ಅಶ್ವಶಾಸ್ತ್ರವನ್ನು ಚೆನ್ನಾಗಿ ಅಧ್ಯಯನ ಮಾಡಿರುವುದರಿಂದಲೇ ನನ್ನ ಕುದುರೆಗಳನ್ನು ಪರೀಕ್ಷಿಸುತ್ತಿದ್ದಾನೆಂದು ಭಾವಿಸುತ್ತೇನೆ. ಅವನನ್ನೀಗಲೇ ನನ್ನ ಸಮೀಪಕ್ಕೆ ಕರೆತನ್ನಿರಿ. ಅವನು ಸ್ಫುರದ್ರೂಪಿಯಾಗಿರುವಂತೆ ವೀರನಾಗಿಯೂ ಇರಬೇಕೆಂದು ಭಾವಿಸುತ್ತೇನೆ."



ರಾಜಾಜ್ಞೆಯಂತೆ ಒಡನೆಯೇ ರಾಜಭಟರು ನಕುಲನ ಬಳಿಗೆ ಹೋಗಿ ಅವನನ್ನು ರಾಜನ ಬಳಿಗೆ ಕರೆತಂದರು.

ಬರುತ್ತಿದ್ದಾಗಲೇ ನಕುಲನು ರಾಜನನ್ನು ಅಭಿವಂದಿಸುತ್ತ ಹೇಳಿದನು:

“ 'ಜಯೋऽಸ್ತು ತೇ'–ನಿಮಗೆ ಜಯವಾಗಲಿ! 'ಭದ್ರಮಸ್ತು ವಃ'–ನಿಮಗೆ ಮಂಗಳವಾಗಲಿ! ನಾನು ಅಶ್ವಶಿಕ್ಷೆಯಲ್ಲಿ ನಿಪುಣನಾಗಿದ್ದೇನೆ. ಅಂತೆಯೇ ಅನೇಕರಾಜರಿಂದ ಸಮ್ಮಾನವನ್ನು ಪಡೆದಿರುತ್ತೇನೆ. ನಾನೀಗ ನಿಮ್ಮ ಕುದುರೆಗಳಿಗೆ ನಿಪುಣನಾದ ಸಾರಥಿಯಾಗಿರಲು ಆಗಮಿಸಿದ್ದೇನೆ.”

“ವತ್ಸ! ನಾನು ನಿನಗೆ ಯೋಗ್ಯವಾದ ಮಾಸಾಶನವನ್ನು ಕೊಡುತ್ತೇನೆ. ಉತ್ತಮವಾದ ವಾಹನವನ್ನು ಕೊಡುತ್ತೇನೆ. ವಾಸಕ್ಕೆ ಮನೆಯನ್ನೂ ಕೊಡುತ್ತೇನೆ. ನನ್ನ ಕುದುರೆಗಳಿಗೆ ನೀನು ಸಾರಥಿಯಾಗಲೂ ಸಮರ್ಥನಾಗಿರುವೆ. ಆದರೆ ನಿನ್ನ ಪೂರ್ವೇತಿಹಾಸವನ್ನು ನಮ್ಮೊಡನೆ ಹೇಳಬೇಕು. ನೀನಾರು? ಯಾರಿಗೆ ಸಂಬಂಧಿಸಿದವನು? ನೀನಿಲ್ಲಿಗೆ ಹೇಗೆ ಬಂದೆ? ಅಶ್ವಶಾಸ್ತ್ರವನ್ನು ಬಿಟ್ಟು ಬೇರೆ ಯಾವುದಾದರೂ ಕಲೆಗಳು ನಿನಗೆ ತಿಳಿದಿರುವುವೇ?–ಎಲ್ಲವನ್ನು ವಿಶದವಾಗಿ ನಿವೇದಿಸು.”

“ಮಹಾರಾಜ! ನೀನು ಯುಧಿಷ್ಠಿರನ ಹೆಸರನ್ನು ಕೇಳಿರಬಹುದಲ್ಲವೇ? ಪಾಂಡವರಲ್ಲಿ ಜ್ಯೇಷ್ಠನು ಯುಧಿಷ್ಠಿರ. ಅವನು ತನ್ನ ಅಶ್ವಶಾಲೆಯ ಅಧ್ಯಕ್ಷನಾಗಿ ನನ್ನನ್ನೇ ನಿಯಮಿಸಿಕೊಂಡಿದ್ದನು. ಕುದುರೆಗಳನ್ನು ಸಾಕುವ ಮತ್ತು ಅವುಗಳನ್ನು ಯಥಾಯೋಗ್ಯವಾಗಿ ಪಳಗಿಸುವ ಕಲೆಯು ನನಗೆ ಸಂಪೂರ್ಣವಾಗಿ ತಿಳಿದಿರುವುದು. ದುಷ್ಟಸ್ವಭಾವವುಳ್ಳ ಕುದುರೆಗಳನ್ನೂ ಕೆಲವೇ ದಿನಗಳಲ್ಲಿ ಸಾಧುಸ್ವಭಾವದ ಕುದುರೆಗಳನ್ನಾಗಿ ಪರಿವರ್ತಿಸಬಲ್ಲೆನು. ಕುದುರೆಗಳಿಗೆ ಬರುವ ರೋಗಗಳನ್ನೂ ಮತ್ತು ಆ ರೋಗಗಳ ಚಿಕಿತ್ಸೆಗಳನ್ನೂ ತಿಳಿದುಕೊಂಡಿರುವೆನು. ನನ್ನ ಮೇಲ್ವಿಚಾರಣೆಯಲ್ಲಿ ಕುದುರೆಗಳು ಯಾವಾಗಲೂ ನಿರೋಗದೃಢಕಾಯಗಳಾಗಿರುತ್ತವೆ. ರೋಗ-ರುಜಿನಗಳಿಂದ ನರಳುವುದಿಲ್ಲ. ದೌರ್ಬಲ್ಯದಿಂದ ಕೂಡಿರುವುದಿಲ್ಲ. ಗಂಡು ಕುದುರೆಗಳೇ ನನ್ನ ವಿಷಯದಲ್ಲಿ ದೌಷ್ಟ್ಯತೋರುವುದಿಲ್ಲ. ಹಾಗೆಂದಮೇಲೆ ಹೆಣ್ಣುಕುದುರೆಗಳ ವಿಷಯವನ್ನು ಹೇಳಲೇಬೇಕಾಗಿಲ್ಲ. ಸಾಧುಪ್ರಾಣಿಗಳಂತೆ ನನ್ನಲ್ಲಿ ಅವುಗಳು ನಡೆದುಕೊಳ್ಳುತ್ತವೆ. ಇಂದ್ರಪ್ರಸ್ಥದ ಜನರೂ ಮತ್ತು

ಪಾಂಡವಜ್ಯೇಷ್ಠನಾದ ಯುಧಿಷ್ಠಿರನೂ ನನ್ನನ್ನು ಗ್ರಂಥಿಕನೆಂಬುದಾಗಿ ಕರೆಯುತ್ತಿದ್ದರು. ಮಹಾರಾಜ!"

"ಗ್ರಂಥಿಕ! ನನ್ನಲ್ಲಿರುವ ತುರಗ-ವಾಹನಗಳೆಲ್ಲವನ್ನೂ ನಿನ್ನ ಅಧೀನಕ್ಕೆ ಒಪ್ಪಿಸುತ್ತೇನೆ. ಇದುವರೆಗೆ ನಾನು ನಿಯಮಿಸಿಕೊಂಡಿರುವ ಅಶ್ವರಕ್ಷಕರೂ ಮತ್ತು ಸಾರಥಿಗಳೂ ಇನ್ನು ಮುಂದೆ ನಿನಗೆ ಅಧೀನರಾಗಿರಲಿ. ದೇವತೆಗಳಿಗೆ ಸಮಾನವಾದ ರೂಪವಿರುವವನೇ! ಈ ಕಾರ್ಯವು ನಿನಗೆ ಸಮ್ಮತವಾದಲ್ಲಿ ಈ ಕಾರ್ಯಕ್ಕಾಗಿ ನೀನಪೇಕ್ಷಿಸುವ ವೇತನವೆಷ್ಟೆಂಬುದನ್ನೂ ತಿಳಿಸು. ಆದರೆ ನೀನು ಮಾತ್ರ ಈ ಕೆಲಸಕ್ಕೆ ಯೋಗ್ಯನಲ್ಲವೆಂದೇ ನನ್ನ ಅಭಿಪ್ರಾಯವಾಗಿದೆ. ರಾಜನಾದವನಿಗಿರಬೇಕಾದ ವರ್ಚಸ್ಸು ನಿನ್ನ ಮುಖದಲ್ಲಿ ಕಂಗೊಳಿಸುತ್ತಿದೆ. ನಿನ್ನೀ ರೂಪವು ನನಗೆ ಬಹಳವಾಗಿ ಒಪ್ಪಿದೆ. ನಿನ್ನ ಶರೀರಕಾಂತಿಯು ಶ್ಲಾಘನೀಯವಾಗಿದೆ. ನಿನ್ನನ್ನು ನಾನು ನೋಡಿದುದರಿಂದ ಸಾಕ್ಷಾತ್ ಯುಧಿಷ್ಠಿರನನ್ನೇ ಸಂದರ್ಶಿಸಿದಷ್ಟು ನನಗೆ ಆನಂದವಾಗಿದೆ. ನಿನ್ನಂತಹ ಭೃತ್ಯರನ್ನು ಬಿಟ್ಟು ಏಕಾಕಿಯಾಗಿ ನಿಶ್ಚಿಂತೆಯಿಂದ ಯುಧಿಷ್ಠಿರನು ಅರಣ್ಯದಲ್ಲಿ ಹೇಗೆ ಜೀವಿಸುತ್ತಿದ್ದಾನೋ? ವಿಧಿನಿಯಮವನ್ನು ಯಾರೂ ಮೀರಲಾರರು."

ಹೀಗೆಂದು ಹೇಳಿ ವಿರಾಟನು ನಕುಲನಿಗೆ ಅಶ್ವಾಲಯದ ಆಧಿಪತ್ಯವನ್ನು ವಹಿಸಿಕೊಟ್ಟನು."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಗಂಧರ್ವೋಪಮನಾದ ನಕುಲನನ್ನು ವಿರಾಟ ರಾಜನು ನೋಡಿ ಆನಂದಿಸಿ ಸತ್ಕರಿಸಿದನು. ನಕುಲನ ರೂಪವು ಪುರುಷ ರಿಗೂ ಮೋಹವನ್ನುಂಟುಮಾಡುವುದಾಗಿದ್ದಿತು. ಅರಮನೆಯೊಳಗಿನ ಅಶ್ವಶಾಲೆಯಲ್ಲಿ ಸದಾ ತಿರುಗಾಡುತ್ತಿದ್ದ ನಯನಾಭಿರಾಮನಾದ ನಕುಲನನ್ನು ವಿರಾಟರಾಜನ ಅರಮನೆಯಲ್ಲಿರುವ ಪರ್ಯಂತವಾಗಿ ಯಾರೊಬ್ಬರೂ ಗುರುತಿಸಲಿಲ್ಲ. ಯಮಧರ್ಮನ ಮತ್ತು ದುರ್ಗಿಯ ಅನುಗ್ರಹವಿತ್ತಲ್ಲವೇ?

ಈ ರೀತಿಯಾಗಿ ಒಂದು ವರ್ಷಕಾಲ ಅಜ್ಞಾತವಾಸಮಾಡಲು ಪ್ರತಿಜ್ಞೆ ಮಾಡಿದ್ದ ಅಮೋಘದರ್ಶನರಾದ ಪಾಂಡವರು ಮಾರುವೇಷವನ್ನು ಧರಿಸಿ

ದವರಾಗಿ ವಿರಾಟನ ಅರಮನೆಯಲ್ಲಿ ವಾಸಮಾಡುತ್ತಿದ್ದರು. ಸಾಗರಾಂತವಾದ ಪೃಥ್ವಿಗೆ ವಲ್ಲಭರಾಗಲು ಅರ್ಹರಾದ ಅವರು ಬಹಳ ದುಃಖಿತರಾಗಿದ್ದರೂ ತಮ್ಮ ಅಜ್ಞಾತವಾಸವನ್ನು ಅತ್ಯಂತಸಹನೆಯಿಂದಲೇ ಕಳೆಯುತ್ತಿದ್ದರು."

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ಸಮಯಪಾಲನಪರ್ವ

## ಭೀಮಸೇನನು ವಿಶ್ವವಿಖ್ಯಾತನಾಗಿದ್ದ ಜೀಮೂತನೆಂಬ ಮಲ್ಲನನ್ನು ವಧಿಸಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಏವಂ ತೇ ಮತ್ಸ್ಯನಗರೇ ಪ್ರಚ್ಛನ್ನಾಃ ಕುರುನನ್ದನಾಃ ।**
**ಅತ ಊರ್ಧ್ವಂ ಮಹಾವೀರ್ಯಾಃ ಕಿಮಕುರ್ವತ ವೈ ದ್ವಿಜ ॥೧॥**

"ಬ್ರಾಹ್ಮಣೋತ್ತಮರೇ! ನೀವು ಮೇಲೆ ಹೇಳಿದ ರೀತಿಯಲ್ಲಿ ಪ್ರಚ್ಛನ್ನವೇಷದಿಂದಿದ್ದ ನನ್ನ ಮುತ್ತಾತಂದಿರು ಮುಂದೇನು ಮಾಡಿದರೆಂಬ ವಿಷಯವನ್ನು ತಿಳಿಯಲು ಕುತೂಹಲಿಯಾಗಿದ್ದೇನೆ. ಯಾವ ವಿಧವಾದ ಎಡರು-ತೊಡರುಗಳೂ ಇಲ್ಲದೇ ಅವರು ಅಜ್ಞಾತವಾಸವನ್ನು ಕಳೆದರೇ? ಮಧ್ಯದಲ್ಲಿ ಅವರಿಗೆ ತೊಂದರೆಗಳೇನಾದರೂ ಪ್ರಾಪ್ತವಾದುವೇ?–ಎಲ್ಲ ವಿಷಯಗಳನ್ನೂ ವಿಸ್ತರವಾಗಿ ಹೇಳಿರಿ."

"ಜನಮೇಜಯ! ವೇಷಮರೆಸಿಕೊಂಡಿದ್ದ ಕುರುನಂದನರು ತಮ್ಮ ತಮ್ಮ ಕೆಲಸಗಳಿಂದ ರಾಜನನ್ನು ಆರಾಧಿಸುತ್ತಾ ( ಸಂತಸಗೊಳಿಸುತ್ತಾ ) ಮುಂದೇನು ಮಾಡಿದರೆಂಬುದನ್ನು ಹೇಳುವೆನು, ಕೇಳು : ತೃಣಬಿಂದುವಿನ ಮತ್ತು ಯಮಧರ್ಮನ ಅನುಗ್ರಹದಿಂದಾಗಿ ಪಾಂಡವರು ಯಾರಿಗೂ ತಿಳಿಯದಂತೆ ವಿರಾಟನಗರದಲ್ಲಿ ವಾಸಮಾಡುತ್ತಿದ್ದರು. ಯುಧಿಷ್ಠಿರನು ವಿರಾಟರಾಜನ ಆಸ್ಥಾನದಲ್ಲಿ ಮುಖ್ಯಸದಸ್ಯನಾಗಿದ್ದು ವಿರಾಟನಿಗೂ, ಮತ್ಸ್ಯದೇಶದ ಜನರಿಗೂ ಮತ್ತು ವಿರಾಟರಾಜನ ಮಕ್ಕಳಿಗೂ ಅತ್ಯಂತಪ್ರಿಯನಾಗಿದ್ದನು. ಯುಧಿಷ್ಠಿರನು ಅಕ್ಷವಿದ್ಯೆಯ ರಹಸ್ಯವನ್ನು ಸಂಪೂರ್ಣವಾಗಿ ತಿಳಿದವನಾಗಿದ್ದುದರಿಂದ ದಾರದಿಂದ ಬಿಗಿದ ಪಕ್ಷಿಗಳಂತೆ–ಆಟಗಾರರನ್ನು

ಅವನು ಆಟವಾಡಿಸುತ್ತಿದ್ದನು. ಅವನೊಡನೆ ಪಗಡೆಯಾಡುವುದರಲ್ಲಿ ವಿರಾಟನಿಗೆ ಹೆಚ್ಚಿನ ಆಸಕ್ತಿಯಿದ್ದಿತು. ವಿರಾಟರಾಜನ ಪರವಾಗಿ ಜೂಜುಗಾರ ರೊಡನೆ ಆಡುತ್ತಿದ್ದ ಅನೇಕ ಆಟಗಳಲ್ಲಿ ಯುಧಿಷ್ಠಿರನು ಗೆದ್ದು ಹಣವನ್ನು ಸಂಪಾದಿಸುತ್ತಿದ್ದನು. ಹೀಗೆ ಸಂಪಾದಿಸಿದ ಹಣವನ್ನು ವಿಜಯ-ಜಯಂತಾದಿ ಗಳಿಗೂ ರಹಸ್ಯದಲ್ಲಿ ಹಂಚಿಕೊಡುತ್ತಿದ್ದನು.

ಭೀಮಸೇನನೂ ವಿರಾಟನಿಂದ ಪುರಸ್ಕಾರರೂಪವಾಗಿ ತನಗೆ ಕೊಡ ಲ್ಪಡುತ್ತಿದ್ದ ಮಾಂಸ-ಭಕ್ಷ್ಯಾದಿಗಳನ್ನು ಯುಧಿಷ್ಠಿರನಿಗೆ ಮಾರುತ್ತಿದ್ದನು. ಅರ್ಜುನನು ಅರಮನೆಯಲ್ಲಿ ರಾಜಪರಿವಾರದವರು ಉಟ್ಟು-ತೊಟ್ಟು ಹಳೆಯದಾಗಿದ್ದ ಹೆಚ್ಚುಬೆಲೆಯ ವಸ್ತ್ರಗಳನ್ನು ಸಂಗ್ರಹಿಸಿ ಐವರಿಗೂ ಮಾರು ತ್ತಿದ್ದನು. (ವಿಕ್ರಯಿಸುವ ವ್ಯಾಜದಲ್ಲಿ ಪರಸ್ಪರವಾಗಿ ಸಂಧಿಸುತ್ತಿದ್ದರು.) ಗೋಪಾಲಕನ ವೇಷಧರಿಸಿದ್ದ ಸಹದೇವನು ತನ್ನ ಸೋದರರಿಗೆ ಹಾಲು-ಮೊಸರು-ತುಪ್ಪಗಳನ್ನೂ ಯಥೇಚ್ಛವಾಗಿ ಒದಗಿಸುತ್ತಿದ್ದನು. ನಕುಲನೂ ತನ್ನ ಸಾರಥ್ಯದಿಂದ ಸುಪ್ರೀತನಾಗಿ ರಾಜನು ಕೊಡುತ್ತಿದ್ದ ಮಾಸಾಶನವನ್ನು ತನ್ನ ಸಹೋದರರಿಗೆ ಹಂಚಿಕೊಡುತ್ತಿದ್ದನು. ತಪಸ್ವಿನಿಯಾದ ದ್ರೌಪದಿಯು ಅನುದಿನವೂ ತನ್ನ ಪತಿಗಳ ಯೋಗ-ಕ್ಷೇಮಗಳನ್ನು ಯಾರಿಗೂ ತಿಳಿಯ ದಂತೆ ನೋಡಿಕೊಳ್ಳುತ್ತಾ ಅಜ್ಞಾತಳಾಗಿರುತ್ತಿದ್ದಳು. ಈ ರೀತಿಯಾಗಿ ನಿನ್ನ ತಾತಂದಿರು ಅಜ್ಞಾತವಾಸದಲ್ಲಿಯೂ ಪರಸ್ಪರವಾಗಿ ಯೋಗ-ಕ್ಷೇಮಗಳನ್ನು ವಿಚಾರಿಸಿಕೊಳ್ಳುತ್ತಾ, ಬಹಳ ಜಾಗರೂಕತೆಯಿಂದಿರುತ್ತಾ, ತಾಯಿಯ ಗರ್ಭ ದೊಳಗೆ ಸೇರಿರುವರೋ ಎಂಬಂತೆ ನಿಗೂಢರಾಗಿದ್ದರು. ದುರ್ಯೋಧನನ ಭಯವು ಹಗಲಿರುಳಿನಲ್ಲಿಯೂ ಅವರನ್ನು ಪೀಡಿಸುತ್ತಿದ್ದಿತು. ದ್ರೌಪದಿಯ ವಿಷಯದಲ್ಲಿಯೂ ಐವರೂ ಬಹಳ ಜಾಗರೂಕತೆಯಿಂದಲೇ ನಡೆದು ಕೊಳ್ಳುತ್ತಿದ್ದರು.

ಜನಮೇಜಯ! ಪಾಂಡವರ ಅಜ್ಞಾತವಾಸದಲ್ಲಿ ಮೂರು ಮಾಸಗಳು ಕಳೆದುವು. ಮೊದಲಿನ ಮೂರು ತಿಂಗಳುಗಳಲ್ಲಿ ಯಾವ ವಿಧವಾದ ತೊಂದರೆ

ಗಳಾಗಲೀ, ಗುಟ್ಟುರಟ್ಟಾಗುವ ಸಂದರ್ಭಗಳಾಗಲೀ ಸಂಭವಿಸಲಿಲ್ಲ. ನಾಲ್ಕನೆಯ ಮಾಸವು ಪ್ರಾರಂಭವಾಯಿತು. ಮತ್ಸ್ಯದೇಶದ ಜನರು ಬ್ರಹ್ಮನ ಉತ್ಸವವನ್ನು ಪ್ರತಿವರ್ಷವೂ ಬಹಳ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಪಾಂಡವರ ಅಜ್ಞಾತವಾಸದ ನಾಲ್ಕನೆಯ ಮಾಸದಲ್ಲಿ ಆ ವರ್ಷದ ಬ್ರಹ್ಮನ ಉತ್ಸವವು ಪ್ರಾರಂಭವಾಯಿತು. ಬ್ರಹ್ಮನ ಅಥವಾ ಶಿವನ ಮಂದಿರಕ್ಕೆ ಜನರು ಹೋಗುವ ರೀತಿಯಲ್ಲಿ-ವಿಜೃಂಭಣೆಯ ಆ ಬ್ರಹ್ಮೋತ್ಸವವನ್ನು ವೀಕ್ಷಿಸಲು ಹಲವಾರು ಕಡೆಗಳಿಂದ ಸಾವಿರಾರು ಮಂದಿ ಮಲ್ಲರು ವಿರಾಟರಾಜನ ರಾಜಧಾನಿಗೆ ಆಗಮಿಸಿದರು. ಅವರು ಮಹಾಕಾಯರಾಗಿಯೂ, ಮಹಾಬಲಶಾಲಿಗಳಾಗಿಯೂ, ಕಾಲಖಂಜರೆಂಬ ಅಸುರರಂತೆ ವೀರ್ಯೋತ್ಸಾಹಗಳಿಂದ ಮದಿಸಿದವರಾಗಿಯೂ ಇದ್ದರು. ಅವರೆಲ್ಲರನ್ನೂ ವಿರಾಟರಾಜನು ಆದರಿಸಿ ಗೌರವಿಸುತ್ತಿದ್ದನು. ಅವರ ಹೆಗಲುಗಳೂ ಕಟಿ ಪ್ರದೇಶಗಳೂ ಮತ್ತು ಕುತ್ತಿಗೆಗಳೂ ಸಿಂಹದ ಸ್ಕಂಧ, ಸೊಂಟ ಮತ್ತು ಕುತ್ತಿಗೆಗಳಿಗೆ ಸಮಾನವಾಗಿದ್ದುವು. ಅವರ ಶರೀರವು ಸ್ವಚ್ಛವಾಗಿದ್ದಿತಲ್ಲದೇ ಅವರ ಮನಸ್ಸೂ ಉಲ್ಲಾಸದಿಂದ ಕೂಡಿದ್ದಿತು. ಅವರಲ್ಲನೇಕರು ವಿರಾಟ ರಾಜನ ಸಮ್ಮುಖದಲ್ಲಿ ಮಲ್ಲಯುದ್ಧಮಾಡಿ ಅನೇಕಬಾರಿ ವಿಜಯಿಗಳಾ ಗಿದ್ದರು.

ಆ ವರ್ಷವೂ ಹಿಂದಿನ ವರ್ಷಗಳಂತೆಯೇ ವಿರಾಟರಾಜನು ಮಲ್ಲ ಯುದ್ಧ ಪ್ರದರ್ಶನಕ್ಕೆ ಸರ್ವಸಿದ್ಧತೆಗಳನ್ನೂ ಮಾಡಿದ್ದನು. ಹಿಂದಿನ ವರ್ಷ ಗಳಲ್ಲಿ ವಿಜಯಗಳಿಸಿದ ಅನೇಕಮಲ್ಲರು ಸಾಲು-ಸಾಲಾಗಿ ಉಪಸ್ಥಿತರಾಗಿ ದ್ದಾಗ ಅವರಲ್ಲೊಬ್ಬ ಮಲ್ಲನು ಮೇಲೆದ್ದು ತಾನು ಯಾರೊಡನೆ ಬೇಕಾದರೂ ಮಲ್ಲಯುದ್ಧಮಾಡಲು ಸಿದ್ಧನಾಗಿರುವುದಾಗಿ ಘೋಷಣೆಯನ್ನು ಮಾಡಿದನು. ಅವನ ಭಯಂಕರವಾದ ಶರೀರವನ್ನು ನೋಡಿದ ಮಲ್ಲರಾರೂ ಅವನ ಸವಾಲನ್ನು ಸ್ವೀಕರಿಸಿ ಅವನೊಡನೆ ಮಲ್ಲಯುದ್ಧಮಾಡಲು ಸಿದ್ಧರಾಗಲಿಲ್ಲ. ಅಲ್ಲಿ ನೆರೆದಿದ್ದ ಸಾವಿರಾರು ಮಲ್ಲರಲ್ಲಿ ಯಾರೂ ಮೇಲೆದ್ದುಬರದೇ ಚೇತೋವಿಹೀನರಾಗಿರುವಂತೆ ಕುಳಿತಿರುವುದನ್ನು ಕಂಡು ರಾಜನು ಕ್ಷಣಕಾಲ ಯೋಚಿಸಿ ತನ್ನ ಅರಮನೆಯ ನೂತನ ಪಾಕಶಾಲಾಧ್ಯಕ್ಷನನ್ನು ಕರೆಯಿಸಿ ಮಲ್ಲನೊಡನೆ ದ್ವಂದ್ವಯುದ್ಧವನ್ನು ಮಾಡಲು ಹೇಳಿದನು.

(ಹಿಂದೆ ಭೀಮನು ವಿರಾಟನೊಡನೆ ತಾನು ಮಲ್ಲಯುದ್ಧವಿಶಾರದನೆಂದು ಹೇಳಿದ್ದುದೇನೋ ನಿಜ. ಆದರೆ ಪ್ರಕೃತದಲ್ಲಿ ನಡೆಯಲಿದ್ದ ಮಲ್ಲಯುದ್ಧವಾರ್ತೆಯು ವಿರಾಟನಗರದ ಪಟ್ಟಣಿಗರಿಗೆ ಮಾತ್ರವೇ ತಿಳಿಯುವುದಾಗಿರಲಿಲ್ಲ. ದೇಶ-ವಿದೇಶಗಳಿಗೂ ಹರಡುವುದಾಗಿದ್ದಿತು. ಅದರಿಂದಾಗಿ ತಾನಾರೆಂಬುದು ದುರ್ಯೋಧನನಿಗೂ ತಿಳಿದುಬಿಡಬಹುದೆಂದು ಭೀಮನಿಗೆ ಭಯವಾಯಿತು. ಆದರೆ ಆ ಭಯವನ್ನು ಭೀಮನಾಗ ವ್ಯಕ್ತಪಡಿಸುವಂತೆಯೂ ಇರಲಿಲ್ಲ. ರಾಜಾಜ್ಞೆಯು ಮೀರತಕ್ಕುದ್ದಾಗಿರಲಿಲ್ಲ. ಆದುದರಿಂದಲೇ ಇಲ್ಲಿ ವ್ಯಾಸರು **'ದುಃಖೇನೈವಾಕರೋನ್ಮತಿಮ್'** ಎಂದು ಹೇಳಿದ್ದಾರೆ.) ದುಃಖದಿಂದಲೇ, ಇಷ್ಟವಿಲ್ಲದಿದ್ದರೂ, ವಿಧಿಯಿಲ್ಲದೇ, ರಾಜನಿಗೆ ಪ್ರತಿಯಾಗಿ ಹೇಳಲಾಗದೇ ಪುರುಷವ್ಯಾಘ್ರನಾದ ಭೀಮನು–ಹುಲಿಯಂತೆ ನಿರ್ಲಕ್ಷ್ಯವಾಗಿ ಹೆಜ್ಜೆಗಳನ್ನಿಡುತ್ತಾ–ರಾಜನ ಬಳಿಗೆ ಬಂದು ಅವನನ್ನು ಯಥೋಚಿತವಾಗಿ ವಂದಿಸಿ ಸೊಂಟಕ್ಕೆ ಪಟ್ಟಿಯನ್ನು ಬಿಗಿಯುತ್ತಾ ಅಖಾಡಕ್ಕಿಳಿದನು.

ಅಜೇಯನೆನಿಸಿದ್ದ ಜೀಮೂತನೊಡನೆ ಕುಸ್ತಿಮಾಡಲು ಮುಂದೆ ಬಂದುದಕ್ಕಾಗಿ ಕಿಕ್ಕಿರಿದ ಜನಸ್ತೋಮವು ಚಪ್ಪಾಳೆಗಳೊಡನೆ ಪಾಕಶಾಲಾಧ್ಯಕ್ಷನನ್ನು ಸ್ವಾಗತಿಸಿತು. ವೃತ್ರಾಸುರನಿಗೆ ಸಮಾನನಾಗಿದ್ದ ಜೀಮೂತನೆಂಬ ಹೆಸರಿನ ಮಲ್ಲನನ್ನು ಭೀಮನು ಮಲ್ಲಯುದ್ಧಕ್ಕೆ ಆಹ್ವಾನಿಸಿದನು.

ನಗು-ನಗುತ್ತಲೇ ಇಬ್ಬರೂ ಅಖಾಡಕ್ಕಿಳಿದರು. ಭೀಮಪರಾಕ್ರಮಿಗಳಾದ ಇಬ್ಬರೂ ಉತ್ಸಾಹಿಗಳಾಗಿದ್ದರು. ಅರುವತ್ತು ವರ್ಷಗಳು ತುಂಬಿದ, ಮಹಾಕಾಯದಿಂದ ಕೂಡಿದ್ದ, ಮದಿಸಿದ ಗಜಗಳಿಗೆ ಅವರು ಸದೃಶರಾಗಿದ್ದರು. ಪರಸ್ಪರ ಒಪ್ಪಿಗೆಯಿಂದ ಇಬ್ಬರೂ ಬಾಹುಯುದ್ಧವನ್ನಾರಂಭಿಸಿದರು. ಒಬ್ಬರನ್ನು ಮತ್ತೊಬ್ಬರು ಜಯಿಸಬೇಕೆಂಬ ಛಲವು ಪರಸ್ಪರವಾಗಿದ್ದಿತು. ಬಾಹುಯುದ್ಧಮಾಡಲು ಅನುರೂಪನಾದ ಎದುರಾಳಿಯು ಸಿಕ್ಕಿದನೆಂದು ಇಬ್ಬರೂ ಸಂಹೃಷ್ಟರಾಗಿದ್ದರು. ಬಹಳ ಭಯಂಕರವಾದ ಬಾಹುಯುದ್ಧವು ಪ್ರಾರಂಭವಾಯಿತು. ಇಂದ್ರನು ವಜ್ರಾಯುಧದಿಂದ ಪರ್ವತಗಳನ್ನು ಅಪ್ಪಳಿಸುತ್ತಿದ್ದಂತೆ ಒಬ್ಬರು ಮತ್ತೊಬ್ಬರನ್ನು ತಮ್ಮ

ಬಾಹುಗಳಿಂದಲೇ ಅಪ್ಪಳಿಸುತ್ತಿದ್ದರು. (ಈ ಯುದ್ಧವು ವಜ್ರಪರ್ವತಗಳ ಘರ್ಷಣೆಯಂತಿದ್ದಿತು.)

ಇಬ್ಬರೂ ಬಹಳ ಬಲಿಷ್ಠರಾಗಿದ್ದರು. ಬಲಪ್ರಯೋಗದಿಂದ ಮತ್ತು ಉಪಾಯದಿಂದ ಒಬ್ಬರು ಮತ್ತೊಬ್ಬರನ್ನು ಪರಾಜಯಗೊಳಿಸಲು ಸಮಯವನ್ನು ಹೊಂಚುಹಾಕುತ್ತಿದ್ದರು. ಮದಿಸಿದ ಮಹಾಗಜಗಳಂತಿದ್ದ ಭೀಮ-ಜೀಮೂತರು ವರಸೆ-ವರಸೆಯಾಗಿ ಕುಸ್ತಿಯ ಪಟ್ಟುಗಳನ್ನು ಹಾಕುತ್ತಿದ್ದರು. ಒಬ್ಬನು ಒಂದು ಪಟ್ಟನ್ನು ಹಿಡಿದರೆ ಮತ್ತೊಬ್ಬನು ಅದಕ್ಕೆ ಪ್ರತಿಯಾಗಿ ಮತ್ತೊಂದು ಪಟ್ಟನ್ನು ಹಾಕುತ್ತಿದ್ದನು. ಸನ್ನಿಪಾತ, ಅವಧೂತ, * ಪ್ರಮಾಥ, ಉನ್ಮಥಗಳೇ ಮೊದಲಾದ ಮಲ್ಲಯುದ್ಧಶಾಸ್ತ್ರೋಕ್ತವಾದ ರೀತಿಯಲ್ಲಿ ಪ್ರೇಕ್ಷಕರ ಉತ್ಸಾಹವನ್ನು ಕೆರಳಿಸುತ್ತಾ ಇಬ್ಬರೂ ಸೆಣೆಸಾಡುತ್ತಿದ್ದರು.

ಮಲ್ಲವಿದ್ಯಾಲಕ್ಷಣಗಳಿಂದ ಕೂಡಿರುವ ಕ್ಷೇಪಣ, ಮುಷ್ಟಿ, ವರಾಹೋದ್ಧೂತನಿಃಸ್ವನ, ತಲ, ವಜ್ರ, ಪ್ರಸೃಷ್ಟ–ಇವೇ ಮುಂತಾದ ಪಟ್ಟುಗಳಿಂದ ಭೀಮ-ಜೀಮೂತರು ಬಾಹುಯುದ್ಧವನ್ನು ಮಾಡುತ್ತಿದ್ದರು. ಕುಪಿತರಾದ ಇಬ್ಬರೂ ಒಮ್ಮೆ ಈಟಿಯಂತಿದ್ದ ಚೂಪಾದ ತಮ್ಮ ಉಗುರುಗಳಿಂದಲೇ ಪರಸ್ಪರವಾಗಿ ಶರೀರಗಳನ್ನು ಇರಿಯುತ್ತಿದ್ದರು. ಒಮ್ಮೆ ಕಾಲುಗಳಿಂದ

---

* ಪ್ರಮಾಥ-ಉನ್ಮಥಗಳ ಲಕ್ಷಣಗಳನ್ನು ಮಲ್ಲಯುದ್ಧಶಾಸ್ತ್ರದಲ್ಲಿ ಹೀಗೆ ಹೇಳಿದೆ :

**ನಿಪಾತ್ಯ ಪೇಷಣಂ ಭೂಮೌ ಪ್ರಮಾಥ ಇತಿ ಕಥ್ಯತೇ ।**
**ಯತ್ರೂತ್ಥಾಯಾಙ್ಗಮಥನಂ ತದುನ್ಮಥನಮುಚ್ಯತೇ ॥**

ನೆಲಕ್ಕೆ ಬೀಳಿಸಿ ಹೊಸಕುವುದಕ್ಕೆ ಪ್ರಮಾಥವೆಂದು ಹೆಸರು. ಮೇಲೆದ್ದಾಗ ಪಟ್ಟು ಹಿಡಿದು ಶರೀರವನ್ನು ಹಿಸುಕುವುದಕ್ಕೆ ಉನ್ಮಥವೆಂದು ಹೆಸರು.

**ಕ್ಷೇಪಣಂ ಕಥ್ಯತೇ ಯತ್ತು ಸ್ಥಾನಾತ್ಪ್ರಚ್ಯಾವನಂ ಹಠಾತ್ ।**

ಸಮಯವನ್ನು ಕಾಯುತ್ತಾ ನಿಂತಿರುವ ಎದುರಾಳಿಯನ್ನು ಉಪಾಯಾಂತರದಿಂದ ನಿಂತ ಸ್ಥಳದಿಂದ ತಳ್ಳಿಬಿಡುವುದಕ್ಕೆ ಕ್ಷೇಪಣವೆಂದು ಹೆಸರು.

**ಉಭಯೋರ್ಭುಜಯೋರ್ಮುಷ್ಟಿರುರೋರ್ಮಧ್ಯೇ ನಿಪಾತ್ಯತೇ ।**
**ಮುಷ್ಟಿರಿತ್ಯುಚ್ಯತೇ ತಜ್ಜ್ಞೈರ್ಮಲ್ಲವಿದ್ಯಾವಿಶಾರದೈಃ ॥**

ಪರಸ್ಪರವಾಗಿ ಒದೆದಾಡುತ್ತಿದ್ದರು. ಶಿಲಾರೂಪವಾದ ಮಂಡಿಯಿಂದ ಒಬ್ಬರು ಮತ್ತೊಬ್ಬರನ್ನು ಥಳಿಸುತ್ತಿದ್ದರು. ಮತ್ತೊಮ್ಮೆ ತಮ್ಮ ತಲೆಗಳನ್ನು ಡಿಕ್ಕಿಹೊಡೆಸುತ್ತಿದ್ದರು.

ಅವರ ಯುದ್ಧವು ಶಸ್ತ್ರರಹಿತವಾಗಿದ್ದಿತು. ತಮ್ಮ ಬಾಹುಬಲ ದಿಂದಲೂ, ಶರೀರಸೌಷ್ಠವದಿಂದಲೂ ಮತ್ತು ಬುದ್ಧಿಯ ಬಲದಿಂದಲೂ ಭೀಮ-ಜೀಮೂತರು ಯುದ್ಧಮಾಡುತ್ತಿದ್ದರು. ಆ ಯುದ್ಧವನ್ನು ನೋಡುತ್ತಾ ಪ್ರೇಕ್ಷಕರು ಪುಳಕಿತರಾಗುತ್ತಿದ್ದರು. ಆ ಯುದ್ಧವು ಬೇಗ ಮುಗಿಯಬೇಕೆಂಬ ಆಶಯವು ಯಾರಿಗೂ ಇರಲಿಲ್ಲ. ಇಬ್ಬರಲ್ಲಿಯೂ ಇರುವ ಮಲ್ಲಯುದ್ಧದ ನೈಪುಣ್ಯವನ್ನು ಪೂರ್ಣವಾಗಿ ನೋಡುವ ಉತ್ಸಾಹವು ಪ್ರೇಕ್ಷಕರಲ್ಲಿ ಮೂಡಿದ್ದಿತು.

---

ಭುಜಬಲಗಳಿಂದ ಪ್ರಹೃತವಾದ ಇಬ್ಬರ ಮುಷ್ಟಿಗಳೂ ಪರಸ್ಪರವಾಗಿ ಎದೆಯ ಮೇಲೆ ಬೀಳುವುದಕ್ಕೆ ಮುಷ್ಟಿಯೆಂದು ಮಲ್ಲಯುದ್ಧವಿಶಾರದರು ಹೇಳುತ್ತಾರೆ.

**ಅವಾಙ್ಮುಖಂ ಸ್ಕನ್ಧಗತಂ ಭ್ರಾಮಯಿತ್ವಾ ತದೈವ ಯಃ ।**
**ಕ್ಷಿಪ್ತಸ್ಯ ಶಬ್ದಃ ಸ ಭವೇದ್ವರಾಹೋದ್ಧೂತನಿಃಸ್ವನಃ ॥**

ಒಬ್ಬ ಜಟ್ಟಿಯು ಮುಖಕೆಳಗಾಗಿ ಭದ್ರವಾಗಿ ಮಲಗಿರುತ್ತಾನೆ. ಮತ್ತೊಬ್ಬನು ತನ್ನ ಭುಜಗಳೆರಡನ್ನೂ ಅವನ ಕಂಕುಳುಗಳಲ್ಲಿ ಸೇರಿಸಿ ಅವನನ್ನು ಚಿತ್ತುಮಾಡಲು ಪ್ರಯತ್ನಿಸುತ್ತಿರುತ್ತಾನೆ. ಪಟ್ಟು ಸಿಕ್ಕಿ ಚಿತ್ತುಮಾಡಿದಾಗ ಉಂಟಾಗುವ ಶಬ್ದಕ್ಕೆ ಅಥವಾ ಹೆಗಲಮೇಲೆ ಕೆಳಮುಖವಾಗಿರುವವನನ್ನು ತಿರುಗಿಸಿ ಎಸೆದಾಗ ಆಗುವ ಶಬ್ದಕ್ಕೆ 'ವರಾಹೋದ್ಧೂತನಿಃಸ್ವನ' ಎಂದು ಹೇಳುತ್ತಾರೆ.

**ತರ್ಜನ್ಯಙ್ಗುಷ್ಠಮಧ್ಯೇನ ಪ್ರಸಾರಿತಕರೋ ಹಿ ಯಃ ।**
**ಸಮ್ಪ್ರಹಾರತಲಾಖ್ಯಸ್ತು ಸಂಗ್ರಾಹೋ ವಜ್ರಮಿಷ್ಯತೇ ॥**

ತರ್ಜನಿ ಎಂದರೆ ಎರಡನೆಯ (ತೋರು) ಬೆರಳನ್ನು ಅಂಗುಷ್ಠದ (ಹೆಬ್ಬೆರಳಿನ) ನಡುವೆ ಸೇರಿಸಿರುವ ವಿಸ್ತೃತವಾದ ಹಸ್ತಕ್ಕೆ ಸಂಪ್ರಹಾರತಲಹಸ್ತವೆಂದು ಹೆಸರು. ಇದೇ ರೀತಿಯಲ್ಲಿ ಐದೂ ಬೆರಳುಗಳನ್ನೂ ಮಡಿಸಿಕೊಂಡರೆ ಅದಕ್ಕೆ ವಜ್ರಮುಷ್ಟಿಯೆಂದು ಹೆಸರು.

**ಅಙ್ಗುಲ್ಯಃ ಪ್ರಸೃತಾ ಯಾಸ್ತು ತಾಃ ಪ್ರಸೃಷ್ಟಾ ಉದೀರಿತಾಃ ।**

ಕೈಬೆರಳುಗಳೆಲ್ಲವೂ ವಿಸ್ತೃತವಾಗಿದ್ದರೆ ಅದಕ್ಕೆ ಪ್ರಸೃಷ್ಟಹಸ್ತವೆಂದು ಹೆಸರು.

'ಭಲೇ' 'ಭೇಷ್' ಇವೇ ಮುಂತಾದ ಶಬ್ದಗಳ ಘೋಷಣೆಗಳಿಂದಲೂ ಪ್ರೇಕ್ಷಕರು ಇಬ್ಬರು ಮಲ್ಲರಿಗೂ ರಣೋತ್ಸಾಹವನ್ನು ತುಂಬುತ್ತಿದ್ದರು.

*ಪ್ರಕರ್ಷಣ, ಆಕರ್ಷಣ, ಅಭ್ಯಾಕರ್ಷಣ, ವಿಕರ್ಷಣ–ಮುಂತಾದ ಪಟ್ಟುಗಳಿಂದ ಒಬ್ಬರು ಮತ್ತೊಬ್ಬರನ್ನು ಸೆಳೆದು ಮಂಡಿಯಿಂದ ಪ್ರಹರಿಸುತ್ತಿದ್ದರು.

ಇಬ್ಬರು ಮಲ್ಲರೂ ವಿಶಾಲವಾದ ವಕ್ಷಃಸ್ಥಳಗಳನ್ನು ಹೊಂದಿದ್ದರು. ಉದ್ದವಾದ ಅವರ ತೋಳುಗಳು ಕಬ್ಬಿಣದ ಪರಿಘಾಯುಧಗಳಂತಿದ್ದುವು. ಇಬ್ಬರೂ ಮಲ್ಲಯುದ್ಧದಲ್ಲಿ ಕುಶಲರಾಗಿದ್ದರು. ರಣಗರ್ಜನೆಯಿಂದ ಒಬ್ಬರು ಮತ್ತೊಬ್ಬರನ್ನು ಹೆದರಿಸಲು ಯತ್ನಿಸುತ್ತಿದ್ದರು. ಹೀಗೆಯೇ ಸ್ವಲ್ಪ ಹೊತ್ತಿನವರೆಗೆ ಪ್ರೇಕ್ಷಕರಿಗೆ ಸಂತೋಷದಾಯಕವಾಗಿದ್ದ ಮಲ್ಲಯುದ್ಧವು

---

* ಪ್ರಕರ್ಷಣ, ಆಕರ್ಷಣಾದಿಗಳ ಲಕ್ಷಣವನ್ನು ಮಲ್ಲಯುದ್ಧಶಾಸ್ತ್ರದಲ್ಲಿ ಹೀಗೆ ಹೇಳಿದೆ:

**ಆಕೃಷ್ಯ ಕ್ರೋಡೀಕರಣಂ ಪ್ರಕರ್ಷಣಮುದಾಹೃತಮ್ ।**

ಎದುರಾಳಿಯನ್ನು ಸೆಳೆದುಕೊಂಡು ಸುತ್ತುಗಟ್ಟುವುದಕ್ಕೆ ಪ್ರಕರ್ಷಣವೆಂದು ಹೆಸರು.

**ಆಕರ್ಷಣಂ ಲೀಲಯೈವ ಸಮ್ಮುಖೀಕರಣಂ ಸ್ಮೃತಮ್ ।**

ಬಹಳ ಸುಲಭವಾಗಿಯೇ ಎದುರಾಳಿಯನ್ನು ಸೆಳೆದುಕೊಂಡು ತಬ್ಬಿಕೊಳ್ಳುವುದಕ್ಕೆ ಆಕರ್ಷಣವೆಂದು ಹೆಸರು.

**ಪುರಃ ಪಶ್ಚಾತ್ಪಾರ್ಶ್ವಯೋಶ್ಚಾಭ್ಯಾಕರ್ಷೋ ಭ್ರಮಣಂ ತಥಾ ।**

ಹಿಂದಕ್ಕೆ ಮುಂದಕ್ಕೆ ಮತ್ತು ಪಕ್ಕಕ್ಕೆ ಎದುರಾಳಿಯನ್ನು ತಳ್ಳುವುದಕ್ಕೆ ಮತ್ತು ಪಟ್ಟು ಹಿಡಿದು ತಿರುಗಿಸುವುದಕ್ಕೆ ಅಭ್ಯಾಕರ್ಷಣವೆಂದು ಹೆಸರು.

**ಪಶ್ಚಾತ್ಪ್ರಪಾತನಂ ವೇಗಾದ್ವಿಕರ್ಷಣಮುದಾಹೃತಮ್ ।**

ಸಮಯವನ್ನು ನೋಡಿ ಬಲಪ್ರಯೋಗದಿಂದ ಎದುರಾಳಿಯನ್ನು ರೆಪ್ಪೆ ಹೊಡೆಯುವುದರೊಳಗಾಗಿ ಹಿಂದಕ್ಕೆ ಬೀಳಿಸುವುದಕ್ಕೆ ವಿಕರ್ಷಣವೆಂದು ಹೆಸರು.

ಮುಂದುವರಿಯಿತು. ಕಡೆಗೊಮ್ಮೆ ಮಹಾಬಲಶಾಲಿಯಾದ ಭೀಮಸೇನನು ಘೋರಗರ್ಜನೆಯನ್ನು ಮಾಡುತ್ತಾ ಸಮಯನೋಡಿ ಪರಿಘೋಪಮಗಳಾದ ತನ್ನ ದೀರ್ಘಬಾಹುಗಳಿಂದ–ಸಿಂಹವು ಮದಿಸಿದ ಆನೆಯನ್ನು ಹಿಡಿಯುವಂತೆ–ಜೀಮೂತನನ್ನು ಹಿಡಿದು ಮೇಲೆತ್ತಿದನು. ಇಷ್ಟು ಮಾತ್ರವಲ್ಲ ;



ಮೇಲೆತ್ತಿ ಜಗಜ್ಜಟ್ಟಿಯೆನಿಸಿದ್ದ ಜೀಮೂತನನ್ನು ಗಿರ-ಗಿರನೆ ತಿರುಗಿಸಲು ಉಪಕ್ರಮಿಸಿದನು. ಅಲ್ಲಿ ನೆರೆದಿದ್ದ ಮಲ್ಲರೂ, ಪೌರರೂ ಮತ್ತು ರಾಜನೂ ಭೀಮನ ಅದ್ಭುತಸಾಹಸವನ್ನು ಕಂಡು ಚಕಿತರಾದರು. ಮುಂದಿನ ನಿಮಿಷದಲ್ಲಿ ಏನಾಗುವುದೆಂಬುದನ್ನು ಸಕಲರೂ ಕಾತರದಿಂದ ನೋಡುತ್ತಿದ್ದರು. ಭೀಮನು ಹಿಡಿದಿದ್ದ ಪಟ್ಟಿನಿಂದಾಗಿ ಜೀಮೂತನು ಮರದ

ಕೊಂಬೆಯಂತೆ ಅಂತರಿಕ್ಷದಲ್ಲಿ ತಿರುಗುತ್ತಿದ್ದನೇ ಹೊರತು ಭೀಮನ ಕೈಗಳಿಂದ ಬಿಡಿಸಿಕೊಳ್ಳಲು ಸಮರ್ಥನಾಗಲಿಲ್ಲ. ಭೀಮನು ಬುಗುರಿಯನ್ನು ತಿರುಗಿಸುವಂತೆಯೇ ಅನಾಯಾಸದಿಂದ ಮಲ್ಲನನ್ನು ನೂರು ಬಾರಿ ಗರ- ಗರನೆ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿಬಿಟ್ಟನು. ಜೀಮೂತನು ಪರಲೋಕಯಾತ್ರೆ ಮಾಡಿದನೆಂಬ ವಿಷಯವನ್ನು ಹೇಳಬೇಕಾದ ಕಾರಣವಿಲ್ಲ. ಜೀಮೂತನ ವಧೆಯಿಂದಾಗಿ ಮತ್ಸ್ಯರಾಜನಿಗೂ ಮತ್ತು ಅವನ ಬಂಧು- ಮಿತ್ರರಿಗೂ ಅಮಿತವಾದ ಆನಂದವುಂಟಾಯಿತು.

ತನ್ನ ಸಂತೋಷಾಧಿಕ್ಯದಲ್ಲಿ ವಿರಾಟನು ಬಲ್ಲವನಿಗೆ ಅಪಾರವಾದ ಐಶ್ವರ್ಯವನ್ನು ಬಹುಮಾನವಾಗಿ ಕೊಟ್ಟನು. ಅವನ ಅಂದಿನ ಕೊಡುಗೆಯು ಐಶ್ವರ್ಯಾಧಿಪತಿಯಾದ ಕುಬೇರನ ಕೊಡುಗೆಗೆ ಅನುರೂಪವಾಗಿದ್ದಿತು.

ಜನಮೇಜಯ! ಅಂದಿನಿಂದ ಪಾಕಶಾಲಾಧ್ಯಕ್ಷನು ಅರಮನೆಯನ್ನು ಪ್ರತಿನಿಧಿಸುವ ಮಲ್ಲಾಗ್ರೇಸರನೂ ಆದನು. ದೇಶ-ವಿದೇಶಗಳಿಂದ ಯಾವ ಮಲ್ಲರೇ ಬಂದರೂ ಬಲ್ಲವನೊಡನೆಯೇ ಸೆಣೆಸಬೇಕಾಗಿದ್ದಿತು. ಅವನೊಡನೆ ಯುದ್ಧಮಾಡಿದವರಲ್ಲಿ ಸಾಮಾನ್ಯವಾಗಿ ಯಾರೂ ಪುನಃ ತಮ್ಮ ದೇಶಗಳಿಗೆ ಹಿಂದಿರುಗುತ್ತಿರಲಿಲ್ಲ. ಪುನಃ-ಪುನಃ ಪರಾಜಿತರಾಗಿ ಅವಮಾನಿತರಾಗಲು ಅವಕಾಶವಿಲ್ಲದಂತೆ ಪರಲೋಕಯಾತ್ರೆಯನ್ನೇ ಮಾಡಿಬಿಡುತ್ತಿದ್ದರು. ಪಾಕಶಾಲಾಧ್ಯಕ್ಷನ ಅತುಲಪರಾಕ್ರಮವನ್ನು ಕಂಡು ಹಿರಿಹಿಗ್ಗುತ್ತಿದ್ದ ವಿರಾಟನು ಭೀಮನು ಮಾಡುವ ಮಲ್ಲಯುದ್ಧವನ್ನು ಪದೇ ಪದೇ ನೋಡುತ್ತಿರಬೇಕೆಂದು ಆಶಿಸುತ್ತಿದ್ದನು. ಭೀಮನು ಎದುರಾಳಿಗಳನ್ನು ಸಂಹರಿಸಿದನಂತರವೂ ವಿರಾಟರಾಜನ ಆಶೆಯು ಪೂರ್ಣವಾಗುತ್ತಿರಲಿಲ್ಲ. ಸಿಂಹಗಳೊಡನೆ, ಹುಲಿಗಳೊಡನೆ, ಆನೆಗಳೊಡನೆ, ಸೆಣಸಾಡಲು ಬಲ್ಲವನಿಗೆ ಹೇಳಿ ಅವುಗಳೊಡನೆಯೂ ಸೆಣಸಾಟ ನಡೆಸುತ್ತಿದ್ದ ಭೀಮನ ಅದ್ಭುತ ಪರಾಕ್ರಮವನ್ನು ನೋಡಿ ವಿರಾಟನು ಸಂತೃಪ್ತನಾಗುತ್ತಿದ್ದನು. ವಿರಾಟರಾಜನ ಪ್ರೇರಣೆಯಂತೆ ರಾಣಿವಾಸದಲ್ಲೂ ಅಂತಹ ಪ್ರದರ್ಶನಗಳು ಆಗಾಗ ನಡೆದು ಅವುಗಳನ್ನು ಅಂತಃಪುರದ ಸ್ತ್ರೀಯರೂ ನೋಡಿ ಆನಂದಿಸುತ್ತಿದ್ದರು.

ಅರ್ಜುನನೂ ತನ್ನ ನೃತ್ಯ-ಗಾಯನಗಳಿಂದ ರಾಜನನ್ನೂ ಅಂತಃಪುರದ

ಸ್ತ್ರೀಯರನ್ನೂ ಸಂತೋಷಗೊಳಿಸುತ್ತಿದ್ದನು. ನಕುಲನು ಸುಶಿಕ್ಷಿತವಾದ ಕುದುರೆಗಳನ್ನು ರಾಜನ ಮುಂದೆ ತಂದು ಅವುಗಳ ಸಾಹಸವನ್ನು ಪ್ರದರ್ಶಿಸಿ ವಿರಾಟನನ್ನು ಸಂತೋಷಗೊಳಿಸುತ್ತಿದ್ದನು. ರಾಜನು ಪ್ರಯಾಣಹೊರಟ ನೆಂದರೆ ರಾಜಯೋಗ್ಯವಾದ ಕುದುರೆಯನ್ನು ತೆಗೆದುಕೊಂಡು ನಕುಲನು ರಾಜನನ್ನೇ ಅನುಸರಿಸಿ ಹೋಗುತ್ತಿದ್ದನು. ಅದರಿಂದಾಗಿ ರಾಜನಿಗೆ ನಕುಲನ ವಿಷಯದಲ್ಲಿ ಹೆಚ್ಚಿನ ಮಮತೆಯು ಮೂಡಿದ್ದಿತು.

ಸಮಯಗಳಲ್ಲಿ ರಾಜನು ನಕುಲನಿಗೆ ಯಥೇಚ್ಛವಾಗಿ ಬಹುಮಾನ ಗಳನ್ನೂ ಕೊಡುತ್ತಿದ್ದನು.

ಸಹದೇವನು ಗೋಶಾಲೆಯ ಅಧ್ಯಕ್ಷನಾದನಂತರ ಗೋವುಗಳ ಸಂಖ್ಯೆಯು ಅಪಾರವಾಗಿ ಬೆಳೆಯತೊಡಗಿತು. ಸುಶಿಕ್ಷಿತವಾದ ಹೋರಿಗಳ ಸಣ್ಣ ಸೈನ್ಯವನ್ನೇ ಸಹದೇವನು ಸಿದ್ಧಗೊಳಿಸಿದ್ದನು. ಆಗಿಂದಾಗ ಹೋರಿಗಳ ಕಾಳಗವನ್ನೂ ಸಹದೇವನು ರಾಜಸಮ್ಮುಖದಲ್ಲಿ ಪ್ರದರ್ಶಿಸಿ ರಾಜನಿಂದ ಅಮೂಲ್ಯವಾದ ಬಹುಮಾನಗಳನ್ನು ಪಡೆಯುತ್ತಿದ್ದನು.

ಆದರೆ ಪತಿವ್ರತೆಯಾದ ದ್ರೌಪದಿಗೆ ತನ್ನ ಗಂಡಂದಿರು ಮಾಡುತ್ತಿದ್ದ ಸೇವಾಕಾರ್ಯವು ಸಹ್ಯವಾಗುತ್ತಿರಲಿಲ್ಲ. ಆದರೂ ಮಾಡುವುದೇನಿದೆ? ವಿಧಿನಿಯಮವನ್ನು ಅನುಭವಿಸಿಯೇ ತೀರಬೇಕಲ್ಲವೇ?–ಹೀಗೆಂದು ಯೋಚಿಸಿ ಸೈರಂಧ್ರಿಯು ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದಳು.

ಮಹಾರಾಜ! ಈ ವಿಧವಾಗಿ ಪಾಂಡವರು ತಮ್ಮ ವೇಷಗಳನ್ನು ಮರೆಸಿಕೊಂಡು ವಿರಾಟರಾಜನ ಅರಮನೆಯಲ್ಲಿ ವಾಸಮಾಡುತ್ತಾ ವಿರಾಟ ರಾಜನ ಸೇವೆಯಲ್ಲಿ ನಿರತರಾಗಿದ್ದರು.”

೧೩ನೆಯ ಅಧ್ಯಾಯವು ಮುಗಿಯಿತು.

## ಕೀಚಕನು ದ್ರೌಪದಿಯನ್ನು ಮೋಹಿಸಿ ಅವಳಿಂದ ತಿರಸ್ಕೃತನಾದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

"ಜನಮೇಜಯ! ಮಹಾರಥರಾದ ಪಾಂಡವರು ತಮ್ಮ ಅಜ್ಞಾತ ವೇಷದಲ್ಲಿ ಮತ್ಸ್ಯರಾಜನ ಅರಮನೆಯಲ್ಲಿ ಹತ್ತು ತಿಂಗಳುಗಳನ್ನು ಕಳೆದರು. ದಾಸಿಯರಿಂದ ಸೇವೆಮಾಡಿಸಿಕೊಳ್ಳಲು ಅರ್ಹಳಾದ ದ್ರೌಪದಿಯು ವಿರಾಟ ರಾಜನ ಪತ್ನಿಯಾದ ಸುದೇಷ್ಣೆಯ ಸೇವೆಮಾಡುತ್ತಾ ಬಹಳ ದುಃಖದಿಂದಲೇ ಆ ಹತ್ತು ಮಾಸಗಳನ್ನು ಕಳೆದಳು. ಹತ್ತು ಮಾಸಗಳವರೆಗೆ ತಾನೂ ಮತ್ತು ತನ್ನ ಗಂಡಂದಿರೂ ಇತರರ ಸೇವೆಯಲ್ಲಿ ತೊಡಗಿರುವುದಕ್ಕಾಗಿ ದ್ರೌಪದಿಯು ದುಃಖಿಸುತ್ತಾ ನಿಟ್ಟುಸಿರುಬಿಡುತ್ತಿದ್ದಳೇ ಹೊರತು ಬೇರಾವ ಅಪಘಾತವೂ ಉಂಟಾಗಿರಲಿಲ್ಲ. ರಾಜಪುತ್ರಿಯಾದ ತಾನು ಇತರರ ಸೇವೆಯನ್ನು ಮಾಡ ಬೇಕಾಯಿತಲ್ಲಾ ಎಂಬ ದುಃಖವು ದ್ರೌಪದಿಯ ಮನಸ್ಸಿನಲ್ಲಿದ್ದಿತಾದರೂ ಸುದೇಷ್ಣೆಯ ಸೇವೆಮಾಡುವಾಗ ಬಹಳ ಶ್ರದ್ಧೆಯಿಂದಲೇ ಸೇವೆಮಾಡು ತ್ತಿದ್ದಳು. ಸುದೇಷ್ಣೆಗೆ ಕ್ರಮ-ಕ್ರಮವಾಗಿ ಅನುಪಮಸೌಂದರ್ಯವತಿಯಾದ ದ್ರೌಪದಿಯ ವಿಷಯದಲ್ಲಿ ಪ್ರಸನ್ನತೆಯುಂಟಾಯಿತು. ದ್ರೌಪದಿಯು ಮಾಡುತ್ತಿದ್ದ ಸೇವೆಯೇ ಅದಕ್ಕೆ ಕಾರಣವಾಗಿದ್ದಿತು. ದ್ರೌಪದಿಯ ವಿಷಯದಲ್ಲಿ ಅಂತಃಪುರದ ಇತರ ಸ್ತ್ರೀಯರೂ ಪ್ರೀತರಾಗಿದ್ದರು.

ನಾನು ಹಿಂದೆ ಹೇಳಿದಂತೆ ಒಂದು ವರ್ಷದ ಅವಧಿಯಲ್ಲಿ ಹತ್ತುಮಾಸ ಗಳು ಕಳೆದುಹೋಗಿದ್ದುವು. ಪಾಂಡವರ ಅಜ್ಞಾತವಾಸವು ಪೂರ್ಣವಾಗಲು ಕೇವಲ ಎರಡು ಮಾಸಗಳು ಮಾತ್ರವೇ ಉಳಿದಿದ್ದುವು. (ಆದರೆ ಆ ಎರಡು ಮಾಸಗಳ ಗರ್ಭದಲ್ಲಿ ಏನಿರುವುದೆಂದು ಯಾರಿಗೆ ತಾನೇ ಹೇಳಲು ಸಾಧ್ಯ ವಾದೀತು? ಹತ್ತು ಮಾಸಗಳು ಕಳೆದಂತೆಯೇ ಉಳಿದೆರಡು ಮಾಸಗಳೂ ಸುಲಭವಾಗಿ ಸುಖವಾಗಿ ಕಳೆದುಹೋಗಬಹುದೆಂದು ಪಾಂಡವರು ಆಶಿಸಿದ್ದಿರಬಹುದಲ್ಲವೇ?)

ಆದರೆ ಆ ವರ್ಷವು ಮುಗಿಯಲು ಕೆಲವೇ ದಿನಗಳಿರುವಾಗ ಒಂದು ಘಟನೆಯು ನಡೆಯಿತು. ಸುದೇಷ್ಣೆಯ ತಮ್ಮನಾದ ಮಹಾಬಲನಾದ ಕೀಚಕನೇ ವಿರಾಟರಾಜನ ಸೇನಾಪತಿಯಾಗಿದ್ದನು. ಅವನೊಮ್ಮೆ ಆಕಸ್ಮಿಕವಾಗಿ ಅಂತಃಪುರದಲ್ಲಿದ್ದ ದ್ರೌಪದಿಯನ್ನು ಕಂಡನು.

ದೇವಕನ್ಯೆಯಂತೆಯೇ ಕಾಣುತ್ತಿದ್ದ, ದೇವತೆಯೋಪಾದಿಯಲ್ಲಿ ಶರೀರದ ದಿವ್ಯಕಾಂತಿಯನ್ನು ಪ್ರಸರಿಸುತ್ತಾ ಅಂತಃಪುರದಲ್ಲಿ ಸಂಚರಿಸುತ್ತಿದ್ದ ದ್ರೌಪದಿಯ ಸೌಂದರ್ಯವು ಸ್ತ್ರೀಯರಿಗೂ ಮೋಹಕವಾಗಿತ್ತೆಂದಮೇಲೆ ಅವಳನ್ನು ಕೀಚಕನು ಮೋಹಿಸಿದನೆಂಬುದರಲ್ಲಿ ಆಶ್ಚರ್ಯವೇನಿಲ್ಲ. ದ್ರೌಪದಿಯನ್ನು ಕಾಣುತ್ತಲೇ ಕಾಮಪೀಡಿತನಾದ ಕೀಚಕನು ಅವಳನ್ನು ಹೊಂದಲು ಅಪೇಕ್ಷಿಸಿದನು.

ಕಾಮಚೋದಿತರಾದವರಿಗೆ, ಕಾಮಾಗ್ನಿಯಿಂದ ಸಂತಪ್ತರಾದವರಿಗೆ ಯಾವ ವಿಧವಾದ ವಿವೇಚನೆಯೂ ಇರುವುದಿಲ್ಲ. ಕೀಳುಜಾತಿಯವಳನ್ನು ಕಾಮಿಸಬಹುದೇ–ಎಂಬ ವಿವೇಕವೂ ಇರುವುದಿಲ್ಲ.

ಕೀಚಕನು ನೇರವಾಗಿ ಸೈರಂಧ್ರಿಯ ಬಳಿಗೆ ಹೋಗಲು ಸಾಧ್ಯವೇ? ತನ್ನ ಅಂತಸ್ತಿಗೆ ಕುಂದುಂಟಾಗುವುದೆಂದಾದರೂ ಭಾವಿಸಿರಬಹುದು ಅಥವಾ ತನ್ನಕ್ಕನನ್ನು ಕೇಳದೇ ಅಕ್ಕನ ಪರಿಚಾರಿಕೆಯ ಬಳಿಗೆ ಹೋಗುವುದು ಅನುಚಿತ ವೆಂದಾದರೂ ಭಾವಿಸಿರಬಹುದು. ಕಾಮಸಂತಪ್ತನಾದ ಕೀಚಕನು ತೋರಿ ಕೆಯ ನಗುವನ್ನು ಹೊರಗೆ ತೋರಿಸುತ್ತಾ ಸುದೇಷ್ಣೆಯ ಬಳಿಗೆ ಹೋದನು. ಕೀಚಕನು ಆ ಸಮಯದಲ್ಲಿ ನಗುವ ಸ್ಥಿತಿಯಲ್ಲಿರಲಿಲ್ಲ. ಕಾಮಾಗ್ನಿಯಿಂದ ಸಂತಪ್ತವಾಗಿದ್ದ ಅವನ ಶರೀರವು ನಖ-ಶಿಖಾಂತವಾಗಿ ಸುಡುತ್ತಿದ್ದಿತು. ಮೇಲಾಗಿ ಕಾಮವು ಅನ್ಯಸ್ತ್ರೀಯ ಮೇಲಿದ್ದಿತಾದುದರಿಂದ ಹೃದಯವು ಬಡಿದುಕೊಳ್ಳುತ್ತಿದ್ದಿತು. ಅಂತಹ ಅವಸ್ಥೆಯಲ್ಲಿ ನಗಲು ಹೇಗೆತಾನೇ ಸಾಧ್ಯವಾದೀತು? ನಗಲು ಸಾಧ್ಯವಿಲ್ಲದಿದ್ದರೂ ಅಕ್ಕನನ್ನು ಮಾತನಾಡಿಸು ವಾಗ ಮುಖದಲ್ಲಿ ನಗುವಿನ ಮುದ್ರೆಯನ್ನಾದರೂ ತೋರಿಸಲೇಬೇಕಲ್ಲವೇ?

'ಅಕ್ಕಾ!' ಎಂದು ಸೇನಾನಿಯು ಸುದೇಷ್ಣೆಯನ್ನು ಸಂಬೋಧಿಸಿ ವಿಸ್ಮಯಸೂಚಕವಾದ ಈ ಮಾತುಗಳನ್ನು ಹೇಳಿದನು :

"ನಾನೀ ಸುಂದರಿಯನ್ನು ನಿನ್ನ ಅಂತಃಪುರದಲ್ಲಿ ಹಿಂದೆಂದೂ ನೋಡಿಯೇ ಇರಲಿಲ್ಲ. ಇವಳು ತನ್ನ ರೂಪ-ಲಾವಣ್ಯಗಳಿಂದ ನನ್ನನ್ನು ಹುಚ್ಚನನ್ನಾಗಿ ಮಾಡಿಬಿಡುತ್ತಿದ್ದಾಳೆ. ವಾಸನೆಯಿಂದ ಮದ್ಯವು ಮದ್ಯಪಾಯಿಗಳನ್ನು ಆಕರ್ಷಿಸುವಂತೆ ತನ್ನ ರೂಪರಾಶಿಯಿಂದ ಈ ಶುಭಾಂಗಿಯು ನನ್ನ ಮನವನ್ನೇ ಸೂರೆಗೊಳ್ಳುತ್ತಿದ್ದಾಳೆ. ನಿಜವಾಗಿಯೂ ಹೇಳಕ್ಕಾ! ಇವಳಾರು? ನೋಡಿದವರ ಹೃದಯವನ್ನೇ ಆಕರ್ಷಿಸುವ ದೇವರೂಪಳಾದ ಈ ಚೆಲುವೆಯಾರು? ಇಲ್ಲಿಗೇಕೆ ಬಂದಿರುವಳು? ಇವಳು ಯಾರಿಗೆ ಸಂಬಂಧಿಸಿದವಳು? ಮರೆಮಾಚದೇ ಹೇಳು, ಮಹಾರಾಣಿ! ಇವಳು ನನ್ನ ಮನಸ್ಸನ್ನು ಛಿದ್ರ-ವಿಚ್ಛಿದ್ರಗೊಳಿಸಿ ದರ್ಶನಮಾತ್ರದಿಂದಲೇ ನನ್ನನ್ನು ತನ್ನ ದಾಸನನ್ನಾಗಿ ಮಾಡಿಕೊಂಡಿರುವಳು. ನಾನಿವಳನ್ನು ನೋಡಿದ ಕ್ಷಣದಿಂದಲೇ ಮನೋರೋಗಪೀಡಿತನಾಗಿರುವೆನು. ನನ್ನ ಮನಸ್ಸು ನನ್ನನ್ನು ಬಿಟ್ಟು ಅವಳಲ್ಲಿಯೇ ಲೀನವಾಗಿಬಿಟ್ಟಿದೆ. ಇವಳ ಒಲುಮೆಯೊಂದರ ಹೊರತಾಗಿ ನನ್ನ ಮನೋರೋಗಕ್ಕೆ ಬೇರೆಯ ಔಷಧವೇ ಇಲ್ಲವೆಂದು ನಿರ್ಧರಿಸಿ ಬಿಟ್ಟಿದ್ದೇನೆ. ಅಕ್ಕ! ನಿನ್ನ ಪರಿಚಾರಿಕೆಯೆನಿಸಿಕೊಂಡಿರುವ ಇವಳು ನಿಶ್ಚಯ ವಾಗಿಯೂ ನಿತ್ಯನೂತನ ರೂಪವತಿಯಾಗಿದ್ದಾಳೆ. ಇಂತಹ ಅನುಪಮವಾದ ಸೌಂದರ್ಯವುಳ್ಳ ಇವಳು ನಿನ್ನ ಸೇವಕಿಯಾಗಿರುವುದು ನಿಶ್ಚಯವಾಗಿಯೂ ಉಚಿತವಲ್ಲವೆಂಬುದು ನನ್ನ ಭಾವನೆಯಾಗಿದೆ. ಇವಳು ಇನ್ನಾದರೂ ನಿನ್ನ ಸೇವೆಮಾಡುವುದನ್ನು ನಿಲ್ಲಿಸಿ ನನ್ನ ಸರ್ವಸ್ವಕ್ಕೂ ಒಡತಿಯಾಗಲಿ. ಆಗಬಹುದೇನಕ್ಕ? ನಿನಗೆ ತಿಳಿದಿರುವಂತೆ ನನ್ನ ಅಧೀನದಲ್ಲಿ ಆನೆ, ಕುದುರೆ, ರಥ ಮತ್ತು ಪದಾತಿಗಳ ಸೈನ್ಯವಿದೆ. ನನ್ನ ಅರಮನೆಯಲ್ಲಿ ಶುಚಿ-ರುಚಿಯಾದ ಪಾನ-ಭೋಜನಗಳಿಗೆ ಯಾವ ಕೊರತೆಯೂ ಇಲ್ಲ. ಮೇಲಾಗಿ ನನ್ನ ಅರಮನೆಯು ಸ್ವರ್ಣಮಯವಾದ ಚಿತ್ರಗಳಿಂದ ಅಲಂಕೃತವಾಗಿದ್ದು ನಯನಮನೋಹರವಾಗಿದೆ. ಅಂತಹ ಸುಂದರವಾದ ಅರಮನೆಯನ್ನು ಈ ಸುಂದರಿಯು ತನ್ನ ಸಾನ್ನಿಧ್ಯದಿಂದಾಗಿ ಮತ್ತಷ್ಟು ಶೋಭಾಯಮಾನವನ್ನಾಗಿ ಮಾಡಲಕ್ಕ!"

ಸೈರಂಧ್ರಿಯು ಬಂದಾಗಲೇ ಹತ್ತು ತಿಂಗಳ ಮೇಲಾಗಿದ್ದುದರಿಂದಲೂ ಮತ್ತು ಅವಳು ಒಮ್ಮೆಯಾದರೂ ತಾನು ರಾಣಿಯಾಗಿದ್ದೆನೆಂಬುದನ್ನು ತೋರಿಸಿಕೊಳ್ಳದೇ ಇದ್ದುದರಿಂದಲೂ ಅವಳನ್ನು ಸಾಮಾನ್ಯಪರಿಚಾರಿಕೆ ಯೆಂದೇ ಭಾವಿಸಿದ್ದ ಸುದೇಷ್ಣೆಗೆ ದ್ರೌಪದಿಯು ಹಿಂದೆ ಹೇಳಿದ್ದ ಎರಡು ಎಚ್ಚರಿಕೆಯ ಮಾತುಗಳೂ ಮರೆತೇ ಹೋಗಿದ್ದುವೆಂದು ಕಾಣುತ್ತದೆ. ಕೀಚಕನ ಅಭಿಪ್ರಾಯಕ್ಕೆ ಸುದೇಷ್ಣೆಯು ಒತ್ತಾಸೆ ನೀಡಿದಳು (ವಿರೋಧವನ್ನು ಸೂಚಿಸಲಿಲ್ಲ.) ಉತ್ಸಾಹಿತನಾದ ಕೀಚಕನು ದ್ರೌಪದಿಯ ಬಳಿಗೆ ಹೋಗಿ–ಅರಣ್ಯದಲ್ಲಿರುವ ಸಿಂಹಿಣಿಯನ್ನು ಗುಳ್ಳೇನರಿಯು ಪುಸಲಾಯಿಸುವ ರೀತಿಯಲ್ಲಿ–ಸಾಂತ್ವವಚನಗಳಿಂದ ಅವಳೊಡನೆ ಮಾತನಾಡಲು ಉಪಕ್ರಮಿಸಿದನು :

"ಕಲ್ಯಾಣಿ! ವರಾನನೇ! ನೀನಾರು? ಯಾರವಳು? ಎಲ್ಲಿಂದ ಬಂದಿರುವೆ? ಈ ವಿರಾಟನಗರಕ್ಕೆ ಹೇಗೆ ಆಗಮಿಸಿದೆ?–ಈ ಎಲ್ಲ ವಿಷಯ ಗಳನ್ನೂ ವಿಶದವಾಗಿ ಹೇಳು, ಭಾಮಿನಿ! ನಿನ್ನ ರೂಪವು ಅನುಪಮ ವಾದುದು. ನಿನ್ನ ಕಾಂತಿಯು ಅನ್ಯಾದೃಶವಾದುದು ನಿನ್ನ ಸೌಕುಮಾರ್ಯವು ಪರಮೋತ್ಕೃಷ್ಟವಾದುದು. ನಿನ್ನ ಮುಖವು ನಿಶ್ಚಯವಾಗಿಯೂ ನಿರ್ಮಲನಾದ ಚಂದ್ರನಂತೆಯೇ ಕಾಂತಿಯುಕ್ತವಾಗಿದೆ. ಶುಭಾಂಗಿ! ನಿನಗೆ ಶೋಭಾಯಮಾನವಾದ ಹುಬ್ಬುಗಳಿವೆ. ನಿನ್ನ ಕಣ್ಣುಗಳು ಪದ್ಮಪತ್ರಗಳಂತೆ ವಿಶಾಲವಾಗಿವೆ. ನಿನ್ನ ಮಧುರವಾದ ವಚನವಾದರೋ ಸಾಕ್ಷಾತ್ ಕೋಗಿ ಲೆಯ ನಿನಾದವನ್ನೇ ಅನುಕರಿಸುತ್ತಿದೆ. ಸುಮಧ್ಯಮೇ! ನೀನೇನಾದರೂ ಪದ್ಮಾಲಯಳಾದ ಮಹಾಲಕ್ಷ್ಮಿಯೇ? ಹ್ರೀ, ಶ್ರೀ, ಕೀರ್ತಿ, ಕಾಂತಿ–ಇವುಗಳ ಅಧಿದೇವತೆಗಳಲ್ಲಿ ನೀನೊಬ್ಬಳಾಗಿರುವೆಯಾ? ಅತಿರೂಪವತಿಯಾಗಿರುವ ನೀನು ಮನ್ಮಥನ ಸಂಗಡ ವಿಹರಿಸುವ ರತಿಯಾಗಿರುವೆಯಾ? ಶೋಭಾಯ ಮಾನವಾದ ಹುಬ್ಬುಗಳಿಂದ ಕೂಡಿರುವ ನೀನು ನಿಶ್ಚಯವಾಗಿಯೂ ಅತ್ಯಂತ ಶ್ರೇಷ್ಠವಾದ ಪ್ರಭೆಯಿಂದ ಕೂಡಿರುವ ಚಂದ್ರನಂತೆ ವಿರಾಜಮಾನಳಾಗಿರುವೆ. ನಿನ್ನ ಕಡೆಗಣ್ಣಿನ ಕಾಂತಿಯು ಬೆಳದಿಂಗಳಿನ ಪ್ರಭೆಗೆ ಸಮಾನವಾಗಿರುವುದು. ಅಥವಾ ವಿಲಾಸಿಯ ಹೃದಯಕ್ಕೆ ಬೆಳದಿಂಗಳಿಂದ ಉಂಟಾಗುವ ಆನಂದವು ನಿನ್ನ ಕಡೆಗಣ್ಣಿನ ನೋಟದಿಂದಲೇ ಪ್ರಾಪ್ತವಾಗುವುದು, ಶುಭಾಂಗಿ! ದಿವ್ಯ

ವಾದ ಕಿರಣಗಳಿಂದ ಕೂಡಿರುವ, ದಿವ್ಯಕಾಂತಿಯಿಂದ ಸುಮನೋಹರವಾಗಿರುವ ನಿನ್ನ ಮುಖಚಂದ್ರನನ್ನು ವೀಕ್ಷಿಸಿದ ಈ ಜಗತ್ತಿನ ಯಾವ ಮಾನವನು ತಾನೇ ಮನ್ಮಥನ ವಶವರ್ತಿಯಾಗದೇ ಇರುವನು?

ದೇವಿ! ನಿನ್ನ ಒಂದೊಂದು ಅಂಗವೂ ವಿಶೇಷವಾದ ಶೋಭೆಯಿಂದಲೇ ಕೂಡಿರುವುದು. ನಿನ್ನ ಸ್ತನಗಳು ದಿವ್ಯವಾದ ಹಾರಗಳಿಂದ ಅಲಂಕರಿಸಲು ಯೋಗ್ಯವಾಗಿವೆ. ಬಹಳ ಸುಂದರವಾಗಿವೆ. ಉನ್ನತವಾಗಿವೆ. ಒಂದಕ್ಕೊಂದು ಸೇರಿಕೊಂಡಿವೆ. ಕಮಲದ ಮೊಗ್ಗಿನ ಆಕಾರವನ್ನು ಹೊಂದಿವೆ. ಈ ನಿನ್ನ ಪಯೋಧರಗಳು ಇಷ್ಟು ಸುಂದರವಾಗಿದ್ದರೂ ನನ್ನ ವಿಷಯದಲ್ಲಿ ಅವು–ಕಾಮದೇವನು ಹಿಡಿದಿರುವ ಚಾವಟಿಗಳಂತಿದ್ದು ನನ್ನನ್ನು ಪ್ರತಿಕ್ಷಣದಲ್ಲಿಯೂ ಪ್ರಹರಿಸುತ್ತಿವೆಯೋ–ಎಂಬಂತೆ ಭಾಸವಾಗುತ್ತಿದೆ. ನಿನ್ನ ಸೊಂಟವಂತೂ ಬಹಳ ಕೃಶವಾಗಿದೆ. ಹೆಬ್ಬೆರಳು ಮತ್ತು ತರ್ಜನಿಗಳಲ್ಲಿ ನಿನ್ನ ಸೊಂಟವನ್ನು ಸುತ್ತುವರಿಸುವಷ್ಟು ಕೃಶವಾಗಿದೆ. ಸ್ತನಭಾರದ ಕಾರಣದಿಂದ ಸೊಂಟವು ಬಳುಕಿ ನಾಲ್ಕು ರೇಖೆಗಳು ಕಿಬ್ಬುಹೊಟ್ಟೆಯ ಮೇಲೆ ಕಾಣಿಸಿಕೊಂಡಿವೆ. ನಿನ್ನ ಜಘನಪ್ರದೇಶವು ನದಿಯ ಮರಳಿನ ದಿಣ್ಣೆಯಂತಿದ್ದು ಇದನ್ನು ನೋಡುತ್ತಿದ್ದಂತೆಲ್ಲಾ ಸಹಿಸಲಸಾಧ್ಯವಾದ ನನ್ನ ಕಾಮವ್ಯಾಧಿಯು ಉಲ್ಬಣವಾಗುತ್ತಿದೆ. ಭಾಮಿನೀ! ನಿನ್ನ ದರ್ಶನಮಾತ್ರದಿಂದ ಉದ್ಭೂತವಾಗಿರುವ ಕಾಮಾಗ್ನಿಯು ಭಯಂಕರವಾದ ದಾವಾಗ್ನಿಯಂತೆ ನನ್ನನ್ನು ಸುಡಹತ್ತಿದೆ. ನಿನ್ನ ಸಂಗಮಾಡಬೇಕೆಂಬ ಸಂಕಲ್ಪದಿಂದಾಗಿ ಈ ಕಾಮಾಗ್ನಿಯು ನನ್ನನ್ನು ಅತಿಕ್ರೂರವಾಗಿ ದಹಿಸುತ್ತಿದೆ. ನನ್ನನ್ನು ಅನವರತವಾಗಿ ದಹಿಸುತ್ತಿರುವ ಕಾಮಾಗ್ನಿಯ ಉಪಶಮನಕ್ಕೆ ನಿನ್ನ ಸಂಗರೂಪವಾದ ಕಾರ್ಮುಗಿಲಿನಿಂದ ನಿನ್ನ ಆತ್ಮಪ್ರದಾನವೆಂಬ ಮಳೆಗರೆಯಬೇಕು. ಆಗಲೇ ನನ್ನನ್ನು ದಹಿಸುತ್ತಿರುವ ಕಾಮಾಗ್ನಿಯು ಉಪಶಮನವಾದೀತು. ಚಂದ್ರಮುಖಿ! ನಿನ್ನ ಸಂದರ್ಶನದಿಂದಾಗಿ ಮನ್ಮಥನ ಬಾಣಗಳು ನನ್ನ ಚಿತ್ತವನ್ನು ವಿಭ್ರಮಗೊಳಿಸಿವೆ. ನಿನ್ನೊಡನೆ ಸೇರಬೇಕೆಂಬ ಆಶೆಯಿಂದಾಗಿ ಮನ್ಮಥನ ಬಾಣಗಳು ಮತ್ತಷ್ಟು ತೀಕ್ಷ್ಣವಾಗಿವೆ. ಪ್ರಚಂಡವಾದ ವೇಗವುಳ್ಳ ಬಹುದಾರುಣವಾದ ಮನ್ಮಥನ ಬಾಣಗಳು ಬಹಳ ನಿರ್ದಯವಾಗಿ ನನ್ನ ಹೃದಯವನ್ನು ಸೀಳಿ ಒಳಹೊಕ್ಕಿವೆ. ಬಹಳ ಕ್ರೂರ

ವಾದ ಮತ್ತು ತೀಕ್ಷ್ಣವಾದ ಮನ್ಮಥನ ಬಾಣಗಳು ನನಗೆ ಬಹಳ ಸಂಕಟ ವನ್ನುಂಟುಮಾಡುತ್ತಿವೆ. ಈ ಸಂಕಟದಿಂದ ನಾನು ಪಾರಾಗಬೇಕಾದರೆ ನೀನು ನನ್ನವಳಾಗಬೇಕು ; ನನ್ನೊಡನೆ ನೀನು ರಮಿಸಬೇಕು. ಹಾಗಾದರೆ ಮಾತ್ರವೇ ಮನ್ಮಥನ ಕ್ರೂರಬಾಣಗಳ ಆಘಾತದಿಂದ ಸಂಕಟಪಡುತ್ತಿರುವ ನನ್ನ ಮನಸ್ಸಿಗೆ ಶಾಂತಿಯು ಲಭಿಸುವುದು. ದಯಮಾಡಿ ನನ್ನನ್ನು ಉದ್ಧರಿಸು.

ಭಾಮಿನಿ! ನನ್ನ ಪ್ರೇಯಸಿಯಾದನಂತರ ನೀನು ಈ ದುರವಸ್ಥೆ ಯಲ್ಲಿರಬೇಕಾಗುವುದಿಲ್ಲ. ವಿಲಾಸಿನಿ! ಚಿತ್ರ-ವಿಚಿತ್ರವಾದ ಕುಸುಮಮಾಲೆ ಗಳಿಂದ ಅಲಂಕೃತಳಾಗಿ, ದಿವ್ಯವಾದ ವಸ್ತ್ರಗಳನ್ನು ಧರಿಸಿ, ಮನಸ್ಸಿಗೆ ಬೇಕಾದ ಆಭರಣಗಳಿಂದ ಭೂಷಿತಳಾಗಿ ನನ್ನೊಡನೆ ಸ್ವೇಚ್ಛೆಯಿಂದ ವಿಹರಿಸುತ್ತಿರ ಬಹುದು. ಮದಿಸಿದ ಗಜದಂತೆ ಮಂದಗಮನವುಳ್ಳವಳೇ! ನೀನಿಲ್ಲಿ ಸೇವಾ ವೃತ್ತಿಯನ್ನವಲಂಬಿಸಿ ದುಃಖದಿಂದಿರುವುದು ಖಂಡಿತವಾಗಿಯೂ ಉಚಿತ ವಲ್ಲ. ಸುಖಾರ್ಹಳಾದ ನೀನು ಸುಖವರ್ಜಿತಳಾಗಿರಬಾರದು. ನನ್ನಿಂದ ನೀನು ಪರಮಶ್ರೇಷ್ಠವಾದ ಸುಖವನ್ನು ಪಡೆಯಬಹುದಾಗಿದೆ. ನೀನು ನನ್ನವಳಾದರೆ ಅಮೃತೋಪಮವಾದ, ಅಮೂಲ್ಯವಾದ, ಮನಸ್ಸಿಗೆ ಆಹ್ಲಾದಕರವಾದ ಅನೇಕವಿಧವಾದ ಪಾನೀಯಗಳನ್ನು ಕುಡಿಯುತ್ತಾ ಸುಖದಿಂದ ಸರ್ವದಾ ವಿಹರಿಸುತ್ತಿರಬಹುದು. ಸಕಲವಿಧವಾದ ಸುಖೋಪಭೋಗಗಳನ್ನೂ ಪಡೆಯಬಹುದು. ಸೌಭಾಗ್ಯವತಿಯಾಗಿ ಬಾಳಬಹುದು. ಯಥೇಚ್ಛವಾಗಿ ಪಾನಮಾಡಬಹುದು. ಸರ್ವಶ್ರೇಷ್ಠವಾದ ಸುಖೋಪಭೋಗಗಳನ್ನೂ ಅನುಭವಿಸಬಹುದು.

ಭಾಮಿನಿ! ನಿಶ್ಚಯವಾಗಿ ಹೇಳುವುದಾದರೆ ನಿನ್ನ ರೂಪಕ್ಕೆ ನೀನೇ ಅನ್ಯಾಯವೆಸಗುತ್ತಿರುವೆ. ಯೌವನವನ್ನು ನಿರರ್ಥಕಗೊಳಿಸುತ್ತಿರುವೆ. ನಿನ್ನ ರೂಪ-ಯೌವನಗಳನ್ನು ನಿರರ್ಥಕಗೊಳಿಸುವುದು ಖಂಡಿತವಾಗಿಯೂ ಸರಿಯಲ್ಲ. ನಿನ್ನ ರೂಪು-ಯೌವನಗಳು ಪ್ರದರ್ಶನಾರ್ಥವಾಗಿಟ್ಟಿರುವ ದಿವ್ಯ ಮಾಲೆಗಳಂತಿವೆ. ಮಾಲೆಯನ್ನು ಧರಿಸಿರುವುದರಿಂದಲ್ಲವೇ ಅದಕ್ಕೊಂದು ಸಾರ್ಥಕತೆ? ಅದರಲ್ಲಿಯೂ ಮಾಲೆಯಲ್ಲಿನ ಕುಸುಮಗಳು ವಿಕಸಿತವಾಗಿರು ವಾಗಲೇ ಅದನ್ನು ಧರಿಸಿ ಸಾರ್ಥಕಗೊಳಿಸಬೇಕು ಮತ್ತು ಅದನ್ನು ಧರಿಸು

ವುದರಿಂದಾಗುವ ಆನಂದವನ್ನೂ ಅನುಭವಿಸಬೇಕು. ಮಾಲೆಯು ಬಾಡಿ ಹೊದನಂತರ ಯಾವ ಪ್ರಯೋಜನವೂ ಇಲ್ಲ. ಭಾಮಿನಿ! ಆದುದರಿಂದ ಈ ನಿನ್ನ ದಿವ್ಯರೂಪವನ್ನೂ, ಯೌವನವನ್ನೂ ಸಾರ್ಥಕಗೊಳಿಸಲು ನಾನು ಆತುರನಾಗಿದ್ದೇನೆ.

**ತ್ಯಜಾಮಿ ದಾರಾನ್ಮಮ ಯೇ ಪುರಾತನಾ**
**ಭವನ್ತು ದಾಸ್ಯಸ್ತವ ಚಾರುಹಾಸಿನಿ ।**
**ಅಹಂ ಚ ತೇ ಸುನ್ದರಿ ದಾಸವತ್ ಸ್ಥಿತಃ**
**ಸದಾ ಭವಿಷ್ಯೇ ವಶಗೋ ವರಾನನೇ ॥೩೩॥**

ವರಾನನೇ! ನಾನು ಈ ಹಿಂದೆ ಮದುವೆಯಾಗಿರುವ ಪತ್ನಿಯರೆಲ್ಲ ರನ್ನೂ ನಿನಗಾಗಿ ತ್ಯಜಿಸುತ್ತೇನೆ. ಅವರು ಇನ್ನು ಮುಂದೆ ನಿನ್ನ ದಾಸಿಯ ರಾಗಿರಬೇಕೆಂದು ಆಜ್ಞಾಪಿಸುತ್ತೇನೆ. ನಾನಾದರೋ ಸರ್ವದಾ ನಿನ್ನ ದಾಸ ನಂತೆಯೇ ಇದ್ದುಬಿಡುತ್ತೇನೆ. ನೀನು ಹೇಳಿದಂತೆ ಕೇಳಿಕೊಂಡಿರುತ್ತೇನೆ. ಭಾಮಿನಿ! ದಯಮಾಡಿ ನನ್ನನ್ನು ಪರಿಗ್ರಹಿಸಿ ಉದ್ಧರಿಸು."

ಕೀಚಕನ ಮಾತುಗಳು ದ್ರೌಪದಿಗೆ ಅಸಹ್ಯವಾಗಿದ್ದರೂ ಆ ಮಾತುಗಳನ್ನು ತಿರಸ್ಕರಿಸಿ ಅವಳು ಓಡಿಹೋಗುವಂತಿರಲಿಲ್ಲ. ಸುದೇಷ್ಣೆಯ ಅನುಮತಿಯನ್ನು ಪಡೆದು ಬಂದಿದ್ದ ನೀಚನಾದ ಕೀಚಕನು ದ್ರೌಪದಿಯನ್ನು ಸೆಳೆದೆಳೆಯಲೂ ಸಾಧ್ಯವಿತ್ತು. ಆ ವಿಷಯಗಳೆಲ್ಲವನ್ನೂ ಮುಂದಾಗಿ ಯೋಚಿಸಿಯೇ ದ್ರೌಪದಿಯು ಕೀಚಕನು ಹೇಳಿದ ಅಸಹ್ಯಕರವಾದ ಮಾತುಗಳನ್ನು ಕೇಳುತ್ತಲೇ ಇದ್ದಳು. ಅವನು ಮಾತನ್ನು ಮುಗಿಸಿದನಂತರವೇ ಯಥೋಚಿತವಾದ ಮತ್ತು ಅನುದ್ವೇಗಕರವಾದ ಉತ್ತರವನ್ನು ನೀಡಿದಳು :

"ಸೂತಪುತ್ರ! ಒಂದು ದೇಶದ ಸೇನಾಧಿಪತ್ಯವನ್ನು ವಹಿಸಿರುವ, ಉಚ್ಚಕುಲದಲ್ಲಿ ಹುಟ್ಟಿರುವ ನೀನು ನನ್ನಂತಹ ನಿಹೀನಜಾತಿಯವಳ ನ್ನೆಂದಿಗೂ ಈ ವಿಧವಾಗಿ ಯಾಚಿಸಬಾರದು. ಇದು ನಿನ್ನ ಗೌರವಕ್ಕೆ ಖಂಡಿತವಾಗಿಯೂ ಯೋಗ್ಯವೆನಿಸುವುದಿಲ್ಲ. ನಾನು ಸೈರಂಧ್ರೀ ; ಹೀನ ಜಾತಿಯವಳು. ನನ್ನ ಕೆಲಸ-ಕಾರ್ಯಗಳಿಗೆ ಅನುರೂಪವಾದ ವೇಷ-ಭೂಷಣಗಳನ್ನು ಧರಿಸಿದ್ದೇನೆ. ನಾನು ಮಾಡುತ್ತಿರುವ ಕಾರ್ಯವೂ

ಬಹಳ ಹೇಯವಾದ ಕೇಶಶೃಂಗಾರ. ಇಂತಹ ನನ್ನನ್ನು ನಿನ್ನಂತಹ ಸೇನಾಪತಿಯು ಎಂದಿಗೂ ಕಾಮಿಸಬಾರದು.

**ಪರದಾರಾಸ್ಮಿ ಭದ್ರಂ ತೇ ನ ಯುಕ್ತಂ ತವ ಸಾಮ್ಪ್ರತಮ್ ।**
**ದಯಿತಾಃ ಪ್ರಾಣಿನಾಂ ದಾರಾ ಧರ್ಮಂ ಸಮನುಚಿನ್ತಯ ॥೩೫॥**

ಮೇಲಾಗಿ ನಾನು ಪರಸ್ತ್ರೀ. ನಿನಗೆ ಮಂಗಳವಾಗಲಿ. ಪ್ರಪಂಚದಲ್ಲಿ ಸಕಲಪ್ರಾಣಿಗಳಿಗೂ ತಮ್ಮ ಪತ್ನಿಯರು ಪರಮಪ್ರಿಯರೆಂಬ ವಾರ್ತೆಯನ್ನು ನಾನು ಸರ್ವತ್ರ ಕೇಳಿದ್ದೇನೆ. ಈ ವಿಷಯದಲ್ಲಿ ಧರ್ಮವಾವುದೆಂಬುದನ್ನೂ ನೀನು ಸುದೀರ್ಘವಾಗಿ ಚಿಂತಿಸಬೇಕಾಗಿದೆ.

**ಪರದಾರೇ ನ ತೇ ಬುದ್ಧಿರ್ಜಾತು ಕಾರ್ಯಾ ಕಥಂಚನ ।**
**ವಿವರ್ಜನಂ ಹ್ಯಕಾರ್ಯಾಣಾಮೇತತ್ಸುಪುರುಷವ್ರತಮ್ ॥೩೬॥**

ನಿನ್ನ ಬುದ್ಧಿಯು ಯಾವಾಗಲೂ ಪರಪತ್ನಿಯರ ಹಿಂದೆ ಹೋಗದಿರಲೆಂದು ನಾನು ಆಶಿಸುತ್ತೇನೆ. ಅಕಾರ್ಯಗಳೆಂದು ಹಿರಿಯರಿಂದ ಹೇಳಲ್ಪಟ್ಟುವುಗಳನ್ನು ವಿಸರ್ಜಿಸುವುದೇ ಸತ್ಪುರುಷರ ವ್ರತವಾಗಿರುತ್ತದೆ.

**ಮಿಥ್ಯಾಭಿಗೃಧ್ನೋ ಹಿ ನರಃ ಪಾಪಾತ್ಮಾ ಮೋಹಮಾಸ್ಥಿತಃ ।**
**ಅಯಶಃ ಪ್ರಾಪ್ನುಯಾದ್ಘೋರಂ ಮಹದ್ವಾ**
**ಪ್ರಾಪ್ನುಯಾದ್ಭಯಮ್ ॥೩೭॥**

ಕಾಮಾಭಿಭೂತನಾದ ಮೂಢನಾದ ಪಾಪಾತ್ಮನು, ಮೋಹಪರವಶನಾಗಿ ಕಾರ್ಯಾಕಾರ್ಯಗಳನ್ನು ವಿವೇಚಿಸದೇ ಅಕಾರ್ಯದಲ್ಲಿ ಪ್ರವರ್ತಿಸಿ, ಶಾಶ್ವತವಾದ ದುಷ್ಕೀರ್ತಿಯನ್ನು ಪಡೆಯುತ್ತಾನೆ ಮತ್ತು ಮಹತ್ತರವಾದ ಭಯವನ್ನೂ ಹೊಂದುತ್ತಾನೆ."

ಜನಮೇಜಯ! ದ್ರೌಪದಿಯು ಈ ರೀತಿಯಲ್ಲಿ ಪರಿ-ಪರಿಯಾಗಿ ಹೇಳಿದರೂ ಕೀಚಕನು ವಿವೇಕಿಯಾಗಲಿಲ್ಲ. ಪರಪತ್ನಿಯರನ್ನು ಕೆಣಕಿದರೆ ಆಗುವ ಅನರ್ಥವೇನೆಂಬುದು ಕೀಚಕನಿಗೆ ತಿಳಿಯದೇ ಇರಲಿಲ್ಲ. ಪರಸ್ತ್ರೀಯರನ್ನು

ಅವಮಾನಿಸಲು ಹೋಗಿ ಇತರರು ಅನುಭವಿಸಿದ್ದ ಕಷ್ಟಪರಂಪರೆಗಳೆಲ್ಲ ವನ್ನೂ ಕೀಚಕನು ತಿಳಿದುಕೊಂಡಿದ್ದನು. ಪರಪತ್ನಿಯರೊಡನೆ ಸರಸವಾಡಲು ಹೋಗುವುದು ದೋಷಯುಕ್ತವೆಂಬುದೂ, ಪ್ರಾಣನಾಶಕ್ಕೂ ಕಾರಣ ವಾಗುವುದೆಂಬುದೂ, ಆ ಅಕಾರ್ಯವು ಸಕಲಲೋಕಗಳಲ್ಲಿಯೂ ಬಹು ನಿಂದ್ಯವೆಂದು ಪರಿಗಣಿಸಲ್ಪಟ್ಟಿದೆಯೆಂಬುದೂ ಕೀಚಕನಿಗೆ ತಿಳಿದಿತ್ತು. ಆದರೆ ಜಿತೇಂದ್ರಿಯರಲ್ಲದವರಿಗೆ ಯಾವ ಯುಕ್ತಾಯುಕ್ತವಿಚಾರಗಳೂ ಸಮಯದಲ್ಲಿ ಪ್ರಯೋಜನಕ್ಕೆ ಬರುವುದಿಲ್ಲ. ಕೀಚಕನು ಅತಿಕಾಮಿಯಾಗಿದ್ದನು. ಇಂದ್ರಿಯ ಗಳ ಮೇಲಿನ ಹತೋಟಿಯನ್ನು ಕಳೆದುಕೊಂಡಿದ್ದನು. ಆದುದರಿಂದ ದ್ರೌಪದಿಯಿತ್ತ ಎಚ್ಚರಿಕೆಯು ಕೀಚಕನ ಬುದ್ಧಿಯ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ. ಕಾಮಕೇಳಿಗೆ ಸಂಬಂಧಿಸಿದ ಮಾತುಗಳನ್ನೇ ಕೀಚಕನು ಮುಂದುವರಿಸಿದನು :

“ವರಾರೋಹೇ! ನಿನ್ನ ಕಾರಣದಿಂದಾಗಿ ನಾನು ಮನ್ಮಥನ ಬಾಣ ಗಳಿಂದ ಪೀಡಿತನಾಗಿದ್ದೇನೆ. ನಿನಗಾಗಿ ಪರಿತಪಿಸುತ್ತಿರುವ ನನಗೆ ಈ ವಿಧ ವಾದ ಉತ್ತರವನ್ನೀಯುವುದು ಖಂಡಿತವಾಗಿಯೂ ಯುಕ್ತವಲ್ಲ. ನಾನೀಗ ನಿನ್ನ ಪ್ರೇಮಭಿಕ್ಷೆಯನ್ನೇ ಯಾಚಿಸಿ ಬಂದಿರುತ್ತೇನೆ. ನಿನ್ನ ದಾಸನಾಗಿ ಬಂದಿರುತ್ತೇನೆ. ನೀನು ತಿರಸ್ಕರಿಸುತ್ತಿದ್ದರೂ ಪ್ರಿಯವಾದ ಮಾತುಗಳನ್ನೇ ಆಡುತ್ತಿದ್ದೇನೆ. ಈಗಲಾದರೂ ನೀನು ನನ್ನ ವಶಳಾಗು. ಹಾಗೆ ಮಾಡದಿದ್ದಲ್ಲಿ ಮುಂದೆ ಪಶ್ಚಾತ್ತಾಪಪಡಬೇಕಾಗುವುದು. ನಿನ್ನಲ್ಲಿ ಪ್ರೇಮಭಿಕ್ಷೆಯನ್ನು ಬೇಡಲು ಬಂದುದಕ್ಕಾಗಿ ನನ್ನನ್ನು ನೀನು ಸಾಮಾನ್ಯಮನುಷ್ಯನೆಂದು ತಿಳಿಯಬೇಡ. ಈ ಅಖಂಡಮತ್ಸ್ಯರಾಜ್ಯಕ್ಕೆಲ್ಲಾ ನಾನೇ ನಿಜವಾದ ಪ್ರಭುವು. ವಿರಾಟನು ನಾಮಮಾತ್ರ ರಾಜನಾಗಿದ್ದಾನೆ. ಪ್ರಜೆಗಳ ಯೋಗ-ಕ್ಷೇಮಗಳು ನನ್ನನ್ನೇ ಅವಲಂಬಿಸಿವೆ. ವೀರ್ಯದಲ್ಲಿ ನಾನು ಜಗತ್ತಿನಲ್ಲಿಯೇ ಅಪ್ರತಿಮನಾಗಿದ್ದೇನೆ.

ಇಂತಹವನು ನಿನ್ನ ದಾಸನಾಗಲು ಬಂದಿರುವುದು ನಿನ್ನ ಪುಣ್ಯದ ಫಲ ವೆಂದೇ ಭಾವಿಸುವುದಿಲ್ಲವೇಕೆ? ಈ ಪೃಥ್ವಿಯಲ್ಲಿ ರೂಪದಲ್ಲಿಯೇ ಆಗಲೀ, ಯೌವನದಲ್ಲಿಯೇ ಆಗಲೀ, ಸೌಭಾಗ್ಯದಲ್ಲಿಯೇ ಆಗಲೀ, ಐಶ್ವರ್ಯ

ದಲ್ಲಿಯೇ ಆಗಲೀ–ನನಗೆ ಸಮಾನನಾದ ಬೇರೊಬ್ಬ ಮನುಷ್ಯನು ಖಂಡಿತ ವಾಗಿಯೂ ಇರುವುದಿಲ್ಲ. ಕಲ್ಯಾಣಿ! ನನ್ನ ಅರಮನೆಯು ಸರ್ವಕಾಮ ಸಮೃದ್ಧವಾಗಿದೆ. ಸುಖೋಪಭೋಗಕ್ಕೆ ಬೇಕಾಗುವ ಸಕಲವಸ್ತುಗಳೂ ನನ್ನ ಅರಮನೆಯಲ್ಲಿವೆ. ಅವುಗಳೆಲ್ಲಕ್ಕೂ ನೀನೇ ಒಡತಿಯಾಗಲು ಯೋಗ್ಯ



ಳಾಗಿರುವೆ. ಆದರೆ ನೀನು ಹೇಳುತ್ತಿರುವ ಮಾತುಗಳಿಂದ ನೀನು ದಾಸ್ಯ ವೃತ್ತಿಯಲ್ಲಿಯೇ ಮುಂದುವರಿಯಲು ಅಪೇಕ್ಷೆಯುಳ್ಳವಳಾಗಿರುವಂತೆ ಕಾಣು ತ್ತದೆ. ನಾನು ಈ ರಾಜ್ಯವನ್ನೇ ಬೇಕಾದರೂ ಸಂಪೂರ್ಣವಾಗಿ ನಿನಗೆ ಒಪ್ಪಿಸುತ್ತೇನೆ. ನೀನು ಈ ರಾಜ್ಯಕ್ಕೆ ಸ್ವಾಮಿನಿಯಾಗುವೆ. ನನ್ನನ್ನು ಸೇವಿಸು. ನನ್ನ ವಶಳಾಗು. ಶುಭಾನನೇ! ಪರಮಶ್ರೇಷ್ಠವಾದ ಸುಖೋಪಭೋಗಗಳನ್ನು ನನ್ನ ಮೂಲಕ ಅನುಭವಿಸುವವಳಾಗು.”

“ಸೂತಪುತ್ರ! ಮೂಢನಂತೆ ವರ್ತಿಸಬೇಡ. ನಿನ್ನೀ ಕುತ್ಸಿತವಾದ ವರ್ತನೆಯು ನಿನ್ನ ಜೀವಿತಕ್ಕೇ ಅಪಾಯವನ್ನು ತರುವುದಾಗಿದೆ. ನಾನು ಪರಸ್ತ್ರೀಯೆಂದು ಈ ಹಿಂದೆಯೇ ಹೇಳಿರುವೆನು. ನನಗೆ ಘೋರಪರಾಕ್ರಮಿಗಳಾದ ಐವರು ಪತಿಗಳಿದ್ದಾರೆ. ಅವರು ಅನುದಿನವೂ ನನ್ನನ್ನು ಸಂರಕ್ಷಿಸುತ್ತಿದ್ದಾರೆ. ನಾನು ಖಂಡಿತವಾಗಿಯೂ ನಿನಗೆ ವಶಳಾಗತಕ್ಕವಳಲ್ಲ. ನನ್ನ ಗಂಡಂದಿರು ಗಂಧರ್ವರು. ಅವರೇನಾದರೂ ಕುಪಿತರಾದರೆ ನಿನ್ನನ್ನು ಸಂಹರಿಸಿಬಿಡುವರು. ನಿನ್ನ ಸರ್ವನಾಶಕ್ಕೆ ಎಡೆಗೊಡಬೇಡ. ಮನುಷ್ಯರಿಂದ ಹೋಗಲಸಾಧ್ಯವೆನಿಸಿದ ಅತ್ಯಂತದುರ್ಗಮವಾದ ಮಾರ್ಗವನ್ನು ಹಿಡಿದು ನೀನು ಹೋಗಲು ಇಚ್ಛಿಸುತ್ತಿರುವೆ. ( ದುಃಸಾಹಸವನ್ನು ಮಾಡುತ್ತಿರುವೆ. )

**ಯಥಾ ನಿಶ್ಚೇತನೋ ಬಾಲಃ ಕೂಲಸ್ಥಃ ಕೂಲಮುತ್ತರಮ್ ।**
**ತರ್ತುಮಿಚ್ಛತಿ ಮನ್ದಾತ್ಮಾ ತಥಾ ತ್ವಂ ಕರ್ತುಮಿಚ್ಛಸಿ ॥೪೯॥**

ಬುದ್ಧಿಯಿಲ್ಲದ ಬಾಲಕನೊಬ್ಬನು ಸಮುದ್ರದ ಒಂದು ದಂಡೆಯಲ್ಲಿ ನಿಂತು ಕಣ್ಣಿಗೆ ಕಾಣದಿರುವ ಮತ್ತೊಂದು ದಂಡೆಗೆ ಹೋಗಲಿಚ್ಛಿಸುವಂತೆ– ನೀನು ನನ್ನನ್ನು ಪಡೆಯಲಿಚ್ಛಿಸಿರುವೆ. ಬಾಲನೊಬ್ಬನು ಸಮುದ್ರವನ್ನು ದಾಟುವುದು ಎಷ್ಟು ಅಸಾಧ್ಯವೋ ನಿನಗೆ ನಾನು ವಶಳಾಗುವುದೂ ಅಷ್ಟೇ ಅಸಾಧ್ಯ. ನನ್ನ ವಿಷಯದಲ್ಲೇನಾದರೂ ನೀನು ಅಪರಾಧವನ್ನೆಸಗಲು ಯತ್ನಿಸಿದರೆ ಒಡನೆಯೇ ಕುಪಿತರಾದ ನನ್ನ ಪತಿಗಳು ನಿನ್ನನ್ನು ಜೀವಸಹಿತವಾಗಿ ಬಿಡಲಾರರು.

**ಅನ್ತರ್ಮಹೀಂ ವಾ ಯದಿ ವೋರ್ಧ್ವಮುತ್ಪತೇಃ**
**ಸಮುದ್ರಪಾರಂ ಯದಿ ವಾ ಪ್ರಧಾವಸಿ ।**
**ತಥಾಪಿ ತೇಷಾಂ ನ ವಿಮೋಕ್ಷಮರ್ಹಸಿ**
**ಪ್ರಮಾಥಿನೋ ದೇವಸುತಾ ಹಿ ಖೇಚರಾಃ ॥೫೦॥**

ಪಾತಾಳಕ್ಕೆ ಹೋದರೂ, ಅಂತರಿಕ್ಷಕ್ಕೆ ಹಾರಿದರೂ, ಸಮುದ್ರದ ಆಚೆಯ ದಂಡೆಗೆ ಪ್ರಯಾಣಮಾಡಿದರೂ–ಆಕಾಶಗಾಮಿಗಳಾದ, ದೇವತೆಗಳ ಮಕ್ಕಳಾದ, ಶತ್ರುಗಳ ನಿರ್ಮೂಲನದಲ್ಲಿ ಅತ್ಯಂತಸಮರ್ಥರಾದ ನನ್ನ

ಪತಿಗಳು ನಿನ್ನನ್ನು ಖಂಡಿತವಾಗಿಯೂ ಬಿಡುವುದಿಲ್ಲ. ನೀನಿಷ್ಟು ದೃಢವಾಗಿ ನನ್ನನ್ನು ಪ್ರಾರ್ಥಿಸುತ್ತಿರುವುದೇಕೆ?

**ತ್ವಂ ಕಾಲರಾತ್ರೀಮಿವ ಕಶ್ಚಿದಾತುರಃ**
**ಕಿಂ ಮಾಂ ದೃಢಂ ಪ್ರಾರ್ಥಯಸೇಽದ್ಯ ಕೀಚಕ ।**
**ಕಿಂ ಮಾತುರಙ್ಕೇ ಶಯಿತೋ ಯಥಾ ಶಿಶು-**
**ಶ್ಚನ್ದ್ರಂ ಜಿಘೃಕ್ಷುರಿವ ಮನ್ಯಸೇ ಹಿ ಮಾಮ್ ॥೫೧॥**

ಕೀಚಕ! ರೋಗಿಯೊಬ್ಬನು ಅವಸಾನಕಾರಕವಾದ ಕಾಳರಾತ್ರಿಯನ್ನು ಅಪೇಕ್ಷಿಸುವಂತೆ–ನೀನು ನನ್ನನ್ನು ಪ್ರಾರ್ಥಿಸುತ್ತಿರುವೆಯೇನು? ತಾಯಿಯ ತೊಡೆಯ ಮೇಲೆ ಮಲಗಿರುವ ಶಿಶುವು ಚಂದ್ರನನ್ನು ಹಿಡಿದುಕೊಳ್ಳಲು ಅಪೇಕ್ಷಿಸುವಂತೆ–ನೀನು ನನ್ನನ್ನು ಅಪೇಕ್ಷಿಸುತ್ತಿರುವೆ. ಚಂದ್ರನನ್ನಪೇಕ್ಷಿಸಿದ ಮಗುವಿಗೆ ಚಂದ್ರನು ಸಿಕ್ಕದ ರೀತಿಯಲ್ಲಿ ನಾನೂ ನಿನಗೆ ಖಂಡಿತವಾಗಿಯೂ ಲಭ್ಯಳಾಗತಕ್ಕವಳಲ್ಲ. ರೋಗಿಯು ಅವಸಾನಕಾರಕವಾದ ಕಾಳರಾತ್ರಿಯನ್ನು ತನ್ನ ಮರಣಕ್ಕಾಗಿ ಅಪೇಕ್ಷಿಸುವಂತೆ–ಕಾಳರಾತ್ರಿಸ್ವರೂಪಿಣಿಯಾದ ನನ್ನನ್ನು ನೀನು ಅವಸಾನಪ್ರಾಪ್ತಿಗಾಗಿಯೇ ಅಪೇಕ್ಷಿಸುತ್ತಿರುವೆಯಾ?

ಆ ಐವರು ಗಂಧರ್ವರ ಪ್ರಿಯಪತ್ನಿಯಾದ ನನ್ನನ್ನು ಅಪೇಕ್ಷಿಸುತ್ತಿರುವ ನಿನಗೆ ಇಹ-ಪರಗಳೆರಡರಲ್ಲಿಯೂ ಆಶ್ರಯವು (ರಕ್ಷಣೆಯು) ಸಿಕ್ಕುವುದಿಲ್ಲ. ನಾನಿಷ್ಟು ಹೇಳಿದರೂ ನಿನಗೆ ಶುಭಕರವಾದ ಬುದ್ಧಿಯು ಪ್ರಾಪ್ತವಾಗುವುದಿಲ್ಲವೇ? ಕೀಚಕ! ಈ ಸಮಯದಲ್ಲಿ ಅಂತಹ ಶುಭಕರವಾದ ಬುದ್ಧಿಯಿಂದ ಮಾತ್ರವೇ ನೀನು ನಿನ್ನ ಪ್ರಾಣಗಳನ್ನುಳಿಸಿಕೊಳ್ಳಬಹುದಾಗಿದೆ.”

೧೪ನೆಯ ಅಧ್ಯಾಯವು ಮುಗಿಯಿತು.

## ರಾಣಿಯಾದ ಸುದೇಷ್ಣೆಯು ದ್ರೌಪದಿಯನ್ನು ಕೀಚಕನ ಮನೆಗೆ ಕಳುಹಿಸಿದುದು

ಜನಮೇಜಯ! ಈ ರೀತಿಯಲ್ಲಿ ಕೀಚಕನು ದ್ರೌಪದಿಯಿಂದ ತಿರಸ್ಕೃತನಾದರೂ ಅವನ ಕಾಮಾಗ್ನಿಯು ಸ್ವಲ್ಪವೂ ಶಾಂತವಾಗಲಿಲ್ಲ. ಅವಳು ತಿರಸ್ಕರಿಸಿದಂತೆಲ್ಲಾ ಅವನ ಕಾಮಾಗ್ನಿಯು ಉದ್ದೀಪನಗೊಳ್ಳುತ್ತಲೇ ಇತ್ತು. ಆದರೆ ಕೀಚಕನು ದ್ರೌಪದಿಯನ್ನು ಬಲಾತ್ಕಾರದಿಂದ ಪಡೆಯಲು ಹೋಗಲಿಲ್ಲ. ಐವರು ಗಂಧರ್ವರ ವಿಷಯವನ್ನು ಹೇಳಿ ದ್ರೌಪದಿಯು ಕೀಚಕನಿಗೆ ಎಚ್ಚರಿಕೆಯನ್ನಿತ್ತಿದ್ದಳು. ಆ ಸಮಯದಲ್ಲಿ ಕೀಚಕನಿಗೆ ಮುಂದೇನು ಮಾಡಬೇಕೆಂಬುದು ತೋರಲಿಲ್ಲ. ದ್ರೌಪದಿಯ ಮೇಲೆ ಆಸೆಯು ಹೆಚ್ಚುತ್ತಿದ್ದಿತೇ ಹೊರತು ಲುಪ್ತವಾಗಿ ಹೋಗುವ ಸಾಧ್ಯತೆಯೇ ಇರಲಿಲ್ಲ. ತನ್ನ ಕಾರ್ಯವನ್ನು ಹೇಗಾದರೂ ಮಾಡಿ ಸಾಧಿಸಿಕೊಳ್ಳಲೇಬೇಕೆಂದು ಸಂಕಲ್ಪಿಸಿ ಕೀಚಕನು ಅಕ್ಕನ ಬಳಿಗೆ ಓಡಿದನು. ಮಾನ-ಮರ್ಯಾದೆ- ನಾಚಿಕೆಗಳೆಲ್ಲವನ್ನೂ ದೂರದಲ್ಲಿಯೇ ಇರಿಸಿ ಅಕ್ಕನನ್ನು ಕುರಿತು ಕೀಚಕನು ಹೇಳಿದನು :

"ಅಕ್ಕಾ! ಹೇಗಾದರೂ ಮಾಡಿ ಸೈರಂಧ್ರಿಯು ನನ್ನವಳಾಗುವಂತೆ ಮಾಡು. ಯಾವುದಾದರೂ ಉಪಾಯಾಂತರದಿಂದ ಗಜಗಾಮಿನಿಯಾದ ಸೈರಂಧ್ರಿಯು ನನ್ನ ಬಾಹುಪಾಶದಲ್ಲಿ ಸಿಲುಕಿಕೊಳ್ಳುವಂತೆ ಮಾಡು. ಅವಳ ಮೇಲಿನ ವ್ಯಾಮೋಹದಿಂದಾಗಿ ನಾನು ಹುಚ್ಚನಾಗಿಬಿಟ್ಟಿರುವೆನು. ನನಗೆ ಜೀವಿತದಲ್ಲಿಯೇ ಜುಗುಪ್ಸೆಯುಂಟಾಗಿರುವುದು. ಅವಳು ನನ್ನವಳಾಗದಿದ್ದರೆ ಪ್ರಾಣವನ್ನೇ ತೊರೆದುಬಿಡುವೆನು."

ತಮ್ಮನ ಆರ್ತಾಲಾಪವನ್ನು ಕೇಳಿ ಅಕ್ಕನ ಮನಸ್ಸು ಕರಗಿತು. ಬುದ್ಧಿಶಾಲಿನಿಯಾದ ಸುದೇಷ್ಣೆಯು ತಮ್ಮನ ಮೇಲೆ ಕೃಪೆದೋರಿದಳು. ಕೀಚಕನ ಪ್ರಾರ್ಥನೆಯನ್ನು ಹೇಗೆ ಈಡೇರಿಸಿಕೊಡಬೇಕೆಂಬ ವಿಷಯವಾಗಿ ಸುದೇಷ್ಣೆಯು ತನ್ನಲ್ಲಿಯೇ ಸ್ವಲ್ಪಹೊತ್ತು ಯೋಚಿಸಿದಳು. ಕೀಚಕನ

ಕಾರ್ಯವೂ ಸಿದ್ಧಿಸಬೇಕು ; ಸೈರಂಧ್ರಿಗೂ ಯಾವ ವಿಧವಾದ ಸಂಶಯವೂ ಉಂಟಾಗಕೂಡದು. ಚತುರೆಯಾದ ಸುದೇಷ್ಣೆಯು ಕ್ಷಣಮಾತ್ರದಲ್ಲಿ ಯೋಜನೆಯೊಂದನ್ನು ಸಿದ್ಧಗೊಳಿಸಿ ತಮ್ಮನನ್ನು ಕುರಿತು ಹೇಳಿದಳು :



"ಕೀಚಕ! ಹಬ್ಬದ ದಿನವೊಂದರಲ್ಲಿ ಭೋಜನಕ್ಕಾಗಿ ಸುರೆಯನ್ನೂ, ಭಕ್ಷ್ಯ-ಭೋಜ್ಯಾದಿಗಳನ್ನೂ ಸಿದ್ಧಗೊಳಿಸು. ಅವನ್ನು ತರುವ ಸಲುವಾಗಿ ನಾನು ಸೈರಂಧ್ರಿಯನ್ನು ನಿನ್ನ ಅರಮನೆಗೆ ಕಳುಹಿಸುವೆನು. ಅಲ್ಲಿ ಮತ್ತಾರೂ ಇರುವುದಿಲ್ಲವಾದುದರಿಂದ ನೀನವಳೊಡನೆ ಯಾವ ವಿಧ ವಾದ ಅಡ್ಡಿ-ಆತಂಕಗಳೂ ಇಲ್ಲದೇ ಮಾತನಾಡಬಹುದು. ನೀನವಳನ್ನು ಸವಿ

ಮಾತುಗಳಿಂದ ಸಂತೈಸು. ಅವಳೂ ನಿನ್ನ ಸವಿಮಾತುಗಳಿಗೆ ಮಾರುಹೋಗಿ ನಿನ್ನ ವಶಳಾಗಲೂ ಬಹುದು. ಪ್ರಯತ್ನಿಸಿ ನೋಡು. ಇಷ್ಟುಮಾತ್ರ ನನ್ನಿಂದ ಮಾಡಲು ಸಾಧ್ಯವಿದೆ."

ಕೀಚಕನಿಗೆ ಬೇಕಾದುದೂ ಅಷ್ಟೇ ಅಲ್ಲವೇ? ಪರಮತುಷ್ಟನಾದ ಕೀಚಕನು ತನ್ನ ನಿವಾಸಕ್ಕೆ ಹೋದನು. ಸುದೇಷ್ಣೆಯು ಹೇಳಿದಂತೆ ಉತ್ಸವದಿನವೊಂದರಲ್ಲಿ ಸುಪರಿಷ್ಕೃತವಾದ, ರಾಜರ ಸೇವನೆಗೆ ಯೋಗ್ಯವಾದ ಸುರೆಯನ್ನು ಸಿದ್ಧಗೊಳಿಸಿದನು. ಕುಶಲರಾದ ಅಡಿಗೆಯವರಿಂದ ಭಕ್ಷ್ಯ-ಭೋಜ್ಯಾದಿಗಳನ್ನೂ, ಅನ್ನ-ಪಾನಾದಿಗಳನ್ನೂ ಸಿದ್ಧಗೊಳಿಸಿ ಕೀಚಕನು ಸುದೇಷ್ಣೆಯನ್ನು ಭೋಜನಕ್ಕಾಗಿ ಆಮಂತ್ರಿಸಿದನು. (ಸುದೇಷ್ಣೆಗೆ ಈ ವಿಷಯವನ್ನು ತಿಳಿಸಿದನು.)

ಸುದೇಷ್ಣೆಯು ಸೈರಂಧ್ರಿಯನ್ನು ಕರೆದು ಕೀಚಕನ ಮನೆಗೆ ಹೋಗಿ ಸುರೆಯನ್ನೂ, ಭಕ್ಷ್ಯ-ಭೋಜ್ಯಾದಿಗಳನ್ನೂ ತರುವಂತೆ ಹೇಳಿದಳು :

"ಸೈರಂಧ್ರಿ! ಮೇಲೇಳು. ಈಗಲೇ ಕೀಚಕನ ಮನೆಗೆ ಹೋಗಿ ಪಾನೀಯವನ್ನು ತೆಗೆದುಕೊಂಡು ಬಾ. ನನಗೆ ಬಾಯಾರಿಕೆಯು ಬಹಳ ವಾಗಿದೆ. ಭೋಜನವು ಸಿದ್ಧವಾಗಿರುವುದೆಂದೂ ಕೂಡಲೇ ಬರಬೇಕೆಂದೂ ನನ್ನ ತಮ್ಮನು ನನಗೆ ಆಮಂತ್ರಣವನ್ನಿತ್ತಿರುವನು. ಆದರೆ ನಾನೀಗ ಅಲ್ಲಿಗೆ ಹೋಗಲಾರೆ. ನೀನೇ ಹೋಗಿ ನನ್ನ ತಮ್ಮನು ಕೊಡುವ ಅನ್ನ-ಪಾನಾದಿಗಳನ್ನು ತೆಗೆದುಕೊಂಡು ಬಾ."

ಸೈರಂಧ್ರಿಯು ಎಂದೂ ರಾಣಿಯ ಮಾತಿಗೆ ಪ್ರತಿಯಾಗಿ ಮಾತನಾಡಿರ ಲಿಲ್ಲ. ಆದರೆ ರಾಣಿಯ ಅಂದಿನ ಮನಸ್ಸಿನ ಅಭಿಪ್ರಾಯವೇನೆಂಬುದನ್ನು ಗ್ರಹಿಸಿದ ದ್ರೌಪದಿಯು ಸುದೇಷ್ಣೆಗೆ ಸ್ಪಷ್ಟವಾಗಿಯೇ ಹೇಳಿದಳು :

"ರಾಜಪುತ್ರಿ! ಅವನ ಮನೆಗೆ ಮಾತ್ರ ನಾನು ಖಂಡಿತವಾಗಿಯೂ ಹೋಗಲಾರೆ. ನಿರ್ಲಜ್ಜನಾದ ಅವನು ನನ್ನ ವಿಷಯದಲ್ಲಿ ಹೇಗೆ ವರ್ತಿಸಿದ ನೆಂಬ ವಿಷಯವು ನಿನಗೂ ತಿಳಿದೇ ಇದೆಯಲ್ಲವೇ? ಭಾಮಿನಿ! ನಿನ್ನ ಮನೆ ಯಲ್ಲಿರುವಾಗ ನಾನು ಸ್ವೇಚ್ಛಾಚಾರಿಣಿಯಾಗಲಾರೆನು. ಅಹರ್ನಿಶಿ ನನ್ನನ್ನು

ಸಂರಕ್ಷಿಸುತ್ತಿರುವ ಪತಿಗಳ ಸಮ್ಮುಖದಲ್ಲಿ ನಾನು ವ್ಯಭಿಚಾರಿಣಿಯಾಗ ಲಾರೆನು. ನಾನು ಈ ಅರಮನೆಗೆ ಪ್ರವೇಶಿಸಿದ ಸಮಯದಲ್ಲಿಯೇ ನನ್ನ ನಿಬಂಧನೆಗಳೇನೆಂಬುದನ್ನು ನಿನಗೆ ಸ್ಪಷ್ಟವಾಗಿಯೇ ಹೇಳಿದ್ದೇನೆ. ಸಾಮಾನ್ಯ ಸ್ತ್ರೀಯರ ವಿಷಯದಲ್ಲಿ ವರ್ತಿಸುವಂತೆ ನನ್ನ ವಿಷಯದಲ್ಲಿಯೂ ವರ್ತಿಸು ವುದರಿಂದ ಆಗಬಹುದಾದ ಪರಿಣಾಮವನ್ನೂ ತಿಳಿಸಿದ್ದೇನೆ. ಸುಶೋಭನ



ವಾದ ಕೇಶರಾಶಿಯುಳ್ಳವಳೇ! ಕೀಚಕನೊಬ್ಬ ಮೂರ್ಖನು. ಕಾಮದಿಂದ ಉನ್ಮತ್ತನಾಗಿರುವನು. ಅವನು ನನ್ನನ್ನು ನೋಡಿದೊಡನೆಯೇ ಅವಮಾನ ಗೊಳಿಸಲು ಪ್ರಯತ್ನಿಸುವನು. ಆದುದರಿಂದ ನಾನು ಖಂಡಿತವಾಗಿಯೂ ಅವನಲ್ಲಿಗೆ ಹೋಗುವುದಿಲ್ಲ. ಮಹಾರಾಣಿ! ನಿನಗೆ ದಾಸಿಯರಿಗೆ ಕೊರತೆ

ಯಿಲ್ಲ. ನಿನ್ನ ವಶಾನುಗರಾದ, ಆಜ್ಞಾಧಾರಕರಾದ ಅನೇಕದಾಸಿಯರಿದ್ದಾರೆ. ಅವರಲ್ಲಿ ಯಾರನ್ನಾದರೂ ಕೀಚಕನಲ್ಲಿಗೆ ಕಳುಹಿಸಿಕೊಡು. ನಿನಗೆ ಮಂಗಳ ವಾಗಲಿ. ನಾನು ನಿನ್ನ ಮಾತನ್ನು ನಡೆಸಿಕೊಡಕೂಡದೆಂದಲ್ಲ. ಕೀಚಕನು ನನ್ನನ್ನು ಅವಮಾನಿಸುತ್ತಾನೆಂಬುದೇ ನಾನಲ್ಲಿಗೆ ಹೋಗದಿರಲು ಮುಖ್ಯವಾದ ಕಾರಣ."

ದ್ರೌಪದಿಯು ಹೇಳಿದುದು ಸಕಾರಣವಾಗಿದ್ದರೂ ತಮ್ಮನಿಗೆ ಕೊಟ್ಟ ಮಾತನ್ನು ತಪ್ಪಲು ಸಾಧ್ಯವೇ? ಸುದೇಷ್ಣೆಯು ಸಮಯೋಚಿತವಾಗಿ ಉತ್ತರಿಸಿದಳು :

"ಸೈರಂಧ್ರಿ! ನಾನೇ ನಿನ್ನನ್ನು ಕಳುಹಿಸುತ್ತಿರುವಾಗ ಕೀಚಕನೆಂದಿಗೂ ನಿನ್ನನ್ನು ಪೀಡಿಸುವುದಿಲ್ಲ. (ಅವಮಾನಗೊಳಿಸುವುದಿಲ್ಲ.)"–ಹೀಗೆಂದು ಹೇಳಿ ಮುಚ್ಚಳ ಮುಚ್ಚಿದ್ದ ಸುವರ್ಣಪಾತ್ರೆಯನ್ನು ದ್ರೌಪದಿಯ ಕೈಯಲ್ಲಿ ಕೊಟ್ಟು ಕಳುಹಿಸಿದಳು.

ದ್ರೌಪದಿಯು ಸುದೇಷ್ಣೆಯ ವಿಷಯದಲ್ಲಿ ಶಂಕಿತಳಾದಳು. ತಾನಿಷ್ಟು ಸ್ಪಷ್ಟವಾಗಿ ಕೀಚಕನ ಮನೆಗೆ ಹೋಗುವುದಿಲ್ಲವೆಂದು ಹೇಳಿದರೂ, ಸುದೇಷ್ಣೆಗೆ ತಾನೊಬ್ಬಳಲ್ಲದೇ ನೂರಾರು ಇತರ ದಾಸಿಯರಿದ್ದರೂ ತನ್ನನ್ನೇ ಕಳುಹಿಸಿದುದರಿಂದ ದ್ರೌಪದಿಯು ಶಂಕಿತಳಾದುದು ಸಹಜವೇ ಆಗಿದ್ದಿತು. ಅವಳ ಎದೆಯು ಬಡಿದುಕೊಳ್ಳುತ್ತಿದ್ದಿತು. ಕಣ್ಣುಗಳಲ್ಲಿ ನೀರೂರಿತು. ಸರ್ವಸಂಕಷ್ಟಗಳ ನಿವಾರಕನಾದ ದೇವದೇವನನ್ನೇ ಶರಣುಹೊಕ್ಕಳು. ತನ್ನ ಸ್ವಾಮಿಯ ಚರಣಾರವಿಂದಗಳನ್ನು ಮನಸ್ಸಿನಲ್ಲಿಯೇ ಸ್ಮರಿಸುತ್ತಾ ಸುವರ್ಣ ಪಾತ್ರೆಯನ್ನು ಹಿಡಿದು ಸುರೆಯನ್ನು ತರುವ ಸಲುವಾಗಿ ಕೀಚಕನ ಮನೆಗೆ ಮೆಲ್ಲ-ಮೆಲ್ಲನೆ ಹೋಗುತ್ತಿದ್ದಳು. ಹೋಗುತ್ತಾ ಹಾದಿಯಲ್ಲಿ ಹೀಗೆಂದು ಶಪಥಮಾಡಿದಳು :

**ಯಥಾಹಮನ್ಯಂ ಭರ್ತೃಭ್ಯೋ ನಾಭಿಜಾನಾಮಿ ಕಂಚನ ।**
**ತೇನ ಸತ್ಯೇನ ಮಾಂ ಪ್ರಾಪ್ತಾಂ ಮಾ ಕುರ್ಯಾತ್ಕೀಚಕೋ ವಶೇ ॥**

"ನಾನು ನನ್ನ ಗಂಡಂದಿರನ್ನು ಬಿಟ್ಟು ಪರಪುರುಷನನ್ನು ಕಣ್ಣೆತ್ತಿಯೂ ನೋಡಿರುವುದಿಲ್ಲ ; ಮನಸ್ಸಿನಲ್ಲಿಯೂ ಸ್ಮರಿಸಿರುವುದಿಲ್ಲ. ಈ ವಿಷಯವು

ಸತ್ಯವಾಗಿರುವುದಾದರೆ ನಾನು ಏಕಾಕಿನಿಯಾಗಿ ಕೀಚಕನ ಮನೆಗೆ ಹೋದಾಗಲೂ ಅವನು ನನ್ನನ್ನು ಬಲಾತ್ಕರಿಸಿ ವಶಮಾಡಿಕೊಳ್ಳದಿರಲಿ.”

ಅನಂತರದಲ್ಲಿ ಕೃಷ್ಣೆಯು ಅರಣ್ಯದಲ್ಲಿ ಅಕ್ಷಯಪಾತ್ರೆಯನ್ನಿತ್ತು ಸಂರಕ್ಷಿಸಿದ ಸೂರ್ಯನನ್ನು ಮುಹೂರ್ತಕಾಲ ಪ್ರಾರ್ಥಿಸಿದಳು. ತನುಮಧ್ಯೆಯಾದ ದ್ರೌಪದಿಯ ಅಂದಿನ ಸಂಕಷ್ಟವೇನೆಂಬುದನ್ನು ಗ್ರಹಿಸಿದ ಶರಣಾಗತರಕ್ಷಕನಾದ ಸೂರ್ಯನು ದ್ರೌಪದಿಯ ರಕ್ಷಣೆಗಾಗಿ ಒಬ್ಬ ರಾಕ್ಷಸನನ್ನು ಕಳುಹಿಸಿಕೊಟ್ಟನು. ಸೂರ್ಯನಿಂದ ಪ್ರೇಷಿತನಾದ ರಾಕ್ಷಸನು ಅಗೋಚರನಾಗಿಯೇ ಇದ್ದುಕೊಂಡು ದ್ರೌಪದಿಯ ರಕ್ಷಣೆಯನ್ನು ಸರ್ವಪ್ರಕಾರದಲ್ಲಿಯೂ ಮಾಡುತ್ತಿದ್ದನು.

ದ್ರೌಪದಿಯು ಕೀಚಕನ ಮನೆಗೆ ಬಂದಳು. ಆ ಸಮಯದಲ್ಲವಳು ಬೇಟೆಗಾರನ ಕೈಗೆ ಸಿಕ್ಕಿದ ಹರಿಣಿಯಂತೆ ಬಹುಭೀತಳಾಗಿದ್ದಳು. ತನ್ನ ಸಮೀಪಕ್ಕಾಗಮಿಸಿದ ಕೃಷ್ಣೆಯನ್ನು ನೋಡಿದೊಡನೆಯೇ ಕೀಚಕನ ಆನಂದಕ್ಕೆ ಪಾರವಿಲ್ಲವಾಯಿತು.

ಸಮುದ್ರವನ್ನು ದಾಟಲು ತವಕಿಸುವವನಿಗೆ ಆಕಸ್ಮಿಕವಾಗಿ ನಾವೆಯು ಸಿಕ್ಕುವುದರಿಂದ ಉಂಟಾಗುವ ಸಂತೋಷಾಧಿಕ್ಯವು ಕೀಚಕನಿಗುಂಟಾಗಿ ಅವನು ಒಡನೆಯೇ ಎದ್ದುನಿಂತನು.

೧೫ನೆಯ ಅಧ್ಯಾಯವು ಮುಗಿಯಿತು.

೧೬ನೆಯ ಅಧ್ಯಾಯ ಕೀಚಕವಧಪರ್ವ (ಮುಂದುವರಿದಿದೆ.)

## ಕೀಚಕನು ದ್ರೌಪದಿಗೆ ಅಪಮಾನಮಾಡಿದುದು

ಜನಮೇಜಯ! ಮೂಢನಾದ ಕೀಚಕನು, ಸೈರಂಧ್ರಿಯು ತಾನಾಗಿಯೇ ಒಲಿದು ಬಂದಿರುವಳೆಂಬ ಭ್ರಾಂತಿಯಿಂದಲೇ ಅವಳನ್ನು ಸಂಬೋಧಿಸಿ ಹೇಳಿದನು :

“ನಯನಮನೋಹರವಾದ ಕೇಶರಾಶಿಯುಳ್ಳವಳೇ! ನಿನಗೆ ಸ್ವಾಗತವನ್ನು ಬಯಸುತ್ತೇನೆ. ಮಂಗಳಮಯವಾದ ರಾತ್ರಿಯು ಕಳೆದು ಇಂದು ನನಗೆ ಸುಪ್ರಭಾತವಾಗಿದೆಯೆಂದು ಭಾವಿಸಿದ್ದೇನೆ. ಏಕೆಂದರೆ : ನನ್ನ ಸ್ವಾಮಿನಿಯನ್ನು ನಾನಿಂದು ಪಡೆದಿರುತ್ತೇನೆ. ಇನ್ನು ಮೇಲಾದರೂ ನನಗೆ

ಪ್ರಿಯವಾಗುವಂತೆ ನಡೆದುಕೋ. ನೀನು ಉಡಲು ಮತ್ತು ತೊಡಲು ರೇಷ್ಮೆಯ ಸೀರೆಗಳನ್ನೂ, ಚಿನ್ನದ ಸರಗಳನ್ನೂ, ಒಡ್ಯಾಣ-ನೂಪುರಗಳನ್ನೂ, ವಜ್ರಖಚಿತವಾದ ಕರ್ಣಾಭರಣಗಳನ್ನೂ ತರುವಂತೆ ಹೇಳುತ್ತೇನೆ. ಅಷ್ಟು ಮಾತ್ರವಲ್ಲ, ಸೈರಂಧ್ರಿ! ನಿನ್ನ ಸಲುವಾಗಿಯೇ ನಾನು ಬಹುಮೂಲ್ಯವಾದ ದಿವ್ಯವಾದ ಶಯನಾಗಾರವನ್ನೂ ನಿರ್ಮಿಸಿದ್ದೇನೆ. ದಿವ್ಯಾಂಬರಗಳನ್ನೂ, ಒಡವೆಗಳನ್ನೂ ಧರಿಸಿ ನೀನು ನನ್ನೊಡನೆ ಬಾ. ಶಯನಾಗಾರಕ್ಕೆ ಹೋಗಿ ಹಂಸತೂಲಿಕಾತಲ್ಪದಲ್ಲಿ ಕುಳಿತು ಹೂಗಳ ರಸದಿಂದ ಸಿದ್ಧವಾದ ಮಧುವನ್ನು ಪಾನಮಾಡೋಣ."

ಕೀಚಕನ ಮಾತುಗಳು ದ್ರೌಪದಿಗೆ ಅನಿರೀಕ್ಷಿತವಾಗಿರಲಿಲ್ಲ. ಅವನು ತನಗೆ ಉಪದ್ರವವನ್ನು ಕೊಡುವನೆಂದು ದ್ರೌಪದಿಯು ಆ ಮೊದಲೇ ಚಿಂತಿಸಿದ್ದಳು. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಅವನ ಮನೆಯಿಂದ ಹೊರಟುಹೋಗಬೇಕೆಂಬ ಆಶಯದಿಂದ ಅವನು ಹೇಳಿದ ಮಾತುಗಳನ್ನು ಕೇಳಿಯೂ ಕೇಳಿಸಿಕೊಳ್ಳದವಳ ರೀತಿಯಲ್ಲಿ ತಾನು ಬಂದ ಕಾರ್ಯದ ವಿಷಯವಾಗಿ ಪ್ರಸ್ತಾಪಿಸಿ ಕೀಚಕನನ್ನು ಕುರಿತು ಹೇಳಿದಳು :

"ಸೂತಪುತ್ರ! ಮಹಾರಾಣಿಯು ಸುರೆಯನ್ನು ತೆಗೆದುಕೊಂಡು ಬರುವಂತೆ ನಿನ್ನ ಬಳಿಗೆ ನನ್ನನ್ನು ಕಳುಹಿಸಿದ್ದಾಳೆ. ಅದಕ್ಕಾಗಿಯೇ ಈ ಸುವರ್ಣ ಪಾತ್ರೆಯನ್ನೂ ಕೊಟ್ಟಿರುತ್ತಾಳೆ. ಮೇಲಾಗಿ ಮಹಾರಾಣಿಯು ಬಹಳವಾಗಿ ಬಾಯಾರಿಕೆಯಾಗಿದೆಯೆಂದೂ ಹೇಳಿರುವಳು. ಆದುದರಿಂದ ನೀನು ಕೂಡಲೇ ಸುರೆಯನ್ನು ಈ ಪಾತ್ರೆಗೆ ತುಂಬಿಕೊಡು. ನಾನು ಶೀಘ್ರವಾಗಿ ರಾಣಿಯ ಬಳಿಗೆ ಹೋಗಬೇಕಾಗಿದೆ."

"ಮಹಾರಾಣಿಗೆ ಬೇಕಾದುದನ್ನು ಒಯ್ಯುವುದಕ್ಕೆ ಬೇರೆಯವರಿದ್ದಾರೆ". ಹೀಗೆಂದು ಹೇಳಿ ಕೀಚಕನು ಮೇಲೆದ್ದುಬಂದು ದ್ರೌಪದಿಯ ಬಲಗೈಯನ್ನು ಹಿಡಿದನು.

ಒಡನೆಯೇ ದ್ರೌಪದಿಯು ಕುಪಿತಳಾಗಿ ಹೇಳಿದಳು :

“ಮೂಢ ಕೀಚಕ! ನಾನಿದುವರೆಗೆ ನನ್ನ ಗಂಡಂದಿರನ್ನು ಬಿಟ್ಟು ಬೇರೆಯವರನ್ನು ಅಜಾಗರೂಕತೆಯಿಂದ ಕೂಡ ಕಣ್ಣೆತ್ತಿಯೂ ನೋಡಿರುವುದಿಲ್ಲವೆಂಬುದೂ, ಮನಸ್ಸಿನಲ್ಲಿಯೂ ಸ್ಮರಿಸಿಲ್ಲವೆಂಬುದೂ ಸತ್ಯವಾಗಿದ್ದರೆ–ಈಗ ಕಾಮಾಭಿಭೂತನಾಗಿ ಬಲಾತ್ಕಾರದಿಂದ ನನ್ನ ಬಲಗೈಯನ್ನು ಹಿಡಿದಿರುವ ನೀನು ಮೇಲೇಳಲೂ ಕೂಡ ಅಸಮರ್ಥನಾಗಿ ನೆಲದ ಮೇಲೆ ಬಿದ್ದು ಒದ್ದಾಡುವುದನ್ನು ನಾನು ಕಾಣುವಂತಾಗಲಿ”–ಎಂದು ಹೇಳಿ ಕೈಬಿಡಿಸಿಕೊಂಡು ಓಡಲನುವಾದಳು. ಸೈರಂಧ್ರಿಯು ತನ್ನನ್ನು ನಿಂದಿಸುತ್ತಿರುವುದನ್ನು ಕೇಳಿಯೂ ಕೀಚಕನು ಮನಸ್ಸಿಗದನ್ನು ಹಚ್ಚಿಕೊಳ್ಳದೆ ಅವಳು ಓಡಲುಪಕ್ರಮಿಸಿದುದನ್ನು ನೋಡಿ ಅವಸರದಿಂದ ಅವಳ ಸೆರಗನ್ನೇ ಹಿಡಿದೆಳೆದನು.

ಎಷ್ಟೇ ಅಬಲೆಯಾದರೂ ನಾರಿಯಾದವಳು ಮುನಿದರೆ ಮಾರಿಯಲ್ಲವೇ? ಕೀಚಕನು ಸೆರಗನ್ನು ಹಿಡಿದೆಳೆಯುತ್ತಿರುವಾಗ ತಾನೇನು ಮಾಡುತ್ತಿರುವೆನೆಂಬುದೇ ದ್ರೌಪದಿಗೆ ತೋರಲಿಲ್ಲ. ಶರೀರಾದ್ಯಂತವಾಗಿ ಕೋಪವು ಆವರಿಸಿತ್ತು. ಮುಖವು ಬೆವರಿಟ್ಟಿತ್ತು. ಉಸಿರು ಗಡುಸಾಗಿತ್ತು. ಆಕಸ್ಮಿಕವಾಗಿ ಮೈಮೇಲೆ ಹತ್ತಿದ ಚೇಳೊಂದನ್ನು ಕೆಳಕ್ಕೆ ಝಾಡಿಸುವಂತೆ ಕೀಚಕನನ್ನು ಝಾಡಿಸಿ ನೂಕಿದಳು. ಬುಡವನ್ನು ಕತ್ತರಿಸಿದ ವೃಕ್ಷದಂತೆ ವಿರಾಟರಾಜನ ಸೇನಾಪತಿಯಾದ ಕೀಚಕನು ದೊಪ್ಪನೆ ನೆಲದ ಮೇಲೆ ಬಿದ್ದನು. ಕೀಚಕನು ಕೆಳಗೆ ಬೀಳುತ್ತಲೇ ತನ್ನ ಮುಂದಿನ ರಕ್ಷಣೆಗಾಗಿ ದ್ರೌಪದಿಯು ಯುಧಿಷ್ಠಿರನಿದ್ದ ಮತ್ಸ್ಯರಾಜನ ಸಭಾಂಗಣದ ಕಡೆಗೆ ರಭಸದಿಂದ ಓಡಿದಳು. ಮದಾಂಧನಾದ ಕೀಚಕನೂ ಮೇಲೆದ್ದು ಅವಳ ಹಿಂದೆಯೇ ಓಡಿದನು. ಬೆನ್ನಟ್ಟಿಬಂದು ದ್ರೌಪದಿಯ ಮುಡಿಯನ್ನು ಹಿಡಿದೆಳೆದು ಕೆಳಗೆ ಬೀಳಿಸಿ ಸಭ್ಯರ ಮತ್ತು ರಾಜನ ಸಮ್ಮುಖದಲ್ಲಿಯೇ ದ್ರೌಪದಿಯನ್ನು ಕಾಲಿನಿಂದ ಥಳಿಸಿದನು.

ಆ ಸಮಯಕ್ಕೆ ಸರಿಯಾಗಿ ದ್ರೌಪದಿಯ ರಕ್ಷಣೆಗಾಗಿ ಸೂರ್ಯನಿಂದ ನಿಯೋಜಿತನಾಗಿದ್ದ ರಾಕ್ಷಸನು ಬಿರುಗಾಳಿಯ ರಭಸಕ್ಕೆ ಸಮಾನವಾದ ವೇಗದಿಂದ ಕೀಚಕನನ್ನು ಬಹಳ ದೂರ ಸೆಳೆದೊಯ್ದು ಕೆಳಗೆ ಬೀಳಿಸಿದನು.

ರಾಕ್ಷಸನ ಬಲದಿಂದ ಸೆಳೆದೊಯ್ಯಲ್ಪಟ್ಟ ಕೀಚಕನು–ಕತ್ತರಿಸಲ್ಪಟ್ಟ ಮೂಲವುಳ್ಳ ವೃಕ್ಷದಂತೆ–ಪ್ರಜ್ಞಾಹೀನನಾಗಿ ನೆಲದ ಮೇಲೆ ಬಿದ್ದಿದ್ದನು. ರಾಜನೊಡನೆ ಕುಳಿತಿದ್ದ ಯುಧಿಷ್ಠಿರ-ಭೀಮರು ಕೀಚಕನಿಂದ ದ್ರೌಪದಿಗಾದ ಅವಮಾನವನ್ನು ನೋಡಿದರು. ಕುಪಿತನಾದ ಭೀಮಸೇನನು ಆ ನಿಮಿಷದಲ್ಲಿಯೇ ಕೀಚಕನನ್ನು ಸಂಹರಿಸಿಬಿಡುವ ಉದ್ವೇಗದಿಂದ ಹಲ್ಲುಗಳನ್ನು ಕಟ-ಕಟನೆ ಕಡಿದನು. ಹಣೆಯ ಮೇಲೆ ಬೆವರೂರಿತು. ಹುಬ್ಬುಗಳು ಗಂಟಿಕ್ಕಿದುವು. ಕಣ್ಣುಗಳು ಕೆಂಡದಂತೆ ಕೆಂಪಾದುವು ಮತ್ತು ಕಪ್ಪಾದ ಬಿಸಿ-ಬಿಸಿಯಾದ ಧೂಮವು ಕಣ್ಣುಗಳಿಂದ ಹೊರಹೊರಟಿತು. ದೃಷ್ಟಿಪಟಲದಿಂದ ಅರಮನೆಯನ್ನೇ ಭಸ್ಮಮಾಡಿಬಿಡುವನೋ ಎಂಬಂತೆ ಕುಪಿತನಾದ ಭೀಮನು ನೆಲದ ಮೇಲೆ ಬಿದ್ದಿದ್ದ ಕೀಚಕನನ್ನು ದುರ- ದುರನೆ ನೋಡುತ್ತಿದ್ದನು. ಹಣೆಯ ಮೇಲಿದ್ದ ಬೆವರನ್ನೊರೆಸಿಕೊಂಡು ಒಡನೆಯೇ ಮೇಲೆದ್ದು ಕೀಚಕನ ಸಂಹಾರಕ್ಕೆ ಹೋಗುವುದರಲ್ಲಿದ್ದನು. ಯುಧಿಷ್ಠಿರನಿಗೂ ಕೋಪವು ಬಾರದಿರಲಿಲ್ಲ. ಆದರೆ ಆ ಸಮಯದಲ್ಲಿ ತಾಳ್ಮೆಯಿಂದಿರುವುದು ಅತಿಮುಖ್ಯವಾಗಿತ್ತು. ವಿವೇಚನೆಯಿಲ್ಲದೇ ಮಾಡುವ ಯಾವುದೊಂದು ಕಾರ್ಯವೂ ಅನರ್ಥಕ್ಕೆ ಕಾರಣವಾಗುತ್ತಿದ್ದಿತು. ಭೀಮನು ಏಳುವುದರಲ್ಲಿದ್ದಾಗ ಯುಧಿಷ್ಠಿರನು ತಮ್ಮ ಅಜ್ಞಾತವಾಸವು ಪ್ರಕಟವಾಗಿಬಿಡಬಹುದೆಂದು ಬೆದರಿ ತನ್ನ ಬಲಗೈಯಿನ ಹೆಬ್ಬೆಟ್ಟಿನಿಂದ ನೆಲದ ಮೇಲಿಟ್ಟಿದ್ದ ಭೀಮನ ಎಡಗೈಯಿನ ಹೆಬ್ಬೆಟ್ಟನ್ನು ಅಮುಕಿ ಕೋಪವನ್ನು ತಡೆಹಿಡಿಯಬೇಕೆನ್ನುವ ಸೂಚನೆಯಿತ್ತನು. ಮತ್ತೊಂದು ಕೈಯಿನ ಹೆಬ್ಬೆಟ್ಟನ್ನು ಉಜ್ಜಿ ದಿನಗಳು ಉಳಿದಿರುವ ಅಜ್ಞಾತವಾಸವನ್ನು ಸೂಚಿಸಿ, ಕೋಪವನ್ನು ನಿಗ್ರಹಿಸುವಂತೆ ಸೂಚನೆಯನ್ನಿತ್ತು ಭೀಮನನ್ನು ತಡೆದನು. ಮದಿಸಿದ ಆನೆಯಂತೆ ಉದ್ಧತನಾದ ಭೀಮಸೇನನು ಎದುರಿನಲ್ಲಿದ್ದ ಮಹಾವೃಕ್ಷವೊಂದನ್ನು ನೆಟ್ಟದೃಷ್ಟಿಯಿಂದ ನೋಡುತ್ತಿದ್ದಾಗ ಅವನ ಇಂಗಿತವು ಯಾರಿಗೂ ತಿಳಿಯಬಾರದೆಂದು ಧರ್ಮಜನು ಭೀಮನನ್ನು ಕುರಿತು ಹೇಳಿದನು :

“ಸೂದ! ನೀನು ನೆಟ್ಟದೃಷ್ಟಿಯಿಂದ ನೋಡುತ್ತಿರುವುದೇನು?

ಸೌದೆಗಾಗಿ ವೃಕ್ಷವನ್ನು ನೋಡುತ್ತಿರುವೆಯಾ? ನಿನಗೆ ಸೌದೆಯು ಬೇಕಾಗಿದ್ದರೆ ಹೊರಗೆ ಹೋಗಿ ವೃಕ್ಷಗಳನ್ನು ಕಡಿದುಹಾಕಿ ಸೌದೆಯನ್ನು ಸಂಗ್ರಹಿಸು."

(ಕೀಚಕನನ್ನು ಸಂಹರಿಸಲು ಇದು ಸಮಯವಲ್ಲವೆಂದೂ, ಸಮಯ ನೋಡಿ ಸಂಹರಿಸಬೇಕೆಂದೂ–ಯುಧಿಷ್ಠಿರನ ಆ ಮಾತು ಸೂಚಿಸುತ್ತಿತ್ತು.)

ಇತ್ತ ದ್ರೌಪದಿಯು ಅಳುತ್ತಳುತ್ತಾ ಸಭಾದ್ವಾರಕ್ಕೆ ಬಂದು ರಾಜನೊಡನೆ ದೀನರಂತೆ ಕುಳಿತಿದ್ದ ತನ್ನ ಗಂಡಂದಿರನ್ನು ನೋಡಿದಳು. ಆ ಸಮಯದಲ್ಲಿ ದ್ರೌಪದಿಗೂ ತಾನಾರೆಂಬುದನ್ನು ವ್ಯಕ್ತಪಡಿಸಿಕೊಳ್ಳುವ ಇಚ್ಛೆಯಿರಲಿಲ್ಲ. ಪ್ರತಿಜ್ಞಾತವಾದ ವರ್ಷವಿನ್ನೂ ಮುಗಿಯದಿರುವುದೇ ಅದಕ್ಕೆ ಕಾರಣವಾಗಿತ್ತು. ಆದರೂ ತನ್ನ ಕಣ್ಣುಗಳಿಂದಲೇ ಸರ್ವರನ್ನೂ ದಹಿಸಿಬಿಡಬೇಕೆನ್ನುವಷ್ಟು ಕೋಪವು ದ್ರೌಪದಿಯ ಮುಖದಲ್ಲಿ ಎದ್ದುಕಾಣುತ್ತಿದ್ದಿತು. ಗಡುಸಿನ ಧ್ವನಿಯಿಂದಲೇ ಸೈರಂಧ್ರಿಯು ಮತ್ಸ್ಯರಾಜನನ್ನು ಕುರಿತು ಹೇಳಿದಳು :

**ಯೇಷಾಂ ವೈರೀ ನ ಸ್ವಪಿತಿ ಷಷ್ಠೇಽಪಿ ವಿಷಯೇ ವಸನ್ ।**
**ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾವಧೀತ್ ॥**

"ಮಹಾರಾಜ! ನನ್ನ ಗಂಡಂದಿರ ಶತ್ರುಗಳು ಈ ದೇಶದಿಂದ ಐದು ದೇಶಗಳನ್ನು ದಾಟಿ ಆರನೆಯ ದೇಶದಲ್ಲಿ ವಾಸವಾಗಿರಬಹುದು. ಆದರೆ ಆ ದೂರದೇಶದಲ್ಲಿಯೂ ಅವರು ನಿರ್ಭಯರಾಗಿ ಮಲಗಲಾರರು. ನನ್ನ ಪತಿಗಳೊಡನೆ ವೈರವು ಮರಣಕ್ಕೆ ಹಾದಿಯೆಂಬುದೇ ಇದಕ್ಕೆ ಕಾರಣ, ಮಹಾರಾಜ! ಅಂತಹ ಶೂರಾಗ್ರೇಸರರ ಮಾನವತಿಯಾದ ಧರ್ಮಪತ್ನಿಯನ್ನಿಂದು ದುರುಳನಾದ ಈ ಸೂತಪುತ್ರನು ತಮ್ಮ ಸಮ್ಮುಖದಲ್ಲಿಯೇ ಕಾಲಿನಿಂದ ಪ್ರಹರಿಸಿರುವನು.

**ಯೇ ದದ್ಯುರ್ನ ಚ ಯಾಚೇಯುರ್ಬ್ರಹ್ಮಣ್ಯಾಃ ಸತ್ಯವಾದಿನಃ ।**
**ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾವಧೀತ್ ॥**

ಯಾರು ಯಾವಾಗಲೂ ದಾನಶೀಲರೋ, ಯಾರಿಗೆ ಯಾಚನೆಯೆಂಬುದೇ ತಿಳಿಯದೋ, ಯಾರು ಬ್ರಾಹ್ಮಣರ ಆರಾಧಕರೋ ಮತ್ತು

ಯಾರು ಸತ್ಯನಿಷ್ಠರೋ–ಅಂತಹವರ ಧರ್ಮಪತ್ನಿಯಾದ ಮಾನಿನಿಯಾದ ನನ್ನನ್ನು ಸೂತಪುತ್ರನು ತಮ್ಮ ಸಮ್ಮುಖದಲ್ಲಿಯೇ ಕಾಲಿನಿಂದ ಪ್ರಹರಿಸಿದನು. ಈ ದುಃಖವನ್ನು ನಾನು ಹೇಗೆತಾನೇ ಸಹಿಸಿಕೊಳ್ಳಲಿ?



**ಯೇಷಾಂ ದುನ್ದುಭಿನಿರ್ಘೋಷೋ ಜ್ಯಾಘೋಷಃ ಶ್ರೂಯತೇಽನಿಶಮ್।**
**ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾವಧೀತ್ ॥**

ಯಾವ ವೀರರ ರಣದುಂದುಭಿಗಳ ಘೋಷಣೆಯೂ ಮತ್ತು ಧನುಷ್ಟೇಂಕಾರವೂ ಸರ್ವದಾ ಕೇಳಿಬರುತ್ತಿರುವುದೋ–ಅಂತಹ ವೀರರ ಭಾರ್ಯೆ

ಯಾದ ಮತ್ತು ಮಾನಿನಿಯಾದ ನನ್ನನ್ನು ಈ ಸೂತಪುತ್ರನು ಕಾಲಿನಿಂದ ಒದ್ದುಬಿಟ್ಟನಲ್ಲ! ಅಯ್ಯೋ! ನನ್ನ ದುಃಖವನ್ನು ಯಾರೊಡನೆ ಹೇಳಿಕೊಳ್ಳಲಿ?

**ಯೇ ಚ ತೇಜಸ್ವಿನೋ ದಾನ್ತಾ ಬಲವನ್ತೋಽತಿಮಾನಿನಃ ।**
**ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾವಧೀತ್ ॥**

ಯಾರು ತೇಜಸ್ವಿಗಳೋ, ಜಿತೇಂದ್ರಿಯರೋ, ಬಲಿಷ್ಠರೋ ಮತ್ತು ಮಾನಿಷ್ಠರೋ–ಅಂತಹ ಪರಾಕ್ರಮಿಗಳ ಭಾರ್ಯೆಯಾದ ಮತ್ತು ಮಾನಿನಿಯಾದ ನನ್ನನ್ನು ಪರಮನೀಚನಾದ ಈ ಸೂತಪುತ್ರನು ಕಾಲಿನಿಂದ ಒದೆದುಬಿಟ್ಟನು.

**ಸರ್ವಲೋಕಮಿಮಂ ಹನ್ಯುರ್ಧರ್ಮಪಾಶಸಿತಾಸ್ತು ಯೇ ।**
**ತೇಷಾಂ ಮಾಂ ಮಾನಿನೀಂ ಭಾರ್ಯಾಂ ಸೂತಪುತ್ರಃ ಪದಾವಧೀತ್ ॥**

ನನಗೆ ಮಾಡಿದ ಅವಮಾನಕ್ಕಾಗಿ ಆ ನನ್ನ ಪತಿಗಳು ಈ ಪ್ರಪಂಚವನ್ನೇ ಧ್ವಂಸಗೊಳಿಸುತ್ತಿದ್ದರು. ಆದರೆ ಅವರಿಂದು ಧರ್ಮಪಾಶದಿಂದ ಬಂಧಿತರಾಗಿರುತ್ತಾರೆ. ಅಂತಹ ಧರ್ಮಭೀರುಗಳ ಧರ್ಮಪತ್ನಿಯಾದ ಮತ್ತು ಮಾನಿನಿಯಾದ ನನ್ನನ್ನು ಮದಾಂಧನಾದ ದುರುಳನಾದ ಈ ಕೀಚಕನು ಕಾಲಿನಿಂದ ಒದೆದುಬಿಟ್ಟನು.

**ಶರಣಂ ಯೇ ಪ್ರಪನ್ನಾನಾಂ ಭವನ್ತಿ ಶರಣಾರ್ಥಿನಾಮ್ ।**
**ಚರನ್ತಿ ಲೋಕೇ ಪ್ರಚ್ಛನ್ನಾಃ ಕ್ವ ನು ತೇಽದ್ಯ ಮಹಾರಥಾಃ ॥೨೭॥**

ಯಾರು ಶರಣಾರ್ಥಿಗಳಾದವರಿಗೆ ಆಶ್ರಯನೀಡುತ್ತಿದ್ದರೋ, ಯಾರು ಲೋಕದಲ್ಲಿ ಪ್ರಚ್ಛನ್ನರಾಗಿ ಸಂಚರಿಸುತ್ತಿದ್ದಾರೆಯೋ–ಅಂತಹ ಶರಣ್ಯರು ಇಂದು ಎಲ್ಲಿಗೆ ಹೋಗಿಬಿಟ್ಟಿದ್ದಾರೆ?

**ಕಥಂ ತೇ ಸೂತಪುತ್ರೇಣ ವಧ್ಯಮಾನಾಂ ಪ್ರಿಯಾಂ ಸತೀಮ್ ।**
**ಮರ್ಷಯನ್ತಿ ಯಥಾ ಕ್ಲೀಬಾ ಬಲವನ್ತೋಽಮಿತೌಜಸಃ ॥೨೮॥**

ದುರುಳನಾದ ಈ ಸೂತಪುತ್ರನು ಸರ್ವರ ಸಮಕ್ಷದಲ್ಲಿ ತಮ್ಮ ಪ್ರಿಯ

ಭಾರ್ಯೆಯಾದ ನನ್ನನ್ನು ಕಾಲಿನಿಂದ ಒದೆಯುತ್ತಿದ್ದರೂ ಕೂಡ ಬಲಿಷ್ಠರಾದ ಮತ್ತು ಮಹಾತೇಜಸ್ವಿಗಳಾದ ನನ್ನ ಪತಿಗಳು ನಪುಂಸಕರಂತೆ ನನಗಾಗುತ್ತಿರುವ ಈ ಅವಮಾನವನ್ನು ಸಹಿಸಿಕೊಂಡು ಹೇಗೆ ತಾನೇ ಇದ್ದಾರೆ?

**ಕ್ವ ನು ತೇಷಾಮಮರ್ಷಶ್ಚ ವೀರ್ಯಂ ತೇಜಶ್ಚ ವರ್ತತೇ ।**
**ನ ಪರೀಪ್ಸನ್ತಿ ಯೇ ಭಾರ್ಯಾಂ ವಧ್ಯಮಾನಾಂ ದುರಾತ್ಮನಾ ॥೨೯॥**

ಅವರ ಪೌರುಷವೆಲ್ಲಿ ಹೋಯಿತು? ಕೋಪವೆಲ್ಲಿ ಅಡಗಿ ಹೋಯಿತು? ಬಲವೆಲ್ಲಿ ಹೋಯಿತು? ಎಲ್ಲವೂ ಉಡುಗಿಹೋಯಿತೇ? ದುಷ್ಟನೊಬ್ಬನು ತಮ್ಮ ಧರ್ಮಪತ್ನಿಯನ್ನು ಅವಮಾನಗೊಳಿಸುತ್ತಿದ್ದರೂ ರಕ್ಷಣೆಗೆ ಬರುತ್ತಿಲ್ಲವಲ್ಲಾ!

**ಮಯಾತ್ರ ಶಕ್ಯಂ ಕಿಂ ಕರ್ತುಂ ವಿರಾಟೇ ಧರ್ಮದೂಷಕೇ ।**
**ಯಃ ಪಶ್ಯನ್ಮಾಂ ಮರ್ಷಯತಿ ವಧ್ಯಮಾನಾಮನಾಗಸಮ್ ॥೩೦॥**

ಈ ವಿರಾಟರಾಜನಾದರೋ ಧರ್ಮಹೀನನೆಂದೇ ತೋರುತ್ತದೆ. ಏಕೆಂದರೆ : ಇವನು ಧರ್ಮಿಷ್ಠನಾಗಿದ್ದರೆ ತನ್ನ ಆಶ್ರಯವನ್ನು ಪಡೆದು ಅರಮನೆಯಲ್ಲಿರುವ ನನ್ನನ್ನು ಈ ವಿಧವಾದ ಅವಮಾನಕ್ಕೀಡುಮಾಡುತ್ತಿರಲಿಲ್ಲ. ನಿರಪರಾಧಿನಿಯಾದ ನನ್ನನ್ನು ದುರುಳನಾದ ಕೀಚಕನು ಕಾಲಿನಿಂದ ಒದೆಯುತ್ತಿದ್ದರೂ ವಿಷಯವೇನೆಂಬುದನ್ನೂ ವಿಚಾರಿಸದೇ–ದುಷ್ಟರಿಗೆ ಶಿಕ್ಷೆಯನ್ನೂ ಕೊಡದೇ–ಸುಮ್ಮನೇ ಕುಳಿತಿದ್ದಾನೆ. ಇಂತಹ ಸಂದರ್ಭದಲ್ಲಿ ಅಬಲೆಯಾದ ನಾನೇನು ಮಾಡಬಲ್ಲೆನು?

**ನ ರಾಜಾ ರಾಜವತ್ಕಿಂಚಿತ್ಸಮಾಚರತಿ ಕೀಚಕೇ ।**
**ದಸ್ಯೂನಾಮಿವ ಧರ್ಮಸ್ತೇ ನ ಹಿ ಸಂಸದಿ ಶೋಭತೇ ॥೩೧॥**

ವಿರಾಟಮಹಾರಾಜನು ಈ ದುಷ್ಟಕೀಚಕನ ವಿಷಯದಲ್ಲಿ ರಾಜನಾದವನು ವರ್ತಿಸಬೇಕಾದಂತೆ ವರ್ತಿಸುತ್ತಿಲ್ಲ. (ರಾಜಧರ್ಮದಿಂದ ವರ್ತಿಸುತ್ತಿಲ್ಲ.) ಮಹಾರಾಜ! ದಸ್ಯುಗಳು ಮತ್ತು ಕಳ್ಳರು ಅನುಸರಿಸುವ ಧರ್ಮವನ್ನೇ ನೀನೂ ಅನುಸರಿಸುತ್ತಿರುವೆ. ನೀನು ಹೀಗೆ ವರ್ತಿಸುವುದು ಈ ರಾಜಸಭೆಗೆ ಸರ್ವಥಾ ಶೋಭಾಯಮಾನವಾಗಿ ಕಾಣುತ್ತಿಲ್ಲ.

**ನಾಹಮೇತೇನ ಯುಕ್ತಂ ವೈ ಹನ್ತುಂ ಮತ್ಸ್ಯ ತವಾನ್ತಿಕೇ ।**
**ಸಭಾಸದೋಽತ್ರ ಪಶ್ಯನ್ತು ಕೀಚಕಸ್ಯ ವ್ಯತಿಕ್ರಮಮ್ ॥೩೨॥**

ಅಬಲೆಯಾದ, ನಿನ್ನ ಆಶ್ರಯದಲ್ಲಿಯೇ ಇರುವ ನಾನು ಯಾವ ವಿಧವಾದ ಅಪರಾಧವನ್ನೂ ಎಸಗದೇ ನಿನ್ನ ಸಮ್ಮುಖದಲ್ಲೇ ಈ ಕೀಚಕನಿಂದ ಹೀಗೆ ಅವಮಾನಿತಳಾಗುವುದು ನಿನಗೇ ಕಳಂಕವಲ್ಲವೇ? ಇದು ನಿಶ್ಚಯವಾಗಿಯೂ ಯೋಗ್ಯವಲ್ಲ."

ವಿರಾಟನನ್ನು ಮೂದಲಿಸಿದನಂತರ ಸೈರಂಧ್ರಿಯು ಸಭ್ಯರನ್ನು ಕುರಿತು ಹೇಳುತ್ತಾಳೆ :

"ಸಭ್ಯರೇ! ಈ ದುಷ್ಟಕೀಚಕನು ನಿರಪರಾಧಿನಿಯಾದ ನನ್ನ ಮೇಲೆ ಕೈಮಾಡುತ್ತಿರುವುದನ್ನು ನೀವಾದರೂ ನೋಡಿ ಖಂಡಿಸಿರಿ."

ಸಭ್ಯರಲ್ಲಿ ಯಾರೊಬ್ಬರೂ ಕೀಚಕನ ಭಯದಿಂದಾಗಿ ಯಾವುದೊಂದು ಮಾತನ್ನೂ ಆಡಲಿಲ್ಲ.

ಕುಪಿತಳಾದ ಸೈರಂಧ್ರಿಯು ರಾಜಸಭೆಯಲ್ಲಿ ಉದ್ಘೋಷಿಸಿದಳು :

**ಕೀಚಕೋ ನ ಚ ಧರ್ಮಜ್ಞೋ ನ ಚ ಮತ್ಸ್ಯಃ ಕಥಂಚನ ।**
**ಸಭಾಸದ್ಯೋಽಪ್ಯಧರ್ಮಜ್ಞಾ ಯ ಏನಂ ಪರ್ಯುಪಾಸತೇ ॥೩೩॥**

"ಕೀಚಕನೂ ಧರ್ಮಜ್ಞನಲ್ಲ. ಮತ್ಸ್ಯರಾಜನಿಗೆ ರಾಜಧರ್ಮವೆಂದರೇನೆಂಬುದೇ ತಿಳಿಯದು. ಇನ್ನು ಇವನನ್ನು ಸುತ್ತುವರಿದು ಕುಳಿತಿರುವ ಸಭಾಸದರ ವಿಷಯವನ್ನಂತೂ ಹೇಳಬೇಕಾಗಿಯೇ ಇಲ್ಲ. ಈ ಮತ್ಸ್ಯರಾಜನ ಸೇವೆಯಲ್ಲಿಯೇ ನಿರತರಾದ ಸಭಾಸದರೂ ಕೂಡ ಧರ್ಮವನ್ನು ತಿಳಿಯದವರೇ ಆಗಿದ್ದಾರೆ."

ಜನಮೇಜಯ! ಕುಪಿತಳಾಗಿದ್ದ ಮತ್ತು ಬಹುದುಃಖಿತೆಯಾಗಿ ಕಂಬನಿಗರೆಯುತ್ತಿದ್ದ ದ್ರೌಪದಿಯು ಇವೇ ಮುಂತಾದ ನಿಷ್ಠುರೋಕ್ತಿಗಳಿಂದ ಮತ್ಸ್ಯರಾಜನನ್ನೂ, ಸಭಾಸದರನ್ನೂ ಮೂದಲಿಸಿದಳು. ಮೂಕನಂತೆಯೇ ಕುಳಿತಿದ್ದ ವಿರಾಟನು ಕಟ್ಟಕಡೆಗೆ ದ್ರೌಪದಿಯನ್ನು ಕುರಿತು ಹೇಳಿದನು :

"ನಿಮ್ಮಿಬ್ಬರ ವ್ಯವಹಾರವೇನೆಂಬುದು ನನಗೇನೂ ತಿಳಿಯದು. ನನ್ನ

ಪರೋಕ್ಷದಲ್ಲಿ ಏನು ನಡೆಯಿತೆಂಬುದನ್ನು ತಿಳಿದುಕೊಳ್ಳದೇ ನಾನು ನ್ಯಾಯದ ತೀರ್ಮಾನವನ್ನು ಮಾಡುವುದಾದರೂ ಹೇಗೆ ಸಾಧ್ಯವಾದೀತು?"

ದ್ರೌಪದಿಯಿಂದ ಎಲ್ಲ ವಿಷಯಗಳನ್ನೂ ತಿಳಿದ ಸಭಾಸದರು ತನ್ನ ಪಾತಿವ್ರತ್ಯವನ್ನು ದಿಟ್ಟತನದಿಂದ ಉಳಿಸಿಕೊಂಡುದಕ್ಕಾಗಿ ದ್ರೌಪದಿಯನ್ನು ಶ್ಲಾಘಿಸಿದರಲ್ಲದೇ ಕೀಚಕನು ಮಾಡಿದ ಅಕಾರ್ಯಕ್ಕಾಗಿ ಅವನನ್ನು ನಿಂದಿಸಿದರು. ಉತ್ತಮಸ್ತ್ರೀಯರ ಶುಭಲಕ್ಷಣಗಳನ್ನು ತಿಳಿದಿದ್ದ ಸಭಾಸದರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಂಡರು :

"ಕಪ್ಪಾದ ನೇತ್ರಪಟಲಗಳಿಂದ ಕೂಡಿರುವ ಸರ್ವಾಂಗಸುಂದರಿಯಾದ ಈ ನಾರೀಮಣಿಯು ಯಾರ ಭಾರ್ಯೆಯಾಗಿರುವಳೋ–ಅಂತಹವರಿಗೆ ಸದಾ ಲಾಭವೇ ಉಂಟಾಗುತ್ತಿರುತ್ತದೆ. ಅವರೆಂದಿಗೂ ದುಃಖಕ್ಕೆ ಭಾಗಿಯಾಗಲಾರರು. ಇಂತಹ ರೂಪ-ಲಾವಣ್ಯಗಳುಳ್ಳ, ಸರ್ವಾಂಗಸುಂದರಿಯಾದ, ಸಕಲವಿಧವಾದ ಶುಭಲಕ್ಷಣಗಳಿಂದಲೂ ಕೂಡಿರುವ ಸ್ತ್ರೀಯು ಮನುಷ್ಯರಲ್ಲಿಯೇ ಅತಿವಿರಳ. ಇವಳೇನಾದರೂ ದೇವತೆಯೇ ಆಗಿರಬಹುದೇ?"–ಎಂಬುದಾಗಿಯೂ ಪೌರರು ಭಾವಿಸಿದರು.

ಜನಮೇಜಯ! ಸಭಾಸದರು ಹೀಗೆ ಪರಸ್ಪರವಾಗಿ ಮಾತಾಡಿಕೊಳ್ಳುತ್ತಾ ದ್ರೌಪದಿಯನ್ನು ಪ್ರಶಂಸಿಸುತ್ತಿದ್ದಾಗ ಕೋಪದ ಕಾರಣದಿಂದಾಗಿ ಯುಧಿಷ್ಠಿರನ ಹಣೆಯಲ್ಲಿ ಬೆವರೂರಿತು. ತಲೆಗೆದರಿಕೊಂಡು ಕೀಚಕನು ಕಾಲಿನಿಂದ ಪ್ರಹರಿಸಿದ ಅವಸ್ಥೆಯಲ್ಲಿಯೇ ನಿಂತಿದ್ದ ದ್ರೌಪದಿಯನ್ನು ಕುರಿತು ಯುಧಿಷ್ಠಿರನು ಹೇಳಿದನು :

"ಸೈರಂಧ್ರಿ! ನೀನಿಲ್ಲಿ ನಿಂತಿರುವುದು ಸರ್ವಥಾ ಯೋಗ್ಯವಲ್ಲ. ಈಗಲೇ ನೀನು ಸುದೇಷ್ಣೆಯ ಅಂತಃಪುರಕ್ಕೆ ಹೊರಟುಹೋಗು.

**ಭರ್ತಾರಮನುರುನ್ಧನ್ತ್ಯಃ ಕ್ಲಿಶ್ಯನ್ತೇ ವೀರಪತ್ನಯಃ ।**
**ಶುಶ್ರೂಷಯಾ ಕ್ಲಿಶ್ಯಮಾನಾಃ ಪತಿಲೋಕಂ ಜಯನ್ತ್ಯುತ ॥೪೧॥**

ಪತಿಯನ್ನೇ ಅನುಸರಿಸಿ ನಡೆಯುವ ಪತಿಪರಾಯಣೆಯರಾದ ವೀರಪತ್ನಿಯರು ತಮ್ಮ ಪತಿಗಳ ಸಲುವಾಗಿ ಅನೇಕವಿಧವಾದ ಕಷ್ಟ-ಕಾರ್ಪಣ್ಯ

ಗಳನ್ನು ಅನುಭವಿಸುತ್ತಾರೆ. ಪತಿಗಳ ಶುಶ್ರೂಷೆಮಾಡುವಾಗ ತಮ್ಮ ಶರೀರಸೌಖ್ಯವನ್ನೂ ಬದಿಗೊತ್ತಿ ಪತಿಗಳನ್ನು ಸೇವೆಮಾಡುವುದೇ ಪತಿವ್ರತಾ ಸ್ತ್ರೀಯರ ಸಹಜಗುಣವಾಗಿದೆ. ಇದರಿಂದಾಗಿ ಅವರು ಪತಿಯು ಪಡೆಯುವ ಉತ್ತಮಲೋಕಗಳನ್ನೇ ಪಡೆಯುತ್ತಾರೆ.

ಸೂರ್ಯಸಮಾನವರ್ಚಸ್ಕರಾದ ನಿನ್ನ ಪತಿಗಳಾದ ಗಂಧರ್ವರು ಕೋಪಿಸಿಕೊಳ್ಳುವುದಕ್ಕೆ ಅಥವಾ ಕೋಪೋದ್ರಿಕ್ತರಾಗಿ ನಿನಗೆ ಅವಮಾನ ಮಾಡಿದವರ ಮೇಲೆ ಸೇಡುತೀರಿಸಿಕೊಳ್ಳುವುದಕ್ಕೆ ಇದು ಸಕಾಲವಲ್ಲವೆಂಬ ಭಾವನೆಯಿಂದ ಸುಮ್ಮನಿರುವರೆಂದು ನಾನು ಭಾವಿಸುತ್ತೇನೆ. (ಹಾಗಿಲ್ಲದಿದ್ದರೆ ಅವರು ನಿನ್ನ ಬಳಿಗೆ ಈ ವೇಳೆಗಾಗಲೇ ಬಂದುಬಿಡುತ್ತಿದ್ದರು. ಅವರು ಬಾರದಮಾತ್ರಕ್ಕೆ ಔದಾಸೀನ್ಯದಿಂದಿದ್ದಾರೆಂದು ಭಾವಿಸುವ ಕಾರಣವಿಲ್ಲ.) ಸಮಯದಲ್ಲಿ ನಿನ್ನ ರಕ್ಷಣೆಗೆ ಅವರು ಬಂದೇ ಬರುತ್ತಾರೆ. ಸೈರಂಧ್ರಿ! ನಿನಗೆ ಕಾಲದ ಪರಿಜ್ಞಾನವೇ ಇಲ್ಲವೆಂದು ತೋರುತ್ತದೆ. ಆದುದರಿಂದಲೇ ನೀನೀಗ ನಟಿಯಂತೆ ರೋದನಮಾಡುತ್ತಿರುವೆ. (ನಾಟಕದಲ್ಲಿ ನಟಿಯು ರೋದನ ಮಾಡಿದರೆ ಎಷ್ಟು ಪ್ರಯೋಜನವಾಗುತ್ತದೆಯೋ ನೀನೀಗ ರೋದನ ಮಾಡುತ್ತಿರುವುದಕ್ಕೂ ಅಷ್ಟೇ ಪ್ರಯೋಜನ.) ಸುಮ್ಮನೆ ಗಲಾಟೆ ಮಾಡು ತ್ತಿರುವೆ. ಮತ್ಸ್ಯಾಧಿಪತಿಯ ಪಗಡೆಯಾಟಕ್ಕೆ ವೃಥಾ ಅಡ್ಡಿಯನ್ನುಂಟು ಮಾಡುತ್ತಿರುವೆ. ಇದರಿಂದಾವ ಪ್ರಯೋಜನವೂ ಆಗದು. ನಿನ್ನ ಪಾಡಿಗೆ ನೀನು ಹೊರಟುಹೋಗು. ನಿನ್ನ ಪತಿಗಳಾದ ಗಂಧರ್ವರು ನಿನಗೆ ಪ್ರಿಯವಾಗುವ ಕಾರ್ಯವನ್ನೇ ಮಾಡುತ್ತಾರೆ. ನಿನ್ನ ದುಃಖವನ್ನು ದೂರಮಾಡುತ್ತಾರೆ. ಯಾವನು ನಿನಗೆ ಅಪರಾಧವನ್ನೆಸಗಿರುವನೋ ಅವನನ್ನು ಖಂಡಿತವಾಗಿಯೂ ಉಳಿಸಲಾರರು, ಸೈರಂಧ್ರಿ!"

ಯುಧಿಷ್ಠಿರನ ಆ ಮಾತಿಗೆ ಉತ್ತರವಾಗಿ ದ್ರೌಪದಿಯು ಹೇಳಿದಳು :

"ಪರಮದಯಾಳುಗಳಾದ ಆ ಗಂಧರ್ವರ ಅಭ್ಯುದಯಕ್ಕಾಗಿಯೇ ನಾನು ಅತ್ಯಂತಧರ್ಮಪರಾಯಣೆಯಾಗಿದ್ದೇನೆ. ಆ ಗಂಧರ್ವರಲ್ಲಿ ಜ್ಯೇಷ್ಠನು ಯಾವಾಗಲೂ ಪಗಡೆಯಾಟದಲ್ಲೇ ತಲ್ಲೀನನಾಗಿರುತ್ತಾನೆ. ನಿಶ್ಚಯ ವಾಗಿಯೂ ಆ ನನ್ನ ಗಂಧರ್ವಪತಿಗಳೇ ಈ ದುಷ್ಟನ ಸಂಹಾರಕರಾಗುತ್ತಾರೆ."

ಜನಮೇಜಯ! ಹೀಗೆಂಬುದಾಗಿ ಹೇಳಿ ಸುಶ್ರೋಣಿಯಾದ ದ್ರೌಪದಿಯು ತಲೆಯನ್ನು ಕೆದರಿಕೊಂಡು ಸುದೇಷ್ಣೆಯ ಅಂತಃಪುರಕ್ಕೆ ಓಡಿದಳು. ಆ ಸಮಯದಲ್ಲಿ ಅವಳ ಕಣ್ಣುಗಳು ಕೋಪದಿಂದ ಕೆಂಪಾಗಿದ್ದುವು. ಬಹಳ ಹೊತ್ತು ಅತ್ತಿದ್ದರಿಂದ ಅವಳ ಮುಖವು ಬಾಡಿದ್ದರೂ ಅಂತರಿಕ್ಷದಲ್ಲಿ ಮೋಡದಿಂದ ಹೊರಬಂದ ಚಂದ್ರಬಿಂಬದಂತೆ ಸ್ವಚ್ಛವಾಗಿದ್ದಿತು. ಅವಳ ಆ ದುರವಸ್ಥೆಯನ್ನು ಕಂಡು ರಾಣಿ ಸುದೇಷ್ಣೆಯು ಏನೂ ತಿಳಿಯದವಳಂತೆ ದ್ರೌಪದಿಯನ್ನು ಪ್ರಶ್ನಿಸಿದಳು :

"ವರಾರೋಹೇ! ನೀನೇಕೆ ಅಳುತ್ತಿರುವೆ? ನಿನಗಪರಾಧವನ್ನೆಸಗಿದವರು ಯಾರು? ಯಾರಿಂದ ನಿನಗೆ ಈ ದುಃಖವು ಪ್ರಾಪ್ತವಾಯಿತು? ಯಾರಿಗೆ ಶಿಕ್ಷೆಯಾಗಬೇಕಾಗಿದೆ?–ಎಲ್ಲವನ್ನೂ ವಿಶದವಾಗಿ ಹೇಳು, ಸೈರಂಧ್ರಿ!"

ದ್ರೌಪದಿಯು ದುಃಖವನ್ನು ತಡೆಯಲಾರದೇ ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳಿದಳು :

"ನಾನು ಕೀಚಕನ ಮನೆಗೆ ಹೋಗುವುದಿಲ್ಲವೆಂದು ಹೇಳಿದರೂ ನೀನು ನನ್ನನ್ನೇ ಸುರೆಯನ್ನು ತರಲು ಕಳುಹಿಸಿದೆ. ನಾನೂ ನಿನ್ನ ಆಜ್ಞೆಯನ್ನು ಮೀರಲಾರದೇ ಕೀಚಕನ ಮನೆಗೆ ಸುರೆಯನ್ನು ತರಲು ಪಾತ್ರೆಯೊಡನೆ ಹೋದೆನು. ಆದರೆ ಆ ನೀಚನು ಸುರೆಯನ್ನು ಕೊಡುವ ಬದಲು ನನ್ನ ಸೆರಗನ್ನು ಹಿಡಿದೆಳೆದನು. ಅವನಿಂದ ಕಷ್ಟಪಟ್ಟು ತಪ್ಪಿಸಿಕೊಂಡು ರಕ್ಷಣೆಗಾಗಿ ರಾಜಸಭೆಗೆ ಓಡಿದೆನು. ಅಲ್ಲಿಗೂ ಆ ನೀಚನು ಅಟ್ಟಿಸಿಕೊಂಡೇ ಬಂದು ಸರ್ವರ ಸಮ್ಮುಖದಲ್ಲಿ ನನ್ನನ್ನು ಕಾಲುಗಳಿಂದ ಥಳಿಸಿದನು. ಮತ್ಸ್ಯದೇಶಕ್ಕೆ ಅಧಿಪತಿಯಾದ ರಾಜನು ಕುಳಿತಿದ್ದರೂ–ನಿರ್ಜನವಾದ ಕಾಡಿನಲ್ಲಿ ಏಕಾಕಿನಿಯಾಗಿ ಸಿಕ್ಕುವ ಅಬಲೆಯೊಬ್ಬಳನ್ನು ನಿರ್ಭಯವಾಗಿ ಥಳಿಸುವಂತೆ–ರಾಜನಿರುವನೆಂಬ ಭಯವೇ ಇಲ್ಲದೇ ಆ ದುಷ್ಟನು ನಿರಪರಾಧಿನಿಯಾದ ನನ್ನನ್ನು ಕಾಲಿನಿಂದ ಒದೆದನು."

ದ್ರೌಪದಿಯ ಮಾತುಗಳನ್ನು ಕೇಳಿ ಸುದೇಷ್ಣೆಯು ತೋರಿಕೆಯ ಕೋಪವನ್ನು ತಾಳಿ ದ್ರೌಪದಿಯನ್ನು ಸಂತೈಸುತ್ತಾ ಹೇಳಿದಳು :

"ಸುಮನೋಹರವಾದ ಮುಂಗುರುಳುಳ್ಳವಳೇ! ಕಾಮಮತ್ತನಾದ

ಕೀಚಕನು ಅಲಭ್ಯಳಾದ ನಿನ್ನನ್ನು ಈ ಪರಿಯಾಗಿ ಅವಮಾನಿಸಿದನಲ್ಲವೇ? ನೀನಿಚ್ಛಿಸುವುದಾದರೆ ಅವನಿಗೀಗಲೇ ಪ್ರಾಣಾಂತಿಕವಾದ ಶಿಕ್ಷೆಯನ್ನು ವಿಧಿಸುತ್ತೇನೆ."

"ಮಹಾರಾಣಿ! ನೀನು ಶಿಕ್ಷೆಯನ್ನು ವಿಧಿಸಿದರೂ ಅಥವಾ ವಿಧಿಸದಿದ್ದರೂ ಅವನ ಪ್ರಾಣಗಳು ಹೆಚ್ಚುಕಾಲ ಉಳಿಯಲಾರವು. ಅವನು ರಾಜಸಭೆಯಲ್ಲಿ ಮಾಡಿದ ಅವಮಾನವು ನನಗೊಬ್ಬಳಿಗೇ ಅಲ್ಲ. ಮಹಾವೀರರಾದ ನನ್ನ ಐವರು ಪತಿಗಳಿಗೂ ಅವಮಾನವನ್ನೆಸಗಿದಂತಾಗಿದೆ. ತಮ್ಮ ಪ್ರಿಯಭಾರ್ಯೆಗಾದ ಅವಮಾನವನ್ನು ಅವರು ಖಂಡಿತವಾಗಿಯೂ ಸಹಿಸಲಾರರು. ಇಂದಿನ ರಾತ್ರಿಯೇ ಕೀಚಕನು ಯಮಲೋಕಕ್ಕೆ ಹೋಗುವುದರಲ್ಲಿ ನನಗಾವ ಸಂಶಯವೂ ಕಾಣುತ್ತಿಲ್ಲ."

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ಕೀಚಕವಧಪರ್ವ (ಮುಂದುವರಿದಿದೆ.)

## ದ್ರೌಪದಿಯು ಕಾರ್ಯಸಿದ್ಧಿಗಾಗಿ ಭೀಮಸೇನನ ಬಳಿಗೆ ಹೋದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಯದ್ಯಪಿ ಸುದೇಷ್ಣೆಯು ಕುಪಿತಳಾದವಳಂತೆ ನಟಿಸಿ ಕೀಚಕನನ್ನು ಶಿಕ್ಷಿಸುವುದಾಗಿ ಹೇಳಿದರೂ ಕೀಚಕನನ್ನು ಶಿಕ್ಷಿಸಲು ರಾಜನೂ ಸಹ ಸಮರ್ಥನಲ್ಲವೆಂಬುದನ್ನು ದ್ರೌಪದಿಯು ಚೆನ್ನಾಗಿ ತಿಳಿದಿದ್ದಳು. ಆದರೆ ಕೀಚಕನ ಅಂತ್ಯವಾಗುವವರೆಗೂ ದ್ರೌಪದಿಗೆ ಮನಶ್ಶಾಂತಿಯಿರಲಿಲ್ಲ. ಕೀಚಕನ ಒದೆತವನ್ನು ಪದೇ-ಪದೇ ನೆನೆಯುತ್ತಿದ್ದಳು. ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದಳು. ಕಣ್ಣುಗಳಿಂದ ಕಾದ ಕಂಬನಿಗಳು ತೊಟ್ಟಿಕ್ಕುತ್ತಿದ್ದುವು. ಸೇನಾಪತಿಯ ಸಂಹಾರವನ್ನು ಹೇಗೆ ಸಾಧಿಸಬೇಕೆಂಬುದೇ ಅವಳ ನಿರಂತರವಾದ ಯೋಚನೆಯಾಗಿದ್ದಿತು. ಸುದೇಷ್ಣೆಯ ಅನುಮತಿಯನ್ನು ಪಡೆದು ತನ್ನ ನಿವಾಸಕ್ಕೆ ಹೋಗಿ ಶೌಚ-ಮುಖ ಮಾರ್ಜನಾದಿಗಳನ್ನು ಮುಗಿಸಿ, ಬಟ್ಟೆಗಳನ್ನೊಗೆದು ಮೈತೊಳೆದುಕೊಂಡು

ಮಡಿಯುಟ್ಟು, ಇಷ್ಟದೇವತೆಯನ್ನು ಕ್ಷಣಕಾಲ ಧ್ಯಾನಿಸಿದಳು. ಅವಳ ಮನಸ್ಸಿನಲ್ಲಿದ್ದ ದುಗುಡದಲ್ಲಿ ಏಕಾಗ್ರತೆಯು ಸಾಧ್ಯವೇ? ಪುನಃ ಅದೇ ಯೋಚನೆ. "ದುರುಳ ಕೀಚಕನ ಜೀವನವನ್ನು ಅಂತ್ಯಗೊಳಿಸುವುದೆಂತು? ನನ್ನ ಮನಸ್ಸಿಗೆ ಶಾಂತಿಯನ್ನು ಪಡೆಯುವುದೆಂತು? ಕಾರ್ಯಸಾಧನೆಗಾಗಿ ಏನು ಮಾಡಲಿ? ಎಲ್ಲಿಗೆ ಹೋಗಲಿ? ನನ್ನ ಕಾರ್ಯವು ಹೇಗೆ ಸಾಧಿತವಾಗುತ್ತದೆ?" ಹೀಗೆಂದು ನಿರಂತರವಾಗಿ ಯೋಚಿಸುತ್ತಿದ್ದಾಗ ದ್ರೌಪದಿಗೆ ಭೀಮನ ಸ್ಮರಣೆಯುಂಟಾಯಿತು.

**ನಾನ್ಯಃ ಕರ್ತಾ ಋತೇ ಭೀಮಾನ್ಮಮಾದ್ಯ ಮನಸಃ ಪ್ರಿಯಮ್ ॥**

"ಈ ಸಮಯದಲ್ಲಿ ಭೀಮನನ್ನು ಬಿಟ್ಟು ಬೇರೆ ಯಾರೂ ನನ್ನ ಮನಸ್ಸಿನ ಆಶಯವನ್ನು ಪೂರೈಸಿಕೊಡಲಾರರು"–ಎಂಬುದಾಗಿ ನಿಶ್ಚಯಿಸಿ, ರಾತ್ರಿಯವರೆಗೂ ಕಾದಿದ್ದು, ರಾತ್ರಿಯಾಗುತ್ತಲೇ ಹಾಸಿಗೆಯನ್ನು ಬಿಟ್ಟು ಮೇಲೆದ್ದು ಐವರು ರಕ್ಷಕರುಳ್ಳ, ವಿಶಾಲನೇತ್ರೆಯಾದ ದ್ರೌಪದಿಯು ತನ್ನ ನಾಥನನ್ನು (ರಕ್ಷಕನನ್ನು) ಇಚ್ಛಿಸುವವಳಾಗಿ ಭೀಮಸೇನನ ನಿವಾಸಸ್ಥಾನಕ್ಕೆ ಹೋಗಿ, ಅಲ್ಲಿ ನಿದ್ರಿಸುತ್ತಿದ್ದ ಭೀಮಸೇನನನ್ನು ಎಬ್ಬಿಸಿ ಹೇಳಿದಳು :

**ತಸ್ಮಿಞ್ಜೀವತಿ ಪಾಪಿಷ್ಠೇ ಸೇನಾವಾಹೇ ಮಮ ದ್ವಿಷಿ ।**
**ತತ್ಕರ್ಮ ಕೃತವಾನದ್ಯ ಕಥಂ ನಿದ್ರಾಂ ನಿಷೇವಸೇ ॥೭॥**

"ಆರ್ಯಪುತ್ರ! ನನ್ನ ಪರಮಶತ್ರುವಾದ, ಸೇನಾಪತಿಯಾದ, ಪರಮಪಾಪಿಯಾದ ಕೀಚಕನು ನನ್ನನ್ನು ಅವಮಾನಗೊಳಿಸುವ ಕಾರ್ಯ ಮಾಡಿಯೂ ಜೀವಿಸುತ್ತಿರಲಾಗಿ ನೀನು ಹೇಗೆ ತಾನೇ ನಿರ್ಯೋಚನೆಯಿಂದ ನಿದ್ರೆಗೆ ಅಧೀನನಾಗಿರುವೆ? ಇಂದಿನ ನನ್ನ ದುರವಸ್ಥೆಯನ್ನು ಪ್ರತ್ಯಕ್ಷವಾಗಿ ನೋಡಿಯೂ ನಿನಗೆ ನಿದ್ರೆಯು ಹೇಗೆ ತಾನೇ ಹತ್ತಿತು?"

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ದ್ರೌಪದಿಯು ಭೀಮನೆಡೆಗೆ ಆಗಮಿಸಿದ ಸಮಯ ದಲ್ಲಿ ಅವನು ಮೃಗರಾಜನಾದ ಸಿಂಹದಂತೆ ಸುದೀರ್ಘವಾಗಿ ಗೊರಕೆಹೊಡೆ ಯುತ್ತಾ ನಿಶ್ಚಿಂತನಾಗಿ ಮಲಗಿದ್ದನು. ದ್ರೌಪದಿಯ ರೂಪ-ಲಾವಣ್ಯ

ಗಳಿಂದಾಗಿ ಭೀಮನು ಮಲಗಿದ್ದ ಪಾಕಶಾಲೆಯೇ ಕಾಂತಿಯುಕ್ತವಾಯಿತು. ಮೂರು ವರ್ಷ ಪ್ರಾಯದ ಹಸುವೊಂದು ಅಲೆಬಂದಾಗ ಹೋರಿಯನ್ನು ಅನುಸರಿಸಿ ಹೋಗುವಂತೆಯೂ, ನೀರಿನಲ್ಲಿರುವ ಹೆಣ್ಣುಕೊಕ್ಕರೆಯು ಗಂಡು ಕೊಕ್ಕರೆಯನ್ನು ಹುಡುಕಿಕೊಂಡು ಹೋಗುವಂತೆಯೂ–ಶುಚಿಸ್ಮಿತೆಯಾದ ದ್ರೌಪದಿಯು ಭೀಮನನ್ನರಸಿ ಬಂದಿದ್ದಳು. ಗೋಮತೀನದೀತೀರದಲ್ಲಿರುವ ದೊಡ್ಡದಾದ ಶಾಲವೃಕ್ಷವೊಂದನ್ನು ಸಮೀಪದಲ್ಲಿಯೇ ಬೆಳೆದ ಬಳ್ಳಿಯೊಂದು ಸುತ್ತಿಕೊಳ್ಳುವಂತೆ–ನಿದ್ರಾಪರವಶನಾಗಿ ಮಲಗಿದ್ದ ಪಾಂಡವಮಧ್ಯಮನಾದ ಭೀಮಸೇನನನ್ನು ದ್ರೌಪದಿಯು ತನ್ನ ಬಾಹುಲತೆಗಳಿಂದ ಬಾಚಿ ತಬ್ಬಿ ಕೊಂಡಳು. ದುರ್ಗಮವಾದ ಅರಣ್ಯದ ಗುಹೆಯೊಂದರಲ್ಲಿ ಮಲಗಿರುವ ಗಂಡುಸಿಂಹವನ್ನು ಹೆಣ್ಣುಸಿಂಹವು ಎಚ್ಚರಿಸುವಂತೆ–ದ್ರೌಪದಿಯು ಭೀಮ ಸೇನನನ್ನು ತನ್ನ ಬಾಹುಪಾಶದಲ್ಲಿ ಬಿಗಿದು ಎಚ್ಚರಿಸಲು ಪ್ರಯತ್ನಿಸಿದಳು. ಮದಿಸಿದ ಗಂಡಾನೆಯನ್ನು ಹೆಣ್ಣಾನೆಯು ತಬ್ಬಿಕೊಳ್ಳುವಂತೆ– ಮದಗಜಗಮನೆಯಾದ ದ್ರೌಪದಿಯು ಭೀಮನನ್ನು ಬಾಚಿ ತಬ್ಬಿ ಅವನ ಸುಂದರವಾದ ಮುಖಕ್ಕೆ ಮುದ್ದಿಡುತ್ತಾ, ವೀಣೆಯಲ್ಲಿ ನುಡಿಯುವ ಗಾಂಧಾರಸ್ವರದಂತೆ ಸುಮಧುರವಾದ ಧ್ವನಿಯಿಂದ ಭೀಮನನ್ನು ಕುರಿತು ಹೇಳಿದಳು :

**ಉತ್ತಿಷ್ಠೋತ್ತಿಷ್ಠ ಕಿಂ ಶೇಷೇ ಭೀಮಸೇನ ಯಥಾ ಮೃತಃ ।**
**ನಾಮೃತಸ್ಯ ಹಿ ಪಾಪೀಯಾನ್ಭಾರ್ಯಾಮಾಲಭ್ಯ ಜೀವತಿ ॥೧೫॥**

"ಭೀಮಸೇನ! ಎದ್ದೇಳು! ಸತ್ತವನಂತೆ ಮಲಗಿರುವೆಯೇಕೆ? ಯದ್ಯಪಿ ನೀನು ಸುದೀರ್ಘವಾಗಿ ಉಸಿರಾಡುತ್ತಿದ್ದರೂ ಮೃತಪ್ರಾಯನಾಗಿರುವೆಯೆಂದು ಸಂಶಯಿಸಿದ ಕಾರಣವೇನೆಂದರೆ : ನೀನು ಸಾಯದೇ ಬದುಕಿದ್ದರೆ ನಿನ್ನ ಹೆಂಡತಿಯನ್ನು ಅಪಮಾನಗೊಳಿಸಿದ ಆ ಕಡುಪಾಪಿಯು ಇಲ್ಲಿಯವರೆಗೂ ಜೀವಿಸಿರುತ್ತಿದ್ದನೇ? ಅವನಿನ್ನೂ ಜೀವಂತನಾಗಿರುವುದರಿಂದ ನೀನು ಉಸಿರಾಡುತ್ತಿದ್ದರೂ ಸತ್ತೇಹೋಗಿರಬಹುದೆಂದು ಭಾವಿಸುತ್ತೇನೆ." ದ್ರೌಪದಿಯ ಮಾತಿನಲ್ಲಿ ಧ್ವನಿಮಾಧುರ್ಯವಿದ್ದರೂ ಅರ್ಥಮಾಧುರ್ಯ ವಿರಲಿಲ್ಲ. ನಪುಂಸಕರನ್ನಾದರೂ ಹೊಡೆದೆಬ್ಬಿಸುವ ಮಾತು ಅದಾಗಿತ್ತು.

ಒಳ್ಳೆಯ ಸುಪ್ಪತ್ತಿಗೆಯಿಂದ ಕೂಡಿದ್ದ ಮಂಚದ ಮೇಲೆ ಮಲಗಿದ್ದ

ಭೀಮಸೇನನು, ದ್ರೌಪದಿಯ ಧ್ವನಿಯನ್ನು ಕೇಳಿ ನಿದ್ರೆತಿಳಿದು ಹಾಸಿಗೆಯ ಮೇಲೆ ಕುಳಿತು, ರಾಜಪುತ್ರಿಯಾದ ಪ್ರಿಯಭಾರ್ಯೆಯಾದ ದ್ರೌಪದಿಯನ್ನು ಕುರಿತು ಹೇಳಿದನು :



"ದ್ರೌಪದಿ! ನೀನು ಯಾವ ಕಾರಣದಿಂದಾಗಿ ಇಲ್ಲಿಗೆ ಇಷ್ಟು ಅವಸರವಾಗಿ ಆಗಮಿಸಿದೆ? ನಿನ್ನ ಮುಖವು ಬಾಡಿದೆ. ಬಹಳ ಕೃಶಳಾಗಿರುವಂತೆ ಕಾಣುತ್ತಿರುವೆ. ಇದಕ್ಕೆ ಕಾರಣವೇನೆಂಬುದನ್ನೂ ಮತ್ತು ಈ ಹೊತ್ತಿನಲ್ಲಿ ನೀನು ಅವಸರದಿಂದ ಆಗಮಿಸಿರುವ ಕಾರಣವನ್ನೂ ವಿಶದವಾಗಿ ಹೇಳು. ಎಲ್ಲ ವಿಷಯಗಳನ್ನೂ ನಾನು ಕೂಲಂಕಷವಾಗಿ ತಿಳಿಯಬೇಕೆಂದಿರುತ್ತೇನೆ.

ನೀನು ಹೇಳಲಿರುವ ಮಾತುಗಳು ನನಗೆ ದುಃಖದಾಯಕವಾಗಿಯಾದರೂ ಇರಬಹುದು. ಅಥವಾ ಸುಖದಾಯಕವಾಗಿಯಾದರೂ ಇರಬಹುದು ಅಥವಾ ನಿನಗೆ ಸಂಬಂಧಿಸಿದಂತೆ ಸುಖವಾಗಿದ್ದು ಅಥವಾ ಪ್ರಿಯವಾಗಿದ್ದಿರಬಹುದು ; ದ್ವೇಷೋತ್ಪಾದಕವಾದ ವಿಷಯವಾಗಿರಬಹುದು ; ಹೇಗಿದ್ದರೂ ಸರಿಯೇ ; ಯಾವ ವಿಷಯವನ್ನೂ ಮರೆಮಾಚದೇ ನನ್ನೊಡನೆ ಹೇಳು, ದ್ರೌಪದಿ! ನೀನೆಲ್ಲವನ್ನೂ ವಿಶದವಾಗಿ ಹೇಳಿದನಂತರ ಈ ಸಮಯದಲ್ಲಿ ಹೇಗೆ ನಡೆದುಕೊಳ್ಳುವುದು ಉಚಿತವೆಂಬುದರ ವಿಷಯವಾಗಿ ಯೋಚಿಸುತ್ತೇನೆ. ಕೃಷ್ಣೇ! ಎಲ್ಲ ವಿಷಯಗಳಲ್ಲಿಯೂ ನಾನೊಬ್ಬನೇ ನಿನ್ನ ಸಂಪೂರ್ಣ ವಿಶ್ವಾಸಕ್ಕೆ ಪಾತ್ರನಾಗಿರುತ್ತೇನೆ. ನಿನಗೆ ಹಿಂದೆ ಒದಗಿ ಬಂದಿದ್ದ ಎಲ್ಲ ಆಪತ್ತುಗಳನ್ನೂ ನಾನೇ ನಿವಾರಿಸಿದ್ದೇನೆ. ಇಂದಿನ ಆಪತ್ತನ್ನೂ ನಾನೇ ನಿವಾರಣೆಮಾಡುತ್ತೇನೆ. ಮುಂದೆ ಬರಬಹುದಾದ ಆಪತ್ತುಗಳನ್ನೂ ನಾನೇ ನಿವಾರಣೆಮಾಡುವೆನೆಂದು ಭರವಸೆಕೊಡುತ್ತೇನೆ. ಇಂದು ನಿನಗೆ ಒದಗಿರುವ ಆಪತ್ತೇನು? ನನ್ನನ್ನು ಯಾವ ಕಾರ್ಯಕ್ಕೆ ನಿಯೋಜಿಸಲು ಬಂದಿರುವೆ? ನಿನ್ನ ಮನಸ್ಸಿನ ಆಶಯವೇನು? ಎಂಬುದೆಲ್ಲವನ್ನೂ ಶೀಘ್ರವಾಗಿ ಹೇಳಿ ನೀನಿಲ್ಲಿಗೆ ಬಂದಿರುವ ಸುಳಿವು ಯಾರೊಬ್ಬರಿಗೂ ತಿಳಿಯದ ರೀತಿಯಲ್ಲಿ ನಿನ್ನ ನಿವಾಸಕ್ಕೆ ಮಲಗಲು ಹೊರಟುಹೋಗು, ದ್ರೌಪದಿ!”

೧೭ನೆಯ ಅಧ್ಯಾಯವು ಮುಗಿಯಿತು.

## ಭೀಮನ ಮುಂದೆ ದ್ರೌಪದಿಯ ದುಃಖೋದ್ಗಾರ

ಪಾರಿಕ್ಷಿತ! ದ್ರೌಪದಿಯು ನಿಟ್ಟುಸಿರುಬಿಡುತ್ತಾ ಗಂಭೀರವಾದ ವಾಣಿಯಿಂದ ಹೇಳಿದಳು :

**ಅಶೋಚ್ಯತ್ವಂ ಕುತಸ್ತಸ್ಯ ಯಸ್ಯಾ ಭರ್ತಾ ಯುಧಿಷ್ಠಿರಃ ।**
**ಜಾನನ್ಸರ್ವಾಣಿ ದುಃಖಾನಿ ಕಿಂ ಮಾಂ ತ್ವಂ ಪರಿಪೃಚ್ಛಸಿ ॥೧॥**

“ಆರ್ಯಪುತ್ರ! ಯುಧಿಷ್ಠಿರನನ್ನು ಪತಿಯನ್ನಾಗಿ ಪಡೆದನಂತರ ಸುಖವೆಂಬುದೆಲ್ಲಿದೆ? ಅಂತಹವನನ್ನು ಪತಿಯನ್ನಾಗಿ ಪಡೆದನಂತರ ಪಡಬಾರದ ಕಷ್ಟಗಳನ್ನು ಅನುಭವಿಸಿಯೇ ತೀರಬೇಕು. ಆದರೆ ನೀನೂ ಕೂಡ ಅಂತಹವನೆಂದು ನಾನು ತಿಳಿದಿರಲಿಲ್ಲ. ಎಲ್ಲ ವಿಷಯಗಳನ್ನೂ ಪ್ರತ್ಯಕ್ಷವಾಗಿಯೇ ಕಂಡಿದ್ದರೂ ಏನೂ ತಿಳಿಯದವನಂತೆ ನೀನು ಮಾತನಾಡುತ್ತಿರುವೆ. ನನ್ನ ದುಃಖಕ್ಕೆ ಕಾರಣವೇನೆಂದೂ ಪ್ರಶ್ನಿಸುತ್ತಿರುವೆ. ಮಾಡಬೇಕಾದ ಕಾರ್ಯವನ್ನು ನೀನಾಗಿಯೇ ಮಾಡದಿದ್ದುದರಿಂದ ನಾನು ನನ್ನ ಮನಸ್ಸಿನ ಸಂಕಟವನ್ನು ನಿನ್ನೊಡನೆ ಹೇಳಲೆಂದೇ ಬಂದೆನು. ಹಿಂದೆ ದುಷ್ಟ ದುಃಶಾಸನನು ನನ್ನನ್ನು ‘ದಾಸೀ-ದಾಸೀ’ ಎಂದು ಹೇಳುತ್ತಾ ನನ್ನ ಮುಂದಲೆಯನ್ನು ಹಿಡಿದು ದರ-ದರನೆ ಸೆಳೆದುಕೊಂಡು ಹೋಗಿ ತುಂಬಿದ ಸಭೆಯಲ್ಲಿ ನಿಲ್ಲಿಸಿದನು. ಅದು ನನ್ನ ಹೃದಯವನ್ನು ಈಗಲೂ ದಹಿಸುತ್ತಿದೆ. ರಾಜಾಧಿರಾಜನಾದ ದ್ರುಪದರಾಜನ ಮಗಳೆನಿಸಿಕೊಂಡ ದ್ರೌಪದಿಯೊಬ್ಬಳ ಹೊರತಾಗಿ ಪ್ರಪಂಚದಲ್ಲಿರುವ ಯಾವ ರಾಜಕುಮಾರಿಯು ತಾನೇ ಜ್ಞಾಪಿಸಿಕೊಳ್ಳಲೂ ಅಸಾಧ್ಯವೆನಿಸಿದ ಇಂತಹ ಅಪಮಾನವನ್ನು ಸಹಿಸಿ ಜೀವಿಸಿರಲು ಇಚ್ಛಿಸಿಯಾಳು? ಭೀಮಸೇನ! ಅರಣ್ಯದಲ್ಲಿ ವಾಸಮಾಡುತ್ತಿದ್ದಾಗ ದುರುಳನಾದ ಸೈಂಧವನು ಆಶ್ರಮದಲ್ಲಿ ಯಾರೂ ಇಲ್ಲದ ಸಮಯದಲ್ಲಿ ನನ್ನನ್ನು ಬಲಾತ್ಕಾರದಿಂದ ಸೆಳೆದುಕೊಂಡೇ ಹೊರಟುಹೋದನು. ಇದು ನನಗಾದ ಎರಡನೆಯ ಅವಮಾನ. ಯುಧಿಷ್ಠಿರನ ಪತ್ನಿಯಾದುದಕ್ಕಾಗಿ ಈ ಅಪಮಾನವನ್ನೂ ನಾನು ಸಹಿಸಿಕೊಂಡೆನು. ಧೂರ್ತನಾದ ಮತ್ಸ್ಯರಾಜನ ಸಮಕ್ಷ

ದಲ್ಲಿಯೇ ದುರುಳನಾದ ಕೀಚಕನು ನನ್ನನ್ನು ಕಾಲಿನಿಂದ ಥಳಿಸಿದನು. ದ್ರುಪದರಾಜಕುಮಾರಿಯಾದ ನಾನು ಇಷ್ಟು ಅಪಮಾನಿತಳಾದರೂ ಇನ್ನೂ ಜೀವಿಸಿಯೇ ಇದ್ದೇನೆ. ನನ್ನ ಹೊರತಾಗಿ ಬೇರೆ ಯಾರು ತಾನೇ ಹೀಗೆ ಅಪಮಾನಿತರಾಗಿ ಜೀವಿಸಿದ್ದಾರು? ಭಾರತ! ನಾನು ಇಷ್ಟೊಂದು ಕ್ಲೇಶಗಳನ್ನು ಅನುಭವಿಸುತ್ತಿದ್ದರೂ–ನೀನೆಲ್ಲವನ್ನೂ ಪ್ರತ್ಯಕ್ಷವಾಗಿಯೇ ಕಾಣುತ್ತಿದ್ದರೂ ನೀನಿಂದು ಏನೂ ತಿಳಿಯದವನಂತೆ 'ನಿನ್ನ ಕಷ್ಟವೇನು? ನೀನೇಕಿಲ್ಲಿಗೆ ಬಂದೆ?'–ಮುಂತಾಗಿ ಪ್ರಶ್ನಿಸುತ್ತಿರುವೆ. ನಾನಿನ್ನು ಜೀವಿಸಿದ್ದರೂ ಪಡೆಯಬಹುದಾದ ಫಲವು ತಾನೇ ಏನಿದೆ? ನಾನು ಮೊದಲೇ ಹೇಳಿದಂತೆ ಧರ್ಮರಾಜನನ್ನು ಪತಿಯನ್ನಾಗಿ ಮಾಡಿಕೊಂಡಿರುವವಳಿಗೆ ಸುಖವೆಂಬುದು ಇಲ್ಲವೇ ಇಲ್ಲ."

ದ್ರೌಪದಿಯು ಮುಂದುವರಿದು ಹೇಳುತ್ತಾಳೆ :

"ಪುರುಷವ್ಯಾಘ್ರನೇ! ನಿನಗೆಲ್ಲವೂ ತಿಳಿದಿದ್ದರೂ ಏನೂ ತಿಳಿಯದವ ನಂತೆ ಕೇಳುತ್ತಿರುವುದರಿಂದ ಎಲ್ಲ ವಿಷಯವನ್ನೂ ಹೇಳುತ್ತೇನೆ. ಕೇಳು : ಕೀಚಕನೆಂಬ ಹೆಸರಿನ ದುರಾತ್ಮನೊಬ್ಬನು ಈ ಅರಮನೆಯಲ್ಲಿದ್ದಾನೆ. ಅವನು ಈ ರಾಜ್ಯದ ಸೇನಾಪತಿ. ಮೇಲಾಗಿ ರಾಜನ ಭಾವಮೈದುನ. ಸೈರಂಧ್ರಿಯ ವೇಷಧರಿಸಿ ಇಲ್ಲಿರುವ ನನ್ನನ್ನವನು ತನ್ನ ಭಾರ್ಯೆಯಾಗುವಂತೆ ಪೀಡಿಸು ತ್ತಿದ್ದಾನೆ. ವಧಾರ್ಹನಾದ ಆ ಕೀಚಕನು ಅನುದಿನವೂ ಈ ವಿಧವಾಗಿ ನನ್ನನ್ನು ಪೀಡಿಸುತ್ತಿರುವುದರಿಂದ ಪಕ್ವವಾದ ಹಣ್ಣು ಬಿರಿದು ಹೋಗುವಂತೆ ನನ್ನ ಹೃದಯವು ಬಿರಿದುಹೋಗಿದೆ. ಬಹಳ ಸಂಕಟವನ್ನು ಅನುಭವಿಸುತ್ತಿದ್ದೇನೆ.

ಭೀಮಸೇನ! ನಿರಂತರವೂ ದುರ್ದ್ಯೂತದಲ್ಲಿ ಆಸಕ್ತನಾಗಿರುವ ನಿಮ್ಮಣ್ಣನನ್ನು ನೀನೂ ಖಂಡಿಸಲೇಬೇಕು. ಅವನು ಮಾಡಿದ ಕಾರ್ಯ ದಿಂದಾಗಿ ನಾನಿಂದು ಈ ವಿಧವಾದ ಕಷ್ಟಗಳನ್ನನುಭವಿಸಬೇಕಾಗಿದೆ. ನಿಶ್ಚಯವಾಗಿಯೂ ದುರ್ದ್ಯೂತದಲ್ಲಿ ಸರ್ವದಾ ಆಸಕ್ತನಾದ ನಿಮ್ಮಣ್ಣನೊಬ್ಬ ನಲ್ಲದೇ ಮತ್ತಾರು ತಾನೇ ಯಾವ ವಿಧವಾದ ಯುಕ್ತಾಯುಕ್ತವಿವೇ ಚನೆಯೂ ಇಲ್ಲದೇ, ರಾಜ್ಯ-ಕೋಶಾದಿಗಳನ್ನೂ ಧರ್ಮಪತ್ನಿಯನ್ನೂ ಪಣ

ವಾಗಿಟ್ಟು ಜೂಜಾಡಿ ಸರ್ವಸ್ವವನ್ನೂ ಕಳೆದುಕೊಂಡು ಅರಣ್ಯವಾಸಮಾಡುತ್ತಾನೆ? ಜೂಜಾಟಕ್ಕೂ ಒಂದು ಮಿತಿಯುಂಟು, ಭೀಮಸೇನ! ನಮ್ಮ ರಾಜನು ಸಾಯಂ-ಪ್ರಾತಃ ಜೂಜಾಡಿಕೊಂಡೇ ಇರಲಿ, ಬೇಡವೆನ್ನುವವರಾರು? ಪ್ರತಿಯೊಂದು ಆಟಕ್ಕೂ ಸಾವಿರಾರು ಚಿನ್ನದ ನಾಣ್ಯಗಳನ್ನೇ ಪಣವಾಗಿಡಲಿ. ನಾಣ್ಯಗಳನ್ನೇ ಏಕೆ? ಚಿನ್ನ, ಬೆಳ್ಳಿ, ಪೀತಾಂಬರಗಳು, ರಥ, ಕುದುರೆ, ಹೇಸರಗತ್ತೆ, ಆನೆಗಳು, ಆಡು-ಕುರಿಗಳು–ಮುಂತಾದುವುಗಳನ್ನೂ ಯಥೇಚ್ಛವಾಗಿ ಪಣವಾಗಿಟ್ಟು ಅನೇಕವರ್ಷಗಳ ಕಾಲ ಜೂಜಾಡಿದ್ದರೂ ನಮ್ಮ ಅತುಲೈಶ್ವರ್ಯದಲ್ಲಿ ಸ್ವಲ್ಪವಾದರೂ ಕಡಿಮೆಯಾಗುತ್ತಿರಲಿಲ್ಲ. ಆದರೆ ಮೂಢನಾದ ಅವನು ರಾಜ್ಯಲಕ್ಷ್ಮಿಯನ್ನೇ ಪಣವನ್ನಾಗಿಟ್ಟು ಕಳೆದುಕೊಂಡನು. ರಾಜ್ಯಲಕ್ಷ್ಮಿಯನ್ನು ಕಳೆದುಕೊಂಡ ಅವನಿಂದು ಮೂಢನಂತೆ ತಾನು ಮಾಡಿದ ದುಷ್ಕಾರ್ಯಗಳೆಲ್ಲವನ್ನೂ ಮನಸ್ಸಿನಲ್ಲಿಯೇ ಚಿಂತಿಸುತ್ತಾ ಸುಮ್ಮನೇ ಕುಳಿತಿದ್ದಾನೆ. ಅವನು ಮಾಡಿರುವ ಕ್ರಿಯೆಗಾಗಿ ಅವನನ್ನು ನಿಂದಿಸಬೇಕೆನ್ನಿಸುತ್ತದೆ. ಮತ್ತೊಮ್ಮೆ ಅವನನ್ನು ನೋಡಿದರೆ ಒಂದು ವಿಧವಾದ ಸಂಕಟವೂ ಆಗುತ್ತದೆ. ಭೀಮಸೇನ! ಅವನು ಅರಮನೆಯಿಂದ ಹೊರಟನೆಂದರೆ, ನಿನಗೆ ತಿಳಿದಿರುವಂತೆಯೇ ಸ್ವರ್ಣಮಯಮಾಲೆಗಳನ್ನು ಧರಿಸಿದ್ದ ಹತ್ತು ಸಾವಿರ ಆನೆಗಳು, ಕುದುರೆಗಳು, ಕಾಲಾಳುಗಳು ಅವನ ಹಿಂದೆ ಹೊರಡುತ್ತಿದ್ದುವು. ಆದರೆ ಅಂತಹವನಿಂದು ಪಗಡೆಯಾಟದಿಂದ ತನ್ನ ಜೀವನವನ್ನು ಹೊರೆಯುತ್ತಿದ್ದಾನೆ.

ಅವನು ಇಂದ್ರಪ್ರಸ್ಥದಲ್ಲಿದ್ದಾಗ ಅರಮನೆಯಿಂದ ಹೊರಟನೆಂದರೆ ರಾಜಾಧಿರಾಜರ ಸಾವಿರಾರು ರಥಗಳು ಅವನ ಹಿಂದೆ ಹೊರಡುತ್ತಿದ್ದುವು. ಅವನ ಅಡಿಗೆಯ ಮನೆಯಲ್ಲಿ ಸಾವಿರಾರು ಮಂದಿ ಪರಿಚಾರಕರು ಕೈಗಳಲ್ಲಿ ಪಾತ್ರೆಗಳನ್ನು ಹಿಡಿದು ಅರಮನೆಗೆ ಬರುತ್ತಿದ್ದ ಸಾವಿರಾರು ಅತಿಥಿಗಳಿಗೆ ಹಗಲಿರುಳೆಂಬ ವ್ಯತ್ಯಾಸವೇ ಇಲ್ಲದೆ ಭೋಜನಮಾಡಿಸುತ್ತಿದ್ದರು. ಬಂದ ಅತಿಥಿಗಳೆಲ್ಲರಿಗೂ ಒಂದೊಂದು ಸಾವಿರ ವರಹಗಳನ್ನೂ ನಿಮ್ಮ ಅಣ್ಣನು ದಾನವಾಗಿ ಕೊಡುತ್ತಿದ್ದನು. ಅಂತಹವನಿಂದು ದುರ್ದ್ಯೂತದ ಕಾರಣದಿಂದಾಗಿ ಸಕಲವಾದ ಅನರ್ಥಕ್ಕೂ ಕಾರಣನಾಗಿರುವುದಲ್ಲದೇ ನನ್ನನ್ನೂ ಈ ವಿಧವಾದ ಕಷ್ಟಕ್ಕೆ ಗುರಿಮಾಡಿರುತ್ತಾನೆ.

ವಜ್ರಖಚಿತವಾದ ಕರ್ಣಾಭರಣಗಳನ್ನು ಧರಿಸಿದ್ದ, ಮಧುರಸ್ವರ ಸಂಪನ್ನರಾದ ನೂರಾರು ಮಂದಿ ಸೂತ-ಮಾಗಧರು ಪ್ರತಿನಿತ್ಯವೂ ಸಾಯಂ ಪ್ರಾತಃ ಯುಧಿಷ್ಠಿರನ ಗುಣಗಾನಮಾಡುತ್ತಿದ್ದರು. ತಪೋಧನರಾದ ಬಹು ಶ್ರುತರಾದ ಸಾವಿರಾರು ಋಷಿ-ಮಹರ್ಷಿಗಳು ಅನುದಿನವೂ ಅವನ ಆಸ್ಥಾನಕ್ಕೆ ಬರುತ್ತಿದ್ದರು. ಅವರೆಲ್ಲರನ್ನೂ ರಾಜನು ಸತ್ಕರಿಸಿ ಅವರಿಗೆ ಬೇಕಾದುದನ್ನು ಕೊಟ್ಟು ಅವರ ಆಶಯವನ್ನು ಪೂರ್ಣಗೊಳಿಸುತ್ತಿದ್ದನು. ಎಂಬತ್ತೆಂಟು ಸಾವಿರ ಮಂದಿ ಗೃಹಸ್ಥಸ್ನಾತಕರು ಯುಧಿಷ್ಠಿರನ ಅರಮನೆಯಲ್ಲಿದ್ದರು. ಅವರುಗಳನ್ನು ಉಪಚರಿಸಲು ಯುಧಿಷ್ಠಿರನು ಒಬ್ಬೊಬ್ಬರಿಗೂ ಮೂವತ್ತು ಮಂದಿ ದಾಸಿಯರನ್ನು ನಿಯಮಿಸಿದ್ದನು. ಅವರುಗಳಲ್ಲದೇ ಯಾವುದನ್ನೂ ಎಲ್ಲಿಯೂ ಪರಿಗ್ರಹಿಸದ ಊರ್ಧ್ವರೇತಸ್ಕರಾದ ಹತ್ತುಸಾವಿರ ಮಂದಿ ಯೋಗಿಗಳು ಯುಧಿಷ್ಠಿರನ ಅರಮನೆಯಲ್ಲಿದ್ದರು. ಅವರೆಲ್ಲರನ್ನೂ ಯುಧಿಷ್ಠಿರನು ಯಥಾಯೋಗ್ಯವಾಗಿ ಸತ್ಕರಿಸುತ್ತಿದ್ದನು. ಅಂತಹ ರಾಜಾಧಿರಾಜನೀಗ ಈ ದುರವಸ್ಥೆಯಲ್ಲಿರುವುದನ್ನು ನೋಡಿದರೆ ನನ್ನ ಹೃದಯವು ಬಿರಿಯದಿರುವುದೇ? ಜೂಜುಕೋರನೆಂಬುದೊಂದು ಹೊರತಾಗಿ ಅವನು ಸದ್ಗುಣಗಳ ಆಕರನೆಂಬುದರಲ್ಲಿ ಸಂಶಯವೇ ಇಲ್ಲ. ಅವನಲ್ಲಿ ಕ್ರೌರ್ಯವೆಂಬುದಿಲ್ಲ. ಎಲ್ಲರ ವಿಷಯದಲ್ಲಿಯೂ ಅಪಾರವಾದ ಕನಿಕರ, ಪ್ರಜೆಗಳೇ ಆದಿಯಾಗಿ ಸರ್ವರಿಗೂ ಅವರವರಿಗೆ ಸಲ್ಲಬೇಕಾದ ಗೌರವ ಮತ್ತು ಐಶ್ವರ್ಯಗಳನ್ನು ವಿಭಾಗಿಸಿಕೊಡಬೇಕೆಂಬ ಸದಿಚ್ಛೆ–ಈ ಎಲ್ಲ ಸದ್ಗುಣಗಳೂ ಅವನಲ್ಲಿ ಮೂರ್ತಿಮತ್ತಾಗಿವೆ. ಅಂತಹವನಿಂದು ಜೂಜಾಟದ ಕಾರಣದಿಂದಾಗಿ ಈ ವಿಧವಾದ ದುರವಸ್ಥೆಗೆ ಗುರಿಯಾಗಿದ್ದಾನೆ. ರಾಜ್ಯದ ಪ್ರಜೆಗಳಲ್ಲಿ ಯಾವುದೊಂದು ವರ್ಗದವರನ್ನೂ ಅವನು ಉದಾಸೀನಮಾಡುತ್ತಿರಲಿಲ್ಲ. ಕುರುಡರು, ಕುಂಟರು, ಮೂಕರು, ಕಿವುಡರು, ಅಂಗವಿಕಲರು, ವೃದ್ಧರು, ಅನಾಥರಾದ ಬಾಲಕರು, ಐಶ್ವರ್ಯವಂತರಾಗಿದ್ದು ಕಾರಣಾಂತರದಿಂದ ನಿರ್ಗತಿಕರಾದವರು, ಪ್ರಕೃತಿಯ ಕೋಪಕ್ಕೆ ಸಿಕ್ಕಿ ಕಂಗೆಟ್ಟವರು–ಇವರೆಲ್ಲರಿಗೂ ಸತ್ಯನಿಷ್ಠನಾದ, ಧೃತಿಮಂತನಾದ ಯುಧಿಷ್ಠಿರನು ಆಶ್ರಯನೀಡಿದ್ದನು. ಅಂತಹವನಿಂದು ಮತ್ಸ್ಯರಾಜನ ಪರಿಚಾರಕನಾಗಿ ರಾಜನ ಮನ

ವೊಲಿಸಲು ಅವನೊಡನೆ ಪಗಡೆಯಾಡುತ್ತಾ ಕಂಕನೆಂಬ ಹೆಸರನ್ನಿಟ್ಟು ಕೊಂಡು ಕಾಲಕಳೆಯುತ್ತಿದ್ದಾನೆ. ಅವನು ಇಂದ್ರಪ್ರಸ್ಥದಲ್ಲಿದ್ದಾಗ ಪ್ರಪಂಚದ ನಾನಾದೇಶಗಳಿಂದ ರಾಜರು ಬಂದು ಅವನಿಗೆ ಕಪ್ಪ-ಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಅಂತಹ ಯುಧಿಷ್ಠಿರನಿಂದು ತನ್ನ ಜೀವಿಕೆಗೆ ಬೇರೆಯವರ ಆಶ್ರಯವನ್ನು ಹೊಂದಿರುತ್ತಾನೆ. ಅವನು ಇಂದ್ರಪ್ರಸ್ಥದಲ್ಲಿದ್ದಾಗ ಅನೇಕರಾಜರನ್ನು ಗೆದ್ದು ಅವರ ಸ್ವಾತಂತ್ರ್ಯವನ್ನು ಅಪಹರಿಸಿ ಅವರನ್ನು ಸಾಮಂತರಾಜರನ್ನಾಗಿ ಮಾಡಿಕೊಂಡಿದ್ದನು. ಅಂತಹವನಿಂದು ತನ್ನ ಸ್ವಾತಂತ್ರ್ಯವನ್ನೇ ಸಂಪೂರ್ಣವಾಗಿ ಕಳೆದುಕೊಂಡು ಇನ್ನೊಬ್ಬರ ಆಶ್ರಯದಲ್ಲಿದ್ದಾನೆ. ಇಂಥವನಿಗೆ ವಾಕ್ಸ್ವಾತಂತ್ರ್ಯವೂ ಇಲ್ಲವಾಗಿದೆ. ಇಂದ್ರಪ್ರಸ್ಥದಲ್ಲಿದ್ದಾಗ ಯುಧಿಷ್ಠಿರನು ತನ್ನ ಭುಜಬಲ-ಪರಾಕ್ರಗಳಿಂದ ಮತ್ತು ಅಮಿತವಾದ ಕ್ಷಾತ್ರತೇಜಸ್ಸಿನಿಂದ ಸೂರ್ಯನಂತೆ ಈ ಭೂಮಿಯನ್ನು ಬೆಳಗುತ್ತಿದ್ದನು. ಅಂತಹವನಿಂದು ಮತ್ಸ್ಯರಾಜನ ಆಸ್ಥಾನದಲ್ಲಿ ಒಬ್ಬ ಸಾಧಾರಣಸಭಾಸದನಾಗಿದ್ದಾನೆ. ಇಂದ್ರಪ್ರಸ್ಥದಲ್ಲಿ ರಾಜಸಭಾಮಧ್ಯದಲ್ಲಿ ರತ್ನಸಿಂಹಾಸನದ ಮೇಲೆ ಯುಧಿಷ್ಠಿರನು ಕುಳಿತಿರುವಾಗ ಅನೇಕರಾಜರು ಋಷಿ-ಮಹರ್ಷಿಗಳೊಡನೆ ಅವನನ್ನು ಸಂಸೇವಿಸುತ್ತಿದ್ದರು. ಅಂತಹವ ನಿಂದು ದುರ್ಬಲನಾದ ಬೇರೊಬ್ಬ ರಾಜನನ್ನು ಸೇವಿಸುತ್ತಿರುವುದನ್ನಾದರೂ ನೋಡು. ಭೀಮಸೇನ! ಇಷ್ಟು ಮಾತ್ರವಲ್ಲ. ಮತ್ಸ್ಯರಾಜನ ರಾಜಸಭೆ ಯಲ್ಲಿ ಮಂತ್ರಿ-ಸೇನಾಪತಿಗಳ ಹಿಂಬದಿಯಲ್ಲಿ ಕುಳಿತು ಕೇವಲ ತನ್ನ ಜೀವಿಕೆ ಗಾಗಿ ಗುಣಲೇಶವೂ ಇಲ್ಲದ ರಾಜನನ್ನು ಹೊಗಳುಭಟನಂತೆ ಹೊಗಳು ವುದನ್ನು ನೋಡಿದೊಡನೆಯೇ ನನ್ನ ಹೃದಯವೇದನೆಯು ಉಲ್ಬಣಿಸುತ್ತದೆ. ಧರ್ಮಾತ್ಮನಾದ, ಮಹಾಪ್ರಾಜ್ಞನಾದ, ಸೇವಾಕಾರ್ಯಮಾಡಲು ಅನರ್ಹ ನಾದ ನಮ್ಮ ರಾಜನು ಜೀವಿತಾರ್ಥವಾಗಿ ಸೇವಾವೃತ್ತಿಯಲ್ಲಿರುವುದನ್ನು ನೋಡಿದರೆ ಯಾರಿಗೆ ತಾನೇ ದುಃಖವಾಗದೇ ಇರುವುದು? ರಾಜಸಭೆಯಲ್ಲಿ ಯಾರು ನಿಖಿಲಜಗತ್ತಿನಿಂದಲೂ ಉಪಾಸ್ಯನಾಗಿದ್ದನೋ–ಅಂತಹವನೇ ಇಂದು ಬೇರೆಯವರನ್ನು ಉಪಾಸನೆ (ಸೇವೆ) ಮಾಡುತ್ತಿರುವುದನ್ನಾ ದರೂ ನೋಡು, ಭೀಮಸೇನ! ನನ್ನ ದುಃಖವು ಅಪಾರವಾಗಿದೆ. ನಾನು

ಇಂದು ಅನಾಥಳಂತಾಗಿದ್ದೇನೆ. ಶೋಕಸಾಗರದ ಮಧ್ಯದಲ್ಲಿದ್ದೇನೆ. ಇದನ್ನು ನೀನು ಕಾಣುತ್ತಿಲ್ಲವೇ? ನಿನಗಿದು ತಿಳಿಯದೇ?"

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ ಕೀಚಕವಧಪರ್ವ (ಮುಂದುವರಿದಿದೆ.)

## ಪಾಂಡವರ ಕಷ್ಟಗಳನ್ನು ನೋಡಿ ದುಃಖಿತಳಾದ ದ್ರೌಪದಿಯು ಭೀಮಸೇನನ ಮುಂದೆ ಗೋಳಿಟ್ಟುದು

ಪಾರಿಕ್ಷಿತ! ಯುಧಿಷ್ಠಿರನ ಸಲುವಾಗಿ ಗೋಳಿಟ್ಟ ದ್ರೌಪದಿಯು ಮುಂದುವರಿದು ಭೀಮನೊಡನೆ ಹೇಳಿದಳು :

"ಭೀಮಸೇನ! ನನ್ನ ದುಃಖಕ್ಕೆ ಕಾರಣ–"ಮಹಾರಾಜನಾದ ಯುಧಿಷ್ಠಿರನಿಂದು ಮತ್ಸ್ಯರಾಜನ ಸೇವಕನಾಗಿರುವುದಕ್ಕಾಗಿ'–ಎಂದು ಹೇಳಿದೆನಲ್ಲವೇ? ನನ್ನ ದುಃಖಕ್ಕೆ ಕಾರಣವು ಇಷ್ಟುಮಾತ್ರವೇ ಅಲ್ಲ. ಇನ್ನೂ ಅನೇಕ ಕಾರಣಗಳಿವೆ. ಮಹತ್ತರವಾದ ನನ್ನ ದುಃಖದ ಇತರ ಕಾರಣಗಳನ್ನೂ ಹೇಳುತ್ತೇನೆ. ನಾನು ನನ್ನ ಹೃದಯದಲ್ಲಿರುವ ಎಲ್ಲ ವಿಷಯಗಳನ್ನೂ ನಿನ್ನೊಡನೆ ಹೇಳುತ್ತಿರುವುದಕ್ಕಾಗಿ ನನ್ನ ವಿಷಯದಲ್ಲಿ ದೋಷವನ್ನೆಣಿಸಬೇಡ. ನನ್ನ ದುಃಖವನ್ನು ನನ್ನ ಹೃದಯದಲ್ಲಿಯೇ ಬಚ್ಚಿಟ್ಟುಕೊಳ್ಳಲಾಗದೇ ನಿನ್ನೊಡನೆ ಹೇಳುತ್ತಿದ್ದೇನೆ. ನಿನ್ನ ಇಂದಿನ ಸ್ಥಿತಿಯನ್ನು ನೋಡಿ ನನ್ನ ದುಃಖವು ಇಮ್ಮಡಿಯಾಗಿದೆ. ನೀನಿಂದು ಹೀನವಾದ ಅಡಿಗೆಯ ಕಾರ್ಯದಲ್ಲಿ ತೊಡಗಿರುವೆ. ಈ ನಿನ್ನ ಸ್ಥಿತಿಯನ್ನು ನೋಡಿದರೆ ನಿನ್ನ ವಿಷಯವನ್ನು ತಿಳಿದ ಯಾರು ತಾನೇ ದುಃಖಿಸದಿದ್ದಾರು? ಇಂದು ನಿನ್ನನ್ನು ಇಲ್ಲಿಯ ಜನರು ಮತ್ಸ್ಯರಾಜನ ಅರಮನೆಯಲ್ಲಿ ಅಡಿಗೆಮಾಡುವ ಬಲ್ಲವನೆಂದು ತಿಳಿದಿದ್ದಾರೆ. ನೀನಿಂದು ಮತ್ಸ್ಯರಾಜನ ಸೇವಕನಾಗಿರುವೆ. ನನಗೆ ಇದಕ್ಕಿಂತಲೂ ಹೆಚ್ಚಿನ ದುಃಖವು ಮತ್ತಾವುದಿದೆ? ಭೀಮಸೇನ! ಅಡಿಗೆಯ ಮನೆಯ ಕೆಲಸ-ಕಾರ್ಯಗಳು ಮುಗಿದನಂತರ ನೀನು ವಿರಾಟರಾಜನ ಆಸ್ಥಾನದಲ್ಲಿ ರಾಜನ ಹಿಂದೆ ಹೋಗಿ ಕುಳಿತುಕೊಳ್ಳುವೆ. ನೀನು

ನಿನ್ನನ್ನು ಇತರರಿಗೆ ‘ನಾನು ಬಲ್ಲವನೆಂಬ ಪಾಕಶಾಲೆಯ ಅಧ್ಯಕ್ಷ’ ಎಂದು ಪರಿಚಯವನ್ನು ಮಾಡಿಕೊಳ್ಳುವೆ. ಅದನ್ನು ಕೇಳಿದೊಡನೆಯೇ ನನ್ನ ಮನಸ್ಸು ಬಹುವಾಗಿ ಸಂಕಟಪಡುತ್ತದೆ.

ಮನಸ್ಸಿನ ಉಲ್ಲಾಸಕ್ಕಾಗಿ ಮತ್ಸ್ಯರಾಜನು ಹಲವಾರು ಸಮಯಗಳಲ್ಲಿ ಆನೆಗಳೊಡನೆ ಸೆಣೆಸಾಡಲು ಹೇಳುವನು. ಆ ಸಮಯಗಳಲ್ಲಿ ಅಂತಃಪುರದ ಸ್ತ್ರೀಯರು ಆನೆಯೊಡನೆ ನೀನಾಡುತ್ತಿರುವ ಕಾಳಗವನ್ನು ನೋಡಿ ಕಿಲ-ಕಿಲನೆ ನಗುವರು. ನನಗಾದರೋ ಮನಸ್ಸು ಉದ್ವೇಗಗೊಳ್ಳುವುದು. ಕೆಲವು ಸಮಯಗಳಲ್ಲಿ ರಾಣಿಯಾದ ಸುದೇಷ್ಣೆಯ ಉಲ್ಲಾಸಕ್ಕಾಗಿಯೂ ನೀನು ಹುಲಿ-ಸಿಂಹ-ಕಾಡುಕೋಣಗಳೊಡನೆ ಕಾಳಗವಾಡುವೆ. ಹಾಗೆ ಕಾಳಗ ವಾಡುವಾಗ ನಿನ್ನ ಸ್ಥಿತಿಯನ್ನು ನೋಡಿ ನಾನು ಬಹಳವಾಗಿ ದುಃಖಿಸುವೆನು. ಹೀಗೆಯೇ ಒಮ್ಮೆ ಕಾಡುಮೃಗಗಳೊಡನೆ ಕಾಳಗವಾಡುತ್ತಿದ್ದಾಗ ವ್ಯಾಘ್ರವು ಅಬ್ಬರದಿಂದ ನಿನ್ನ ಮೇಲೆ ಬೀಳುತ್ತಿದ್ದುದನ್ನು ನೋಡಿ ನನಗೆ ಮೂರ್ಛೆ ಬಂದಂತಾಯಿತು. ನಾನು ಮೂರ್ಛಿತಳಾದುದನ್ನು ಕಂಡು ಆಸನದಿಂದ ಮೇಲೆದ್ದು ಸುದೇಷ್ಣೆಯು ಸಖಿಯರನ್ನು ಕುರಿತು ನನ್ನ ಮೂರ್ಛೆಗೆ ಕಾರಣವೇನಿರಬಹುದೆಂದು ಪ್ರಶ್ನಿಸಿದಳು. ಒಡನೆಯೇ ಸಖಿಯರೆಲ್ಲರೂ ತಮ್ಮ-ತಮ್ಮ ಆಸನಗಳಿಂದ ಮೇಲೆದ್ದು ದೈಹಿಕವಾದ ದೋಷವಿಲ್ಲದಿದ್ದರೂ ಮೂರ್ಛೆಬಂದಂತಿರುವ ನನ್ನನ್ನು ನೋಡಿ ಹೀಗೆ ಹೇಳಿದರು :

**ಸ್ನೇಹಾತ್ಸಂವಾಸಜಾದ್ಧರ್ಮಾತ್ಸೂದಮೇಷಾ ಶುಚಿಸ್ಮಿತಾ ।**
**ಯೋಧ್ಯಮಾನಂ ಮಹಾವೀರ್ಯಮಿಯಂ ಸಮನುಶೋಚತಿ ॥೮॥**

“ಸ್ನೇಹದಿಂದಲೋ, ಪರಸ್ಪರಸಂಬಂಧವಿರುವುದರಿಂದಲೋ ಅಥವಾ ಸಹಜವಾದ ಕರುಣೆಯಿಂದಲೋ–ಈ ಸೈರಂಧ್ರಿಯು–ನಮ್ಮ ಬಲ್ಲವನು ವನ್ಯಮೃಗಗಳೊಡನೆ ಕಾಳಗವಾಡುವಾಗ ದುಃಖಿಸುತ್ತಿರುತ್ತಾಳೆ.” ಹೀಗೆ ಹೇಳಿದ ಸಖಿಯರಿಗೆ ಸುದೇಷ್ಣೆಯು ಹೇಳಿದಳು :

**ಕಲ್ಯಾಣರೂಪಾ ಸೈರನ್ಧ್ರೀ ಬಲ್ಲವಶ್ಚಾಪಿ ಸುನ್ದರಃ ।**
**ಸ್ತ್ರೀಣಾಂ ಚಿತ್ತಂ ಚ ದುರ್ಜ್ಞೇಯಂ ಯುಕ್ತರೂಪೌ**
**ಚ ಮೇ ಮತೌ ॥೯॥**

**ಸೈರನ್ಧ್ರೀ ಪ್ರಿಯಸಂವಾಸಾನ್ನಿತ್ಯಂ ಕರುಣವಾದಿನೀ**
**ಅಸ್ಮಿನ್ರಾಜಕುಲೇ ಚೋಭೌ ತುಲ್ಯಕಾಲನಿವಾಸಿನೌ ॥೧೦॥**

"ಬಲ್ಲವನು ಸಿಂಹ-ಹುಲಿ, ಕಾಡಾನೆ-ಕಾಡೆಮ್ಮೆಗಳೊಡನೆ ಕಾಳಗವಾಡುವುದನ್ನು ನೋಡಿ ನಾವೆಲ್ಲರೂ ಸಂತೋಷಿಸುತ್ತಿದ್ದರೆ ಈ ಸೈರಂಧ್ರಿಯೊಬ್ಬಳು ಮಾತ್ರವೇ ನಮ್ಮ ಅರಮನೆಯಲ್ಲಿ ಕುಂದಿದ ಮುಖಭಾವದಿಂದ ಕೂಡಿದವಳಾಗುತ್ತಾಳೆ. ಆದುದರಿಂದ ಈ ಇಬ್ಬರಿಗೂ ಏನಾದರೊಂದು ಸಂಬಂಧವಿರಲೇಬೇಕು. ಸಂಬಂಧವಿರುವುದೂ ಅಸಹಜವಲ್ಲ. ಸೈರಂಧ್ರಿಯು ಮಂಗಳರೂಪಳಾಗಿದ್ದಾಳೆ. ಬಲ್ಲವನೂ ಸುಂದರರೂಪನಾಗಿದ್ದಾನೆ. ಹೆಂಗಸಿನ ಮನಸ್ಸಿನಲ್ಲೇನಿರುವುದೆಂಬುದನ್ನು ತಿಳಿಯುವುದು ಅಸಾಧ್ಯವೇ ಸರಿ. ಇವರಿಬ್ಬರೂ ಪತಿ-ಪತ್ನಿಯರಾಗಿರಲು ಅನುರೂಪವಾಗಿಯೇ ಇದ್ದಾರೆ.

ಸೈರಂಧ್ರಿಗೆ ಬಲ್ಲವನ ಮೇಲೆ ನಿಗೂಢವಾದ ಪ್ರೇಮವಿರುವುದರಿಂದಲೇ ಇವಳು ಅವನ ವಿಷಯದಲ್ಲಿ ಕರುಣಾಪೂರಿತವಾದ ಮಾತುಗಳನ್ನಾಡುತ್ತಾಳೆ. ಮೇಲಾಗಿ ಈ ನಮ್ಮ ಅರಮನೆಗೆ ಇವರಿಬ್ಬರೂ ಒಂದೇ ಕಾಲದಲ್ಲಿಯೇ ಆಗಮಿಸಿ ವಾಸಮಾಡುತ್ತಿದ್ದಾರೆ. ಈ ಕಾರಣಗಳಿಂದಾಗಿ ಇವರಿಬ್ಬರಿಗೂ ಯಾವುದೋ ಸಂಬಂಧವಿರಬಹುದು"–ಎಂದಳು.

ಇವೇ ಮುಂತಾಗಿ ಅವರೆಲ್ಲರೂ ಮಾತಾಡಿಕೊಂಡರು. ಇದೇ ಕಾರಣದಿಂದಾಗಿ ಸುದೇಷ್ಣೆಯು ನನ್ನನ್ನು ಕಂಡೊಡನೆಯೇ ಚುಚ್ಚುಮಾತುಗಳನ್ನಾಡಿ ನನ್ನ ಮನಸ್ಸನ್ನು ನೋಯಿಸುತ್ತಿರುತ್ತಾಳೆ. ಅವಳ ಮಾತಿಗೆ ನಾನು ಕೋಪಿಸಿಕೊಂಡೆನಾದರೆ ನಿನ್ನಲ್ಲಿ ನಾನು ಅನುರಕ್ತಳಾಗಿರುವೆನೆಂದು ಶಂಕಿಸುತ್ತಾಳೆ.

ಧರ್ಮಜನ ಸ್ಥಿತಿಯನ್ನು ನೋಡಿ ಶೋಕತಪ್ತಳಾಗಿರುವ ನನಗೆ ಭೀಮಪರಾಕ್ರಮನಾದ ನಿನ್ನ ದುಃಸ್ಥಿತಿಯನ್ನೂ ನೋಡುತ್ತಿದ್ದಂತೆ ಜೀವಿತವೇ ಬೇಡವಾಗುತ್ತದೆ. ಇಷ್ಟು ಮಾತ್ರವಲ್ಲ. ಭೀಮಸೇನ! ನನ್ನ ಪ್ರಿಯತಮನಾದ ಅರ್ಜುನನಿರುವ ಸ್ಥಿತಿಯನ್ನಾದರೂ ನೋಡು. ಯಾವನು ಏಕಾಕಿಯಾಗಿ ರಥದಲ್ಲಿ ಕುಳಿತು ದೇವತೆಗಳನ್ನೂ–ಮನುಷ್ಯರನ್ನೂ ಪರಾಭವಗೊಳಿಸಲು ಸಮರ್ಥನೋ–ಅಂತಹವನಿಂದು ವಿರಾಟರಾಜನ ಅರಮನೆಯಲ್ಲಿ

ಹೆಣ್ಣುಮಕ್ಕಳಿಗೆ ನಾಟ್ಯವನ್ನು ಹೇಳಿಕೊಡುವ ನಾಟ್ಯಾಚಾರ್ಯನಾಗಿದ್ದಾನೆ. ಯಾವ ಪರಾಕ್ರಮಿಯು ಖಾಂಡವವನಕ್ಕೆ ಹೋಗಿ, ಅಗ್ನಿಗೆ ಸಂಪೂರ್ಣ ರಕ್ಷಣೆಯನ್ನಿತ್ತು, ಖಾಂಡವವನವನ್ನು ದಹನಮಾಡಲು ನೆರವಾಗಿ ಯಜ್ಞೇಶ್ವರನನ್ನು ತೃಪ್ತಿಪಡಿಸಿದನೋ–ಅಂತಹವನಿಂದು ವಿರಾಟನ ಅಂತಃಪುರದಲ್ಲಿ–ಕೂಪವೊಂದರಲ್ಲಡಗಿರುವ ಅಗ್ನಿಯಂತೆ–ನಿಗೂಢನಾಗಿದ್ದಾನೆ. ಪುರುಷರ್ಷಭನಾದ ಯಾವನ ದೆಸೆಯಿಂದ ಶತ್ರುಸಮೂಹವೇ ಭಯಪಡುತ್ತಿದ್ದಿತೋ ಅಂತಹ ಪರಾಕ್ರಮಿಯಾದ ಧನಂಜಯನಿಂದು ಲೋಕನಿಂದ್ಯವಾದ ನಪುಂಸಕ ವೇಷವನ್ನು ಧರಿಸಿ ತನ್ನ ಜೀವನವನ್ನು ನಡೆಸುತ್ತಿದ್ದಾನೆ. ಸವ್ಯಸಾಚಿಯಾದ ಅರ್ಜುನನು ಧನುಸ್ಸಿನ ಹುರಿಯನ್ನು ಸೆಳೆಯುವಾಗ ಜ್ಯಾಘಾತಗಳಿಂದ ಅವನ ಎರಡು ತೋಳುಗಳ ಮೇಲ್ಭಾಗಗಳೂ ಜಡ್ಡುಗಟ್ಟಿ ಹೋಗಿವೆ. ಅವನ್ನು ಮುಚ್ಚಿಕೊಳ್ಳಲು ಧನಂಜಯನು ತೋಳಿನ ಮೇಲ್ಭಾಗದವರೆಗೂ ಶಂಖದ ಬಳೆಗಳನ್ನು ತೊಟ್ಟುಕೊಂಡಿದ್ದಾನೆ. ಇದರಿಂದಾಗಿ ಅರ್ಜುನನೂ ಬಹಳ ದುಃಖದಿಂದಲೇ ಕಾಲಕಳೆಯುತ್ತಿದ್ದಾನೆ. ಯಾವನ ಧನುಷ್ಟೇಂಕಾರದಿಂದ ಶತ್ರುಗಳು ಕಂಪಿಸುತ್ತಿದ್ದರೋ–ಅಂತಹವನ ಮಧುರಗಾನದಿಂದ ಇಂದು ಅಂತಃಪುರದ ಸ್ತ್ರೀಯರು ಮುದಿತರಾಗಿದ್ದಾರೆ. ಯಾವನ ತಲೆಯಲ್ಲಿ ಸೂರ್ಯನಿಗೆ ಸಮಾನವಾದ ಕಿರೀಟವು ಶೋಭಿಸುತ್ತಿದ್ದಿತೋ–ಅಂತಹವನ ತಲೆಯಲ್ಲಿ ವಿಕೃತವಾದ ಕೇಶರಾಶಿಯಿದೆ. ಭೀಮಸೇನ! ಶತ್ರುಗಳಿಗೆ ಭಯವನ್ನುಂಟುಮಾಡುವ ದಿವ್ಯಧನುಸ್ಸನ್ನು ಧರಿಸುವ ಅರ್ಜುನನಿಂದು ವಿಕೃತವಾದ ಕೇಶರಾಶಿಯನ್ನು ಹೊಂದಿದವನಾಗಿ ವಿರಾಟರಾಜನ ಅಂತಃಪುರದ ಸ್ತ್ರೀಯರ ಮಧ್ಯದಲ್ಲಿ ನಿಂತಿರುವುದನ್ನು ನೋಡಿದೊಡನೆಯೇ ನನ್ನ ಮನಸ್ಸು ಸಂಕಟಕ್ಕೊಳಗಾಗುತ್ತದೆ. ಯಾವ ಮಹಾತ್ಮನಲ್ಲಿ ಸಮಸ್ತವಾದ ದಿವ್ಯಾಸ್ತ್ರಗಳೂ ಮೂರ್ತಿಮತ್ತಾಗಿ ನೆಲೆಸಿವೆಯೋ, ಯಾವನು ಸಕಲವಿದ್ಯೆಗಳಿಗೂ ಆಧಾರಭೂತನಾಗಿರುವನೋ ಅಂತಹ ಅರ್ಜುನನಿಂದು ನಪುಂಸಕನು ಧರಿಸುವ ಕರ್ಣಕುಂಡಲಗಳನ್ನು ಧರಿಸಿದ್ದಾನೆ. ಅಪ್ರತಿಮಪರಾಕ್ರಮಿಗಳೆನಿಸಿದ ಸಾವಿರಾರು ರಾಜಕುಮಾರರೂ ಯುದ್ಧದಲ್ಲಿ ಅರ್ಜುನನನ್ನು ಮುಟ್ಟಲೂ ಕೂಡ ಸಮರ್ಥರಾಗುತ್ತಿರಲಿಲ್ಲ. ತೀರವನ್ನು ಸಮುದ್ರವು ಮೀರದಿರುವಂತೆ ಅರ್ಜುನನನ್ನು ಯಾರೂ ಅತಿಕ್ರಮಿಸುತ್ತಿರಲಿಲ್ಲ. ಅಂತಹ ಅಪ್ರತಿಮಸಾಹಸಿ

ಯಾದ ಅರ್ಜುನನಿಂದು ತನ್ನ ವೇಷವನ್ನು ಮರೆಸಿಕೊಂಡು ವಿರಾಟನ ಅರ ಮನೆಯಲ್ಲಿ ಕನ್ಯೆಯರಿಗೆ ನಾಟ್ಯವಿದ್ಯೆಯನ್ನು ಹೇಳಿಕೊಡುತ್ತಾ ಅವರ ಪರಿ ಚಾರಕನಾಗಿದ್ದಾನೆ. ಯಾವನ ರಥಘೋಷದಿಂದ ಸ್ಥಾವರ-ಜಂಗಮ-ನದೀ-ನದ-ಪರ್ವತಗಳಿಂದ ಕೂಡಿರುವ ಈ ಮೇದಿನಿಯೇ ಕಂಪಿಸುತ್ತಿದ್ದಿತೋ ಮತ್ತು ಯಾವನು ಹುಟ್ಟಿದೊಡನೆಯೇ ಕುಂತಿಯು ತನ್ನ ಶೋಕವನ್ನು ತೊರೆ ದಳೋ–ಅಂತಹ ನಿನ್ನ ಅನುಜನಿಂದು ನನ್ನನ್ನು ಶೋಕಸಾಗರದಲ್ಲಿ ಮುಳುಗಿಸಿಬಿಟ್ಟಿದ್ದಾನೆ. ಭೀಮಸೇನ! ನಪುಂಸಕನು ಧರಿಸುವ ಅಲಂಕಾರ ವಸ್ತುಗಳಿಂದ ಭೂಷಿತನಾಗಿ, ಸ್ವರ್ಣಮಯವಾದ ಕರ್ಣಕುಂಡಲಗಳನ್ನೂ ಶಂಖದ ಬಳೆಗಳನ್ನೂ ಧರಿಸಿ ಧನಂಜಯನು ಬರುತ್ತಿರುವುದನ್ನು ನೋಡಿ ದೊಡನೆಯೇ ನನ್ನ ಮನಸ್ಸಿಗೆ ಬಹಳ ನೋವುಂಟಾಗುತ್ತದೆ. ವೀರ್ಯ-ಪರಾಕ್ರಮಗಳಲ್ಲಿ ಅರ್ಜುನನಿಗೆ ಸಮನಾದ ಧನುರ್ಧರನು ಈ ವಿಶ್ವದಲ್ಲಿಯೇ ಇಲ್ಲ. ಭೀಮಸೇನ! ಅಂತಹ ಅತುಲಪರಾಕ್ರಮಿಯಿಂದು ವಿರಾಟರಾಜನ ಅಂತಃಪುರದಲ್ಲಿ ಕನ್ಯೆಯರಿಂದ ಪರಿವೃತನಾಗಿ ಹಾಡುತ್ತಿರುತ್ತಾನೆ. ಧಾರ್ಮಿ ಕತೆಯಲ್ಲಿ, ಶೌರ್ಯದಲ್ಲಿ ಮತ್ತು ಸತ್ಯನಿಷ್ಠೆಯಲ್ಲಿ ಅರ್ಜುನನು ವಿಶ್ವದಲ್ಲಿಯೇ ಖ್ಯಾತಿಗಳಿಸಿದ್ದಾನೆ. ಅವನಲ್ಲಿರುವ ಧರ್ಮ, ಸತ್ಯ ಮತ್ತು ಶೌರ್ಯಗಳಿಗಾಗಿ ವಿಶ್ವದ ಜನರು ಅವನನ್ನು ಸಮ್ಮಾನಿಸುತ್ತಾರೆ. ಅಂತಹವನಿಂದು ನಪುಂಸಕ ವೇಷವನ್ನು ಧರಿಸಿರುವುದನ್ನು ನೋಡಿದರೆ ನನ್ನ ಮನಸ್ಸಿಗೆ ಬಹಳ ಖೇದವುಂಟಾಗುತ್ತದೆ. ಹೆಣ್ಣಾನೆಗಳ ಮಧ್ಯದಲ್ಲಿ ಮದೋದಕವನ್ನು ಸುರಿಸುತ್ತಾ ನಿಂತಿರುವ ಮದಗಜದಂತೆ–ವಿರಾಟರಾಜನ ಕನ್ಯೆಯರ ಮಧ್ಯದಲ್ಲಿ ದೇವರೂಪಿಯಾದ ಅರ್ಜುನನು ನಿಂತು ವಿರಾಟರಾಜನ ಸೇವೆಮಾಡುತ್ತಿರು ವುದನ್ನು ನೋಡಿದೊಡನೆಯೇ ನನ್ನ ಕಣ್ಣುಗಳು ಮಂಜಾಗಿ ದಿಕ್ಕೇ ತೋಚು ವುದಿಲ್ಲ. ಭೀಮಸೇನ! ತನ್ನ ಪ್ರೇಮಪುತ್ರನಾದ ಧನಂಜಯನಾಗಲೀ, ಜೂಜುಕೋರನಾದ ಕುರುವಂಶಪ್ರದೀಪನಾದ ಅಜಾತಶತ್ರುವಾಗಲೀ ಈ ವಿಧವಾದ ಕಷ್ಟಗಳಿಗೆ ಗುರಿಯಾಗಿದ್ದಾರೆಂಬ ವಿಷಯವು ಆರ್ಯೆಯಾದ ಕುಂತೀದೇವಿಗೆ ನಿಶ್ಚಯವಾಗಿಯೂ ತಿಳಿಯದು. (ಅವಳಿಗೇನಾದರೂ ಈ ವಿಷಯವು ತಿಳಿದುಬಿಟ್ಟಿದ್ದರೆ ಪ್ರಾಣವನ್ನೇ ಬಿಟ್ಟುಬಿಡುತ್ತಿದ್ದಳು.) ಪಾಂಡವ ಕನಿಷನಾದ ಸಹದೇವನು ಗೋಪಾಲಕನ ವೇಷವನ್ನು ಧರಿಸಿ ಗೋಶಾಲೆಯಲ್ಲಿ

ಇತರ ಗೋಪಾಲಕರೊಡನೆ ಮಾತನಾಡುತ್ತಿರುವುದನ್ನು ನೋಡಿದೊಡನೆಯೇ ನನ್ನ ಮುಖವು ಬಾಡಿ ಬಿಳುಪಾಗುತ್ತದೆ. ಸಹದೇವನ ಹಿಂದಿದ್ದ ಸ್ಥಿತಿ ಮತ್ತು ಈಗ ಅವನಿರುವ ದುಃಸ್ಥಿತಿ–ಇವುಗಳನ್ನು ಯೋಚಿಸುತ್ತಾ ನಾನು ರಾತ್ರಿಯನ್ನೆಲ್ಲಾ ನಿದ್ರೆಯಿಲ್ಲದೆಯೇ ಕಳೆದುಬಿಡುವೆನು. ಹೀಗಿರುವಾಗ ನನಗೆ ಸುಖ-ಶಾಂತಿಗಳೆಲ್ಲಿವೆ? ಭೀಮಸೇನ! ಸತ್ಯವಿಕ್ರಮನಾದ ಸಹದೇವನು ಮಾಡಿರುವ ಯಾವ ಅಪರಾಧಕ್ಕಾಗಿ ಈ ವಿಧವಾದ ಕಷ್ಟಕ್ಕೆ ಗುರಿಯಾಗಿರುವ ನೆಂಬುದನ್ನು ನಾನು ಎಷ್ಟು ಯೋಚಿಸಿದರೂ ತಿಳಿಯದವಳಾಗಿದ್ದೇನೆ. ನಿಮ್ಮೆಲ್ಲರಿಗೂ ಪರಮಪ್ರಿಯನಾದ, ಪುರುಷರ್ಷಭನಾದ ಸಹದೇವನು ಮತ್ಸ್ಯರಾಜನಿಂದ ನಿರ್ದೇಶಿತನಾಗಿ ಗೋಶಾಲೆಯಲ್ಲಿ ಕೆಲಸಮಾಡುತ್ತಿರು ವುದನ್ನು ನೋಡಿ ನಾನು ಬಹುವಾಗಿ ದುಃಖಿಸುತ್ತೇನೆ. ರಕ್ತವಸ್ತ್ರಗಳನ್ನು ಧರಿಸಿ ಗೋಪಾಲಕರನ್ನು ಕರೆದುಕೊಂಡು ಹೋಗುತ್ತಿರುವಾಗ ವಿರಾಟರಾಜನೇನಾ ದರೂ ಆಗಮಿಸಿದರೆ ಉದ್ವಿಗ್ನತೆಯಿಂದ ರಾಜನನ್ನು ನಮಸ್ಕರಿಸುವ ಸಹದೇವ ನನ್ನು ಕಂಡೊಡನೆಯೇ ನನಗೆ ಸಂಕಟದ ಉದ್ವೇಗದಿಂದ ಜ್ವರವೇ ಬಂದು ಬಿಡುತ್ತದೆ. ಆರ್ಯೆಯಾದ ಕುಂತಿಯು ಸಹದೇವನನ್ನು ಗೌರವಸ್ಥನೆಂದೂ, ಶೀಲವಂತನೆಂದೂ, ಸದ್ವೃತ್ತಿಯವನೆಂದೂ ಆಗಿಂದಾಗ್ಗೆ ಶ್ಲಾಘಿಸುತ್ತಲೇ ಇದ್ದಳು. ಅರಣ್ಯಕ್ಕೆ ಹೊರಟಾಗಲಂತೂ ಕುಂತಿಯು ಸಹದೇವನನ್ನು ಬಿಡಲೇ ಒಲ್ಲಳು. ಪುತ್ರವಾತ್ಸಲ್ಯದಿಂದ ಉದ್ವೇಜಿತಳಾದ ಕುಂತಿಯು ಅರಣ್ಯಕ್ಕೆ ಹೊರ ಡುವ ಸಮಯದಲ್ಲಿ ಸಹದೇವನನ್ನು ಬಾಚಿ-ತಬ್ಬಿಕೊಂಡು ಕಣ್ಣೀರಿಡುತ್ತಾ ನನ್ನನ್ನು ಕುರಿತು ಹೇಳಿದಳು :

**ಮಹಾಭಿಜನಸಮ್ಪನ್ನಃ ಶೀಲವಾನ್ವೃತ್ತವಾನಿತಿ ।**
**ಹ್ರೀನಿಷೇವೋ ಮಧುರವಾಗ್ಧಾರ್ಮಿಕಶ್ಚ ಪ್ರಿಯಶ್ಚ ಮೇ ।**
**ಸ ತೇಽರಣ್ಯೇಷು ವೋಢವ್ಯೋ ಯಾಜ್ಞಸೇನಿ ಕ್ಷಪಾಸ್ವಪಿ ॥೩೮॥**

**ಸುಕುಮಾರಶ್ಚ ಶೂರಶ್ಚ ರಾಜಾನಂ ಚಾಪ್ಯನುವ್ರತಃ ।**
**ಜ್ಯೇಷ್ಠಾಪಚಾಯಿನಂ ವೀರಂ ಸ್ವಯಂ ಪಾಞ್ಚಾಲಿ ಭೋಜಯೇ ॥೩೯॥**

"ಯಾಜ್ಞಸೇನಿ! ಸಹದೇವನು ಬಹಳ ನಾಚಿಕೆಯ ಸ್ವಭಾವದವನು. ಮಧುರವಾಗಿ ಮಾತನಾಡುವವನು. ಬಹಳ ಧಾರ್ಮಿಕನು. ನನಗೆ ಅತ್ಯಂತ

ಪ್ರಿಯನಾದವನು. ಅರಣ್ಯದಲ್ಲಿ ಹಗಲಿರುಳೆನ್ನದೇ ಸದಾಕಾಲದಲ್ಲಿಯೂ ಇವನ ಪಾಲನೆಯಲ್ಲಿ ನೀನು ವಿಶೇಷವಾದ ಲಕ್ಷ್ಯವಿಡಬೇಕು. ಸುಕುಮಾರನಾದ, ರಾಜನ ಹಿತಚಿಂತನೆಯಲ್ಲಿಯೇ ಸರ್ವದಾ ನಿರತನಾಗಿರುವ, ವೀರನಾದ, ಯುಧಿಷ್ಠಿರನ ಪರಮಭಕ್ತನಾಗಿರುವ ಸಹದೇವನಿಗೆ ನೀನೇ ಸ್ವತಃ ಅನುದಿನವೂ ಭೋಜನಮಾಡಿಸಬೇಕು.'

ನಮ್ಮ ಅತ್ತೆಯು ಹೇಳಿದ ಮಾತಿಗೆ ನಾನು ಸಮ್ಮತಿಸಿ ಹಾಗೆಯೇ ಮಾಡುವೆನೆಂದು ಆರ್ಯೆಗೆ ಸಮಾಧಾನವನ್ನು ಹೇಳಿದೆನು. ಆದರೆ ಈಗವನ ಸ್ಥಿತಿಯನ್ನಾದರೂ ನೋಡು, ಭೀಮಸೇನ!

ಸಹದೇವನು ಸದಾ ಪಶುಪಾಲನೆಯಲ್ಲಿಯೇ ನಿರತನಾಗಿರುತ್ತಾನೆ ಮತ್ತು ರಾತ್ರಿಯ ವೇಳೆಯಲ್ಲಿ ಕರುಗಳ ಚರ್ಮದಿಂದ ಮಾಡಿದ ಹಾಸಿಗೆಯಲ್ಲಿ ಮಲಗುತ್ತಾನೆ. ಯುದ್ಧವಿಶಾರದನಾದ ಸಹದೇವನ ದುಃಸ್ಥಿತಿಯನ್ನು ನೋಡಿ ನಾನು ಹೇಗೆತಾನೇ ಜೀವಿಸಿರಲಿ?

ರೂಪ, ಅಸ್ತ್ರವಿದ್ಯೆ ಮತ್ತು ಮೇಧಾಶಕ್ತಿ–ಇವು ಮೂರಕ್ಕೂ ಹೆಸರಾಂತ ನಾದವನು ಪಾಂಡವಚತುರ್ಥನಾದ ನಕುಲ. ಅಂತಹವನಿಂದು ವಿರಾಟ ರಾಜನ ಕುದುರೆಲಾಯದ ಯಜಮಾನನಾಗಿದ್ದಾನೆ. ಕಾಲದ ವೈಪರೀತ್ಯವನ್ನಾ ದರೂ ನೋಡು, ಭೀಮಸೇನ! ಧನುರ್ಧಾರಿಯಾದ ಯಾವ ನಕುಲನನ್ನು ನೋಡಿದೊಡನೆಯೇ ಶತ್ರುಸೈನ್ಯವು ಪಲಾಯನಮಾಡುತ್ತಿದ್ದಿತೋ ಅಂತಹ ವೀರನಿಂದು ಗ್ರಂಥಿಕನೆಂಬ ಹೆಸರನ್ನಿಟ್ಟುಕೊಂಡು ಮಹಾರಾಜನ ಸಮ್ಮುಖದಲ್ಲಿ ಕುದುರೆಗಳ ವೇಗವನ್ನು ಪ್ರದರ್ಶಿಸುತ್ತಿದ್ದುದನ್ನು ನೋಡಲು ಜನರ ಗುಂಪು ನೆರೆದಿದ್ದಿತು. ತೇಜಸ್ವಿಯಾದ, ಶೋಭಾಸಂಪನ್ನನಾದ ನಕುಲನು ಮತ್ಸ್ಯರಾಜನ ಸಮೀಪದಲ್ಲಿ ಸೇವಕನೋಪಾದಿಯಲ್ಲಿ ನಿಂತು, ಕುದುರೆಗಳನ್ನು ನಿಲ್ಲಿಸಿ, ಅವುಗಳ ಗುಣ-ಲಕ್ಷಣಗಳನ್ನು ವಿವರಿಸುತ್ತಿದ್ದು ದನ್ನು ನಾನೇ ನೋಡಿದೆನು. ಮನಮೋಹನಾಕಾರನಾದ ನಕುಲನ ಈ ಸ್ಥಿತಿ ಯನ್ನು ನೋಡಿ ನನ್ನ ಮನಸ್ಸು ಬಹಳವಾಗಿ ನೊಂದಿರುವುದು. ಈ ರೀತಿ ಯಾಗಿ ನಾನು ನೂರಾರು ವಿಧವಾದ ದುಃಖಗಳಿಗೀಡಾಗಿರುವೆನು. ಹೀಗಿರು

ವಾಗ ನಾನು ಸುಖಿಯಾಗಿರುವೆನೆಂದು ನೀನು ಹೇಗೆತಾನೇ ಭಾವಿಸುವೆ? ಈ ಎಲ್ಲ ದುಃಖಗಳಿಗೂ ಯುಧಿಷ್ಠಿರನೇ ಕಾರಣನು. ನಾನು ಈಗ ವಿವರಿಸಿದ ದುಃಖಗಳಿಗೂ ಮಿಗಿಲಾದ ದುಃಖವನ್ನು ನಿನ್ನೊಡನೆ ಹೇಳುವೆನು ಕೇಳು. ಭೀಮಸೇನ!

**ಯುಷ್ಮಾಸು ಧ್ರಿಯಮಾಣೇಷು ದುಃಖಾನಿ ವಿವಿಧಾನ್ಯುತ ।**
**ಶೋಚಯನ್ತಿ ಶರೀರಂ ಮೇ ಕಿಂ ನು ದುಃಖಮತಃ ಪರಮ್ ॥**

ಮಹಾಪರಾಕ್ರಮಿಗಳಾದ ನೀವುಗಳು ಬದುಕಿರುವಾಗಲೇ ನಾನಾವಿಧವಾದ ದುಃಖಗಳು ನನ್ನ ಶರೀರವನ್ನು ಪ್ರತಿನಿಮಿಷದಲ್ಲಿಯೂ ಶೋಷಿಸುತ್ತಿವೆ. ಇದಕ್ಕಿಂತಲೂ ಮಿಗಿಲಾದ ದುಃಖವು ಯಾವುದು ತಾನೇ ಇರುವುದು, ಭೀಮಸೇನ!"

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಕೀಚಕವಧಪರ್ವ (ಮುಂದುವರಿದಿದೆ.)

## ದ್ರೌಪದಿಯು ಭೀಮಸೇನನಿಗೆ ತನ್ನ ದುಃಖವನ್ನು ವಿವರಿಸಿ ಹೇಳಿದುದು

ಜನಮೇಜಯ! ದ್ರೌಪದಿಯು ಮುಂದುವರಿದು ಹೇಳುತ್ತಾಳೆ :

"ಭೀಮಸೇನ! ಅಕ್ಷಧೂರ್ತನಾದ ಯುಧಿಷ್ಠಿರನ ಕಾರಣದಿಂದಾಗಿ ಪಟ್ಟಮಹಿಷಿ-ಎನಿಸಿಕೊಂಡ ನಾನು ಸೈರಂಧ್ರೀವೇಷವನ್ನು ಧರಿಸಿ ಈ ರಾಜನ ಅರಮನೆಯಲ್ಲಿ ರಾಣಿಯು ಹೇಳುವ ಕೆಲಸಗಳನ್ನು ಮಾಡುತ್ತಾ ಅವಳ ಸ್ನಾನಕ್ಕೆ ನೀರನ್ನೂ ಸಿದ್ಧಮಾಡಿಕೊಡುತ್ತಾ ಕಾಲಕಳೆಯುತ್ತಿದ್ದೇನೆ. ಪರಂತಪನೇ! ರಾಜಪುತ್ರಿಯಾದ ನನ್ನ ತೀವ್ರವಾದ ದುರ್ದೆಸೆಯನ್ನಾದರೂ ನೋಡು. ರಾಜಪುತ್ರಿಯಾದ ನಾನು ಇತರರ ಸೇವೆಮಾಡಬೇಕಾಗಿರುವುದು. ಪ್ರಾಪ್ತವಾಗುವ ದುಃಖಕ್ಕೆ ಅಂತ್ಯವೆಂಬುದು ಇದ್ದೇ ಇರುವುದೆಂಬ ನಿಶ್ಚಯದಿಂದಾಗಿ ನಾನಾದರೂ ಆತ್ಮೋದ್ಧಾರದ ಕಾಲವನ್ನು ನಿರೀಕ್ಷಿಸುತ್ತಾ ದಿನಗಳನ್ನು ಕಳೆಯುತ್ತಿದ್ದೇನೆ.

**ಅನಿತ್ಯಾ ಕಿಲ ಮರ್ತ್ಯಾನಾಮರ್ಥಸಿದ್ಧಿರ್ಜಯಾಜಯೌ ।**
**ಇತಿ ಕೃತ್ವಾ ಪ್ರತೀಕ್ಷಾಮಿ ಭರ್ತೃಣಾಮುದಯಂ ಪುನಃ ॥೩॥**

ಮಾನವರಿಗೆ ಬಡತನ-ಸಿರಿತನ, ಜಯ-ಅಪಜಯ–ಇವುಗಳು ಅನಿತ್ಯವೆಂದು ಹೇಳಲ್ಪಟ್ಟಿರುವುದರಿಂದ ನನ್ನ ಪತಿಗಳ ಕಷ್ಟಗಳು ಪರಿಹಾರವಾಗಿ ಶುಭೋದಯವಾಗಬಹುದೆಂದು ಭಾವಿಸಿ ಕಾಲವನ್ನು ಪ್ರತೀಕ್ಷೆಮಾಡುತ್ತಿದ್ದೇನೆ, ಭೀಮಸೇನ!

**ಚಕ್ರವತ್ಪರಿವರ್ತನ್ತೇ ಹ್ಯರ್ಥಾಶ್ಚ ವ್ಯಸನಾನಿ ಚ ।**
**ಇತಿ ಕೃತ್ವಾ ಪ್ರತೀಕ್ಷಾಮಿ ಭರ್ತೃಣಾಮುದಯಂ ಪುನಃ ॥೪॥**

ಐಶ್ವರ್ಯವೇ ಆಗಲೀ, ದುಃಖವೇ ಆಗಲೀ–ಚಕ್ರದಂತೆ ಸುತ್ತುತ್ತಿರುತ್ತದೆ. ಐಶ್ವರ್ಯವು ಚಿರಸ್ಥಾಯಿಯಾಗಿ ಉಳಿಯುವುದಿಲ್ಲ. ಅದರಂತೆಯೇ ದುಃಖವೂ ಚಿರಸ್ಥಾಯಿಯಾಗಿ ಉಳಿಯುವುದಿಲ್ಲ. ಇಂದು ಐಶ್ವರ್ಯವಂತನಾಗಿರುವವನು ಕೆಲವಾರು ವರ್ಷಗಳಲ್ಲಿಯೇ ದರಿದ್ರನಾಗಬಹುದು. ಇಂದು ದರಿದ್ರನಾಗಿರುವವನು ಅದೃಷ್ಟವೊದಗಿದರೆ ಮರುದಿನವೇ ಐಶ್ವರ್ಯವಂತನೂ ಆಗಬಹುದು. ಆದುದರಿಂದ ಧನಿಕತ್ವ-ದರಿದ್ರತ್ವಗಳು ಅನಿತ್ಯವಾದುವುಗಳು. 'ಮನುಷ್ಯನಿಗೆ ಸುಖ-ದುಃಖಗಳು ಯಾವಾಗ ಹೇಗೆ ಒದಗುತ್ತವೆ?'–ಎಂಬುದನ್ನು ಹೇಳುವ ಸಾಧ್ಯತೆಯೇ ಇಲ್ಲ. ದುಃಖದ ಅಂತ್ಯದಲ್ಲಿ ಸುಖ, ಸುಖದ ಅಂತ್ಯದಲ್ಲಿ ದುಃಖವೆಂಬುದು ಪ್ರಕೃತಿಯ ನಿಯಮವಾಗಿರುತ್ತದೆ. ಇದೇ ಪ್ರಕೃತಿಯ ನಿಯಮವೆಂದು ಭಾವಿಸಿ, ನನ್ನ ಪತಿಗಳ ಶುಭೋದಯವನ್ನು ಪ್ರತೀಕ್ಷಿಸುತ್ತಿದ್ದೇನೆ.

**ಯ ಏವ ಹೇತುರ್ಭವತಿ ಪುರುಷಸ್ಯ ಜಯಾವಹಃ ।**
**ಪರಾಜಯೇ ಚ ಹೇತುಶ್ಚ ಸ ಇತಿ ಪ್ರತಿಪಾಲಯೇ ॥೫॥**

ಯಾವುದೋ ಒಂದು ಕಾಲವು ಅಥವಾ ವಿಷಯವು ಮನುಷ್ಯನಿಗೆ ಒಮ್ಮೆ ಜಯಕ್ಕೂ ಕಾರಣವಾಗಬಹುದು ; ಅದೇ ಕಾಲವೇ ಅಥವಾ ವಿಷಯವೇ ಮತ್ತೊಮ್ಮೆ ಅಪಜಯಕ್ಕೂ ಕಾರಣವಾಗಬಹುದು. ಈ ವಿಷಯವನ್ನೇ ಮನಸ್ಸಿನಲ್ಲಿ ತರ್ಕಿಸುತ್ತಾ ನಾನು ಶುಭಕಾಲವನ್ನು ಪ್ರತೀಕ್ಷೆಮಾಡುತ್ತಿದ್ದೇನೆ.

(ಒಂದು ಸಮಯದಲ್ಲಿ ಜೂಜಾಟದಿಂದ–ಟಗರುಕಾಳಗ, ಕುದುರೆ ಜೂಜು, ಪಗಡೆ ಆಟ–ಇತ್ಯಾದಿಗಳಿಂದ ಒಬ್ಬನು ಧನಿಕನಾಗಬಹುದು. ಮತ್ತೊಂದು ಸಮಯದಲ್ಲಿ ಅದೇ ಜೂಜಾಟದಿಂದ ಅವನು ಸರ್ವಸ್ವವನ್ನೂ ಕಳೆದುಕೊಂಡು ದರಿದ್ರನೂ ಆಗಬಹುದು. ವ್ಯಾಪಾರದಿಂದ ಒಮ್ಮೆ ಧನಿಕನಾದವನು ಅದೇ ವ್ಯಾಪಾರದಿಂದಲೇ ಅವನು ಮತ್ತೊಮ್ಮೆ ದರಿದ್ರನಾಗಲೂ ಬಹುದು. ಜೂಜಾಟದಿಂದ ಕಳೆದುಕೊಂಡ ರಾಜ್ಯವನ್ನು ಪುನಃ ಜೂಜಾಟದಿಂದಲೇ ಗೆಲ್ಲಬಹುದೆಂಬ ಆಶಯವೂ ದ್ರೌಪದಿಗಿದ್ದಂತೆ ಕಾಣುತ್ತದೆ. ನಲರಾಜನ ವಿಷಯದಲ್ಲಿ ಈ ಮಾತು ನಿಶ್ಚಯವಾಯಿತು. ಪಗಡೆಯಾಡಿ ಕಳೆದುಕೊಂಡ ರಾಜ್ಯವನ್ನು ನಲನು ಪುನಃ ಪಗಡೆಯಾಟದಿಂದಲೇ ಗೆದ್ದುಕೊಂಡನು.)

ಈ ದುಃಖದ ಕಾರಣದಿಂದಾಗಿ ನಾನು ಸತ್ತೇಹೋಗಿರುವೆನೆಂದು ನೀನೇಕೆ ಭಾವಿಸುತ್ತಿಲ್ಲ. ಭೀಮಸೇನ? ನಾನು ಬದುಕಿದ್ದರೂ ಮೃತಪ್ರಾಯಳೇ ಆಗಿರುತ್ತೇನೆ.

ನನ್ನ ಗಂಡಂದಿರು ಕಷ್ಟಪಡುತ್ತಿದ್ದರೆ ಅದಕ್ಕೆ ಪರಿಹಾರವನ್ನು ಕಾಣದವಳಾಗಿದ್ದೇನೆ. ನನಗೊದಗುತ್ತಿರುವ ಉಪದ್ರವಗಳನ್ನೂ ದೂರಮಾಡಿಕೊಳ್ಳಲು ಅಸಮರ್ಥಳಾಗಿದ್ದೇನೆ. ಆದುದರಿಂದ ನಾನು ಮೃತಪ್ರಾಯಳೇ ಅಲ್ಲವೇ?

**ದತ್ತ್ವಾ ಯಾಚನ್ತಿ ಪುರುಷಾ ಹತ್ವಾ ವಧ್ಯನ್ತಿ ಚಾಪರೇ ।**
**ಪಾತಯಿತ್ವಾ ಚ ಪಾತ್ಯನ್ತೇ ಪರೈರಿತಿ ಚ ಮೇ ಶ್ರುತಮ್ ॥೬॥**

ಭೀಮಸೇನ! ದಾನಕೊಡುವವರು ಒಮ್ಮೆ ಯಾಚನೆಮಾಡಲೂ ಬಹುದು ಅಥವಾ ಯಾಚನೆಮಾಡುವವರು ಒಮ್ಮೆ ದಾನಕೊಡಲೂಬಹುದು. ವಧಿಸುವ ಸ್ವಭಾವದವನನ್ನು ಮತ್ತೊಬ್ಬನು ವಧಿಸುವನು. (ಅನೇಕ ಕೊಲೆಗಳನ್ನು ಮಾಡಿದವನಿಗೆ ಎಂದಾದರೊಂದುದಿನ ಮರಣ ದಂಡನೆಯಾಗುವುದಿಲ್ಲವೇ?) ಹಲವು ಬಾರಿ ಯುದ್ಧಗಳಲ್ಲಿ ಅಥವಾ ಮಲ್ಲಯುದ್ಧಗಳಲ್ಲಿ ಗೆದ್ದವನು ಒಮ್ಮೆ ಸೋತು ಕೆಳಗೆ ಬೀಳಲೂಬಹುದು. ಅಥವಾ

ಮತ್ತೊಬ್ಬನನ್ನು ಸೋಲಿಸಿದಾಗ ಗೆದ್ದುಬಿಟ್ಟೆನೆಂದು ಹಿಗ್ಗುವವನನ್ನು ಮರು ಕ್ಷಣದಲ್ಲಿಯೇ ಮಗದೊಬ್ಬನು ಕೆಳಗೆ ಬೀಳಿಸಬಹುದು. ಆದುದರಿಂದ ಐಶ್ವರ್ಯವಾಗಲೀ, ಜಯವಾಗಲೀ ಶಾಶ್ವತವಾಗಿ ಉಳಿಯತಕ್ಕುವುಗಳಲ್ಲ. ಈ ವಿಷಯವನ್ನು ನಾನು ಹಿರಿಯರಿಂದ ಕೇಳಿ ತಿಳಿದಿರುತ್ತೇನೆ, ಭೀಮಸೇನ!

(ದೈವಕ್ಕೆ ಸಾಧಿಸಲಾಗದ ಕಾರ್ಯವೇ ಇಲ್ಲ. ದೈವೇಚ್ಛೆಯಿದ್ದರೆ ಏನನ್ನು ಬೇಕಾದರೂ ಸಾಧಿಸಬಹುದು. ದೈವದ ಕೃಪೆಯೊಂದಿದ್ದರೆ ಮೂಕನು ವಾಚಾಳಿಯಾಗುತ್ತಾನೆ. ಹೆಳವನು ಪರ್ವತವನ್ನು ಹತ್ತಲೂ ಸಮರ್ಥ ನಾಗುತ್ತಾನೆ. ದೈವದ ಇಚ್ಛೆಯನ್ನು ಮೀರಿ ನಡೆಯುವ ಸಾಧ್ಯತೆಯೇ ಇಲ್ಲ. ಮನುಷ್ಯಪ್ರಯತ್ನಗಳು ಅನೇಕಸಂದರ್ಭಗಳಲ್ಲಿ ನಿಷ್ಫಲವಾಗುವುವು. ಆದರೆ ಅದನ್ನು ಮಾನವನು ದೈವೇಚ್ಛೆಯೆಂದೇ ಭಾವಿಸಲಾರನು. ಕಾರ್ಯವಾಗದೇ ಇದ್ದುದಕ್ಕಾಗಿ ವ್ಯಥೆಪಡುತ್ತಾನೆ. ದೈವದ ವಿಚಿತ್ರವರ್ತನೆಯ ವಿಷಯದಲ್ಲಿ ಪಟ್ಟಮಹಿಷಿಯಾಗಿದ್ದ ದ್ರೌಪದಿಯು ಪರಿಚಾರಿಕೆಯಾಗಿ ಕೆಲಸಮಾಡಿದಳೆಂಬುದಕ್ಕಿಂತಲೂ ಹೆಚ್ಚಿನ ನಿದರ್ಶನದ ಅವಶ್ಯಕತೆಯಿಲ್ಲ. ತನಗೆ ಪ್ರಾಪ್ತವಾಗಿರುವ ಕಷ್ಟಕ್ಕಾಗಿ ದ್ರೌಪದಿಯು ಯುಧಿಷ್ಠಿರನನ್ನು ಬಾರಿ-ಬಾರಿಗೂ ನಿಂದಿಸುತ್ತಿದ್ದರೂ ದೈವಸಂಕಲ್ಪವೇ ಹೆಚ್ಚಿನ ಮಹತ್ತ್ವ ವುಳ್ಳದ್ದೆಂಬ ನಿರ್ಧಾರಕ್ಕೆ ಅವಳೂ ಬರಲೇಬೇಕಾಯಿತು. ಇದು ನಮ್ಮ ನಿತ್ಯಜೀವನದಲ್ಲಿಯೂ ಇರುವುದು. ನಮ್ಮ ಕಷ್ಟ-ಸುಖಗಳಿಗೆ ಇತರರು ನಿಮಿತ್ತಮಾತ್ರರಾಗುತ್ತಾರೆ. ಅದೃಷ್ಟಾನುಸಾರವಾಗಿ–ಎಂದರೆ ಹಿಂದೆ ನಾವೇ ಮಾಡಿದ ಕರ್ಮಾನುಸಾರವಾಗಿ ನಮ್ಮ ಕಷ್ಟ-ಸುಖಗಳು ಪರಿವರ್ತನೆ ಹೊಂದುತ್ತಿರುತ್ತವೆ. ಆದರೆ ನಮಗೆ ಕಷ್ಟಬಂದಾಗ ನಾವದಕ್ಕೆ ಮತ್ತೊಬ್ಬರನ್ನು ಗುರಿಮಾಡುತ್ತೇವೆ. ಅದರಿಂದಲೇ ದ್ವೇಷಾಸೂಯೆಗಳು ಬೆಳೆಯಲು ಕಾರಣವಾಗಿ ನಮ್ಮ ಮನಸ್ಸು ಕಲುಷಿತವಾಗುತ್ತದೆ. ಸನ್ಮಾರ್ಗದಲ್ಲಿ ತನ್ನ ಪ್ರಯತ್ನವನ್ನು ಮುಂದುವರಿಸುತ್ತಾ ಮಧ್ಯೆ ಒದಗಬಹುದಾದ ಸುಖ-ದುಃಖಗಳು ಅದೃಷ್ಟಾಯತ್ತವೆಂದು ಭಾವಿಸಿ ಸುಖ-ದುಃಖಗಳೆರಡರ ಹೊರೆಯನ್ನೂ ದೈವಕ್ಕೆ ವಹಿಸಿಕೊಡುವವನು ಪರಮಸುಖಿಯಾಗುತ್ತಾನೆ. ದ್ರೌಪದಿಯೂ ಇದೇ ಅಭಿಪ್ರಾಯದಿಂದ ಮುತ್ತಿನಂತಹ ಈ ಮಾತ ನ್ನಾಡುತ್ತಾಳೆ.)

**ನ ದೈವಸ್ಯಾತಿಭಾರೋಽಸ್ತಿ ನ ಚೈವಾಸ್ಯಾತಿವರ್ತನಮ್ ।**
**ಇತಿ ಚಾಪ್ಯಾಗಮಂ ಭೂಯೋ ದೈವಸ್ಯ ಪ್ರತಿಪಾಲಯೇ ॥೭॥**

ಭೀಮಸೇನ! ದೈವಕ್ಕೆ ದುಷ್ಕರವಾದುದು ಯಾವುದೂ ಇಲ್ಲ. ದೈವವನ್ನು ಅತಿಕ್ರಮಿಸಲು ಯಾರಿಂದಲೂ ಸಾಧ್ಯವಿಲ್ಲ. ದೈವೇಚ್ಛೆಯಿಂದ ನಮ್ಮ ಸುಖ-ಸಂಪತ್ತುಗಳ ಪುನರಾಗಮನವಾಗಬಹುದೆಂದಾಶಿಸಿ ದೈವವನ್ನೇ ನಾನು ಸದಾ ಸ್ಮರಿಸುತ್ತಿರುತ್ತೇನೆ.

**ಸ್ಥಿತಂ ಪೂರ್ವಂ ಜಲಂ ಯತ್ರ ಪುನಸ್ತತ್ರೈವ ಗಚ್ಛತಿ ।**
**ಇತಿ ಪರ್ಯಾಯಮಿಚ್ಛನ್ತೀ ಪ್ರತೀಕ್ಷೇ ಉದಯಂ ಪುನಃ ॥೮॥**

ಒಂದು ಕೆರೆಯಲ್ಲಿ ಮಳೆಗಾಲದಲ್ಲಿ ಪೂರ್ಣವಾಗಿ ನೀರಿರುತ್ತದೆ. ಕಾಲಾನುಕ್ರಮವಾಗಿ ಆ ಕೆರೆಯಲ್ಲಿ ನೀರು ಕಡಿಮೆಯಾಗುತ್ತದೆ. ಪುನಃ ಮಳೆಗಾಲವು ಬಂದಿತೆಂದರೆ ಅಲ್ಲಿ ನೀರು ಸಮೃದ್ಧವಾಗಿರುತ್ತದೆ. ( ಹಿಂದೆ ಎಲ್ಲಿ ( ತಗ್ಗಿನ ಪ್ರದೇಶದಲ್ಲಿ ) ನೀರಿದ್ದಿತೋ, ಪುನಃ ಅಲ್ಲಿಗೇ ಕಾಲಾನುಕ್ರಮದಲ್ಲಿ ನೀರು ಹರಿದುಬರುತ್ತದೆ.) ನೀರಿರುವುದು ಮತ್ತು ನೀರಿಲ್ಲದೆಯೇ ಇರುವುದು–ಈ ಎರಡೂ ಶಾಶ್ವತವಲ್ಲ. ಪರ್ಯಾಯವಾಗಿ ಇದು ನಡೆಯುತ್ತಿರುತ್ತದೆ. ಅಂತೆಯೇ ನಾನಾದರೂ ನಮ್ಮ ಜೀವನದಲ್ಲಿಯೂ ಸುಖ-ದುಃಖಗಳ ಪರ್ಯಾಯವುಂಟಾಗುವುದೆಂದು ಭಾವಿಸಿ ಶುಭೋದಯವನ್ನು ಪ್ರತೀಕ್ಷೆಮಾಡುತ್ತಿದ್ದೇನೆ.

**ದೈವೇನ ಕಿಲ ಯಸ್ಯಾರ್ಥಃ ಸುನೀತೋಽಪಿ ವಿಪದ್ಯತೇ ।**
**ದೈವಸ್ಯ ಚಾಗಮೇ ಯತ್ನಸ್ತೇನ ಕಾರ್ಯೋ ವಿಜಾನತಾ ॥೯॥**

ಒಂದು ಕೆಲಸವನ್ನು ಪ್ರಯತ್ನಪೂರ್ವಕವಾಗಿ ಬುದ್ಧಿವಂತಿಕೆಯಿಂದ ಸುವ್ಯವಸ್ಥಿತವಾಗಿಯೇ ಮಾಡಿರಬಹುದು. ಆದರೆ ಫಲವು ಸಿಕ್ಕಬೇಕಾದ ಸಮಯದಲ್ಲಿ ದೈವದ ಕೃಪೆಯೊಂದಿಲ್ಲದಿದ್ದರೆ ಯಾವುದಾದರೂ ಕಾರಣದಿಂದ ಮಾಡಿದ ಕೆಲಸಗಳೆಲ್ಲವೂ ಹಾಳಾಗಿಯೇ ಹೋಗುತ್ತವೆ. ಆರು ಪ್ರಯತ್ನಗಳು ಮನುಷ್ಯನದಾದರೂ ಫಲವು ಮಾತ್ರ ಏಳನೆಯದಾದ ದೈವ ಚಿಂತನೆಗೇ ಅಥವಾ ದೈವೇಚ್ಛೆಗೇ ಸೇರಿರುತ್ತದೆ. ಆದುದರಿಂದ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಲಿಚ್ಛಿಸುವವನು ಪ್ರಯತ್ನಗಳನ್ನೂ ಮಾಡಿ ದೈವಕ್ಕೂ

ಮೊರೆಯಿಡುತ್ತಿರಬೇಕು. ದೈವದ ಕೃಪೆಯನ್ನೂ ಪಡೆಯಲು ಸತತವಾಗಿ ಪ್ರಯತ್ನಿಸಬೇಕು.

ಭೀಮಸೇನ! ನಾನು ನಿನಗೆ ಈ ಮಾತುಗಳನ್ನು ಹೇಳುತ್ತಿರುವುದರಿಂದ ಯಾವ ಪ್ರಯೋಜನವಾಗುವುದೆಂಬುದೂ ನನಗೆ ತಿಳಿಯದು. ನೀನು ಕೇಳಿದುದಕ್ಕೆ ನಾನು ಹೇಳುತ್ತಿದ್ದೇನೆ. ಮುಂದೆಯೂ ನನ್ನ ಮನಸ್ಸಿನಲ್ಲಿರುವುದನ್ನು ಹೇಳಿಬಿಡುತ್ತೇನೆ, ಕೇಳು :

**ಮಹಿಷೀ ಪಾಣ್ಡುಪುತ್ರಾಣಾಂ ದುಹಿತಾ ದ್ರುಪದಸ್ಯ ಚ ।**
**ಇಮಾಮವಸ್ಥಾಂ ಸಮ್ಪ್ರಾಪ್ತಾ ಮದನ್ಯಾ ಕಾ ಜಿಜೀವಿಷೇತ್ ॥೧೫॥**

ರಾಜಕುಮಾರ! ನಾನು ಪಾಂಡುವಿನ ಪುತ್ರರೈವರ ಭಾರ್ಯೆ ; ಪಟ್ಟಮಹಿಷಿ. ರಾಜಾಧಿರಾಜನಾದ ದ್ರುಪದನ ಮಗಳು. ಅಂತಹವಳಿಂದು ಸುದೇಷ್ಣೆಯ ಪರಿಚಾರಿಕೆಯಾಗಿ ಈ ದುರವಸ್ಥೆಯಲ್ಲಿದ್ದೇನೆ. ಆದರೂ ಬದುಕಿದ್ದೇನೆ. ನನ್ನನ್ನು ಬಿಟ್ಟು ಬೇರೆ ಯಾರಾದರೂ ಆಗಿದ್ದರೆ ಖಂಡಿತವಾಗಿಯೂ ಬದುಕಿರುತ್ತಿರಲಿಲ್ಲ. ಇಂದು ನನಗಾದ ಕ್ಲೇಶವು, ನನಗಾದ ಅವಮಾನವು ಕುರು-ಪಾಂಚಾಲರೆಲ್ಲರಿಗೂ ಸೇರಿದ್ದಾಗಿದೆ. ಅವರೆಲ್ಲರನ್ನೂ ಅಪಮಾನಗೊಳಿಸಿದಂತಾಗಿದೆ. ನನಗೆ ಅಣ್ಣ-ತಮ್ಮಂದಿರಿದ್ದಾರೆ ; ಮಾವಂದಿರಿದ್ದಾರೆ ; ಸಾವಿರಾರು ಮಂದಿ ಬಂಧು-ಬಾಂಧವರಿದ್ದಾರೆ. ಅವರೆಲ್ಲರ ಮಧ್ಯದಲ್ಲಿ ಸುಖದಿಂದಿರಬೇಕಾಗಿದ್ದ ನಾನಿಂದು ದುಃಖದ ಮಡುವಿನಲ್ಲಿ ಬಿದ್ದಿರುತ್ತೇನೆ. ನನ್ನಂತೆ ಇಷ್ಟು ಬಂಧುಗಳಿದ್ದೂ ಕಷ್ಟಪಡುತ್ತಿರುವವರು ಮತ್ತಾರಿದ್ದಾರೆ? ಭೀಮಸೇನ!

**ನೂನಂ ಹಿ ಬಾಲಯಾ ಧಾತುರ್ಮಯಾ ವೈ ವಿಪ್ರಿಯಂ ಕೃತಮ್ ।**
**ಯಸ್ಯ ಪ್ರಸಾದಾದ್ದುರ್ನೀತಂ ಪ್ರಾಪ್ತಾಸ್ಮಿ ಭರತರ್ಷಭ ॥**

ಭರತರ್ಷಭನೇ! ನಿಶ್ಚಯವಾಗಿಯೂ ನಾನು ಬಾಲ್ಯದಲ್ಲಿ ದೈವಕ್ಕೆ ಮಹತ್ತರವಾದ ಅಪರಾಧವನ್ನೇ ಮಾಡಿದ್ದಿರಬೇಕು. ಅದರ ಫಲವಾಗಿಯೇ ನಾನಿಂದು ಈ ದುಃಸ್ಥಿತಿಯನ್ನು ಅನುಭವಿಸುತ್ತಿದ್ದೇನೆ. ನನ್ನ ಶರೀರದ ಅವಸ್ಥೆಯನ್ನಾದರೂ ನೋಡು, ಪಾಂಡುಪುತ್ರ! ಎಷ್ಟು ಬಾಡಿಹೋಗಿ ಬಿಳುಪಾಗಿದೆ? ನನಗೆ ಈ ಸ್ಥಿತಿಯು, ಈ ವಿಧವಾದ ಸಂಕಟವು, ಬಹು

ದುಃಖಕರವಾಗಿದ್ದ ವನವಾಸದ ಸಮಯದಲ್ಲಿಯೂ ಇರಲಿಲ್ಲ. ಭೀಮಸೇನ! ನಾನು ಇಂದ್ರಪ್ರಸ್ಥದಲ್ಲಿದ್ದಾಗ ಎಷ್ಟು ಸುಖದಲ್ಲಿದ್ದೆನೆಂಬುದನ್ನು ನೀನೇ ಬಲ್ಲೆ. ಅಂತಹವಳಾದ ನಾನಿಂದು ಈ ರಾಣಿಯ ಸೇವಕಿಯಾಗಿ ದುಃಖದಲ್ಲಿ ಮುಳುಗಿರುವೆನು. ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲ.

ಮಹಾಬಾಹುವಾದ, ಮಹಾಧನುಷ್ಮಂತನಾದ, ಮಹಾಪರಾಕ್ರಮಿಯಾದ ಅರ್ಜುನನಿಂದು ಬೂದಿಮುಚ್ಚಿದ ಕೆಂಡದಂತೆ–ನಷ್ಟತೇಜಸ್ಕನಾಗಿದ್ದಾನೆ. ಇದನ್ನೇ ನಾನು ದೈವದ ವಿಚಿತ್ರಗತಿಯೆಂದು ಭಾವಿಸುತ್ತೇನೆ. ಇದು ದೈವದ ಲೀಲೆಯೇ ಹೊರತು ಮತ್ತೇನೂ ಅಲ್ಲ, ಭೀಮಸೇನ!

**ಅಶಕ್ಯಾ ವೇದಿತುಂ ಪಾರ್ಥ ಪ್ರಾಣಿನಾಂ ವೈ ಗತಿರ್ನರೈಃ ।**
**ವಿನಿಪಾತಮಿಮಂ ಮನ್ಯೇ ಯುಷ್ಮಾಕಂ ಹ್ಯವಿಚಿನ್ತಿತಮ್ ॥೧೮॥**

ಪ್ರಾಣಿಗಳಿಗೆ ಮುಂದಾಗುವ ಆಗು-ಹೋಗುಗಳನ್ನು ಮಾನವನು ತಿಳಿಯುವ ಸಾಧ್ಯತೆಯೇ ಇಲ್ಲ. ಪಾಂಡುಪುತ್ರ! ಇಂದು ನಿಮಗೆ ಪ್ರಾಪ್ತವಾಗಿರುವ ದುರ್ಗತಿಯನ್ನು ಯಾರೊಬ್ಬರಿಂದಲೂ ಊಹಿಸಲೂ ಕೂಡ ಸಾಧ್ಯವಿರಲಿಲ್ಲ. ಇಂದ್ರಪ್ರಸ್ಥದಲ್ಲಿ ಮಹೇಂದ್ರನಿಗೆ ಸಮಾನವಾದ ವೈಭವದಲ್ಲಿದ್ದವನಿಂದು ವಿರಾಟರಾಜನ ಸೇವಕನಾಗಿ ಜೀವನವನ್ನು ನಡೆಸುವನೆಂದು ಯಾರಿಂದಲಾದರೂ ಊಹಿಸಲು ಕೂಡ ಸಾಧ್ಯವೇ? ರಣಧೀರರಾದ ಪಂಚಪಾಂಡವರ ಪತ್ನಿಯು ಸುದೇಷ್ಣೆಯ ದಾಸಿಯಾಗುವಳೆಂದು ಬಗೆದಿದ್ದವರು ಯಾರು? ಆದುದರಿಂದ ಒಬ್ಬ ಮನುಷ್ಯನಿಗೆ ಉತ್ತರಕ್ಷಣದಲ್ಲೇನಾಗುವುದೆಂಬುದನ್ನು ಯಾರೂ ಹೇಳಲಾರರು.

ಭೀಮಸೇನ! ಇಂದ್ರಪ್ರಸ್ಥದಲ್ಲಿದ್ದಾಗ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ನೀವುಗಳು ಅನುದಿನವೂ ನನ್ನ ಮುಖವನ್ನು ನೋಡಲು ಅಪೇಕ್ಷಿಸುತ್ತಿದ್ದಿರಿ. ನನ್ನ ಮನಸ್ಸಿನಂತೆ ನಡೆಯುತ್ತಿದ್ದಿರಿ. ಇಂದಾದರೋ ಸತ್ಕುಲಪ್ರಸೂತಳಾದ ನಾನು ನನಗಿಂತಲೂ ಕೀಳಾದವರ ಮುಖಗಳನ್ನು ಅನುದಿನವೂ ನೋಡಬೇಕಾಗಿದೆ. ನನ್ನ ಈ ಅವಸ್ಥೆಯನ್ನಾದರೂ ನೋಡು ಪಾಂಡವ! ಇಂತಹ ದುರವಸ್ಥೆಯನ್ನು ಅನುಭವಿಸಲು ಅನರ್ಹಳಾದವಳು ನಾನು. ನೀವುಗಳಿನ್ನೂ ಬದುಕಿರುವಾಗಲೇ ನಾನು ಈ ದುಃಖವನ್ನು

ಅನುಭವಿಸಬೇಕಾಗಿಬಂದಿದೆ. ಕಾಲದ ವೈಪರೀತ್ಯವನ್ನಾದರೂ ನೋಡು ಭೀಮಸೇನ! ನಾನು ಇಂದ್ರಪ್ರಸ್ಥದಲ್ಲಿದ್ದಾಗ 'ಸಾಮ್ರಾಜ್ಞೀ' ಎನಿಸಿಕೊಂಡಿದ್ದೆನು. ಸಾಗರಾಂತವಾದ ಪೃಥ್ವಿಯು ನನ್ನ ವಶವರ್ತಿನಿಯಾಗಿದ್ದಿತು. ಅಂತಹ ನಾನಿಂದು ಸುದೇಷ್ಣೆಯ ವಶವರ್ತಿನಿಯಾಗಿದ್ದೇನೆ. ಅವಳನ್ನು ಕಂಡರೆ ಭಯಪಡುತ್ತೇನೆ. ಹಿಂದೆ ನಾನು ಇಂದ್ರಪ್ರಸ್ಥದಲ್ಲಿದ್ದಾಗ ಅರಮನೆಯಿಂದ ಹೊರಟೆನೆಂದರೆ–ನನ್ನ ಹಿಂದೆ ಮತ್ತು ಮುಂದೆ ಸೇವಕಿಯರು ಸಿದ್ಧರಾಗುತ್ತಿದ್ದರು. ಅಂತಹ ನಾನಿಂದು ಸುದೇಷ್ಣೆಯ ದಾಸಿಯಾಗಿ ಅವಳ ಹಿಂದೆ-ಮುಂದೆ ತಿರುಗುತ್ತಿದ್ದೇನೆ. ಇದಕ್ಕಿಂತಲೂ ದುಃಖಕರವಾದ ಮತ್ತೊಂದು ವಿಷಯವನ್ನು ಹೇಳುವೆನು ಕೇಳು, ಭೀಮಸೇನ! ನಾನು ಹಿಂದೆ ನನ್ನ ಅತ್ತೆಯಾದ ಕುಂತಿಯ ಸಲುವಾಗಿ ಮಾತ್ರವೇ ಗಂಧವನ್ನು ತೇಯ್ದುಕೊಡುತ್ತಿದ್ದೆನು. ನನ್ನ ಸಲುವಾಗಿಯೂ ಗಂಧವನ್ನು ತೇಯ್ದು ಕೊಳ್ಳುತ್ತಿರಲಿಲ್ಲ. (ನನಗಾಗಿ ದಾಸಿಯರು ಗಂಧವನ್ನು ತೇಯ್ದುಕೊಡುತ್ತಿದ್ದರು.) ಆದರೆ ಈಗ ನಾನು ಸುದೇಷ್ಣೆಗೆ ಅನುದಿನವೂ ಗಂಧವನ್ನು ತೇಯ್ದುಕೊಡಬೇಕಾಗಿದೆ. ಅನುದಿನವೂ ತೇಯ್ದು-ತೇಯ್ದು ನನ್ನ ಕೈಗಳಿಗಾಗಿರುವ ಆಘಾತವನ್ನಾದರೂ ನೋಡು, ಪಾಂಡವ! ಹಿಂದೆ ನನ್ನ ಕೈಗಳು ಹೀಗಿದ್ದುವೇ?"

ಜನಮೇಜಯ! ಹೀಗೆಂದು ಹೇಳಿ ದ್ರೌಪದಿಯು ಭೀಮಸೇನನಿಗೆ ತನ್ನೆರಡು ಕೈಗಳನ್ನೂ ತೋರಿಸಿದಳು. ಎರಡು ಅಂಗೈಗಳೂ ಜಡ್ಡುಗಟ್ಟಿ ಹೋಗಿದ್ದುವು. ಸುಕೋಮಲವಾಗಿ ಕೆಂಪಾಗಿದ್ದ ಕೈಗಳು ಬಹಳ ಒರಟಾಗಿದ್ದುವು. ದ್ರೌಪದಿಯು ತನ್ನ ಕೈಗಳನ್ನು ತಾನೇ ಪುನಃ ನೋಡಿಕೊಳ್ಳುತ್ತಾ ಮುಂದುವರಿಸಿ ಹೇಳಿದಳು :

"ಭೀಮಸೇನ! ನಿನಗೆ ತಿಳಿದಿರುವಂತೆ ನಾನು ಹಿಂದೆ ಕುಂತಿಗೂ ಹೆದರುತ್ತಿರಲಿಲ್ಲ. ನಿಮಗೂ ಹೆದರುತ್ತಿರಲಿಲ್ಲ ಅಥವಾ ನನ್ನನ್ನು ಹೆದರಿಸುವ ಅಥವಾ ಶಿಕ್ಷಿಸುವ ಸ್ವಭಾವವೂ ನಿಮ್ಮದಾಗಿರಲಿಲ್ಲ. ಆದರೆ ನಾನಿಂದು ಈ ವಿರಾಟರಾಜನ ಮುಂದೆ ಭೀತ-ಭೀತಳಾಗಿ ದಾಸಿಯಂತೆಯೇ ಕೈಕಟ್ಟಿಕೊಂಡು ನಿಂತಿರುತ್ತೇನೆ. ನಾನು ಅವನಿಗಾಗಿ ಸಿದ್ಧಪಡಿಸಿದ ಚಂದನದ ವಿಷಯವಾಗಿ ಅವನು ಏನು ಹೇಳಿಬಿಡುವನೋ ಎಂದು ಕಾತರಳಾಗಿರುತ್ತೇನೆ. ಅವನು

ಮೈಗೆ ಪೂಸಿಕೊಳ್ಳುವ ಚಂದನವನ್ನು ನಾನೇ ಅರೆದು ಸಿದ್ಧಗೊಳಿಸಬೇಕಾಗಿದೆ. ಬೇರೆಯವರು ತೇಯ್ದು ಸಿದ್ಧಪಡಿಸಿದ ಚಂದನವನ್ನು ಅವನೆಂದಿಗೂ ಸ್ವೀಕರಿಸುವುದಿಲ್ಲ. ಇದಕ್ಕಿಂತಲೂ ಹೆಚ್ಚಿನ ದುಃಖವೇನಿದೆ? ಭೀಮಸೇನ!"

ಜನಮೇಜಯ! ಯಾಜ್ಞಸೇನಿಯು ಭೀಮನೊಡನೆ ತನ್ನ ದುಃಖವೆಲ್ಲ ವನ್ನೂ ತೋಡಿಕೊಂಡನಂತರ ಅವನ ಮುಖವನ್ನೇ ವೀಕ್ಷಿಸುತ್ತಾ ಕಣ್ಣೀರಿಡು ತ್ತಿದ್ದಳು.

ಅಳುತ್ತಲೇ ಗದ್ಗದಧ್ವನಿಯಿಂದ ಕೂಡಿದವಳಾಗಿ ಕ್ಷಣ-ಕ್ಷಣಕ್ಕೂ ಸುದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಭೀಮಸೇನನ ವಕ್ಷಃಸ್ಥಳವನ್ನು ಬಾರಿ ಬಾರಿಗೂ ತಟ್ಟುತ್ತಾ ( ಭೀಮಸೇನನ ಹೃದಯವನ್ನು ಕ್ಷುಭಿತವನ್ನಾಗಿ ಮಾಡುತ್ತಾ ಭೀಮನ ಎದೆಯಲ್ಲಿ ತನ್ನ ತಲೆಯನ್ನಿಟ್ಟು ) ಹೇಳಿದಳು :

**ನಾಲ್ಪಂ ಕೃತಂ ಮಯಾ ಭೀಮ ದೇವಾನಾಂ ಕಿಲ್ಬಿಷಂ ಪುರಾ ।**
**ಅಭಾಗ್ಯಾ ಯತ್ರ ಜೀವಾಮಿ ಮರ್ತವ್ಯೇ ಸತಿ ಪಾಣ್ಡವ ॥೨೯॥**

"ಭೀಮಸೇನ! ನಾನು ದೇವತೆಗಳ ವಿಷಯದಲ್ಲಿ ಅಪರಾಧವನ್ನು ಅಲ್ಪ-ಸ್ವಲ್ಪವೇ ಮಾಡಿರುವುದಿಲ್ಲ. ಮಹತ್ತರವಾದ ಅಪರಾಧವನ್ನೇ ಎಸಗಿ ದ್ದೇನೆ. ಏಕೆಂದರೆ : ಇಂತಹ ಕಷ್ಟಸಮಯದಲ್ಲಿ ಸತ್ತುಬದುಕಬೇಕಾಗಿದ್ದ ನಾನು ಬದುಕಿಯೂ ಸತ್ತವಳಂತಾಗಿದ್ದೇನೆ." (ಇಂತಹ ಸಂದರ್ಭದಲ್ಲಿಯೂ ವಿಧಿಯು ನನಗೆ ಆಯುಷ್ಯವನ್ನಿತ್ತು ನನ್ನನ್ನು ಅತಿದುಃಖಿತೆಯನ್ನಾಗಿ ಮಾಡಿದೆ.)"

ಜನಮೇಜಯ! ದ್ರೌಪದಿಯ ಆ ಮಾತುಗಳನ್ನು ಕೇಳಿ ಬಹು ದುಃಖಿತನಾದ ಭೀಮಸೇನನು ಚಂದನವನ್ನು ಅರೆಯುವಿಕೆಯಿಂದ ಗಡುಸಾ ಗಿದ್ದ ತನ್ನ ಪತ್ನಿಯ ಎರಡು ಕೈಗಳನ್ನೂ ಎತ್ತಿಕೊಂಡು ತನ್ನ ಮುಖಕ್ಕೆ ಅವುಗಳನ್ನು ಅವುಚಿಕೊಂಡು ( ತನ್ನ ಮುಖವನ್ನು ದ್ರೌಪದಿಯ ಕೈಗಳಿಂದ ಮುಚ್ಚಿಕೊಂಡು) ರೋದನಮಾಡತೊಡಗಿದನು. ಮಹಾಪರಾಕ್ರಮಿಯಾದ ಭೀಮಸೇನನು ತನ್ನ ಪತ್ನಿಯ ಕೈಗಳೆರಡನ್ನೂ ಹಿಡಿದು ಧಾರಾಕಾರವಾಗಿ ಕಣ್ಣೀರು ಸುರಿಸುತ್ತಾ ಪರಮದುಃಖಿತನಾಗಿ ಈ ಮಾತುಗಳನ್ನು ಹೇಳಿದನು:"

ಖ೨೦ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಅಧ್ಯಾಯ ಕೀಚಕವಧಪರ್ವ (ಮುಂದುವರಿದಿದೆ.)

## ಭೀಮಸೇನ ಮತ್ತು ದ್ರೌಪದಿಯರ ಸಂವಾದ

"ದ್ರೌಪದಿ! ನನ್ನ ಬಾಹುಬಲಕ್ಕೂ ಧಿಕ್ಕಾರವಿರಲಿ. ಅರ್ಜುನನ ಗಾಂಡೀವಧನುಸ್ಸಿಗೂ ಧಿಕ್ಕಾರವಿರಲಿ. ಏಕೆಂದರೆ : ನನ್ನ ಬಾಹುಗಳಿದ್ದೂ ಮತ್ತು ಅರ್ಜುನನ ಗಾಂಡೀವಧನುಸ್ಸಿದ್ದೂ ಕೋಮಲವಾಗಿ ಕೆಂಪಾಗಿದ್ದ ನಿನ್ನ ಅಂಗೈಗಳೂ ಜಡ್ಡುಕಟ್ಟುವಂತಾಯಿತಲ್ಲವೇ? ನಮ್ಮ ಸಮಕ್ಷದಲ್ಲಿಯೇ ನೀನು ಈ ಅರಮನೆಯಲ್ಲಿ ದಾಸ್ಯವೃತ್ತಿಯಿಂದ ಜೀವನವನ್ನು ಹೊರೆಯುವಂತಾಗಿದೆ. ದುರುಳನಾದ ಕೀಚಕನು ನಿನ್ನನ್ನು ಕಾಲಿನಿಂದ ಜೋರಾಗಿ ಒದೆಯುತ್ತಿದ್ದಾಗ ನಾನು ಸಹಿಸಿಕೊಂಡು ಕುಳಿತಿದ್ದೆನೆಂದು ನೀನು ಭಾವಿಸಬೇಡ. ಕೀಚಕನನ್ನು ಅದೇ ಸ್ಥಳದಲ್ಲಿಯೇ ಮುಗಿಸಿಬಿಡುತ್ತಿದ್ದೆನು. ಆದರೇನು ಮಾಡಲಿ? ದ್ರೌಪದಿ! ನಮ್ಮಣ್ಣನಾದ ಯುಧಿಷ್ಠಿರನು ನನ್ನನ್ನು ತಡೆಯದೇ ಇದ್ದಿದ್ದರೆ–ಮದಿಸಿದ ಆನೆಯು ಕೋಪದಿಂದ ಕೆರಳಿ ಎದುರಿಗೆ ಸಿಕ್ಕಿದವರನ್ನು ಸೊಂಡಿಲಿನಿಂದೆಳೆದು ಕಾಲಕೆಳಗೆ ಹಾಕಿ ಹೊಸಕಿಬಿಡುವಂತೆ–ಐಶ್ವರ್ಯಮತ್ತನಾದ ಕೀಚಕನ ಶಿರಸ್ಸನ್ನು ನನ್ನ ಕಾಲಿನಿಂದ ತುಳಿದು ಪುಡಿ-ಪುಡಿಮಾಡಿಬಿಡುತ್ತಿದ್ದೆನು. ಕೃಷ್ಣೇ! ಕೀಚಕನು ನಿನ್ನನ್ನು ಒದೆಯುತ್ತಿರುವಾಗಲೇ ನಾನು ಮತ್ಸ್ಯರಾಜನ ಸಮೇತವಾಗಿ ಎಲ್ಲರನ್ನೂ ಧ್ವಂಸಮಾಡುವ ಯೋಚನೆಯನ್ನೇ ಮಾಡಿಬಿಟ್ಟಿದ್ದೆನು. ಮುಂದಿನ ಒಂದೆರಡು ಕ್ಷಣಗಳಲ್ಲಿಯೇ ಕದನವು ಪ್ರಾರಂಭವಾಗಿಯೇ ಬಿಡುವುದೆಂಬ ಉತ್ಸಾಹವೂ ನನ್ನ ಮನಸ್ಸಿನಲ್ಲಿದ್ದಿತು. ಆದರೇನು ಮಾಡಲಿ, ಪಾಂಚಾಲಿ! ಕುಪಿತನಾಗಿ ಸಿಂಹದಂತೆ ಕೆರಳಿದ್ದ ನನ್ನನ್ನು ಧರ್ಮರಾಜನು ಕಟಾಕ್ಷ ವೀಕ್ಷಣದಿಂದ ನಿರೋಧಿಸಿಬಿಟ್ಟನು. ನಾನವನ ಮನಸ್ಸಿನ ಇಂಗಿತವನ್ನು ತಿಳಿದು ತೆಪ್ಪಗಾಗಬೇಕಾಯಿತು. ನಾನಾದರೂ ಸುಖದಿಂದ ನಿಶ್ಚಿಂತನಾಗಿರುವೆನೆಂದು ಭಾವಿಸಿರುವೆಯಾ? ದ್ರೌಪದಿ! ನಿಶ್ಚಯವಾಗಿಯೂ ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲ. ನಾವಿಂದು ರಾಜ್ಯಭ್ರಷ್ಟರಾಗಿದ್ದೇವೆ. ಕುರುಕುಲಾಧಮರ ವಧೆಯನ್ನು ನಾನಿನ್ನೂ ಮಾಡಿರುವುದಿಲ್ಲ. ಸುಯೋಧನ, ಕರ್ಣ, ಶಕುನಿ, ಪಾಪಿಷ್ಠನಾದ ದುಃಶಾಸನ–ಇವರುಗಳ ತಲೆ

ಗಳನ್ನು ನಾನಿನ್ನೂ ತುಂಡರಿಸಿಲ್ಲ. ಇದನ್ನು ನೆನೆದಂತೆಲ್ಲಾ ನನ್ನ ಹೃದಯವು ಸುಟ್ಟುಹೋಗುತ್ತದೆ. ಈ ವಿಷಯವು ನನ್ನ ಹೃದಯದಲ್ಲಿ ಶಲ್ಯಪ್ರಾಯವಾಗಿದ್ದು ಪ್ರತಿಕ್ಷಣದಲ್ಲಿಯೂ ನನ್ನ ಹೃದಯಕ್ಕೆ ಘಾಸಿಯನ್ನುಂಟುಮಾಡುತ್ತಿದೆ. ಆದರೂ ಸ್ವಲ್ಪಕಾಲ ನಾವಿದನ್ನು ಸಹಿಸಿಕೊಳ್ಳಲೇಬೇಕಾಗಿದೆ. ನೀನೂ ಕೂಡ ಈ ಸಮಯದಲ್ಲಿ ಕೋಪಕ್ಕೆಡೆಗೊಡದೆ ಧರ್ಮಮಾರ್ಗದಲ್ಲಿಯೇ ವರ್ತಿಸುವುದು ವಿಹಿತವಾಗಿದೆ. ದ್ರೌಪದಿ! ನೀನು ಧರ್ಮಜನ ವಿಷಯದಲ್ಲಿ ಹೇಳಿದ ನಿಂದೆಯ ನುಡಿಗಳನ್ನು ಅವನೇನಾದರೂ ಕೇಳಿದನಾದರೆ ಖಂಡಿತವಾಗಿಯೂ ಒಡನೆಯೇ ಪ್ರಾಣಬಿಡುವನು. ಯುಧಿಷ್ಠಿರನು ಅಸುವನ್ನು ನೀಗಿ ಕೊಂಡೊಡನೆಯೇ ಅರ್ಜುನ-ನಕುಲ-ಸಹದೇವರೂ ಪ್ರಾಣಗಳನ್ನು ಬಿಡು ವರು. ಅವರು ನಾಲ್ವರೂ ಪ್ರಾಣತ್ಯಾಗಮಾಡಿದನಂತರ ನಾನೂ ಉಳಿಯ ಲಾರೆನು, ಪಾಂಚಾಲಿ! ಹಿಂದಿನ ನಾರಿಯರು ತಮ್ಮ ಪತಿಗಳ ವಿಷಯದಲ್ಲಿ ಹೇಗೆ ನಡೆದುಕೊಂಡರೆಂಬ ವಿಷಯವನ್ನು ನಿನಗೆ ಜ್ಞಾಪಿಸುವೆನು. ದ್ರೌಪದಿ! ಸಾಧ್ವೀಮಣಿಯಾದ ನೀನೂ ಅವರಂತೆ ಧರ್ಮಮಾರ್ಗದಲ್ಲಿಯೇ ಇರುತ್ತಾ ಶಾಶ್ವತವಾದ ಕೀರ್ತಿಯನ್ನು ಗಳಿಸುವುದು ಯುಕ್ತವಾಗಿದೆ.

ಭೃಗುಮಹರ್ಷಿಯ ಮಗನು ಚ್ಯವನ. ಅವನ ಪತ್ನಿಯ ಹೆಸರು ಸುಕನ್ಯೆ. ತಪಸ್ಸಿಗೆ ಕುಳಿತ ಚ್ಯವನನು ಸಾವಿರಾರು ವರ್ಷಗಳ ಪರ್ಯಂತವಾಗಿ ಮೇಲೇಳಲೇ ಇಲ್ಲ. ಅವನ ಮೇಲೆ ಹುತ್ತವೂ ಬೆಳೆದುಬಿಟ್ಟಿತು. ತನ್ನ ಗಂಡನ ಸ್ಥಿತಿಯನ್ನು ನೋಡಿ ಸಾಧ್ವಿಯಾದ ಸುಕನ್ಯೆಯು ದುಃಖಿಸಲಿಲ್ಲ; ಓಡಿ ಹೋಗಲಿಲ್ಲ. ಚ್ಯವನನು ತಪಸ್ಸನ್ನು ಮುಗಿಸಿ ಬಹಿರ್ಮುಖನಾಗುವವರೆಗೂ ಹುತ್ತದ ಸಮೀಪದಲ್ಲಿಯೇ ಹಗಲಿರುಳೆನ್ನದೇ ಕಾದಿದ್ದಳು. ತಪಸ್ಸನ್ನು ಮುಗಿಸಿ ಸೂರ್ಯನ ತೇಜಸ್ಸಿನಿಂದ ಬೆಳಗುತ್ತಿದ್ದ ಚ್ಯವನನನ್ನು ಪುನಃ ಪಡೆದು ಆನಂದಭರಿತಳಾದಳು.

ನೀನು ಪತಿವ್ರತೆಯಾದ ಇಂದ್ರಸೇನೆಯ ಹೆಸರನ್ನು ಕೇಳಿರುವೆ ಯಲ್ಲವೇ? ಅವಳು ಸೌಂದರ್ಯದಲ್ಲಿ ಸಾಕ್ಷಾತ್ ಮಹಾಲಕ್ಷ್ಮಿಗೆ ಸಮಾನ ಳಾಗಿದ್ದಳು. ಅಂತಹವಳೂ ಸಾವಿರಾರು ವರ್ಷ ತುಂಬಿದ ಹಣ್ಣು-ಹಣ್ಣು ಮುದುಕನಾಗಿದ್ದ ಮುದ್ಗಲಮಹರ್ಷಿಯನ್ನು ಮದುವೆಯಾಗಿ ಅವನ ಶುಶ್ರೂಷೆಯನ್ನು ಸರ್ವದಾ ಮಾಡುತ್ತಿದ್ದಳು.

ನಾವು ಅರಣ್ಯದಲ್ಲಿದ್ದಾಗ ಮಹರ್ಷಿಗಳು ಹೇಳಿದ ಶ್ರೀರಾಮನ ಕಥೆಯನ್ನೂ ನೀನೂ ಕೇಳಿರುವೆ. ಜನಕರಾಜನ ಮಗಳಾದ ವೈದೇಹಿಯು ಎಷ್ಟು ಕಷ್ಟಪಟ್ಟಳೆಂಬ ವಿಷಯವೂ ನಿನಗೆ ತಿಳಿದಿರುವುದು. ಆ ಸಾಧ್ವಿಯು ಪತಿಯನ್ನೇ ಅನುಸರಿಸಿ ಅರಣ್ಯಕ್ಕೂ ಹೋದಳು. ಅಲ್ಲಾದರೂ ಅವಳು ಸುಖವಾಗಿದ್ದಳೇ? ರಾಮನ ಪ್ರಿಯಭಾರ್ಯೆಯಾಗಿದ್ದವಳು ರಾವಣನ ಬಂದಿಯಾದಳು. ಬಹುಕಾಲದವರೆಗೆ ಸೀತೆಯು ರಾವಣನ ಅರಮನೆಯಲ್ಲಿಯೇ ಇರಬೇಕಾಯಿತು. ಆದರೂ ಅವಳು ಅಧೀರಳಾಗಲಿಲ್ಲ. ರಾಮನನ್ನೇ ಸರ್ವದಾ ನೆನೆದು ಗೋಳಿಡುತ್ತಿದ್ದಳು. ಕಟ್ಟಕಡೆಗೆ ರಾವಣನ ಸಂಹಾರವಾದನಂತರ ಪತಿಯನ್ನು ಪುನಃ ಸೇರಿ ಸುಖವಾಗಿದ್ದಳು.

ಲೋಪಾಮುದ್ರೆಯು ರೂಪ-ಯೌವನಗಳಲ್ಲಿ ಹೆಸರಾಂತವಳು. ಮೂರು ಲೋಕಗಳಲ್ಲಿಯೂ ರೂಪಿನಲ್ಲಿ ಅವಳಿಗೆ ಸದೃಶರಾದವರು ಯಾರೂ ಇರಲಿಲ್ಲ. ರಾಜಕುಮಾರಿಯಾಗಿದ್ದ ಅವಳಿಗೆ ಯಾವ ವಿಧವಾದ ಸುಖೋಪಭೋಗಗಳಿಗೂ ಕಡಿಮೆಯಿರಲಿಲ್ಲ. ಆದರೆ ಮಹರ್ಷಿಯಾದ ಅಗಸ್ತ್ಯರನ್ನು ಮದುವೆಯಾದ ನಂತರ ಪ್ರಾಪಂಚಿಕವಾದ ಎಲ್ಲ ಸುಖಗಳನ್ನೂ ತ್ಯಜಿಸಿ, ನಾರುಮಡಿಯನ್ನೇ ಉಟ್ಟು ಗಂಡನನ್ನು ಅನುಸರಿಸಿ ಹೊರಟೇ ಬಿಟ್ಟಳು. ಗೆಡ್ಡೆ-ಗೆಣಸುಗಳೇ ಆಹಾರ ; ನಿತ್ಯವಾದ ಅರಣ್ಯವಾಸ–ಅಗಸ್ತ್ಯರನ್ನು ಮದುವೆಯಾದುದರಿಂದ ಲೋಪಾಮುದ್ರೆಯ ಪಾಲಿಗೆ ಸಿಕ್ಕಿದ ಸುಖವಿದು. ಅದನ್ನೇ ಅವಳು ಸ್ವರ್ಗಸುಖವೆಂದು ಭಾವಿಸಿದಳು. ಅಗಸ್ತ್ಯರನ್ನೇ ತನ್ನ ಪರದೈವವೆಂದು ಭಾವಿಸಿ ಆರಾಧಿಸಿದಳು.

ಸಾವಿತ್ರಿಯ ಕಥೆಯನ್ನೂ ನೀನು ಅರಣ್ಯದಲ್ಲಿದ್ದಾಗ ಕೇಳಿರುವೆಯಲ್ಲವೇ? ದ್ರೌಪದಿ! ದ್ಯುಮತ್ಸೇನನ ಮಗನಾದ ಸತ್ಯವಂತನನ್ನು ಅನುಸರಿಸಿ ಸಾವಿತ್ರಿಯು ಯಮಲೋಕಕ್ಕೂ ಹೊರಟಳು. ಯಮನನ್ನು ಧರ್ಮಯುಕ್ತವಾದ ಮಾತುಗಳಿಂದ ತೃಪ್ತಿಪಡಿಸಿ ಯಮಪಾಶದಿಂದ ಬಂಧಿತನಾಗಿದ್ದ ಪತಿಯನ್ನು ವಿಮುಕ್ತಿಗೊಳಿಸಿದಳು.

ನಾನು ಹೇಳಿರುವ ಸಾಧ್ವೀಮಣಿಯರೆಲ್ಲರೂ ರೂಪವತಿಯರೂ ಮತ್ತು ಪತಿವ್ರತೆಯರೂ ಆಗಿದ್ದರು. ನೀನಾದರೂ ರೂಪವತಿಯೂ, ಪತಿವ್ರತೆಯೂ

ಆಗಿರುವೆ. ಅವರುಗಳಲ್ಲಿದ್ದ ಕ್ಷಮಾಗುಣವು ನಿನ್ನಲ್ಲಿಯೂ ಇದೆ. ಇದುವರೆಗೂ ಅಪಾರವಾದ ಕಷ್ಟ-ನಷ್ಟಗಳನ್ನು ಸಹಿಸಿಕೊಂಡು ಬಂದಿರುವೆ. ಉಳಿದಿರುವ ಸ್ವಲ್ಪಕಾಲದಲ್ಲಿ ಅಸಹನೆಯನ್ನು ತೋರಬೇಡ. ಹದಿಮೂರನೆಯ ವರ್ಷವು ಕಳೆಯಲು ಮಾಸ ಮತ್ತು ಅರ್ಧಮಾಸವು ಮಾತ್ರವೇ ಉಳಿದಿದೆ. ಈ ಸಮಯದಲ್ಲಿ ನಾವು ಸಹನೆಯನ್ನು ಕಳೆದುಕೊಳ್ಳಬಾರದು. ಹದಿಮೂರನೆಯ ವರ್ಷವು ಕಳೆಯುತ್ತಲೇ ನೀನು ಹಿಂದಿದ್ದಂತೆ ಮಹಾರಾಣಿಯಾಗಿ ವಿಜೃಂಭಿಸುವೆ. ಆದುದರಿಂದ ರಾಜನ ವಿಷಯದಲ್ಲಿ ಖಂಡಿತವಾಗಿಯೂ ಕಟುನುಡಿಗಳನ್ನಾಡಬೇಡ, ಯಾಜ್ಞಸೇನಿ!"

"ನನ್ನ ಹೃದಯದ ಸಂಕಟವನ್ನು ತಡೆದುಕೊಳ್ಳಲು ನನ್ನಿಂದ ಸಾಧ್ಯ ವಾಗಲಿಲ್ಲ, ಭೀಮಸೇನ! ಆದುದರಿಂದಲೇ ನಾನು ನಿನ್ನ ಬಳಿಗೆ ಬಂದು ಕಣ್ಣೀರು ಸುರಿಸಿದೆನು. ನಾನು ಯುಧಿಷ್ಠಿರನನ್ನೂ ನಿಂದಿಸಹೋಗುವುದಿಲ್ಲ. ಕಳೆದುಹೋದ ವಿಷಯಗಳನ್ನು ಪುನಃ ಪ್ರಸ್ತಾಪಮಾಡುವುದರಿಂದ ಆಗುವ ಪ್ರಯೋಜನವಾದರೂ ಏನು? ಈ ಸಮಯದಲ್ಲಿ ಸಾಧಿಸಬೇಕಾಗಿರುವ ಕಾರ್ಯದ ವಿಷಯವಾಗಿ ಸಮಾಲೋಚಿಸು. ಕೇಕಯರಾಜಕುಮಾರಿ ಯಾದ ಸುದೇಷ್ಣೆಯು ನನ್ನ ಸೌಂದರ್ಯದ ವಿಷಯದಲ್ಲಿ ಬಹಳ ಅಸೂಯೆಯನ್ನು ತಾಳಿರುವಳು. ತನ್ನ ಗಂಡನೆಲ್ಲಿ ನನ್ನನ್ನು ಮೋಹಿಸಿ ಬಿಡುವನೋ ಎಂದು ಬಹುವಾಗಿ ಶಂಕಿಸಿರುವಳು. ನಾನು ರಾಜನ ಕಣ್ಣಿಗೆ ಬೀಳದ ರೀತಿಯಲ್ಲಿ ಎಚ್ಚರಿಕೆಯನ್ನು ವಹಿಸುವಳು. ಈ ಕಾರಣದಿಂದಲೇ ಅವಳು ಕೀಚಕನ ಕಾಮಚೇಷ್ಟೆಗೆ ಸಂಪೂರ್ಣವಾಗಿ ಅವಕಾಶವನ್ನಿತ್ತಿರುವಳು. ಸುದೇಷ್ಣೆಯ ಅಂತರಂಗವನ್ನು ತಿಳಿದಿರುವ ಕೀಚಕನು ನನ್ನನ್ನು ನಿರ್ಭಯ ವಾಗಿ ಬೆನ್ನಟ್ಟಿರುವನು. ತನ್ನನ್ನು ಮದುವೆಯಾಗುವಂತೆ ಸದಾ ಪೀಡಿಸುತ್ತಿರುವನು. ಅವನ ವಿಲಾಸೋಕ್ತಿಗಳನ್ನು ಕೇಳುತ್ತಿದ್ದಂತೆಲ್ಲಾ ನನ್ನ ಮುಖವು ಕೋಪದಿಂದ ಕೆಂಪೇರುವುದು. ಆದರೂ ಕೋಪಕ್ಕಿದು ಅಕಾಲವೆಂದು ನಿರ್ಧರಿಸಿ ಯಾವ ವಿಧವಾದ ಉದ್ವೇಗವನ್ನೂ ತೋರಿಸಿ ಕೊಳ್ಳದೆಯೇ ಮೂಢಾತ್ಮನಾದ ಅವನಿಗೆ ಉತ್ತರಿಸುತ್ತಿರುವೆನು–'**ಆತ್ಮಾನಂ ರಕ್ಷ ಕೀಚಕ**' 'ನನ್ನನ್ನು ಮೋಹಿಸಿ ಪ್ರಾಣಾಪಾಯಕ್ಕೊಳಗಾಗಬೇಡ, ಕೀಚಕ! ನಿನ್ನನ್ನು ನೀನು ಸಂರಕ್ಷಿಸಿಕೊಳ್ಳುವುದು ಸರ್ವಥಾ ಯುಕ್ತವಾ

ಗಿದೆ–ನಾನು ಐದು ಮಂದಿ ಗಂಧರ್ವರ ಏಕಮಾತ್ರ ಪತ್ನಿಯಾಗಿರುತ್ತೇನೆ. ಸಾಹಸಕಾರ್ಯಗಳನ್ನು ಮಾಡುವುದರಲ್ಲಿಯೇ ಆಸಕ್ತರಾದ, ಶೂರರಾದ ಅವರು ಕುಪಿತರಾದರೆಂದರೆ ನಿನ್ನನ್ನು ಕ್ಷಣಮಾತ್ರದಲ್ಲಿ ಸಂಹಾರಮಾಡಿಬಿಡುತ್ತಾರೆ. ಬೆಂಕಿಯೊಡನೆ ಸರಸವಾಡಲು ಹೋಗಬೇಡ'–ಹೀಗೆಂದು ಎಷ್ಟು ಬಾರಿ ಹೇಳಿದರೂ, ಭೀಮಸೇನ! ಆ ದುಷ್ಟಾತ್ಮನಾದ ಕೀಚಕನು ಸುಮ್ಮ ನಿರುವುದಿಲ್ಲ. ತಾನೇ ಮಹಾಪರಾಕ್ರಮಿಯೆಂದು ಜಂಬಕೊಚ್ಚಿಕೊಳ್ಳುತ್ತಾ ಕೀಚಕನು ನನ್ನನ್ನು ಕುರಿತು ಹೀಗೆ ಹೇಳಿದನು :

**ನಾಹಂ ಬಿಭೇಮಿ ಸೈರನ್ಧ್ರಿ ಗನ್ಧರ್ವಾಣಾಂ ಶುಚಿಸ್ಮಿತೇ ।**
**ಶತಂ ಶತಸಹಸ್ರಾಣಿ ಗನ್ಧರ್ವಾಣಾಮಹಂ ರಣೇ ।**
**ಸಮಾಗತಂ ಹನಿಷ್ಯಾಮಿ ತ್ವಂ ಭೀರು ಕುರು ಮೇ ಕ್ಷಣಮ್ ॥೨೫॥**

'ಸೈರಂಧ್ರಿ! ನಾನು ಗಂಧರ್ವರಿಗೆ ಹೆದರತಕ್ಕವನಲ್ಲ. ಐವರೇ ಏಕೆ? ಲಕ್ಷೋಪಲಕ್ಷ ಗಂಧರ್ವರು ಬಂದರೂ ನಾನು ರಣಾಂಗಣದಲ್ಲಿ ಅವರೆಲ್ಲರನ್ನೂ ಒಬ್ಬನೇ ಸಂಹರಿಸಲು ಸಮರ್ಥನಾಗಿದ್ದೇನೆ. ನೀನು ಆ ಸಂಬಂಧವಾದ ಭೀತಿಯನ್ನು ತೊರೆದು ನನ್ನನ್ನು ಪರಿಗ್ರಹಿಸು, ಶುಚಿಸ್ಮಿತೇ!' ಹೀಗೆ ಹೇಳಿದ ಕಾಮಾತುರನಾದ ಕೀಚಕನನ್ನು ಕುರಿತು ಪುನಃ ನಾನು ಹೇಳಿದೆನು :

'ಕೀಚಕ! ನೀನೇನೇ ಹೇಳಿದರೂ ಆ ನನ್ನ ಐವರು ಗಂಧರ್ವಪತಿಗಳಿಗೆ ನೀನು ಸಾಟಿಯಾಗಲಾರೆ. ಆ ಐವರಲ್ಲಿ ಒಬ್ಬನನ್ನಾದರೂ ನೀನು ಜಯಿಸಲಾರೆ. ಆದರೆ ನಾನೇ ಧರ್ಮದ ಮೇಲೆ ದೃಷ್ಟಿಯಿಟ್ಟು ನಡೆಯುತ್ತಿರುವುದರಿಂದ ನೀನಿನ್ನೂ ಬದುಕಿರಲು ಸಾಧ್ಯವಾಗಿದೆ. ಸತ್ಕುಲಪ್ರಸೂತೆಯಾದ, ಸುಶೀಲೆಯಾದ ನಾನು ಧರ್ಮವನ್ನೇ ಅವಲಂಬಿಸಿರುತ್ತೇನೆ. ಈಗಲಾದರೂ ನಾನು ಹೇಳಿದಂತೆ ಕೇಳು. ಒಲ್ಲದವಳನ್ನು ಕಾಮಿಸಿ ಪ್ರಾಣಗಳನ್ನು ತೊರೆಯಬೇಡ.'

ನನ್ನ ಮಾತನ್ನು ಕೇಳಿದೊಡನೆಯೇ ಆ ದುಷ್ಟಾತ್ಮನು ಗಹ-ಗಹಿಸಿ ನಗುತ್ತಾ ತನ್ನ ಅಕ್ಕನ ಬಳಿಗೆ ಹೊರಟುಹೋದನು. ಕೀಚಕನ ವಿಷಯದಲ್ಲಿ ಹೆಚ್ಚಿನ ಪ್ರೀತಿಯೂ ಮತ್ತು ಭಯವೂ ಇರುವ ಸುದೇಷ್ಣೆಯು ಅವನ

ಪ್ರಾರ್ಥನೆಯಂತೆ ನನ್ನನ್ನು ವ್ಯಾಜಾಂತರಗಳಿಂದ ಅವನ ಸಮೀಪಕ್ಕೆ ಕಳುಹಿಸಲು ಒಪ್ಪಿದಳು. ಒಂದು ದಿನ ಸುದೇಷ್ಣೆಯು ನನ್ನನ್ನು ಕರೆದು ಕೀಚಕನ ಮನೆಗೆ ಹೋಗಿ ಸುರೆಯನ್ನು ತರಲು ಹೇಳಿದಳು. ನಾನೆಷ್ಟು ಒಲ್ಲೆನೆಂದರೂ ಕೇಳಲೇ ಇಲ್ಲ. ನನ್ನನ್ನೇ ಹೋಗುವಂತೆ ಒತ್ತಾಯಪಡಿಸಿದಳು. ನಾನು ವಿಧಿಯಿಲ್ಲದೇ ಭೀತಳಾಗಿ ಕೀಚಕನ ಬಳಿಗೆ ಹೋಗುತ್ತಲೇ ನನ್ನ ಮುಖದರ್ಶನಮಾತ್ರದಿಂದಲೇ ಹಿರಿಹಿಗ್ಗಿದ ಕೀಚಕನು ನನ್ನನ್ನು ಸುಮಧುರವಾದ ಮಾತುಗಳಿಂದ ಒಲಿಸಿಕೊಳ್ಳಲು ಯತ್ನಿಸಿದನು. ಯಾವಾಗ ನಾನು ಅವನ ಸವಿಮಾತುಗಳಿಗೆ ಮಣೆಯಲಿಲ್ಲವೋ–ಆಗವನು ಬಲಾತ್ಕಾರ ದಿಂದಲಾದರೂ ನನ್ನನ್ನು ವಶಪಡಿಸಿಕೊಳ್ಳಬೇಕೆಂಬ ಪ್ರಯತ್ನದಲ್ಲಿದ್ದನು. ದುರಾತ್ಮನಾದ ಕೀಚಕನ ಮನಃಸಂಕಲ್ಪವನ್ನು ಮುಖಭಾವದಿಂದಲೇ ತಿಳಿದ ನಾನು ರಾಜನನ್ನು ಶರಣುಹೋಗಲು ವೇಗವಾಗಿ ರಾಜನಿದ್ದೆಡೆಗೆ ( ಅರಮನೆಗೆ) ಓಡಿದೆನು. ರಾಜನ ಸಮ್ಮುಖಕ್ಕೆ ಹೋಗುತ್ತಿದ್ದಂತೆಯೇ ಆ ದುಷ್ಟಾತ್ಮನು ಬೆನ್ನಟ್ಟಿಬಂದು ನನ್ನ ಕೇಶರಾಶಿಯನ್ನು ಸೆಳೆದು ಕೆಳಕ್ಕೆ ಬೀಳಿಸಿ ತನ್ನ ಕಾಲಿನಿಂದ ಮನಃಪೂರ್ತಿಯಾಗಿ ನನ್ನನ್ನು ಒದೆದನು. ಆ ಸಮಯದಲ್ಲಿ ವಿರಾಟರಾಜನೂ ಇದ್ದನು. ಕಂಕನೂ ಇದ್ದನು. ನೀನೂ ಇದ್ದೆ. ರಥಿಕರು, ಮಾವಟಿಗರು, ಸವಾರರು, ಪೌರರು–ಇವರೆಲ್ಲರೂ ಸಭಾಭವನದಲ್ಲಿ ಕಿಕ್ಕಿರಿದು ತುಂಬಿದ್ದರು. ನಾನೇನೋ ನನ್ನ ದುಃಖದ ಆಧಿಕ್ಯದಿಂದಾಗಿ ರಾಜನನ್ನೂ, ಕಂಕನನ್ನೂ ಬಹುವಾಗಿ ನಿಂದಿಸಿದೆನು. ಅಷ್ಟಾದರೂ ರಾಜನು ಕೀಚಕನನ್ನು ತಡೆಯಲೂ ಯತ್ನಿಸಲಿಲ್ಲ ; ಅವನು ಮಾಡಿದ ಅಕಾರ್ಯಕ್ಕಾಗಿ ಅವನನ್ನು ಶಿಕ್ಷಿಸಲೂ ಹೋಗಲಿಲ್ಲ. ಇದಕ್ಕೆ ಕಾರಣವಿಷ್ಟೇ, ಭೀಮಸೇನ! ಕೀಚಕನು ವಿರಾಟರಾಜನ ಸೇನಾಪತಿ. ಮೇಲಾಗಿ ಭಾವಮೈದುನ. ಆದುದರಿಂದಲೇ ಅವನು ಕ್ರೂರಿಯಾಗಿದ್ದರೂ, ಧರ್ಮಹೀನನಾಗಿದ್ದರೂ ಗಂಡ-ಹೆಂಡಿರಿಬ್ಬರಿಗೂ ಪರಮಪ್ರಿಯನಾಗಿರುವನು. ಮಹಾಭಾಗ! ಕೀಚಕನು ಶೂರನು. ತನ್ನ ಶೌರ್ಯದಿಂದಲೇ ಗರ್ವಿತನೂ ಆಗಿದ್ದಾನೆ. ಬಹಳ ಮೂರ್ಖನು. ಇತರರ ಹೆಂಡತಿಯರಲ್ಲೇ ಹೆಚ್ಚಿನ ಆಸಕ್ತಿಯುಳ್ಳವನು. ಧನಿಕರಿಂದ ಹಣವನ್ನು ಕೊಳ್ಳೆಹೊಡೆಯುವುದೇ ಅವನ ಕೆಲಸವಾಗಿದೆ. ಅವನ ಅಧಿಕಾರಕ್ಕೆ ತಡೆಯೆಂಬುದೇ ಇಲ್ಲ. ರಾಜನಿಗಿಂತಲೂ ಮಿಗಿಲಾದ ಅಧಿಕಾರವನ್ನು ಈ

ರಾಜ್ಯದಲ್ಲಿ ಅವನು ನಡೆಸುತ್ತಿದ್ದಾನೆ. ಇತರರು ಸಂಕಟಪಡುತ್ತಿದ್ದರೂ, ಗೋಳಾಡುತ್ತಿದ್ದರೂ ನಿರ್ದಯನಾಗಿ ಅವರ ಸಂಪತ್ತನ್ನೆಲ್ಲಾ ಅಪಹರಿಸಿ ತರುತ್ತಾನೆ. ದುರ್ಮಾರ್ಗಿಯಾದ ಕೀಚಕನಿಗೆ ಧರ್ಮವೆಂದರೇನೆಂಬುದೇ ತಿಳಿಯದು. ಮಹಾಪಾಪಾತ್ಮನು. ಪಾಪಬುದ್ಧಿಯವನು. ಕಾಮಬಾಣಗಳಿಂದ ಪೀಡಿತನಾಗಿದ್ದಾನೆ. ಆ ದುಷ್ಟಾತ್ಮನಿಗೆ ವಿನಯವೆಂಬುದೇ ಇಲ್ಲ. ಉದ್ಧತನು. ಅವನು ಯಾವಾಗಲೂ ತನ್ನ ಹೆಂಡತಿಯಾಗುವಂತೆ ನನ್ನನ್ನು ಪೀಡಿಸುತ್ತಲೇ ಇರುತ್ತಾನೆ. ನೆರೆದಿದ್ದ ರಾಜಸಭೆಯಲ್ಲಿ ರಾಜನ ಮುಂದೆಯೇ ಕೀಚಕನು ನನ್ನನ್ನು ತನ್ನ ಕಾಲಿನಿಂದ ಒದೆದರೂ ಅವನಿಗೆ ಯಾವುದೊಂದು ಶಿಕ್ಷೆಯನ್ನು ವಿಧಿಸಲೂ ರಾಜನು ಸಮರ್ಥನಾಗಲಿಲ್ಲ. ರಾಜನ ಪೌರುಷವು ತನ್ನ ಮುಂದೇನೂ ನಡೆಯಲಾರದೆಂಬುದು ಕೀಚಕನಿಗೆ ಚೆನ್ನಾಗಿ ಮನವರಿಕೆ ಯಾಗಿದೆ. ಅದರಿಂದ ಉದ್ಧತನಾದ ಕೀಚಕನು ಪುನಃ ನನ್ನ ಸಮೀಪಕ್ಕೆ ಬರುವುದಂತೂ ನಿಶ್ಚಯ. ನಾನು ಒಪ್ಪದಿದ್ದರೆ ಹೊಡೆಯುವುದೂ ನಿಶ್ಚಯ. ಬಲಾತ್ಕಾರದಿಂದಲಾದರೂ ನನ್ನನ್ನು ಸೆಳೆದೊಯ್ಯುವುದೂ ನಿಶ್ಚಯ. ಆ ಸಮಯದಲ್ಲಿ ನಾನು ಅವನಿಗೆ ವಶಳಾಗದೇ ಪ್ರಾಣಗಳನ್ನೇ ಪರಿತ್ಯಜಿಸುವೆನು. ಧರ್ಮಮಾರ್ಗದಲ್ಲಿಯೇ ಇರಬೇಕೆಂದು ಇಚ್ಛಿಸಿರುವ ನಿಮಗೆ ನಾನು ಸತ್ತು ಹೋದನಂತರ ಉಳಿಯುವ ಧರ್ಮವು ತಾನೇ ಯಾವುದಿದೆ? ಮಹಾ ಧರ್ಮವೇ ಹಾಳಾಗುತ್ತದೆ. ನಿಮ್ಮ ಪ್ರತಿಜ್ಞೆಯು ಪೂರ್ಣವಾಗಬೇಕು. ಆದರೆ ನಾನು ಬದುಕಿರಬೇಕಲ್ಲವೇ? 'ನಮ್ಮ ಪ್ರತಿಜ್ಞೆಯಂತೆ ನಾವು ನಡೆದು ಕೊಳ್ಳಬೇಕು ; ಪ್ರತಿಜ್ಞಾಭಂಗವಾಗಕೂಡದು ; ಸಹನೆಯಿಂದಿರಬೇಕು ; ಕೋಪಿಸಬಾರದು ; ಸಮಯವರಿತು ಕಾರ್ಯಮಾಡಬೇಕು'–ಇವೇ ಮುಂತಾದ ವ್ಯಾಜಗಳಿಂದ ನೀನಿಂದು ದುಷ್ಟನನ್ನು ಶಿಕ್ಷಿಸದಿದ್ದಲ್ಲಿ ನಿಮ್ಮ ಹೆಂಡತಿಯನ್ನು ನೀವು ಖಂಡಿತವಾಗಿಯೂ ಕಳೆದುಕೊಳ್ಳುತ್ತೀರಿ. ನನ್ನ ಮೇಲೆ ಕಣ್ಣಿಟ್ಟಿರುವ ದುಷ್ಟನು ಹೆಚ್ಚುಕಾಲ ಕಾದಿರಲಾರನು. ಅವನಿಗೆ ನನ್ನ ಮೇಲೆ ಸೇಡುತೀರಿಸಿಕೊಳ್ಳುವುದಕ್ಕೆ ಇದೇ ಸುಸಮಯವಾಗಿದೆ. ಹಿರಿಯರ ಸೇವೆಯಿಂದ ನನಗೆ ತಿಳಿದಿರುವ ಧರ್ಮವನ್ನೂ ಹೇಳಿಬಿಡುತ್ತೇನೆ ಕೇಳು, ಭೀಮಸೇನ!

**ಭಾರ್ಯಾಯಾಂ ರಕ್ಷ್ಯಮಾಣಾಯಾಂ ಪ್ರಜಾ ಭವತಿ ರಕ್ಷಿತಾ ।**
**ಪ್ರಜಾಯಾಂ ರಕ್ಷ್ಯಮಾಣಾಯಾಮಾತ್ಮಾ ಭವತಿ ರಕ್ಷಿತಃ ।**
**ಆತ್ಮಾ ಹಿ ಜಾಯತೇ ತಸ್ಯಾಂ ತೇನ ಜಾಯಾಂ ವಿದುರ್ಬುಧಾಃ ॥**

**ಭರ್ತಾ ತು ಭಾರ್ಯಯಾ ರಕ್ಷ್ಯಃ ಕಥಂ ಜಾಯಾನ್ಮಮೋದರೇ ।**
**ವದತಾಂ ವರ್ಣಧರ್ಮಾಂಶ್ಚ ಬ್ರಾಹ್ಮಣಾನಾಮಿತಿ ಶ್ರುತಃ ॥೪೨॥**

ಭಾರ್ಯೆಯನ್ನು ಕಾಪಾಡುವುದರಿಂದ ತನ್ನ ಮಕ್ಕಳ ರಕ್ಷಣೆಯಾಗುತ್ತದೆ. ಮಕ್ಕಳನ್ನು ರಕ್ಷಿಸುವುದರಿಂದ ತನ್ನನ್ನೇ ತಾನು ರಕ್ಷಿಸಿಕೊಂಡಂತಾಗುತ್ತದೆ. ತಾನೇ ಹೆಂಡತಿಯ ಹೊಟ್ಟೆಯಲ್ಲಿ ( ಬಿಂದುರೂಪದಲ್ಲಿ ) ಸೇರಿ ಮಗನ ರೂಪದಲ್ಲಿ ಪುನಃ ಹೊರಗೆ ಬರುವುದರಿಂದ ಹೆಂಡತಿಯಾದವಳಿಗೆ 'ಜಾಯಾ' ಎಂದು ಹೇಳುತ್ತಾರೆ. ಇದೇ ರೀತಿಯಲ್ಲಿ ಭಾರ್ಯೆಯೂ ಗಂಡನನ್ನು ರಕ್ಷಿಸಬೇಕು. ಹಾಗೆ ರಕ್ಷಿಸದೇ ಉಪಚರಿಸದಿದ್ದರೆ ಗಂಡನಿಗೆ ಅನುರೂಪರಾದ ಮಕ್ಕಳು ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಲು ಹೇಗೆ ತಾನೇ ಸಾಧ್ಯವಾಗುವುದು?–ಈ ಎಲ್ಲ ವಿಷಯಗಳನ್ನೂ ನಾನು ವರ್ಣಾಶ್ರಮಧರ್ಮಗಳ ವಿಷಯವಾಗಿ ಪ್ರವಚನಮಾಡುತ್ತಿದ್ದ ಬ್ರಾಹ್ಮಣರಿಂದ ತಿಳಿದುಕೊಂಡಿರುವೆನು. ಕ್ಷತ್ರಿಯನು ಪಾಲಿಸಬೇಕಾದ ಮುಖ್ಯಧರ್ಮದ ವಿಷಯವಾಗಿ ಅವರು ಹೀಗೆ ಹೇಳಿದ್ದರು:

**ಕ್ಷತ್ರಿಯಸ್ಯ ಸದಾ ಧರ್ಮೋ ನಾನ್ಯಃ ಶತ್ರುನಿಬರ್ಹಣಾತ್ ।**

ಕ್ಷತ್ರಿಯನಿಗೆ ಬಹುಮುಖ್ಯವಾದ ಮತ್ತು ಅವನು ಸರ್ವಕಾಲದಲ್ಲಿಯೂ ಪರಿಪಾಲಿಸಬೇಕಾದ ಮುಖ್ಯಧರ್ಮವೆಂದರೆ : ಅಧಾರ್ಮಿಕರಾದ ಶತ್ರುಗಳನ್ನು ಧ್ವಂಸಮಾಡುವುದು. ಕ್ಷತ್ರಿಯರಿಗೆ ಈ ಧರ್ಮಕ್ಕಿಂತಲೂ ಪರಮೋತ್ಕೃಷ್ಟವಾದ ಧರ್ಮವೇ ಬೇರೊಂದಿಲ್ಲ.

ನಿನ್ನ ಮತ್ತು ಯುಧಿಷ್ಠಿರನ ಕಣ್ಣೆದುರಿನಲ್ಲಿಯೇ ದುರುಳನಾದ ಕೀಚಕನು ನನ್ನನ್ನು ಕಾಲಿನಿಂದ ಥಳಿಸಿದನು. ಇದು ನಿಮ್ಮ ಪರೋಕ್ಷದಲ್ಲಿ ನಡೆದ ಕಾರ್ಯವಲ್ಲ.

ಮಹಾಬಾಹುವಾದ ಮತ್ತು ಅತುಲಪರಾಕ್ರಮಿಯಾದ ನೀನು ನನ್ನನ್ನು ಘೋರರೂಪಿಯಾದ ಜಟಾಸುರನಿಂದ ಸಂರಕ್ಷಿಸಿರುವೆ. ನನ್ನನ್ನು

ಸೆಳೆದೊಯ್ಯುತ್ತಿದ್ದ ಜಯದ್ರಥನನ್ನು ಸೋದರರೊಡನೆ ಎದುರಿಸಿ ಅವನೊಡನೆ ಘೋರವಾದ ಯುದ್ಧಮಾಡಿ ಸೋಲಿಸಿ ನನ್ನನ್ನು ಬಿಡಿಸಿದೆ. ಈಗಲೂ ನನ್ನನ್ನು ಅವಮಾನಗೊಳಿಸಿದ ಈ ಪಾಪಿಷ್ಠನನ್ನು ನೀನೇ ವಧಿಸಬೇಕು. ಅವನು ರಾಜನಿಗೆ ಬಹುಪ್ರಿಯನಾಗಿರುವುದರಿಂದ ಯಾವ ವಿಧವಾದ ಭಯವೂ ಇಲ್ಲದೇ ನನ್ನನ್ನು ಬಹುವಾಗಿ ಕಾಡಿಸುತ್ತಿದ್ದಾನೆ. ಕಲ್ಲಿನ ಮೇಲೆ ಗಡಿಗೆಯನ್ನು ಎತ್ತಿಹಾಕಿ ನುಚ್ಚು-ನೂರುಮಾಡುವಂತೆ–ಕಾಮದಿಂದ ಮತ್ತನಾಗಿರುವ ಕೀಚಕನನ್ನು ಸಂಹರಿಸು. ನನ್ನ ಅನೇಕಕಷ್ಟಗಳಿಗೆ ಕಾರಣಭೂತನಾದ, ನನ್ನನ್ನು ರಾಜಸಭೆಯಲ್ಲಿಯೇ ಅವಮಾನಗೊಳಿಸಿದ ಆ ದುಷ್ಟನೇನಾದರೂ ಸೂರ್ಯೋದಯವಾಗುವವರೆಗೂ ಬದುಕಿದ್ದರೆ ನಾನು ಒಡನೆಯೇ ವಿಷವನ್ನು ಕುಡಿದಾದರೂ ಪ್ರಾಣವನ್ನು ತೊರೆಯುತ್ತೇನೆ. ಆದರೆ ಮಾತ್ರ ಕೀಚಕನಿಗೆ ಸರ್ವಥಾ ವಶಳಾಗುವುದಿಲ್ಲ. ಭೀಮಸೇನ! ನಿನ್ನ ಎದುರಿನಲ್ಲಿ ನನಗೆ ಮರಣವೇ ಶ್ರೇಯಸ್ಕರ."

ಹೀಗೆಂದು ಹೇಳುತ್ತಾ ದ್ರೌಪದಿಯು ಭೀಮಸೇನನ ವಕ್ಷಃಸ್ಥಳದ ಮೇಲೆ ತಲೆಯನ್ನಿಟ್ಟುಕೊಂಡು ಗಟ್ಟಿಯಾಗಿ ಅಳತೊಡಗಿದಳು. ಭೀಮಸೇನನೂ ಅವಳನ್ನು ಗಾಢಾಲಿಂಗನಮಾಡಿಕೊಂಡು ಅವಳ ಕೇಶರಾಶಿಯನ್ನು ಸರಿಪಡಿಸುತ್ತಾ ಬಹುವಾಗಿ ಸಂತೈಸಿದನು. ಬಹಳ ಆರ್ತಳಾಗಿದ್ದ ಸುಮಧ್ಯಮೆಯಾದ ದ್ರೌಪದಿಯನ್ನು ತತ್ತ್ವಾರ್ಥಯುಕ್ತವಾದ, ಯುಕ್ತಿಯುಕ್ತವಾದ ಮಾತುಗಳಿಂದ ಆಶ್ವಸಿಸುತ್ತಾ ಅಶ್ರುಪೂರ್ಣವಾಗಿದ್ದ ಅವಳ ಮುಖವನ್ನು ಒರೆಸಿದನು. ಕೀಚಕನು ದ್ರೌಪದಿಯ ಮೇಲೆ ಮಾಡಿದ ಅತಿಕ್ರಮಣವನ್ನು ಸ್ಮರಿಸಿ ( ಕೀಚಕನನ್ನು ಕೊಲ್ಲಲು ಮನಸ್ಸಿನಲ್ಲಿ ನಿಶ್ಚಯಿಸಿ ) ಕಟವಾಯಿಗಳನ್ನು ನಾಲಿಗೆಯಿಂದ ನೆಕ್ಕುತ್ತಾ ( ಅವುಡು ಕಚ್ಚುತ್ತಾ ) ಕೋಪೋದ್ವಿಗ್ನನಾಗಿ ದುಃಖಾರ್ತಳಾದ ದ್ರೌಪದಿಯನ್ನು ಸಂತೈಸುತ್ತಾ ಹೇಳತೊಡಗಿದನು.

೨೧ನೆಯ ಅಧ್ಯಾಯವು ಮುಗಿಯಿತು.

## ಭೀಮ-ಕೀಚಕರ ಯುದ್ಧ ಮತ್ತು ಕೀಚಕನ ವಧೆ

ಪಾರಿಕ್ಷಿತ! ಕೋಪಾವಿಷ್ಟನಾದ ಭೀಮಸೇನನು ಹೇಳತೊಡಗಿದನು :

"ದ್ರೌಪದಿ! ಈ ಸಮಯದಲ್ಲಿ ನಾನು ಧರ್ಮಾಧರ್ಮಗಳನ್ನಾಗಲೀ ಸಮಯಾಸಮಯಗಳನ್ನಾಗಲೀ–ವಿವೇಚಿಸಹೋಗುವುದಿಲ್ಲ. ಈ ಸಮಯ ದಲ್ಲೇನಾದರೂ ನಾನು ಕೀಚಕನನ್ನು ಸಂಹರಿಸದೇ ಬಿಟ್ಟುಬಿಟ್ಟರೆ ಅವನು ನಿನ್ನನ್ನು ಪುನಃ ಕೆಣಕುವುದು ಮಾತ್ರವಲ್ಲದೇ ಬಲಾತ್ಕಾರದಿಂದಲಾದರೂ ಸೆಳೆದೊಯ್ಯುವನು. ಆದುದರಿಂದ ನೀನು ಹೇಳಿದಂತೆಯೇ ನಾನು ಕೀಚಕನನ್ನು ಅವನ ಬಂಧುಗಳೊಡನೆ ಸಂಹರಿಸಿಬಿಡುತ್ತೇನೆ. ಶುಚಿಸ್ಮಿತೇ! ಯಾಜ್ಞಸೇನಿ! ನೀನಿನ್ನು ನಿನ್ನ ದುಃಖ-ಶೋಕಗಳನ್ನು ದೂರಮಾಡು. ಈ ರಾತ್ರಿಯು ಕಳೆದ ಮೇಲೆ ನಾಳೆಯ ದಿನ ಸಂಜೆಯಲ್ಲಿ ಕೀಚಕನನ್ನು ಸಂಧಿಸು. ನೃತ್ಯಶಾಲೆಗೆ ಬರುವಂತೆ ಅವನಿಗೆ ಸಂಕೇತವನ್ನು ಮಾಡು. ಹೆಣ್ಣುಮಕ್ಕಳಿಗೆ ನೃತ್ಯಪಾಠಗಳನ್ನು ಕಲಿಸಲು ಮತ್ಸ್ಯರಾಜನು ನಿರ್ಮಿಸಿರುವ ನೃತ್ಯಶಾಲೆಯಿದೆ. ಅಲ್ಲಿ ಹಗಲಿನಲ್ಲಿ ಹೆಣ್ಣುಮಕ್ಕಳು ನೃತ್ಯವನ್ನು ಅಭ್ಯಸಿಸಿ ರಾತ್ರಿಯ ವೇಳೆಗೆ ತಮ್ಮ-ತಮ್ಮ ಮನೆಗಳಿಗೆ ಹೊರಟುಹೋಗುತ್ತಾರೆ. ಅಲ್ಲೊಂದು ಸುಪ್ರತಿಷ್ಠಿತವಾದ, ಗಟ್ಟಿಯಾದ, ದಿವ್ಯವಾದ ಮಂಚವಿದೆ. ಅಲ್ಲಿಯೇ ಆ ದುಷ್ಟ ಕೀಚಕನಿಗೆ ಪ್ರೇತರೂಪದಲ್ಲಿರುವ ಅವನ ಪಿತೃ-ಪಿತಾಮಹ- ಪ್ರಪಿತಾಮಹರನ್ನು ತೋರಿಸಿಬಿಡುತ್ತೇನೆ. ಆದರೆ ನೀನು ಈ ವಿಷಯವಾಗಿ ಅವನೊಡನೆ ಮಾತನಾಡುವಾಗ ಯಾರೊಬ್ಬರೂ ಕೇಳಿಸಿಕೊಳ್ಳದ ರೀತಿಯಲ್ಲಿ ಎಚ್ಚರಿಕೆಯಿಂದಿರಬೇಕು. ಹಾಗೆ ಅವನೊಡನೆ ಮಾತನಾಡಿ ಅವನು ನೃತ್ಯಶಾಲೆಗೆ ಬಂದಿರುವಂತೆ ಏರ್ಪಡಿಸು. ಮುಂದಿನ ಕೆಲಸವನ್ನು ನಾನು ನೋಡಿಕೊಳ್ಳುತ್ತೇನೆ."

ಜನಮೇಜಯ! ಭೀಮ-ದ್ರೌಪದಿಯರು ಈ ರೀತಿಯಲ್ಲಿ ಕೀಚಕನ ವಧೆಗೆ ಸಂಧಾನಮಾಡಿ ತಮಗೆ ಪ್ರಾಪ್ತವಾಗಿರುವ ಸಂಕಟಕ್ಕಾಗಿ ಬಹಳ ಹೊತ್ತಿನವರೆಗೆ ದುಃಖಿಸಿದರು. ಮುಂದಿನ ಘೋರರಾತ್ರಿಯ ವಿಶೇಷವನ್ನು ಇಬ್ಬರೂ ಹೃದಯದಲ್ಲಡಗಿಸಿಕೊಂಡು ಒಬ್ಬರನ್ನೊಬ್ಬರು ಅಗಲಿದರು. ಆ

ರಾತ್ರಿಯ ಶೇಷವು ಕೀಚಕನನ್ನು ಅತಿ ಶೀಘ್ರವಾಗಿ ಕೊಲ್ಲಬೇಕೆಂದಿದ್ದ ಅವರಿಗೆ ಅತ್ಯುಗ್ರವಾಗಿದ್ದಿತು.

ಬೆಳಗಾಯಿತು. ಸೈರಂಧ್ರಿಯು ತನ್ನ ನಿತ್ಯಕಾರ್ಯದಲ್ಲಿ ತೊಡಗಿದಳು. ಇತ್ತ ದ್ರೌಪದಿಯು ಕೀಚಕನ ವಧೆಯ ವಿಷಯವಾಗಿ ಸಂಧಾನವನ್ನು ನಡೆಸುತ್ತಿದ್ದಂತೆ ಅತ್ತ ಕೀಚಕನೂ ತಾನಿನ್ನು ಸೈರಂಧ್ರಿಯನ್ನು ಬಲಾತ್ಕಾರದಿಂದಾದರೂ ಸೆಳೆದು ತಂದು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದೇ ನಿರ್ಧರಿಸಿದ್ದನು. ಏಕೆಂದರೆ : ಅವನ ಕೆಟ್ಟನಡತೆಗೆ ವಿರಾಟನಿಂದ ಯಾವ ವಿಧವಾದ ಪ್ರತಿಬಂಧಕವೂ ಒದಗಲಿಲ್ಲ. ವಿರಾಟನೊಮ್ಮೆ ಕೀಚಕನನ್ನು ಕರೆಯಿಸಿ–'ಹೀಗೆ ಪರಸ್ತ್ರೀಯರ ವಿಷಯದಲ್ಲಿ ಧೂರ್ತನಂತೆ ವರ್ತಿಸಕೂಡದೆಂಬ'–ಎಚ್ಚರಿಕೆಯನ್ನಾದರೂ ಕೊಡಲಿಲ್ಲ. ಕೀಚಕನ ವಿಷಯದಲ್ಲಿ ರಾಜನಿಗೆ ಭಯವಿದ್ದಿತು. ಈ ಕಾರಣಗಳಿಂದ ಕೀಚಕನು ಸೈರಂಧ್ರಿಯನ್ನು ಬಲಾತ್ಕಾರವಾಗಿ ಸೆಳೆದೊಯ್ಯಬೇಕೆಂದು ನಿಶ್ಚಯಿಸಿದ್ದರಲ್ಲಿ ಯಾವ ಆಶ್ಚರ್ಯವೂ ಇರಲಿಲ್ಲ. ದ್ರೌಪದಿಯೂ ಇದೇ ಅಭಿಪ್ರಾಯವನ್ನು ಹೊಂದಿದ್ದಳು. ಅದನ್ನೇ ಅವಳು ಭೀಮನಿಗೆ ಬಹುಸ್ಪಷ್ಟವಾಗಿ ಹೇಳಿದ್ದಳು. 'ನನ್ನ ಪ್ರಾಣ ಹೋಗಬೇಕು ; ಇಲ್ಲವೇ ಕೀಚಕನ ವಧೆಯಾಗಬೇಕು.'

ಭೀಮಸೇನನು ದ್ರೌಪದಿಗೆ–'ಸಾಯಂಕಾಲದೊಳಗಾಗಿ ಕೀಚಕನನ್ನು ಸಂಧಿಸು'–ಎಂದು ಹೇಳಿದ್ದನು. ಆದರೆ ದ್ರೌಪದಿಯು ಸಾಯಂಕಾಲದವರೆಗೂ ಕಾಯಬೇಕಾದ ಸಂಭವವೇ ಬರಲಿಲ್ಲ ಮತ್ತು ಕೀಚಕನನ್ನು ಹುಡುಕಿಕೊಂಡು ಹೋಗುವ ಶ್ರಮವೂ ಇಲ್ಲವಾಯಿತು. ರಾತ್ರಿಯೆಲ್ಲಾ ಸೈರಂಧ್ರಿಯ ಸ್ಮರಣೆಯಲ್ಲಿಯೇ ಇದ್ದ ಕೀಚಕನು ಬೆಳಗಾಗುತ್ತಲೇ ವಿರಾಟರಾಜನ ಅರಮನೆಗೆ ಬಂದು ನಿತ್ಯದ ಕೆಲಸದಲ್ಲಿ ತೊಡಗಿದ್ದ ಸೈರಂಧ್ರಿಯನ್ನು ಸಂಧಿಸಿ ಹೇಳಿದನು :

"ಸೈರಂಧ್ರಿ! ನೆನ್ನೆ ನಡೆದುದು ಸ್ಮರಣೆಯಲ್ಲಿದೆಯೇ? ರಾಜನ ಸಮ್ಮುಖದಲ್ಲಿಯೇ ನಾನು ನಿನ್ನನ್ನು ಕಾಲಿನಿಂದ ಥಳಿಸಿದೆನು. ಬಲಿಷ್ಠನಾದ ನಾನು ನಿನ್ನನ್ನು ತುಂಬಿದ ರಾಜಸಭಾಮಧ್ಯದಲ್ಲಿ ಒದೆಯುತ್ತಿದ್ದರೂ

ನಿನ್ನ ರಕ್ಷಣೆಗೆ ಯಾರೊಬ್ಬರೂ ಮುಂದೆ ಬರಲಿಲ್ಲ. ಈಗಲಾದರೂ ಈ ರಾಜ್ಯದಲ್ಲಿ ನನ್ನ ಸ್ಥಾನ-ಗೌರವಗಳೆಷ್ಟೆಂಬುದರ ಅರಿವಾಯಿತೇ? ಶುಭಾಂಗಿ! ವಿರಾಟನು ಮತ್ಸ್ಯದೇಶಕ್ಕೆ ನಾಮಮಾತ್ರಕ್ಕೆ ರಾಜನೆಂಬುದನ್ನು ಈಗಲಾದರೂ ಗ್ರಹಿಸಿದೆಯಾ? ಈ ದೇಶದ ಚತುರಂಗಬಲಕ್ಕೂ ಅಧಿಪತಿಯಾಗಿರುವ ನಾನೇ ಈ ಮತ್ಸ್ಯದೇಶಕ್ಕೆ ನಿಜವಾದ ರಾಜನಾಗಿದ್ದೇನೆ. ಈಗಲಾದರೂ ನನ್ನನ್ನು ನಗು-ನಗುತ್ತಾ ಪರಿಗ್ರಹಿಸು. ನಾನು ನಿನ್ನ ದಾಸನಾಗಿಬಿಡುತ್ತೇನೆ. ನಾನು ನಿನ್ನ ದಿನದ ವೆಚ್ಚಕ್ಕಾಗಿ ನೂರು ಸುವರ್ಣನಾಣ್ಯಗಳನ್ನು ಕೊಡುತ್ತೇನೆ. ನೀನು ಅನುದಿನವೂ ನೂರು ಸುವರ್ಣನಾಣ್ಯಗಳನ್ನು ನಿನ್ನ ಇಚ್ಛಾನುಸಾರವಾಗಿ ವೆಚ್ಚಮಾಡಬಹುದು. ನೂರು ಸೇವಕರನ್ನೂ, ನೂರು ಸೇವಕಿಯರನ್ನೂ ನಿನ್ನ ಸೇವೆಗಾಗಿ ನಿಯಮಿಸುತ್ತೇನೆ. ನಿನ್ನ ಉಪಯೋಗಕ್ಕಾಗಿ ಹೇಸರಕತ್ತೆಗಳಿಂದ ಕೂಡಿರುವ ದಿವ್ಯವಾದ ರಥವನ್ನು ಕಳುಹಿಸುತ್ತೇನೆ. ಶುಭಮುಹೂರ್ತದಲ್ಲಿ ನಮ್ಮಿಬ್ಬರ ಸಮಾಗಮವು ನಡೆಯಲಿ, ಭಾಮಿನಿ!"

ಆ ಸಮಯದಲ್ಲಿ ದ್ರೌಪದಿಯ ಮುಖದಲ್ಲಿ ಭಯದ ಚಿಹ್ನೆಯಿರಲಿಲ್ಲ. ಕೀಚಕನು ಹೀಗೆ ಮಾತನಾಡಿದನೆಂಬ ಅಸಹನೆಯ ಮುಖಭಾವವೂ ಇರಲಿಲ್ಲ. ಅವನಿಂದ ತಪ್ಪಿಸಿಕೊಂಡು ಹೊರಟುಹೋಗಬೇಕೆಂಬ ಹೆದರಿಕೆಯೂ ಇರಲಿಲ್ಲ. ಸೈರಂಧ್ರಿಯೂ ಯಥೋಚಿತವಾಗಿಯೇ ಉತ್ತರಿಸಿದಳು :

"ನಾನಾದರೂ ಅದೇ ನಿರ್ಧಾರಕ್ಕೆ ಬಂದಿರುತ್ತೇನೆ. ಕೀಚಕ! ಆದರೆ...."

ದ್ರೌಪದಿಯ ಆ ಮಾತು ಕೀಚಕನ ಕಿವಿಗಳನ್ನು ಹೊಕ್ಕೊಡನೆಯೇ ಪ್ರಫುಲ್ಲವದನನಾದ ಕೀಚಕನು ಅವಸರದಿಂದ ಪ್ರಶ್ನಿಸಿದನು : "ಏನದು? ಸೈರಂಧ್ರಿ! ಸಂಕೋಚವಿಲ್ಲದೇ ಹೇಳು."

"ನನ್ನದೊಂದು ನಿಬಂಧನೆಯಿದೆ. ಅದರಂತೆ ನೀನು ನಡೆದುಕೊಳ್ಳಬೇಕು. ನಮ್ಮಿಬ್ಬರಿಗೂ ಯಾವ ವಿಧವಾದ ಅಪಾಯವೂ ಉಂಟಾಗಕೂಡದೆಂಬ ಆಶಯದಿಂದಲೇ ನಾನು ಈ ನಿಬಂಧನೆಯನ್ನು ಮುಂದೊಡ್ಡಿದ್ದೇನೆ. ನಿನ್ನ ತಮ್ಮಂದಿರಿಗಾಗಲೀ, ಮಿತ್ರರಿಗಾಗಲೀ ನಮ್ಮಿಬ್ಬರ ಮಿಲನದ

ವಾರ್ತೆಯು ತಿಳಿಯಕೂಡದು. ಇದು ಬಹಳ ನಿಗೂಢವಾಗಿರಬೇಕು. ಒಂದು ವೇಳೆ ನೀನು ಈ ವಿಷಯವನ್ನು ಸಂತೋಷದ ಆಧಿಕ್ಯದಿಂದ ನಿನ್ನ ಮಿತ್ರರಿಗಾಗಲೀ ತಮ್ಮಂದಿರಿಗಾಗಲೀ ಹೇಳಿಬಿಟ್ಟರೆ ಈ ವಾರ್ತೆಯು ಕರ್ಣಾಕರ್ಣಿಕೆಯಿಂದ ಯಶೋವಂತರಾದ ನನ್ನ ಗಂಧರ್ವಪತಿಗಳಿಗೂ ತಿಳಿದುಬಿಡಬಹುದೆಂಬ ಭಯವು ನನಗೆ ಬಹಳವಾಗಿದೆ. ಆದುದರಿಂದ ನೀನು ಯಾರಿಗೂ ಈ ವಿಷಯವನ್ನು ತಿಳಿಸುವುದಿಲ್ಲವೆಂದು ಮಾತುಕೊಡಬೇಕು. ಅನಂತರವೇ ನಾನು ನಿನ್ನವಳಾಗುವೆನು."

ಸೈರಂಧ್ರಿಯ ಮಾತುಗಳು ಕೀಚಕನ ಕಿವಿಗಳಿಗೆ ಅಮೃತಧಾರಾವರ್ಷವಾದಂತೆಯೇ ಆಯಿತು. ಸೈರಂಧ್ರಿಯು ಒಲಿದುಬರುವುದಾದರೆ ಕೀಚಕನು ಯಾವ ಕೆಲಸವನ್ನಾಗಲೀ ಮಾಡಲು ಸಿದ್ಧನಾಗಿಯೇ ಇದ್ದನು. (ಎಲ್ಲ ಕಾಮುಕರ ಅವಸ್ಥೆಯೂ ಹೀಗೆಯೇ. ಕಾಮಿಸಿದ ಹೆಣ್ಣನ್ನು ಪಡೆಯುವ ಸಲುವಾಗಿ ತಂದೆ-ತಾಯಿ ಬಂಧು-ಬಳಗ ಎಲ್ಲರನ್ನೂ ಪರಿತ್ಯಜಿಸಲು ಕೂಡ ಸಿದ್ಧರಾಗುವರು.)

ಆನಂದಭರಿತನಾದ ಕೀಚಕನು ಒಡನೆಯೇ ಉತ್ತರಿಸಿದನು : "ಹಾಗೆಯೇ ಆಗಲಿ, ಸೈರಂಧ್ರಿ! ನೀನು ಹೇಳಿದಂತೆಯೇ ಮಾಡುತ್ತೇನೆ. ಈ ವಿಷಯವನ್ನು ಯಾರೊಬ್ಬರಿಗೂ ಹೇಳುವುದಿಲ್ಲ. ನಿರ್ಜನವಾದ ನಿನ್ನ ಮನೆಗೆ ನಾನೊಬ್ಬನೇ ಬರುತ್ತೇನೆ. ಭದ್ರೇ! ಮದನಮೋಹಿತನಾದ ನಾನು ನಿನ್ನೊಡನೆ ಸಮಾಗಮಕ್ಕಾಗಿ ರಹಸ್ಯದಲ್ಲಿ ಬರುತ್ತೇನೆ. ನೀನು ನನ್ನೊಡನೆ ಸೇರುವುದನ್ನು ಸೂರ್ಯವರ್ಚಸ್ಕರಾದ ಆ ನಿನ್ನ ಗಂಧರ್ವಪತಿಗಳು ತಿಳಿಯದ ರೀತಿಯಲ್ಲಿಯೇ ಬರುತ್ತೇನೆ. ಈ ವಿಷಯದಲ್ಲಿ ನೀನು ಸ್ವಲ್ಪವಾದರೂ ಭಯಪಡುವ ಕಾರಣವಿಲ್ಲ."

"ಕೀಚಕ! ನಮ್ಮಿಬ್ಬರ ಸಮಾಗಮಕ್ಕಾಗಿ ನಾನು ಒಂದು ರಹಸ್ಯ ಸ್ಥಳವನ್ನೂ ನಿರ್ಧರಿಸಿದ್ದೇನೆ. ಇಲ್ಲಿರುವ ನಾಟ್ಯಶಾಲೆಯು ವಿರಾಟರಾಜನಿಂದ ಹೆಣ್ಣುಮಕ್ಕಳಿಗೆ ನರ್ತನಾಭ್ಯಾಸಕ್ಕಾಗಿ ನಿರ್ಮಿಸಲ್ಪಟ್ಟಿದೆ. ಹಗಲಿನಲ್ಲಿ ಈ ನಾಟ್ಯಶಾಲೆಗೆ ಹೆಣ್ಣುಮಕ್ಕಳು ಬಂದು ನೃತ್ಯವನ್ನು ಅಭ್ಯಸಿಸಿ ರಾತ್ರಿಯಾಗುವ ವೇಳೆಗೆ ತಮ್ಮ-ತಮ್ಮ ಮನೆಗಳಿಗೆ ಹೊರಟುಹೋಗುತ್ತಾರೆ.

ರಾತ್ರಿಯ ವೇಳೆಯಲ್ಲಿ ಆ ನಾಟ್ಯಶಾಲೆಯಲ್ಲಿ ಯಾರೊಬ್ಬರೂ ಇರುವುದಿಲ್ಲ. ಕತ್ತಲೆಯಲ್ಲಿ ನೀನು ನಾಟ್ಯಶಾಲೆಗೆ ಬರಬೇಕು. ನನ್ನ ಗಂಧರ್ವಪತಿಗಳೂ ಈ ವಿಷಯವನ್ನು ತಿಳಿಯಲಾರರು. ಗುಪ್ತವಾದ ಆ ಸ್ಥಳದಲ್ಲಿ ನಾವು ಸೇರಲು ಯಾವ ವಿಧವಾದ ಪ್ರತಿಬಂಧಕವೂ ಇರುವುದಿಲ್ಲ. ಎಲ್ಲ ಪ್ರತಿಬಂಧಕಗಳೂ ನಿಸ್ಸಂಶಯವಾಗಿ ಪರಿಹಾರವಾಗುತ್ತವೆ.”

ಜನಮೇಜಯ! ಕೀಚಕನೊಡನೆ ಹೀಗೆಂದು ಹೇಳಿಕಳುಹಿಸಿದನಂತರ ದ್ರೌಪದಿಯು ಈ ವಿಷಯವನ್ನು ಭೀಮಸೇನನಿಗೆ ತಿಳಿಸಲು ಅರ್ಧದಿನ ಕಾಯಬೇಕಾಯಿತು. ಆ ಅರ್ಧದಿನವನ್ನು ದ್ರೌಪದಿಯು ಒಂದು ಮಾಸದ ಅವಧಿಯಂತೆ ಕಳೆದಳು. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಭೀಮನಿಗೆ ಆ ವಾರ್ತೆಯನ್ನು ತಿಳಿಸಿಬಿಡಬೇಕೆಂಬ ಆತುರವು ದ್ರೌಪದಿಯ ಮನಸ್ಸಿನಲ್ಲಿದ್ದಿತು. ಹಗಲುಹೊತ್ತಿನಲ್ಲಿ ಹೋಗಿ ಭೀಮನನ್ನು ಸಂಧಿಸುವಂತಿರಲಿಲ್ಲ. ಸಾಯಂಕಾಲದವರೆಗೂ ಕಾಯಬೇಕಾಯಿತು. ಮೇಲಾಗಿ ತಾನು ಆ ವಾರ್ತೆಯನ್ನು ತಿಳಿಸಿದನಂತರವೇ ಕೀಚಕನ ವಧೆಗೆ ಪೂರ್ವಸಿದ್ಧತೆಯಾಗಬೇಕಾಗಿದ್ದಿತು. ಮನಸ್ಸಿನ ದುಗುಡದಿಂದಾಗಿ ಹೊತ್ತುಕಳೆದಂತೆ ಕಂಡರೂ ದ್ರೌಪದಿಗೆ ಹೊತ್ತೇ ಹೋಗದಂತಾಯಿತು.

(ದುಃಖದ ಸಮಯಗಳಲ್ಲಿ ಒಂದೊಂದು ದಿನವೂ ಒಂದೊಂದು ಯುಗವಾಗಿ ಪರಿಣಮಿಸುತ್ತದೆ. ಸುಖದ ದಿನಗಳಲ್ಲಿ ಒಂದು ವರ್ಷವೂ ಒಂದು ದಿನದಂತೆಯೇ ಕಳೆದುಹೋಗುತ್ತದೆ.)

ಇತ್ತಲಾಗಿ ಕೀಚಕನು ಒಡನೆಯೇ ತನ್ನ ಮನೆಯನ್ನು ಸೇರಿ ಆನಂದ ಸಾಗರದಲ್ಲಿ ಮುಳುಗಿಹೋದನು. ಅಂದಿನ ತನ್ನ ಆನಂದದ ಕಾರಣವನ್ನು ಯಾರೊಬ್ಬರೊಡನೆಯೂ ಹೇಳಿಕೊಳ್ಳುವಂತಿರಲಿಲ್ಲ. ತನ್ನಲ್ಲಿ ತಾನೇ ಆನಂದಪಟ್ಟುಕೊಳ್ಳಬಹುದಾಗಿದ್ದಿತು. ಆ ಮೂಢನಿಗೆ ಸೈರಂಧ್ರಿಯು ತನ್ನ ಮೃತ್ಯುಸ್ವರೂಪಳೆಂಬ ಅರಿವು ಸ್ವಲ್ಪವಾದರೂ ಇರಲಿಲ್ಲ. ಕಾಮಮೋಹಿತನಾದ ಅವನು ಶರೀರವನ್ನು ಗಂಧಾಭರಣ–ಮಾಲೆಗಳಿಂದ ಸಂಪೂರ್ಣವಾಗಿ ಸಿಂಗರಿಸಿಕೊಂಡನು. ಕ್ಷಣ-ಕ್ಷಣಕ್ಕೂ ನಿಲುಗನ್ನಡಿಯ ಮುಂದೆ ನಿಂತು ನೋಡುತ್ತಿದ್ದನು. ತನ್ನ ಅಲಂಕಾರದಲ್ಲಿ ಸ್ವಲ್ಪವಾದರೂ ಏರು-ಪೇರು

ಗಳಿದ್ದರೆ ಒಡನೆಯೇ ಸರಿಪಡಿಸಿಕೊಳ್ಳುತ್ತಿದ್ದನು. ತಾನು ಕತ್ತಲಿನಲ್ಲಿ ಸೈರಂಧ್ರಿಯನ್ನು ಸಂಧಿಸಬೇಕಾಗಿರುವುದರಿಂದ ಅಲಂಕಾರಗಳ ಪ್ರಯೋಜನ ವಾದರೂ ಏನೆಂಬ ವಿವೇಕವೂ ಆ ಮೂಢನಿಗಿರಲಿಲ್ಲ. ಅವನ ಅಲಂಕಾರವು ಮುಗಿದರೂ ಹಗಲು ಕಳೆಯಲೇ ಇಲ್ಲ. ಪ್ರತಿಕ್ಷಣದಲ್ಲಿಯೂ ವಿಶಾಲನೇತ್ರೆ ಯಾದ ಸೈರಂಧ್ರಿಯ ರೂಪ-ಲಾವಣ್ಯಗಳನ್ನೇ ಸ್ಮರಿಸುತ್ತಿದ್ದ ಕೀಚಕನಿಗೂ ಹಗಲು ಸುದೀರ್ಘವಾಗಿರುವಂತೆಯೇ ಭಾಸವಾಗುತ್ತಿದ್ದಿತು.

ಜನಮೇಜಯ! ನಿಶ್ಚಯವಾಗಿಯೂ ಅಂದು ಅವನ ರೂಪಶೋಭೆಯು ಅತ್ಯಧಿಕವಾಗಿದ್ದಿತು. ಕೀಚಕನಂದು ಸಾಕ್ಷಾತ್ ಮನ್ಮಥನಂತೆಯೇ ವಿರಾಜಿಸುತ್ತಿದ್ದನು. ಬತ್ತಿಯು ಸುಟ್ಟು ದೀಪವು ಆರಿಹೋಗುವ ಮೊದಲು ಉಜ್ವಲವಾದ ಕಾಂತಿಯನ್ನು ಬೀರುವಂತೆ–ಕಟ್ಟಕಡೆಯದಾಗಿ ಮಾಡಿಕೊಂಡ ಶರೀರಾಲಂಕಾರದಿಂದ ಕೀಚಕನು ಬಹಳ ಸ್ಫುರದ್ರೂಪಿಯಾಗಿ ವಿಜೃಂಭಿಸಿದನು.

ಮದನಮೋಹಿತನಾದ ಕೀಚಕನ ಮನಸ್ಸಿನಲ್ಲಿ ಸೈರಂಧ್ರಿಯು ತನ್ನನ್ನು ಮೋಸಗೊಳಿಸಿರಬಹುದೆಂಬ ಸಂಶಯದ ಸ್ಫುರಣೆಯಾಗಲೇ ಇಲ್ಲ. ಸ್ವಲ್ಪ ವಾದರೂ ವಿವೇಕದಿಂದ ಯೋಚಿಸಿದ್ದರೆ 'ಕೆಣಕಿದ ಹಾವು ಕಚ್ಚದೇ ಬಿಡು ವುದೇ?'–ಎಂಬ ಸಂಶಯಕ್ಕೆ ಅವಕಾಶವಿದ್ದಿತು. ಆದರೆ ಕಾಮಾಭಿಭೂತನಾದ ಕೀಚಕನಿಗೆ ಹೀಗೆ ಯೋಚಿಸುವುದೂ ಅಸಂಭಾವ್ಯವಾಗಿತ್ತು. ಹಗಲಿನಲ್ಲಿಯೇ ಸೈರಂಧ್ರಿಯ ಹಾವ-ಭಾವಗಳು, ಅವಳೊಡನೆ ಸರಸ-ಸಲ್ಲಾಪಗಳು, ಗಾಢಾಲಿಂಗನ–ಇತ್ಯಾದಿ ಕಾಮಕೇಳಿಗಳ ಕನಸನ್ನು ಕಾಣುತ್ತಿದ್ದ ಕೀಚಕನಿಗೆ ಹಗಲು ಕಳೆದುದರ ಅರಿವೂ ಉಂಟಾಗಲಿಲ್ಲ."

ವೈಶಂಪಾಯನರು ಮುಂದುವರಿದು ಹೇಳುತ್ತಾರೆ :

"ಜನಮೇಜಯ! ಸಾಯಂಕಾಲವಾಗುತ್ತಲೇ ಸುಕೇಶಾಂತಳಾದ, ಸುಮಧ್ಯಮೆಯಾದ ದ್ರೌಪದಿಯು ಪಾಕಶಾಲೆಗೆ ಹೋಗಿ ಕುರುವಂಶಪ್ರದೀಪ ನಾದ ಭೀಮಸೇನನ ಸಮೀಪದಲ್ಲಿ ನಿಂತು ಹೇಳಿದಳು :

“ಭೀಮಸೇನ! ನಿನ್ನ ನಿರ್ದೇಶನದಂತೆಯೇ ನಾನು ಕೀಚಕನೊಡನೆ ನಮ್ಮಿಬ್ಬರ ಸಮಾಗಮವು ಇಂದು ರಾತ್ರಿ ನಾಟ್ಯಶಾಲೆಯಲ್ಲಿ ನಡೆಯತಕ್ಕುದ್ದೆಂದು ಹೇಳಿಬಿಟ್ಟಿರುವೆನು. ನನ್ನ ಮಾತಿನಂತೆ ಕೀಚಕನು ಇಂದು ರಾತ್ರಿ ಕತ್ತಲಿನಲ್ಲಿ ಏಕಾಕಿಯಾಗಿ ನಾಟ್ಯಶಾಲೆಗೆ ಬರುತ್ತಾನೆ. ಅವನನ್ನಲ್ಲಿ ಅಂತ್ಯಗೊಳಿಸುವುದು ನಿನಗೆ ಸೇರಿದ್ದಾಗಿದೆ. ನೀನು ನಾಟ್ಯಶಾಲೆಗೆ ಹೋಗಿ ಧನಮದದಿಂದಲೂ, ಅಧಿಕಾರಮದದಿಂದಲೂ, ಶೌರ್ಯಮದದಿಂದಲೂ ಕೊಬ್ಬಿರುವ ಸೂತಪುತ್ರನಾದ ಕೀಚಕನನ್ನು ಜೀವರಹಿತನನ್ನಾಗಿ ಮಾಡು. ತನಗಿರುವ ಅಧಿಕಾರದ ಮತ್ತು ಬಲದ ದರ್ಪದಿಂದಲೇ ಆ ಸೂತಪುತ್ರನು ಗಂಧರ್ವರನ್ನೂ ನಿರ್ಲಕ್ಷಿಸಿದ್ದಾನೆ. ಶತ್ರುಗಳನ್ನು ಮರ್ದನಮಾಡುವವರಲ್ಲಿ ಶ್ರೇಷ್ಠನಾದವನೇ! ಸರೋವರದಲ್ಲಿ ಸೇರಿಕೊಂಡಿರುವ ದುಷ್ಟಸರ್ಪವೊಂದನ್ನು ಹೊರತೆಗೆದು ಸಂಹರಿಸಿ ಸರೋವರವನ್ನು ಅಪಾಯರಹಿತವನ್ನಾಗಿ ಮಾಡುವಂತೆ–ಈ ಅರಮನೆಯಲ್ಲಿ ನನಗೆ ಸರ್ಪರೂಪನಾಗಿರುವ ಕೀಚಕನನ್ನು ಮೇಲಕ್ಕೆತ್ತಿಹಾಕಿ ಸಂಹರಿಸು. ಭೀಮಸೇನ! ದುಷ್ಟನನ್ನು ಸಂಹರಿಸಿ ನನ್ನ ಕಣ್ಣೀರನ್ನು ತೊಡೆದು ಹಾಕು. ನಿನ್ನ ಅಭಿಮಾನವನ್ನೂ ಉಳಿಸಿಕೊಂಡು ನಮ್ಮ ವಂಶದ ಗೌರವವನ್ನೂ ಕಾಪಾಡು. ನಿನಗೆ ಮಂಗಳವಾಗಲಿ.”

“ದ್ರೌಪದಿ! ನಿನಗೆ ಸ್ವಾಗತ. ನೀನು ನನಗೆ ಪರಮಪ್ರಿಯವಾದ ಸಮಾಚಾರವನ್ನೇ ತಿಳಿಸುತ್ತಿರುವೆ. ಇದರಿಂದಲೇ ನಾನು ಉತ್ಸಾಹಿತನಾಗಿರುತ್ತೇನೆ. ಉತ್ಸಾಹವನ್ನು ಇಮ್ಮಡಿಗೊಳಿಸಲು ನಿನ್ನ ಮಾತುಗಳೇ ಸಾಕು. ಕೀಚಕನನ್ನು ಸಂಹರಿಸಲು ನನಗೆ ಬೇರೆ ಯಾರೊಬ್ಬರ ಸಹಾಯವೂ ಬೇಕಾಗಿಲ್ಲ. ಪ್ರಿಯೇ! ಹಿಂದೆ ಹಿಡಿಂಬನೊಡನೆ ಯುದ್ಧಮಾಡುವ ಸಮಯದಲ್ಲಿ ನನಗೆ ಎಷ್ಟು ಸಂತೋಷವಾಗಿದ್ದಿತೋ ಅಷ್ಟೇ ಸಂತೋಷವು ಈಗ ನೀನು ಒದಗಿಸಿಕೊಟ್ಟಿರುವ ಕೀಚಕನ ಸಮಾಗಮದಿಂದಲೂ ನನಗುಂಟಾಗುತ್ತದೆ.

ಸತ್ಯದ ಮೇಲೆ, ನನ್ನ ಅಣ್ಣ-ತಮ್ಮಂದಿರ ಮೇಲೆ ಮತ್ತು ಧರ್ಮದ ಮೇಲೆ ಆಣೆಯಿಟ್ಟು ಹೇಳುವೆನು ಕೇಳು, ದ್ರೌಪದಿ! ದೇವಪತಿಯಾದ

ಇಂದ್ರನು ವೃತ್ರಾಸುರನನ್ನು ವಧಿಸಿದಂತೆ–ನಾನು ದುರುಳನಾದ ಆ ಕೀಚಕನನ್ನು ವಧಿಸುವೆನು. ರಹಸ್ಯದಲ್ಲಿಯೇ ಆಗಲೀ ; ಬಹಿರಂಗವಾಗಿಯೇ ಆಗಲಿ–ನಾನವನನ್ನು ಖಂಡಿತವಾಗಿಯೂ ನುಚ್ಚುನೂರಾಗಿ ಮಾಡಿಬಿಡುವೆನು. ಅವನ ಸಹಾಯಕ್ಕೆಂದು ಮತ್ಸ್ಯರಾಜನ ಸೈನ್ಯವೇ ಬಂದರೂ ಆ ಎಲ್ಲವನ್ನೂ ನಾನು ಧ್ವಂಸಮಾಡಿಬಿಡುವೆನು. ಅನಂತರದಲ್ಲಿ ದುರ್ಯೋಧನನನ್ನೂ ಸಂಹರಿಸಿ ಕಳೆದುಕೊಂಡಿರುವ ರಾಜ್ಯವನ್ನು ಪುನಃ ಗಳಿಸುವೆನು. ಯುಧಿಷ್ಠಿರನು ಇದ್ದಲ್ಲಿಯೇ ಇದ್ದು ವಿರಾಟರಾಜನ ಸೇವೆಯನ್ನು ಮಾಡುತ್ತಿರಲಿ. ಅವನ ಅನುಮತಿಯನ್ನೇ ನಿರೀಕ್ಷಿಸುತ್ತಿದ್ದರೆ ನಾವು ಯಾವ ಕಾರ್ಯವನ್ನೂ ಮಾಡುವಂತೆಯೇ ಇಲ್ಲ."

ಆದರೆ ಕೀಚಕನನ್ನು ಬಹಿರಂಗವಾಗಿ ಸಂಹರಿಸಿ ತಾವಾರೆಂಬುದನ್ನು ಪ್ರತಿಜ್ಞಾತವಾದ ಅವಧಿಗಿಂತಲೂ ಮೊದಲೇ ಹೊರಪಡಿಸಿಕೊಳ್ಳುವುದು ದ್ರೌಪದಿಗೂ ಇಷ್ಟವಿರಲಿಲ್ಲ. ಕೆಲವು ಸಮಯಗಳಲ್ಲಿ ಯುಧಿಷ್ಠಿರನನ್ನು ನಿಂದಿಸಿ ದ್ರೌಪದಿಯು ಮಾತನಾಡಿದ್ದರೂ ಧರ್ಮಾತ್ಮನಾದ ಯುಧಿಷ್ಠಿರನ ಇಚ್ಛೆಗೆ ವಿರೋಧವಾಗಿ ವರ್ತಿಸುವ ಆಶಯವಾಗಲೀ, ಧೈರ್ಯವಾಗಲೀ ದ್ರೌಪದಿಗಿರಲಿಲ್ಲ. ಆದುದರಿಂದಲೇ ಭೀಮನು ಹೇಳಿದ ಕೆಲವು ಮಾತುಗಳು ಅವಳಿಗೆ ಸಹ್ಯವಾಗಲಿಲ್ಲ. ಕೀಚಕನನ್ನು ಬಹಿರಂಗದಲ್ಲಿ ಕೊಲ್ಲುವುದಾಗಲೀ–ಅನಂತರದಲ್ಲಿ ಮತ್ಸ್ಯಯೋಧರನ್ನು ಎದುರಿಸಿ ನಿಲ್ಲುವುದಾಗಲೀ–ದ್ರೌಪದಿಗೆ ಇಷ್ಟವಿರಲಿಲ್ಲ. ಒಡನೆಯೇ ದ್ರೌಪದಿಯು ಭೀಮನಿಗೆ ಹೇಳಿದಳು :

**ಯಥಾ ನ ಸಂತ್ಯಜೇಥಾಸ್ತ್ವಂ ಸತ್ಯಂ ವೈ ಮತ್ಕೃತೇ ವಿಭೋ ।**
**ನಿಗೂಢಸ್ತ್ವಂ ತಥಾ ಪಾರ್ಥ ಕೀಚಕಂ ತಂ ನಿಷೂದಯ ॥೩೫॥**

"ಪ್ರಭುವೇ! ನನ್ನ ಸಲುವಾಗಿ ನೀನೆಂದಿಗೂ ನೀವು ಮಾಡಿಕೊಂಡಿರುವ ಸತ್ಯಪ್ರತಿಜ್ಞೆಯನ್ನು ಪರಿತ್ಯಜಿಸಕೂಡದು. ಆದುದರಿಂದ ಯಾರೊಬ್ಬರಿಗೂ ನೀನಾರೆಂಬ ಸುಳಿವು ಸ್ವಲ್ಪವೂ ಸಿಕ್ಕದಂತೆ ರಹಸ್ಯದಲ್ಲಿಯೇ ನೀನು ಕೀಚಕನನ್ನು ಸಂಹರಿಸು."

“ಭೀರು! ನಮ್ಮ ಅಜ್ಞಾತವಾಸವನ್ನು ಬಹಿರಂಗಪಡಿಸುತ್ತೇನೆಂದು ನೀನೆಂದಿಗೂ ಭಯಪಡುವ ಕಾರಣವಿಲ್ಲ. ನೀನು ಹೇಳಿದಂತೆಯೇ ನಾನು ರಹಸ್ಯದಲ್ಲಿಯೇ ಕೀಚಕನನ್ನೂ ಮತ್ತು ಅವನ ಸಹಾಯಕ್ಕೆ ಬರುವ ಅವನ ಬಂಧುಗಳನ್ನೂ ಧ್ವಂಸಮಾಡಿಬಿಡುತ್ತೇನೆ. ಕತ್ತಲಿನಲ್ಲಿ ಅವನ ಕಣ್ಣುಗಳಿಗೆ ಕಾಣಿಸಿಕೊಳ್ಳದೆಯೇ–ಆನೆಯು ಬಿಲ್ವಫಲವನ್ನು ಬಹುಸುಲಭವಾಗಿ ತುಳಿದು ಚೂರು-ಚೂರುಮಾಡುವಂತೆ–ಅಲಭ್ಯಳಾದ ನಿನ್ನನ್ನು ಪಡೆಯಬೇಕೆಂದು ಆಶಿಸುತ್ತಿರುವ ದುರಾತ್ಮನಾದ ಕೀಚಕನ ತಲೆಯನ್ನು ನುಚ್ಚುನೂರು ಮಾಡಿಬಿಡುತ್ತೇನೆ.”

ಜನಮೇಜಯ! ಹೀಗೆಂಬುದಾಗಿ ಭೀಮಸೇನನು ದ್ರೌಪದಿಗೆ ಆಶ್ವಾಸನೆಯನ್ನಿತ್ತು ರಾತ್ರಿಯಲ್ಲಿ ಕೀಚಕನು ಬರುವ ಮೊದಲೇ ಕತ್ತಲೆಯಲ್ಲಿ ನಾಟ್ಯಶಾಲೆಗೆ ಹೋಗಿ–ಸಿಂಹವು ಮರೆಯಲ್ಲಿ ನಿಂತುಕೊಂಡು, ಓಡುತ್ತಾ ಸಂಭ್ರಮದಿಂದ ಬರುವ ಜಿಂಕೆಗಾಗಿ ಹೊಂಚುಹಾಕುವಂತೆ–ಕೀಚಕನ ಆಗಮನವನ್ನೇ ನಿರೀಕ್ಷಿಸುತ್ತಾ ಕುಳಿತನು. ಕೀಚಕನೂ ಸಹ ತನ್ನ ಶರೀರವನ್ನು ತನ್ನ ಮನವೊಪ್ಪುವಂತೆ ಸಿಂಗರಿಸಿಕೊಂಡು ನಿಯತಕಾಲಕ್ಕೆ ಸರಿಯಾಗಿ ಸೈರಂಧ್ರಿಯೊಡನೆ ರತಿಸುಖವನ್ನು ಅನುಭವಿಸುವ ಆಶೆಯಿಂದ ನಾಟ್ಯ ಶಾಲೆಯ ಸಮೀಪಕ್ಕೆ ಆಗಮಿಸಿದನು. ಸೈರಂಧ್ರಿಯು ಹೇಳಿದ ಸಂಕೇತಸ್ಥಾನವು ಅದೇ ಆಗಿರುವುದೆಂಬ ನಿರ್ಧಾರದಿಂದ ಕೀಚಕನು ನಾಟ್ಯಶಾಲೆಯನ್ನು ಪ್ರವೇಶಿಸಿದನು. ಕತ್ತಲಿನಿಂದ ಆವೃತವಾಗಿದ್ದ ನಾಟ್ಯಶಾಲೆಯನ್ನು ಪ್ರವೇಶಿಸಿದ ನಂತರ ದುರ್ಮತಿಯಾದ ಕೀಚಕನು-ತಾನು ಬರುವುದಕ್ಕಿಂತಲೂ ಮೊದಲೇ ಬಂದಿದ್ದ, ಅಪ್ರತಿಮತೇಜಸ್ವಿಯಾದ ಭೀಮಸೇನನ ಸಮೀಪಕ್ಕೆ ಮೆಲ್ಲ-ಮೆಲ್ಲನೆ ಹೋಗಿ ಭೀಮನು ಮಲಗಿದ್ದ ಮಂಚದ ಮೇಲೆ ಕುಳಿತನು. ಮಲಗಿರುವ ವ್ಯಕ್ತಿಯು ತಾನು ಕಾಮಿಸಿರುವ ಸೈರಂಧ್ರಿಯೇ–ಅಲ್ಲವೇ?–ಎಂಬುದರಲ್ಲಿ ಕೀಚಕನಿಗೆ ಸಂಶಯಬರಲು ಕಾರಣವಿರಲಿಲ್ಲ. ಸೈರಂಧ್ರಿಯು ಹೇಳಿದಂತೆ ನಡೆದುಕೊಂಡುದಕ್ಕಾಗಿ ಕೀಚಕನ ಆನಂದಕ್ಕೆ ಪಾರವೇ ಇಲ್ಲವಾಯಿತು. ಕತ್ತಲೆಯಲ್ಲಿಯೇ ತನ್ನ ಹೃದಯದ ಆನಂದವನ್ನು ಅರಳಿದ ಮುಖದಿಂದ ಹೊರಸೂಸುತ್ತಾ–‘ಪ್ರಿಯೇ!’ ‘ಭಾಮಿನಿ!’ ‘ಕೋಮ

ಲಾಂಗಿ!'–ಎಂದು ಮುಂತಾದ ಪ್ರಿಯೋಕ್ತಿಗಳನ್ನು ಮೆಲ್ಲ-ಮೆಲ್ಲನೆ ಹೇಳುತ್ತಾ ಭೀಮಸೇನನ ಮೈದಡವಿದನು.



ಕಾಮಾಗ್ನಿಯಿಂದ ಪ್ರಚೋದಿತವಾದ ಕೀಚಕನ ಹಸ್ತಸ್ಪರ್ಶವು ಭೀಮಸೇನನ ಹೃದಯಾಂತರಾಳದಲ್ಲಡಗಿದ್ದ ಕ್ರೋಧಾಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿತು. ಕೀಚಕನು ಮೈದಡವುತ್ತಿದ್ದಂತೆಯೇ ಭೀಮಸೇನನು ಕಿಡಿ-ಕಿಡಿ ಯಾದನು. ತನ್ನ ಸ್ಪರ್ಶವು ಭೀಮಸೇನನ ಕ್ರೋಧಾಗ್ನಿಯನ್ನು ಪ್ರಜ್ವಲಿಸುತ್ತಿದೆಯೆಂಬುದು ಕೀಚಕನಿಗೆ ಹೇಗೆ ತಾನೇ ತಿಳಿದೀತು? ಮರುಕ್ಷಣ

ದಲ್ಲಿಯೇ ಸೈರಂಧ್ರಿಯು ತನ್ನನ್ನು ಬಾಹುಪಾಶಗಳಿಂದ ಬಿಗಿದಪ್ಪುವಳೆಂಬ ಭ್ರಾಂತಿಯಿಂದ ಕಾಮಮೋಹಿತನಾದ ಕೀಚಕನು ಸೈರಂಧ್ರಿಯು ತನ್ನ ವಶಳಾದಳೆಂಬ ಆನಂದಾಧಿಕ್ಯದಿಂದ ಉನ್ಮತ್ತನಾಗಿ ನಗು-ನಗುತ್ತಾ ಸೈರಂಧ್ರಿಯನ್ನು ಸಂಬೋಧಿಸಿ ಹೇಳಿದನು : "ಆಕರ್ಷಣೀಯವಾದ ಹುಬ್ಬುಗಳುಳ್ಳವಳೇ! ಹೇರಳವಾದ ಐಶ್ವರ್ಯವನ್ನು ನಿನಗೆ ಈಗಾಗಲೇ ನಾನು ತೆಗೆದಿಟ್ಟುಬಂದಿದ್ದೇನೆ. ಆ ಐಶ್ವರ್ಯದಲ್ಲಿ ವಜ್ರ, ವೈಡೂರ್ಯ, ರತ್ನ, ಮುತ್ತು, ಸ್ವರ್ಣಗಳೆಲ್ಲವೂ ಸೇರಿವೆ. ಇಷ್ಟುಮಾತ್ರವಲ್ಲ. ನಿನಗಾಗಿ ನಯನಮನೋಹರವಾದ ಅರಮನೆಯೊಂದನ್ನೂ ಸಿದ್ಧಗೊಳಿಸಿದ್ದೇನೆ. ಆ ಅರಮನೆಯಲ್ಲಿ ನೂರಾರು ದಾಸಿಯರಿದ್ದಾರೆ. ರೂಪ-ಲಾವಣ್ಯಯುಕ್ತರಾದ ಯುವತಿಯರಿದ್ದಾರೆ. ನಾವಿಬ್ಬರೂ ರತಿಕ್ರೀಡೆಯಾಡಲು ಅತ್ಯಂತಸುಂದರವಾಗಿ ಸಿಂಗರಿಸಲ್ಪಟ್ಟ ಶಯನಮಂದಿರವಿದೆ. ಅವೆಲ್ಲವನ್ನೂ ನಿನಗಾಗಿ ಸಿದ್ಧಗೊಳಿಸಿದ ನಂತರವೇ ನಾನಿಲ್ಲಿಗೆ ಬಂದಿರುವೆನು. ಪ್ರಿಯೇ! ಇವೆಲ್ಲವನ್ನೂ ನಿನಗಾಗಿ ಸಿದ್ಧಗೊಳಿಸಿ ನನ್ನ ಶರೀರವನ್ನು ನಿನಗಾಗಿ ಸಿಂಗರಿಸಿಕೊಂಡು ಒಡನೆಯೇ ಇಲ್ಲಿಗೆ ಹೊರಟು ಬಂದೆನು. ಯಾವಾಗಲೂ ಮನೆಯಲ್ಲಿರುವ ಸ್ತ್ರೀಯರು ಕಾರಣವಿಲ್ಲದೆಯೇ ನನ್ನನ್ನು ಹೊಗಳುತ್ತಿರುತ್ತಾರೆ.

**ಸುವಾಸಾ ದರ್ಶನೀಯಶ್ಚ ನಾನ್ಯೋಽಸ್ತಿ ತ್ವಾದೃಶಃ ಪುಮಾನ್ ॥**

"ನೀನು ಒಳ್ಳೆಯ (ಸುಂದರ) ವಸ್ತ್ರಗಳನ್ನು ಧರಿಸಿದ್ದೀಯೆ. ನೀನು ಹಾಕಿಕೊಂಡಿರುವ ವಸ್ತ್ರಗಳು ನಿನಗೆ ಬಹಳ ಚೆನ್ನಾಗಿ ಒಪ್ಪುತ್ತವೆ. ಇಂತಹ ಉತ್ತಮೋತ್ತಮವಾದ ವಸ್ತ್ರಗಳನ್ನು ಧರಿಸಿ ಸಿಂಗರಿಸಿಕೊಂಡಿರುವ ನಿನ್ನನ್ನು ನೋಡುತ್ತಲೇ ಇರಬೇಕೆನ್ನಿಸುತ್ತದೆ. ನಿನ್ನಂತಹ ಸುಂದರಪುರುಷನು ಮತ್ತಾರೂ ಇರುವುದಿಲ್ಲ"–ಎಂದು ಮುಂತಾಗಿ ಹೇಳಿದನು. ನೀನು ನನ್ನನ್ನು ಒಲಿದುದರಿಂದ ಆ ಮಾತು ಸತ್ಯವಾಯಿತು. ಆದರೆ ಅವರಿಗಾಗಿ ನಾನು ಸಿಂಗರಿಸಿಕೊಳ್ಳಲಿಲ್ಲ. ಭಾಮಿನಿ! ನಿನಗಾಗಿ ಶ್ರಮವಹಿಸಿ ಸಿಂಗರಿಸಿಕೊಂಡು ಬಂದಿರುತ್ತೇನೆ."

ಭೀಮಸೇನನು ಮಲಗಿದ್ದಂತೆಯೇ ಉತ್ತರಿಸಿದನು :

"ನೀನು ಅದೃಷ್ಟವಶದಿಂದ ಬಹಳ ಸುಂದರನಾಗಿರುವೆ. ಅತಿಸುಂದರ

ನಾಗಿರುವೆನೆಂದು ನಿನ್ನಷ್ಟಕ್ಕೆ ನೀನೇ ಹೇಳಿಕೊಳ್ಳುತ್ತಿರುವೆ. ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುತ್ತಿರುವೆ. ಆದರೆ ನೀನೀಗ ಮುಟ್ಟಿ ಅನುಭವಿಸುತ್ತಿರುವ ಸ್ಪರ್ಶಸುಖವು ಹಿಂದೆಂದೂ ನಿನಗೆ ಲಭ್ಯವಾಗಿರಲಾರದು. ಏಕೆಂದರೆ : ನಿನಗೆ ಸ್ತ್ರೀಯರನ್ನು ಸ್ಪರ್ಶಿಸಿದರೆ ಎಂತಹ ಅನಿರ್ವಾಚ್ಯವಾದ ಸುಖವು ಲಭಿಸುವುದೆಂಬ ವಿಷಯವು ಚೆನ್ನಾಗಿ ತಿಳಿದಿರುವುದು. ಕಾಮಧರ್ಮದಲ್ಲಿ ಅಥವಾ ಕಾಮಕಲೆಯಲ್ಲಿ ನೀನು ಬಹುವಿಚಕ್ಷಣನಾಗಿರುವೆ. ಸ್ತ್ರೀಯರಲ್ಲಿ ಪ್ರೀತಿಯನ್ನುಂಟುಮಾಡತಕ್ಕವನು ನೀನು. ನೀನೇ ಹೇಳಿದಂತೆ ನಿನ್ನಂತಹ ಸುಂದರಪುರುಷನು ಮತ್ತಾರೂ ಇಲ್ಲವೆಂದು ನವಯುವತಿಯರೇ ನಿನ್ನನ್ನು ಹೊಗಳಿದ್ದಾರೆ. ನಿನ್ನಂತಹ ಪುರುಷನು ಮತ್ತಾರೂ ಇರಲಾರರೆಂದು ನನಗೂ ಭಾಸವಾಗುತ್ತಿದೆ."

ಜನಮೇಜಯ! ಹೀಗೆಂಬುದಾಗಿ ಭೀಮಪರಾಕ್ರಮನಾದ, ಮಹಾ ಬಾಹುವಾದ ಭೀಮಸೇನನು ಕೀಚಕನಿಗೆ ಹೇಳಿ ಒಡನೆಯೇ ಮೇಲೆದ್ದು ಕುಳಿತು ಗಹ-ಗಹಿಸಿ ನಗುತ್ತಾ ಕೀಚಕನನ್ನು ಕುರಿತು ಪುನಃ ಹೇಳಿದನು :

"ಮೂರ್ಖ! ಸಿಂಹವು ಮಹಾಗಜವನ್ನು ಹೊಡೆದುರುಳಿಸಿ ಎಳೆ ದಾಡುವಂತೆ–ನಾನು ನಿನ್ನನ್ನು ಹೊಡೆದುರುಳಿಸಿ ಎಳೆದಾಡುತ್ತೇನೆ. ಈ ರೀತಿ ಯಲ್ಲಿ ಹತನಾದ ನಿನ್ನನ್ನು ನಿನ್ನ ಅಕ್ಕನು ಸ್ವಲ್ಪ ಕಾಲದಲ್ಲಿಯೇ ಕಾಣಲಿದ್ದಾಳೆ. ನಿನ್ನ ಸಂಹಾರವಾಯಿತೆಂದರೆ ಸೈರಂಧ್ರಿಯು ಯಾವ ವಿಧವಾದ ಅಡ್ಡಿ-ಆತಂಕ ಗಳೂ ಇಲ್ಲದೇ ಈ ಅರಮನೆಯಲ್ಲಿ ಸಂಚರಿಸಬಹುದಾಗಿದೆ. ಸೈರಂಧ್ರಿಯ ಪತಿಗಳೂ ತಮ್ಮ ಪತ್ನಿಯ ವಿಷಯವಾಗಿ ಮನಸ್ಸಿನಲ್ಲಿ ಆತಂಕಪಟ್ಟುಕೊಳ್ಳದೇ ಸುಖವಾಗಿರಲು ಅವಕಾಶವಾಗುತ್ತದೆ." ಹೀಗೆಂದು ಹೇಳುತ್ತಾ ಭೀಮ ಸೇನನು ಹೂವಿನಿಂದ ಅಲಂಕೃತವಾಗಿದ್ದ ಸುವಾಸನೆಯುಳ್ಳ ಕೀಚಕನ ಮುಡಿ ಯನ್ನು ಹಿಡಿದೆಳೆದನು. ಮಹಾಬಲಶಾಲಿಯಾದ ಕೀಚಕನು ನಿಮಿಷಮಾತ್ರ ದಲ್ಲಿ ಭೀಮನ ಹಿಡಿತದಿಂದ ತನ್ನ ತಲೆಗೂದಲನ್ನು ಬಿಡಿಸಿಕೊಂಡು ಪಾಂಡ ವನ ಎರಡು ತೋಳುಗಳನ್ನೂ ಬಲವಾಗಿ ಹಿಡಿದುಕೊಂಡನು. ವಸಂತರ್ತು ವಿನಲ್ಲಿ ಒಂದು ಹೆಣ್ಣಾನೆಗಾಗಿ ಕಾದಾಡುವ ಎರಡು ಸಲಗಗಳಂತೆ ಭೀಮ-ಕೀಚಕರು ಬಹುಘೋರವಾದ ಬಾಹುಯುದ್ಧವನ್ನು ಪ್ರಾರಂಭಿಸಿದರು.

ಹಿಂದೆ ಕಪಿಮುಖ್ಯರಾದ ವಾಲಿ-ಸುಗ್ರೀವರಿಗೆ ನಡೆದ ಬಾಹುಯುದ್ಧದಂತೆ ಕೀಚಕಮುಖ್ಯನಿಗೂ–ನರೋತ್ತಮನಾದ ಭೀಮಸೇನನಿಗೂ ಘೋರವಾದ ಬಾಹುಯುದ್ಧವು ಪ್ರಾರಂಭವಾಯಿತು. ಸಿಂಹಪ್ರಾಯರಾದ ಆ ಇಬ್ಬರು ವೀರರಿಗೂ ಎದುರಾಳಿಯನ್ನು ಜಯಿಸಬೇಕೆನ್ನುವ ಆಕಾಂಕ್ಷೆಯು ಬಹಳವಾಗಿದ್ದಿತು. ಕ್ರೋಧವೆಂಬ ವಿಷದಿಂದ ಉದ್ಧತವಾದ ಐದು ಹೆಡೆಗಳಿರುವ ಸರ್ಪಗಳಂತೆಯೇ ಕಾಣುತ್ತಿದ್ದ, ಐದು ಬೆರಳುಗಳಿದ್ದ ಎರಡು ಬಾಹುಗಳನ್ನೂ ಮೇಲೆತ್ತಿ ಇಬ್ಬರು ಮಹಾವೀರರೂ ಉಗುರುಗಳಿಂದ ಶರೀರಗಳನ್ನು ಅನ್ಯೋನ್ಯವಾಗಿ ಗಾಯಗೊಳಿಸಿದರು. ತೀಕ್ಷ್ಣವಾಗಿದ್ದ ಹಲ್ಲುಗಳಿಂದ ಒಬ್ಬರು ಮತ್ತೊಬ್ಬರನ್ನು ಕಚ್ಚಿ ಘಾಸಿಪಡಿಸಿದರು. ಮಹಾಬಲಿಷ್ಠನಾದ ಕೀಚಕನೊಮ್ಮೆ ಭೀಮಸೇನನನ್ನು ಬಲವಾಗಿ ಅಪ್ಪಳಿಸಿದನು. ಸ್ಥಿರಪ್ರತಿಜ್ಞನಾದ ಭೀಮಸೇನನು ಆ ಪ್ರಹಾರದಿಂದ ಯುದ್ಧವನ್ನು ಬಿಟ್ಟುಹೋಗುವುದಂತಿರಲಿ, ಒಂದು ಹೆಜ್ಜೆಯನ್ನಾದರೂ ಹಿಂದಿಡಲಿಲ್ಲ. ಪುನಃ ಕೀಚಕನು ಭೀಮನನ್ನು ಬಾಚಿ-ತಬ್ಬಿ ಅತ್ತಲಿಂದಿತ್ತ ಸೆಳೆದನು. ಭೀಮನೂ ಸಹ ಅದೇ ವರಸೆಯಲ್ಲಿಯೇ ಕೀಚಕನನ್ನೊಮ್ಮೆ ಕೆಳಕ್ಕಪ್ಪಳಿಸಿದನು. ಹೋರಿಗಳೆರಡು ಕಾದುವಂತೆ ಭೀಮ-ಕೀಚಕರು ರಭಸದಿಂದ ಕಾದಾಡುತ್ತಿದ್ದರು. ಅವರಿಗೆ ಬೇರೆ ಯಾವ ಆಯುಧಗಳೂ ಇರಲಿಲ್ಲ. ನಖ-ದಂತಗಳೇ ಅವರ ಆಯುಧಗಳಾಗಿದ್ದುವು. ವಜ್ರಾಯುಧಕ್ಕೆ ಸಮಾನವಾಗಿದ್ದ ಮುಷ್ಟಿಗಳಿಂದ ಒಬ್ಬರು ಮತ್ತೊಬ್ಬರನ್ನು ಪ್ರಹರಿಸುತ್ತಿದ್ದರು. ಅವರ ದ್ವಂದ್ವಯುದ್ಧವು ಮದಿಸಿದ ಹುಲಿಗಳೆರಡರ ಕಾಳಗವನ್ನು ಅನುಕರಿಸುತ್ತಿದ್ದಿತು.

ತಮ್ಮ ಭುಜಬಲದಿಂದ ಒಬ್ಬರು ಮತ್ತೊಬ್ಬರನ್ನು ಸೆಳೆದು ಕೆಳಗೆ ಬೀಳಿಸುತ್ತಿದ್ದರು. ಕೆಳಗೆ ಬಿದ್ದವನು ಮರುಕ್ಷಣದಲ್ಲಿಯೇ ಮೇಲೆದ್ದು ಎದುರಾಳಿಯ ಕುತ್ತಿಗೆಯನ್ನು ಹಿಡಿದು ಜಗ್ಗುತ್ತಿದ್ದನು. ಮರುಕ್ಷಣದಲ್ಲಿಯೇ ಇಬ್ಬರೂ ಬಹಳ ದೂರ ಸರಿದು ನಿಲ್ಲುವರು. ಮದಿಸಿದ ಆನೆಗಳು ತಮ್ಮ ಸೊಂಡಿಲುಗಳನ್ನು ಮೇಲೆತ್ತಿ ಒಂದನ್ನು ಮತ್ತೊಂದು ಅಪ್ಪಳಿಸಲು ರಭಸದಿಂದ ನುಗ್ಗಿ ಹೋಗುವಂತೆ–ಭೀಮ-ಕೀಚಕರು ತಮ್ಮ ಕೈಗಳನ್ನು ಮೇಲೆತ್ತಿ ಪಟ್ಟುಹಿಡಿದು ಎದುರಾಳಿಯನ್ನು ಕೆಳಗೆ ಬೀಳಿಸಲು ಮುನ್ನುಗ್ಗಿ ಬರು

ತ್ತಿದ್ದರು. ಒಮ್ಮೆ ಕೀಚಕನು ಭೀಮನನ್ನು ಬಾಹುಪಾಶದಿಂದ ಬಂಧಿಸಿದನು. ಹಾಗೆಯೇ ಭೀಮನು ಕೀಚಕನನ್ನು ಬಾಹುಪಾಶದಿಂದ ಬಿಗಿದು ಕೆಳಕ್ಕೆ ಕೆಡುಹುವುದರಲ್ಲಿದ್ದಾಗ ಬಲಿಷ್ಠನಾದ ಕೀಚಕನು ಭೀಮನ ಬಂಧನದಿಂದ ಬಿಡಿಸಿಕೊಂಡನಲ್ಲದೇ–ಪಟ್ಟುಹಾಕಿ ಭೀಮನನ್ನೇ ಕೆಳಗೆ ಕೆಡವಿದನು. ಅವರ ಪರಸ್ಪರಪ್ರಹಾರಗಳಿಂದ ಉಂಟಾಗುತ್ತಿದ್ದ ಶಬ್ದವು ಬಿದಿರುಗಳು ಒಡೆದು ಸಿಡಿಯುವಾಗ ಉಂಟಾಗುವ ಭಯಂಕರಶಬ್ದವನ್ನು ಅನುಕರಿಸುತ್ತಿದ್ದಿತು. 'ಫಟ್', 'ಫಟ್' ಎಂಬ ಶಬ್ದವು ಅನವರತವಾಗಿ ಕೇಳಿಬರುತ್ತಿದ್ದಿತು. ಭೀಮನಿಗೆ ಇನ್ನು ಹೆಚ್ಚು ಕಾಲ ಕೀಚಕನೊಡನೆ ಸೆಣೆಸಾಡಿಕೊಂಡಿರಲು ಇಷ್ಟವಾಗಲಿಲ್ಲ. ತನ್ನ ಸಂಪೂರ್ಣಬಲವನ್ನೂ ಪ್ರಯೋಗಿಸಿ ಚಂಡಮಾರುತವು ವೃಕ್ಷವನ್ನು ಅಳ್ಳಾಡಿಸುವ ರೀತಿಯಲ್ಲಿ–ಇತ್ತಿಂದತ್ತ ಹತ್ತಾರು ಬಾರಿ ಕೀಚಕನನ್ನು ಸೆಳೆದಾಡಿದನು. ಆ ವೇಳೆಗೆ ಕೀಚಕನು ದುರ್ಬಲನಾದನು. ಅವನಿಗೆ ಚೇತರಿಸಿಕೊಳ್ಳಲು ಅವಕಾಶವೇ ಸಿಕ್ಕಲಿಲ್ಲ.

ಮೃತ್ಯುವಿನ ದವಡೆಯಲ್ಲಿ ಸಿಕ್ಕಿರುವವನು ಸಾವನ್ನು ತಪ್ಪಿಸಿಕೊಳ್ಳಲು ಬಹಳವಾಗಿ ಹೋರಾಡುವುದು ಸ್ವಾಭಾವಿಕ. ಚಂಡಮಾರುತವು ಮರವನ್ನು ತತ್ತರಗೊಳಿಸುವಂತೆ–ಭೀಮನು ಕೀಚಕನನ್ನು ಅತ್ತಿಂದಿತ್ತ ಸೆಳೆದಾಡುತ್ತಿದ್ದರೂ ಕೀಚಕನು ಪುನಃ ತನ್ನ ಶಕ್ತಿಯೆಲ್ಲವನ್ನೂ ಕೇಂದ್ರೀಕರಿಸಿ, ಕೋಪದಿಂದ ವೇಗವಾಗಿ ಹೆಜ್ಜೆಯಿಡುತ್ತಿದ್ದ, ಸ್ವಲ್ಪ ಆಯತಪ್ಪಿದ ಭೀಮಸೇನನನ್ನು ಬಲವಾಗಿ ಹಿಡಿದು ಮಂಡಿಯಿಂದ ಪ್ರಹರಿಸಿ ಕೆಳಗೆ ಬೀಳಿಸಿದನು. ಮರುಕ್ಷಣದಲ್ಲಿಯೇ ಭೀಮನು–ದಂಡವನ್ನು ಧರಿಸಿಬಂದ ಯಮರಾಜನಂತೆ–ಮೇಲೆದ್ದು ನಿಂತನು. ನಿರ್ಜನವಾಗಿದ್ದ ಆ ನಾಟ್ಯಶಾಲೆಯಲ್ಲಿ ಬಲೋನ್ಮತ್ತರಾದ ಭೀಮ-ಕೀಚಕರು ಬಹಳ ಹೊತ್ತಿನವರೆಗೂ ಕಾದಾಡು ತ್ತಲೇ ಇದ್ದರು. ಆಗಿಂದಾಗ ಅವರು ಮಾಡುತ್ತಿದ್ದ ವೀರಗರ್ಜನೆಗಳಿಂದಾಗಿ ಆ ನಾಟ್ಯಶಾಲೆಯೇ ಕಂಪಿಸುತ್ತಿದ್ದಿತು. ಒಮ್ಮೆ ಭೀಮನು ಸಮಯನೋಡಿ ಕೀಚಕನ ವಕ್ಷಃಸ್ಥಳಕ್ಕೆ ಸರಿಯಾಗಿ ಮುಷ್ಟಿಯಿಂದ ಪ್ರಹರಿಸಿದನು. ಆದರೂ ಕೀಚಕನು ಒಂದು ಹೆಜ್ಜೆಯನ್ನೂ ಹಿಂದಕ್ಕಿಡಲಿಲ್ಲ. ಮರುಕ್ಷಣದಲ್ಲಿಯೇ ಭೀಮನು ಪುನಃ ಪ್ರಹರಿಸಿದನು.

ಕೀಚಕನು ಎಷ್ಟೇ ಬಲಿಷ್ಠನಾಗಿದ್ದರೂ ಯಾರಿಂದಲೂ ಸಹಿಸಿ

ಕೊಳ್ಳಲಸಾಧ್ಯವಾದ ಭೀಮನ ಮುಷ್ಟಿಪ್ರಹಾರಗಳನ್ನು ಸಹಿಸಿಕೊಳ್ಳಲು ಸಮರ್ಥನಾಗಲಿಲ್ಲ. ತತ್ತರಿಸಿದನು. ಕೀಚಕನ ಬಲವು ಕುಂಠಿತವಾಗುತ್ತಿದೆ ಯೆಂಬ ಸುಳಿವು ಭೀಮನಿಗೆ ತಿಳಿದೊಡನೆಯೇ ತನ್ನ ಪೂರ್ಣಶಕ್ತಿಯನ್ನೂ ಪ್ರಯೋಗಿಸಿ ಕೀಚಕನನ್ನು ಸೆಳೆದು ತನ್ನ ವಕ್ಷಃಸ್ಥಳಕ್ಕೆ ಸೇರಿಸಿಕೊಂಡು ಬಾಹುಪಾಶದಿಂದ ಬಿಗಿಯತೊಡಗಿದನು. ಭೀಮನ ಆಲಿಂಗನವು ಕೀಚಕನಿಗೆ ದಾರುಣವಾದ ಆಲಿಂಗನವಾಗಿ ಪರಿಣಮಿಸಿತು. ಕೀಚಕನು ಪ್ರಜ್ಞಾಹೀನ ನಾದನು. ಪ್ರಜ್ಞಾಹೀನನಾಗಿದ್ದ ಕೀಚಕನ ತಲೆಗೂದಲನ್ನು ಹಿಡಿದು ಮೇಲೆತ್ತಿ–ಹಸಿವಿನಿಂದ ಕೂಡಿರುವ ವ್ಯಾಘ್ರವು ದೊಡ್ಡ ಮೃಗವೊಂದನ್ನು ಕೊಂದು ಅಟ್ಟಹಾಸದಿಂದ ಗರ್ಜಿಸುವಂತೆ–ಭೀಮನು ಅಟ್ಟಹಾಸದಿಂದ ಗರ್ಜಿಸಿದನು. ಕೀಚಕನ ಪ್ರಾಣವಿನ್ನೂ ಹೋಗಿರದಿದ್ದರೂ ಗತಪ್ರಜ್ಞನಾಗಿದ್ದ ಅವನು ಭೀಮನನ್ನು ಪ್ರತಿಭಟಿಸಲು ಸಮರ್ಥನಾಗಲಿಲ್ಲ. ಪಶುವನ್ನು ಹಗ್ಗದಿಂದ ಬಿಗಿಯುವಂತೆ–ಭೀಮಸೇನನು ಬಾಹುಪಾಶದಿಂದ ಗತಪ್ರಜ್ಞ ನಾಗಿದ್ದ ಕೀಚಕನನ್ನು ಬಂಧಿಸಿದನು. ಒಡೆದು ಹೋದ ಭೇರಿಯಂತೆ ವಿಕಾರಸ್ವರದಿಂದ ಅರಚುತ್ತಿದ್ದ ಕೀಚಕನನ್ನು ಭೀಮನು ಗಿರ-ಗಿರನೆ ಹತ್ತಾರು ಬಾರಿ ತಿರುಗಿಸಿದನು. ಕೃಷ್ಣೆಯ ಕೋಪವನ್ನು ಶಾಂತಗೊಳಿಸುವ ಸಲುವಾಗಿ ಭೀಮಸೇನನು ಕೀಚಕನ ಕತ್ತನ್ನು ತನ್ನೆರಡು ಕೈಗಳಿಂದಲೂ ಹಿಸುಕಿಬಿಟ್ಟನು. ಅಷ್ಟುಮಾತ್ರದಿಂದಲೇ ಭೀಮನು ತೃಪ್ತನಾಗಲಿಲ್ಲ. ಕತ್ತನ್ನು ಬಲವಾಗಿ ಹಿಸುಕಿ ಕೀಚಕನ ಕಣ್ಣುಗುಡ್ಡೆಗಳು ಹೊರಗೆ ಬರುವಂತೆ ಮಾಡಿದನು. ನೆಲದ ಮೇಲೆ ಅಪ್ಪಳಿಸಿ ಮೊಳಕಾಲಿನಿಂದ ಅವನ ಸೊಂಟಕ್ಕೆ ಹತ್ತಾರುಬಾರಿ ಪ್ರಹರಿಸಿದನು. ತನ್ನ ಹೆಂಡತಿಯನ್ನು ಕೆಣಕಿದ್ದ ಅಳಲು ತೀರುವವರೆಗೂ ಹಿಂದೆ-ಮುಂದೆ ತಿರುಗಿಸಿ ಅತ್ತಲಿತ್ತ ಸೆಳೆದಾಡಿ ಪಶುವನ್ನು ಸಾಯಿಸುವ ರೀತಿಯಲ್ಲಿ ಭೀಮಸೇನನು ಕೀಚಕನನ್ನು ಕೊಂದುಹಾಕಿದನು. ಪ್ರಾಣವು ಹೋಗಿರುವು ದೆಂದು ತಿಳಿದಮೇಲೂ ಭೀಮನು ಕೀಚಕನನ್ನೆತ್ತಿ ಪುನಃ ಭೂಮಿಯ ಮೇಲೆ ಅಪ್ಪಳಿಸುತ್ತಾ ಹೇಳಿದನು : “ನಮ್ಮ ಭಾರ್ಯೆಯನ್ನು ಅಪಹರಿಸಲು ಯತ್ನಿಸಿದ, ಸೈರಂಧ್ರಿಗೆ ಕಂಟಕಪ್ರಾಯನಾಗಿದ್ದ ಈ ದುಷ್ಟಕೀಚಕನ ನ್ನಿಂದು ಸಂಹರಿಸಿ ನನ್ನ ಅಣ್ಣನ ಋಣವನ್ನು ತೀರಿಸಿದ್ದೇನೆ. ಅಣ್ಣನಿಗೆ

ನಾನು ಮಾಡಬೇಕಾಗಿದ್ದ ಬಹುಮುಖ್ಯವಾದ ಸೇವೆಯಿದು. ನನ್ನ ಮನಸ್ಸಿಗೆ ಸಂಪೂರ್ಣವಾದ ಶಾಂತಿಯು ಇದರಿಂದಾಗಿ ಲಭಿಸಿದೆ"–ಹೀಗೆ ಹೇಳುತ್ತಾ ಪುರುಷಪ್ರವೀರನಾದ, ಕ್ರೋಧದಿಂದ ಕೆಂಪಾದ ಕಣ್ಣುಗಳುಳ್ಳವನಾಗಿದ್ದ ಭೀಮಸೇನನು ಅಸ್ತವ್ಯಸ್ತವಾದ ವಸ್ತ್ರಾಭರಣಗಳನ್ನು ಹೊಂದಿದ್ದ ಕೀಚಕನನ್ನು ಕೈಬಿಟ್ಟನು. ಆದರೆ ಅವನ ಕೋಪಾನಲವು ಅಷ್ಟರಿಂದಲೇ ಶಾಂತವಾಗಲಿಲ್ಲ. ರಾಜನ ಸಮ್ಮುಖದಲ್ಲಿಯೇ ಆ ದುರುಳನು ದ್ರೌಪದಿಗೆ ಮಾಡಿದ ಅಪಮಾನವನ್ನು ಸ್ಮರಿಸಿದೊಡನೆಯೇ ಅವನ ಕೋಪವು ಪುನಃ ಉಲ್ಬಣಿಸಿತು. ಕೈಯಿಂದ ಕೈಯನ್ನು ಹಿಸುಕುತ್ತಾ (ಕೈಗಳನ್ನು ಪರಸ್ಪರವಾಗಿ ಮಸೆಯುತ್ತಾ) ತುಟಿಗಳನ್ನು ಕಚ್ಚಿದನು. ತುಟಿಕಚ್ಚಿ ಕಾಲುಚಾಚಿ ಬಿದ್ದಿದ್ದ ಗತಪ್ರಾಣನಾದ ಕೀಚಕನ ಮೇಲೆ ಕುಳಿತು, ಕೀಚಕನ ರುಂಡವನ್ನು ಮುಂಡದೊಳಗೂ, ಎರಡು ಕಾಲುಗಳನ್ನು ಹೊಟ್ಟೆಯೊಳಗೂ, ಕೈಗಳನ್ನು ವಕ್ಷಸ್ಥಳದಲ್ಲಿಯೂ ಸೇರಿಸಿ ಪಿಂಡರೂಪವಾಗಿ ಮಾಡಿಬಿಟ್ಟನು. ಮಾಂಸದ ಮುದ್ದೆಯನ್ನಾಗಿ ಮಾಡಿದ್ದ ಕೀಚಕನ ಶರೀರವನ್ನು ದ್ರೌಪದಿಗೆ ತೋರಿಸುತ್ತಾ ಭೀಮನು ಹೇಳಿದನು :

"ಈ ಕಾಮುಕನನ್ನು ಯಾವ ಸ್ಥಿತಿಗೆ ತಂದುಬಿಟ್ಟಿದ್ದೇನೆಂಬುದನ್ನಾದರೂ ಪ್ರತ್ಯಕ್ಷವಾಗಿ ನೋಡು, ಪಾಂಚಾಲಿ!"

ಹೀಗೆಂದು ಹೇಳುತ್ತಾ ಭೀಮಸೇನನು ಪಿಂಡರೂಪವಾಗಿದ್ದ ಕೀಚಕನ ಶರೀರವನ್ನು ನಾಲ್ಕಾರು ಬಾರಿ ಅತ್ತಿಂದಿತ್ತ ಚೆಂಡಿನಂತೆ ಒದೆದಾಡಿದನು. ಕತ್ತಲಾಗಿದ್ದುದರಿಂದ ದ್ರೌಪದಿಗೆ ಯಾವುದನ್ನೂ ಸುಸ್ಪಷ್ಟವಾಗಿ ನೋಡಲಾಗ ಲಿಲ್ಲ. ತನ್ನ ಪತಿಯಿಂದ ಕೀಚಕನು ಸಂಹೃತನಾಗಿರುವನೆಂಬುದನ್ನು ಮಾತ್ರ ದೃಢಮಾಡಿಕೊಂಡಳು. ಭೀಮಸೇನನು ಪ್ರೇಯಸಿಗೆ ತನ್ನ ಸಾಹಸಕಾರ್ಯ ವನ್ನು ತೋರುವ ಸಲುವಾಗಿ ದೀಪವನ್ನು ಹಚ್ಚಿ ಕೀಚಕನನ್ನು ತೋರಿಸುತ್ತಾ ಹೇಳಿದನು : "ಶೀಲಗುಣಾನ್ವಿತೆಯಾದ, ಪತಿವ್ರತೆಯಾದ ನಿನ್ನನ್ನು ಕಾಮ ದೃಷ್ಟಿಯಿಂದ ಯಾರು ಕೆಣಕುವರೋ–ಅವರೆಲ್ಲರಿಗೂ ಈ ಕೀಚಕನಿಗಾದ ಗತಿಯೇ ಪ್ರಾಪ್ತವಾಗುವುದು, ದ್ರೌಪದಿ!"

ಜನಮೇಜಯ! ಈ ರೀತಿಯಲ್ಲಿ ಭೀಮಸೇನನು ದ್ರೌಪದಿಗೆ ಪರಮ

ಪ್ರಿಯವಾದ, ಬಹುದುಸ್ಸಾಧ್ಯವಾದ ಕೀಚಕವಧೆಯನ್ನು ಮುಗಿಸಿ, ಕೋಪವನ್ನು ಶಾಂತಗೊಳಿಸಿ, ದ್ರೌಪದಿಗೂ ತನ್ನ ಸಾಹಸಕಾರ್ಯವನ್ನು ತೋರಿಸಿ ತಾನು ಹೋಗಿಬರುವೆನೆಂದು ಹೇಳಿ ಅನಂತರದಲ್ಲಿ ಪಾಕಶಾಲೆಗೆ ಹೊರಟು ಹೋದನು.

ಸ್ತ್ರೀಯರಲ್ಲಿ ಶ್ರೇಷ್ಠಳೆನಿಸಿದ ದ್ರೌಪದಿಯೂ ಭೀಮನ ಮೂಲಕವಾಗಿ ಕೀಚಕನನ್ನು ಅಂತ್ಯಗೊಳಿಸಿ, ಸಂತಾಪವನ್ನು ತೊರೆದು, ಸಂತುಷ್ಟಾಂತರಂಗ ಳಾಗಿ ತಾನು ಮುಂದೇನು ಮಾಡಬೇಕೆಂಬುದನ್ನು ಕ್ಷಣಕಾಲ ಯೋಚಿಸಿ, ಸಭಾಪಾಲಕರ ಸಮೀಪಕ್ಕೆ ಹೋಗಿ ಅವರನ್ನು ಕುರಿತು ಹೇಳಿದಳು :

“ಸಭಾಪಾಲಕರೇ! ಪರಸ್ತ್ರೀಯರ ವಿಷಯದಲ್ಲಿ ಕಾಮೋನ್ಮತ್ತನಾದ ಕೀಚಕನು ನನ್ನ ಗಂಡಂದಿರಾದ ಗಂಧರ್ವರಿಂದ ಹತನಾಗಿ ನಾಟ್ಯಶಾಲೆಯಲ್ಲಿ ಬಿದ್ದಿರುವುದನ್ನಾದರೂ ಹೋಗಿ ನೋಡಿರಿ.”

ಸೈರಂಧ್ರಿಯು ಹೇಳಿದ ಆ ಮಾತುಗಳನ್ನು ಕೇಳಿ ನರ್ತನಾಗಾರದ ರಕ್ಷಕರು ಸಾವಿರಾರು ಪಂಜುಗಳನ್ನು ಹಿಡಿದು ನಾಟ್ಯಶಾಲೆಯೊಳಗೆ ನುಗ್ಗಿದರು. ಕೀಚಕನು ಸತ್ತುಬಿದ್ದಿದ್ದ ನಾಟ್ಯಶಾಲೆಯನ್ನು ಪ್ರವೇಶಿಸಿದೊಡನೆಯೇ ರಕ್ತದಿಂದ ಪರಿಸಿಕ್ತವಾಗಿದ್ದ ಕೀಚಕನ ಶರೀರವನ್ನು ರಕ್ಷಕರು ಕಂಡರು. ಹತ್ತಿರಕ್ಕೆ ಹೋಗಿ ನೋಡಲಾಗಿ ಕೀಚಕನ ತಲೆ-ಕೈ-ಕಾಲುಗಳಾವುವೂ ಕಾಣದೇ ಶರೀರವು ಮಾಂಸದ ಮುದ್ದೆಯ ರೂಪದಲ್ಲಿದ್ದುದನ್ನು ಕಂಡು ದುಃಖಿತರೂ–ವಿಸ್ಮಿತರೂ ಆಗಿ ಒಬ್ಬರು ಮತ್ತೊಬ್ಬರನ್ನು ವಿಸ್ಮಯಾನ್ವಿತವಾದ ದೃಷ್ಟಿಯಿಂದ ನೋಡುತ್ತಿದ್ದರು.

“ಅಮಾನುಷವಾದ ಕಾರ್ಯವು ನಡೆದುಹೋಗಿದೆ. ಕೀಚಕನೊಡನೆ ಸೆಣೆಸಾಡುವ ಸಾಮರ್ಥ್ಯವಿರುವವರನ್ನೇ ನಾವಿದುವರೆಗೂ ಕಂಡಿರಲಿಲ್ಲ. ಆದರೆ ಇಂದು ಕೀಚಕನನ್ನು ಈ ಸ್ಥಿತಿಗೆ ತಂದಿರುವ ಗಂಧರ್ವರ ಪರಾಕ್ರಮ ವೆಷ್ಟೆಂಬುದನ್ನು ನಾವು ಯೋಚಿಸಲು ಕೂಡ ಸಾಧ್ಯವಿಲ್ಲವಾಗಿದೆ.”

“ಇವನ ರುಂಡವನ್ನು ಮುಂಡದಲ್ಲಿ ಸೇರಿಸಿಬಿಟ್ಟಿದ್ದಾರೆ. ಕೈ-ಕಾಲುಗಳೆ ಲ್ಲವೂ ಶರೀರದೊಳಗೆ ಸೇರಿಕೊಂಡುಬಿಟ್ಟಿವೆ. ( ತಲೆ-ಕೈ-ಕಾಲುಗಳಾವುವೂ

ಸ್ಪಷ್ಟವಾಗಿ ಕಾಣುವುದೇ ಇಲ್ಲ.) ಇವನ ಶರೀರದಲ್ಲಿ ಮೂಳೆಗಳೆಲ್ಲವೂ ನುಚ್ಚುನೂರಾಗಿವೆ."

"ಎಂತಹ ಪರಾಕ್ರಮ! ಎಂತಹ ಅದ್ಭುತಕಾರ್ಯ!"

"ಮಹಾಪರಾಕ್ರಮಿಗಳಾದ ಗಂಧರ್ವರ ಹೊರತಾಗಿ ಬೇರೊಬ್ಬರಿಂದ ಆಗುವ ಕಾರ್ಯವೇ ಇದಲ್ಲ."

ಇವೇ ಮುಂತಾಗಿ ನಾಟ್ಯಶಾಲೆಯ ರಕ್ಷಕರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು.

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಕೀಚಕವಧಪರ್ವ (ಮುಂದುವರಿದಿದೆ.)

## ಉಪಕೀಚಕರು ಸೈರಂಧ್ರಿಯನ್ನು ಬಂಧಿಸಿ ಅಣ್ಣನೊಡನೆ ಸುಟ್ಟುಹಾಕಲು ಶ್ಮಶಾನಕ್ಕೆ ಹೊತ್ತುಕೊಂಡುಹೋದುದು : ಭೀಮಸೇನನು ಅವರೆಲ್ಲರನ್ನೂ ಸಂಹರಿಸಿ ಸೈರಂಧ್ರಿಯನ್ನು ಬಿಡುಗಡೆ ಮಾಡಿದುದು

ಪಾರಿಕ್ಷಿತ! ಸೈರಂಧ್ರಿಯ ಗಂಡಂದಿರಾದ ಗಂಧರ್ವರು ಕೀಚಕನನ್ನು ಸಂಹರಿಸಿಬಿಟ್ಟರೆಂಬ ವಾರ್ತೆಯು ಸರ್ವತ್ರ ಹರಡಿತು. ಕೀಚಕನ ಬಂಧುಗಳೆಲ್ಲರೂ ಆಗಮಿಸಿ ಅವನ ಸುತ್ತಲೂ ನಿಂತು ಅಳತೊಡಗಿದರು. ಅವನ ಮರಣಕ್ಕಿಂತಲೂ ಹೆಚ್ಚಾಗಿ ಅವನಿದ್ದ ಸ್ಥಿತಿಯು ಸರ್ವರಿಗೂ ರೋಮಾಂಚನವನ್ನುಂಟುಮಾಡುವುದಾಗಿತ್ತು. ಶರೀರದ ಮೂಳೆಗಳೆಲ್ಲವೂ ನುಚ್ಚು-ನೂರಾಗಿ ಹೋಗಿದ್ದುವು. ಕೈ-ಕಾಲು-ತಲೆ ಎಲ್ಲವೂ ಶರೀರದೊಳಗೆ ಸೇರಿಕೊಂಡಿದ್ದ ಕಾರಣದಿಂದ ಕೀಚಕನು ಆಮೆಯಂತೆ ಕಾಣುತ್ತಿದ್ದನು. ಇಂದ್ರನು ದಾನವರನ್ನು ಸಂಹರಿಸಿದಂತೆ–ಭೀಮಸೇನನು ಸಂಹರಿಸಿದ್ದ ಕೀಚಕನಿಗೆ ದಹನ ಸಂಸ್ಕಾರವನ್ನು ಮಾಡಲು ಅವನ ಬಂಧುಗಳು ಸಿದ್ಧರಾಗುತ್ತಿದ್ದರು. ಕೀಚಕನ ತಮ್ಮಂದಿರಾದ ಉಪಕೀಚಕರು–ಆ ಸಮಯದಲ್ಲಿ ಅನತಿದೂರದಲ್ಲಿಯೇ ಕಂಭವೊಂದನ್ನು ಆಶ್ರಯಿಸಿ (ಒರಗಿ) ನಿಂತಿದ್ದ ಸೈರಂಧ್ರಿಯನ್ನು ಕಂಡರು. ಅವಳನ್ನು ನೋಡಿದೊಡನೆಯೇ ಕೋಪದಿಂದ ಉದ್ರಿಕ್ತರಾದ ಉಪಕೀಚಕರೆಲ್ಲರೂ ತಮ್ಮ ಬಂಧುಗಳನ್ನು ಕುರಿತು ಹೇಳಿದರು :

“ಯಾವಳ ಕಾರಣದಿಂದ ನಮ್ಮಣ್ಣನು ಸಂಹೃತನಾದನೋ ಈ ದುಷ್ಟೆಯನ್ನು ಈಗಲೇ ಸಂಹಾರಮಾಡಿಬಿಡೋಣ.”

ಮತ್ತೊಬ್ಬನು ಹೇಳಿದನು :

“ಇವಳನ್ನು ಈಗ ಸಂಹರಿಸುವುದಕ್ಕಿಂತಲೂ ಶ್ಮಶಾನಭೂಮಿಗೆ ಸೆಳೆದೊಯ್ದು ಕೀಚಕನೊಡನೆಯೇ ಇವಳನ್ನೂ ಸುಟ್ಟುಹಾಕುವುದರಿಂದ ಇವಳನ್ನೇ ಬಹುವಾಗಿ ಕಾಮಿಸುತ್ತಿದ್ದ ನಮ್ಮಣ್ಣನ ಮನಸ್ಸಿಗೆ ಸ್ವಲ್ಪವಾದರೂ ಶಾಂತಿಯು ಲಭಿಸುತ್ತದೆ. ಅವನು ಸತ್ತುಹೋದಮೇಲಾದರೂ ಅವನಿಗೆ ಪ್ರಿಯವಾದ ಕಾರ್ಯವನ್ನು ಮಾಡೋಣ. ಬೇರೆಯ ಲೋಕದಲ್ಲಾದರೂ ನಮ್ಮಣ್ಣನು ಇವಳೊಡನೆ ವಿಹರಿಸುವಂತಾಗಲಿ.”

ಪರಮದುಷ್ಟರಾದ ಉಪಕೀಚಕರು ಆ ವಿಷಯವನ್ನು ವಿರಾಟರಾಜನೊಡನೆಯೂ ಹೇಳಿದರು:

“ಮಹಾರಾಜ! ಇವಳ ಸಲುವಾಗಿ ನಮ್ಮಣ್ಣನು ಹತನಾದನು. ಆದುದರಿಂದ ನಮ್ಮಣ್ಣನ ಜೊತೆಯಲ್ಲಿಯೇ ಇವಳನ್ನೂ ದಹಿಸಿಬಿಡುತ್ತೇವೆ. ಇದಕ್ಕೆ ನೀನು ಅನುಜ್ಞೆಯನ್ನು ಕೊಡಬೇಕು.”

‘ಇದು ಅಧರ್ಮ. ಹೀಗೆ ಮಾಡಕೂಡದು’–ಎಂದು ಹೇಳುವಷ್ಟು ಧೈರ್ಯವೂ ವಿರಾಟರಾಜನಿಗಿರಲಿಲ್ಲ. ಕೀಚಕನನ್ನೂ-ಉಪಕೀಚಕರನ್ನೂ ಕಂಡರೆ ರಾಜನು ಬಹಳ ಭಯಪಡುತ್ತಿದ್ದನು. ಆ ಕಾರಣದಿಂದಲೇ ಅವನು ಅತ್ಯಂತಹೇಯವೆನಿಸಿದ ಉಪಕೀಚಕರ ಪ್ರಾರ್ಥನೆಯನ್ನೂ ಪುರಸ್ಕರಿಸಿ ಸೂತಪುತ್ರನೊಡನೆ ಸೈರಂಧ್ರಿಯನ್ನೂ ಸುಟ್ಟುಹಾಕಲು ಅನುಮತಿಯನ್ನಿತ್ತನು.

( ರಾಜನು ದುರ್ಬಲನಾದರೆ ಆ ರಾಜ್ಯದಲ್ಲಿ ಎಂತಹ ಅಧರ್ಮ ಕಾರ್ಯಗಳು ನಡೆಯುತ್ತವೆಂಬುದಕ್ಕೆ ಇದು ಪ್ರತ್ಯಕ್ಷನಿದರ್ಶನವಾಗಿದೆ. )

ರಾಜನ ಅನುಮತಿಯು ಸಿಕ್ಕಿದೊಡನೆಯೇ ಉಪಕೀಚಕರು ಭಯದಿಂದ ವಿಹ್ವಲೆಯಾಗಿದ್ದ, ಕಮಲಲೋಚನೆಯಾದ ದ್ರೌಪದಿಯನ್ನು ಹಿಡಿದು ಅವಳನ್ನು ಕೀಚಕನೊಡನೆಯೇ ಚಟ್ಟಕ್ಕೆ ಕಟ್ಟಿ ಶ್ಮಶಾನಾಭಿಮುಖವಾಗಿ ಹೊತ್ತುಕೊಂಡು ಹೊರಟರು. ಉಪಕೀಚಕರು ಅನಿಂದಿತೆಯಾದ ದ್ರೌಪದಿ

ಯನ್ನು ಸೆಳೆದೊಯ್ಯುತ್ತಿದ್ದಾಗ ಸನಾಥಳಾಗಿದ್ದರೂ ಅನಾಥಳಂತಿದ್ದ ದ್ರೌಪದಿಯು ಆ ಸಮಯದಲ್ಲಿ ರಕ್ಷಣೆಗಾಗಿ ತನ್ನ ಪತಿಗಳು ಬರುವಂತೆ ಗಟ್ಟಿಯಾಗಿ ಕೂಗಿಕೊಂಡಳು.

**ಜಯೋ ಜಯನ್ತೋ ವಿಜಯೋ ಜಯತ್ಸೇನೋ ಜಯದ್ಬಲಃ ।**
**ತೇ ಮೇ ವಾಚಂ ವಿಜಾನನ್ತು ಸೂತಪುತ್ರಾ ನಯನ್ತಿ ಮಾಮ್ ॥**

"ಜಯ, ಜಯಂತ, ವಿಜಯ, ಜಯತ್ಸೇನ ಮತ್ತು ಜಯದ್ಬಲರು ನಾನು ಹೇಳಲಿರುವ ಈ ಮಾತನ್ನು ಕೇಳಲಿ! ಸೂತಪುತ್ರರು ನನ್ನನ್ನು ಚಟ್ಟಕ್ಕೆ ಕಟ್ಟಿ ಶ್ಮಶಾನಕ್ಕೆ ಒಯ್ಯುತ್ತಿದ್ದಾರೆ. ಶೀಘ್ರಗಾಮಿಗಳಾದ ಯಾವ ಗಂಧರ್ವರ ಧನುಷ್ಟೇಂಕಾರಗಳು ಸಿಡಿಲಿಗೆ ಸಮಾನವಾಗಿರುವುವೋ, ಯಾರ ರಥಚಕ್ರಗಳ ಶಬ್ದಗಳೂ ಸಿಂಹನಾದಗಳೂ ಶತ್ರುಗಳ ಹೃದಯದಲ್ಲಿ ಭಯವನ್ನುಂಟು ಮಾಡುವುವೋ–ಅಂತಹ ಅತುಲಪರಾಕ್ರಮಿಗಳಾದ ನನ್ನ ಗಂಧರ್ವಪತಿಗಳು ನಾನು ಹೇಳುವುದನ್ನು ಕೇಳಲಿ! ದುಷ್ಟರಾದ ಈ ಉಪಕೀಚಕರು ನನ್ನನ್ನು ಬಂಧಿಸಿ ಶ್ಮಶಾನಕ್ಕೆ ಒಯ್ಯುತ್ತಿದ್ದಾರೆ!"

ಜನಮೇಜಯ! ದ್ರೌಪದಿಯಾಡಿದ ದೈನ್ಯಯುತವಾದ ಆ ಮಾತುಗಳನ್ನೂ ಮತ್ತು ಅವಳ ಗೋಳನ್ನೂ ಕೇಳಿದ ಭೀಮಸೇನನು ಒಡನೆಯೇ ಹಾಸಿಗೆಯಿಂದ ಮೇಲೆದ್ದು ಕ್ಷಣಮಾತ್ರವೂ ಯೋಚಿಸದೇ ದ್ರೌಪದಿಯನ್ನು ಕುರಿತು ಹೇಳಿದನು : "ಸೈರಂಧ್ರಿ! ನೀನು ಹೇಳಿದ ಮಾತುಗಳು ಕೇಳಿದುವು. ನಿನ್ನ ಸಂರಕ್ಷಣೆಗೆ ನಾನು ಈಗಲೇ ಬರಲಿದ್ದೇನೆ. ಆದುದರಿಂದ ನೀನು ಉಪಕೀಚಕರ ವಿಷಯದಲ್ಲಿ ಭಯಪಡುವ ಕಾರಣವಿಲ್ಲ."

ಹೀಗೆಂಬುದಾಗಿ ಹೇಳುತ್ತಾ ಭೀಮಸೇನನು ಹಾಸಿಗೆಯನ್ನು ಬಿಟ್ಟು ಉಪಕೀಚಕರನ್ನು ಕೊಲ್ಲುವ ಆಶಯದಿಂದ ಮೈ-ಕೈ ಕೊಡವಿಕೊಂಡನು. ವೇಷವನ್ನು ಬದಲಾಯಿಸಿದನು. ಕಳ್ಳದಾರಿಯಿಂದ ಅರಮನೆಯನ್ನು ಬಿಟ್ಟುಹೊರಟನು. ವೃಕ್ಷವೊಂದರ ಮೂಲಕವಾಗಿ ಪ್ರಾಕಾರದ ಗೋಡೆಯನ್ನು ಹತ್ತಿ ಇಳಿದು ಬಹುಶೀಘ್ರವಾಗಿ ಶ್ಮಶಾನಕ್ಕೆ ಧಾವಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ಉಪಕೀಚಕರು ಒಯ್ಯುತ್ತಿದ್ದ ಕೀಚಕನ ಚಟ್ಟದ ಸಮೀಪಕ್ಕೆ ಹೋದನು. ಪಕ್ಕದಲ್ಲಿಯೇ ಒಂದು ದೊಡ್ಡ ಮರವಿದ್ದಿತು. ಅದರ

ಕೊಂಬೆಗಳೂ ಬಹಳ ವಿಶಾಲವಾಗಿದ್ದುವು. ಅದರ ಮೇಲ್ಭಾಗವು ಒಣಗಿ ಹೋಗಿದ್ದಿತು. ಒಡನೆಯೇ ವೃಕ್ಷದ ಸಮೀಪಕ್ಕೆ ಹೋಗಿ–ಆನೆಯೊಂದು ಸೊಂಡಿಲಿನಿಂದ ವೃಕ್ಷವನ್ನು ಅಳ್ಳಾಡಿಸಿ ಮೂಲಸಹಿತವಾಗಿ ಕೀಳುವಂತೆ–ಸೊಂಡಿಲಿಗೆ ಸಮಾನವಾದ ತನ್ನ ಬಾಹುಗಳಿಂದ ವೃಕ್ಷವನ್ನು ನಾಲ್ಕಾರು ಬಾರಿ ಅಳ್ಳಾಡಿಸಿ ಬೇರುಗಳ ಸಹಿತವಾಗಿಯೇ ಕಿತ್ತು ಅದನ್ನು ತನ್ನ ಹೆಗಲಿನ ಮೇಲಿಟ್ಟುಕೊಂಡನು. ಆ ವೃಕ್ಷವು ಹತ್ತು ಮಾರುಗಳಷ್ಟು ಉದ್ದವಾಗಿದ್ದಿತು. ಅಂತಹ ಮಹಾವೃಕ್ಷವನ್ನು ಬಹುಸುಲಭವಾಗಿ ಭೀಮಸೇನನು ತನ್ನ ಹೆಗಲಿನ ಮೇಲಿಟ್ಟುಕೊಂಡು ಚಿತೆಯ ಕಡೆಗೆ, ದಂಡಧರನಾದ ಸಾಕ್ಷಾತ್ ಯಮನಂತೆಯೇ ಧಾವಿಸಿದನು. ಅವನು ಮರವನ್ನೆತ್ತಿಕೊಂಡು ವೇಗವಾಗಿ ಹೋಗುತ್ತಿದ್ದಾಗ ಅವನ ತೊಡೆಗಳ ವೇಗದಿಂದ ಅಕ್ಕ-ಪಕ್ಕಗಳಲ್ಲಿದ್ದ ನ್ಯಗ್ರೋಧ, ಅಶ್ವತ್ಥ, ಕಿಂಶುಕ–ಮುಂತಾದ ವೃಕ್ಷಗಳು ಕೆಳಗುರುಳಿದುವು. ಸಂಕ್ರುದ್ಧವಾದ ಸಿಂಹದಂತೆ ಬರುತ್ತಿರುವ 'ಗಂಧರ್ವ'ನನ್ನು ಕಂಡು ಉಪಕೀಚಕರೆಲ್ಲರೂ ಭಯದಿಂದ ನಡುಗಿದರು.

"ಮಹಾಬಲಿಷ್ಠನಾದ ಗಂಧರ್ವನು ನಮ್ಮನ್ನು ಧ್ವಂಸಮಾಡಲು ಆಗಮಿಸುತ್ತಿದ್ದಾನೆ. ಅವನ ಆಗಮನಕ್ಕೆ ಕಾರಣಳಾದ ಸೈರಂಧ್ರಿಯನ್ನು ಕೂಡಲೇ ಬಿಟ್ಟುಬಿಡಿರಿ!" ಎಂದು ಭಯವಿಹ್ವಲರಾದ ಉಪಕೀಚಕರು ಗಟ್ಟಿಯಾಗಿ ಕೂಗಿಕೊಂಡರು. ಅವನು ಹತ್ತಿರಕ್ಕೆ ಬರುತ್ತಲೇ ಅವನು ಹೊತ್ತು ತಂದಿದ್ದ ವೃಕ್ಷವನ್ನು ನೋಡಿದೊಡನೆಯೇ ಅವರಿಗೆ ತಾವು ನಗರಕ್ಕೆ ಬದುಕಿಹೋಗುವ ಆಸೆಯು ಲುಪ್ತವಾಗಿ ಹೋಯಿತು. ಒಡನೆಯೇ ದ್ರೌಪದಿಯನ್ನು ಚಟ್ಟದಿಂದ ಬಿಚ್ಚಿ ಹಿಂದಕ್ಕೆ ನೋಡದೇ ನಗರದ ಕಡೆಗೆ ಉಸಿರುಕಟ್ಟಿ ಓಡತೊಡಗಿದರು. ಆದರೆ ಭೀಮನು ಬಿಡುವನೇ? ವಾಯುಪುತ್ರನಾದ ಭೀಮಸೇನನು ಅವರನ್ನು ಬೆನ್ನಟ್ಟಿ ಹೋಗಿ–ವಜ್ರಪಾಣಿಯು ದಾನವರನ್ನು ಧ್ವಂಸಮಾಡುತ್ತಿದ್ದಂತೆ–ನೂರೈದು ಮಂದಿ ಉಪಕೀಚಕರನ್ನೂ ವೃಕ್ಷಾಯುಧದಿಂದಲೇ ಯಮಾಲಯಕ್ಕೆ ಕಳುಹಿಸಿಬಿಟ್ಟನು. ಪುನಃ ದ್ರೌಪದಿಯ ಸಮೀಪಕ್ಕೆ ಬಂದು ಉಳಿದಿದ್ದ ಒಂದೆರಡು ಕಟ್ಟುಗಳನ್ನೂ ಬಿಚ್ಚಿ ಬಂಧನದಿಂದ ಬಿಡಿಸಿದನಂತರ ಅವಳನ್ನು ಸವಿಮಾತುಗಳಿಂದ ಸಂತೈಸಿದನು.

ದುರ್ಧರ್ಷನಾದ, ಮಹಾಬಾಹುವಾದ ವೃಕೋದರನು ಕಣ್ಣೀರಿನಿಂದ ತೋಯ್ದುಹೋಗಿದ್ದ ಮುಖದಿಂದ ಕೂಡಿದ್ದ ದ್ರೌಪದಿಯನ್ನು ಸಮಾಧಾನ ಪಡಿಸುತ್ತಾ ಹೇಳಿದನು :

"ದ್ರೌಪದಿ! ಅಪರಾಧರಹಿತಳಾದ ನಿನ್ನನ್ನು ಕೆಣಕಿದವರು ಇದೇ ರೀತಿಯಲ್ಲಿ ವಧಿಸಲ್ಪಡುತ್ತಾರೆ. ನೀನಿನ್ನು ಸ್ವಲ್ಪವಾದರೂ ಭಯಪಡಬೇಕಾಗಿಲ್ಲ. ಇದೇ ದಾರಿಯಿಂದ ನೀನು ವಿರಾಟನಗರಕ್ಕೆ ಹೋಗು. ನಾನು ಬೇರೆಯ ಮಾರ್ಗದಿಂದ ಅರಮನೆಯ ಪಾಕಶಾಲೆಗೆ ಹೋಗುತ್ತೇನೆ"–ಎಂದು ಹೇಳಿ ದ್ರೌಪದಿಯನ್ನು ಕಳುಹಿಸಿ, ತಾನೂ ವೇಷವನ್ನು ಯಥಾಪೂರ್ವವಾಗಿ ಬದಲಾಯಿಸಿಕೊಂಡು ವಿರಾಟರಾಜನ ಪಾಕಶಾಲೆಗೆ ಹೊರಟುಹೋದನು.

ಜನಮೇಜಯ! ಈ ರೀತಿಯಾಗಿ ನೂರೈದು ಮಂದಿ ಉಪಕೀಚಕರೂ ಭೀಮಸೇನನಿಂದ ಕೊಲ್ಲಲ್ಪಟ್ಟರು. ಕತ್ತರಿಸಲ್ಪಟ್ಟು ಉರುಳಿಬಿದ್ದ ವೃಕ್ಷ ಸಮೂಹದಿಂದ ಕೂಡಿರುವ ಅರಣ್ಯದಂತೆ–ಶ್ಮಶಾನಕ್ಕೆ ಅನತಿದೂರದಲ್ಲಿ ಆ ನೂರೈದು ಮಂದಿ ಉಪಕೀಚಕರ ಶವಗಳು ಅಸ್ತವ್ಯಸ್ತವಾಗಿ ಬಿದ್ದಿದ್ದುವು. ರಾಜನ ಸೇನಾಧಿಪತಿಯಾಗಿದ್ದ ಕೀಚಕನೂ ಸೇರಿ ಒಟ್ಟು ಒಂದು ನೂರ ಆರು ಮಂದಿ ಕೀಚಕರು ಭೀಮನಿಂದ ಹತರಾದರು. ಪರಮಾದ್ಭುತವಾದ ಗಂಧರ್ವನ ಆ ಸಾಹಸವನ್ನು ಕಂಡು ವಿರಾಟನಗರದ ಸ್ತ್ರೀ-ಪುರುಷರು ವಿಸ್ಮಯಾನ್ವಿತರಾದರು. ಆದರೆ ಯಾರೊಬ್ಬರೂ ಏನೊಂದೂ ಮಾತನಾಡುವ ಧೈರ್ಯಮಾಡಲಿಲ್ಲ. ಗಂಧರ್ವರ ಭಯವೇ ಅದಕ್ಕೆ ಕಾರಣವಾಗಿದ್ದಿತು.

೨೩ನೆಯ ಅಧ್ಯಾಯವು ಮುಗಿಯಿತು.

## ಸೈರಂಧ್ರಿಯು ಅರಮನೆಗೆ ಹಿಂದಿರುಗಿದುದು : ಸೈರಂಧ್ರಿ ಮತ್ತು ಸುದೇಷ್ಣೆಯರ ಮಾತುಕತೆ

ಜನಮೇಜಯ! ಕೀಚಕನೂ ಮತ್ತು ಅವನ ತಮ್ಮಂದಿರೆಲ್ಲರೂ ಭೀಮಸೇನನಿಂದ ಸಂಹರಿಸಲ್ಪಟ್ಟನಂತರ ಪಟ್ಟಣಿಗರು ರಾಜನ ಬಳಿಗೆ ಹೋಗಿ ಮಹಾಬಲರಾದ ಸೂತಪುತ್ರರೆಲ್ಲರೂ ಗಂಧರ್ವರಿಂದ ಹತರಾದರೆಂಬ ವಾರ್ತೆಯನ್ನು ತಿಳಿಯಪಡಿಸಿದರು.

"ಮಹಾರಾಜ! ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತದ ಶಿಖರವು ಖಂಡ-ಖಂಡವಾಗಿ ಕೆಳಗೆ ಬೀಳುವಂತೆ–ಕೀಚಕರೆಲ್ಲರೂ ಅಸ್ತವ್ಯಸ್ತರಾಗಿ ಭೂಮಿಯ ಮೇಲೆ ಬಿದ್ದಿದ್ದಾರೆ. ಬಂಧನದಿಂದ ವಿಮುಕ್ತಳಾದ ಸೈರಂಧ್ರಿಯು ಮತ್ತೆ ನಗರಕ್ಕೆ ಬರುತ್ತಿದ್ದಾಳೆ. ಆದುದರಿಂದ ಪುರಜನರೆಲ್ಲರೂ ಭಯಪಡುತ್ತಿದ್ದಾರೆ. ಏಕೆಂದರೆ : ಸೈರಂಧ್ರಿಯು ಅತಿಶಯವಾದ ರೂಪ-ಲಾವಣ್ಯಗಳನ್ನು ಹೊಂದಿದವಳಾಗಿದ್ದಾಳೆ. ಅವಳ ಗಂಧರ್ವಪತಿಗಳಾದರೋ ಮಹಾಬಲಿಷ್ಠರಾಗಿರುತ್ತಾರೆ. ಅವರು ಪ್ರತ್ಯಕ್ಷದಲ್ಲಿಲ್ಲದೇ ಇರುವ ಕಾರಣದಿಂದ ಮನುಷ್ಯಸಾಮಾನ್ಯರು ಸೈರಂಧ್ರಿಯನ್ನು ಮೋಹಿಸುವುದು ಸ್ವಾಭಾವಿಕವಾಗಿದೆ.

**ಪುಂಸಾಮಿಷ್ಟಶ್ಚ ವಿಷಯೋ ಮೈಥುನಾಯ ನ ಸಂಶಯಃ ॥**

ಮೈಥುನವೆಂಬುದು ( ರತಿಕ್ರಿಯೆಯು ) ಮನುಷ್ಯಮಾತ್ರದವರಿಗೆ ಬಹಳ ಇಷ್ಟವಾದ ವಿಷಯವಾಗಿದೆ. ಇದರಲ್ಲಾವ ಸಂಶಯವೂ ಇಲ್ಲ. ಆದುದರಿಂದ ಸೈರಂಧ್ರಿಯ ವಿಷಯದಲ್ಲಿ ಉಂಟಾಗಬಹುದಾದ ದೋಷದಿಂದಾಗಿ ನಮ್ಮ ಪಟ್ಟಣವೇ ವಿನಾಶಹೊಂದದಂತೆ ಯಾವುದಾದರೊಂದು ನೀತಿಯನ್ನು ರೂಪಿಸು, ಮಹಾರಾಜ!"

ಪಟ್ಟಣಿಗರ ಮಾತುಗಳನ್ನು ಕೇಳಿ ವಿರಾಟನು ಹೇಳಿದನು :

"ನೀವು ಹೇಳುವುದೂ ನಿಜ. ಈ ವಿಷಯವನ್ನು ಕೂಡಲೇ ಸಮಾಲೋಚಿಸಬೇಕಾಗಿದೆ. ನೀವೀಗಲೇ ಶ್ಮಶಾನಭೂಮಿಗೆ ಹೋಗಿ ಮೃತರಾಗಿರುವ

ನೂರಾರು ಮಂದಿ ಕೀಚಕರನ್ನೂ ಒಂದೇ ಚಿತೆಯಲ್ಲಿಟ್ಟು ದಹನಕ್ರಿಯೆಯನ್ನು ನಡೆಸಿರಿ. ದಹನಮಾಡುವ ಮೊದಲು ಆ ಚಿತೆಯನ್ನು ರತ್ನಹಾರಗಳಿಂದಲೂ, ಸುಗಂಧದ್ರವ್ಯಗಳಿಂದಲೂ, ಘಮ-ಘಮಿಸುವ ಪುಷ್ಪಹಾರಗಳಿಂದಲೂ ಅಲಂಕರಿಸಿರಿ"–ಎಂದು ಆಜ್ಞಾಪಿಸಿ, ಅಂತಃಪುರಕ್ಕೆ ಹೋಗಿ ಭಾರ್ಯೆಯಾದ ಸುದೇಷ್ಣೆಗೆ ಹೇಳಿದನು :

"ಮಹಾರಾಣಿ! ಸೈರಂಧ್ರಿಯು ಪುನಃ ಅರಮನೆಗೆ ಬಂದೊಡನೆಯೇ ಅವಳಿಗೆ ಸ್ಪಷ್ಟವಾಗಿ ಹೇಳಿಬಿಡು. ನಾನು ಹೇಳಿದೆನೆಂದೇ ಹೇಳು :

"ಅತಿಸುಂದರವಾದ ಮುಖವುಳ್ಳವಳೇ! ಸೈರಂಧ್ರಿ! ನಿನಗೆ ಮಂಗಳ ವಾಗಲಿ. ನಿನ್ನ ಇಚ್ಛೆಯಿದ್ದೆಡೆಗೆ ನೀನಿನ್ನು ಹೊರಟುಹೋಗು. ರಾಜನು ನಿನ್ನ ವಿಷಯದಲ್ಲಿ ಬಹಳ ಭೀತನಾಗಿರುತ್ತಾನೆ. ಗಂಧರ್ವರು ಮಾಡಿರುವ ಈ ಅದ್ಭುತಕೃತ್ಯದಿಂದಾಗಿ ಅವನು ಭಯಪಟ್ಟಿದ್ದಾನೆ. ನೇರವಾಗಿ ನಿನ್ನೊಡನೆ ಈ ಮಾತುಗಳನ್ನು ಆಡಲೂ ಕೂಡ ಅವನಿಗೆ ಭಯವಾಗಿದೆ. ಏಕೆಂದರೆ : ನೀನು ಗಂಧರ್ವರಿಂದ ಸರ್ವದಾ ಸಂರಕ್ಷಿತಳಾಗಿರುವೆ. ಅವನಾಡುವ ಮಾತುಗಳಲ್ಲೇ ನಾದರೂ ದೋಷವು ಕಂಡುಬಂದಲ್ಲಿ ಒಡನೆಯೇ ಅವನನ್ನೂ ಆ ಗಂಧರ್ವರು ಪರಾಭವಗೊಳಿಸಬಹುದು. ಸ್ತ್ರೀಯರ ಮೂಲಕವೇ ಸ್ತ್ರೀಯರಿಗೆ ಹೇಳಿಕಳುಹಿಸುವುದರಿಂದ ಯಾವ ವಿಧವಾದ ದೋಷವೂ ಸಂಭವಿಸುವ ಅವಕಾಶವಿಲ್ಲ. ಈ ಕಾರಣದಿಂದಲೇ ನಿನಗೆ ರಾಜನು ನನ್ನ ಮೂಲಕವಾಗಿ ಈ ಮಾತುಗಳನ್ನು ತಿಳಿಸುತ್ತಿದ್ದಾನೆ. ಕೂಡಲೇ ಇಲ್ಲಿಂದ ಹೊರಟುಬಿಡು."

ಸುದೇಷ್ಣೆಯು ಹಾಗೆಯೇ ಆಗಲೆಂದಳು.

ಜನಮೇಜಯ! ಇತ್ತಲಾಗಿ ಭೀಮನು ಕೀಚಕರೆಲ್ಲರನ್ನೂ ಧ್ವಂಸಮಾಡಿ ದ್ರೌಪದಿಯನ್ನು ಬಂಧನದಿಂದ ವಿಮೋಚಿಸಿದನಂತರ, ದ್ರೌಪದಿಯು ಮಲಿನವಾಗಿದ್ದ ತನ್ನ ಬಟ್ಟೆಗಳನ್ನು ಒಗೆದುಕೊಂಡು ಸ್ನಾನಮಾಡಿ–ಹುಲಿ ಯಿಂದ ಭಯಪಡಿಸಲ್ಪಟ್ಟ ಹರಿಣಿಯಂತೆ–ಭೀತ-ಭೀತಳಾಗಿ ಅರಮನೆಯ ಕಡೆಗೆ ಬರುತ್ತಿದ್ದಳು. ಅವಳನ್ನು ನೋಡುತ್ತಲೇ ಪಟ್ಟಣಿಗರು ಗಂಧರ್ವರ

ಭಯದಿಂದಾಗಿ ದಿಕ್ಕಾಪಾಲಾಗಿ ಓಡತೊಡಗಿದರು. ಕೆಲವರು ತಮ್ಮ ಕಣ್ಣುಗಳನ್ನೇ ಬಲವಾಗಿ ಮುಚ್ಚಿಕೊಂಡರು.

ಪಾಕಶಾಲೆಯ ಬಾಗಿಲಿನಲ್ಲಿ ಮದಿಸಿದ ಮಹಾಗಜದಂತೆ ನಿಂತಿದ್ದ ಭೀಮಸೇನನನ್ನು ಪಾಂಚಾಲಿಯು ನೋಡಿದಳು. ಅವನನ್ನು ನೋಡಿದ ಕೂಡಲೇ ದ್ರೌಪದಿಯು ಕಣ್ಣುಗಳನ್ನು ಕಮಲದಂತೆ ಅರಳಿಸಿ ಮುಗುಳ್ನಗೆಯೊಡನೆ ಸಂಜ್ಞೆಗಳಿಂದ ಹೀಗೆ ಹೇಳಿದಳು :

**ಗನ್ಧರ್ವರಾಜಾಯ ನಮೋ ಯೇನಾಸ್ಮಿ ಪರಿಮೋಚಿತಾ ||೧೫||**

“ನಾನು ಯಾವ ಗಂಧರ್ವನಿಂದ ವಿಮೋಚಿತಳಾದೆನೋ–ಆ ಗಂಧರ್ವ ರಾಜನಿಗೆ ನಮಸ್ಕಾರವಿರಲಿ.”

ಭೀಮನೂ ಪಿಸುಮಾತಿನಲ್ಲಿಯೇ ಉತ್ತರಿಸಿದನು :

“ನಿನ್ನ ವಶವರ್ತಿಗಳಾದ ಇನ್ನೂ ನಾಲ್ವರು ಪುರುಷರು (ಗಂಧರ್ವರು) ಇಲ್ಲಿಯೇ ತಿರುಗುತ್ತಿರುತ್ತಾರಲ್ಲವೇ? ಆ ನಾಲ್ವರೂ ನಿನ್ನ ಈ ಮಾತುಗಳನ್ನು ಕೇಳಿದರೆ ಋಣಮುಕ್ತರಾದೆವೆಂದು ( ಆಪತ್ಕಾಲದಲ್ಲಿ ನಿನಗೆ ಮಾಡಬೇಕಾಗಿದ್ದ ಸಹಾಯವನ್ನು ಮಾಡಿ ಕೃತಕೃತ್ಯರಾದೆವೆಂದು ) ಭಾವಿಸಿ ನಿಶ್ಚಿಂತರಾಗಿ ವಿಹರಿಸಲಿ.”

ದ್ರೌಪದಿಯು ಭೀಮನಾಡಿದ ಮಾತುಗಳನ್ನು ಕೇಳಿ ಪುನಃ ಒಂದು ಕಿರುನಗೆಯನ್ನು ನಕ್ಕು ನಾಟ್ಯಶಾಲೆಯ ಕಡೆಗೆ ಹೋದಳು. ಅಲ್ಲಿ ಬೃಹನ್ನಳಾವೇಷಧಾರಿಯಾಗಿದ್ದ ಧನಂಜಯನು ರಾಜನ ಹೆಣ್ಣುಮಕ್ಕಳಿಗೆ ನಾಟ್ಯವನ್ನು ಕಲಿಸುತ್ತಿದ್ದನು. ನಾಟ್ಯಶಾಲೆಯ ಕಡೆಗೆ ಬರುತ್ತಿದ್ದ ಸೈರಂಧ್ರಿಯನ್ನು ನೋಡಿದೊಡನೆಯೇ ಬೃಹನ್ನಳೆಯ ಸಹಿತರಾಗಿ ವಿದ್ಯಾರ್ಥಿನಿಯರು ನಾಟ್ಯಶಾಲೆಯಿಂದ ಹೊರಗೆ ಬಂದು ನಿರಪರಾಧಿನಿಯಾದ, ಬಹುವಾಗಿ ಬಳಲಿದ್ದ ಸೈರಂಧ್ರಿಯನ್ನು ನೋಡಿದರು. ಅವಳನ್ನು ಸುತ್ತುವರಿದು ನಿಂತು ಅವಳು ಪಟ್ಟ ಕಷ್ಟಕ್ಕಾಗಿ ತಮ್ಮ ಅನುಕಂಪವನ್ನು ವ್ಯಕ್ತಪಡಿಸಿದರು.

“ಸೈರಂಧ್ರಿ! ಅದೃಷ್ಟವಶದಿಂದ ನೀನು ಬಂಧನದಿಂದ ಮುಕ್ತಳಾ

ಗಿರುವೆ. ಅದೃಷ್ಟದ ಕಾರಣದಿಂದಲೇ ನಾವು ನಿನ್ನನ್ನು ಪುನಃ ನೋಡುವಂತಾಗಿದೆ. (ಕೀಚಕನೊಡನೆ ನಿನ್ನನ್ನೂ ಚಿತೆಗೇರಿಸಿ ಭಸ್ಮಮಾಡಲು ಉಪಕೀಚಕರು ಸೆಳೆದುಕೊಂಡು ಹೋಗುತ್ತಿದ್ದುದನ್ನು ನೋಡಿದರೆ ನೀನು ಪುನಃ ಅರಮನೆಗೆ ಆಗಮಿಸುವೆಯೆಂಬ ಆಸೆಯು ಯಾರೊಬ್ಬರಿಗೂ ಇರಲಿಲ್ಲ.) ನಿನ್ನ ಬಿಡುಗಡೆಯೂ ಆಯಿತಲ್ಲವೇ?–ನಿರಪರಾಧಿನಿಯಾದ ನಿನ್ನನ್ನು ಹಿಂಸಿಸಿದ ಆ ದುಷ್ಟರೂ ವಿನಾಶಹೊಂದಿದರಲ್ಲವೇ? ಇದೂ ಸಹ ಅದೃಷ್ಟವೇ ಸರಿ."

ಅನಂತರದಲ್ಲಿ ಬೃಹನ್ನಳೆಯು ಮುಂದೆ ಬಂದು ಸೈರಂಧ್ರಿಯನ್ನು ಪ್ರಶ್ನಿಸಿದಳು :

"ಸೈರಂಧ್ರಿ! ನೀನು ಆ ದುಷ್ಟಕೀಚಕರಿಂದ ಹೇಗೆ ಮುಕ್ತಳಾದೆ? ಅವರು ಹೇಗೆ ಸಂಹರಿಸಲ್ಪಟ್ಟರು? ಅವರನ್ನು ಸಂಹರಿಸಿದವರು ಯಾರು? ಈ ಎಲ್ಲ ವಿಷಯಗಳನ್ನೂ ನಾನು ನಿನ್ನಿಂದಲೇ ಕೇಳಿ ತಿಳಿದುಕೊಳ್ಳಬೇಕೆಂದಿರುವೆನು."

"ಬೃಹನ್ನಳೇ! ನಿನಗೀಗ ಸೈರಂಧ್ರಿಯನ್ನು ಕಟ್ಟಿಕೊಂಡು ಏನಾಗಬೇಕಾಗಿದೆ? ಕನ್ಯೆಯರ ಜೊತೆಯಲ್ಲಿ ನೀನೀಗ ಸುಖವಾಗಿದ್ದುಬಿಟ್ಟಿರುವೆ. ಸೈರಂಧ್ರಿಯು ಅನುಭವಿಸುತ್ತಿರುವ ದುಃಖವನ್ನು ನೀನೇನೂ ಅನುಭವಿಸುತ್ತಿಲ್ಲ. ನೀನು ಯಾವಾಗಲೂ ಹೆಣ್ಣುಮಕ್ಕಳ ಜೊತೆಯಲ್ಲಿ ಆನಂದ ಮತ್ತು ವಿನೋದಗಳಿಂದಲೇ ಇದ್ದುಬಿಟ್ಟಿರುವೆ. ಆದುದರಿಂದಲೇ ನನ್ನನ್ನು ಕಂಡರೆ ನಿನಗೆ ಹಾಸ್ಯವಾಗಿದೆ. ಪರಿಹಾಸಕ್ಕಾಗಿಯೇ ಈಗ ನನ್ನನ್ನು ಹೀಗೆಲ್ಲಾ ಪ್ರಶ್ನಿಸುತ್ತಿರುವೆ."

"ಕಲ್ಯಾಣಿ! ನೋಡಲು ಹಾಗೆ ಕಾಣಿಸುತ್ತಿದ್ದರೂ ಬೃಹನ್ನಳೆಯೂ ತನ್ನ ಮನಸ್ಸಿನಲ್ಲಿ ಬಹುವಾದ ದುಃಖವನ್ನೇ ಅನುಭವಿಸುತ್ತಿದ್ದಾಳೆ. ಪಶುವಿನ ಜನ್ಮಕ್ಕೂ ನನ್ನ ಜನ್ಮಕ್ಕೂ ಏನು ತಾನೇ ವ್ಯತ್ಯಾಸವಿದೆ? ಬಹುದಾರುಣವಾದ ಈ ಅವಸ್ಥೆಯನ್ನು (ನಪುಂಸಕತ್ವವನ್ನು) ನಾನು ಅನುಭವಿಸುತ್ತಿರುವೆನಲ್ಲಾ! ನನ್ನ ಮನಸ್ಸಿನ ದುಃಖವು ನಿನಗೆ ತಿಳಿಯುವ ಸಾಧ್ಯತೆಯಿಲ್ಲ. ಸೈರಂಧ್ರಿ! ನಾನು ನಿನ್ನ ಜೊತೆಯಲ್ಲಿಯೇ ಇರಲಿಲ್ಲವೇ? ನಮ್ಮೊ

ಡನೆ ನೀನೂ ಇರಲಿಲ್ಲವೇ? ಹೀಗಿರುವಾಗ ಇಂದು ನೀನು ಕಷ್ಟಪಡುತ್ತಿರುವುದನ್ನು ನೋಡಿ ಯಾರು ತಾನೇ ದುಃಖಿಸದೇ ಇರುತ್ತಾರೆ? ಎಲ್ಲರ ಮನಸ್ಸಿನಲ್ಲಿಯೂ ( ಐವರ ಮನಸ್ಸಿನಲ್ಲಿಯೂ ) ಈ ದುಃಖವಿದ್ದೇ ಇರುತ್ತದೆ. ಆದರೆ ಏನು ಮಾಡಲೂ ಸಾಧ್ಯವಿಲ್ಲವಾಗಿದೆ. ಮೇಲಾಗಿ, ಸೈರಂಧ್ರಿ!

**ನ ತು ಕೇನಚಿದತ್ಯನ್ತಂ ಕಸ್ಯಚಿದ್ಧೃದಯಂ ಕ್ವಚಿತ್ ।**
**ವೇದಿತುಂ ಶಕ್ಯತೇ ನೂನಂ ತೇನ ಮಾಂ ನಾವಬುಧ್ಯಸೇ ॥೨೫॥**

ಎಷ್ಟೇ ನಿಕಟವರ್ತಿಯಾಗಿದ್ದರೂ ಒಬ್ಬನ ಅಂತರಂಗದಲ್ಲಿರುವುದನ್ನು ಮತ್ತೊಬ್ಬನಿಗೆ ಸಂಪೂರ್ಣವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. (ಗಂಡ-ಹೆಂಡಿರೇ ಆದರೂ, ತಂದೆ-ಮಕ್ಕಳೇ ಆದರೂ, ಅಣ್ಣ-ತಮ್ಮಂದಿರೇ ಆದರೂ, ಅಕ್ಕ-ತಂಗಿಯರೇ ಆದರೂ, ಪ್ರಾಣಕ್ಕೆ ಪ್ರಾಣಕೊಡುವ ಗೆಳೆಯರೇ ಆದರೂ–ಒಬ್ಬರ ಅಂತರಂಗವನ್ನು ಮತ್ತೊಬ್ಬರು ಸಂಪೂರ್ಣವಾಗಿ ತಿಳಿಯಲಾರರು.) ಈ ಕಾರಣದಿಂದಲೇ ಸೈರಂಧ್ರಿ! ನನ್ನ ಹೃದಯದಲ್ಲಿ ಎಷ್ಟು ದುಃಖವು ಅಡಗಿದೆಯೆಂಬುದನ್ನು ತಿಳಿಯಲು ಸಾಧ್ಯವಾಗುತ್ತಿಲ್ಲ."

ಬೃಹನ್ನಳೆಯು ಹೀಗೆಂದು ಹೇಳಿದನಂತರ ಸೈರಂಧ್ರಿಯು ಮುಂದೆ ಮಾತನಾಡದೇ ಬೃಹನ್ನಳೆಯ ಶಿಷ್ಯೆಯರೊಡನೆಯೇ ಅಂತಃಪುರದೊಳಗೆ ಪ್ರವೇಶಿಸಿ ಸುದೇಷ್ಣೆಯ ಬಳಿಗೆ ಹೋದಳು. ಸೈರಂಧ್ರಿಯನ್ನು ಕಂಡೊಡನೆಯೇ ಸುದೇಷ್ಣೆಯು ಅವಳನ್ನು ಕುರಿತು ವಿರಾಟರಾಜನು ಹೇಳಿದ ಮಾತುಗಳನ್ನು ಅವಳೊಡನೆ ಹೇಳಿದಳು :

"ಸೈರಂಧ್ರಿ! ನಮ್ಮ ಅರಮನೆಯನ್ನು ಬಿಟ್ಟು ನೀನೀಗಲೇ ನಿನ್ನ ಇಚ್ಛೆಯಿದ್ದೆಡೆಗೆ ಹೊರಟುಹೋಗು. ಗಂಧರ್ವರಿಂದ ಅನುಭವಿಸಿದ ಪರಾಭವದಿಂದಾಗಿ ರಾಜನು ನಿನ್ನ ವಿಷಯದಲ್ಲಿ ಬಹಳ ಭಯಪಟ್ಟಿದ್ದಾನೆ. ನಿನ್ನ ಪಾಡಿಗೆ ನೀನಿರೆಂದು ನಿಶ್ಚಿಂತೆಯಿಂದಿರಲು ಸಾಧ್ಯವಿಲ್ಲ.

**ತ್ವಂ ಚಾಪಿ ತರುಣೀ ಸುಭ್ರು ರೂಪೇಣಾಪ್ರತಿಮಾ ಭುವಿ ।**
**ಪುಂಸಾಮಿಷ್ಟಶ್ಚ ವಿಷಯೋ ಗನ್ಧರ್ವಾಶ್ಚಾತಿಕೋಪನಾಃ ॥೨೮॥**

ಸುಂದರವಾದ ಹುಬ್ಬುಗಳನ್ನು ಹೊಂದಿರುವವಳೇ! ಸೈರಂಧ್ರಿ!

ನೀನಾದರೋ ಇನ್ನೂ ತರುಣಿಯಾಗಿರುವೆ. ರೂಪದಲ್ಲಿಯೂ ನೀನು ಅಪ್ರತಿಮಳು. ನಿನಗೆ ಸದೃಶಳಾದ ರೂಪವತಿಯನ್ನೇ ನಾನು ನೋಡಿರುವುದಿಲ್ಲ. ಪ್ರಪಂಚದಲ್ಲಿಯೇ ನೀನು ಅನ್ಯಾದೃಶವಾದ ರೂಪವುಳ್ಳವಳು. ಆದುದರಿಂದ ಪುರುಷರ ಇಷ್ಟಕ್ಕೆ ನೀನು ವಿಷಯಳಾಗಿರುವೆ. ಅತ್ಯಂತ ಸುಂದರಿಯಾದ ನಿನ್ನನ್ನು ಪುರುಷರು ಕಾಮಿಸುವುದು ಸ್ವಾಭಾವಿಕ. ನೀನು ಪತಿಗಳೆಂದು ಹೇಳಿಕೊಳ್ಳುವ ಆ ಗಂಧರ್ವರಾದರೋ ಬಹುಕೋಪಿಷ್ಠರು. ನಿನ್ನನ್ನು ಕಾಮಿಸಿ ಉಪಭೋಗಿಸುವುದಂತಿರಲಿ ; ನಿನ್ನನ್ನೊಮ್ಮೆ ಕಣ್ತೆರೆದು ನೋಡಿದ ಪುರುಷರನ್ನೂ ಅವರು ಸಂಹರಿಸಿಬಿಡುತ್ತಾರೆ. ಈ ಕಾರಣಗಳಿಂದಾಗಿ ನಮ್ಮ ಅರಮನೆಯನ್ನು ಬಿಟ್ಟು ಹೊರಟುಹೋಗಬೇಕೆಂದು ವಿರಾಟರಾಜನೇ ಹೇಳಿದ್ದಾನೆ."

ಸುದೇಷ್ಣೆಯು ಹೇಳಿದ ಆ ಮಾತಿಗೆ ಉತ್ತರವಾಗಿ ಸೈರಂಧ್ರಿಯು ಹೇಳಿದಳು :

**ತ್ರಯೋದಶಾಹಮಾತ್ರಂ ಮೇ ರಾಜಾ ಕ್ಷಾಮ್ಯತು ಭಾಮಿನಿ ।**
**ಕೃತಕೃತ್ಯಾ ಭವಿಷ್ಯನ್ತಿ ಗನ್ಧರ್ವಾಸ್ತೇ ನ ಸಂಶಯಃ ॥೨೯॥**

"ಭಾಮಿನಿ! ಇನ್ನು ಹದಿಮೂರು ದಿನಗಳು ಮಾತ್ರ ರಾಜನು ನನ್ನ ಸಂರಕ್ಷಣೆಯ ಭಾರವನ್ನು ವಹಿಸಲಿ. ಆ ವೇಳೆಗೆ ನನ್ನ ಗಂಧರ್ವಪತಿಗಳೂ ತಾವು ಉದ್ದೇಶಿಸಿರುವ ಕಾರ್ಯದಲ್ಲಿ ಕೃತಕೃತ್ಯರಾಗುತ್ತಾರೆ. ಇದರಲ್ಲಾವ ಸಂಶಯವೂ ಇರುವುದಿಲ್ಲ. ಅನ್ಯರ ಪತ್ನಿಯಾದ ನನ್ನನ್ನು ಕಾಮಿಸಿ ನನಗೆ ಉಪಟಳಕೊಟ್ಟವರನ್ನು ನನ್ನ ಗಂಧರ್ವಪತಿಗಳು ಸಂಹರಿಸಿದರು. ಇದರಿಂದ ರಾಜನು ಭಯಪಡುವ ಕಾರಣವಿಲ್ಲ. ಅವರು ಕೃತಕೃತ್ಯರಾದ ನಂತರ ರಾಜನಿಗೆ ಪ್ರಿಯವನ್ನೇ ಮಾಡುತ್ತಾರೆ. ಬಂಧು-ಮಿತ್ರಸಹಿತನಾದ ರಾಜನಿಗೆ ಖಂಡಿತವಾಗಿಯೂ ಶ್ರೇಯಸ್ಸನ್ನೇ ಉಂಟುಮಾಡುತ್ತಾರೆ."

೨೪ನೆಯ ಅಧ್ಯಾಯವು ಮುಗಿಯಿತು.

## ಅಜ್ಞಾತವಾಸಿಗಳಾದ ಪಾಂಡವರನ್ನು ಹುಡುಕಲು ದುರ್ಯೋಧನನ ಪ್ರಯತ್ನ

ಜನಮೇಜಯ! ನೂರೈದು ಮಂದಿ ಉಪಕೀಚಕರೊಡನೆ ಕೀಚಕನ ವಧೆಯನ್ನು ಮಾಡಿದ ಗಂಧರ್ವನ ಪರಮಾದ್ಭುತಕಾರ್ಯವನ್ನು ನೆನೆಯುತ್ತಾ ಮತ್ಸ್ಯದೇಶದ ಜನರು ಅಚ್ಚರಿಗೊಂಡರು. "ಕೀಚಕರಿಗೆ ವಿರಾಟರಾಜನೇ ಹೆದರುತ್ತಿದ್ದನೆಂದಮೇಲೆ ಅವರ ಪರಾಕ್ರಮವೆಷ್ಟಿತ್ತೆಂಬುದನ್ನು ಊಹಿಸಬಹುದಾಗಿದೆ. ಯಾವ ವಿಧವಾದ ಸೈನ್ಯಸಹಾಯ–ಆಯುಧಗಳ ಸಹಾಯವೂ ಇಲ್ಲದೇ ಒಬ್ಬನೇ ಗಂಧರ್ವನು ನೂರಾರು ಮಂದಿ ಶೂರಾಗ್ರೇಸರರನ್ನು ಸಂಹರಿಸಿಬಿಟ್ಟನು."–ಹೀಗೆಂದು ದೇಶದ ಜನರು ಗುಂಪುಕಟ್ಟಿಕೊಂಡು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. "ವಿರಾಟರಾಜನಿಗೆ ಶತ್ರುಸಂಹಾರಕನಾದ ಮತ್ತು ಮಹಾಪರಾಕ್ರಮಿಯಾದ ಕೀಚಕನು ಬೇಕಾದವನಾಗಿದ್ದನು. ಕೀಚಕನು ಸತ್ತುಹೋದುದರಿಂದ ರಾಜನಿಗೆ ದುಃಖವಾದರೂ ನಮಗದರಿಂದ ದುಃಖವೇನೂ ಇಲ್ಲ. ಅವನು ದುಷ್ಟಮನುಷ್ಯನು. ಜನರಿಗೆ ಚಿತ್ರಹಿಂಸೆಕೊಡುತ್ತಿದ್ದನು. ಪರಸ್ತ್ರೀಗಮನದಲ್ಲಿ ಅವನಿಗೆ ಹೆಚ್ಚಿನ ಆಸಕ್ತಿಯಿದ್ದಿತು. ಅಂತಹ ಪಾಪಾತ್ಮನು ಗಂಧರ್ವನಿಂದ ಹತನಾದುದು ಒಳ್ಳೆಯದೇ ಆಯಿತು."

ಜನಮೇಜಯ! ಇವೇ ಮುಂತಾಗಿ ಮತ್ಸ್ಯದೇಶದ ಪ್ರಜೆಗಳೂ ಬೇರೆ ದೇಶದ ಪ್ರಜೆಗಳೂ ಮಾತನಾಡಿಕೊಳ್ಳುತ್ತಿದ್ದರು.

ಇತ್ತಲಾಗಿ ಹಸ್ತಿನಾಪುರದಲ್ಲಿ ಪಾಂಡವರ ಅಜ್ಞಾತವಾಸವು ಪ್ರಾರಂಭವಾಗುತ್ತಲೇ ಅತ್ತ ದುರ್ಯೋಧನನು ಗೂಢಚಾರರನ್ನು ಎಲ್ಲ ದೇಶಗಳಿಗೂ ಕಳುಹಿಸಿಕೊಟ್ಟಿದ್ದನು. ಗೂಢಚಾರರು ಹಳ್ಳಿ-ಹಳ್ಳಿಗೂ ಹೋಗಿ ಪಾಂಡವರನ್ನು ಹುಡುಕಿದರು. ಪಟ್ಟಣಗಳಲ್ಲಿಯೂ ರಾಜಧಾನಿಗಳಲ್ಲಿಯೂ ಪಾಂಡವರ ವಿಷಯವಾದ ವಾರ್ತೆಯನ್ನು ಸಂಗ್ರಹಿಸಲು ಪ್ರಯತ್ನಿಸಿದರು. ಅಜ್ಞಾತ

ವಾಸದಲ್ಲಿರಬೇಕಾದ ಅವಧಿಯು ಕೇವಲ ಕೆಲವೇ ದಿನಗಳಿವೆಯೆನ್ನುವಾಗ ಗೂಢಚಾರರೆಲ್ಲರೂ ರಾಜಧಾನಿಗೆ ಹಿಂತಿರುಗಿದರು. ಭೀಷ್ಮ-ದ್ರೋಣ-ಕೃಪ-ಕರ್ಣಾದಿಗಳಿಂದಲೂ, ತಮ್ಮಂದಿರಿಂದಲೂ, ಮಹಾರಥರಾದ ತ್ರಿಗರ್ತರಿಂದಲೂ ಪರಿವೃತನಾಗಿ ಸಭೆಯ ಮಧ್ಯದಲ್ಲಿ ಸಿಂಹಾಸನಾರೂಢನಾಗಿ ಕುಳಿತಿದ್ದ ದುರ್ಯೋಧನನನ್ನು ವಂದಿಸಿ ಗೂಢಚಾರರು ವರದಿಗಳನ್ನೊಪ್ಪಿಸಿದರು :

“ಮಹಾರಾಜ! ಪಾಂಡವರನ್ನು ಅವರ ಅಜ್ಞಾತವಾಸದ ಅವಧಿಯಲ್ಲಿ ಹೇಗಾದರೂ ಮಾಡಿ ಕಂಡುಹಿಡಿಯಬೇಕೆಂದು ನಿರ್ದೇಶಿತರಾದ ನಾವು ದೇಶದ ಅರಣ್ಯಗಳನ್ನೆಲ್ಲಾ ಶೋಧಿಸಿಬಿಟ್ಟೆವು. ನಿರ್ಜನವಾದ, ಅನೇಕವಿಧವಾದ ಮೃಗಗಳಿಂದ ಕೂಡಿದ್ದ, ನಾನಾವಿಧವಾದ ವೃಕ್ಷಗಳಿಂದಲೂ ಪೊದೆಗಳಿಂದಲೂ ಆವೃತವಾಗಿದ್ದ ಕಾಡುಗಳಲ್ಲೆಲ್ಲಾ ಹುಡುಕಿದೆವು. ದೃಢವಿಕ್ರಮರಾದ ಆ ಪಾಂಡುಪುತ್ರರು ಎಲ್ಲಿಯೂ ಸಿಕ್ಕಲಿಲ್ಲ. ಅವರ ಹೆಜ್ಜೆಗಳ ಗುರುತುಗಳನ್ನಾದರೂ ಹಿಡಿದು ಹೋಗಬೇಕೆಂದು ಬಹಳವಾಗಿ ಪ್ರಯತ್ನಿಸಿದೆವು. ಅದೂ ಸಾಧ್ಯವಾಗಲಿಲ್ಲ. ಅಲ್ಲಿಂದ ಮುಂದೆ ಗಿರಿ-ಪರ್ವತಗಳ ಮೇಲೆಲ್ಲಾ ಹತ್ತಿ ಹುಡುಕಿದೆವು. ಅಲ್ಲಿಯೂ ವಿಫಲರಾಗಿ ಮುಂದೆ ಹಳ್ಳಿಗಳಲ್ಲಿ, ಪಟ್ಟಣಗಳಲ್ಲಿ, ರಾಜಧಾನಿಗಳಲ್ಲಿ ಹುಡುಕಲು ಪ್ರಾರಂಭಿಸಿದೆವು. ಜನನಿಬಿಡವಾಗಿದ್ದ ಸ್ಥಳಗಳಿಗೆ ಹೋಗಿ ನೋಡುತ್ತಿದ್ದೆವು. ಜನಸಮೂಹವಿದ್ದೆಡೆಯಲ್ಲಿ ಹೋಗಿ ನೋಡುತ್ತಿದ್ದೆವು. ಆದರೆ ಯಾವ ಸ್ಥಳದಲ್ಲಿಯೂ ನಾವು ಅವರನ್ನು ಕಾಣಲಿಲ್ಲ. ಮೇಲಾಗಿ ಅವರು ಏನಾದರೆಂಬ ವಿಷಯವೂ ತಿಳಿಯಲಿಲ್ಲ. ಮಹಾರಾಜ! ನಿನಗೆ ಮಂಗಳವಾಗಲಿ. ನಮ್ಮ ಅಭಿಪ್ರಾಯದಂತೆ ಅವರೀಗ ಬದುಕಿರಲಾರರು. ಯಾವ ಕುರುಹೂ ಇಲ್ಲದಂತೆ ದ್ರೌಪದೀಸಮೇತರಾಗಿ ಆ ಐವರೂ ವಿನಾಶಹೊಂದಿದ್ದಾರೆ. ಕಾಡಿನಲ್ಲಿ ಅವರ ರಥಚಕ್ರಗಳ ಗುರುತನ್ನೇ ಹಿಡಿದು ಸ್ವಲ್ಪದೂರ ಹೋದೆವು. ಮುಂದೆ ಮುಂದೆ ರಥಚಕ್ರಗಳ ಜಾಡನ್ನೇ ಹಿಡಿದು ಮಾರ್ಗದಲ್ಲಿ ವಿಚಾರಿಸುತ್ತಾ ಹೋಗಲಾಗಿ ಪಾಂಡವರ ರಥವು ಅದೇ ಮಾರ್ಗವಾಗಿ ಹೋಯಿತೆಂದೂ, ಆದರೆ ಅದರಲ್ಲಿ ಪಾಂಡವರಾರೂ ಇರಲಿಲ್ಲವೆಂದೂ ಸಾರಥಿಗಳು ಮಾತ್ರ ಇದ್ದರೆಂದೂ ತಿಳಿದುಬಂದಿತು. ಮುಂದೆ

ಅದೇ ರಥವೇ ದ್ವಾರವತಿಗೆ ಹೋಗಿರುವುದಾಗಿಯೂ ತಿಳಿಯಿತು. ಅಲ್ಲಿಯೂ ಹೋಗಿ ನೋಡಿದೆವು. ಅಲ್ಲಿ ಪಾಂಡವರ ರಥವಿದ್ದಿತೇ ಹೊರತು ಪಾಂಡವ ರಾರೂ ಅಲ್ಲಿರಲಿಲ್ಲ. ದ್ರೌಪದಿಯೂ ಇರಲಿಲ್ಲ. ಅವರು ಅರಣ್ಯದಿಂದ ಎಲ್ಲಿಗೆ ಹೋದರೆಂಬ ಸುಳಿವೂ ತಿಳಿಯಲಿಲ್ಲ. ಎಲ್ಲಿ ವಾಸವಾಗಿರುವರೆಂಬ ವಾರ್ತೆಯೂ ತಿಳಿದುಬರಲಿಲ್ಲ. ಯಾವ ರಾಜ್ಯದಲ್ಲಿ ಯಾರನ್ನೇ ಕೇಳಿದರೂ ತಮಗೆ ಪಾಂಡವರ ಸಮಾಚಾರವೇನೂ ತಿಳಿಯದೆಂದೇ ಹೇಳುತ್ತಿದ್ದರು. ಮಹಾರಾಜ! ನಿಶ್ಚಯವಾಗಿಯೂ ನಿನ್ನ ಅದೃಷ್ಟದಿಂದಲೇ ಅವರಿಂದು ವಿನಷ್ಟರಾಗಿರುತ್ತಾರೆ. ಅವರಿಗಾಗಿ ನೀನಿನ್ನು ಚಿಂತಿಸುವ ಕಾರಣವಿಲ್ಲ. ಮೇಲಾಗಿ ಪಾಂಡವರ ಪ್ರವೃತ್ತಿ, ವೃತ್ತಾಂತ ಮತ್ತು ಅವರ ಸಾಹಸಕಾರ್ಯ ಗಳು ನಮಗೆ ಎಲ್ಲಿಯೂ ತಿಳಿಯಲಿಲ್ಲ. ಯಾವ ದೇಶದಲ್ಲಿಯೇ ಆದರೂ ಅವರು ತಮ್ಮ ಸ್ವರೂಪವನ್ನು ಮುಚ್ಚಿಕೊಂಡು ಜೀವನವನ್ನು ಸಾಗಿಸುವ ಸಾಧ್ಯತೆಯೇ ಇಲ್ಲ. ಸಾಹಸಪ್ರವೃತ್ತಿಯನ್ನು ಒಂದು ವರ್ಷಪರ್ಯಂತವಾಗಿ ಸುಪ್ತಗೊಳಿಸಿರುವ ಸಾಧ್ಯತೆಯಿಲ್ಲ. ಸಾಹಸಪ್ರವೃತ್ತಿಯೇ ಅವರ ಮುಖ್ಯಲಕ್ಷಣ. ಅವುಗಳ ಮೂಲಕವಾಗಿಯೇ ನಾವು ಅವರನ್ನು ಹುಡುಕಿದೆವು. ಆದರೆ ಅವರೆಲ್ಲಿಯೂ ಸಿಕ್ಕಲಿಲ್ಲ. ಅವರನ್ನು ಪುನಃ ಹುಡುಕುವುದರಲ್ಲಿ ಪ್ರಯೋಜನವಿಲ್ಲವೆಂಬುದೇ ನಮ್ಮ ಅಭಿಪ್ರಾಯವಾಗಿದೆ. ಅವರು ಬದು ಕಿರಲಾರರು. ಅವರನ್ನು ಹುಡುಕುವ ಸಲುವಾಗಿ ಇನ್ನೇನಾದರೂ ಮಾಡ ಬೇಕೆನ್ನುವುದಾದರೆ ಆಜ್ಞಾಪಿಸು, ಮಹಾರಾಜ! ಅದರಂತೆ ಮಾಡುತ್ತೇವೆ. ಪಾಂಡವರು ಸಿಕ್ಕಲಿಲ್ಲವೆಂಬ ವಾರ್ತೆಯೊಡನೆ ಒಂದು ಸಂತೋಷದ ವಾರ್ತೆ ಯನ್ನೂ ತಂದಿರುತ್ತೇವೆ. ವಿರಾಟರಾಜನು ತನ್ನ ಸೇನಾಪತಿಯಾದ ಕೀಚಕನ ಬೆಂಬಲದಿಂದ ಮತ್ತನಾಗಿ ಹೋಗಿದ್ದನಲ್ಲವೇ? ಅವರಿಗೆ ನಮ್ಮ ವಿಷಯದಲ್ಲಿ ಲಕ್ಷ್ಯವೇ ಇರಲಿಲ್ಲ.

ವಿರಾಟನ ಸೇನಾಪತಿಯಾದ ಕೀಚಕನು ನಮ್ಮ ಆಶ್ರಿತರಾದ ತ್ರಿಗರ್ತ ರನ್ನೂ ತನ್ನ ನೂರೈದು ಮಂದಿ ಅನುಜರೊಡನೆ ಯುದ್ಧದಲ್ಲಿ ಪರಾಜಯ ಗೊಳಿಸಿದ್ದನು. ಅಂತಹವನಿಂದು ಕಣ್ಣಿಗೆ ಕಾಣದ ಗಂಧರ್ವರಿಂದ ಹತನಾಗಿ ದ್ದಾನೆ. ಅವನು ಮಾತ್ರವೇ ಅಲ್ಲ; ಅವನ ಅನುಜರಾದ ನೂರೈದು ಮಂದಿ ಉಪಕೀಚಕರೂ ಅದೃಶ್ಯರಾದ ಆ ಗಂಧರ್ವರಿಂದ ಹತರಾಗಿದ್ದಾರೆ. ಈ ಶುಭ

ವಾರ್ತೆಯು ರಾಜ್ಯದ ಎಲ್ಲೆಡೆಗಳಲ್ಲಿಯೂ ಹರಡಿಬಿಟ್ಟಿದೆ. ಈ ವಾರ್ತೆಯು ನಿನಗೂ ಪರಮಪ್ರಿಯವಾಗುವುದೆಂದು ಭಾವಿಸುತ್ತೇವೆ. ಶತ್ರುವಿನ ಪರಾಭವಕ್ಕಿಂತಲೂ ರಾಜನಿಗೆ ಹೆಚ್ಚಿನ ಶುಭವಾರ್ತೆಯು ಬೇರೊಂದಿಲ್ಲ. ಇದರಿಂದ ನೀನು ಕೃತಕೃತ್ಯನಾಗಿರುವೆ. ನಿನ್ನ ಯಾವ ಪ್ರಯತ್ನವೂ ಇಲ್ಲದೇ ನಿನ್ನ ಶತ್ರುವು ಧ್ವಸ್ತನಾದಂತೆ, ಪಾಂಡವರೂ ವಿನಷ್ಟರಾಗಿರಬಹುದೆಂದು ನಮ್ಮ ಅಭಿಪ್ರಾಯವಾಗಿದೆ. ಮುಂದೆ ನಾವೇನು ಮಾಡಬೇಕೆಂಬುದನ್ನು ಆಜ್ಞಾಪಿಸು, ಮಹಾರಾಜ!"

ಇ೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ — ಗೋಹರಣಪರ್ವ (ಮುಂದುವರಿದಿದೆ.)

## ಅಜ್ಞಾತವಾಸಿಗಳಾದ ಪಾಂಡವರನ್ನು ಹುಡುಕಲು ಪುನಃ ಪ್ರಯತ್ನ

ಪಾರಿಕ್ಷಿತ! ಗಂಧರ್ವರಿಂದ ತಮ್ಮ ಶತ್ರುಗಳಲ್ಲೊಬ್ಬನಾದ ಕೀಚಕನ ವಧೆಯಾಯಿತೆಂಬುದನ್ನು ಕೇಳಿ ದುರ್ಯೋಧನನಿಗೆ ಹೆಚ್ಚಿನ ಸಂತೋಷವೇನೂ ಆಗಲಿಲ್ಲ. ಅವನಿಗೆ ಅಜ್ಞಾತವಾಸದಲ್ಲಿರುವ ಪಾಂಡವರ ಪತ್ತೆಯಾಗಬೇಕಾಗಿದ್ದಿತು. ಉಳಿದ ವಿಷಯಗಳು ಅವನಿಗೆ ಅಷ್ಟು ಪ್ರಧಾನವಾಗಿರಲಿಲ್ಲ. ಪಾಂಡವರು ವಿನಾಶವಾಗಿ ಹೋಗಿರಬಹುದೆಂದು ಹೇಳಿದ ಗೂಢಚಾರರ ಮಾತಿನಲ್ಲಿ ದುರ್ಯೋಧನನಿಗೆ ಸ್ವಲ್ಪವಾದರೂ ನಂಬಿಕೆಯುಂಟಾಗಲಿಲ್ಲ. ಗೂಢಚಾರರು ಹೇಳಿದುದೆಲ್ಲವನ್ನೂ ಕೇಳಿದನಂತರ ದುರ್ಯೋಧನನು ತನ್ನಲ್ಲಿಯೇ ಚಿರಕಾಲ ಯೋಚಿಸಿ ತನ್ನ ಸಂಗಡಿಗರನ್ನು ಕುರಿತು ಹೇಳಿದನು :

**ಸುದುಃಖಾ ಖಲು ಕಾರ್ಯಾಣಾಂ ಗತಿರ್ವಿಜ್ಞಾತುಮನ್ತತಃ ।**
**ತಸ್ಮಾತ್ಸರ್ವೇ ನಿರೀಕ್ಷಧ್ವಂ ಕ್ವ ನು ತೇ ಪಾಣ್ಡವಾ ಗತಾಃ ॥೨॥**

"ಮುಂದೆ ಹೀಗೆಯೇ ಆಗುವುದೆಂಬುದನ್ನು ತಿಳಿದುಕೊಳ್ಳುವುದು ಬಹಳ ಕಷ್ಟವಾದ ವಿಷಯವೇ ಸರಿ. ಆದುದರಿಂದ ನೀವೆಲ್ಲರೂ ಪಾಂಡವರು

ತಮ್ಮ ಅಜ್ಞಾತವಾಸದ ಅವಧಿಯಲ್ಲಿ ಎಲ್ಲಿದ್ದಾರೆಂಬುದನ್ನು ತಿಳಿಯಲು ಪ್ರಯತ್ನಿಸಲೇಬೇಕು. ಅವರು ಅಜ್ಞಾತವಾಗಿ ಕಳೆಯಬೇಕಾಗಿದ್ದ ಈ ಹದಿಮೂರನೆಯ ವರ್ಷದಲ್ಲಿ ಈಗಾಗಲೇ ಬಹುಭಾಗ ಕಳೆದೇಹೋಗಿದೆ.



ಅವಧಿಯು ಕಳೆಯಲು ಕೆಲವು ದಿವಸಗಳು ಮಾತ್ರವೇ ಉಳಿದಿದೆಯೆಂದು ಭಾವಿಸುತ್ತೇನೆ. ಉಳಿದಿರುವ ಸ್ವಲ್ಪ ದಿವಸಗಳನ್ನು ಅಜ್ಞಾತವಾಗಿಯೇ ಅವರು ಕಳೆದುಬಿಟ್ಟರೆ ಸತ್ಯವ್ರತಪರಾಯಣರಾದ ಅವರು ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದಂತೆಯೇ ಆಗುತ್ತದೆ. ಅನಂತರ ಅವರು-ಮದೋದಕವನ್ನು ಸುರಿಸುತ್ತಿರುವ ಮದಿಸಿದ ಆನೆಗಳಂತೆ ಅಥವಾ ವಿಷಪೂರಿತವಾದ ಕಾಳಸರ್ಪ

ಗಳಂತೆ–ರಾಜಧಾನಿಗೆ ಹಿಂದಿರುಗುತ್ತಾರೆ. ನಮ್ಮ ವಿಷಯದಲ್ಲಿ ಕುಪಿತರಾದ ಅವರು ನಮ್ಮ ಸತತವಾದ ದುಃಖಕ್ಕೆ ಕಾರಣರಾಗುತ್ತಾರೆ. (ನಮ್ಮ ಮೇಲೆ ಅವರಿಗಿರುವ ಸೇಡನ್ನು ತೀರಿಸಿಕೊಳ್ಳಲು ಯತ್ನಿಸುತ್ತಾರೆ.) ಇದರಿಂದ ತಪ್ಪಿಸಿಕೊಳ್ಳಲು ಈಗ ನಮಗಿರುವ ಒಂದೇ ಒಂದು ಮಾರ್ಗವೆಂದರೆ ಅಜ್ಞಾತವಾಸದ ಅವಧಿಯು ಮುಗಿಯುವುದರೊಳಗಾಗಿ ಅವರನ್ನು ಪತ್ತೆ ಹಚ್ಚಲೇಬೇಕು. ಆದುದರಿಂದ ನೀವೀಗಲೇ ಸಂಪೂರ್ಣವಾಗಿ ಪ್ರಯತ್ನಿಸಿರಿ. ಹದಿಮೂರನೆಯ ವರ್ಷವನ್ನು ಅಜ್ಞಾತವಾಸದಲ್ಲಿ ಮುಗಿಸಿಬಿಡಬೇಕೆಂದು ಕಾತರರಾಗಿ, ನಮ್ಮ ನುರಿತ ಗೂಢಚಾರರಿಗೂ ಪತ್ತೆಯಾಗದ ರೀತಿಯಲ್ಲಿ ವೇಷಮರೆಸಿಕೊಂಡು ಅವರು ಜೀವಿಸುತ್ತಿದ್ದಾರೆ. ಆದುದರಿಂದ ಈಗ ನೀವೆಲ್ಲರೂ ಸಂಪೂರ್ಣವಾಗಿ ಪ್ರಯತ್ನಿಸಿ ಅಜ್ಞಾತವಾಸದ ಅವಧಿಯು ಕಳೆಯುವುದರೊಳಗಾಗಿ ಅವರನ್ನು ಕಂಡುಹಿಡಿಯಲೇಬೇಕು. ಅವರು ತಮ್ಮ ಕೋಪ-ತಾಪಗಳನ್ನು ತಾವೇ ನುಂಗಿಕೊಂಡು ಪುನಃ ಹನ್ನೆರಡು ವರ್ಷಗಳ ಕಾಲ ವನವಾಸ ಮತ್ತು ಒಂದು ವರ್ಷದ ಅಜ್ಞಾತವಾಸಕ್ಕೆ ಹೋಗುವಂತಾಗಬೇಕು. ಅಖಂಡವಾಗಿರುವ ಈ ಸಾಮ್ರಾಜ್ಯವು ಪಾಂಡವರ ಕಾರಣದಿಂದಾಗಿ ವಿಭಾಗವಾಗದಂತೆಯೂ, ಉಪದ್ರವಗಳಿಂದ ರಹಿತವಾಗಿರುವಂತೆಯೂ ಮತ್ತು ಕುರುಸಿಂಹಾಸನವನ್ನು ಅಪೇಕ್ಷಿಸುವವರು ಬೇರೊಬ್ಬರಿಲ್ಲದಂತೆಯೂ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಇಂದಿನ ನಿಮ್ಮ ಮುಖ್ಯಕರ್ತವ್ಯ ವಾಗಿದೆ.”

ದುರ್ಯೋಧನನ ಮಾತುಗಳನ್ನು ಕೇಳಿ ಕರ್ಣನು ಹೇಳಿದನು :

“ಮಹಾರಾಜ! ಈಗ ಪುನಃ ನಾವು ಪರಿಣತರಾದ ಗೂಢಚಾರರನ್ನು ದೇಶದ ಎಲ್ಲ ಕಡೆಗಳಿಗೂ ಕಳುಹಿಸುವುದು ಸೂಕ್ತವೆಂದು ನಾನು ಭಾವಿಸು ತ್ತೇನೆ. ಧೂರ್ತರಾದವರನ್ನೂ (ವಂಚನೆಮಾಡುವುದರಲ್ಲಿ ಸಮರ್ಥರಾದವ ರನ್ನೂ), ದಕ್ಷರಾದವರನ್ನೂ, ಗೂಢಚರ್ಯೆಯಲ್ಲಿ ಹೆಚ್ಚಿನ ಚಾಕಚಕ್ಯತೆ ಯಿರುವವರನ್ನೂ ಆರಿಸಿ ಕಳುಹಿಸಬೇಕು. ಅವರು ತಮ್ಮ ವೇಷಗಳನ್ನು ಮರೆಸಿಕೊಂಡು ಜನಭರಿತವಾದ ದೇಶಗಳಲ್ಲಿ ಸಂಚರಿಸಲಿ. ಅಲ್ಲಲ್ಲಿ ನಡೆ ಯುವ ವಿದ್ವತ್ಸಭೆಗಳಿಗೆ ಹೋಗಿ ಸೂಕ್ಷ್ಮವಾಗಿ ಪರಿಶೀಲಿಸಲಿ. ಸಿದ್ಧರೂ, ಸಂನ್ಯಾಸಿಗಳೂ, ಮಹಾತ್ಮರೂ ಇರುವ ಆಶ್ರಮಗಳಿಗೆ ಹೋಗಲಿ. ರಾಜರ

ಅಂತಃಪುರಗಳನ್ನೂ ಪ್ರವೇಶಿಸಿ ಅಲ್ಲಿಯೂ ಪರೀಕ್ಷಿಸಲಿ. ಪುಣ್ಯಸ್ಥಳಗಳಲ್ಲಿ, ಪುಣ್ಯತೀರ್ಥಗಳಲ್ಲಿ, ಗ್ರಾಮಾಂತರಗಳಲ್ಲಿ, ನಗರಗಳಲ್ಲಿ, ಆಶ್ರಮಗಳಲ್ಲಿ, ರಮ್ಯವಾಗಿರುವ ಪರ್ವತಗಳ ಗುಹೆಗಳಲ್ಲಿ—ಎಲ್ಲೆಡೆಗಳಲ್ಲಿಯೂ ವೇಷವನ್ನು ಬದಲಾಯಿಸಿಕೊಂಡು ತಿರುಗುತ್ತಿರುವ ಪಾಂಡವರನ್ನು ಹುಡುಕಲಿ. ಆದರೆ ಈ ಬಾರಿ ಗೂಢಚಾರರನ್ನು ಕಳುಹಿಸುವಾಗ ನಿಪುಣರಾದವರನ್ನೂ, ಗೂಢ ಚರ್ಯೆಯಲ್ಲಿ ಪ್ರಾವೀಣ್ಯವಿರುವವರನ್ನೂ, ವಂಚನೆಮಾಡುವ ಸ್ವಭಾವವಿರು ವವರನ್ನೂ ಆರಿಸಿ ಕಳುಹಿಸಬೇಕು.”

ಕರ್ಣನು ತನ್ನ ಅಭಿಪ್ರಾಯವನ್ನು ಈ ರೀತಿಯಾಗಿ ದುರ್ಯೋಧನನ ಮುಂದಿಟ್ಟನಂತರ ಪಾಪಕಾರ್ಯದಲ್ಲೇ ಹೆಚ್ಚಿನ ಆಸಕ್ತಿಯುಳ್ಳ ದುರ್ಯೋ ಧನನ ತಮ್ಮನಾದ ದುಃಶಾಸನನು ಅಣ್ಣನನ್ನು ಕುರಿತು ಹೇಳಿದನು :

“ಅಣ್ಣ! ನಮ್ಮ ಮಿತ್ರನಾದ ಕರ್ಣನು ಹೇಳಿದುದೆಲ್ಲವನ್ನೂ ನಾನೂ ಒಪ್ಪುತ್ತೇನೆ. ಅವನು ಬಿಟ್ಟಿರುವ ಒಂದೆರಡಂಶಗಳನ್ನು ಸೇರಿಸುವ ಆಶಯವು ನನ್ನದಾಗಿದೆ. ಗೂಢಚಾರರು ನಿಷ್ಣಾತರಾಗಿದ್ದರೆ ಮಾತ್ರವೇ ಸಾಲದು. ನಮ್ಮ ನಂಬಿಕೆಗೂ ಅವರು ಪಾತ್ರರಾಗಿರಬೇಕು. ನಮ್ಮ ನೀತಿ-ನಡವಳಿಕೆಗಳನ್ನು ಅವರು ಒಪ್ಪುವವರಾಗಿರಬೇಕು. ಗುಣಪರಿಶೀಲನೆಯಲ್ಲಿ ಇದನ್ನು ಬಹು ಮುಖ್ಯವಾಗಿ ನಾವು ಗಮನಿಸಬೇಕು. ಮೇಲಾಗಿ ಅವರೆಲ್ಲಿಗೇ ಹೋದರೂ ಧನದ ಆಸೆಯಿಂದ ಅವರು ಕಾರ್ಯದಲ್ಲಿ ವಿಮುಖರಾಗದಂತೆ ನಾವು ಎಚ್ಚರಿಕೆಯನ್ನು ವಹಿಸಬೇಕು. ಆದುದರಿಂದ ಅವರು ಇಲ್ಲಿಂದ ಹೊರಡು ವಾಗಲೇ ಅವರು ಅಪೇಕ್ಷಿಸುವಷ್ಟು ಹಣವನ್ನು ಕೊಡುವುದು ಮಾತ್ರ ವಲ್ಲದೇ—ಈ ಕಾರ್ಯದಲ್ಲವರು ಕೃತಕೃತ್ಯರಾದರೆ ಅಪಾರವಾದ ಬಹುಮಾನ ಗಳನ್ನು ಕೊಡುವುದಾಗಿಯೂ ಹೇಳಿ ಕಳುಹಿಸಿಬೇಕು. ಉಳಿದ ವಿಷಯಗಳು ಕರ್ಣನು ಹೇಳಿರುವಂತೆಯೇ ನಡೆಯಬೇಕು. ನಮ್ಮಿಂದ ಆಜ್ಞಪ್ತರಾದ ಗೂಢಚಾರರು ಇಂದೇ ಪಾಂಡವರನ್ನು ಹುಡುಕಲು ಹೊರಟು ಬಿಡಲಿ. ದೇಶ-ವಿದೇಶಗಳಲ್ಲಿಯೂ ಅವರನ್ನು ಹುಡುಕಲಿ. ಆದರೆ ಇದುವರೆಗೆ ಪಾಂಡವರು ಹೋಗಿರುವ ಮಾರ್ಗ, ಉಳಿದುಕೊಂಡಿರುವ ದೇಶ—ಇವು ಗಳಾವುವೂ ನಮಗೆ ತಿಳಿದಿರುವುದಿಲ್ಲ. ಅವರು ಎಲ್ಲಿರುವರೆಂಬ ಕುರುಹು

ಕೂಡ ನಮಗೆ ಸಿಕ್ಕಿರುವುದಿಲ್ಲ. ಇದರಿಂದಾಗಿ ನಾನು ಈ ಸಿದ್ಧಾಂತಕ್ಕೆ ಬಂದಿರುತ್ತೇನೆ. ಅವರು ಬಹಳ ನಿಗೂಢರಾಗಿದ್ದುಬಿಟ್ಟಿದ್ದಾರೆ. (ಭೂಮಿಯೊಳಗೆ ಹುದುಗಿಕೊಂಡಿರಬಹುದು.) ಈ ದೇಶವನ್ನೇ ಬಿಟ್ಟು ಸಮುದ್ರದ ಆಚೆಯ ದಡಕ್ಕಾದರೂ ಹೊರಟುಹೋಗಿರಬಹುದು. ಮಹಾಶೂರರೆಂದು ಪ್ರಮತ್ತರಾಗಿರುವ ಅವರು ಹುಲಿ-ಸಿಂಹಗಳೊಡನೆ ಸೆಣೆಸಾಡಲು ಹೋಗಿ ಅರಣ್ಯದಲ್ಲಿ ಆ ಪ್ರಾಣಿಗಳಿಂದಲೇ ಭಕ್ಷಿತರಾಗಿರಲಿಕ್ಕೂ ಸಾಧ್ಯವಿದೆ. ಅರಣ್ಯದಲ್ಲಿರುವ ವಿಷಸರ್ಪಗಳಾದರೂ ಅವರನ್ನು ಕಚ್ಚಿ ಸಾಯಿಸಿರಬಹುದು ಅಥವಾ ಬೇರೆ ಯಾವುದಾದರೂ ಕಾರಣದಿಂದಲಾದರೂ ಅವರು ವಿನಾಶ ಹೊಂದಿರಬಹುದು. ಆದುದರಿಂದ ಅಗ್ರಜ! ನೀನು ಈ ವಿಷಯವಾಗಿ ಮನಸ್ಸಿಗೆ ಚಿಂತೆಯನ್ನು ಹಚ್ಚಿಕೊಳ್ಳುವುದು ಉಚಿತವೆನಿಸುವುದಿಲ್ಲ. ಸ್ವಸ್ಥಚಿತ್ತನಾಗಿ ಯಾವ ಕಾರ್ಯಮಾಡುವುದು ಸೂಕ್ತವೆನಿಸುವುದೋ ಆ ಕಾರ್ಯವನ್ನು ಉತ್ಸಾಹದಿಂದ ಮಾಡುವವನಾಗು."

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಪುನಃ ಗೂಢಚಾರರನ್ನು ಕಳುಹಿಸಲು ದ್ರೋಣರ ಸಮ್ಮತಿ

ಜನಮೇಜಯ ಮಹಾರಾಜ! ದುಃಶಾಸನನು ತನ್ನ ಅಭಿಪ್ರಾಯವನ್ನು ದುರ್ಯೋಧನನೊಡನೆ ಹೇಳಿದನಂತರ ಮಹಾವೀರರಾದ, ತತ್ತ್ವಾರ್ಥದರ್ಶಿಗಳಾದ ದ್ರೋಣರು ತಮ್ಮ ಅಭಿಪ್ರಾಯವನ್ನು ದುರ್ಯೋಧನನ ಮುಂದಿಟ್ಟರು : "ಪಾಂಡವರು ನಾಶಹೊಂದಿರಬಹುದೆಂಬ ಸಂಶಯಕ್ಕೆ ಅವಕಾಶವೇ ಇಲ್ಲ. ಶೂರರಾದ, ಸಕಲವಿದ್ಯಾಪಾರಂಗತರಾದ, ಬುದ್ಧಿವಂತರಾದ, ಜಿತೇಂದ್ರಿಯರಾದ, ಧರ್ಮಜ್ಞರಾದ, ಮಿಗಿಲಾಗಿ ಧರ್ಮಮೂರ್ತಿಯಾದ ಧರ್ಮರಾಜನ ಅನುಯಾಯಿಗಳಾದ ಪಾಂಡವರೆಂದಿಗೂ ವಿನಾಶವನ್ನಾಗಲೀ ಪರಾಭವವನ್ನಾಗಲೀ ಹೊಂದುವುದಿಲ್ಲ. ನೀತಿಧರ್ಮಾರ್ಥತತ್ತ್ವಜ್ಞನಾದ, ಸತ್ಯವಂತನಾದ, ಮಹಾತ್ಮನಾದ, ಅಜಾತಶತ್ರುವಾದ,

ತಮ್ಮಂದಿರನ್ನು ತನ್ನ ಪ್ರಾಣಗಳಿಗಿಂತಲೂ ಹೆಚ್ಚಾಗಿ ಪ್ರೀತಿಸುವ ಧರ್ಮರಾಜನನ್ನು ಸರ್ವಕಾಲದಲ್ಲಿಯೂ ಅನುಸರಿಸಿ ನಡೆಯುತ್ತಿರುವ ಅವನ ಆಜ್ಞಾಧಾರಕರಾದ ತಮ್ಮಂದಿರಿಗೆ ಅವನತಿ, ವಿನಾಶ, ಪರಾಭವಗಳುಂಟಾಗಲು ಸಾಧ್ಯವೇ? ವಿನಯಶೀಲರಾದ, ವಿಧೇಯರಾದ, ಆಜ್ಞಾಪರಿಪಾಲಕರಾದ ತನ್ನ ತಮ್ಮಂದಿರಿಗೆ ನೀತಿಜ್ಞನಾದ ಧರ್ಮಜನು ಶ್ರೇಯಸ್ಸನ್ನುಂಟು ಮಾಡದೇ ಅಥವಾ ಶ್ರೇಯಸ್ಕರವಾದ ಮಾರ್ಗವನ್ನು ಯೋಚಿಸದೆ ಸುಮ್ಮನಿರುವನೇ? ಹಿರಿಯನಾದ ಧರ್ಮರಾಜನು ಸೂಕ್ತಕಾಲಗಳಲ್ಲಿ ಸೂಕ್ತವಾದ ಕಾರ್ಯಕ್ರಮಗಳನ್ನು ಕೈಗೊಳ್ಳದಿದ್ದರೆ ಅವನ ತಮ್ಮಂದಿರು ಅವನ ವಿಷಯದಲ್ಲಿ ಇಟ್ಟುಕೊಂಡಿರುವ ವಿಧೇಯತೆಯು ವ್ಯರ್ಥವಾಗಿ ಹೋಗುವುದಿಲ್ಲವೇ? ಆದುದರಿಂದ ಪಾಂಡವರೆಂದಿಗೂ ವಿನಾಶಹೊಂದಿರುವುದಿಲ್ಲ.

ಅಣ್ಣನಾದ ಧರ್ಮಜನ ಆಜ್ಞಾಧಾರಕರಾಗಿ ಕಾಲವನ್ನು ಪ್ರತೀಕ್ಷೆ ಮಾಡುತ್ತಿದ್ದಾರೆ. ದುರ್ಯೋಧನ! ಹೀಗೆಂಬುದಾಗಿ ನನ್ನ ಬುದ್ಧಿಗೆ ತೋಚುತ್ತಿದೆ. ಆದುದರಿಂದ ನೀನು ಈಗಲೇ ಎಲ್ಲವನ್ನೂ ಪರ್ಯಾಲೋಚಿಸಿ ಕಾಲಾತೀತವಾಗದ ರೀತಿಯಲ್ಲಿ ಮುಂದಿನ ಕಾರ್ಯವನ್ನು ನಿರ್ಧರಿಸು. ಬಹಳ ಧೈರ್ಯಶಾಲಿಗಳಾದ ಪಾಂಡುಪುತ್ರರು ಈಗ ಎಲ್ಲಿ ವಾಸಮಾಡುತ್ತಿದ್ದಾರೆಂಬುದನ್ನೂ ನಾವು ಸಮ್ಯಕ್ಸಮಾಲೋಚನೆಯಿಂದ ನಿರ್ಧರಿಸಬೇಕಾಗಿದೆ. ತಪಸ್ವಿಗಳಾದ, ಶೂರರಾದ ಪಾಂಡವರನ್ನು ಅಷ್ಟು ಸುಲಭವಾಗಿ ಕಂಡುಹಿಡಿಯಲು ಸಾಧ್ಯವಿಲ್ಲ. ಈ ಅಜ್ಞಾತವಾಸದ ಅವಧಿಯಲ್ಲಿ ಅವರನ್ನು ಕಂಡುಹಿಡಿಯಲು ಸಾಧ್ಯವಾಗಲಾರದೆಂದೇ ನಾನು ಭಾವಿಸುತ್ತೇನೆ. ಶುಧ್ಧಾತ್ಮನಾದ, ಗುಣವಂತನಾದ, ಸತ್ಯವಂತನಾದ, ನೀತಿವಂತನಾದ, ಪರಿಶುದ್ಧಾಂತರಂಗನಾದ, ತೇಜಃಪುಂಜಪೂರ್ಣನಾದ ಯುಧಿಷ್ಠಿರನು ತನ್ನ ಕಣ್ಣುಗಳ ವೀಕ್ಷಣೆಯಿಂದಲೇ ಎಲ್ಲರ ಮನಸ್ಸನ್ನೂ ಆಕರ್ಷಿಸಲು ಸಮರ್ಥನಾಗಿದ್ದಾನೆ."

ಇಷ್ಟೆಲ್ಲ ಹೇಳಿದರೂ ಕಟ್ಟಕಡೆಗೆ ಕರ್ಣ-ದುಃಶಾಸನರು ಹೇಳಿದುದನ್ನೇ ದ್ರೋಣರು ಅನುಮೋದಿಸುತ್ತಾ ಹೇಳುತ್ತಾರೆ :

**ವಿಜ್ಞಾಯ ಕ್ರಿಯತಾಂ ತಸ್ಮಾದ್ಭೂಯಶ್ಚ ಮೃಗಯಾಮಹೇ ।**
**ಬ್ರಾಹ್ಮಣೈಶ್ಚಾರಕೈಃ ಸಿದ್ಧೈರ್ಯೇ ಚಾನ್ಯೇ ತದ್ವಿದೋ ಜನಾಃ ॥**

"ಈ ವಿಷಯಗಳೆಲ್ಲವೂ ನಮಗೆ ಸ್ಪಷ್ಟವಾಗಿ ತಿಳಿದಿದ್ದರೂ ನಮ್ಮ

ಕರ್ತವ್ಯವನ್ನು ನಾವು ಮುಂದುವರಿಸುವುದು ಈ ಸಂದರ್ಭದಲ್ಲಿ ಸೂಕ್ತವಾಗಿ ಕಾಣುತ್ತದೆ. ಅಜ್ಞಾತವಾಸದ ಅವಧಿಯು ಪೂರ್ಣವಾಗುವುದರೊಳಗಾಗಿ ಪಾಂಡವರನ್ನು ಕಂಡುಹಿಡಿಯಲು ಪುನಃ ಪ್ರಯತ್ನಿಸೋಣ. ಬುದ್ಧಿವಂತರಾದ ಬ್ರಾಹ್ಮಣರನ್ನೂ, ಸಿದ್ಧಪುರುಷರನ್ನೂ ಮತ್ತು ಗೂಢಚರ್ಯೆಯಲ್ಲಿ ಹೆಚ್ಚಿನ ಪರಿಶ್ರಮವಿರುವ ಚಾರರನ್ನೂ ಕಳುಹಿಸೋಣ."

೨೭ನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ಮಹಿಮೆಯನ್ನು ವರ್ಣಿಸಿದ ಭೀಷ್ಮನೂ ಪಾಂಡವರ ಅನ್ವೇಷಣೆಗೆ ಸಮ್ಮತಿಸಿದುದು

ವೈಶಂಪಾಯನರು ಹೇಳುತ್ತಾರೆ :

**ತತಃ ಶಾನ್ತನವೋ ಭೀಷ್ಮೋ ಭರತಾನಾಂ ಪಿತಾಮಹಃ ।**
**ಶ್ರುತವಾನ್ದೇಶಕಾಲಜ್ಞಸ್ತತ್ತ್ವಜ್ಞಃ ಸರ್ವಧರ್ಮವಿತ್ ॥೧॥**

**ಆಚಾರ್ಯವಾಕ್ಯೋಪರಮೇ ತದ್ವಾಕ್ಯಮಭಿಸಂದಧತ್ ।**
**ಹಿತಾರ್ಥಂ ಸಮುವಾಚೈನಾಂ ಭಾರತೀಂ ಭಾರತಾನ್ಪ್ರತಿ ॥೨॥**

ಪಾರಿಕ್ಷಿತ! ಆಚಾರ್ಯರಾದ ದ್ರೋಣರು ಮಾತನಾಡಿದನಂತರ ಭರತಕುಲಪಿತಾಮಹನಾದ, ವೇದ-ವೇದಾಂಗಪಾರಂಗತನಾದ, ದೇಶ-ಕಾಲ ತತ್ತ್ವಜ್ಞನಾದ, ಸರ್ವಧರ್ಮಗಳನ್ನೂ ಸಮಗ್ರವಾಗಿ ತಿಳಿದಿದ್ದ, ಶಾಂತನವನು (ಭೀಷ್ಮನು) ದ್ರೋಣರ ಮಾತಿಗೆ ತನ್ನ ಒಪ್ಪಿಗೆಯನ್ನು ಸೂಚಿಸುತ್ತಾ ಕುರುವಂಶೀಯರ ಹಿತಾರ್ಥವಾಗಿ ದುರ್ಯೋಧನಾದಿಗಳನ್ನು ಕುರಿತು ಈ ಮಾತನ್ನು ಹೇಳಿದನು.

ಭೀಷ್ಮನ ಮಾತುಗಳು ಅವನಿಗೆ ಧರ್ಮಜ್ಞನಾದ ಯುಧಿಷ್ಠಿರನಲ್ಲಿದ್ದ ಅಭಿಮಾನವನ್ನು ಎತ್ತಿ ತೋರಿಸುತ್ತಿದ್ದಿತು. ಅಸತ್ಪುರುಷರಿಗೆ ಆ ಮಾತು ಗಳು ಸಹ್ಯವಾಗುವಂತಿರಲಿಲ್ಲ. ಸತ್ಪುರುಷರಿಗೆ ಭೀಷ್ಮನಾಡಿದ ಮಾತುಗಳು ಒಪ್ಪತಕ್ಕುವುಗಳಾಗಿದ್ದುವು. ಧರ್ಮಜ್ಞನಾದ ಯುಧಿಷ್ಠಿರನಲ್ಲಿ ಅಭಿಮಾನ

ವಿತ್ತೆಂದಮಾತ್ರಕ್ಕೆ ಅವನ ಮಾತುಗಳು ಯಾವ ರೀತಿಯಲ್ಲಿಯೂ ಪಕ್ಷಪಾತದಿಂದ ಕೂಡಿರಲಿಲ್ಲ. ಆದುದರಿಂದಲೇ ಭೀಷ್ಮನ ಮಾತುಗಳು ಸತ್ಪುರುಷರಿಂದ ಶ್ಲಾಘಿತವಾಗಿದ್ದುವು.

"ಸರ್ವವಿಷಯಗಳ ತತ್ತ್ವಜ್ಞರಾದ ಆಚಾರ್ಯರಾದ ದ್ರೋಣರು ಹೇಳಿದುದನ್ನು ನಾನು ಅಕ್ಷರಶಃ ಒಪ್ಪುತ್ತೇನೆ. ಸರ್ವಲಕ್ಷಣಸಂಪನ್ನರಾದ, ವೇದ-ವೇದಾಂಗಗಳನ್ನೂ ತಿಳಿದಿರುವ, ಅನುಭವಿಗಳಾದ, ವೃದ್ಧರ ಆದೇಶದಂತೆ ಮತ್ತು ಉಪದೇಶದಂತೆ ನಡೆಯುವ ಸೌಜನ್ಯವುಳ್ಳ, ಸತ್ಯನಿಷ್ಠರಾದ, ಮಾಡಿದ ಪ್ರತಿಜ್ಞೆಯನ್ನು ಪೂರ್ಣಗೊಳಿಸುವ ನಿಷ್ಠೆಯುಳ್ಳ, ಶುದ್ಧಚರಿತರಾದ, ಯಾವ ಸಮಯದಲ್ಲಿ ಏನನ್ನು ಮಾಡಬೇಕೆಂಬುದನ್ನು ಚೆನ್ನಾಗಿ ತಿಳಿದಿರುವ, ಕ್ಷಾತ್ರಧರ್ಮದಲ್ಲಿ ನಿರತರಾದ, ಮಹಾಮಹಿಮನಾದ ಶ್ರೀಕೇಶವನ ಅನುಯಾಯಿಗಳಾದ, ಮಹಾವೀರರಾದ, ಮಹಾಬಲರಾದ, ಮಹಾತ್ಮರಾದ, ಶಿಷ್ಟರ ಪರಿಪಾಲನೆಯಲ್ಲಿಯೇ ಸರ್ವದಾ ನಿರತರಾದ ಪಾಂಡವರು ವಿನಾಶಹೊಂದಲು ಸಾಧ್ಯವೇ ಇಲ್ಲ. ( ವಿನಾಶಹೊಂದಿಯೂ ಇಲ್ಲ. ಹೊಂದುವುದೂ ಇಲ್ಲ. ) ತಾವು ಪರಿಪಾಲಿಸಬೇಕಾಗಿರುವ ಧರ್ಮಾನುಸಾರವಾಗಿ ಅವರಿಂದು ನಿಗೂಢರಾಗಿದ್ದಾರೆ. ಸ್ವಶಕ್ತಿಯಿಂದ ತಮ್ಮನ್ನು ತಾವೇ ರಕ್ಷಿಸಿಕೊಳ್ಳುತ್ತಿದ್ದಾರೆ. ನಮ್ಮ ಗೂಢಚಾರರಿಗೆ ಅವರು ಸಿಕ್ಕದಿರುವುದು ಸ್ವಾಭಾವಿಕವಾಗಿಯೇ ಇದೆ. ಗೂಢಚಾರರಿಗೆ ಅವರನ್ನು ಪತ್ತೆಹಚ್ಚಲು ಸಾಧ್ಯವಾಗದೇ ಇರುವ ಕಾರಣದಿಂದಲೇ ಅವರು ವಿನಾಶಹೊಂದಿರಬಹುದೆಂಬ ನಿರ್ಧಾರಕ್ಕೆ ಬರುವ ಸಾಧ್ಯತೆಯಿಲ್ಲ. ಅವರು ಖಂಡಿತವಾಗಿಯೂ ವಿನಾಶಹೊಂದಿರುವುದಿಲ್ಲ. ಹೀಗೆಂದು ನನ್ನ ಬುದ್ಧಿಗೆ ಸ್ಫುರಣೆಯಾಗುತ್ತಿದೆ. ಪಾಂಡವರ ವಿಷಯವಾಗಿ ನನಗೆ ತಿಳಿದಿರುವ ಕೆಲವು ಅಂಶಗಳನ್ನು ಹೇಳುತ್ತೇನೆ, ದುರ್ಯೋಧನ!

ನೀತಿಸಂಪನ್ನನಾದವನ ನೀತಿಯು ಬೇರೆಯವರಿಗೆ ತಿಳಿಯುವ ಸಾಧ್ಯತೆಯಿಲ್ಲ.

**ನ ತು ನೀತಿಃ ಸುನೀತಸ್ಯ ಶಕ್ಯತೇಽನ್ವೇಷಿತುಂ ಪರೈಃ ॥೮॥**

( ನೀತಿಸಂಪನ್ನನಾದವನೆಂದರೆ ರಾಜನೀತಿಜ್ಞನು. ರಾಜನೀತಿಯಲ್ಲಿ

ಹೆಚ್ಚು ಪರಿಶ್ರಮವುಳ್ಳವನು. ಇಂತಹವನು ಅನುಸರಿಸುವ ನೀತಿಯನ್ನು ಇತರರು ತಿಳಿಯಲಾರರು. ಯುಧಿಷ್ಠಿರನು ರಾಜನೀತಿವಿಶಾರದನಾದುದರಿಂದ ಅವನು ಅನುಸರಿಸುವ ನೀತಿಯು ಎಂತಹುದೆಂಬುದು ಬೇರೆಯವರಿಂದ ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ಬೇರೆಯವರು ತಮ್ಮ ಇರುವಿಕೆಯನ್ನು (ರಹಸ್ಯವನ್ನು) ತಿಳಿದುಕೊಳ್ಳಲಾಗದ ರೀತಿಯಲ್ಲಿ ಅವನು ತನ್ನ ನೀತಿಯನ್ನು ರೂಪಿಸಿಕೊಳ್ಳಲು ಸಮರ್ಥನಾಗಿರುತ್ತಾನೆ. ಬ್ರಾಹ್ಮಣರಿಗೇ ಅವನ ಇರುವಿಕೆಯು ತಿಳಿಯುವುದಿಲ್ಲವೆಂದಮೇಲೆ ಕಪಟಿಗಳು, ಧೂರ್ತರು, ವಂಚಕರು ಅವನ ಇರುವಿಕೆಯನ್ನು ತಿಳಿಯಲು ಹೇಗೆತಾನೇ ಶಕ್ತರಾಗುವರು? ವಂಚಕರಿಂದಾಗಲೀ, ಧೂರ್ತರಿಂದಾಗಲೀ, ನಿಷ್ಣಾತರಾದ ಗೂಢಚಾರರಿಂದಾಗಲೀ–ಅವರನ್ನು ಪತ್ತೆಹಚ್ಚುವುದು ಸಾಧ್ಯವಿಲ್ಲವೆಂದು ಭೀಷ್ಮನು ಹೇಳುತ್ತಾನೆ.)

ದುರ್ಯೋಧನ! ಪಾಂಡವರ ಸ್ವಭಾವ-ಗುಣ-ಲಕ್ಷಣಗಳನ್ನು ಸಂಪೂರ್ಣವಾಗಿ ಸಮಾಲೋಚಿಸಿ ಈಗ ನಾವೇನು ಮಾಡಲು ಸಾಧ್ಯವಿದೆಯೆಂಬುದನ್ನು ನನ್ನ ಬುದ್ಧಿಗನುಸಾರವಾಗಿ ನಾನು ಹೇಳುತ್ತೇನೆ. ಈ ನನ್ನ ಮಾತುಗಳು ನಿನಗೆ ಹಿತವಾಗಿಯಾದರೂ ಇರಬಹುದು; ಅಹಿತವಾಗಿಯಾದರೂ ಇರಬಹುದು. ಆದರೆ ನಾನು ಯಾರ ವಿಷಯದಲ್ಲಿಯೇ ಆಗಲೀ, ದ್ರೋಹವನ್ನೆಸಗಬೇಕೆಂಬ ದುರುದ್ದೇಶದಿಂದ ಮಾತನಾಡುವುದಿಲ್ಲ. ಸರ್ವರಿಗೂ ಹಿತವಾಗಬೇಕೆಂಬುದೇ ನನ್ನ ಅಪೇಕ್ಷೆಯಾಗಿರುತ್ತದೆ. ಯಾರಿಗೇ ಆಗಲೀ ದ್ರೋಹಬಗೆಯುವ ನೀತಿಯು ನಮ್ಮಂತಹವರಿಂದ ಹೇಳಲ್ಪಡುವುದಿಲ್ಲ. ನಮ್ಮಂತಹವರು ಯಾವಾಗಲೂ ಇತರರಿಗೆ ದ್ರೋಹವನ್ನೆಸಗುವ ಕಾರಣದಿಂದ ಯಾವ ಮಾತನ್ನೂ ಹೇಳುವುದಿಲ್ಲ. ಸರ್ವರಿಗೂ ಕ್ಷೇಮಕರವಾದ ನೀತಿಯನ್ನು ಹೇಳುವುದೇ ನಮ್ಮಂತಹವರ ಮುಖ್ಯಕರ್ತವ್ಯವಾಗಿರುತ್ತದೆ. ನೀತಿಯುಕ್ತವಲ್ಲದ ಮಾತನ್ನು ಯಾವ ಕಾರಣದಿಂದಲೂ ಉಪದೇಶಿಸಲಾಗದು.

**ವೃದ್ಧಾನುಶಾಸನೇ ತಾತ ತಿಷ್ಠತಾ ಸತ್ಯಶೀಲಿನಾ ।**
**ಅವಶ್ಯಂ ತ್ವಿಹ ಧೀರೇಣ ಸತಾಂ ಮಧ್ಯೇ ವಿವಕ್ಷತಾ ॥೧೨॥**
**ಯಥಾರ್ಥಮಿಹ ವಕ್ತವ್ಯಂ ಸರ್ವಥಾ ಧರ್ಮಲಿಪ್ಸಯಾ ।**

ವೃದ್ಧರ ಸೇವೆಯಲ್ಲಿ ನಿರತನಾಗಿರುತ್ತಾ ಸತ್ಯನಿಷ್ಠನಾಗಿರತಕ್ಕವನು ಸತ್ಪುರುಷರ ಮಧ್ಯದಲ್ಲಿ ಮಾತನಾಡುವಾಗ ಯಥಾರ್ಥವಾದುದನ್ನೂ ಯೋಗ್ಯವಾದುದನ್ನೂ ಮಾತ್ರವೇ ಹೇಳಬೇಕು. (ಯಾರೊಬ್ಬರನ್ನಾದರೂ ಸಂತೋಷಗೊಳಿಸುವ ಆಶಯದಿಂದ ಸತ್ಯಸಂಗತಿಯನ್ನು ಮುಚ್ಚಿಡಬಾರದು. ಒಬ್ಬರಿಗೆ ಸತ್ಯಸಂಗತಿಯನ್ನು ಹೇಳಿದರೆ ಕೋಪವುಂಟಾಗುವುದೆಂಬ ಭೀತಿ ಯಿಂದಲೂ ಸತ್ಯಸಂಗತಿಯನ್ನು ಮುಚ್ಚಿಡಬಾರದು.) ಧರ್ಮಮಾರ್ಗವನ್ನೇ ಹಿಡಿದು ಹೋಗಬೇಕೆನ್ನುವವನು ಹೀಗೆ ಮಾಡುವುದು ಉಚಿತವಾಗಿರುತ್ತದೆ. ಅಂತೆಯೇ ನಾನೂ ಕೂಡ ಈ ಸಭೆಯಲ್ಲಿ ಸತ್ಯಸಂಗತಿಯನ್ನೇ ಹೇಳುತ್ತೇನೆ. ಹದಿಮೂರನೆಯ ವರ್ಷದ ಅಜ್ಞಾತವಾಸದಲ್ಲಿ ಧರ್ಮರಾಜನು ತನ್ನ ಅನುಜ ರೊಡನೆ ಎಲ್ಲಿರಬಹುದೆಂಬ ವಿಷಯದಲ್ಲಿ ನನ್ನ ಅಭಿಪ್ರಾಯವು ಇಲ್ಲಿ ಇತರರು ಹೇಳಿರುವ ಅಭಿಪ್ರಾಯಕ್ಕಿಂತಲೂ ಬೇರೆಯದಾಗಿಯೇ ಇದೆ. ಯುಧಿಷ್ಠಿರನು ಅನುಜರೊಡನೆ ವಿನಾಶಹೊಂದಿರುವನೆಂದು ನಾನು ಖಂಡಿತವಾಗಿಯೂ ಭಾವಿಸುವುದಿಲ್ಲ. ಅವರು ವಿನಾಶಹೊಂದುವ ಸಾಧ್ಯತೆಯೂ ಇಲ್ಲ.

**ಪುರೇ ಜನಪದೇ ಚಾಪಿ ಯತ್ರ ರಾಜಾ ಯುಧಿಷ್ಠಿರಃ ।**
**ದಾನಶೀಲೋ ವದಾನ್ಯಶ್ಚ ನಿಭೃತೋ ಹ್ರೀನಿಷೇವಕಃ ।**
**ಜನೋ ಜನಪದೇ ಭಾವ್ಯೋ ಯತ್ರ ರಾಜಾ ಯುಧಿಷ್ಠಿರಃ ॥೧೫॥**

ಯುಧಿಷ್ಠಿರನು ಎಲ್ಲಿರಬಹುದೆಂಬುದರ ವಿಷಯವಾಗಿ ನಾನು ಕೆಲವು ಸೂಚನೆಗಳನ್ನು ಕೊಡುತ್ತೇನೆ. ನಾನು ಕೊಡಲಿರುವ ಸೂಚನೆಗಳಿಗೆ ಅನು ಸಾರವಾಗಿ ಯುಧಿಷ್ಠಿರನನ್ನು ಹುಡುಕಿದರೆ ಅವನು ಸಿಕ್ಕರೂ ಸಿಗಬಹುದು.

ಯುಧಿಷ್ಠಿರನು ಎಲ್ಲಿ ವಾಸಮಾಡುತ್ತಿರುವನೋ–ಆ ಊರಿಗಾಗಲೀ, ಅಥವಾ ಆ ದೇಶಕ್ಕಾಗಲೀ–ಯಾವ ವಿಧವಾದ ಉಪದ್ರವವೂ ಇರುವುದಿಲ್ಲ. ಅವನ ಸುತ್ತ-ಮುತ್ತಲೂ ಇರುವ ಊರಿನ ಜನರೆಲ್ಲರೂ ದಾನಶೀಲ ರಾಗಿಯೂ, ಉದಾರಿಗಳಾಗಿಯೂ, ವಿನಯಶೀಲರಾಗಿಯೂ, ಲಜ್ಜಾಶೀಲ ರಾಗಿಯೂ ಇರುತ್ತಾರೆ.

**ಪ್ರಿಯವಾದೀ ಸದಾ ದಾನ್ತೋ ಭವ್ಯಃ ಸತ್ಯಪರೋ ಜನಃ ।**
**ಹೃಷ್ಟಃ ಪುಷ್ಟಃ ಶುಚಿರ್ದಕ್ಷೋ ಯತ್ರ ರಾಜಾ ಯುಧಿಷ್ಠಿರಃ ॥೧೬॥**

ಯುಧಿಷ್ಠಿರನಿರುವ ಊರಿನ ( ದೇಶದ ) ಪ್ರಜೆಗಳು ಪ್ರಿಯವಾದಿಗಳಾಗಿಯೂ, ಜಿತೇಂದ್ರಿಯರಾಗಿಯೂ, ಸಂತೋಷಭರಿತರಾಗಿಯೂ, ಸತ್ಯಪರರಾಗಿಯೂ, ಹೃಷ್ಟ-ಪುಷ್ಟರಾಗಿಯೂ, ಪರಿಶುದ್ಧರಾಗಿಯೂ, ಎಲ್ಲ ಕಾರ್ಯಗಳಲ್ಲಿಯೂ ದಕ್ಷರಾಗಿಯೂ ಇರುತ್ತಾರೆ.

**ನಾಸೂಯಕೋ ನ ಚಾಪೀರ್ಷುರ್ನಾಭಿಮಾನೀ ನ ಮತ್ಸರೀ ।**
**ಭವಿಷ್ಯತೀ ಜನಸ್ತತ್ರ ಸ್ವಯಂ ಧರ್ಮಮನುವ್ರತಃ ॥೧೭॥**

ಯುಧಿಷ್ಠಿರನು ವಾಸಮಾಡುತ್ತಿರುವ ಊರಿನ ಜನರಿಗೆ ಮತ್ತೊಬ್ಬರಲ್ಲಿ ದೋಷವನ್ನೆಣಿಸುವ ಸ್ವಭಾವವಿರುವುದಿಲ್ಲ. ಅವರು ಇತರರ ಪ್ರಾದುರ್ಭಾವವನ್ನು ನೋಡಿ ಹೊಟ್ಟೆಕಿಚ್ಚುಪಡುವುದಿಲ್ಲ. ಇತರರ ವಿಷಯದಲ್ಲಿ ದ್ವೇಷಾಸೂಯೆಗಳನ್ನು ಹೊಂದಿರುವುದಿಲ್ಲ. ದುರಭಿಮಾನಿಗಳಾಗಿರುವುದಿಲ್ಲ. ಪ್ರಜೆಗಳು ಯಾವಾಗಲೂ ಧರ್ಮರತರಾಗಿಯೇ ಇರುತ್ತಾರೆ.

**ಬ್ರಹ್ಮಘೋಷಾಶ್ಚ ಭೂಯಾಂಸಃ ಪೂರ್ಣಾಹುತ್ಯಸ್ತಥೈವ ಚ ।**
**ಕ್ರತವಶ್ಚ ಭವಿಷ್ಯನ್ತಿ ಭೂಯಾಂಸೋ ಭೂರಿದಕ್ಷಿಣಾಃ ॥೧೮॥**

ಯುಧಿಷ್ಠಿರನಿರುವೆಡೆಯಲ್ಲಿ ವೇದಘೋಷಗಳಾಗುತ್ತಿರುತ್ತವೆ. ಅನೇಕ ಯಜ್ಞ-ಯಾಗಾದಿಗಳು ನಿರ್ವಿಘ್ನವಾಗಿ ನಡೆದು ಅವುಗಳು ಪೂರ್ಣವಾದ ನಂತರ ಯಜ್ಞದೀಕ್ಷಿತರು ಪೂರ್ಣಾಹುತಿಗಳನ್ನು ಕೊಡುತ್ತಿರುತ್ತಾರೆ. ಅಲ್ಲಿ ನಡೆಯುವ ಯಜ್ಞ-ಯಾಗಾದಿಗಳು ಬಹುದಕ್ಷಿಣಾಕವಾಗಿಯೂ ಇರುತ್ತವೆ. ಋತ್ವಿಜರಿಗೆ ದಕ್ಷಿಣೆಯನ್ನು ಕೊಡುವುದರಲ್ಲಿ ಯಜಮಾನರು ಲೋಭಿಗಳಾಗಿರುವುದಿಲ್ಲ.

**ಸದಾ ಚ ತತ್ರ ಪರ್ಜನ್ಯಃ ಸಮ್ಯಗ್ವರ್ಷೀ ನ ಸಂಶಯಃ ।**
**ಸಮ್ಪನ್ನಸಸ್ಯಾ ಚ ಮಹೀ ನಿರಾತಙ್ಕಾ ಭವಿಷ್ಯತಿ ॥೧೯॥**

ಯುಧಿಷ್ಠಿರನಿರುವ ದೇಶದಲ್ಲಿ ಪರ್ಜನ್ಯನು ಕಾಲ-ಕಾಲಕ್ಕೆ ಮಳೆಯನ್ನು ಸುರಿಸುತ್ತಾನೆ. ಭೂಮಿಯು ಯಾವಾಗಲೂ ಸಸ್ಯಸಮೃದ್ಧವಾಗಿರುತ್ತದೆ. ಪ್ರಜೆಗಳಿಗೆ ಯಾವ ವಿಧವಾದ ಆತಂಕವೂ ಇರುವುದಿಲ್ಲ.

**ಗುಣವನ್ತಿ ಚ ಧಾನ್ಯಾನಿ ರಸವನ್ತಿ ಫಲಾನಿ ಚ ।**
**ಗನ್ಧವನ್ತಿ ಚ ಮಾಲ್ಯಾನಿ ಶುಭಶಬ್ದಾ ಚ ಭಾರತೀ ॥೨೦॥**

ಬೆಳೆದ ದವಸ-ಧಾನ್ಯಗಳು ಜಳ್ಳಾಗಿಲ್ಲದಿರುವುದು ಮಾತ್ರವಲ್ಲದೇ, ಜೀವ ಪೋಷಕಸತ್ತ್ವಗಳಿಂದಲೂ ಕೂಡಿರುತ್ತವೆ. ಫಲಗಳು ರಸಯುಕ್ತವಾಗಿರುತ್ತವೆ. ಪುಷ್ಪಮಾಲೆಗಳು ಸುಗಂಧಯುಕ್ತವಾಗಿರುತ್ತವೆ. ಯುಧಿಷ್ಠಿರನಿರುವ ರಾಜ್ಯದ ಪ್ರಜೆಗಳು ಆಡುವ ಮಾತುಗಳೂ ಶುಭಸೂಚಕಗಳಾಗಿಯೇ ಇರುತ್ತವೆ. ಯಾವಾಗಲೂ ಕೆಟ್ಟಮಾತುಗಳನ್ನಾಡದೇ ಮಂಗಳಕರ ವಾದ ಮತ್ತು ಕಿವಿಗಳಿಗೆ ಇಂಪಾಗುವಂತಹ ಮಾತುಗಳನ್ನೇ ಅಲ್ಲಿಯ ಜನರು ಆಡುತ್ತಾರೆ.

**ವಾಯುಶ್ಚ ಸುಖಸಂಸ್ಪರ್ಶೋ ನಿಷ್ಪ್ರತೀಪಂ ಚ ದರ್ಶನಮ್ ।**
**ನ ಭಯಂ ತ್ವಾವಿಶೇತ್ತತ್ರ ಯತ್ರ ರಾಜಾ ಯುಧಿಷ್ಠಿರಃ ॥೨೧॥**

ಯುಧಿಷ್ಠಿರನಿರುವ ಸ್ಥಳದಲ್ಲಿ ವಾತಾವರಣವು ಪ್ರಶಾಂತವಾಗಿರುತ್ತದೆ. ಬಿರುಗಾಳಿ-ಸುಂಟರಗಾಳಿಗಳ ಉಪಟಳವಿರುವುದಿಲ್ಲ. ಪರಸ್ಪರ ಸಂಭಾಷಣೆ ಗಳಲ್ಲಿಯೂ ಧಾರ್ಮಿಕವಾದ ವಿಷಯಗಳನ್ನು ಮಾತ್ರವೇ ಜನರು ಚರ್ಚಿ ಸುತ್ತಿರುತ್ತಾರೆ. ಯಾರೊಬ್ಬರ ಮನಸ್ಸಿನಲ್ಲಿಯೂ ಯಾವ ಕಾರಣದಿಂದಲೂ ಭಯವೆಂಬುದೇ ಇರುವುದಿಲ್ಲ.

**ಗಾವಶ್ಚ ಬಹುಲಾಸ್ತತ್ರ ನ ಕೃಶಾ ನ ಚ ದುರ್ಬಲಾಃ ।**
**ಪಯಾಂಸಿ ದಧಿಸರ್ಪೀಂಷಿ ರಸವನ್ತಿ ಹಿತಾನಿ ಚ ॥೨೨॥**

**ಗುಣವನ್ತೀ ಚ ಪೇಯಾನಿ ಭೋಜ್ಯಾನಿ ರಸವನ್ತಿ ಚ ।**
**ತತ್ರ ದೇಶೇ ಭವಿಷ್ಯನ್ತಿ ಯತ್ರ ರಾಜಾ ಯುಧಿಷ್ಠಿರಃ ॥೨೩॥**

ಯುಧಿಷ್ಠಿರನಿರುವ ರಾಜ್ಯದಲ್ಲಿ ಹಸುಗಳು ಸಮೃದ್ಧವಾಗಿರುತ್ತವೆ. ಬಹುಸಂಖ್ಯಾತವಾದ ಹಸುಗಳಿದ್ದರೂ ಬಡಕಲಾದ ಹಸುಗಳಾಗಲೀ, ದುರ್ಬಲವಾದ ಹಸುಗಳಾಗಲೀ ಆ ದೇಶದಲ್ಲಿರುವುದಿಲ್ಲ. ಆ ದೇಶದ ರಾಜನಿಗೆ ಗೋರಕ್ಷಣೆಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯಿರುತ್ತದೆ. ಆ ಹಸುಗಳಿಂದ ಕರೆಯುವ ಹಾಲು ಮತ್ತು ಆ ಹಾಲಿನಿಂದಾಗುವ ಮೊಸರು-ಬೆಣ್ಣೆ-ತುಪ್ಪಗಳು ಸತ್ತ್ವಯುಕ್ತವಾಗಿರುತ್ತವೆ ಹಾಗೂ ಶರೀರಕ್ಕೆ ಬಹುಹಿತ ಕರವಾಗಿರುತ್ತವೆ. ಯುಧಿಷ್ಠಿರನಿರುವೆಡೆಯಲ್ಲಿ ಕುಡಿಯಲು ಯೋಗ್ಯವಾದ ಪಾನೀಯಗಳೂ ಮತ್ತು ಭೋಜನಯೋಗ್ಯವಾದ ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯಗಳೂ ರಸವತ್ತಾಗಿಯೂ–ಗುಣಯುಕ್ತವಾಗಿಯೂ ಇರುತ್ತವೆ.

**ರಸಾಃ ಸ್ಪರ್ಶಾಶ್ಚ ಗನ್ಧಾಶ್ಚ ಶಬ್ದಾಶ್ಚಾಪಿ ಗುಣಾನ್ವಿತಾಃ ।**
**ದೃಶ್ಯಾನಿ ಚ ಪ್ರಸನ್ನಾನಿ ಯತ್ರ ರಾಜಾ ಯುಧಿಷ್ಠಿರಃ ॥೨೪॥**

ಧರ್ಮರಾಜನಿರುವೆಡೆಯಲ್ಲಿ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಸಕಲಗುಣಯುಕ್ತಗಳಾಗಿದ್ದು ಮನುಷ್ಯನ ಮನಸ್ಸಿಗೆ ಆಪ್ಯಾಯಮಾನವಾಗಿರುತ್ತವೆ. ಮನಸ್ಸಿಗೆ ಪ್ರಶಾಂತಿಯನ್ನುಂಟುಮಾಡುವ ( ಮನಸ್ಸನ್ನು ಉದ್ರೇಕಗೊಳಿಸದ ) ದೃಶ್ಯಗಳೇ ಎಲ್ಲೆಲ್ಲಿಯೂ ಕಾಣುತ್ತಿರುತ್ತವೆ.

**ಧರ್ಮಾಶ್ಚ ತತ್ರ ಸರ್ವೈಸ್ತು ಸೇವಿತಾಶ್ಚ ದ್ವಿಜಾತಿಭಿಃ ।**
**ಸ್ವೈಃ ಸ್ವೈರ್ಗುಣೈಶ್ಚ ಸಂಯುಕ್ತಾ ಅಸ್ಮಿನ್ವರ್ಷೇ ತ್ರಯೋದಶೇ ॥೨೫॥**

ಹದಿಮೂರನೆಯದಾದ ಈ ವರ್ಷದಲ್ಲಿ ಧರ್ಮರಾಜನು ಅಜ್ಞಾತನಾಗಿ (ವೇಷಮರೆಯಿಸಿ) ಯಾವ ದೇಶದಲ್ಲಿರುವನೋ–ಆ ದೇಶದಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರು ತಮ್ಮ ತಮ್ಮ ವರ್ಣಗಳಿಗೆ ಹೇಳಲ್ಪಟ್ಟಿರುವ ಧರ್ಮಗಳನ್ನೇ ಆಚರಿಸುತ್ತಿರುತ್ತಾರೆ. ( ತಮ್ಮ ತಮ್ಮ ವರ್ಣಾಶ್ರಮಧರ್ಮಗಳಲ್ಲಿ ನಿರತರಾಗಿರುತ್ತಾರೆ. ) ಧರ್ಮವೂ ತನ್ನ ಪೂರ್ಣಾಧಿಕಾರವನ್ನು ಜನಗಳ ಮೇಲೆ ಹೊಂದಿರುತ್ತದೆ. (ಪ್ರಜೆಗಳು ಧರ್ಮಭೀರುಗಳಾಗಿರುತ್ತಾರೆ.)

**ದೇಶೇ ತಸ್ಮಿನ್ಭವಿಷ್ಯನ್ತಿ ತಾತಾ ಪಾಣ್ಡವಸಂಯುತೇ ।**
**ಸಮ್ಪ್ರೀತಿಮಾಞ್ಜನಸ್ತತ್ರ ಸಂತುಷ್ಟಃ ಶುಚಿರವ್ಯಯಃ ॥೨೬॥**

ಮಗು ದುರ್ಯೋಧನ! ಪಾಂಡವರಿಂದ ಯುಕ್ತವಾದ ದೇಶದಲ್ಲಿ ಪ್ರಜೆಗಳು ಸರ್ವದಾ ಸುಪ್ರೀತರಾಗಿಯೂ, ಸಂತುಷ್ಟರಾಗಿಯೂ, ಪರಿಶುದ್ಧರಾಗಿಯೂ, ವಿಕಾರಶೂನ್ಯರಾಗಿಯೂ ಇರುತ್ತಾರೆ.

**ದೇವತಾತಿಥಿಪೂಜಾಸು ಸರ್ವಭಾವಾನುರಾಗವಾನ್ ।**
**ಇಷ್ಟದಾನೋ ಮಹೋತ್ಸಾಹಃ ಸ್ವಸ್ವಧರ್ಮಪರಾಯಣಃ ॥೨೭॥**

ಯುಧಿಷ್ಠಿರನಿರುವೆಡೆಯಲ್ಲಿ ಪ್ರಜೆಗಳು ದೇವತೆಗಳ ಮತ್ತು ಅತಿಥಿಗಳ ಪೂಜೆಯಲ್ಲಿ ಹೆಚ್ಚಿನ ಆಸಕ್ತಿಯುಳ್ಳವರಾಗಿರುತ್ತಾರೆ. ಅಲ್ಲಿಯ ಪ್ರಜೆಗಳಿಗೆ ದಾನಕೊಡುವುದರಲ್ಲಿಯೇ ಹೆಚ್ಚಿನ ಆಸಕ್ತಿಯಿರುತ್ತದೆ. ತಮ್ಮ-ತಮ್ಮ ಆಶ್ರಮ ಧರ್ಮಗಳಲ್ಲಿ ಸರ್ವದಾ ನಿರತರಾಗಿರುತ್ತಾರೆ.

**ಅಶುಭಾದ್ಧಿ ಶುಭಪ್ರೇಪ್ಸುರಿಷ್ಟಯಜ್ಞಃ ಶುಭವ್ರತಃ ।**
**ಭವಿಷ್ಯತಿ ಜನಸ್ತತ್ರ ಯತ್ರ ರಾಜಾ ಯುಧಿಷ್ಠಿರಃ ॥೨೮॥**

ಧರ್ಮರಾಜನು ವಾಸಮಾಡುತ್ತಿರುವ ಪ್ರದೇಶದಲ್ಲಿ ಪ್ರಜೆಗಳು ಅಶುಭಕರ್ಮಗಳನ್ನು ( ಪಾಪಕರ್ಮಗಳನ್ನು ) ಮಾಡದೇ ಶುಭವಾದ ಪುಣ್ಯ ಪ್ರದವಾದ ಕರ್ಮಗಳನ್ನೇ ಮಾಡುತ್ತಾ ಕಾಲ-ಕಾಲಕ್ಕೆ ಯಜ್ಞಗಳನ್ನು ಮಾಡುತ್ತಿರುತ್ತಾರೆ. ಶುಭಕರವಾದ ವ್ರತಾಚರಣೆಯುಳ್ಳವರಾಗಿರುತ್ತಾರೆ.

**ತ್ಯಕ್ತವಾಕ್ಯಾನೃತಸ್ತಾತ ಶುಭಕಲ್ಯಾಣಮಙ್ಗಲಃ ।**
**ಶುಭಾರ್ಥೇಪ್ಸುಃ ಶುಭಮತಿರ್ಯತ್ರ ರಾಜಾ ಯುಧಿಷ್ಠಿರಃ ॥೨೯॥**

ಮಗು! ಧರ್ಮರಾಜನಿರುವೆಡೆಯಲ್ಲಿ ಜನರು ಸುಳ್ಳು ಹೇಳುವುದನ್ನು ಸಂಪೂರ್ಣವಾಗಿ ಬಿಟ್ಟಿರುತ್ತಾರೆ. ಮಂಗಳಪ್ರದವಾದ ಶುಭಫಲವನ್ನೇ ಇಚ್ಛಿಸುವವರಾಗಿದ್ದು ಸರ್ವದಾ ಶುಭವಾದ ಬುದ್ಧಿಯಿಂದ ಕೂಡಿದವರಾಗಿ ರುತ್ತಾರೆ.

**ಭವಿಷ್ಯತಿ ಜನಸ್ತತ್ರ ನಿತ್ಯಂ ಚೇಷ್ಟಪ್ರಿಯವ್ರತಃ ।**
**ಧರ್ಮಾತ್ಮಾ ಶಕ್ಯತೇ ಜ್ಞಾತುಂ ನಾಪಿ ತಾತ ದ್ವಿಜಾತಿಭಿಃ ॥೩೦॥**

**ಕಿಂ ಪುನಃ ಪ್ರಾಕೃತೈಸ್ತಾತ ಪಾರ್ಥೋ ವಿಜ್ಞಾಯತೇ ಕ್ವಚಿತ್ ।**
**ಯಸ್ಮಿನ್ಸತ್ಯಂ ಧೃತಿರ್ದಾನಂ ಪರಾ ಶಾನ್ತಿರ್ಧ್ರುವಾ ಕ್ಷಮಾ ।**
**ಹ್ರೀಃ ಶ್ರೀಃ ಕೀರ್ತಿಃ ಪರಂ ತೇಜ ಅನೃಶಂಸ್ಯಮಥಾರ್ಜವಮ್ ॥೩೧॥**

ಧರ್ಮರಾಜನಿರುವೆಡೆಯಲ್ಲಿ ಪ್ರಜೆಗಳು ಇತರರಿಗೆ ಇಷ್ಟವಾಗುವಂತಹ ಪ್ರಿಯವಾಗುವಂತಹ ವ್ರತಗಳಲ್ಲಿಯೇ ನಿಷ್ಠರಾಗಿರುತ್ತಾರೆ. ಹೀಗಿರುವ ಸ್ಥಳಗಳಲ್ಲಿ ಯುಧಿಷ್ಠಿರನಿರುವನೆಂದು ತಿಳಿಯಬೇಕು. ಇಂತಹ ಶುಭಲಕ್ಷಣ ಗಳಿಂದ ಕೂಡಿರುವ ದೇಶದಲ್ಲಿರುವ ಧರ್ಮರಾಜನನ್ನು ಕಂಡುಹಿಡಿಯಲು ಶುಚಿವ್ರತರಾದ ಬ್ರಾಹ್ಮಣರಿಂದಲೇ ಸಾಧ್ಯವಾಗದಿರುವಾಗ ಇತರರು ಹೇಗೆ ತಾನೇ ಅವನನ್ನು ಕಂಡುಹಿಡಿಯಲು ಸಮರ್ಥರಾದಾರು? ಸತ್ಯ, ಧೃತಿ, ದಾನ, ಪರಮಶಾಂತಿ, ಅಚಲವಾದ ಕ್ಷಮೆ, ಲಜ್ಜೆ, ಕಾಂತಿ, ಕೀರ್ತಿ, ತೇಜಸ್ಸು, ದಯಾಪರತೆ, ನಿಷ್ಕಾಪಟ್ಯ–ಈ ಗುಣಗಳೆಲ್ಲವೂ ಯಾವ ಒಬ್ಬನಲ್ಲಿಯೇ ಮೂರ್ತಿಮತ್ತಾಗಿ ನೆಲೆಸಿವೆಯೋ–ಅಂತಹ ಯುಧಿಷ್ಠಿರನನ್ನು ಪತ್ತೆಹಚ್ಚಲು

ಸಾಧಾರಣರಾದ ಗುಪ್ತಚಾರರಿಂದ ಖಂಡಿತವಾಗಿಯೂ ಸಾಧ್ಯವಾಗಲಾರದು, ಮಗು ! ದುರ್ಯೋಧನ! ನಾನು ವಿವರಿಸಿರುವ ಅಂತಹ ಸ್ಥಳದಲ್ಲಿಯೇ ಯುಧಿಷ್ಠಿರನಿರುವುದು ನಿಶ್ಚಯ. ಅಲ್ಲಿಯೇ ಅವನು ನಿಗೂಢನಾಗಿದ್ದಾನೆ. ಯದ್ಯಪಿ ಅವನು ನಿಗೂಢನಾಗಿದ್ದರೂ ಅವನ ಆತ್ಮಶಕ್ತಿಯಿಂದಾಗಿ ಅವನು ವಾಸಮಾಡುತ್ತಿರುವ ಊರು ಅಥವಾ ದೇಶವು ನಾನು ವಿವರಿಸಿದಂತೆ ಮಾರ್ಪಾಡಾಗಿರುವುದು. ಮಹಾನುಭಾವನಿರುವ ಆ ಸ್ಥಳವು ಧರ್ಮಭೂಮಿ ಯಾಗಿ ಪರಿವರ್ತಿತವಾಗಿದೆ. ಇದಕ್ಕಿಂತಲೂ ಹೆಚ್ಚಾಗಿ ನಾನೇನನ್ನೂ ಹೇಳ ಲಾರೆನು. ನನ್ನಲ್ಲಿ ನೀನು ನಂಬಿಕೆಯುಳ್ಳವನಾಗಿದ್ದರೆ ನಾನು ಹೇಳಿದುದೆಲ್ಲ ವನ್ನೂ ಸುದೀರ್ಘವಾಗಿ ಸಮಾಲೋಚಿಸಿ, ಈ ಸಂದರ್ಭದಲ್ಲಿ ಯಾವು ದಾದರೂ ಕಾರ್ಯಮಾಡಬೇಕಾಗಿದ್ದರೆ ಶೀಘ್ರವಾಗಿ ಮಾಡು"–ಎಂದು ಹೇಳಿ ಭೀಷ್ಮನು ವಿರಮಿಸಿದನು. ( ಭೀಷ್ಮನಿಲ್ಲಿ ಧರ್ಮರಾಜನನ್ನು ಮಹಾಮಹಿಮ ನಾದ ಆತ್ಮಜ್ಞಾನಿಯೆಂದೇ ನಿರ್ಧರಿಸಿ ಆತ್ಮಜ್ಞಾನಿಯಿರುವೆಡೆಯಲ್ಲಿ ಆಗತಕ್ಕ ಮಾರ್ಪಾಡುಗಳನ್ನು ಕುರಿತು ವಿವರಣೆಯನ್ನು ನೀಡಿದ್ದಾನೆ. ಆತ್ಮಜ್ಞಾನಿಗಳಿರು ವೆಡೆಯಲ್ಲಿ ಇಂತಹ ವಾತಾವರಣವು ಕಲ್ಪಿತವಾಗುವುದು ಸಹಜ. ಆಶ್ರಮ ಗಳಲ್ಲಿ ಹಸು ಮತ್ತು ಹುಲಿಗಳು ಸಹಜವೈರವನ್ನು ಬಿಟ್ಟು ಒಟ್ಟಾಗಿ ವಿಹರಿಸು ತ್ತಿದ್ದುವೆಂಬುದನ್ನೂ ನಾವು ಕೇಳಿದ್ದೇವೆ. ಮಹಾತ್ಮರ ಸಹವಾಸದಿಂದ ಪ್ರಾಣಿ ಗಳ ಹೃದಯವೇ ಮಾರ್ಪಾಡಾಗುವುದೆಂದಮೇಲೆ–ಬುದ್ಧಿವಂತರೆನಿಸಿದ ಮಾನವರ ಮನಸ್ಸು ಪರಿವರ್ತನೆ ಹೊಂದುವುದರಲ್ಲಿ ಆಶ್ಚರ್ಯವೇನಿಲ್ಲ. ಋಷ್ಯಾಶ್ರಮಗಳೆಂದರೇನೆಂಬುದನ್ನೇ ತಿಳಿಯದ ನಮಗೆ ಈ ವಿಧವಾದ ಅನುಭವವಾಗುವುದು ದುಃಸಾಧ್ಯವೇ ಸರಿ. ಸಾವಿರಾರು ಮಂದಿ ಕಾವಿಬಟ್ಟೆ ಧರಿಸಿರುವವರೂ ಮತ್ತು ಕಾವಿಯನ್ನು ಧರಿಸದಿರುವವರೂ 'ಗುರು'ಗಳೆಂಬ ಹೆಸರಿನಿಂದ ಪರ್ಯಟನಮಾಡುತ್ತಿರುವ ಈ ಕಾಲದಲ್ಲಿ ಆತ್ಮಜ್ಞಾನಿ ಗಳಾರೆಂಬುದನ್ನು ತಿಳಿಯುವುದು ಕಷ್ಟಸಾಧ್ಯವೇ ಸರಿ.)

ಎ೮ನೆಯ ಅಧ್ಯಾಯವು ಮುಗಿಯಿತು.

## ಗೂಢಚಾರರನ್ನು ಕಳುಹಿಸಲು ಕೃಪರು ಸಮ್ಮತಿಸಿದುದು

ವೈಶಂಪಾಯನರು ಹೇಳುತ್ತಾರೆ :

**ತತಃ ಶಾರದ್ವತೋ ವಾಕ್ಯಮಿತ್ಯುವಾಚ ಕೃಪಸ್ತದಾ ।**
**ಯುಕ್ತಂ ಪ್ರಾಪ್ತಂ ಚ ವೃದ್ಧೇನ ಪಾಣ್ಡವಾನ್ಪ್ರತಿಭಾಷಿತಮ್ ॥೧॥**

ಜನಮೇಜಯ! ಭೀಷ್ಮನು ತನ್ನ ಮಾತನ್ನು ಮುಗಿಸಿದನಂತರ ಕೃಪಾಚಾರ್ಯರು ದುರ್ಯೋಧನನನ್ನು ಕುರಿತು ಹೇಳಿದರು : "ದುರ್ಯೋಧನ! ಪಾಂಡವರ ವಿಷಯದಲ್ಲಿ ಪಿತಾಮಹನಾದ ಭೀಷ್ಮನು ಹೇಳಿದ ಮಾತುಗಳು ಯುಕ್ತಿಯುಕ್ತವಾಗಿವೆ.

ಧರ್ಮಾರ್ಥಯುಕ್ತವಾದ, ಬಹುಸುಂದರವಾದ, ತಾತ್ತ್ವಿಕವಾದ, ಕಾರ್ಯ-ಕಾರಣಗಳನ್ನು ನಿಶ್ಚಯಿಸಿ ರೂಪಿಸುವ ಮಾತುಗಳಾಗಿವೆ. ನಾನೂ ಸಹ ಈ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಲು ಅಪೇಕ್ಷಿಸುತ್ತೇನೆ ; ಕೇಳು, ದುರ್ಯೋಧನ! ಭೀಷ್ಮನು ಹೇಳಿರುವ ಮಾತುಗಳನ್ನೂ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಪಾಂಡವರನ್ನು ಹುಡುಕಲು ಸಮರ್ಥರಾದ ಗುಪ್ತಚಾರರನ್ನು ಈಗಲೇ ಕಳುಹಿಸಿಕೊಡಬೇಕು. ಗುಪ್ತಚಾರರನ್ನು ಕರೆಸಿಕೊಂಡು ಅವರೊಡನೆ ಈ ವಿಷಯಗಳೆಲ್ಲವನ್ನೂ ಸಮಾಲೋಚಿಸಬೇಕು. ಇದುವರೆಗೆ ಅವರು ನೋಡಿರುವ ದೇಶಗಳಲ್ಲಿ ಭೀಷ್ಮನು ಹೇಳಿದ ಲಕ್ಷಣಗಳುಳ್ಳ ಪ್ರಜೆಗಳಿದ್ದಾರೆಯೇ ಎಂಬುದನ್ನು ವಿಚಾರಿಸಬೇಕು. ಎರಡನೆಯದಾಗಿ ಅಜ್ಞಾತವಾಸದ ಕಾಲದಲ್ಲಿ ಪಾಂಡವರು ಸಿಕ್ಕಿದರೆ ಏನು ಮಾಡಬೇಕು? ಸಿಕ್ಕದಿದ್ದರೆ ಏನು ಮಾಡಬೇಕು? ಯಾವ ಮಾರ್ಗವನ್ನು ಅನುಸರಿಸಿದರೆ ನಮಗೆ ಹಿತವುಂಟಾಗುವುದು?–ಎಂಬುದೆಲ್ಲವನ್ನೂ ಸಮಾಲೋಚಿಸಿ ನಾವು ಅನುಸರಿಸಬೇಕಾದ ನೀತಿಯನ್ನು ಈಗಲೇ ರೂಪಿಸಿಕೊಳ್ಳಬೇಕು.

**ನಾವಜ್ಞೇಯೋ ರಿಪುಸ್ತಾತ ಪ್ರಾಕೃತೋಽಪಿ ಬುಭೂಷತಾ ।**
**ಕಿಂ ಪುನಃ ಪಾಣ್ಡವಾಸ್ತಾತ ಸರ್ವಾಸ್ತ್ರಕುಶಲಾ ರಣೇ ॥೪॥**

ರಾಜರಾದವರು ತಮ್ಮ ಶತ್ರುಗಳು ಸಾಧಾರಣರಾಗಿದ್ದರೂ–ತಮ್ಮಷ್ಟು ಪರಾಕ್ರಮಿಗಳಲ್ಲದಿದ್ದರೂ–ಅನಾದರಣೆಯನ್ನು ಮಾಡಕೂಡದು. ಹೀಗಿರು

ವಾಗ ಸರ್ವಾಸ್ತ್ರಕುಶಲರಾದ ಪಾಂಡವರೇ ಶತ್ರುಗಳಾಗಿರುವಾಗ (ಅವರನ್ನು ಶತ್ರುಗಳೆಂದು ನೀನು ಭಾವಿಸಿರುವಾಗ) ಸ್ವಲ್ಪವಾದರೂ ಅನಾದರಣೆಯನ್ನು ಮಾಡಲಾಗದು. ಅರಣ್ಯವನ್ನು ಪ್ರವೇಶಿಸಿ ಹನ್ನೆರಡು ವರ್ಷಗಳನ್ನು ಅಲ್ಲಿ ಕಳೆದಿರುವ ಮಹಾತ್ಮರಾದ ಪಾಂಡವರೀಗ ಒಂದು ವರ್ಷದ ಅಜ್ಞಾತವಾಸ ವನ್ನು ಕಳೆಯಲು ವೇಷವನ್ನು ಮರೆಸಿಕೊಂಡು ನಿಗೂಢರಾಗಿದ್ದುಬಿಟ್ಟಿದ್ದಾರೆ. ಅಜ್ಞಾತವಾಸದ ಅವಧಿಯು ಮುಗಿದೊಡನೆಯೇ ಅವರು ಬಂದರೇನು ಮಾಡಬೇಕೆಂಬುದನ್ನು ನಾವೀಗ ನಿರ್ಧರಿಸಬೇಕಾಗಿದೆ. ನಮ್ಮ ರಾಷ್ಟ್ರದಲ್ಲಿ ಅವರನ್ನು ಎದುರಿಸಲು ಎಷ್ಟು ಬಲವಿದೆಯೆಂಬುದನ್ನು ಪರಿಶೀಲಿಸಬೇಕಾ ಗಿದೆ. ವೀರರಾದ ಪಾಂಡವರೊಡನೆ ಯುದ್ಧವಾದಲ್ಲಿ ನಮ್ಮ ಪಕ್ಷಕ್ಕೆ ಪರರಾಷ್ಟ್ರ ಗಳ ಎಷ್ಟು ಮಂದಿ ರಾಜರು ಸೈನ್ಯಸಮೇತರಾಗಿ ಬರುತ್ತಾರೆಂಬುದನ್ನೂ ನಾವು ಈಗಲೇ ಪರಿಶೀಲಿಸಬೇಕಾಗಿದೆ. ಅಜ್ಞಾತವಾಸವು ಮುಗಿದೊಡನೆಯೇ ಅವರು–ಮೋಡದಿಂದ ಹೊರಬರುವ ಸೂರ್ಯನೋಪಾದಿಯಲ್ಲಿ–ಅಮಿತ ವಾದ ತೇಜಸ್ಸಿನಿಂದ ಹೊರಗೆ ಕಾಣಿಸಿಕೊಳ್ಳುತ್ತಾರೆಂಬ ವಿಷಯದಲ್ಲಿ ಯಾರೂ ಸಂಶಯಪಡಬೇಕಾಗಿಲ್ಲ. ಅಜ್ಞಾತವಾಸವು ಮುಗಿಯಿತೆಂದರೆ– ಮಹಾತ್ಮರಾದ, ಮಹಾಬಲರಾದ, ಅಮಿತವಾದ ಪರಾಕ್ರಮವುಳ್ಳ ಪಾರ್ಥರು ಮಹತ್ತರವಾದ ಉತ್ಸಾಹದಿಂದ ಹೊರಗೆ ಬರುತ್ತಾರೆ. ಆದುದರಿಂದ ನಾವೀ ಗಲೇ ನಮ್ಮಲ್ಲಿರುವ ಬಲ ಮತ್ತು ಕೋಶಗಳ ವಿಷಯವಾಗಿ ಪರಿಶೀಲನೆಯನ್ನು ನಡೆಸಬೇಕು ಮತ್ತು ಅವರ ವಿಷಯದಲ್ಲಿ ಯಾವ ವಿಧವಾದ ನೀತಿಯನ್ನು ಅನುಸರಿಸಬೇಕೆಂಬುದನ್ನೂ ಈಗಲೇ ನಿರ್ಧಾರಮಾಡಬೇಕು.

ಈ ನೀತಿಗೆ ಅನುಗುಣವಾಗಿ ನಾವು ಯುದ್ಧಸನ್ನದ್ಧರಾಗಬೇಕು ಅಥವಾ ಸಂಧಾನಕ್ಕೆ ಸಿದ್ಧರಾಗಬೇಕು. ದುರ್ಯೋಧನ! ನೀನು ನಿನ್ನಲ್ಲಿರುವ ಬಲದ (ಸೇನೆಯ) ವಿಷಯವಾಗಿ ಸಂಪೂರ್ಣವಾಗಿ ಮೊದಲು ಸಮಾಲೋಚಿಸಬೇಕು. ನಿನ್ನಲ್ಲಿ ಬಲವಾದ ಸೈನ್ಯವಿದ್ದರೆ ಮಾತ್ರವೇ ಶತ್ರುವಿನೊಡನೆ ಸೆಣೆಸಾಡಲು ಸಾಧ್ಯವಿದೆ. ನಿನ್ನಲ್ಲಿ ಬಲವಾದ ಸೈನ್ಯವಿದ್ದರೆ ನೀನು ಗೆದ್ದೇ ಗೆಲ್ಲುವೆಯೆಂಬ ದೃಢನಿಶ್ಚಯದಿಂದ ಇತರ ರಾಜರೂ ನಿನ್ನ ಪಕ್ಷಕ್ಕೇ ಸೇರಿಕೊಳ್ಳುತ್ತಾರೆ. ನಿನ್ನ ಸೇನೆಯ ವಿಷಯವಾಗಿ ನೀನು ಸಂಪೂರ್ಣ ವಾಗಿ ಸಮಾಲೋಚಿಸಿದ ನಂತರ–ನಿನ್ನ ಮಿತ್ರರಲ್ಲಿ ಬಲಿಷ್ಠರಾರು?

ದುರ್ಬಲರಾರು? ಯಾರ ಸಹಾಯವನ್ನು ಪ್ರಯತ್ನಪೂರ್ವಕವಾಗಿ ಪಡೆದರೆ ನಮಗೆ ಹೆಚ್ಚು ಪ್ರಯೋಜನವಾಗುತ್ತದೆ?–ಎಂಬುದನ್ನೂ ಸಮಾಲೋಚಿಸಬೇಕು. ಇವೆಲ್ಲವನ್ನೂ ಪರಿಶೀಲಿಸಿದನಂತರ–ನಿನ್ನ ಸೈನ್ಯಬಲವು ಉತ್ತಮವಾಗಿದೆಯೇ? ಮಧ್ಯಮವಾಗಿದೆಯೇ? ಅಥವಾ ಅಧಮವಾಗಿದೆಯೇ?–ಎಂಬುದನ್ನು ನಿರ್ಧರಿಸಬೇಕು. ಒಂದು ವೇಳೆ ಉತ್ತಮಸ್ಥಿತಿಯಲ್ಲಿಲ್ಲದಿದ್ದರೆ ಶತ್ರುವಿನೊಡನೆ ಯುದ್ಧವನ್ನು ಘೋಷಿಸದಿರುವುದೇ ಉತ್ತಮ. ಸೇನಾಬಲವು ಸುವ್ಯವಸ್ಥಿತವಾಗಿದ್ದು ಉತ್ತಮರೀತಿಯಲ್ಲಿದ್ದರೂ–ಸೈನಿಕರು ಸಂತುಷ್ಟರಾಗಿರುವರೇ? ಅಸಂತುಷ್ಟರಾಗಿರುವರೇ?–ಎಂಬುದನ್ನೂ ಗೂಢಚಾರರ ಮೂಲಕವಾಗಿ ತಿಳಿದುಕೊಂಡು, ಅವರು ಅಸಂತುಷ್ಟರಾಗಿದ್ದರೆ ಅವರನ್ನು ಸಂತೋಷಗೊಳಿಸಲು ಸಕಲಪ್ರಯತ್ನಗಳನ್ನೂ ಮಾಡಬೇಕು.

**ಸಾಮ್ನಾ ದಾನೇನ ಭೇದೇನ ದಣ್ಡೇನ ಬಲಿಕರ್ಮಣಾ ।**
**ನ್ಯಾಯೇನಾಕ್ರಮ್ಯ ಚ ಪರಾನ್ಬಲಾಚ್ಚಾನಮ್ಯ ದುರ್ಬಲಾನ್ ॥೧೧॥**

**ಸಾನ್ತ್ವಯಿತ್ವಾ ತು ಮಿತ್ರಾಣಿ ಬಲಂ ಚಾಭಾಷ್ಯತಾಂ ಸುಖಮ್ ।**
**ಸುಕೋಷಬಲಸಂವೃದ್ಧಃ ಸಮ್ಯಕ್ಸಿದ್ಧಿಮವಾಪ್ಸ್ಯಸಿ ॥೧೨॥**

ಸಾಮ, ದಾನ, ಭೇದ, ದಂಡ–ಈ ಚತುರುಪಾಯಗಳಿಂದಲೂ ಶತ್ರುವನ್ನು ಗೆಲ್ಲಲು ಯತ್ನಿಸಬೇಕು. ದುರ್ಬಲರಾದ ರಾಜರನ್ನು ಬಲಪ್ರಯೋಗದಿಂದ ಸ್ವಾಧೀನಮಾಡಿಕೊಳ್ಳಬೇಕು. ನಮಗೆ ಸಮಾನಬಲವಿರುವವರನ್ನು ಸಾಂತ್ವವಚನಗಳಿಂದ ಮಿತ್ರರನ್ನಾಗಿ ಮಾಡಿಕೊಳ್ಳಬೇಕು. ಸೈನಿಕರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಟ್ಟು ಅವರ ಸ್ವಾಮಿನಿಷ್ಠೆಯು ಅಚಲವಾಗಿರುವಂತೆ ನೋಡಿಕೊಳ್ಳಬೇಕು. ಯಾವನಿಗೆ ಸಂಪತ್ತು ಮತ್ತು ಸೈನ್ಯಗಳ ಸಮೃದ್ಧಿಯಿರುವುದೋ ಮತ್ತು ಯಾವನು ಚತುರುಪಾಯಗಳನ್ನೂ ಸಮಯಗಳಲ್ಲಿ ವಿವೇಚಿಸಿ ಉಪಯೋಗಿಸುವನೋ–ಅಂತಹವನಿಗೆ ಜಯವೆಂಬುದು ಖಂಡಿತವಾಗಿಯೂ ಸಿದ್ಧಿಸುವುದು.

ಇದೇ ನೀತಿಯನ್ನು ಅನುಸರಿಸಿದರೆ ನೀನು ಜಯಶಾಲಿಯಾಗುವೆ, ದುರ್ಯೋಧನ! ಎಂತಹ ಬಲಿಷ್ಠನಾದ ಶತ್ರುವನ್ನೂ ಎದುರಿಸಿ ನಿಲ್ಲಲು ನೀನು ಸಮರ್ಥನಾಗುವೆ. ಹೀಗಿರುವಾಗ ಸೈನ್ಯಬಲವೇ ಇಲ್ಲದ, ವಾಹನ

ಗಳಿಂದ ಹೀನರಾದ ಪಾಂಡವರನ್ನು ಎದುರಿಸಲು ಕಷ್ಟವಾಗುವುದೇ? ಆದುದರಿಂದ ನೀನೀಗಲೇ ನಿನ್ನ ರಾಜ ಧರ್ಮಾನುಸಾರವಾಗಿ ಏನು ಮಾಡಬೇಕೆಂಬುದನ್ನು ನಿಶ್ಚಯಿಸಬೇಕು. ಆಪತ್ಕಾಲವು ಬರುವುದೆಂಬುದನ್ನು ಇಂದೇ ನಿಶ್ಚಯಿಸಿ ಕಾರ್ಯತತ್ಪರನಾಗಬೇಕು. ಸಮಯವರಿತು ಕಾರ್ಯಮಾಡಬೇಕು. ಹೀಗೆ ಮಾಡುವುದರಿಂದ ನೀನು ನಿನ್ನ ಶತ್ರುಗಳನ್ನು ಜಯಿಸುವುದು ಮಾತ್ರವಲ್ಲದೇ–ಚಿರಕಾಲ ಸುಖವನ್ನೂ ಅನುಭವಿಸುವೆ. ಇದು ನಿಮ್ಮೆಲ್ಲರಿಗೂ ಸಾಧುವಾಗಿ ಕಾಣುವುದಾದರೆ ಈ ಮಾರ್ಗವನ್ನೇ ನೀನು ಅನುಸರಿಸಬಹುದಾಗಿದೆ.”

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಸುಶರ್ಮನ ಸಲಹೆಯಂತೆ ತ್ರಿಗರ್ತರೂ ಮತ್ತು ಕೌರವರೂ ಮತ್ಸ್ಯದೇಶಕ್ಕೆ ಹೋಗಿ ಗೋವುಗಳನ್ನು ತಡೆದುದು

ವೈಶಂಪಾಯನರು ಹೇಳುತ್ತಾರೆ :

**ಅಥ ರಾಜಾ ತ್ರಿಗರ್ತಾನಾಂ ಸುಶರ್ಮಾ ರಥಯೂಥಪಃ ।**
**ಪ್ರಾಪ್ತಕಾಲಮಿದಂ ವಾಕ್ಯಮುವಾಚ ತ್ವರಿತೋ ಬಲೀ ॥೧॥**

“ಜನಮೇಜಯ! ತ್ರಿಗರ್ತರ ರಾಜನ ಹೆಸರು ಸುಶರ್ಮಾ. ಅವನು ಅನೇಕ ರಥಸೈನ್ಯಕ್ಕೆ ಅಧಿಪತಿಯಾಗಿದ್ದನು. ಮಹಾಬಲಿಷ್ಠ. ಅತ್ಯಂತ ಅವಸರದಿಂದ ಅವನು ತತ್ಕಾಲೋಚಿತವಾದ ಈ ಮಾತನ್ನು ಹೇಳಿದನು :

ಮತ್ಸ್ಯದೇಶದ ಸೇನಾಪತಿಯಾಗಿದ್ದ ಕೀಚಕನ ಬೆಂಬಲದಿಂದ ಮತ್ಸ್ಯರೂ ಮತ್ತು ಶಾಲ್ವರೂ ಅನೇಕಬಾರಿ ಸುಶರ್ಮನ ಮೇಲೆ ದಾಳಿಮಾಡಿ ಸುಶರ್ಮನನ್ನು ಪರಾಜಯಗೊಳಿಸಿದ್ದರು. ಮತ್ಸ್ಯದೇಶದ ಮೇಲೆ ತನ್ನ ಸೇಡು ತೀರಿಸಿಕೊಳ್ಳಲು ಇದೊಂದು ಒಳ್ಳೆಯ ಸನ್ನಿವೇಶವೆಂದು ಭಾವಿಸಿದ ಸುಶರ್ಮನು ಸ್ವಲ್ಪವೂ ತಡಮಾಡದೇ ಕರ್ಣನನ್ನೊಮ್ಮೆ ತಲೆಯೆತ್ತಿ ನೋಡಿ ಅನಂತರದಲ್ಲಿ ದುರ್ಯೋಧನನನ್ನು ಕುರಿತು ಹೇಳಿದನು :

“ಮಹಾರಾಜ! ಈ ಹಿಂದೆ ಅನೇಕಬಾರಿ ನನ್ನ ರಾಜ್ಯವು ಮತ್ಸ್ಯರಾಜ

ನಿಂದ ದಾಳಿಗೆ ಗುರಿಯಾಗಿತ್ತು. ಮತ್ಸ್ಯರಾಜನಿಗೆ ಕೀಚಕನೆಂಬ ಮಹಾಬಲಿಷ್ಠನಾದ ಸೇನಾಪತಿಯಿದ್ದನು. ಅವನ ಅತುಲಪರಾಕ್ರಮದಿಂದಾಗಿ ನಾನು ಎಷ್ಟೋ ಬಾರಿ ಪರಾಜಿತನಾದೆನು. ಕೀಚಕನು ಮಹಾ ಕ್ರೂರಿಯಾಗಿಯೂ, ದುಷ್ಟನಾಗಿಯೂ, ಮಹಾಕೋಪಿಷ್ಠನಾಗಿಯೂ ಇದ್ದನು. ಅತುಲಪರಾಕ್ರಮಿಯೆಂದು ಲೋಕಪ್ರಸಿದ್ಧನಾಗಿದ್ದನು. ಅದೃಷ್ಟವಶದಿಂದ ಪಾಪಿಷ್ಠನಾದ, ಕ್ರೂರಕರ್ಮಿಯಾದ ಅವನು ಗಂಧರ್ವರಿಂದ ಹತನಾಗಿದ್ದಾನೆ. ಕೀಚಕನು ಗತಪ್ರಾಣನಾದನಂತರ ವಿರಾಟನು ರೆಕ್ಕೆಗಳನ್ನು ಕತ್ತರಿಸಿದ ಪಕ್ಷಿಯಂತೆಯೇ ಸರಿ. ಅವನಿಂದು ನಿರಾಶ್ರಿತ. ಅವನ ದರ್ಪವಿಂದು ವಿಧ್ವಸ್ತವಾಗಿದೆ. ಕೀಚಕನ ವಧೆಯಿಂದಾಗಿ ವಿರಾಟನು ನಿರುತ್ಸಾಹ ನಾಗಿರುವನೆಂದು ನಾನು ಭಾವಿಸಿದ್ದೇನೆ. ನಾನು ನಿಮ್ಮ ಮಿತ್ರನಾಗಿರುವುದರಿಂದ ಹಿಂದೆ ಮತ್ಸ್ಯರಾಜನಿಂದ ನನಗಾದ ಅಪಮಾನವು ನಿಮಗೂ ಆದಂತೆಯೇ ಆಗಿದೆ. ಈಗ ನಾನು ಅವನ ಮೇಲೆ ಸೇಡುತೀರಿಸಿಕೊಳ್ಳಲಿಚ್ಛಿಸಿದ್ದೇನೆ. ಅವನ ಪಟ್ಟಣದ ಮೇಲೆ ದಾಳಿಮಾಡಲು ಅಪೇಕ್ಷಿಸಿದ್ದೇನೆ. ಆದರೆ ನಿಮ್ಮ ಬೆಂಬಲವಿಲ್ಲದೇ ಮತ್ತು ನಿಮ್ಮ ಅಭಿಮತವಿಲ್ಲದೇ ನಾನೊಬ್ಬನೇ ಅವನನ್ನು ಆಕ್ರಮಿಸಲಾರೆನು. ನಿನಗೂ, ನಿನ್ನ ಅನುಜರಿಗೂ ಮತ್ತು ಕರ್ಣನಿಗೂ ನನ್ನ ಅಭಿಪ್ರಾಯವು ಸಾಧುವೆನಿಸಿದರೆ–ನಾವೆಲ್ಲರೂ ಸೇರಿ ಈ ಸಮಯದಲ್ಲಿ ಮತ್ಸ್ಯರಾಜನನ್ನು ವಿನಾಶಗೊಳಿಸೋಣ. ಈ ಸನ್ನಿವೇಶವು ದೈವೇಚ್ಛೆಯಿಂದಲೇ ಪ್ರಾಪ್ತವಾಗಿದೆಯೆಂದು ನಾನು ಭಾವಿಸುತ್ತೇನೆ. ಬಹುಧಾನ್ಯಸಮೃದ್ಧವಾಗಿರುವ ಮತ್ಸ್ಯದೇಶವನ್ನು ಆಕ್ರಮಿಸಲು ಈಗಲೇ ನಾವು ಪ್ರಯಾಣಮಾಡೋಣ. ಕೀಚಕನ ವಧೆಯಿಂದಾಗಿ ನಿರ್ವೀರ್ಯನಾಗಿರುವ ವಿರಾಟನನ್ನು ಕ್ಷಣಮಾತ್ರ ದಲ್ಲಿ ಸೋಲಿಸಿ ಅವನಲ್ಲಿರುವ ಅಪಾರವಾದ ಐಶ್ವರ್ಯವನ್ನು ಕೊಳ್ಳೆ ಹೊಡೆಯೋಣ. ಅವನ ರಾಜ್ಯವನ್ನು ವಿಭಾಗಿಸಿ ಹಂಚಿಕೊಳ್ಳೋಣ. ಅವನಲ್ಲಿರುವ ಉತ್ತಮಜಾತಿಯ ಸಾವಿರಾರು ಗೋವುಗಳನ್ನು ಬಲಾತ್ಕಾರ ದಿಂದ ಸೆಳೆದುತರೋಣ. ಕೌರವಸೇನೆಯಿಂದಲೂ ತ್ರಿಗರ್ತಸೇನೆಯಿಂದಲೂ ಕೂಡಿದ ನಾವು ವಿರಾಟರಾಜನ ಪಟ್ಟಣಕ್ಕೆ ಮುತ್ತಿಗೆ ಹಾಕಿ ಉತ್ತಮೋತ್ತಮವಾದ ಗೋವುಗಳನ್ನು ಹಿಡಿದು ತರುವುದೇ ಪ್ರಥಮತಃ ಯುಕ್ತವಾಗಿ ಕಾಣುತ್ತದೆ.

ಕೌರವಸೈನ್ಯವನ್ನೂ ತ್ರಿಗರ್ತಸೈನ್ಯವನ್ನೂ ವ್ಯವಸ್ಥಿತಸ್ಥಿತಿಯಲ್ಲಿ ಸಜ್ಜುಗೊಳಿಸಿ ಮತ್ಸ್ಯರಾಜನ ಸೇನೆಯನ್ನು ಎದುರಿಸೋಣ. ನಮ್ಮೆರಡು ಸೇನೆಗಳ ಬಲದ ಮುಂದೆ ಕೀಚಕನಿಂದ ವಿಹೀನವಾದ ವಿರಾಟನ ಸೇನಾಬಲವು ಹೆಚ್ಚುಕಾಲ ನಿಲ್ಲಲಾರದು. ನಾವು ಶೀಘ್ರವಾಗಿಯೇ ಅವನ ಸೈನ್ಯವನ್ನು ವಿಧ್ವಂಸಗೊಳಿಸಬಹುದಾಗಿದೆ. ವಿರಾಟನ ಸೇನೆಯನ್ನು ವಿಧ್ವಂಸಗೊಳಿಸಿ ವಿರಾಟನನ್ನು ನಮ್ಮ ಆಶ್ರಿತನನ್ನಾಗಿ ಮಾಡಿಕೊಳ್ಳೋಣ. ವಿರಾಟನನ್ನು ಯಥಾವಿಧಿಯಾಗಿ ಆಶ್ರಿತನನ್ನಾಗಿ ಮಾಡಿಕೊಂಡು ಅವನಲ್ಲಿರುವ ಅಪಾರವಾದ ಐಶ್ವರ್ಯವನ್ನು ತೆಗೆಸಿಕೊಂಡು ನಮ್ಮ-ನಮ್ಮ ದೇಶಗಳಿಗೆ ಹಿಂದಿರುಗಿ ಸುಖವಾಗಿರೋಣ. ನೀನು ನನ್ನ ಸಹಾಯಕ್ಕೆ ಬಂದು ನನ್ನ ಶತ್ರುವನ್ನು ಪರಾಜಯಗೊಳಿಸುವುದರಿಂದ ನಿನ್ನ ಕೀರ್ತಿಯೂ ಮತ್ತು ಪ್ರಭಾವವೂ ಅಭಿವೃದ್ಧಿ ಹೊಂದುತ್ತವೆ."

ಸುಶರ್ಮನ ಮಾತುಗಳನ್ನು ಕೇಳಿ ಕರ್ಣನು ದುರ್ಯೋಧನನನ್ನು ಕುರಿತು ಹೇಳಿದನು :

"ಮಹಾರಾಜ! ಸುಶರ್ಮನು ಹೇಳಿದ ಮಾತುಗಳು ಸಮಯೋಚಿತವಾಗಿವೆಯೆಂದು ನಾನೂ ಭಾವಿಸುತ್ತೇನೆ. ನಾವೀಗಲೇ ನಮ್ಮ ಸೇನೆಯನ್ನು ಸಜ್ಜುಗೊಳಿಸಿ ವಿರಾಟರಾಜನ ಮೇಲೆ ಯುದ್ಧಕ್ಕೆ ಹೊರಡೋಣ ಅಥವಾ ನಮ್ಮ ಸೇನೆಯನ್ನು ಸಣ್ಣ-ಸಣ್ಣ ತುಕ್ಕಡಿಗಳನ್ನಾಗಿ ವಿಭಾಗಿಸಿ ಯುದ್ಧಕ್ಕೆ ಕಳುಹಿಸೋಣ. ಸೈನ್ಯದ ವಿಭಾಗವನ್ನು ಹೇಗೆ ಮಾಡಬೇಕು? ಮತ್ತು ಯಾವ ಯಾವ ವಿಭಾಗಕ್ಕೆ ಯಾರು ಯಾರು ಅಧಿಪತಿಗಳಾಗಿರಬೇಕು?–ಎಂಬ ವಿಷಯಗಳೆಲ್ಲವನ್ನೂ ಪ್ರಾಜ್ಞರಾದ, ಕುರುವೃದ್ಧರಾದ, ಪಿತಾಮಹರಾದ ಭೀಷ್ಮರೊಡನೆಯೂ–ಆಚಾರ್ಯರಾದ ದ್ರೋಣರೊಡನೆಯೂ–ಪರಾಕ್ರಮಿಯಾದ ಶಾರದ್ವತರೊಡನೆಯೂ ಪರ್ಯಾಲೋಚಿಸೋಣ. ಅವರು ಹೇಗೆ ಮಾಡುವುದು ಸೂಕ್ತವೆಂದು ಹೇಳುವರೋ ಹಾಗೆಯೇ ಎಲ್ಲರೂ ನಡೆದುಕೊಳ್ಳೋಣ. ಈ ಸಮಯದಲ್ಲಿ ಸಾವಕಾಶಮಾಡುವುದು ನನಗೆ ಸರಿಯೆನಿಸುವುದಿಲ್ಲ. ನಮ್ಮ ಕಾರ್ಯಸಾಧನೆಗಾಗಿ ನಾವೀಗಲೇ ಕುರುಪ್ರಮುಖರೊಡನೆ ಸಮಾಲೋಚಿಸಿ ಜೈತ್ರಯಾತ್ರೆಗೆ ಹೊರಡಬೇಕು. ಪಾಂಡವರ ವಿಷಯವಾಗಿ ನಾವು ಹೆಚ್ಚು ತಲೆಕೆಡಿಸಿಕೊಳ್ಳಬೇಕಾಗಿಲ್ಲವೆಂಬುದು ನನ್ನ

ಅಭಿಪ್ರಾಯವಾಗಿದೆ. ಒಂದು ವೇಳೆ ಅವರು ಇಂದು ಬದುಕಿದ್ದರೂ ಕೂಡ ಅರ್ಥಹೀನರೂ, ಬಲಹೀನರೂ, ಪೌರುಷಹೀನರೂ ಆಗಿರುತ್ತಾರೆ. ಅವರು ಹಾಳಾಗಿಯೇ ಹೋಗಿದ್ದಾರೆಂದೂ ನನಗನ್ನಿಸುತ್ತದೆ. ಸತ್ತುಹೋಗಿರಲೂ ಬಹುದು. ಆದುದರಿಂದ ನಾವೀಸಮಯದಲ್ಲಿ ಅವರ ವಿಷಯವಾಗಿ ಹೆಚ್ಚು ಯೋಚಿಸುತ್ತಾ ಕುಳಿತುಕೊಳ್ಳದೇ ಅನುದ್ವಿಗ್ನರಾಗಿ (ಭಯರಹಿತರಾಗಿ) ವಿರಾಟನಗರವನ್ನು ಆಕ್ರಮಿಸಲು ಪ್ರಯಾಣಮಾಡೋಣ. ಅವನಲ್ಲಿರುವ ಉತ್ತಮೋತ್ತಮವಾದ ಹಸುಗಳನ್ನೂ ಮತ್ತು ಧನ-ಕನಕ-ವಸ್ತುಗಳನ್ನೂ ಕೊಳ್ಳೆಹೊಡೆದು ತರೋಣ."

ಕರ್ಣನ ಮಾತುಗಳು ದುರ್ಯೋಧನನಿಗೆ ಸೂಕ್ತವಾಗಿಯೇ ತೋರಿದುವು. ಒಡನೆಯೇ ಅವನು ನಿರಂತರವೂ ತನ್ನ ಆಜ್ಞಾಧಾರಕನಾದ ದುಃಶಾಸನನನ್ನು ಕುರಿತು ಹೇಳಿದನು :

"ದುಃಶಾಸನ! ವೃದ್ಧರೊಡನೆ ಸಮಾಲೋಚಿಸಿ ಬಹುಶೀಘ್ರವಾಗಿ ಸೇನೆಯನ್ನು ಸಜ್ಜುಗೊಳಿಸು. ನಾವೂ ಮತ್ತು ತ್ರಿಗರ್ತರೂ ಸಮಾಲೋಚಿಸಿ ಮತ್ಸ್ಯದೇಶವನ್ನು ಆಕ್ರಮಣಮಾಡಬೇಕು. ನಾವು ಒಂದು ಕಡೆಯಿಂದ ದಾಳಿಯನ್ನಾರಂಭಿಸಿದರೆ–ತ್ರಿಗರ್ತರು ಮತ್ತೊಂದು ಕಡೆಯಿಂದ ದಾಳಿಯನ್ನಾರಂಭಿಸಬೇಕು. ಯಾರು ಯಾವ ಕಡೆಯಿಂದ ದಾಳಿಯನ್ನಾರಂಭಿಸಬೇಕೆಂಬುದನ್ನು ಈಗಲೇ ನಿಶ್ಚಯಿಸಿ ನಿರ್ದಿಷ್ಟವಾದ ಸ್ಥಳಕ್ಕೆ ನಾವು ಕೌರವಸೇನೆಯಿಂದ ಸಮೇತರಾಗಿ ಪ್ರಯಾಣಮಾಡೋಣ. ಮಹಾರಥನಾದ ಸುಶರ್ಮನೂ ತ್ರಿಗರ್ತಸೇನೆಯಿಂದ ಕೂಡಿದವನಾಗಿ ನಿರ್ದಿಷ್ಟವಾದ ಸ್ಥಳಕ್ಕೆ ಆಗಮಿಸಲಿ. ನಮಗಿಂತಲೂ ಒಂದು ದಿನ ಮೊದಲೇ ಸುಶರ್ಮನು ಸೈನ್ಯಸಮೇತನಾಗಿ ವಿರಾಟನಗರಕ್ಕೆ ಹೋಗಿ ಆಕ್ರಮಣಮಾಡಲಿ. ಒಂದು ದಿವಸ ಕಳೆದನಂತರ ನಾವು ಮತ್ತೊಂದು ದಿಕ್ಕಿನಿಂದ ಸಂಪತ್ಸಮೃದ್ಧವಾದ ವಿರಾಟನ ರಾಜಧಾನಿಗೆ ಸುಸಜ್ಜಿತರಾಗಿ ಮುತ್ತಿಗೆಹಾಕೋಣ. ಒಂದು ದಿನ ಮೊದಲೇ ಆಕ್ರಮಣಮಾಡುವ ತ್ರಿಗರ್ತರು ಗೋವುಗಳನ್ನು ಕಾಯುತ್ತಿರುವ ಗೋಪಾಲಕರ ಬಳಿಗೆ ಹೋಗಿ ಅವರನ್ನು ಹೆದರಿಸಿ ವಿಪುಲವಾದ ಗೋಧನವನ್ನು ಅಪಹರಿಸಲಿ. ಎರಡನೆಯ ದಿನ ನಾವೂ ನಮ್ಮ ಸೇನೆಯನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಂಡು ಗೋಪಾಲಕರ ಮೇಲೆಯೂ ವಿರಾಟರಾಜನ ಯೋಧರ

ಮೇಲೆಯೂ ಹಲ್ಲೆಮಾಡಿ ಸರ್ವಲಕ್ಷಣಗಳಿಂದ ಕೂಡಿರುವ ಸಾವಿರಾರು ಗೋವುಗಳನ್ನು ಹಿಡಿಯೋಣ."

ಜನಮೇಜಯ! ದುರ್ಯೋಧನನು ಹೀಗೆಂದು ಹೇಳುತ್ತಲೇ ದುಃಶಾಸನಾದಿಗಳು ತಮಗೆ ನಿಯೋಜಿತವಾದ ಕಾರ್ಯಗಳನ್ನು ಮಾಡಲು ಹೊರಟುಹೋದರು. ತನ್ನ ಮನಸ್ಸಿನ ಆಶಯವು ಪರಿಪೂರ್ಣವಾಯಿತೆಂಬ ಸಂತೋಷದಿಂದ ಸುಶರ್ಮನೂ ದುರ್ಯೋಧನನ ಅನುಮತಿಯನ್ನು ಪಡೆದು ಹಸ್ತಿನೆಯಿಂದ ಹೊರಟು ತನ್ನ ದೇಶಕ್ಕೆ ಹೋಗಿ ಸೈನ್ಯವನ್ನು ಸಜ್ಜುಗೊಳಿಸಿದನು. ಸುಸಜ್ಜಿತವಾದ ಸುಶರ್ಮನ ರಥಸೇನೆಯು ಪದಾತಿಗಳೊಡನೆ ಆಗ್ನೇಯದಿಕ್ಕಿಗೆ ಅಭಿಮುಖವಾಗಿ ಕೃಷ್ಣಪಕ್ಷದ ಸಪ್ತಮಿಯಂದು ಪ್ರಯಾಣ ಹೊರಟಿತು. ವಿರಾಟನ ಮೇಲೆ ಸೇಡುತೀರಿಸಿಕೊಳ್ಳುವುದೂ ಮತ್ತು ಅವನಲ್ಲಿದ್ದ ಅಪಾರವಾದ ಗೋಧನವನ್ನು ಅಪಹರಿಸಿಕೊಂಡು ಬರುವುದೂ ಸುಶರ್ಮನ ಮತ್ತು ಅವನ ಸೈನಿಕರ ಮುಖ್ಯೋದ್ದೇಶವಾಗಿತ್ತು. ಪೂರ್ವಕೃತ ಯೋಜನೆಯಂತೆ ಮರುದಿನ ಎಂದರೆ ಕೃಷ್ಣಪಕ್ಷದ ಅಷ್ಟಮಿಯ ದಿವಸ ದುರ್ಯೋಧನಪ್ರಮುಖರಾದ ಕೌರವರು ಮತ್ತೊಂದು ದಿಕ್ಕಿನಿಂದ ನುಗ್ಗಿ ವಿರಾಟರಾಜನ ಅಪಾರವಾದ ಗೋವುಗಳನ್ನು ಹಿಡಿದರು.

೩೦ನೆಯ ಅಧ್ಯಾಯವು ಮುಗಿಯಿತು.

೩೧ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ನಾಲ್ವರು ಪಾಂಡವರೊಡನೆ ವಿರಾಟನು ಯುದ್ಧಕ್ಕೆ ಸಜ್ಜಾದುದು

ವೈಶಂಪಾಯನರು ಹೇಳುತ್ತಾರೆ :

**ತತಸ್ತೇಷಾಂ ಮಹಾರಾಜ ತತ್ರೈವಾಮಿತತೇಜಸಾಮ್ ।**
**ಛದ್ಮಲಿಙ್ಗಪ್ರವಿಷ್ಟಾನಾಂ ಪಾಣ್ಡವಾನಾಂ ಮಹಾತ್ಮನಾಮ್ ॥೧॥**

**ವ್ಯತೀತಃ ಸಮಯಃ ಸಮ್ಯಗ್ವಸತಾಂ ವೈ ಪುರೋತ್ತಮೇ ।**
**ಕುರ್ವತಾಂ ತಸ್ಯ ಕರ್ಮಾಣಿ ವಿರಾಟಸ್ಯ ಮಹೀಪತೇಃ ॥೨॥**

ಜನಮೇಜಯ ಮಹಾರಾಜ! ವೇಷವನ್ನು ಮರೆಸಿಕೊಂಡು ಶ್ರೇಷ್ಠ

ವಾದ ವಿರಾಟನಗರಿಯಲ್ಲಿ ವಾಸಮಾಡುತ್ತಿದ್ದು ವಿರಾಟರಾಜನ ಕಾರ್ಯಗಳನ್ನೂ ಮಾಡುತ್ತಲಿದ್ದ ಅತುಲಪರಾಕ್ರಮಿಗಳಾದ, ಮಹಾತ್ಮರಾದ ಪಾಂಡವರ ಪ್ರತಿಜ್ಞಾತವಾದ ಹದಿಮೂರನೆಯ ವರ್ಷವೂ ಕಳೆಯುವುದರಲ್ಲಿದ್ದಿತು. ಕೀಚಕನು ಗಂಧರ್ವರಿಂದ ಕೊಲ್ಲಲ್ಪಟ್ಟನಂತರ ಶತ್ರುಹಂತಕನಾದ ವಿರಾಟನು ಕುಂತೀಪುತ್ರನಾದ ಯುಧಿಷ್ಠಿರನ ವಿಷಯದಲ್ಲಿ ವಿಶೇಷವಾದ ಆದರ-ಗೌರವಗಳನ್ನು ತೋರಲು ಉಪಕ್ರಮಿಸಿದನು. ಕಾರ್ಯ-ಕಾರಣಗಳು ತಿಳಿಯದಿದ್ದರೂ ಆಪತ್ಕಾಲದಲ್ಲಿ ತನಗೆ ಯುಧಿಷ್ಠಿರನೇ ನೆರವಾಗುವನೆಂದು ವಿರಾಟರಾಜನು ಭಾವಿಸಿದ್ದನು. ಪಾಂಡವರ ವನವಾಸ ಮತ್ತು ಅಜ್ಞಾತವಾಸಗಳ ಅವಧಿಯ ಕಡೆಯಲ್ಲಿ ( ಹದಿಮೂರನೆಯ ವರ್ಷದ ಕಡೆಯಲ್ಲಿ ) ತ್ರಿಗರ್ತಾಧಿಪತಿಯಾದ ಸುಶರ್ಮನು ದುರ್ಯೋಧನನ ನೆರವಿನಿಂದ ವಿರಾಟರಾಜನ ಸಾವಿರಾರು ಗೋವುಗಳನ್ನು ಹಿಡಿದುಕೊಂಡನು. ಕುಂಡಲಾಲಂಕೃತನಾದ ಗೋಪಾಲಕರ ಯಜಮಾನನು ಭೀತನಾಗಿ ರಥವೊಂದರಲ್ಲಿ ಕುಳಿತು ಶೀಘ್ರವಾಗಿ ನಗರಕ್ಕಾಗಮಿಸಿ ಅರಮನೆಯ ಸಮೀಪದಲ್ಲಿ ರಥವನ್ನು ನಿಲ್ಲಿಸಿ ವಿರಾಟರಾಜನ ಸಮೀಪಕ್ಕೆ ಧಾವಿಸಿದನು. ಆ ಸಮಯದಲ್ಲಿ ವಿರಾಟನು ಕರ್ಣಕುಂಡಲಗಳಿಂದಲೂ, ಕನಕಾಂಗದ-ಕೇಯೂರಗಳಿಂದಲೂ ಅಲಂಕೃತರಾಗಿದ್ದ ಯೋಧರಿಂದಲೂ, ಮಂತ್ರಿಗಳಿಂದಲೂ, ಮಹಾತ್ಮರಾದ ಪಾಂಡವರಿಂದಲೂ ಪರಿವೃತನಾಗಿ ಸಿಂಹಾಸನದಲ್ಲಿ ಕುಳಿತಿದ್ದನು.

ಸಭಾಮಂದಿರದೊಳಕ್ಕೆ ಬಂದ ಗೋಪಾಲಕನು ರಾಜನಿಗೆ ಯಥಾವಿಧಿಯಾಗಿ ಪ್ರಣಾಮಮಾಡಿ ಉದ್ವಿಗ್ನವಾದ ಧ್ವನಿಯಿಂದ ರಾಜನನ್ನು ಕುರಿತು ಹೇಳಿದನು :

“ಮಹಾರಾಜ! ನಮ್ಮ ಗೋಧನವಿಂದು ಸಂಪೂರ್ಣವಾಗಿ ನಷ್ಟವಾಗಿ ಹೋಗಿದೆ. ಸುಶರ್ಮಪ್ರಮುಖರಾದ ತ್ರಿಗರ್ತರು ನಮ್ಮ ಹಸುಗಳನ್ನು ಆಕ್ರಮಿಸಿದರು. ಅಲ್ಪಸೇನಾಬಲದಿಂದ ಕೂಡಿದ್ದರೂ ನಾವು ಅವರನ್ನು ಪ್ರತಿಭಟಿಸಿದೆವು. ಆದರೆ ಅವರ ಅಪಾರವಾದ ಸೇನೆಯ ಮುಂದೆ ನಾವು ನಿಲ್ಲಲಾಗಲಿಲ್ಲ. ನಮ್ಮನ್ನೂ ಮತ್ತು ನಮ್ಮ ಬಂಧು-ಮಿತ್ರರನ್ನೂ ತ್ರಿಗರ್ತರು ಪರಾಜಿತರನ್ನಾಗಿ ಮಾಡಿ ನಮ್ಮಲ್ಲಿದ್ದ ಲಕ್ಷೋಪಲಕ್ಷ ಹಸುಗಳನ್ನೂ ಹೊಡೆದುಕೊಂಡು ತಮ್ಮ ದೇಶದ ಕಡೆಗೆ ಧಾವಿಸುತ್ತಿದ್ದಾರೆ. ಮಹಾರಾಜ! ಈಗಲೇ

ತಾವು ಸೈನ್ಯಸಮೇತರಾಗಿ ಅವರನ್ನು ಬೆನ್ನಟ್ಟಿಹೋಗಿ ಅವರು ನಮ್ಮ ಗೋಧನವನ್ನು ಅಪಹರಿಸಿಕೊಂಡು ತಮ್ಮ ದೇಶಕ್ಕೆ ಹೊರಟುಹೋಗದಂತೆ ತಡೆಯಬೇಕಾಗಿದೆ.”

ಜನಮೇಜಯ! ವಿರಾಟನು ಗೋಪಾಲಕನ ಮಾತುಗಳನ್ನು ಕೇಳಿದೊಡನೆಯೇ ಸೇನೆಯನ್ನು ಸಜ್ಜುಗೊಳಿಸಿದನು. ರಥ-ಗಜಾಶ್ವ-ಪದಾತಿ ಸೇನೆಗಳು ಸಿದ್ಧವಾದುವು. ವಿರಾಟನ ಆಶ್ರಿತರಾಗಿದ್ದ ರಾಜರೂ ಮತ್ತು ರಾಜಪುತ್ರರೂ ಶರೀರಗಳನ್ನು ಶಸ್ತ್ರಾಘಾತಗಳಿಂದ ರಕ್ಷಿಸುವ ಕವಚಗಳನ್ನು ಧರಿಸಿ ಯುದ್ಧಸನ್ನದ್ಧರಾದರು. ಅವರು ತೊಟ್ಟಿದ್ದ ಕವಚಗಳು ಪ್ರಕಾಶ ಮಾನವಾಗಿಯೂ, ವಿಚಿತ್ರವಾಗಿಯೂ, ಶೂರರಾದವರು ಧರಿಸಲು ಯೋಗ್ಯ ವಾದುವುಗಳಾಗಿಯೂ ಇದ್ದುವು. ವಿರಾಟರಾಜನ ನೆಚ್ಚಿನ ತಮ್ಮನಾದ ಶತಾನೀಕನು ಸ್ವರ್ಣಮಯವಾದ ಕವಚವನ್ನು ಧರಿಸಿದನು. ಅದು ವಜ್ರ ಖಚಿತವಾಗಿದ್ದು ಅದರ ಒಳಭಾಗವು ಉಕ್ಕಿನಿಂದ ನಿರ್ಮಿಸಲ್ಪಟ್ಟಿದ್ದಿತು.

ವಿರಾಟರಾಜನ ಎರಡನೆಯ ತಮ್ಮನಾದ ಮದಿರಾಕ್ಷನೆಂಬುವನು ಸುವರ್ಣಮಯವಾದ ಮತ್ತು ಶತ್ರುಗಳ ಸಕಲಶಸ್ತ್ರಗಳನ್ನೂ ತಡೆಯುವಷ್ಟು ಗಟ್ಟಿಯಾದ ಕವಚವನ್ನು ಧರಿಸಿದನು. ನೂರು ಸೂರ್ಯಬಿಂಬಗಳನ್ನೂ, ನೂರು ಸುಳಿಗಳನ್ನೂ, ನೂರು ಚುಕ್ಕೆಗಳನ್ನೂ ಮತ್ತು ನೂರು ನೇತ್ರಬಿಂಬ ಗಳನ್ನೂ ಹೊಂದಿದ್ದ ಅಭೇದ್ಯವಾದ ಮತ್ತು ಅಪೂರ್ವವಾದ ಕವಚವನ್ನು ವಿರಾಟನು ತೊಟ್ಟುಕೊಂಡನು. ರಾಜನು ತೊಟ್ಟಿದ್ದ ಆ ಕವಚವು ಪದ್ಮಪುಷ್ಪ ಗಳಿಂದಲೂ, ನೂರಾರು ಸೌಗಂಧಿಕಪುಷ್ಪಗಳಿಂದಲೂ ಅಲಂಕೃತವಾಗಿದ್ದಿತು. ಸೂರ್ಯನಂತೆಯೇ ಥಳ-ಥಳನೆ ಪ್ರಕಾಶಿಸುತ್ತಿದ್ದ ಚಿನ್ನದ ತಗಡಿನ ಹೊದಿಕೆಯಿದ್ದ ಕವಚವನ್ನು ವಿರಾಟನ ಸೇನಾನಾಯಕನಾದ ಸೂರ್ಯ ದತ್ತನು ತೊಟ್ಟುಕೊಂಡನು. ವಿರಾಟನ ಜ್ಯೇಷ್ಠಪುತ್ರನಾದ ಮಹಾವೀರನಾದ ಶಂಖನು ಬಿಳುಪಾಗಿದ್ದ, ನೂರು ಕಣ್ಣುಗಳ ಪ್ರತಿಬಿಂಬವನ್ನು ಹೊಂದಿದ್ದ ಕವಚವನ್ನು ಧರಿಸಿದನು. ಅದೇ ರೀತಿಯಾಗಿ ದೇವಸಮಾನರಾದ, ಮಹಾರಥರಾದ, ರಣೋತ್ಸಾಹಿಗಳಾದ ವಿರಾಟನ ಸಾವಿರಾರು ಮಂದಿ

ಯೋಧರು ಅವರವರಿಗೆ ಅನುರೂಪವಾದ ಕವಚಗಳನ್ನು ತೊಟ್ಟುಕೊಂಡು ಯುದ್ಧಸನ್ನದ್ಧರಾದರು. ಅನಂತರದಲ್ಲಿ ಆ ರಥಿಕರೆಲ್ಲರೂ ಶುಭ್ರವಾಗಿದ್ದ ಮತ್ತು ಯುದ್ಧಸಾಮಗ್ರಿಗಳಿಂದ ಪರಿಪೂರ್ಣವಾಗಿದ್ದ ರಥಗಳಿಗೆ ಸುವರ್ಣ ಮಯವಾದ ಕಡಿವಾಣಗಳಿಂದ ಯುಕ್ತವಾಗಿದ್ದ ಕುದುರೆಗಳನ್ನು ಕಟ್ಟಿದರು. ಸೂರ್ಯ-ಚಂದ್ರರಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಹಿರಣ್ಮಯ ವಾದ ವಿರಾಟರಾಜನ ರಥದ ಅಗ್ರಭಾಗದಲ್ಲಿ ಮಹತ್ತರವಾದ ಮತ್ತು ಎತ್ತರ ವಾದ ಧ್ವಜವನ್ನು ಹಾರಿಸಲಾಯಿತು. ಇತರ ಕ್ಷತ್ರಿಯಯೋಧರು ತಮ್ಮ- ತಮ್ಮ ರಥಗಳಿಗೆ ಸುವರ್ಣವರ್ಣದಿಂದ ಕೂಡಿದ್ದ ವಿಧ-ವಿಧವಾದ ಪತಾಕೆಗಳನ್ನು ಕಟ್ಟಿದರು. ಚತುರಂಗಬಲವು ಸಜ್ಜಾದನಂತರ ವಿರಾಟನು ತನ್ನ ತಮ್ಮನಾದ ಶತಾನೀಕನನ್ನು ಕುರಿತು ಹೇಳಿದನು :

"ಶತಾನೀಕ! ನಾವೆಲ್ಲರೂ ಯುದ್ಧಸನ್ನದ್ಧರಾದೆವು. ನಮ್ಮ ಅರಮನೆ ಯಲ್ಲಿ ಇನ್ನೂ ಕೆಲವು ವೀರರಿದ್ದಾರೆ. ಯದ್ಯಪಿ ಅವರು ಬೇರೆಯ ಕೆಲಸಗಳಲ್ಲಿದ್ದರೂ ಅವರ ಮುಖಲಕ್ಷಣಗಳನ್ನು ನೋಡಿದರೆ ಅವರೆಲ್ಲರೂ ಯುದ್ಧಮಾಡಲು ಸಮರ್ಥರೆಂದೇ ನಮ್ಮ ಬುದ್ಧಿಗೆ ತೋಚುತ್ತಿದೆ. ನಮ್ಮ ಆಸ್ಥಾನಪಂಡಿತನಾಗಿರುವ ಕಂಕ, ಗೋಶಾಲೆಯ ಅಧ್ಯಕ್ಷನಾಗಿರುವ ತಂತಿಪಾಲ, ಅಶ್ವಶಾಲೆಯ ಅಧ್ಯಕ್ಷನಾಗಿರುವ ದಾಮಗ್ರಂಥಿ–ಇವರೆಲ್ಲರೂ ಯುದ್ಧಮಾಡಬಹುದೆಂದು ನನಗನ್ನಿಸುತ್ತಿದೆ. ನಮ್ಮ ಪಾಕಶಾಲಾಧ್ಯಕ್ಷನಾದ ಬಲ್ಲವನು ಮಲ್ಲಯುದ್ಧವಿಶಾರದನೆಂಬ ವಿಷಯವು ನಮಗೆ ಈ ಮೊದಲೇ ತಿಳಿದಿರುವುದು. ಆದುದರಿಂದ ಅವರನ್ನೂ ನಮ್ಮ ಜೊತೆಯಲ್ಲಿಯೇ ಯುದ್ಧಕ್ಕೆ ಕರೆದೊಯ್ಯೋಣ. ಆ ನಾಲ್ವರಿಗೂ ಸುವರ್ಣವರ್ಣದ ಧ್ವಜವುಳ್ಳ ರಥಗಳು ಸಿದ್ಧವಾಗಲಿ. ಅವರು ತೊಟ್ಟುಕೊಳ್ಳಲು ಅಭೇದ್ಯವಾದ, ದೃಢವಾದ, ಮೃದುವಾದ ಕವಚಗಳು ಸಿದ್ಧವಾಗಲಿ. ಅವರು ಕುಳಿತು ಕೊಳ್ಳಲಿರುವ ರಥಗಳಲ್ಲಿ ಧನುರ್ಬಾಣಗಳು ಸಿದ್ಧವಾಗಿರಲಿ. ಅವರು ಆ ಧನುರ್ಬಾಣಗಳಿಂದ ಶತ್ರುಗಳ ಶರೀರಗಳನ್ನು ಘಾಸಿಪಡಿಸಲಿ. ಅವರ ಶಾರೀರಲಕ್ಷಣಗಳು ವೀರರಿಗಿರುವಂತೆಯೇ ಇವೆ. ಅವರ ನೀಳವಾದ ಬಾಹು ಗಳು ಆನೆಯ ಸೊಂಡಿಲಿನಂತಿವೆ. ಆದುದರಿಂದ ಅವರು ಯುದ್ಧಮಾಡಲು

ಸಮರ್ಥರಾದ ವೀರರೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಅವರು ಯುದ್ಧಾಕಾಂಕ್ಷಿಗಳೆಂದೇ ನನಗನ್ನಿಸುತ್ತದೆ."

ಅಣ್ಣನು ಹೇಳಿದ ಮಾತುಗಳನ್ನು ಕೇಳಿ ಶತಾನೀಕನು ಒಡನೆಯೇ ಹೋಗಿ ನಾಲ್ವರು ಪಾಂಡವರಿಗೂ ಸುಸಜ್ಜಿತವಾದ ರಥಗಳನ್ನು ತರುವಂತೆ ಸೇವಕರಿಗೆ ಆಜ್ಞಾಪಿಸಿದನು. ರಾಜಭಕ್ತಿಯಿಂದ ಕೂಡಿದ್ದ ರಾಜಭಟರು ಪರಮಸಂತುಷ್ಟರಾಗಿ ಕ್ಷಣಮಾತ್ರದಲ್ಲಿ ಸಹದೇವನಿಗೂ, ಯುಧಿಷ್ಠಿರನಿಗೂ, ಭೀಮನಿಗೂ ಮತ್ತು ನಕುಲನಿಗೂ ಸುಸಜ್ಜಿತವಾದ ರಥಗಳನ್ನು ತಂದು ನಿಲ್ಲಿಸಿದರು. ವಿರಾಟನ ಆಜ್ಞೆಯಂತೆ ಯುಧಿಷ್ಠಿರಾದಿಗಳೂ ಯುದ್ಧಸನ್ನದ್ಧರಾಗಿ ಬಂದು ರಾಜನಿತ್ತ ಚಿತ್ರ-ವಿಚಿತ್ರವಾದ, ಮೃದುವಾದ ಮತ್ತು ದೃಢವಾದ ಕವಚಗಳನ್ನು ಅನಾಯಾಸವಾಗಿ ತೊಟ್ಟುಕೊಂಡು ಮಹಾಶೂರರಂತೆಯೇ ವಿಜೃಂಭಿಸಿದರು. ಉತ್ತಮವಾದ ಕುದುರೆಗಳಿಂದ ಯುಕ್ತವಾಗಿದ್ದ ದಿವ್ಯರಥಗಳಲ್ಲಿ ಕುಳಿತ ಪಾರ್ಥರು ಸಂತೋಷಭರಿತರಾಗಿ ಶತ್ರುಸಮೂಹ ವನ್ನು ನಿರ್ಮೂಲನಮಾಡುವ ಉತ್ಸಾಹದಿಂದ ರಣರಂಗಕ್ಕೆ ಹೊರಟರು. ಸತ್ಯಪರಾಕ್ರಮಿಗಳಾದ, ಯುದ್ಧವಿಶಾರದರಾದ, ಶೀಘ್ರಗಾಮಿಗಳಾದ, ನಿಜರೂಪಗಳನ್ನು ಮರೆಸಿಕೊಂಡಿದ್ದ ನಾಲ್ವರು ಪಾಂಡವರೂ ಸುವರ್ಣ ಮಯವಾದ ರಥಗಳಲ್ಲಿ ಕುಳಿತು ವಿರಾಟರಾಜನನ್ನೇ ಅನುಸರಿಸಿ ಯುದ್ಧಕ್ಕೆ ಹೊರಟರು.

ಅವರ ಹಿಂದೆಯೇ ಗಜಸೈನ್ಯವು ಹೊರಟಿತು. ಆ ಸೈನ್ಯದಲ್ಲಿದ್ದ ಆನೆ ಗಳೆಲ್ಲವೂ ಅರುವತ್ತು ವರ್ಷಗಳ ಪ್ರಾಯದವುಗಳಾಗಿದ್ದುವು. ಅವುಗಳ ಕಪೋಲಗಳ ಎರಡು ಕಡೆಗಳಿಂದಲೂ ಮದೋದಕವು ಸುರಿಯುತ್ತಿದ್ದಿತು. ಅವುಗಳು ನೋಡಲು ಬಹಳ ಭಯಂಕರವಾಗಿ ಕಾಣುತ್ತಿದ್ದುವು. ಅವುಗಳೆ ಲ್ಲಕ್ಕೂ ದೀರ್ಘವಾದ ದಂತಗಳಿದ್ದುವು. ಅಂತಹ ಮದಿಸಿದ ಯುದ್ಧಶಿಕ್ಷಿತ ವಾದ ಆನೆಗಳ ಸೈನ್ಯವು ರಾಜನ ಹಿಂದೆ ಹೋಗುತ್ತಿದ್ದರೆ–ಪರ್ವತಗಳೇನಾ ದರೂ ಚೇತನವನ್ನು ಹೊಂದಿ ರಾಜನ ಹಿಂದೆ ಹೋಗುತ್ತಿವೆಯೋ–ಎಂಬ ಭ್ರಾಂತಿಯು ಪ್ರೇಕ್ಷಕರಿಗೆ ಉಂಟಾಗುತ್ತಿದ್ದಿತು. ವಿರಾಟರಾಜನ ಸೈನ್ಯದಲ್ಲಿ ಎಲ್ಲರೂ ಯುದ್ಧವಿಶಾರದರಾಗಿದ್ದರು. ಆ ಸೈನಿಕರೆಲ್ಲರೂ ಉತ್ಸಾಹ ದಿಂದಲೂ, ಸಂತೋಷದಿಂದಲೂ ರಾಜನನ್ನು ಅನುಸರಿಸಿ ಹೊರಟರು. ಎಂಟು ಸಾವಿರ ರಥಿಕರಿಂದಲೂ, ಒಂದು ಸಾವಿರ ಗಜಸೇನೆಯಿಂದಲೂ,

ಅರುವತ್ತು ಸಾವಿರ ಕುದುರೆಗಳಿಂದಲೂ ರಾಜನ ಸೇನಾಬಲವು ವಿರಾಜಿಸುತ್ತಿದ್ದಿತು. ಹಸುಗಳ ಹೆಜ್ಜೆಗಳನ್ನೇ ಅನುಸರಿಸಿ ಹೋಗುತ್ತಿದ್ದ, ಗಜಾಶ್ವ-ರಥ ಸೇನೆಗಳಿಂದ ಸಮ್ಮಿಶ್ರಿತವಾಗಿದ್ದ, ದೃಢವಾಗಿ ಕತ್ತಿಗಳನ್ನು ಧರಿಸಿ ನಿಯಮಿತವಾದ ಹೆಜ್ಜೆಗಳನ್ನಿಡುತ್ತಾ ಹೋಗುತ್ತಿದ್ದ ಪದಾತಿಗಳಿಂದ ಕೂಡಿದ್ದ, ವಿರಾಟ ರಾಜನ ಬಲಿಷ್ಠವಾದ ಆ ಸೇನಾಬಲವು ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿದ್ದಿತು.

ತಿಗನೆಯ ಅಧ್ಯಾಯವು ಮುಗಿಯಿತು.

೩೨ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಮತ್ಸ್ಯ-ತ್ರಿಗರ್ತರ ಯುದ್ಧ

ವೈಶಂಪಾಯನರು ಹೇಳುತ್ತಾರೆ :

**ನಿರ್ಯಾಯ ನಗರಾಚ್ಛೂರಾ ವ್ಯೂಢಾನೀಕಾಃ ಪ್ರಹಾರಿಣಃ ।**
**ತ್ರಿಗರ್ತಾನಸ್ಪೃಶನ್ಮತ್ಸ್ಯಾಃ ಸೂರ್ಯೇ ಪರಿಣತೇ ಸತಿ ॥೧॥**

“ಜನಮೇಜಯ! ವಿರಾಟರಾಜನ ಪಟ್ಟಣದಿಂದ ಹೊರಟ ಮತ್ಸ್ಯ ಯೋಧರು ಯುದ್ಧವ್ಯೂಹವನ್ನು ರಚಿಸಿಕೊಂಡು ಮುಂದೆ ಹೋಗುತ್ತಾ ಅಪರಾಹ್ಣ ಸಮಯದಲ್ಲಿ ತ್ರಿಗರ್ತರನ್ನು ಅಡ್ಡಗಟ್ಟಿದರು.

ಆ ಸಮಯದಲ್ಲಿ ಉಭಯಪಕ್ಷದವರೂ ಯುದ್ಧಾಕಾಂಕ್ಷಿಗಳಾಗಿದ್ದರು. ಮತ್ಸ್ಯರಿಗೆ ಗೋವುಗಳನ್ನು ಬಿಡಿಸಿಕೊಳ್ಳುವ ಆಸಕ್ತಿಯಿದ್ದಿತು. ಅಂತೆಯೇ ತ್ರಿಗರ್ತರಿಗೆ ಗೋವುಗಳನ್ನು ಕೊಳ್ಳೆಹೊಡೆದುಕೊಂಡು ಹೋಗಬೇಕೆನ್ನುವ ದುರಾಶೆಯಿದ್ದಿತು. ಇಬ್ಬರಿಗೂ ಯುದ್ಧಮಾಡುವ ಮದವಿದ್ದಿತು. ಮತ್ಸ್ಯರು ತ್ರಿಗರ್ತರನ್ನು ಸಂಧಿಸುತ್ತಲೇ ಕೋಪಾವಿಷ್ಟರಾದ ಎರಡು ಪಕ್ಷದವರೂ ರಣಘೋಷಣೆಗಳನ್ನು ಮಾಡಿದರು. ಮದಿಸಿದ್ದ ಆನೆಗಳ ಮೇಲೆ ಕುಳಿತಿದ್ದ ಚತುರರಾದ ಮಾವಟಿಗರು ಶೂಲಗಳಿಂದಲೂ ಮತ್ತು ಭರ್ಜಿಗಳಿಂದಲೂ ಆನೆಗಳ ಮರ್ಮಸ್ಥಳಗಳಿಗೆ ಚುಚ್ಚಿ ಪ್ರಚೋದಿಸಿದೊಡನೆಯೇ ಕೋಪಗೊಂಡ ಆನೆಗಳು ಸೊಂಡಿಲುಗಳನ್ನೆತ್ತಿಕೊಂಡು ಎದುರಾಳಿಗಳ ಮೇಲೆ ಬಿದ್ದು ಅವರನ್ನು ಧ್ವಂಸಮಾಡತೊಡಗಿದುವು. ಅನೇಕರು ಆನೆಗಳ ಕಾಲು

ಗಳಿಗೆ ಸಿಕ್ಕಿ ಪ್ರಾಣತೊರೆದರು. ಸ್ವಲ್ಪಹೊತ್ತಿನಲ್ಲಿಯೇ ಗಜಸೈನ್ಯಗಳು ಪರಸ್ಪರ ಹೋರಾಡಿ ಯಮರಾಜನ ಪಟ್ಟಣದ ಪ್ರಜಾಸಂಖ್ಯೆಯನ್ನು ಹೆಚ್ಚಿಸಿದುವು. ಸೂರ್ಯನು ಇಳಿಯುತ್ತಿದ್ದ ಸಮಯಕ್ಕೆ ಸರಿಯಾಗಿ ಆ ಮಹಾಯುದ್ಧವು ಘೋರರೂಪವನ್ನು ತಾಳಿತು. ಎರಡು ಕಡೆಗಳಲ್ಲಿಯೂ ಇದ್ದ ಗಜಾಶ್ವ-ರಥ-ಪದಾತಿಸೈನಿಕರು ಕೆಚ್ಚಿನಿಂದ ಹೋರಾಡುತ್ತಿದ್ದರು. ಆ ಮಹಾಯುದ್ಧವು ದೇವ-ದಾನವರ ಯುದ್ಧವನ್ನೇ ಅನುಕರಿಸುತ್ತಿದ್ದಿತು. ಯೋಧ-ಪ್ರತಿಯೋಧರು ರೋಷಾವೇಶಗಳಿಂದ ಪರಸ್ಪರವಾಗಿ ಎದುರಿಸುತ್ತಿದ್ದಾಗ ( ಮೇಲೆ ಬೀಳುತ್ತಿದ್ದಾಗ ) ಅಗಾಧವಾದ ಧೂಳೆದ್ದು ರಣಾಂಗಣವನ್ನೇ ಮುಚ್ಚಿಬಿಟ್ಟಿತು. ಆ ಸಮಯದಲ್ಲಿ ಅಲ್ಲಿಯ ಯೋಧರಿಗೆ ಯಾರು ಯಾರನ್ನು ಪ್ರಹರಿಸುತ್ತಿರುವರೆಂಬುದೇ ತಿಳಿಯದಾಯಿತು. ಆ ಧೂಳಿಯು ಅಂತರಿಕ್ಷದಲ್ಲಿಯೂ ವ್ಯಾಪಿಸಿ ಅಲ್ಲಿ ಹಾರಾಡುತ್ತಿದ್ದ ಪಕ್ಷಿಗಳು ಮುಂದೆ ಹೋಗಲು ದಾರಿಕಾಣದೇ ತೊಪ-ತೊಪನೆ ಕೆಳಗೆ ಬೀಳುತ್ತಿದ್ದುವು. ಎರಡು ಪಕ್ಷಗಳ ಸೈನಿಕರೂ ಅವ್ಯಾಹತವಾಗಿ ಬಾಣಗಳ ಮಳೆಗರೆಯುತ್ತಿದ್ದುದರಿಂದ ಸೂರ್ಯನ ಕಿರಣಗಳೂ ರಣಾಂಗಣದಲ್ಲಿ ಬೀಳಲು ಸಾಧ್ಯವಾಗುತ್ತಿರಲಿಲ್ಲ. ವೀರಯೋಧರು ತಮ್ಮ ಕೈಗಳಲ್ಲಿದ್ದ ಸ್ವರ್ಣಮಯವಾದ ಬೆನ್ನುಳ್ಳ ಧನುಸ್ಸುಗಳನ್ನು ಪ್ರತಿಕ್ಷಣದಲ್ಲಿಯೂ ಎರಡು ಕೈಗಳಿಗೂ ಅದಲು-ಬದಲು ಮಾಡಿಕೊಳ್ಳುತ್ತಾ, ಎರಡು ಕೈಗಳಿಂದಲೂ ಅವ್ಯಾಹತವಾಗಿ ಪ್ರಯೋಗಿಸುತ್ತಿದ್ದ ಬಾಣಗಳು ರಾತ್ರಿಯಲ್ಲಿ ಹಾರಾಡುವ ಮಿಣುಕುಹುಳುಗಳಂತೆ ಕಾಣುತ್ತಿದ್ದುವು. ರಥಿಕರು-ರಥಿಕರೊಡನೆಯೂ, ಪದಾತಿಗಳು-ಕಾಲಾಳುಗಳೊಡನೆಯೂ, ಅಶ್ವಾರೋಹಿಗಳು-ಅಶ್ವಾರೋಹಿಗಳೊಡನೆಯೂ, ಗಜಸೈನಿಕರು-ಗಜಸೈನಿಕರೊಡನೆಯೂ ಯುದ್ಧ ಮಾಡುತ್ತಿದ್ದರು. ಯುದ್ಧದ ಸಮಯದಲ್ಲಿ ಆ ಯೋಧರೆಲ್ಲರೂ ಕತ್ತಿ, ಪಟ್ಟಿಶ, ಪ್ರಾಸ, ಶಕ್ತ್ಯಾಯುಧ, ತೋಮರ–ಮುಂತಾದ ಆಯುಧಗಳನ್ನು ಸಮಯೋಚಿತವಾಗಿ ಉಪಯೋಗಿಸುತ್ತಿದ್ದರು. ಪರಿಘಾಯುಧಕ್ಕೆ ಸಮಾನವಾದ ತೋಳುಗಳಿಂದ ಕೂಡಿದ್ದ ಆ ಯೋಧರು ಬಹುಕುಪಿತರಾಗಿ ಯುದ್ಧ ಮಾಡುತ್ತಿದ್ದರೂ ಯಾವ ಪಕ್ಷವೂ ಸೋಲಲೂ ಇಲ್ಲ ; ಗೆಲ್ಲಲೂ ಇಲ್ಲ. ತ್ರಿಗರ್ತರು ಮತ್ಸ್ಯರನ್ನು ಪರಾಙ್ಮುಖರನ್ನಾಗಿ ಮಾಡಲು ಸಮರ್ಥರಾಗಲಿಲ್ಲ. ಅಂತಯೇ ಮತ್ಸ್ಯರೂ ತ್ರಿಗರ್ತರನ್ನು ಹೊಡೆದೋಡಿಸಲು ಸಮರ್ಥರಾಗ

ಲಿಲ್ಲ. ಕತ್ತಿಗಳ ಪ್ರಹಾರಗಳಿಂದ ಕತ್ತರಿಸಿ ಕೆಳಗೆ ಬಿದ್ದಿದ್ದ ರುಂಡಗಳಲ್ಲಿ ಕೆಲವಕ್ಕೆ ಬಹುಸುಂದರವಾದ ಮೂಗುಗಳಿದ್ದುವು. ಕೆಲವು ರುಂಡಗಳಿಗೆ ಮೇಲ್ತುಟಿಗಳೇ ಕತ್ತರಿಸಿ ಹೋಗಿದ್ದಿತು. ಕೆಲವು ರುಂಡಗಳ ತಲೆಗೂದಲು ಕತ್ತರಿಸಿ ಹೋಗಿದ್ದಿತು. ಆ ಸ್ಥಿತಿಯಲ್ಲಿ ನೆಲದ ಮೇಲೆ ಬಿದ್ದ ಕುಂಡಲಾಲಂಕೃತವಾದ ರುಂಡಗಳು ಕ್ಷಣಮಾತ್ರದಲ್ಲಿ ಧೂಳಿನಿಂದ ಮುಚ್ಚಿಹೋಗುತ್ತಿದ್ದುವು.

ಮಹಾಯುದ್ಧದಲ್ಲಿ ಬಾಣಗಳಿಂದ ಭಾಗಗಳಾಗಿ ಕತ್ತರಿಸಲ್ಪಟ್ಟ ಕ್ಷತ್ರಿಯರ ದೇಹಗಳು ಶಾಲವೃಕ್ಷಗಳ ಸ್ಕಂಧಗಳಂತೆ ಕಾಣುತ್ತಿದ್ದುವು. ಕರ್ಣ ಕುಂಡಲಗಳನ್ನು ಧರಿಸಿದ್ದ ಸಾವಿರಾರು ತಲೆಗಳಿಂದಲೂ, ಸರ್ಪಗಳೋಪಾದಿಯಲ್ಲಿದ್ದ ಮತ್ತು ಸುಗಂಧದಿಂದ ಲೇಪಿತವಾಗಿದ್ದ ಅನೇಕಸಹಸ್ರಬಾಹುಗಳಿಂದಲೂ ತುಂಬಿದ್ದ ಆ ರಣರಂಗವು ಶೋಭಾಯಮಾನವಾಗಿಯೇ ಕಾಣುತ್ತಿದ್ದಿತು. ಜನಮೇಜಯ! ನಾನು ಹಿಂದೆಯೇ ಹೇಳಿದಂತೆ, ರಥಿಕರು-ರಥಿಕರೊಡನೆಯೂ, ಅಶ್ವಾರೋಹಿಗಳು-ಅಶ್ವಾರೋಹಿಗಳೊಡನೆಯೂ, ಪದಾತಿಗಳು-ಪದಾತಿಗಳೊಡನೆಯೂ, ಗಜಯೋಧರು-ಗಜಯೋಧರೊಡನೆಯೂ ಪರಸ್ಪರವಾಗಿ ಯುದ್ಧಮಾಡುತ್ತಿದ್ದರು. ಮೊದಲು-ಮೊದಲು ರಣಭೂಮಿಯಲ್ಲಿ ಸೈನ್ಯಗಳ ಪದಾಘಾತಗಳಿಂದ ಉದ್ಭೂತವಾದ ಧೂಳು-ಸೈನಿಕರ ರುಂಡಗಳು ಕೆಳಗೆ ಬೀಳುತ್ತಿದ್ದಂತೆ ಮುಂಡಗಳಿಂದ ಹೊರಹೊಮ್ಮಿದ ರಕ್ತದಿಂದ ಸಿಕ್ತವಾಗಿ ಉಡುಗಿ ಹೋದುದು ಮಾತ್ರವಲ್ಲದೇ–ರಣಾಂಗಣದಲ್ಲಿ ರಕ್ತಮಿಶ್ರವಾದ ಕೆಸರುಂಟಾಯಿತು. ಆ ಘೋರದೃಶ್ಯವನ್ನು ಕಂಡ ಅನೇಕ ಸೈನಿಕರು ಮೂರ್ಛಿತರಾದರು. ಬಂಧು, ಬಳಗ, ಮಾನವೀಯತೆ–ಎಲ್ಲವನ್ನೂ ಸಂಪೂರ್ಣವಾಗಿ ತೊರೆದು ವೀರಯೋಧರು ಕೆಚ್ಚಿನಿಂದ ಕಾದಾಡುತ್ತಿದ್ದರು. ಪರಸ್ಪರ ಬಾಣಪ್ರಯೋಗಗಳ ಹಾವಳಿಯಿಂದಾಗಿ ಆಕಾಶದಲ್ಲಿ ಹಾರಾಡುತ್ತಿದ್ದ ಗರುಡನೇ ಮೊದಲಾದ ಪಕ್ಷಿಗಳ ಸಂಚಾರವೇ ನಿರುದ್ಧವಾಗಿ ಅವುಗಳೆಲ್ಲವೂ ರಣಾಂಗಣದ ಸುತ್ತಲೂ ಭೀಕರಕಾಳಗವನ್ನು ನೋಡುತ್ತಾ ಕುಳಿತವು. ಪರಿಘಾಯುಧಕ್ಕೆ ಸಮಾನವಾದ ತೋಳುಗಳಿಂದ ಕೂಡಿದ್ದ ವೀರಯೋಧರು ಎರಡು ಪಕ್ಷಗಳಲ್ಲಿಯೂ ಅಸಂಖ್ಯಾತರಾಗಿ ಮಡಿದರು. ಆದರೂ ವಿಜಯಲಕ್ಷ್ಮಿಯು ಯಾರ ಕಡೆಗಿರುವಳೆಂಬುದನ್ನು ನಿರ್ಧರಿಸಲು ಸಾಧ್ಯವಾಗಲಿಲ್ಲ.

ವಿರಾಟನ ಮೊದಲನೆಯ ತಮ್ಮನಾದ ಶತಾನೀಕನು ನೂರು ತ್ರಿಗರ್ತ ಯೋಧರನ್ನು ಕತ್ತರಿಸಿ ರಣರಂಗದೊಳಕ್ಕೆ ನುಗ್ಗಿದನು. ಮತ್ತೊಬ್ಬ ತಮ್ಮನಾದ ವಿಶಾಲಾಕ್ಷನು (ಮದಿರಾಕ್ಷನು) ನಾಲ್ಕು ನೂರು ತ್ರಿಗರ್ತಯೋಧರನ್ನು ತುಂಡರಿಸಿ ರಣಭೂಮಿಯೊಳಗೆ ನುಗ್ಗಿದನು. ದೃಢಮನಸ್ಕರಾದ ಮತ್ತು ಮಹಾಬಲಿಷ್ಠರಾದ ಆ ಇಬ್ಬರು ರಾಜಪುತ್ರರೂ ತ್ರಿಗರ್ತಸೇನೆಯೊಳಗೆ ನುಗ್ಗಿ ಶತ್ರುಪಕ್ಷದ ಯೋಧರ ತಲೆಗೂದಲುಗಳನ್ನೇ ಹಿಡಿದೆಳೆದು ನೆಲಕ್ಕೆ ಕೆಡಹುತ್ತಿದ್ದರು. ಮತ್ತೊಮ್ಮೆ ರಥದ ಮೇಲಿರುವ ಯೋಧರೊಡನೆ ತಾವೂ ರಥದಲ್ಲಿ ಕುಳಿತು ಯುದ್ಧಮಾಡುತ್ತಿದ್ದರು. (ಪರಸ್ಪರವಾಗಿ ತಲೆಗೂದಲನ್ನು ಹಿಡಿದು ಯುದ್ಧಮಾಡುವುದಕ್ಕೆ "ಕೇಶಾಕೇಶಿ' ಎಂದು ಹೆಸರು.) ತ್ರಿಗರ್ತರು ಕಡೆಯಲ್ಲಿ ಅಜೇಯವೆನಿಸಿದ್ದ ರಥಸೈನ್ಯವನ್ನೇ ಲಕ್ಷ್ಯವನ್ನಾಗಿಟ್ಟುಕೊಂಡು ವಿರಾಟನ ಸೇನಾಪತಿಯಾದ ಸೂರ್ಯದತ್ತನೂ, ಅವನನ್ನೇ ಅನುಸರಿಸಿದ ಮದಿರಾಕ್ಷನೂ ರಥಸೈನ್ಯವಿದ್ದೆಡೆಗೆ ಧಾವಿಸಿದರು.

ಅತುಲಪರಾಕ್ರಮಿಯಾದ ವಿರಾಟನು ದಿವ್ಯರಥದಲ್ಲಿ ಕುಳಿತು ಐದು ನೂರು ರಥಗಳನ್ನು ಧ್ವಂಸಮಾಡಿದನು. ಎಂಟು ನೂರು ಅಶ್ವಗಳನ್ನು ಧ್ವಂಸ ಮಾಡಿದನು ಮತ್ತು ಐವರು ಮಹಾರಥರನ್ನು ಹೊಡೆದುರುಳಿಸಿದನು. ರಣರಂಗದ ಸುತ್ತಲೂ ಧಾವಿಸಿ ಈ ರೀತಿಯಾಗಿ ಶತ್ರುಸೈನ್ಯವನ್ನು ಧ್ವಂಸ ಮಾಡುತ್ತಿದ್ದ ವಿರಾಟನು ತ್ರಿಗರ್ತರಿಗೆ ರಾಜನಾದ ಸುಶರ್ಮನ ಸುವರ್ಣ ಮಯವಾದ ರಥಕ್ಕೆ ಎದುರಾಗಿ ಹೋಗಿ ನಿಂತನು. ಗೋಶಾಲೆಯಲ್ಲಿರುವ ಎರಡು ಹೋರಿಗಳು ಗರ್ಜಿಸುವಂತೆ–ಪರಸ್ಪರ ಮುಖಾವಲೋಕನದಿಂದ ಮಹಾಬಲರಾದ ಸುಶರ್ಮ–ವಿರಾಟರು ವೀರಗರ್ಜನೆಗಳನ್ನು ಮಾಡಿದರು. ಅನಂತರದಲ್ಲಿ ಯುದ್ಧಮಾಡುವುದರಲ್ಲಿಯೇ ಆಸಕ್ತನಾಗಿದ್ದ ತ್ರಿಗರ್ತರಾಜ ನಾದ ಸುಶರ್ಮನು ರಥದಲ್ಲಿಯೇ ಕುಳಿತು ದ್ವಂದ್ವಯುದ್ಧಮಾಡಲು ಮತ್ಸ್ಯ ರಾಜನನ್ನು ಎದುರಿಸಿದನು. ಮಹಾಕೋಪಿಷ್ಠರಾದ ಇಬ್ಬರು ವೀರರೂ ತಮ್ಮ ತಮ್ಮ ರಥಗಳನ್ನು ಅನತಿದೂರದಲ್ಲಿಯೇ ಎದುರು-ಬದುರಾಗಿ ನಿಲ್ಲಿಸಿ ಕೊಂಡು–ಮೋಡಗಳು ಮಳೆಯನ್ನು ಸುರಿಸುವಂತೆ–ಶರವರ್ಷವನ್ನು ಒಬ್ಬರು ಮತ್ತೊಬ್ಬರ ಮೇಲೆ ಸುರಿಸಲು ಉಪಕ್ರಮಿಸಿದರು. ಇಬ್ಬರೂ ಬಹುಕುಪಿತರಾಗಿದ್ದರು. ಇಬ್ಬರಲ್ಲಿಯೂ ಕತ್ತಿ, ಶಕ್ತ್ಯಾಯುಧ, ಗದೆ–ಇವೇ

ಮುಂತಾದ ಆಯುಧಗಳಿದ್ದುವು. ಇಬ್ಬರೂ ಅಸ್ತ್ರವಿದ್ಯಾಪಾರಂಗತರಾಗಿದ್ದರು. ಆ ಇಬ್ಬರು ಮಹಾವೀರರೂ ಸೆಳೆದ ಬಿಲ್ಲುಗಳಿಂದ ನಿಶಿತವಾದ ಬಾಣಗಳನ್ನು ಪ್ರತಿಕ್ಷಣದಲ್ಲಿಯೂ ಬಿಡುತ್ತಾ, ವೀರಗರ್ಜನೆಮಾಡುತ್ತಾ, ಸಮಯೋಚಿತ ವಾಗಿ ಅತ್ತಲಿತ್ತ ಸಂಚರಿಸುತ್ತಿದ್ದರು.

ಹೀಗೆಯೇ ಪರಸ್ಪರವಾಗಿ ಕಾದಾಡುತ್ತಿದ್ದಾಗ ವಿರಾಟನು ಸಮಯವನ್ನು ನೋಡಿ ತ್ರಿಗರ್ತಾಧಿಪತಿಯ ಮೇಲೆ ಹತ್ತು ಬಾಣಗಳನ್ನೂ, ಅವನ ನಾಲ್ಕು ಕುದುರೆಗಳಿಗೆ ಗುರಿಯಿಟ್ಟು ಐದೈದು ಬಾಣಗಳನ್ನೂ ಪ್ರಯೋಗಿಸಿದನು. ವಿರಾಟನ ಹತ್ತು ಬಾಣಗಳ ಪ್ರಹಾರಗಳಿಂದ ಸುಶರ್ಮನು ಹಿಂದಕ್ಕೆ ಸರಿಯಲಿಲ್ಲ. ವೇಗವಾಗಿ ಬರುತ್ತಿದ್ದ ಬಾಣಗಳನ್ನು ಅರ್ಧಮಾರ್ಗದಲ್ಲಿಯೇ ಕತ್ತರಿಸಿ–ಅಸ್ತ್ರವಿದನಾದ, ಯುದ್ಧದುರ್ಮದನಾದ ಸುಶರ್ಮನು ವಿರಾಟನ ಮೇಲೆ ಏಕಕಾಲದಲ್ಲಿ ಐವತ್ತು ಬಾಣಗಳನ್ನು ಪ್ರಯೋಗಿಸಿದನು. ವಿರಾಟ-ಸುಶರ್ಮರು ರಥಗಳಲ್ಲಿ ಕುಳಿತು ರಭಸದಿಂದ ಅತ್ತಲಿತ್ತ ಚಲಿಸುತ್ತಿದ್ದಾಗ ಧೂಳಿನ ಸಮೂಹವೇ ಮೇಲೆದ್ದು ಸೈನಿಕರೇ ಆದಿಯಾಗಿ ಎಲ್ಲರೂ ಧೂಳಿನಲ್ಲಿ ಮುಚ್ಚಿಹೋದರು. ಯಾರೊಬ್ಬರಿಗೂ ಏನೊಂದೂ ಕಾಣುತ್ತಿರಲಿಲ್ಲ. ತಮ್ಮ ಎದುರಾಳಿಯು ಯಾರೆಂಬುದನ್ನೇ ಎರಡು ಪಕ್ಷಗಳ ಸೈನಿಕರೂ ಗುರುತಿಸದಾದರು."

ತಿಏನೆಯ ಅಧ್ಯಾಯವು ಮುಗಿಯಿತು.

ತಿತಿನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಸುಶರ್ಮನು ವಿರಾಟನನ್ನು ಸೆರೆಹಿಡಿದುದು : ಸುಶರ್ಮ-ಭೀಮಸೇನರ ಯುದ್ಧ: ಭೀಮನು ವಿರಾಟನನ್ನು ಸೆರೆಯಿಂದ ಬಿಡಿಸಿ ಸುಶರ್ಮನನ್ನು ಬಂಧಿಸಿದುದು : ಧರ್ಮರಾಜನಿಂದ ಸುಶರ್ಮನ ಬಂಧವಿಮೋಚನೆ

ವೈಶಂಪಾಯನರು ಹೇಳುತ್ತಾರೆ :

**ತಮಸಾಭಿಪ್ಲುತೇ ಲೋಕೇ ರಜಸಾ ಚೈವ ಭಾರತ ।**
**ಅತಿಷ್ಠನ್ವೈ ಮುಹೂರ್ತಂ ತು ವ್ಯೂಢಾನೀಕಾಃ ಪ್ರಹಾರಿಣಃ ॥೧॥**

“ಜನಮೇಜಯ! ಸೂರ್ಯಾಸ್ತವೂ ಆಗಿಹೋಯಿತು. ಯುದ್ಧ ಭೂಮಿಯೆಲ್ಲವೂ ಧೂಳಿನಿಂದ ಆಚ್ಛಾದಿತವಾಗಿದ್ದಿತು. ಆ ಸಮಯದಲ್ಲಿ ಸೈನಿಕರು ದಿಙ್ಮೂಢರಾಗಿ ಮುಹೂರ್ತಕಾಲದವರೆಗೆ ನಿಂತಿದ್ದರು.

‘ಮುಂದೇನು ಮಾಡಬೇಕು? ಯಾರನ್ನು ಪ್ರಹರಿಸಬೇಕು? ತಮ್ಮ ಶತ್ರುಗಳಾರು? ಮಿತ್ರರಾರು?’–ಎಂಬ ಅರಿವೇ ಅವರಿಗಿಲ್ಲವಾಯಿತು. ಅಂತಹ ಸಮಯದಲ್ಲಿ ಯಾವ ವಿಧವಾದ ಸಂಧಾನವೂ ಇಲ್ಲದೇ ಸ್ವಲ್ಪಕಾಲ ಯುದ್ಧದ ಸ್ತಂಭನವಾಯಿತು. ಅಂದು ಕೃಷ್ಣಪಕ್ಷದ ಸಪ್ತಮಿಯ ರಾತ್ರಿಯಾಗಿದ್ದುದರಿಂದ ರಾತ್ರಿಯಲ್ಲಿ ಹದಿನಾಲ್ಕು ಘಳಿಗೆಗಳು ಕಳೆದನಂತರ ಚಂದ್ರನು ಉದಯಿಸಿದನು. ಚಂದ್ರೋದಯದ ಕಾರಣದಿಂದಾಗಿ ರಾತ್ರಿಯು ತಮಸ್ಸಿನಿಂದ ಶೂನ್ಯವಾಯಿತು. ಅಂತೆಯೇ ಕ್ಷತ್ರಿಯರೂ ರಣೋತ್ಸಾಹಿಗಳಾದರು. ಚಂದ್ರನ ಬೆಳದಿಂಗಳು ರಣರಂಗದಲ್ಲಿ ವ್ಯಾಪಿಸಿದೊಡನೆಯೇ ರಣದುಂದುಭಿಗಳು ಪುನಃ ಮೊಳಗಿದುವು. ಬೆಳಕು ಉಂಟಾದೊಡನೆಯೇ ಘೋರರೂಪವಾದ ಯುದ್ಧವು ಪ್ರಾರಂಭವಾಯಿತು. ಸೈನಿಕರು ಪರಸ್ಪರವಾಗಿ ನೋಡುತ್ತಿರದೆ ಆವೇಶಭರಿತರಾಗಿ ಯುದ್ಧದಲ್ಲಿ ತೊಡಗಿದರು. ಆ ಸಮಯದಲ್ಲಿ ತ್ರಿಗರ್ತಾಧಿಪತಿಯಾದ ಸುಶರ್ಮನು ತನ್ನ ಕಿರಿಯ ತಮ್ಮನಿಂದೊಡಗೂಡಿ ರಥಸಮೂಹದಿಂದ ಅನುಸೃತನಾಗಿ ವಿರಾಟನನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿದನು. ವಿರಾಟನ ರಥವನ್ನು ಸಮೀಪಿಸುತ್ತಲೇ ವೀರರಾದ ಆ ಇಬ್ಬರು ಕ್ಷತ್ರಿಯರಾಜರೂ ತಮ್ಮ ರಥಗಳಿಂದ ಕೆಳಕ್ಕಿಳಿದು ಗದಾಪಾಣಿಗಳಾಗಿ ವಿರಾಟರಾಜನ ರಥದತ್ತ ನುಗ್ಗಿದರು. ಅವರಂತೆಯೇ ಕುಪಿತರಾದ ಅವರ ಸೈನಿಕರೂ ಗದೆಗಳಿಂದಲೂ, ಕತ್ತಿಗಳಿಂದಲೂ, ಬಹಳ ಚೂಪಾಗಿದ್ದ ಪರಶ್ವಧಗಳಿಂದಲೂ ಶತ್ರುಗಳೊಡನೆ ಯುದ್ಧಮಾಡಲು ಉಪಕ್ರಮಿಸಿದರು. ಹೀಗೆಯೇ ಯುದ್ಧವು ಮುಂದೆ ಸಾಗುತ್ತಿದ್ದಾಗ ಮಹಾಪರಾಕ್ರಮಿಯಾದ ಸುಶರ್ಮನೂ ಮತ್ತು ಅವನ ತಮ್ಮನೂ ಅಮಿತವಾದ ಸೈನ್ಯದಿಂದ ವಿರಾಟರಾಜನ ಸೈನ್ಯವನ್ನು ವಿಧ್ವಂಸಗೊಳಿಸಿ, ಪರಾಜಿತವನ್ನಾಗಿ ಮಾಡಿ, ವಿರಾಟನ ರಥದ ಕುದುರೆಗಳನ್ನೂ ಅಂಗರಕ್ಷಕರನ್ನೂ ಸಂಹರಿಸಿ, ರಾಜನನ್ನು ರಥಹೀನನನ್ನಾಗಿ ಮಾಡಿ, ಕ್ಷಣಮಾತ್ರದಲ್ಲಿ ವಿರಾಟನನ್ನು ಪ್ರಾಣಸಹಿತವಾಗಿ ಸೆರೆಹಿಡಿದರು. ಮರುಕ್ಷಣದಲ್ಲಿಯೇ

ಸುಶರ್ಮನು–ಯುವತಿಯೊಬ್ಬಳನ್ನು ಕಾಮುಕನು ಅಪಹರಿಸಿಕೊಂಡು ಹೋಗುವ ರೀತಿಯಲ್ಲಿ–ವಿರಾಟನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ವೇಗವಾಗಿ ಹೊರಟುಹೋದನು. ಬಲಿಷ್ಠನಾದ ಮತ್ಸ್ಯಾಧಿಪತಿಯು ರಥ ಹೀನನಾಗಿ ಸುಶರ್ಮನ ಸೆರೆಯಾಗಲಾಗಿ ಮತ್ಸ್ಯರಾಜನ ಸೈನಿಕರು ಕಂಗೆಟ್ಟು ಹೋದರು. ಇದೇ ಸುಸಮಯವೆಂದು ಭಾವಿಸಿದ ತ್ರಿಗರ್ತಸೈನಿಕರು ಮತ್ಸ್ಯರಾಜನ ಸೈನಿಕರನ್ನು ಬಲವಾಗಿ ಪ್ರಹರಿಸತೊಡಗಿದರು. ನಾಯಕನಿಲ್ಲದ ಸೈನ್ಯವು ದಿಕ್ಕಾಪಾಲಾಗಿ ಚದುರಿಹೋಯಿತು.

ಜನಮೇಜಯ! ವಿರಾಟರಾಜನ ಸೈನ್ಯವು ಭಯದಿಂದ ಓಡಿಹೋಗು ತ್ತಿರುವುದನ್ನು ನೋಡಿದ ಕುಂತೀಪುತ್ರನಾದ ಯುಧಿಷ್ಠಿರನು ಶತ್ರುಹಂತಕನಾದ, ಮಹಾಬಾಹುವಾದ ಭೀಮಸೇನನನ್ನು ಕುರಿತು ಹೇಳಿದನು :

“ಭೀಮಸೇನ! ವಿರಾಟರಾಜನು ತ್ರಿಗರ್ತಾಧಿಪತಿಯಾದ ಸುಶರ್ಮ ನಿಂದ ಬಂಧಿತನಾಗಿದ್ದಾನೆ. ಅವನು ಶತ್ರುಗಳ ವಶನಾಗದಂತೆ ನೋಡಿ ಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಆದುದರಿಂದ ನೀನೀಗಲೇ ಹೋಗಿ ಅವನನ್ನು ಬಂಧನದಿಂದ ವಿಮೋಚನೆಗೊಳಿಸು. ನಾವು ಆರು ಮಂದಿಯೂ ಈ ವಿರಾಟರಾಜನ ಅರಮನೆಯಲ್ಲಿ ಕಳೆದ ಒಂದು ವರ್ಷದಿಂದ ಸುಖವಾಗಿ ಕಾಲಕಳೆಯುತ್ತಿದ್ದೇವೆ. ನಮ್ಮ ಮನಸ್ಸಿನ ಅಭಿಲಾಷೆಗಳೆಲ್ಲವನ್ನೂ ಇಲ್ಲಿ ನಾವು ಪೂರೈಸಿಕೊಂಡಿರುತ್ತೇವೆ. ಈ ರಾಜನು ನಮ್ಮನ್ನು ಗೌರವದಿಂದಲೂ ನೋಡಿ ಕೊಳ್ಳುತ್ತಿದ್ದಾನೆ. ಈ ಕಾರಣಗಳಿಂದಾಗಿ ಇವನು ಮಾಡಿರುವ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುವುದು ನಮ್ಮ ಕರ್ತವ್ಯವಾಗಿರುತ್ತದೆ.”

“ಅಣ್ಣ! ನಿನ್ನ ಆಜ್ಞೆಯಿಂದಾಗಿ ನಾನು ವಿರಾಟರಾಜನನ್ನು ಶತ್ರುಗಳ ಬಂಧನದಿಂದ ವಿಮೋಚನೆ ಮಾಡುತ್ತೇನೆ. ಶತ್ರುಗಳೊಡನೆ ಯುದ್ಧ ಮಾಡುವ ಸಮಯದಲ್ಲಿ ನನ್ನ ಪರಾಕ್ರಮವೆಷ್ಟೆಂಬುದನ್ನು ವೀಕ್ಷಿಸಣ್ಣಾ! ನನ್ನ ಬಾಹುಬಲವನ್ನೇ ಅವಲಂಬಿಸಿ ಶತ್ರುಗಳೊಡನೆ ಯುದ್ಧಮಾಡುವ ನನ್ನ ಪರಾಕ್ರಮವನ್ನು ನೀನು ನಿನ್ನ ಅನುಜರೊಡನೆ ಏಕಾಂತಸ್ಥಳದಲ್ಲಿ ನಿಂತು ವೀಕ್ಷಿಸುತ್ತಿರು. (ವೃಕ್ಷವೊಂದನ್ನು ನಿರ್ದೇಶಿಸುತ್ತಾ) ಅಣ್ಣ! ಇಲ್ಲಿಯೇ ಇರುವ ಈ ವೃಕ್ಷವು ಶಾಖೋಪಶಾಖೆಗಳಿಂದ ಕೂಡಿದ್ದು ನನ್ನ ಗದೆಯಂತೆಯೇ ಇರುವುದು. ಈ ವೃಕ್ಷವನ್ನು ನಾನು ಈ ಕೂಡಲೇ ಬುಡಸಹಿತವಾಗಿ

ಕಿತ್ತು ಗದೆಯಂತೆ ಮಾಡಿಕೊಂಡು ಶತ್ರುಗಳನ್ನು ನಿರ್ಮೂಲಮಾಡಿ ಬಿಡುತ್ತೇನೆ.”

ಭೀಮಸೇನನು ಅಣ್ಣನೊಡನೆ ಹೀಗೆ ಹೇಳಿ ಮದಿಸಿದ ಆನೆಯಂತೆ ಆ ಮಹಾವೃಕ್ಷವನ್ನೇ ಕ್ಷಣಕಾಲ ಎವೆಯಿಕ್ಕದೇ ನೋಡುತ್ತಿದ್ದನು. ಆ ಸಮಯದಲ್ಲಿ ಅತಿಮಾನುಷವಾದ ಸಾಹಸವನ್ನು ತೋರಿಸಕೂಡದೆಂದು ಬಗೆದ ಯುಧಿಷ್ಠಿರನು ಭೀಮಸೇನನಿಗೆ ಹೇಳಿದನು :

**ಮಾ ಭೀಮ ಸಾಹಸಂ ಕಾರ್ಷೀಸ್ತಿಷ್ಠತ್ವೇಷ ವನಸ್ಪತಿಃ ।**
**ಮಾ ತ್ವಾಂ ವೃಕ್ಷೇಣ ಕರ್ಮಾಣಿ ಕುರ್ವಾಣಮತಿಮಾನುಷಮ್ ॥೧೮॥**

**ಜನಾಃ ಸಮವಬುದ್ಧ್ಯೇರನ್ಭೀಮೋಽಯಮಿತಿ ಭಾರತ ।**
**ಅನ್ಯದೇವಾಯುಧಂ ಕಿಂಚಿತ್ಪ್ರತಿಪದ್ಯಸ್ವ ಮಾನುಷಮ್ ॥೧೯॥**

“ಭೀಮಸೇನ! ಈ ಸಮಯದಲ್ಲಿ ಸಾಹಸಕಾರ್ಯವನ್ನು ಮಾಡಲು ಹೋಗಬೇಡ. ಆ ವೃಕ್ಷವು ಅಲ್ಲಿಯೇ ಇನ್ನೂ ಕೆಲವು ಕಾಲ ಇರಲಿ. ನೀನು ಈ ಅತಿಮಾನುಷವಾದ ಕಾರ್ಯವನ್ನು ಮಾಡಿಬಿಟ್ಟರೆ ಜನರು ನಿಶ್ಚಯ ವಾಗಿಯೂ ನಿನ್ನನ್ನು ಭೀಮಸೇನನೆಂದು ಗುರುತಿಸುವರು. ಆದುದರಿಂದ ನೀನು ಈ ಸಮಯದಲ್ಲಿ ಆ ಮಹಾವೃಕ್ಷವನ್ನು ಕೀಳಲು ಹೋಗಬೇಡ. ಶತ್ರುಗಳ ವಿಧ್ವಂಸನಕ್ಕಾಗಿ ಬೇರಾವುದಾದರೂ ಆಯುಧವನ್ನು ಈಗ ಉಪಯೋಗಿಸು. ಧನುಸ್ಸನ್ನಾಗಲೀ, ಶಕ್ತ್ಯಾಯುಧವನ್ನಾಗಲೀ, ಖಡ್ಗವನ್ನಾ ಗಲೀ, ಕುಠಾರವನ್ನಾಗಲೀ, ಮನುಷ್ಯರು ಉಪಯೋಗಿಸುವ ಬೇರಾವು ದಾದರೂ ಆಯುಧವನ್ನೇ ಆಗಲೀ ತೆಗೆದುಕೊಂಡು ಹೋಗು. ನೀನು ಮಾಡುವ ಕಾರ್ಯವನ್ನು ಯಾರೊಬ್ಬರೂ ಲಕ್ಷಿಸಬಾರದು. ಈ ರೀತಿಯಲ್ಲಿ ನೀನು ಕಾರ್ಯಮಾಡಬೇಕಾಗಿದೆ. ಮೇಲಾಗಿ ಸಾವಕಾಶಮಾಡಲೂ ಸಾಧ್ಯ ವಿಲ್ಲ. ಬಹುಶೀಘ್ರವಾಗಿ ವಿರಾಟರಾಜನನ್ನು ಬಿಡುಗಡೆಮಾಡಬೇಕಾಗಿದೆ. ಆದುದರಿಂದ ನನ್ನ ಸಲಹೆಯಂತೆ ನೀನು ಕಾರ್ಯಮಾಡು. ನಾನು ಹಿಂದೆ ತಿಳಿಸಿದಂತೆ ಧನುಸ್ಸನ್ನೋ, ಶಕ್ತ್ಯಾಯುಧವನ್ನೋ, ಕತ್ತಿಯನ್ನೋ ತೆಗೆದು ಕೊಂಡು ರಥದಲ್ಲಿಯೇ ಕುಳಿತು ತ್ರಿಗರ್ತರಾಜನನ್ನು ಎದುರಿಸು. ನಿನ್ನ ಎರಡು ಪಾರ್ಶ್ವಗಳಲ್ಲಿಯೂ ಮಹಾವೀರರಾದ ನಕುಲ-ಸಹದೇವರು ರಥ

ದಲ್ಲಿ ಕುಳಿತು ನಿನ್ನನ್ನು ರಕ್ಷಿಸುತ್ತಿರುತ್ತಾರೆ. ನೀವು ಮೂವರೂ ಸೇರಿ ಯುದ್ಧ ಮಾಡಿ ತ್ರಿಗರ್ತರಾಜನನ್ನು ಸೋಲಿಸಿ ಬಂಧಿತನಾಗಿರುವ ವಿರಾಟರಾಜನನ್ನು ಬಿಡಿಸಿ ರಕ್ಷಿಸಿರಿ."

ಧರ್ಮಜನು ಹೀಗೆಂದು ಹೇಳಿದೊಡನೆಯೇ ಬಲಿಷ್ಠನಾದ ಭೀಮ ಸೇನನು ಹಾಗೆಯೇ ಆಗಲೆಂದು ಹೇಳಿ ಅಣ್ಣನಿಗೆ ನಮಿಸಿ ಶ್ರೇಷ್ಠವಾದ ಧನುಸ್ಸನ್ನು ಕೈಯಲ್ಲಿ ಹಿಡಿದು ಟೇಂಕಾರಮಾಡುತ್ತಾ ಬಹಳ ಶೀಘ್ರವಾಗಿ ರಥವನ್ನು ಓಡಿಸುವಂತೆ ಸಾರಥಿಗೆ ಹೇಳಿ–ಕಾರ್ಮುಗಿಲು ಸತತವಾಗಿ ಮಳೆ ಗರೆಯುವಂತೆ–ಶರವರ್ಷವನ್ನು ಸೈನಿಕರ ಮೇಲೆ ಸುರಿಸುತ್ತಲೇ ಮುಂದೆ-ಮುಂದೆ ಹೋಗುತ್ತಿದ್ದನು. ಸ್ವಲ್ಪ ಹೊತ್ತಿನೊಳಗಾಗಿಯೇ ಭೀಮಸೇನನು ಭೀಮಪರಾಕ್ರಮಿಯಾದ ಸುಶರ್ಮನನ್ನು ಸಂಧಿಸಿ ಅವನ ರಥದಲ್ಲಿದ್ದ ವಿರಾಟನನ್ನು ನೋಡಿ, ಸುಶರ್ಮನನ್ನು ಉದ್ದೇಶಿಸಿ–'ರೇ! ತಿಷ್ಠ! ತಿಷ್ಠ!' 'ಮುಂದೆ ಹೋದೀಯೆ! ಅಲ್ಲಿಯೇ ನಿಲ್ಲು!?–ಎಂದು ಗಟ್ಟಿಯಾಗಿ ಕೂಗಿದನು.

ವಿರಾಟರಾಜನನ್ನು ಬಂಧಿಸಿದನಂತರ ತನ್ನನ್ನು ಪ್ರತಿಭಟಿಸುವವರು ಯಾರಾದರೂ ವಿರಾಟರಾಜನ ಸೈನ್ಯದಲ್ಲಿರುವರೆಂದು ಸುಶರ್ಮನು ಭಾವಿಸಿರ ಲಿಲ್ಲ. ರಾಜನನ್ನು ಸೆರೆಹಿಡಿದ ನಂತರ ಸಾಮಾನ್ಯವಾಗಿ ಎಲ್ಲಿಯೂ ಯಾವ ಯುದ್ಧವೂ ಮುಂದುವರಿಯುವುದಿಲ್ಲ. ಹೀಗಿದ್ದರೂ–'ತಿಷ್ಠ! ತಿಷ್ಠ!'–ಎಂದು ಕೂಗುತ್ತಾ ತನ್ನನ್ನು ಬೆನ್ನಟ್ಟಿ ಬರುತ್ತಿರುವ ಕಾಲಾಂತಕನಾದ ಯಮಧರ್ಮನಂತೆಯೇ ಕಾಣುತ್ತಿರುವ ಭೀಮನನ್ನು ನೋಡಿ ಸುಶರ್ಮನು ಅಚ್ಚರಿಗೊಂಡು ಮುಂದೇನು ಮಾಡಬೇಕೆಂದು ಕ್ಷಣಕಾಲ ಚಿಂತಿಸಿ, ತನ್ನ ಯೋಧರನ್ನು ಕುರಿತು ಹೇಳಿದನು : "ವಿರಾಟನನ್ನು ಸೆರೆಹಿಡಿದೊಡನೆಯೇ ನಾವು ಜಯಶಾಲಿಗಳಾದೆವೆಂದೂ–ಯುದ್ಧವು ಮುಗಿಯಿತೆಂದೂ ಭಾವಿಸಿ ದ್ದೆನು. ಆದರೆ 'ತಿಷ್ಠ! ತಿಷ್ಠ!' ಎಂದು ಹೇಳುತ್ತಾ ನಮ್ಮನ್ನು ಬೆನ್ನಟ್ಟಿ ಬರುತ್ತಿರುವವನು ಮಹಾಪರಾಕ್ರಮಿಯಾಗಿರುವಂತೆ ಕಾಣುತ್ತಾನೆ. ಇವನು ಮಹಾಪರಾಕ್ರಮಿಯಾಗಿರದಿದ್ದರೆ ನಮ್ಮನ್ನು ತಡೆದು ನಿಲ್ಲಿಸಲು ಬರುತ್ತಿರಲಿಲ್ಲ. ಆದುದರಿಂದ ಮುಂದೆ ಮತ್ತೊಂದು ಮಹಾಯುದ್ಧವು ನಡೆಯಲಿದೆ. ಎಲ್ಲರೂ ಜಾಗರೂಕರಾಗಿದ್ದು ಯುದ್ಧಸನ್ನದ್ಧರಾಗಿರಿ." ಹೀಗೆಂಬುದಾಗಿ

ಹೇಳಿ ಧನುಸ್ಸನ್ನು ಕೈಯಲ್ಲಿ ಹಿಡಿದು ರಥವನ್ನು ಹಿಂದಿರುಗಿಸುವಂತೆ ಸಾರಥಿಗೆ ಹೇಳಿದನು. ಅವನ ನಿರ್ದೇಶನದಂತೆ ಅವನ ಅನುಜರೂ ತಮ್ಮ-ತಮ್ಮ ರಥಗಳನ್ನು ಹಿಂತಿರುಗಿಸಿ ಯುದ್ಧಸನ್ನದ್ಧರಾದರು. ಅವರಿನ್ನೂ ಯುದ್ಧಸನ್ನದ್ಧರಾಗಿ ಬಾಣಗಳನ್ನು ಬಿಡಲು ಹವಣಿಸುತ್ತಿರುವಾಗಲೇ ಭೀಮಸೇನನು ಅವರ ರಥಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಧ್ವಂಸಮಾಡಿದನು.

ಮತ್ತೊಂದು ಕ್ಷಣದಲ್ಲಿ ಸುಶರ್ಮನ ಕಡೆಯ ಸಾವಿರಾರು ರಥಿಕರೂ, ಪದಾತಿಸೈನಿಕರೂ, ಸಾವಿರಾರು ಗಜಾಶ್ವಸೈನಿಕರೂ ವಿರಾಟನ ಸಮೀಪದಲ್ಲಿಯೇ ಹತರಾದರು. ಭೀಮಸೇನನು ಗದಾಪಾಣಿಯಾಗಿ ಶತ್ರುಸೈನಿಕರ ರುಂಡಗಳನ್ನು ಚೆಂಡಾಡಿದನು. ಘೋರವಾದ ಆ ವಿಧ್ವಂಸನಕೃತ್ಯವನ್ನು ನೋಡುತ್ತಿದ್ದ ಸುಶರ್ಮನು ತನ್ನಲ್ಲಿಯೇ ತಾನು ಆಲೋಚಿಸತೊಡಗಿದನು : 'ಎದುರಾಳಿಯು ಇಷ್ಟೊಂದು ಭೀಕರವಾಗಿ ಯುದ್ಧಮಾಡುತ್ತಿರುವಾಗ ನನ್ನ ಪಕ್ಷದಲ್ಲಿ ಯಾರಾದರೂ ಜೀವದಿಂದ ಉಳಿದುಕೊಳ್ಳುವ ಸಾಧ್ಯತೆಯಿರುವುದೇ? ಈ ಯುದ್ಧದಲ್ಲಿ ನನ್ನ ಸೈನ್ಯವು ಸಂಪೂರ್ಣವಾಗಿ ವಿನಾಶಹೊಂದುವುದೆಂಬುದರಲ್ಲಿ ನನಗಾವ ಸಂಶಯವೂ ಉಳಿದಿಲ್ಲ'– ಹೀಗೆಂದು ಕ್ಷಣಕಾಲ ಯೋಚಿಸಿ ತನ್ನ ಕರ್ತವ್ಯವನ್ನು ತಾನು ಮಾಡಿಯೇ ತೀರಬೇಕೆಂದು ನಿರ್ಧರಿಸಿದವನಾಗಿ, ಧನುಸ್ಸನ್ನು ಸೆಳೆದು ಭೀಮಸೇನನ ಮೇಲೆ ಶರವರ್ಷವನ್ನೇ ಸುರಿಸಲು ಉಪಕ್ರಮಿಸಿದನು. ತಮ್ಮ ಕಡೆಯ ವೀರನೊಬ್ಬನು ಮುನ್ನುಗ್ಗಿ ಸುಶರ್ಮನನ್ನು ಎದುರಿಸಿ ಘೋರವಾದ ಯುದ್ಧಮಾಡುತ್ತಿರುವನೆಂದು ತಿಳಿದನಂತರ ಮತ್ಸ್ಯರಾಜನ ಸೈನಿಕರು ಅಮಿತೋತ್ಸಾಹದಿಂದ ತಮ್ಮ-ತಮ್ಮ ರಥಗಳನ್ನು ತ್ರಿಗರ್ತಸೈನ್ಯಕ್ಕೆ ಅಭಿಮುಖವಾಗಿ ನಡೆಸುತ್ತಾ ತ್ರಿಗರ್ತಸೈನ್ಯದ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಲು ತೊಡಗಿದರು. ಪಾಂಡವರೆಂದು ತಿಳಿಯದಿದ್ದರೂ ನಾಲ್ವರು ಮಹಾಯೋಧರು ವಿರಾಟರಾಜನು ಬಂಧಿತನಾದ ಮೇಲೂ ರಥಗಳನ್ನು ತ್ರಿಗರ್ತರಿಗೆದುರಾಗಿ ನಿಲ್ಲಿಸಿ ಯುದ್ಧಮಾಡುತ್ತಿರುವುದನ್ನು ಕಂಡ ವಿರಾಟನ ಮಗನು ಬಹುಕ್ರುದ್ಧನಾಗಿ ಪರಮಾದ್ಭುತವಾದ ರೀತಿಯಲ್ಲಿ ತ್ರಿಗರ್ತರೊಡನೆ ಯುದ್ಧಮಾಡಿದನು.

ಆ ಸಮಯದಲ್ಲಿ ಕುಂತೀಪುತ್ರನಾದ ಯುಧಿಷ್ಠಿರನು ಒಂದು ಸಾವಿರ ಯೋಧರನ್ನು ಸಂಹರಿಸಿದನು. ಭೀಮನು ಏಳು ಸಾವಿರ ಯೋಧರಿಗೆ ಯಮ

ಲೋಕದ ದರ್ಶನವನ್ನು ಮಾಡಿಸಿದನು. ನಕುಲನು ಏಳು ನೂರು ಯೋಧರ ತಲೆಗಳನ್ನು ಕೆಡವಿದನು. ಯುಧಿಷ್ಠಿರನಿಂದ ನಿರ್ದೇಶಿತನಾದ ಪುರುಷರ್ಷಭನಾದ ಸಹದೇವನು ಮೂರು ನೂರು ಮಂದಿ ಯೋಧರನ್ನು ಸಂಹರಿಸಿದನು. ನಾಲ್ವರು ಪಾಂಡವರೂ ಅಪಾರವಾದ ಶತ್ರುಸೇನೆಯನ್ನು ಸಂಹರಿಸಿದನಂತರ ಮಹಾರಥನಾದ ಸಹದೇವನು ಕತ್ತಿಯನ್ನು ಮೇಲೆತ್ತಿ ಸುಶರ್ಮನ ಕಡೆಗೆ ನುಗ್ಗಿದನು. ಆ ಸಮಯಕ್ಕೆ ಸರಿಯಾಗಿ ಮಹಾರಥನಾದ ಯುಧಿಷ್ಠಿರನೂ ಬಹಳ ವೇಗದಿಂದ ಸುಶರ್ಮನ ಕಡೆಗೆ ಧಾವಿಸಿ ಅವನ ಮೇಲೆ ಬಾಣಗಳ ವೃಷ್ಟಿಯನ್ನು ಕರೆದನು. ಬಹುಕುಪಿತನಾದ ಸುಶರ್ಮನು ಯುಧಿಷ್ಠಿರನು ತನ್ನ ಮೇಲೆ ಪ್ರಯೋಗಿಸಿದ ಬಾಣಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಕತ್ತರಿಸಿ, ಮರುಕ್ಷಣದಲ್ಲಿಯೇ ಯುಧಿಷ್ಠಿರನ ಮೇಲೆ ಒಂಭತ್ತು ಬಾಣಗಳನ್ನೂ, ಅವನ ನಾಲ್ಕು ಕುದುರೆಗಳ ಮೇಲೆ ನಾಲ್ಕು ಬಾಣಗಳನ್ನೂ ಪ್ರಯೋಗಿಸಿದನು. ಅದೇ ಸಮಯದಲ್ಲಿ ಅದ್ಭುತಕಾರ್ಯಗಳನ್ನು ಬಹುಶೀಘ್ರವಾಗಿ ಮಾಡಿಮುಗಿಸುವುದರಲ್ಲಿ ಸಮರ್ಥನಾಗಿದ್ದ ಭೀಮಸೇನನು ಸುಶರ್ಮನ ರಥದ ಸಮೀಪಕ್ಕೆ ಹೋಗಿ ಅವನ ರಥಕ್ಕೆ ಕಟ್ಟಿದ್ದ ಎಲ್ಲ ಕುದುರೆಗಳನ್ನೂ ಧ್ವಂಸಮಾಡಿದನು. ಮರುಕ್ಷಣದಲ್ಲಿಯೇ ಭೀಮನು ಸುಶರ್ಮನ ಸುತ್ತಲೂ ಇದ್ದ ಅಂಗರಕ್ಷಕರನ್ನೂ ನಿಶಿತವಾದ ಬಾಣಗಳಿಂದ ಸಂಹರಿಸಿ ಸುಶರ್ಮನ ಸಾರಥಿಯನ್ನೂ ರಥದಿಂದ ಕೆಳಕ್ಕುರುಳಿಸಿದನು. ತ್ರಿಗರ್ತರಾಜನು ರಥಹೀನನಾಗಿರುವುದನ್ನು ನೋಡಿ ಶೂರನಾದ, ವಿರಾಟನ ಚಕ್ರರಕ್ಷಕನಾದ, ಸುಪ್ರಸಿದ್ಧನಾದ ಮದಿರಾಕ್ಷನೂ ಅವನ ಮೇಲೆ ಬಾಣಗಳ ಮಳೆಗರೆದನು. ಸುಶರ್ಮನು ಅವ್ಯವಸ್ಥಿತಸ್ಥಿತಿಯಲ್ಲಿರುವುದನ್ನು ಕಂಡು ಅವನ ರಥದಲ್ಲಿಯೇ ಕುಳಿತಿದ್ದ ವಿರಾಟನು ಸುಶರ್ಮನ ಗದೆಯನ್ನೇ ತೆಗೆದುಕೊಂಡು ರಥದಿಂದ ಕೆಳಕ್ಕೆ ಹಾರಿದನು. ತ್ರಿಗರ್ತಾಧಿಪತಿಯು ತನ್ನ ಪ್ರಾಣಗಳನ್ನುಳಿಸಿಕೊಳ್ಳುವ ಸಲುವಾಗಿ ಪಲಾಯನಮಾಡಿದನು. ವಿರಾಟನು ಅವನನ್ನು ಬೆನ್ನಟ್ಟಿ ಹೊರಟನು. ಆ ಸಮಯದಲ್ಲಿ ವೃದ್ಧನಾಗಿದ್ದ ವಿರಾಟರಾಜನ ಚಲನ-ವಲನಗಳನ್ನು ನೋಡಿದರೆ ತರುಣನೊಬ್ಬನು ಗದೆಯನ್ನು ಹಿಡಿದು ಹೋಗುತ್ತಿರುವಂತೆಯೇ ಭಾಸವಾಗುತ್ತಿದ್ದಿತು. ಪಲಾಯನಮಾಡುತ್ತಿದ್ದ ಸುಶರ್ಮನನ್ನು ನೋಡಿ ಭೀಮಸೇನನು ಅವನನ್ನು ತಡೆದು ಹೇಳಿದನು :

**ರಾಜಪುತ್ರ ನಿವರ್ತಸ್ವ ನ ತೇ ಯುಕ್ತಂ ಪಲಾಯನಮ್ ।**
**ಅನೇನ ವೀರ್ಯೇಣ ಕಥಂ ಗಾಸ್ತ್ವಂ ಪ್ರಾರ್ಥಯಸೇ ಬಲಾತ್ ।**
**ಕಥಂ ಚಾನುಚರಾಂಸ್ತ್ಯಕ್ತ್ವಾ ಶತ್ರುಮಧ್ಯೇ ವಿಷೀದಸಿ ॥೪೪॥**

"ರಾಜಪುತ್ರ! ಯುದ್ಧಭೂಮಿಗೆ ಹಿಂದಿರುಗುವವನಾಗು. ನಿನ್ನಂತಹ ಶೂರನಿಗೆ ಪಲಾಯನವು ಸರ್ವಥಾ ಯೋಗ್ಯವಲ್ಲ. ಇಷ್ಟು ಅಲ್ಪವಾದ ಬಲ ವನ್ನಿಟ್ಟುಕೊಂಡು ( ಇಷ್ಟು ದುರ್ಬಲನಾಗಿ ) ಬಲಾತ್ಕಾರದಿಂದ ಗೋಹರಣ ಮಾಡಲು ಬಂದುದೇಕೆ? ನಿನ್ನ ಅನುಯಾಯಿಗಳೆಲ್ಲರನ್ನೂ ಶತ್ರುಗಳ ಮಧ್ಯ ದಲ್ಲಿ ಬಿಟ್ಟು ಏಕೆ ಓಡಿ ಹೋಗುವೆ? ನಿನ್ನ ಈ ಕಾರ್ಯದಿಂದಾಗಿ ನೀನು ಮುಂದೆ ಬಹುವಾಗಿ ವಿಷಾದಿಸಬೇಕಾಗುವುದು."

ಪ್ರಾಣವನ್ನುಳಿಸಿಕೊಳ್ಳುವ ಆಸೆಯಿದ್ದರೂ ವೀರರಾದವರು ಚುಚ್ಚು ಮಾತುಗಳನ್ನೆಂದಿಗೂ ಸಹಿಸಲಾರರು. ಭೀಮನ ಮಾತನ್ನು ಕೇಳಿದೊಡನೆಯೇ ರಥಸೈನ್ಯಕ್ಕೆ ಅಧಿಪತಿಯಾದ, ಮಹಾವೀರನಾದ ಸುಶರ್ಮನು ಕಟ-ಕಟನೆ ಹಲ್ಲುಗಳನ್ನು ಕಡಿಯುತ್ತಾ–'ನಿಲ್ಲು! ನಿಲ್ಲು! ನಿನ್ನನ್ನು ಕ್ಷಣಮಾತ್ರದಲ್ಲಿ ಮುಗಿಸಿ ಬಿಡುತ್ತೇನೆ'–ಎಂದು ಹೇಳುತ್ತಾ ಯುದ್ಧಭೂಮಿಗೆ ಹಿಂದಿರುಗಿ ಭೀಮನಿದ್ದೆಡೆಗೆ ರಭಸದಿಂದ ಧಾವಿಸಿಬಂದನು.

**ಭೀಮಸ್ತು ಭೀಮಸಂಕಾಶೋ ರಥಾತ್ಪ್ರಸ್ಕಂದ್ಯ ಪಾಣ್ಡವಃ ।**
**ಪ್ರಾದ್ರವತ್ತೂರ್ಣಮವ್ಯಗ್ರೋ ಜೀವಿತೇಪ್ಸುಃ ಸುಶರ್ಮಣಃ ॥೪೬॥**

ಸುಶರ್ಮನ ಪ್ರಾಣಾಪಹಾರವೇ ಭೀಮನ ಮುಖ್ಯೋದ್ದೇಶವಾಗಿತ್ತು. ಭೀಮಪರಾಕ್ರಮಿಯಾದ ಭೀಮನು ಒಡನೆಯೇ ರಥದಿಂದ ಧುಮ್ಮಿಕ್ಕಿ ಏಕಾ ಗ್ರತೆಯಿಂದ (ಮನಸ್ಸಿನಲ್ಲಿ ಯಾವ ವಿಧವಾದ ಭಯವಾಗಲೀ ಭ್ರಾಂತಿ ಯಾಗಲೀ ಇಲ್ಲದೆ) ಸುಶರ್ಮನ ಕಡೆಗೆ ನುಗ್ಗಿದನು.*

---

* ಇಲ್ಲಿ ವ್ಯಾಸರು ' ಭೀಮಸ್ತು ಭೀಮಸಂಕಾಶಃ ' ಭೀಮಸದೃಶನಾದ ಭೀಮನು– ಎಂದು ಭೀಮನಿಗೆ ಭೀಮನ ಉಪಮಾನವನ್ನೇ ಕೊಟ್ಟಿರುತ್ತಾರೆ. ಪರಾಕ್ರಮದಲ್ಲಿ ಭೀಮನಿಗೆ ಸಮಾನನಾದವನು ಪ್ರಪಂಚದಲ್ಲೇ ಬೇರೊಬ್ಬನಿಲ್ಲವೆಂದು ವ್ಯಾಸರ ಅಭಿಪ್ರಾಯವಾಗಿದೆ. 'ರಾಮ-ರಾವಣಯೋರ್ಯುದ್ಧಂ ರಾಮರಾವಣಯೋರಿವ' ಎಂದು ವಾಲ್ಮೀಕಿಗಳು ಹೇಳಿರುವಂತೆ ಇಲ್ಲಿ ವ್ಯಾಸರು ' ಭೀಮಸ್ತು ಭೀಮಸಂಕಾಶಃ ' ಎಂದು ಹೇಳಿದ್ದಾರೆ.

ಸಿಂಹವು ಕ್ಷುದ್ರಮೃಗವನ್ನು ಹಿಡಿಯಲು ಹೋಗುವಂತೆ–ಮಹಾವೀರನಾದ ಭೀಮಸೇನನು ತನ್ನ ಕಡೆಗೆ ಧಾವಿಸಿ ಬರುತ್ತಿದ್ದ ತ್ರಿಗರ್ತರಾಜನನ್ನು ಸೆರೆ ಹಿಡಿಯುವ ಸಲುವಾಗಿ ಅವನ ಕಡೆಗೆ ನುಗ್ಗಿದನು. ಮರುಕ್ಷಣದಲ್ಲಿಯೇ ಸುಶರ್ಮನ ಜುಟ್ಟು ಹಿಡಿದು ನಾಲ್ಕಾರು ಬಾರಿ ಸೆಳೆದಾಡಿ ಅವನನ್ನು ನೆಲದ ಮೇಲೆ ರಭಸದಿಂದ ಅಪ್ಪಳಿಸಿದನು. ಸುಶರ್ಮನು ನೆಲದ ಮೇಲೆ ಬಿದ್ದು ಯಾತನೆಯಿಂದ ಘೋರವಾದ ಧ್ವನಿಮಾಡುತ್ತಾ ವಿಲಪಿಸುತ್ತಿರಲಾಗಿ, ಭೀಮನು ಸುಶರ್ಮನ ತಲೆಯನ್ನು ಕಾಲಿನಿಂದ ಅಪ್ಪಳಿಸಿ ಅವನ ಬೆನ್ನ ಮೇಲೆ ಮಂಡಿಯೂರಿ ಕುಳಿತು ತನ್ನೆರಡು ಮುಷ್ಟಿಗಳಿಂದಲೂ ಸತತವಾಗಿ ಪ್ರಹರಿಸತೊಡಗಿದನು. ಭೀಮನ ಸತತವಾದ ಮುಷ್ಟಿಪ್ರಹಾರಗಳಿಂದ ಸುಶರ್ಮನು ಪ್ರಜ್ಞಾಹೀನನಾದನು. ಮಹಾರಥನಾದ, ತ್ರಿಗರ್ತಾಧಿಪತಿಯಾದ ಸುಶರ್ಮನು ರಥಹೀನನಾಗಿ ಭೀಮನಿಗೆ ಸೆರೆಸಿಕ್ಕಲಾಗಿ ತ್ರಿಗರ್ತಸೈನ್ಯವು ಅನಾಯಕತ್ವವಾಗಿ ದಿಕ್ಕಾಪಾಲಾಯಿತು. ಮಹಾರಥರಾದ, ಬಾಹುಬಲ ಸಂಪನ್ನರಾದ, ಲಜ್ಜಾಶೀಲರಾದ, ವ್ರತನಿಷ್ಠರಾದ, ಮಹಾತ್ಮರಾದ ವಿರಾಟನ ಕ್ಲೇಶನಾಶಕರಾದ ಪಾಂಡುಪುತ್ರರು, ಸುಶರ್ಮನನ್ನು ಪರಾಜಯಗೊಳಿಸಿ ಗೋವುಗಳನ್ನು ಬಿಡಿಸಿಕೊಂಡು ಸುಶರ್ಮನ ಅಧೀನದಲ್ಲಿದ್ದ ಅಪಾರವಾದ ಐಶ್ವರ್ಯವನ್ನೂ ಪಡೆದುಕೊಂಡವರಾಗಿ, ಒಂದೆಡೆಯಲ್ಲಿ ಸೇರಿ ಮುಂದೇನು ಮಾಡಬೇಕೆಂಬ ವಿಷಯವನ್ನು ಕುರಿತು ಪರ್ಯಾಲೋಚಿಸಿದ ನಂತರ, ಭೀಮನು ನಕುಲ-ಸಹದೇವರಿಗೆ ಹೇಳಿದನು : "ಪಾಪಕಾರ್ಯದಲ್ಲಿಯೇ ಆಸಕ್ತಿಯುಳ್ಳ ಈ ಸುಶರ್ಮನು ನನ್ನಿಂದ ತಪ್ಪಿಸಿಕೊಂಡು ಜೀವಿಸಿರಲು ಖಂಡಿತವಾಗಿಯೂ ಅರ್ಹನಾಗಿರುವುದಿಲ್ಲ. ಆದರೆ ನಾನೇನು ಮಾಡಲಿ? ನಮ್ಮಣ್ಣನು ಧರ್ಮಾತ್ಮನು. ಮಹಾದಯಾಳುವು. ಏನನ್ನು ಮಾಡಲೂ ಬಿಡುವುದಿಲ್ಲ. ನಮ್ಮ ಅಣ್ಣನ ಅನುಮತಿಯಿಲ್ಲದೇ ನಾವು ಇವನನ್ನೇನೂ ಮಾಡುವಂತಿಲ್ಲ"–ಎಂಬುದಾಗಿ ಹೇಳಿ ನೆಲದ ಮೇಲೆ ಪ್ರಜ್ಞಾಹೀನನಾಗಿ ಬಿದ್ದಿದ್ದ ಸುಶರ್ಮನ ಕುತ್ತಿಗೆಯನ್ನು ಹಿಡಿದೆತ್ತಿ ರಥದೊಳಕ್ಕೆ ಹಾಕಲು ಹೋದನು. ಸ್ವಲ್ಪ ಪ್ರಜ್ಞೆಯನ್ನು ಹೊಂದಿದ್ದ ಸುಶರ್ಮನು ಶತ್ರುವಿಗೆ ಸೆರೆಯಾಗಿಬಿಡುವೆನೆಂಬ ಸಂಕಟದಿಂದ ಚಡಪಡಿಸಿದನು. ಒಡನೆಯೇ ಭೀಮನು ಸುಶರ್ಮನನ್ನು ಹಗ್ಗದಿಂದ ಬಲವಾಗಿ ಬಂಧಿಸಿ, ಪುನಃ

ಸಂಜ್ಞಾಹೀನನಾದ ಮತ್ತು ಧೂಳಿನಿಂದ ಆವೃತನಾಗಿದ್ದ ಸುಶರ್ಮನನ್ನು ರಥದ ಮೇಲೆ ಹಾಕಿ ಯುದ್ಧಭೂಮಿಯ ಮಧ್ಯಭಾಗದಲ್ಲಿದ್ದ ಯುಧಿಷ್ಠಿರನ ಬಳಿಗೆ ಹೋಗಿ, ರಥದಿಂದಿಳಿದು ಅಣ್ಣನಿಗೆ ಸುಶರ್ಮನನ್ನು ತೋರಿಸಿದನು. ದಯಾಳುವಾದ, ಪುರುಷವ್ಯಾಘ್ರನಾದ ಯುಧಿಷ್ಠಿರನು–ಸುಶರ್ಮನಿದ್ದ ಸ್ಥಿತಿಯನ್ನು ಕಂಡು, ಯುದ್ಧಭೂಮಿಗೇ ಭೂಷಣಪ್ರಾಯನಾದ ಭೀಮಸೇನನನ್ನು ಕುರಿತು ನಸುನಗುತ್ತಾ ಹೇಳಿದನು : "ಮಹಾಬಾಹೋ! ಈ ನರಾಧಿಪತಿಯನ್ನು ಬಿಟ್ಟುಬಿಡು."

ಭೀಮಸೇನನು ಅಣ್ಣನು ಹೇಳಿದುದಕ್ಕೆ ಪ್ರತಿಹೇಳುವಂತೆಯೇ ಇರಲಿಲ್ಲ. ಆದರೂ ಸುಶರ್ಮನ ಮೇಲಿದ್ದ ಕೋಪದ ಅಳಲನ್ನು ತೀರಿಸಿಕೊಳ್ಳುವ ಸಲುವಾಗಿ ಮಹಾಬಲಿಷ್ಠನೆಂದು ಪ್ರಸಿದ್ಧನಾಗಿದ್ದ ತ್ರಿಗರ್ತರಾಜನನ್ನು ಕುರಿತು ಹೇಳಿದನು : "ಮೂಢನೇ! ನೀನೇನಾದರೂ ಜೀವಿಸಿರಲು ಇಚ್ಛಿಸುವೆಯಾದರೆ ಅದಕ್ಕೊಂದು ಉಪಾಯವಿದೆ. ಅದನ್ನು ಹೇಳುವೆನು ; ಕೇಳು. ಅನಂತರ ನಾನು ಹೇಳಿದಂತೆಯೇ ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಬೇಕು. ಹಾಗೆ ಮಾಡುವುದಾದರೆ ಮಾತ್ರವೇ ನಿನ್ನ ವಿಮೋಚನೆಯಾಗುವುದು. ನೀನು ಭಾಗವಹಿಸಲಿರುವ ಪಂಡಿತರ ಸಭೆಗಳಲ್ಲಿಯೇ ಆಗಲೀ, ರಾಜಸಭೆಗಳಲ್ಲಿಯೇ ಆಗಲೀ, ನಿನ್ನ ಪರಿಚಯಮಾಡಿಕೊಡುವಾಗ–'ನಾನು ವಿರಾಟನ ದಾಸ'–ಎಂದು ಹೇಳಿಕೊಳ್ಳಬೇಕು. ಹಾಗೆ ಹೇಳುವೆನೆಂದು ನೀನು ಒಪ್ಪಿಕೊಳ್ಳುವೆಯಾದರೆ ನಾನು ಈ ಮಹಾತ್ಮನ ಆಜ್ಞೆಯಂತೆ ನಿನ್ನನ್ನು ವಿಮೋಚನೆಗೊಳಿಸುವೆನು. ಸೋತವನ ಮೇಲೆ ಇಂತಹ ಕಟ್ಟಳೆಗಳನ್ನು ವಿಧಿಸುವುದು ಯುದ್ಧಧರ್ಮವೂ ಆಗಿರುವುದು."

ಭೀಮಸೇನನು ಹೇಳಿದ ಮಾತುಗಳನ್ನು ಕೇಳಿ ಯುಧಿಷ್ಠಿರನು ಪ್ರೇಮಪೂರ್ವಕವಾಗಿ ತನ್ನ ತಮ್ಮನನ್ನು ಕುರಿತು ಹೇಳಿದನು :

"ನನ್ನ ಮಾತನ್ನು ನೀನು ಗೌರವಿಸುವುದಾದರೆ ಅಧರ್ಮಾಚರಣೆಯುಳ್ಳ ಈ ದುರುಳನನ್ನು ಈ ಕೂಡಲೇ ಬಿಟ್ಟುಬಿಡು. ಅವನು ತಾನಾಗಿ ದಾಸನೆಂದು ಹೇಳಿಕೊಳ್ಳದಿದ್ದರೂ ನಾವಿವನನ್ನು ಸೆರೆಹಿಡಿದಿರುವುದರಿಂದಲೇ

ಇವನು ವಿರಾಟನ ದಾಸನಾಗಿದ್ದಾನೆ. ಆದುದರಿಂದ ತಡಮಾಡದೇ ಇವನ ಬಂಧನವನ್ನು ಬಿಚ್ಚಿ ಇವನನ್ನು ಬಿಟ್ಟುಬಿಡು.”



ಅಣ್ಣನು ಹೀಗೆಂದು ಹೇಳಿದೊಡನೆಯೇ ಭೀಮಸೇನನು ಸುಶರ್ಮನ ಬಂಧನವನ್ನು ಬಿಚ್ಚಿದನು. ಭೀತ-ಭೀತನಾಗಿ ವಿನಮ್ರಭಾವದಿಂದ ನಿಂತಿದ್ದ ಸುಶರ್ಮನನ್ನು ಕುರಿತು ಯುಧಿಷ್ಠಿರನು ಹೇಳಿದನು :

**ಅದಾಸೋ ಗಚ್ಛ ಮುಕ್ತೋಽಸಿ ಮೈವಂ ಕಾರ್ಷೀಃ ಕದಾಚನ ॥**

“ತ್ರಿಗರ್ತಾಧಿಪನೇ! ನೀನು ಯಾರೊಬ್ಬರಿಗೂ ದಾಸನಾಗಿರುವುದಿಲ್ಲ.

ನೀನು ಬಂಧನದಿಂದ ವಿಮುಕ್ತನಾಗಿರುವೆ. ಆದರೆ ಮುಂದೆ ಯಾವಾಗಲೂ ಇಂತಹ ಕೆಲಸವನ್ನು ಮಾಡಬೇಡ, ತಿಳಿಯಿತೇ?"

ಮೂವತ್ಮೂರನೆಯ ಅಧ್ಯಾಯವು ಮುಗಿಯಿತು.

೩೪ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ವಿರಾಟನಿಂದ ಪಾಂಡವರಿಗೆ ಸಮ್ಮಾನ : ನಗರದಲ್ಲಿ ವಿಜಯಘೋಷಣೆ

ಜನಮೇಜಯ! ಯುಧಿಷ್ಠಿರನು ಸುಶರ್ಮನಿಗೆ ಈ ರೀತಿ ಹೇಳಲಾಗಿ, ಸುಶರ್ಮನು ಬಹಳ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡೇ ವಿರಾಟ ರಾಜನ ಸಮೀಪಕ್ಕೆ ಬಂದು ಅವನಿಗೆ ಅಭಿವಾದನಮಾಡಿ, ಅವನ ಅನುಮತಿಯನ್ನು ಪಡೆದು ಹೊರಟುಹೋದನು. ಸುಶರ್ಮನನ್ನು ಬಂಧನ ದಿಂದ ವಿಮುಕ್ತಿಗೊಳಿಸಿದ ನಂತರ ಹತಶತ್ರುಗಳಾದ, ಸ್ವಬಾಹುಬಲಸಂಪನ್ನ ರಾದ, ವ್ರತನಿಷ್ಠರಾದ, ಲಜ್ಜಾಶೀಲರಾದ ಪಾಂಡವರು ಯುದ್ಧಭೂಮಿ ಯಲ್ಲಿಯೇ ಆ ರಾತ್ರಿಯನ್ನು ಸಂತೋಷದಿಂದ ಕಳೆದರು. ಬಳಿಕ ವಿರಾಟ ರಾಜನು ಅತಿಮಾನುಷವಾದ ಪರಾಕ್ರಮವನ್ನು ಪ್ರದರ್ಶಿಸಿದ ಕುಂತೀಪುತ್ರರಿಗೆ ಅಧಿಕವಾಗಿ ಸುವರ್ಣನಾಣ್ಯಗಳನ್ನು ಪಾರಿತೋಷಿಕವಾಗಿ ಕೊಟ್ಟು ಗೌರವಿಸಿ ಅವರನ್ನು ಕುರಿತು ಹೇಳಿದನು :

"ಪುರುಷವ್ಯಾಘ್ರರೇ! ನನ್ನಲ್ಲಿರುವ ಧನ-ಕನಕಾದಿ ವಸ್ತುಗಳೆಲ್ಲವೂ ತಮಗೂ ಸೇರಿದ್ದಾಗಿವೆ. ನಿಮಗಿಚ್ಛೆಬಂದ ರೀತಿಯಲ್ಲಿ ನೀವುಗಳು ನನ್ನ ಅರಮನೆಯಲ್ಲಿ ಸುಖದಿಂದಿರಬಹುದಾಗಿದೆ. ಎಂತಹ ಶತ್ರುಗಳನ್ನಾದರೂ ಪರಾಭವಗೊಳಿಸುವ ಸಾಮರ್ಥ್ಯವಿರುವ ನಿಮ್ಮ ಸೇವೆಗಾಗಿ ಸಾಲಂಕೃತರಾದ ಕನ್ಯೆಯರನ್ನು ಕಳುಹಿಸುತ್ತೇನೆ. ವಜ್ರ-ವೈಡೂರ್ಯಾದಿ ಐಶ್ವರ್ಯವನ್ನೂ ಕೊಡುತ್ತೇನೆ. ಹೆಚ್ಚೇನು ಹೇಳಲಿ? ನೀವು ಅಪೇಕ್ಷಿಸುವುದೆಲ್ಲವನ್ನೂ ಕೊಡು ತ್ತೇನೆ. ನಿಮ್ಮ ಪರಾಕ್ರಮದ ಬೆಂಬಲದಿಂದಲೇ ನಾನಿಂದು ಬಂಧನದಿಂದ ವಿಮುಕ್ತನಾಗಿ ಕುಶಲಿಯಾಗಿ ಹಿಂದಿರುಗಲು ಸಾಧ್ಯವಾಯಿತು. ಆದುದರಿಂದ ಈ ಮತ್ಸ್ಯದೇಶದ ಪ್ರಜೆಗಳಿಗೆ ನೀವು ಅಧಿಪತಿಗಳಾಗಿರುತ್ತೀರಿ."

ಜನಮೇಜಯ! ಹೀಗೆಂದು ಹೇಳಿದ ಮತ್ಸ್ಯರಾಜನನ್ನು ಯುಧಿಷ್ಠಿರ-ಭೀಮ-ನಕುಲ-ಸಹದೇವರು ಪ್ರತ್ಯೇಕ-ಪ್ರತ್ಯೇಕವಾಗಿ ಬದ್ಧಾಂಜಲಿಗಳಾಗಿ ನಮಿಸಿ ಹೇಳಿದರು :

"ಮಹಾರಾಜ! ನೀನು ಹೇಳಿದ ಈ ಮಾತುಗಳಿಂದಲೇ ನಾವು ಸುಪ್ರೀತರಾಗಿದ್ದೇವೆ. ನೀನು ನಮ್ಮನ್ನು ಗೌರವಿಸಿದುದಕ್ಕಿಂತಲೂ ಹೆಚ್ಚು ಆನಂದವು ನೀನು ಶತ್ರುಗಳ ಬಂಧನದಿಂದ ವಿಮುಕ್ತನಾದುದರಿಂದಲೇ ನಮಗುಂಟಾಗಿರುವುದು. (ನೀನು ಶತ್ರುಗಳಿಂದ ವಿಮುಕ್ತನಾಗಿರುವುದು ನಮಗೆ ಅಪಾರವಾದ ಸಂತೋಷವನ್ನುಂಟುಮಾಡಿದೆ. ನಮಗೆ ಇನ್ನೇನೂ ಬೇಕಾಗಿಲ್ಲ.)"

ಪಾಂಡವರ ಮಾತನ್ನು ಕೇಳಿ ವಿರಾಟನಿಗೆ ಅಪಾರವಾದ ಸಂತೋಷವಾಯಿತು. ಸುಪ್ರೀತನಾದ, ಮಹಾಬಾಹುವಾದ ಮತ್ಸ್ಯರಾಜನು ಯುಧಿಷ್ಠಿರನನ್ನು ಕುರಿತು ಪುನಃ ಹೇಳಿದನು :

"ಕಂಕ! ನೀನೀಗಲೇ ನನ್ನ ಹಿಂದೆ ಬಂದುಬಿಡು. ಮತ್ಸ್ಯರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಕಟ್ಟುತ್ತೇನೆ. ಮತ್ಸ್ಯದೇಶದ ಪ್ರಜೆಗಳಿಗೆ ಇನ್ನು ಮುಂದೆ ನೀನೇ ರಾಜನಾಗು. ನಿನಗೆ ಕೊಡಬಾರದೆಂಬ ವಸ್ತುವೇ ಈ ಪ್ರಪಂಚದಲ್ಲಿರುವುದಿಲ್ಲ. ಬ್ರಾಹ್ಮಣೋತ್ತಮ! ನಿನ್ನ ಮನಸ್ಸಿಗೆ ಬೇಕಾಗುವ ವಸ್ತುವು ದುರ್ಲಭವೇ ಆಗಿದ್ದರೂ ನಾನದನ್ನು ನಿನಗೆ ತಂದುಕೊಡುತ್ತೇನೆ. ನೀನು ನನ್ನಿಂದ ರಾಜ್ಯ-ಕೋಶಾದಿ ಸರ್ವಸಂಪತ್ತನ್ನೂ ಪಡೆಯಲು ಅರ್ಹನಾಗಿರುವೆ. ವ್ಯಾಘ್ರಪಾದಗೋತ್ರದಲ್ಲಿ ಹುಟ್ಟಿರುವ ವಿಪ್ರೇಂದ್ರನೇ! ನಿನಗೆ ಹೇರಳವಾದ ರತ್ನಗಳು, ಹಸುಗಳು, ಸುವರ್ಣನಾಣ್ಯಗಳು, ಮಣಿ-ಮುತ್ತುಗಳು–ಎಲ್ಲವನ್ನೂ ಸಮರ್ಪಿಸಿ ಎಲ್ಲ ಪ್ರಕಾರಗಳಿಂದಲೂ ನಿನ್ನನ್ನು ನಮಸ್ಕರಿಸುತ್ತೇನೆ.

ಬ್ರಾಹ್ಮಣೋತ್ತಮ! ನೀನು ಮಾಡಿರುವ ಉಪಕಾರವನ್ನು ನಾನು ಎಷ್ಟು ಹೇಳಿದರೂ ಸಾಲದು. ನಿಮ್ಮ ಸಾಹಸದಿಂದಲ್ಲವೇ ನಾನಿಂದು ನನ್ನ ಪತ್ನೀ-ಪುತ್ರರನ್ನೂ, ರಾಜಧಾನಿಯನ್ನೂ ಪುನಃ ನೋಡಲು ಸಾಧ್ಯವಾಗಿದೆ. ನಾನು ಶತ್ರುಗಳ ವಶನಾದ ನಂತರ ಎಲ್ಲ ಆಸೆಗಳನ್ನೂ ತೊರೆದೇ ಬಿಟ್ಟಿದ್ದೆನು.

ಬಹಳ ಭೀತನಾಗಿದ್ದೆನು. ನಿಮ್ಮ ಬೆಂಬಲದಿಂದಾಗಿ ನಾನು ಶತ್ರುಬಂಧನದಿಂದ ವಿಮುಕ್ತನಾದೆನು."

ಮತ್ಸ್ಯರಾಜನ ಮಾತುಗಳನ್ನು ಕೇಳಿ ಯುಧಿಷ್ಠಿರನು ಮತ್ಸ್ಯರಾಜನನ್ನು ಕುರಿತು ಹೇಳಿದನು :

"ಮತ್ಸ್ಯರಾಜ! ನಿನ್ನ ಪ್ರಶಂಸೆಯ ಮಾತುಗಳಿಗಾಗಿ ನಾನು ನಿನ್ನನ್ನು ಅಭಿನಂದಿಸುತ್ತೇನೆ. ನೀನಾಡುವ ಮಾತುಗಳು ಮನೋಜ್ಞವಾಗಿವೆ. ನೀನು ಯಾವಾಗಲೂ ದಯಾಪರನಾಗಿದ್ದುಕೊಂಡು ಸತತವಾಗಿ ಸುಖದಿಂದಿರು– 'ಸುಸುಖೀ ಸತತಂ ಭವ'. ಕೂಡಲೇ ದೂತರು ನಗರಕ್ಕೆ ಹೋಗಿ ಅಲ್ಲಿರುವ ನಮ್ಮ ಸುಹೃದರಿಗೆ ನಾವು ವಿಜಯಿಗಳಾಗಿರುವ ಶುಭವಾರ್ತೆಯನ್ನು ತಿಳಿಸಲಿ. ನಗರದಲ್ಲೆಲ್ಲಾ ನಿನ್ನ ವಿಜಯವನ್ನು ರಾಜಭಟರು ಘೋಷಿಸಲಿ."

ಜನಮೇಜಯ! ಯುಧಿಷ್ಠಿರನ ಮಾತಿನಂತೆ ವಿರಾಟನು ರಾಜಭಟರಿಗೆ ಹೀಗೆಂದು ಆಜ್ಞೆಮಾಡಿ ಅವರನ್ನು ರಾಜಧಾನಿಗೆ ಕಳುಹಿಸಿಕೊಟ್ಟನು.

"ನೀವೀಗಲೇ ರಾಜಧಾನಿಗೆ ಹೋಗಿ ನಮ್ಮ ವಿಜಯವಾರ್ತೆಯನ್ನು ಶ್ರುತಪಡಿಸಿರಿ. ನಮ್ಮನ್ನು ಸ್ವಾಗತಿಸುವ ಸಲುವಾಗಿ ಪಟ್ಟಣದಲ್ಲಿರುವ ಕುಮಾರಿಯರು ಸಾಲಂಕೃತರಾಗಿ ಮಂಗಳದ್ರವ್ಯಗಳೊಡನೆ ಪಟ್ಟಣದಿಂದ ಹೊರಬರಲಿ. ಮಂಗಳವಾದ್ಯಗಳು ಮೊಳಗಲಿ. ಸಾಲಂಕೃತರಾದ ವೇಶ್ಯೆಯರು ಗೀತ-ವಾದ್ಯಗಳೊಡನೆ ನರ್ತನಮಾಡಲಿ."

ಮತ್ಸ್ಯರಾಜನ ಈ ಆಜ್ಞೆಯನ್ನು ರಾಜಭಟರು ಶಿರಸಾವಹಿಸಿ ಸೂರ್ಯೋದಯದ ಸಮಯಕ್ಕೆ ಸರಿಯಾಗಿ ರಾಜಧಾನಿಯನ್ನು ತಲುಪಿ, ನಗರದ ಮಹಾದ್ವಾರದಲ್ಲಿ ನಿಂತು ಜಯಘೋಷಮಾಡಿದರು.

ಮೂವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

## ಕೌರವರಿಂದ ಉತ್ತರದಿಕ್ಕಿನಲ್ಲಿದ್ದ ಗೋವುಗಳ ಅಪಹರಣ : ಗೋಪಾಧ್ಯಕ್ಷನು ಉತ್ತರಕುಮಾರನನ್ನು ಯುದ್ಧಕ್ಕೆ ಹೋಗಲು ಪ್ರೋತ್ಸಾಹಿಸಿದುದು

ಜನಮೇಜಯ! ವಿರಾಟನು ಸೈನ್ಯಸಮೇತನಾಗಿ ತ್ರಿಗರ್ತರೊಡನೆ ಯುದ್ಧಮಾಡಲು ಹೋಗಿದ್ದ ಸಮಯದಲ್ಲಿ ಪೂರ್ವಕೃತಯೋಜನೆಯಂತೆ ದುರ್ಯೋಧನನು ಮಂತ್ರಿಗಳೊಡನೆ ದೊಡ್ಡದೊಂದು ಸೈನ್ಯವನ್ನು ತೆಗೆದು ಕೊಂಡು ಬಂದು ವಿರಾಟನ ರಾಜಧಾನಿಯ ಉತ್ತರಭಾಗದಲ್ಲಿದ್ದ ಗೋವು ಗಳನ್ನು ಆಕ್ರಮಣಮಾಡಿದನು. ಭೀಷ್ಮ, ದ್ರೋಣ, ಕರ್ಣ, ಕೃಪ, ಅಶ್ವತ್ಥಾಮಾ, ಶಕುನಿ, ದುಃಶಾಸನ, ವಿವಿಂಶತಿ, ವಿಕರ್ಣ, ಚಿತ್ರಸೇನ, ದುರ್ಮುಖ, ದುಃಶಲ–ಇವರೇ ಮೊದಲಾದ ಮಹಾಯೋಧರು ದುರ್ಯೋಧನನೊಡನೆ ಬಂದಿದ್ದರು. ಅತಿರಥ-ಮಹಾರಥರು ಸೈನ್ಯಸಮೇತರಾಗಿ ಬಂದು ವಿರಾಟರಾಜನ ಗೋಪಾಲಕರನ್ನು ಓಡಿಸಿ ಅವನ ಅರುವತ್ತುಸಾವಿರ ಗೋವುಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಯದ್ಯಪಿ ಗೋಪಾಲಕರು ಪ್ರತಿಭಟಿಸಿದರೂ ಅವರಿಗೆ ಆ ಮಹಾಸೈನ್ಯದ ಮುಂದೆ ಹೆಚ್ಚು ಹೊತ್ತು ನಿಲ್ಲಲಾಗಲಿಲ್ಲ. ಗೋಪಾಲಕರ ಕಡೆಯಲ್ಲಿ ಸಾವು-ನೋವುಗಳು ಹೆಚ್ಚಾದುವು. ಎಲ್ಲೆಲ್ಲಿಯೂ ಗೋಪಾಲಕರ ರೋದನಧ್ವನಿಗಳೇ ಕೇಳಿಸುತ್ತಿದ್ದಿತು. ಮುಂದೆ ಪ್ರತಿಭಟಿಸುವುದರಿಂದ ಹೆಚ್ಚಿನ ಪ್ರಯೋಜನವಾಗಲಾರದೆಂದು ಭಾವಿಸಿದ ಗೋಪಾಧ್ಯಕ್ಷನು ರಥದಲ್ಲಿ ಕುಳಿತು ಅಳುತ್ತಳುತ್ತಲೇ ರಾಜಧಾನಿಗೆ ಧಾವಿಸಿದನು. ಪಟ್ಟಣವನ್ನು ಪ್ರವೇಶಿಸಿ, ಅರಮನೆಯನ್ನು ಹೊಕ್ಕು ಮಹಾಮಾನಿಷ್ಠನಾದ ಭೂಮಿಂಜಯನೆಂಬ (ಉತ್ತರಕುಮಾರನೆಂಬ) ವಿರಾಟನ ಪುತ್ರನನ್ನು ಸಂಧಿಸಿ ರಾಷ್ಟ್ರಕ್ಕೆ ಉಂಟಾಗಿರುವ ವಿಪತ್ತನ್ನೂ, ಗೋವುಗಳ ಅಪಹರಣವನ್ನೂ ವಿವರಿಸಿ ಹೇಳಿದನು :

“ರಾಷ್ಟ್ರವರ್ಧನನೇ! ಕೌರವರಾಜಕುಮಾರರು ಸಸೈನ್ಯರಾಗಿ ಬಂದು ನಮ್ಮ ಅರುವತ್ತು ಸಾವಿರ ಗೋವುಗಳನ್ನೂ ಬಲಾತ್ಕಾರವಾಗಿ ಸೆಳೆದು ಕೊಂಡು ಹೋಗುತ್ತಿದ್ದಾರೆ. ನಮ್ಮ ಗೋಧನವನ್ನು ಬಿಡಿಸಿಕೊಳ್ಳಲು

ಒಡನೆಯೇ ದಯಮಾಡಿಸು, ರಾಜಪುತ್ರ! ನಿನಗೂ ಮತ್ತು ನಿನ್ನ ರಾಷ್ಟ್ರಕ್ಕೂ ಹಿತವನ್ನುಂಟುಮಾಡುವ ಸಲುವಾಗಿ ಈಗಲೇ ನೀನು ಯುದ್ಧಸನ್ನದ್ಧನಾಗಿ ಹೊರಡಬೇಕು. ಸಾವಕಾಶಕ್ಕೀಗ ಸಮಯವಿಲ್ಲ. ಈ ಸಮಯದಲ್ಲಿ ನಾವು



ಸ್ವಲ್ಪ ಅಜಾಗರೂಕತೆಯಿಂದ ವರ್ತಿಸಿದರೂ ನಮ್ಮ ಅಪಾರವಾದ ಗೋಧನವು ನಷ್ಟವಾಗುವುದು ಮಾತ್ರವಲ್ಲದೇ–ಮತ್ಸ್ಯಸಿಂಹಾಸನದ ಗೌರವಕ್ಕೂ ಧಕ್ಕೆಯುಂಟಾಗುವುದು. ಮತ್ಸ್ಯರಾಜನು ತಾನಿಲ್ಲದ ವೇಳೆಯಲ್ಲಿ ರಕ್ಷಕರಿಂದ ಶೂನ್ಯವಾಗುವ ಈ ರಾಜಧಾನಿಗೆ ನಿನ್ನನ್ನೇ ರಕ್ಷಕನನ್ನಾಗಿ ನಿಯಮಿಸಿದ್ದಾನೆ. ಅವನು ನಿನಗೆ ತಾತ್ಕಾಲಿಕವಾದ ರಕ್ಷಣಾಭಾರವನ್ನು ವಹಿಸಿಕೊಡುವಾಗ

ಸಭ್ಯರ ಮಧ್ಯದಲ್ಲಿ ನಿನ್ನ ವಿಷಯವಾಗಿ ಅವನಾಡುತ್ತಿದ್ದ ಮಾತುಗಳು ಸ್ಮರಣೆಯಲ್ಲಿದೆಯಲ್ಲವೇ? 'ನನ್ನ ಪುತ್ರನು ಪರಾಕ್ರಮದಲ್ಲಿ ನನಗೆ ಅನುರೂಪನಾಗಿದ್ದಾನೆ. ಇವನು ಮಹಾಶೂರನು. ವಂಶಗೌರವವನ್ನು ಕಾಪಾಡುವ ಸಾಮರ್ಥ್ಯವನ್ನು ಹೊಂದಿದ್ದಾನೆ. ಇಷ್ವಸ್ತ್ರಗಳ ಪ್ರಯೋಗದಲ್ಲಿ ಮಹಾನಿಪುಣನು. ಒಳ್ಳೆಯ ಯೋಧನು. ಇವನ ಪರಾಕ್ರಮಕ್ಕೆ ಎಲ್ಲೆಯೇ ಇಲ್ಲ. ಸ್ವಲ್ಪವೂ ಆಯಾಸಗೊಳ್ಳದೇ ಸತತವಾಗಿ ಯುದ್ಧಮಾಡುವ ಸಾಮರ್ಥ್ಯವು ಇವನಲ್ಲಿದೆ'–ಎಂಬುದಾಗಿ ನಿನ್ನನ್ನು ಶ್ಲಾಘಿಸಿದನು. ಮನುಷ್ಯೇಂದ್ರನಾದ ವಿರಾಟನು ಅಂದು ನಿನ್ನ ವಿಷಯವಾಗಿ ಹೇಳಿದ ಮಾತುಗಳು ಸತ್ಯವಾಗಿ ಪರಿಣಮಿಸಲಿ, ರಾಜಕುಮಾರ! ನೀನೀಗಲೇ ಯುದ್ಧಸನ್ನದ್ಧನಾಗಿ ಭಯಂಕರವಾದ ನಿನ್ನ ಬಾಣಗಳ ಜ್ವಾಲೆಗಳಿಂದಲೇ ಕೌರವಸೈನ್ಯವನ್ನು ಭಸ್ಮೀಭೂತವನ್ನಾಗಿ ಮಾಡಿ ಅವರುಗಳನ್ನು ಗೆದ್ದು ಹಸುಗಳನ್ನು ಹಿಂದಿರುಗಿಸುವವನಾಗು. ಮದಿಸಿದ ಸಲಗವೊಂದು ತನ್ನ ಎದುರಾಗಿ ಬರುವ ಆನೆಗಳ ಗುಂಪಿನ ಮೇಲೆ ರಭಸದಿಂದ ನುಗ್ಗಿಹೋಗುವಂತೆ–ಶತ್ರುಸೈನ್ಯದೊಳಗೆ ನೀನು ನುಗ್ಗಿಹೋಗಿ ಸುವರ್ಣಮಯವಾದ ರೆಕ್ಕೆಗಳಿರುವ ನಿನ್ನ ತೀಕ್ಷ್ಣವಾದ ಬಾಣಗಳನ್ನು ಧನುಸ್ಸಿನ ಶಿಂಜಿನಿಗೆ ಯೋಜಿಸಿ ಸೆಳೆದು ಪುಂಖಾನುಪುಂಖವಾಗಿ ಬಿಡುತ್ತಾ ಶತ್ರುಸೈನ್ಯವನ್ನು ತುಂಡು-ತುಂಡಾಗಿ ಕತ್ತರಿಸು. ರಾಜಕುಮಾರ! ನಿನ್ನ ಧನುಸ್ಸಾದರೋ ಸಾಕ್ಷಾತ್ ವೀಣೆಯಂತೆಯೇ ಇದೆ. ವೀಣೆಯಲ್ಲಿ ತಂತಿಯಿರುವಂತೆ ನಿನ್ನ ಧನುಸ್ಸಿನಲ್ಲಿ ಶಿಂಜಿನಿಯಿದೆ. ವೀಣೆಯು ಧ್ವನಿಮಾಡುವಂತೆ ಹೆದೆಯೇರಿಸಿದ ನಿನ್ನ ಧನುಸ್ಸು ಮಹತ್ತರವಾದ ಧ್ವನಿಯನ್ನುಂಟುಮಾಡುತ್ತದೆ. ವೀಣಾದಂಡದಿಂದ ಹೊರಬರುವ ವರ್ಣಗಳಂತೆ (ಸ್ವರಪ್ರಸ್ತಾರಗಳಂತೆ) ನಿನ್ನ ಧನುಸ್ಸಿನಿಂದ ಬಾಣಗಳು ಸೊಯ್ಯನೆ ಹೊರಬರುತ್ತವೆ. ಇಂತಹ ವೀಣಾದಂಡದಂತಿರುವ ಧನುಸ್ಸನ್ನು ನೀನು ಧರಿಸಿದವನಾಗಿ ಶತ್ರುಸೈನ್ಯವನ್ನು ಪ್ರವೇಶಿಸಿ ಧನುಷ್ಟೇಂಕಾರಮಾಡುತ್ತಾ ಶಿಂಜಿನಿಯನ್ನು ಸೆಳೆದು ಅನುಸ್ಯೂತವಾಗಿ ಶತ್ರುಸೈನ್ಯದ ಮೇಲೆ ಬಾಣಗಳನ್ನು ಪ್ರಯೋಗಿಸು.

ಬೆಳ್ಳಿಯ ಬಣ್ಣದಂತಹ ಬಿಳಿಯ ಕುದುರೆಗಳು ನಿನ್ನ ರಥಕ್ಕೆ ಈಗಲೇ ಕಟ್ಟಲ್ಪಡಲಿ. ಸ್ವರ್ಣಮಯವಾದ ಸಿಂಹಧ್ವಜವು ಆ ನಿನ್ನ ರಥದ ಮೇಲೆ

ಹಾರಾಡಲಿ. ಶತ್ರುಮಧ್ಯದಲ್ಲಿ ನಿನ್ನಿಂದ ವಿಮುಕ್ತವಾದ ಸ್ವರ್ಣಪುಂಖಗಳುಳ್ಳ ಬಾಣಗಳು ಶತ್ರುಗಳ ಮಾರ್ಗವನ್ನು ನಿರೋಧಿಸಲಿ. ನಿನ್ನ ಅಗಣಿತವಾದ ಬಾಣಗಳು ಸೂರ್ಯನನ್ನೇ ಮುಚ್ಚಿ ಕತ್ತಲೆಯು ಕವಿದು ಶತ್ರುಪಕ್ಷದವರು ಮುಂದಿನ ಹಾದಿಯನ್ನೇ ಕಾಣದಂತಾಗಲಿ. ರಾಜಕುಮಾರ! ಇಂದ್ರನು ಅಸುರರನ್ನು ಜಯಿಸಿದಂತೆ–ನೀನಿಂದು ಕುರುರಾಜರನ್ನು ನಿನ್ನ ಭುಜಬಲ-ಪರಾಕ್ರಮಗಳಿಂದ ಗೆದ್ದು ಮಹತ್ತರವಾದ ಯಶಸ್ಸನ್ನು ಗಳಿಸಿ, ಸಕಲವಿಧವಾದ ರಾಜಮರ್ಯಾದೆಗಳೊಡನೆ ಈ ಪಟ್ಟಣವನ್ನು ಪುನಃ ಪ್ರವೇಶಿಸು. ರಾಜಕುಮಾರ! ವಿಜಯಿಗಳಲ್ಲಿ ಶ್ರೇಷ್ಠನಾದ ಅರ್ಜುನನು ಪಾಂಡವರಿಗೆ ಶರಣ್ಯನಾಗಿರುವಂತೆ–ವಿರಾಟರಾಜನ ಪುತ್ರನಾದ ನೀನಿಂದು ಈ ರಾಷ್ಟ್ರಕ್ಕೆ ಶರಣ್ಯನಾಗಿರುವೆ. ಅರ್ಜುನನು ತನ್ನ ಸಹೋದರರೆಲ್ಲರಿಗೂ ಏಕಮಾತ್ರ ಆಶಾಕಿರಣವಾಗಿರುವಂತೆ–ನೀನಿಂದು ಈ ದೇಶದಲ್ಲಿ ವಾಸಮಾಡುತ್ತಿರುವ ಪ್ರಜೆಗಳೆಲ್ಲರಿಗೂ ಆಶಾಕಿರಣವಾಗಿ ಉಳಿದಿರುವೆ. ಪ್ರಜೆಗಳೆಲ್ಲರೂ ಈ ಸಂದಿಗ್ಧ ಸಮಯದಲ್ಲಿ ನಿನ್ನನ್ನೇ ರಕ್ಷಕನೆಂದು ನಂಬಿ ಕುಳಿತಿದ್ದಾರೆ. ನಾವೆಲ್ಲರೂ ನಿನ್ನನ್ನು ನಮ್ಮ ಸಂರಕ್ಷಕನೆಂದು ದೃಢವಾಗಿ ನಂಬಿಬಿಟ್ಟಿದ್ದೇವೆ."

ಜನಮೇಜಯ! ಗೋಪಾಧ್ಯಕ್ಷನು ರಾಜಕುಮಾರನಿಗೆ ಈ ರೀತಿ ಹೇಳುತ್ತಿದ್ದಾಗ ರಾಜಕುಮಾರನ ಸುತ್ತಲೂ ಅಂತಃಪುರದ ಸ್ತ್ರೀಯರು ನಿಂತು ಎಲ್ಲವನ್ನೂ ಕೇಳುತ್ತಿದ್ದರು. ಸ್ತ್ರೀಯರೆದುರಿನಲ್ಲಿ ಸಾಮಾನ್ಯವಾಗಿ ಗಂಡಸರು ಆತ್ಮಪ್ರಶಂಸೆ ಮಾಡಿಕೊಳ್ಳುವುದು ಸ್ವಾಭಾವಿಕ. ಅಂತೆಯೇ ರಾಜಕುಮಾರನೂ ತನ್ನನ್ನೇ ತಾನು ಶ್ಲಾಘನೆಮಾಡಿಕೊಳ್ಳುತ್ತಾ ಗೋಪಾಧ್ಯಕ್ಷನನ್ನು ಕುರಿತು ಹೇಳತೊಡಗಿದನು.

ಇಟನೆಯ ಅಧ್ಯಾಯವು ಮುಗಿಯಿತು.

## ಉತ್ತರನ ಪೌರುಷ : ಬೃಹನ್ನಳೆಯನ್ನು ಸಾರಥಿಯನ್ನಾಗಿ ನಿಯಮಿಸಿಕೊಳ್ಳುವಂತೆ ದ್ರೌಪದಿಯು ಉತ್ತರನನ್ನು ಪ್ರಚೋದಿಸಿದುದು

ಉತ್ತರನು ಹೇಳುತ್ತಾನೆ :

"ಶತ್ರುಗಳು ನಮ್ಮ ಗೋವುಗಳನ್ನು ಆಕ್ರಮಣಮಾಡಿರುವುದನ್ನು ನಾನೆಂದಿಗೂ ಸಹಿಸಲಾರೆನು! ನಾನೀಗಲೇ ಧನುಷ್ಪಾಣಿಯಾಗಿ ಹಸುಗಳಿರುವೆಡೆಗೆ ಹೊರಟುಬಿಡುತ್ತೇನೆ. ಆದರೆ ನನ್ನ ವಿಜಯಯಾತ್ರೆಗೆ ಒಂದೇ ಒಂದು ಕೊರತೆಯಿದೆ. ಅಶ್ವವಿದ್ಯಾತಜ್ಞನಾದ ಒಬ್ಬ ಸಾರಥಿಯು ನನಗೆ ಬೇಕಾಗಿದೆ. ಒಬ್ಬ ಸಾರಥಿಯು ಸಿಕ್ಕಿಬಿಟ್ಟನೆಂದರೆ ನಾನಿಲ್ಲಿ ಕ್ಷಣಮಾತ್ರವೂ ನಿಲ್ಲುವುದಿಲ್ಲ. ಆದರೆ ರಥದಲ್ಲಿ ಕುಳ್ಳಿರಿಸಿಕೊಂಡು ನನ್ನನ್ನು ಯುದ್ಧಭೂಮಿಗೊಯ್ಯುವ ಬಹುಸಮರ್ಥನಾದ ಮನುಷ್ಯನು ಯಾರಿದ್ದಾರೆಂಬುದನ್ನು ನಾನು ತಿಳಿಯದವನಾಗಿದ್ದೇನೆ. ಯುದ್ಧಕ್ಕೆ ಹೊರಡಲು ಸಿದ್ಧನಾಗಿರುವ ನನಗೆ ನಿಪುಣನಾದ ಸಾರಥಿಯನ್ನು ಯಾರಾದರೂ ಹೋಗಿ ಎಲ್ಲಿಂದಾದರೂ ಕರೆತನ್ನಿರಿ. ಈ ಹಿಂದೆ ನನಗೆ ಅನುರೂಪನಾದ, ಬಹುವಿಚಕ್ಷಣನಾದ ಸಾರಥಿಯೊಬ್ಬನಿದ್ದನು. ಹಿಂದೊಮ್ಮೆ ನಾನು ಆ ಸಾರಥಿಯೊಡನೆ ಶತ್ರುಗಳೊಡನೆ ಯುದ್ಧ ಮಾಡಲು ಹೋಗಿದ್ದೆನು. ಅದು ಪರಮಾದ್ಭುತವಾದ ಯುದ್ಧ. ಇಪ್ಪತ್ತೆಂಟು ರಾತ್ರಿಗಳ (ಕೊಂಚ ಯೋಚಿಸಿ ) ಇಲ್ಲ ; ಇಲ್ಲ ; ಒಂದು ತಿಂಗಳ ಪರ್ಯಂತವಾಗಿ ಹಗಲಿರುಳೆನ್ನದೇ ಶತ್ರುಗಳೊಡನೆ ನಾನು ಘೋರಯುದ್ಧವನ್ನು ಮಾಡಿದೆನು. ಆದರೆ ಕಟ್ಟಕಡೆಗೆ ಅದೇ ಯುದ್ಧದಲ್ಲಿ ನನ್ನ ಅಚ್ಚುಮೆಚ್ಚಿನ ಸಾರಥಿಯು ಸತ್ತುಹೋದನು. ಅಲ್ಲಿಂದ ಮುಂದೆ ನನಗೆ ಸರಿಯಾದ ಸಾರಥಿಯೇ ಸಿಕ್ಕಿಲ್ಲ. ಈಗ ನಾನು ಯುದ್ಧಸನ್ನದ್ಧನಾಗಿದ್ದೇನೆ. ಆದರೆ ಸಾರಥಿಯಿಲ್ಲ. ಏನು ಮಾಡಲಿ? ಅಶ್ವನಯನದಲ್ಲಿ ಪರಿಣತನಾದ ಒಬ್ಬ ಸಾರಥಿಯು ಸಿಕ್ಕಿದೊಡನೆಯೇ ಹೊರಟುಬಿಡುತ್ತೇನೆ. ಅವಸರದಿಂದ ಹೊರಟುಬಿಡುತ್ತೇನೆ. ನಮ್ಮ ಗೋವುಗಳನ್ನು ಶತ್ರುಗಳು ಆಕ್ರಮಣ ಮಾಡಿದರೆಂದು ಕೇಳಿದನಂತರ ಒಂದು ಕ್ಷಣವೂ ನನಗೆ ಇಲ್ಲಿ ನಿಲ್ಲಲು ಮನಸ್ಸಿಲ್ಲ. ಗೋವುಗಳ ವಿಮೋಚನೆಗಾಗಿ ನನ್ನ ಮನಸ್ಸು ತವಕಿಸುತ್ತಿದೆ.

ಆದರೇನು ಮಾಡಲಿ? ಸಾರಥಿಯು ಸಿಕ್ಕಿದನೆಂದರೆ ಈ ಕೂಡಲೇ ರಥದ ಮೇಲೆ ಬಾವುಟವನ್ನು ಹಾರಿಸಿಕೊಂಡು ಹೊರಟೇಬಿಡುತ್ತೇನೆ. ಆನೆ, ಕುದುರೆ, ರಥ, ಪದಾತಿಸೈನ್ಯಗಳಿಂದ ಪರಿಪೂರ್ಣವಾಗಿರುವ ಶತ್ರುಗಳ ಮಧ್ಯೆ ನುಗ್ಗಿ, ಶಸ್ತ್ರನೈಪುಣ್ಯದಲ್ಲಿಯೂ, ಪ್ರತಾಪದಲ್ಲಿಯೂ ಬಹಳ ಕೀಳುಮಟ್ಟದವ ರಾದ ಆ ಕುರುಕುಲದರಸರನ್ನು ಕ್ಷಣಮಾತ್ರದಲ್ಲಿ ಪರಾಜಯಗೊಳಿಸಿ ಹಸು ಗಳನ್ನು ವಿಮೋಚನೆಗೊಳಿಸುತ್ತೇನೆ. ಇದೇನು ನನಗೆ ಮಹತ್ತರವಾದ ಕಾರ್ಯವಲ್ಲ! ಆದರೆ ಸಾರಥಿಯೊಬ್ಬನು ಅವಶ್ಯವಾಗಿ ಬೇಕಾಗಿದೆ. ನನ್ನ ಅತುಲಪರಾಕ್ರಮವನ್ನು ಬಹುಶಃ ದುರ್ಬಲರಾದ ಆ ಕುರುಯೋಧರು ತಿಳಿದಿರಲಾರರು. ಇಂದ್ರನು ದಾನವರನ್ನು ತನ್ನ ವಜ್ರಾಯುಧದಿಂದ ಕತ್ತರಿಸಿ ಹಾಕುತ್ತಿದ್ದಂತೆ–ನಾನು ಆ ಕುರುಪ್ರಮುಖರಾದ, ಮಹಾಧನುರ್ಧಾರಿಗಳೆಂದು ಹೆಸರು ಪಡೆದಿರುವ ದುರ್ಯೋಧನ, ಶಾಂತನವ, ಸೂತಪುತ್ರನಾದ ಕರ್ಣ, ಕೃಪ, ದ್ರೋಣ, ಅವನ ಮಗ ಅಶ್ವತ್ಥಾಮಾ–ಇವರುಗಳೆಲ್ಲರನ್ನೂ ಏಕಾಕಿ ಯಾಗಿ ಎದುರಿಸಿ ನನ್ನ ಧನುಸ್ಸಿನಿಂದ ಹೊರಹೊಮ್ಮುವ ಅನುಸ್ಯೂತವಾದ ಮತ್ತು ಬಹುತೀಕ್ಷ್ಣವಾದ ಬಾಣಗಳಿಂದ ಅವರುಗಳನ್ನು ತ್ರಾಸಗೊಳಿಸಿ ಭಯದಿಂದ ಪಲಾಯನಮಾಡುವಂತೆ ಮಾಡಿಬಿಡುತ್ತೇನೆ. ಅವರೆಲ್ಲರನ್ನೂ ಪರಾಜಯಗೊಳಿಸಲು ನನಗೆ ಹೆಚ್ಚು ಕಾಲವೂ ಬೇಕಾಗಿಲ್ಲ. ಒಂದು ಮುಹೂರ್ತಮಾತ್ರದಲ್ಲಿ ಎಲ್ಲರನ್ನೂ ಪರಾಜಯಗೊಳಿಸಿ ನಮ್ಮ ಹಸು ಗಳನ್ನು ಕರೆತರುತ್ತೇನೆ. ಆದರೇನು ಮಾಡಲಿ? ನನಗೆ ಇದೇ ಸಮಯ ದಲ್ಲಿಯೇ ಸಾರಥಿಯು ಇಲ್ಲದಿರಬೇಕೇ? ಯಾವಾಗ ನನ್ನಂತಹ ಮಹಾ ವೀರನು ಅವರನ್ನು ಎದುರಿಸಿ ನಿಲ್ಲಲಿಲ್ಲವೋ ಅವರನ್ನು ತಡೆಯುವವರು ಮತ್ತಾರಿದ್ದಾರೆ? ನಿರ್ಭಯವಾಗಿ ಹಸುಗಳನ್ನು ತಮ್ಮ ರಾಜ್ಯದ ಕಡೆಗೆ ಹೊಡೆದುಕೊಂಡು ಹೋಗುತ್ತಿದ್ದಾರೆಂಬ ವಿಷಯವನ್ನು ನೆನೆದೊಡನೆಯೇ ನನ್ನ ಮನಸ್ಸು ಅವರನ್ನೀಗಲೇ ಕತ್ತರಿಸಿಬಿಡಬೇಕೆಂದು ಹೇಳುತ್ತಿದೆ. ಅವರು ಇಲ್ಲಿಯೇ ನನ್ನೆದುರಾಗಿ ಸಿಕ್ಕಿಬಿಟ್ಟಿದ್ದರೆ........ಏನು ಮಾಡಲಿ? ನಾನಿಲ್ಲಿದ್ದೇನೆ– ಅವರಲ್ಲಿದ್ದಾರೆ. ನಾನಲ್ಲಿಗೆ ಸಾರಥಿಯಿಲ್ಲದೇ–ಅಶ್ವನಯನದಲ್ಲಿ ನಿಷ್ಣಾತನಾದ ಸಾರಥಿಯಿಲ್ಲದೇ–ಹೋಗುವಂತಿಲ್ಲ. ನಿಶ್ಚಯವಾಗಿಯೂ ನಾನು ಈ ಸಮಯದಲ್ಲಿ ಅಲ್ಲಿದ್ದರೆ ನನ್ನ ಬಾಣಗಳ ಸವಿಯೇನೆಂಬುದನ್ನು ಅವರಿಗೆ

ತೋರಿಸುತ್ತಿದ್ದೆನು. ಅಲ್ಲಿಗೆ ಆಗಮಿಸುವ ಕುರುಪ್ರಮುಖರು ನನ್ನ ಅತುಲ ಪರಾಕ್ರಮವೆಷ್ಟೆಂಬುದನ್ನು ಕಂಡುಕೊಳ್ಳುತ್ತಿದ್ದರು. ನನ್ನ ಶರವರ್ಷದ ನೈಪುಣ್ಯವನ್ನು ಪ್ರತ್ಯಕ್ಷವಾಗಿ ನೋಡಿದ ಅವರಿಗೆ ಅರ್ಜುನನ ಸ್ಮರಣೆಯುಂಟಾಗುತ್ತಿದ್ದುದರಲ್ಲಿ ಸಂಶಯವೇ ಇಲ್ಲ.

**ಕಿಂ ನ ಪಾರ್ಥೋಽರ್ಜುನಃ ಸಾಕ್ಷಾದಯಮಸ್ಮಾನ್ಪ್ರಬಾಧತೇ ॥**

'ಇದೇನು? ಅರ್ಜುನನೇ ಸಾಕ್ಷಾತ್ತಾಗಿ ನಮ್ಮೆದುರಾಗಿ ನಿಂತು ಯುದ್ಧ ಮಾಡುತ್ತಾ ನಮ್ಮನ್ನು ಬಾಧೆಪಡಿಸುತ್ತಿರುವನೇ? ಇವನ ಕೈಚಳಕವನ್ನು ನೋಡಿದರೆ ಹಾಗೆಯೇ ಭಾಸವಾಗುತ್ತಿದೆಯಲ್ಲವೇ?'–ಎಂಬುದಾಗಿ ಕುರುಪ್ರಮುಖರು ಮೂಗಿನ ಮೇಲೆ ಬೆರಳಿಟ್ಟು ಪರಸ್ಪರವಾಗಿ ಮಾತನಾಡಿಕೊಳ್ಳುವಂತೆ ಮಾಡಿಬಿಡುತ್ತಿದ್ದೆನು. ಆದರೇನು ಮಾಡಲಿ? ರಣಧೀರನಾದ ನನ್ನನ್ನು ಅಲ್ಲಿಗೊಯ್ಯಲು ನುರಿತ ಸಾರಥಿಯೊಬ್ಬನಿಲ್ಲವಾಗಿದೆ."

ಜನಮೇಜಯ! ಉತ್ತರನು ಹೇಳಿದ ಮಾತುಗಳೆಲ್ಲವನ್ನೂ ಕೇಳಿ ಸರ್ವಾಸ್ತ್ರಕೋವಿದನಾದ ಅರ್ಜುನನು ಸ್ವಲ್ಪಹೊತ್ತು ಯೋಚಿಸಿ–ತನ್ನ ಪ್ರಿಯಭಾರ್ಯೆಯಾದ, ಅನಿಂದಿತೆಯಾದ, ದ್ರುಪದಪುತ್ರಿಯಾದ, ಲತಾಂಗಿಯಾದ, ಪಾವಕಾತ್ಮಜಳಾದ, ಸತ್ಯ ಮತ್ತು ಋಜುಗಳಿಂದ ಪರಿಶೋಭಿತಳಾದ, ಪತಿಗಳ ಹಿತದಲ್ಲಿಯೇ ಸರ್ವದಾ ಆಸಕ್ತಳಾದ ಪಾಂಚಾಲಿಯನ್ನು ರಹಸ್ಯದಲ್ಲಿ ಕಂಡು ಹೇಳಿದನು : "ಕೃಷ್ಣೆ! ಈ ಉತ್ತರರಾಜಕುಮಾರನು ಯುದ್ಧಕ್ಕಾಗಿ ಸಾರಥಿಯೊಬ್ಬನಿಲ್ಲವೆಂದು ಚಡಪಡಿಸುತ್ತಿದ್ದಾನೆ. ಆದುದರಿಂದ ನಾನು ಹೇಳಲಿರುವ ಈ ಮಾತುಗಳನ್ನು ಈ ಕೂಡಲೇ ಅವನ ಬಳಿಗೆ ಹೋಗಿ ಹೇಳು :

**ಅಯಂ ವೈ ಪಾಣ್ಡವಸ್ಯಾಸೀತ್ಸಾರಥಿಃ ಸಮ್ಮತೋ ದೃಢಃ ।**
**ಮಹಾಯುದ್ಧೇಷು ಸಂಸಿದ್ಧಃ ಸ ತೇ ಯನ್ತಾ ಭವಿಷ್ಯತಿ ॥೧೩॥**

'ಉತ್ತರಕುಮಾರ! ನಿನ್ನ ಅರಮನೆಯಲ್ಲಿ ಹೆಣ್ಣುಮಕ್ಕಳಿಗೆ ನಾಟ್ಯ-ಗಾಯನಗಳನ್ನು ಹೇಳಿಕೊಡುತ್ತಿರುವ ಬೃಹನ್ನಳೆಯನ್ನು ನಾನು ಚೆನ್ನಾಗಿ ಬಲ್ಲೆನು. ಅವನು ಈ ಹಿಂದೆ ಅರ್ಜುನನಿಗೆ ಬಹುಸಮ್ಮತನಾದ (ಪ್ರಿಯನಾದ ) ಮತ್ತು ನಿಷ್ಠಾವಂತನಾದ ಸಾರಥಿಯಾಗಿದ್ದನು. ಅವನು ಅನೇಕ

ಮಹಾಯುದ್ಧಗಳಲ್ಲಿಯೂ ಅರ್ಜುನನ ಸಾರಥ್ಯವನ್ನು ಮಾಡಿ ಅವನಿಗೆ ವಿಜಯಸಿದ್ಧಿಯನ್ನು ಮಾಡಿಕೊಟ್ಟಿರುವನು. ಅವನು ಇಂದು ನಿನ್ನ ಸಾರಥಿಯಾದರೂ ಆಗಬಹುದು.'–ಹೀಗೆಂದು ಹೇಳಿ ಉತ್ತರನು ನನ್ನನ್ನು ಸಾರಥಿಯನ್ನಾಗಿ ಮಾಡಿಕೊಳ್ಳುವಂತೆ ಪ್ರಚೋದಿಸು, ಪಾಂಚಾಲಿ!"

ಜನಮೇಜಯ! ಪಾಂಚಾಲಿಯು–'ಹಾಗೆಯೇ ಆಗಲಿ'–ಎಂದು ತಲೆಯನ್ನಲ್ಲಾಡಿಸಿ ಪತಿಯ ಕಡೆಗೊಮ್ಮೆ ಮಂದಹಾಸವನ್ನು ಬೀರಿ, ಉತ್ತರನ ಸುತ್ತಲೂ ನಿಂತಿದ್ದ, ಅವನು ಪೌರುಷಕೊಚ್ಚಿಕೊಳ್ಳುವುದನ್ನು ಬಾಯಿಬಿಟ್ಟುಕೊಂಡು ಕೇಳುತ್ತಿದ್ದ ಅಂತಃಪುರದ ಸ್ತ್ರೀಯರೊಡನೆ ಸೇರಿಕೊಂಡಳು. ಉತ್ತರನ ಪ್ರತಾಪಕ್ಕೆ ತಡೆಯೆಂಬುದೇ ಇರಲಿಲ್ಲ. ಪುನಃ ಪುನಃ ಉತ್ತರಕುಮಾರನು ಹೇಳಿದುದನ್ನೇ ಹೇಳುತ್ತಿದ್ದನು. ತಾನು ಅರ್ಜುನನಿಗೆ ಸಮನಾದ ಧನುರ್ಧರನೆಂದು ಬಾರಿ-ಬಾರಿಗೂ ಕೊಚ್ಚಿಕೊಳ್ಳುತ್ತಿದ್ದನು. ಸುತ್ತಲೂ ಇದ್ದ ಸ್ತ್ರೀಯರೆಲ್ಲರೂ ಆ ವೀರಕುಮಾರನಿಗೆ ಸಾರಥಿಯನ್ನು ಒದಗಿಸಿಕೊಡುವುದರ ವಿಷಯವಾಗಿ ತಮ್ಮ-ತಮ್ಮಲ್ಲಿಯೇ ಪಿಸುಮಾತುಗಳನ್ನಾಡಿಕೊಳ್ಳುತ್ತಿದ್ದರು. ಉತ್ತರನಿಗೆ ಸಾಮಾನ್ಯನಾದ ಸಾರಥಿಯು ಸಿಕ್ಕಿದರೆ ಪ್ರಯೋಜನವಿಲ್ಲ. ಅಶ್ವನಯನದಲ್ಲಿ ಬಹಳ ನಿಷ್ಣಾತನಾದ ಸಾರಥಿಯೇ ಸಿಕ್ಕಬೇಕಲ್ಲವೇ? ಎಲ್ಲಿಂದ ಹುಡುಕಿತರುವುದು? ಅಂತಃಪುರದ ಸ್ತ್ರೀಯರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಳ್ಳುವುದರಲ್ಲಿ ಪರ್ಯವಸಾನವಾಯಿತೇ ಹೊರತು ಸಮಸ್ಯೆ ಮಾತ್ರ ಪರಿಹಾರವಾಗಲಿಲ್ಲ. ಉತ್ತರನು ಪ್ರತಿಯೊಂದು ಮಾತಿಗೂ ಅರ್ಜುನನೊಡನೆ ತನ್ನನ್ನು ಹೋಲಿಸಿಕೊಳ್ಳುತ್ತಿದ್ದುದನ್ನು ಕೇಳಿ ಪಾಂಚಾಲಿಯು ಸಹಿಸಲಿಲ್ಲ. ಸೈರಂಧ್ರಿಯು ಸ್ತ್ರೀಸಹಜವಾದ ನಾಚಿಕೆಯನ್ನು ತೋರ್ಪಡಿಸುತ್ತಾ ಸ್ತ್ರೀಯರ ಮಧ್ಯದಿಂದ ಹೊರಬಂದು ಉತ್ತರಕುಮಾರನ ಸಮೀಪದಲ್ಲಿ ನಿಂತು ಮೆಲ್ಲ-ಮೆಲ್ಲನೆ ಈ ಮಾತುಗಳನ್ನು ಹೇಳಿದಳು :

**ಯೋಽಸೌ ಬೃಹದ್ವಾರಣಾಭೋ ಯುವಾ ಸುಪ್ರಿಯದರ್ಶನಃ ।**
**ಬೃಹನ್ನಲೇತಿ ವಿಖ್ಯಾತಃ ಪಾರ್ಥಸ್ಯಾಸೀತ್ಸ ಸಾರಥಿಃ ॥೧೬॥**

**ಧನುಷ್ಯನವರಶ್ಚಾಸೀತ್ತಸ್ಯ ಶಿಷ್ಯೋ ಮಹಾತ್ಮನಃ ।**
**ದೃಷ್ಟಪೂರ್ವೋ ಮಯಾ ವೀರ ಚರನ್ತ್ಯಾ ಪಾಣ್ಡವಾನ್ಪ್ರತಿ ॥೧೭॥**

**ಯದಾ ತತ್ಪಾವಕೋ ದಾವಮದಹತ್ಖಾಣ್ಡವಂ ಮಹತ್ ।**
**ಅರ್ಜುನಸ್ಯ ತದಾನೇನ ಸಂಗೃಹೀತಾ ಹಯೋತ್ತಮಾಃ ॥೧೮॥**

**ತೇನ ಸಾರಥಿನಾ ಪಾರ್ಥಃ ಸರ್ವಭೂತಾನಿ ಸರ್ವಶಃ ।**
**ಅಜಯತ್ಖಾಣ್ಡವಪ್ರಸ್ಥೇ ನ ಹಿ ಯನ್ತಾಸ್ತಿ ತಾದೃಶಃ ॥೧೯॥**

"ರಾಜಕುಮಾರ! ನೀನು ಸಾರಥಿಯೊಬ್ಬನಿಗಾಗಿ ಕಾತರಪಡುತ್ತಿರುವುದನ್ನು ನೋಡಿ ನನಗೆ ಹಿಂದಿನ ಸ್ಮರಣೆಯುಂಟಾಗಿದೆ. ನಿನ್ನ ಅರಮನೆಯಲ್ಲಿಯೇ ಗಜರಾಜನಿಗೆ ಸಮಾನನಾಗಿ ಹೃಷ್ಟನಾಗಿಯೂ–ಪುಷ್ಟನಾಗಿಯೂ ಇರುವ, ಯುವಕನಾದ, ಪ್ರಿಯದರ್ಶನನಾದ 'ಬೃಹನ್ನಳಾ' ಎಂಬುವವನಿದ್ದಾನೆ. ಅವನು ಮಹಾತ್ಮನಾದ ಪಾರ್ಥನ ಶಿಷ್ಯನೂ ಆಗಿದ್ದುದರಿಂದ ಧನುರ್ವಿದ್ಯೆಯಲ್ಲಿಯೂ ಪಾರ್ಥನಿಗೆ ಕಡಿಮೆಯಿಲ್ಲ. ಬಹುನಿಷ್ಣಾತನಾಗಿಯೇ ಇದ್ದಾನೆ. ನಾನು ಹಿಂದೆ ಸೈರಂಧ್ರಿಯಾಗಿ ಪಾಂಡವರ ಧರ್ಮಪತ್ನಿಯಾದ ದ್ರೌಪದಿಯ ಬಳಿಗೆ ಹೋಗಿ-ಬಂದು ಮಾಡುತ್ತಿದ್ದಾಗ ಅವನನ್ನು ನಾನು ಪ್ರತ್ಯಕ್ಷವಾಗಿ ಅಲ್ಲಿ ಕಂಡಿದ್ದೆ. ಅವನ ಸಾರಥ್ಯದ ಕೌಶಲ್ಯವನ್ನು ಅಡಿಗಡಿಗೂ ಕೇಳಿ ತಿಳಿದುಕೊಳ್ಳುತ್ತಿದ್ದೆನು. ನನಗೆ ತಿಳಿದಂತೆ ಅವನು ಅರ್ಜುನನಿಗೆ ಸಾರಥ್ಯಮಾಡಿದ ಒಂದೆರಡು ನಿದರ್ಶನಗಳನ್ನು ಹೇಳುವೆನು ; ಕೇಳು, ರಾಜಕುಮಾರ! ಖಾಂಡವವನವನ್ನು ಅಗ್ನಿಯು ತನ್ನ ಅಪರಿಮಿತವಾದ ಜ್ವಾಲೆಗಳಿಂದ ಭಕ್ಷಿಸುತ್ತಿದ್ದ ಕಾಲದಲ್ಲಿ ಮಹಾನುಭಾವನಾದ ಈ ಬೃಹನ್ನಳನೇ ಅರ್ಜುನನ ರಥದ ಕುದುರೆಗಳ ಕಡಿವಾಣಗಳನ್ನು ಹಿಡಿದು ಸಾರಥ್ಯವನ್ನು ಮಾಡುತ್ತಿದ್ದನು. ಇವನ ಸಾರಥ್ಯದಲ್ಲಿಯೇ ಅರ್ಜುನನು ಖಾಂಡವಪ್ರಸ್ಥದಲ್ಲಿದ್ದ ಸರ್ವಭೂತಗಳನ್ನೂ ಜಯಿಸಿದನು. ಕುಮಾರ! ನನಗೆ ತಿಳಿದಿರುವಂತೆ ಇವನಿಗಿಂತಲೂ ಮಿಗಿಲಾದ ಬೇರೊಬ್ಬ ಸಾರಥಿಯೇ ಸಿಗಲಾರನು."

"ಸೈರಂಧ್ರಿ! ಬೃಹನ್ನಳೆಯು ಅಂತಹ ವೀರಯುವಕನೇ? ಹಾಗೆಂದು ನೀನು ಭಾವಿಸುವೆಯಾ? ಅವನು ನಪುಂಸಕನಲ್ಲವೇ? ಅವನಲ್ಲಿ ಅರ್ಜುನನಿಗೆ ಸಾರಥ್ಯಮಾಡುವ ಪೌರುಷವಿದ್ದುದಾದರೆ ಅವನು ಖಂಡಿತವಾಗಿಯೂ ನಪುಂಸಕನಾಗಿರಲಾರನು. ಯದ್ಯಪಿ ಅವನು ನಪುಂಸಕನಾಗಿರಲಿ–ಆಗದಿರಲಿ–

ನಾನು ಮಾತ್ರ ನನ್ನ ರಥದ ಸಾರಥ್ಯವನ್ನು ವಹಿಸಿಕೊಳ್ಳುವಂತೆ ನೇರವಾಗಿ ಅವನಿಗೆ ಹೇಳಲಾರೆನು. (ನಾನು ನಪುಂಸಕರೊಡನೆ ಮಾತನಾಡುವುದಿಲ್ಲ.) ಕುದುರೆಗಳನ್ನು ತಂದು ನನ್ನ ರಥಕ್ಕೆ ಹೂಡುವಂತೆ ಹೇಳಲು ನನ್ನಿಂದ ಖಂಡಿತವಾಗಿಯೂ ಸಾಧ್ಯವಾಗಲಾರದು."

"ಅದಕ್ಕೇಕಿಷ್ಟೊಂದು ಸಂಕೋಚಪಡುವೆ? ಕುಮಾರ! ನೀನು ನೇರವಾಗಿ ಬೃಹನ್ನಳೆಯನ್ನು ಕರೆದು ಹೇಳಲಾಗದಿದ್ದರೆ–ಸುಂದರವಾದ ಕಟಿಪ್ರದೇಶದಿಂದ ಕೂಡಿರುವ ನಿನ್ನ ತಂಗಿಯನ್ನೇ ಅವನಲ್ಲಿಗೆ ಕಳುಹಿಸಿಕೊಡು. ಅವಳು ಹೇಳಿದರೂ ಬೃಹನ್ನಳನು ಒಪ್ಪಿ ನಿನ್ನ ರಥದ ಸಾರಥ್ಯವನ್ನು ವಹಿಸುತ್ತಾನೆ. ಇದರಲ್ಲಿ ನನಗಾವ ಸಂಶಯವೂ ಇಲ್ಲ. ಅವನೇನಾದರೂ ನಿನಗೆ ಸಾರಥಿಯಾಗಿಬಿಟ್ಟರೆ ಕುರುಯೋಧರನ್ನು ಜಯಿಸಿ ಹಸುಗಳನ್ನು ಹೊಡೆದುಕೊಂಡು ನಗರಕ್ಕೆ ಹಿಂದಿರುಗುವುದರಲ್ಲಿ ಸಂದೇಹಿಸಲೇ ಬೇಕಾಗಿಲ್ಲ. ನಿಶ್ಚಯವಾಗಿಯೂ ಈ ಕಾರ್ಯವು ಸಿದ್ಧಿಸುವುದು."

ಸೈರಂಧ್ರಿಯ ಮಾತಿಗೆ ಸಮ್ಮತಿಸಿದ ಉತ್ತರಕುಮಾರನು ತನ್ನ ತಂಗಿಯಾದ ಉತ್ತರೆಯನ್ನು ಕರೆದು ಹೇಳಿದನು : " ತಂಗೀ! ನೀನೀಗಲೇ ಹೋಗಿ ನಿನ್ನ ಗುರುವಾದ ಬೃಹನ್ನಳೆಯನ್ನು ಕರೆದುಕೊಂಡು ಬಾ."

ಹೀಗೆ ಅಣ್ಣನಿಂದ ಪ್ರೇಷಿತಳಾದ ಉತ್ತರೆಯು, ಮಹಾಬಾಹುವಾದ ಅರ್ಜುನನು ತನ್ನ ವೇಷವನ್ನು ಮರೆಸಿಕೊಂಡು ಯಾವ ನರ್ತನಾಗಾರದಲ್ಲಿದ್ದನೋ–ಅಲ್ಲಿಗೆ ಬಹುಶೀಘ್ರವಾಗಿ ತೆರಳಿದಳು.

೩೬ನೆಯ ಅಧ್ಯಾಯವು ಮುಗಿಯಿತು.

## ಸಾರಥ್ಯಕ್ಕೆ ಬೃಹನ್ನಳೆಯ ಅಂಗೀಕಾರ : ಉತ್ತರಕುಮಾರನು ಯುದ್ಧಕ್ಕೆ ಹೊರಟುದು

ಜನಮೇಜಯ! ಉತ್ತರೆಗೆ ಅಣ್ಣನ ವಿಷಯದಲ್ಲಿ ವಿಶೇಷವಾದ ಅಭಿಮಾನವಿತ್ತು. ಅಂತೆಯೇ ತನಗೆ ಪಾಠ ಹೇಳಿಕೊಡುತ್ತಿದ್ದ ಬೃಹನ್ನಳೆಯ ವಿಷಯದಲ್ಲಿಯೂ ಹೆಚ್ಚಿನ ಗೌರವವಿತ್ತು. ಅಣ್ಣನು ಹೇಳಿದ ಮಾತುಗಳನ್ನು ಕೇಳಿದೊಡನೆಯೇ ಕಾಂಚನಮಾಲೆಯನ್ನು ಧರಿಸಿದ್ದ, ಯಶಸ್ವಿನಿಯಾದ, ಸರ್ವಸುಲಕ್ಷಣಸಂಪನ್ನೆಯಾದ, ಪದ್ಮಪತ್ರಾಭಳಾದ, ಲಕ್ಷ್ಮಿಗೆ ಅನುರೂಪವಾದ ಕಾಂತಿಯಿಂದ ಕೂಡಿದ್ದ, ನವಿಲುಗರಿಗಳಿಂದ ಮುಡಿಯನ್ನು ಅಲಂಕರಿಸಿಕೊಂಡಿದ್ದ, ಕೃಶಾಂಗಿಯಾದ, ಶುಭಾಂಗಿಯಾದ, ಚಿತ್ರ-ವಿಚಿತ್ರವಾದ ನವರತ್ನಗಳಿಂದ ಮಾಡಿದ್ದ ಒಡ್ಯಾಣವನ್ನು ಧರಿಸಿದ್ದ, ಡೊಂಕಾದ ಹುಬ್ಬುಗಳಿಂದ ಕೂಡಿದ್ದ, ಮತ್ಸ್ಯರಾಜಕುಮಾರಿಯಾದ ಉತ್ತರೆಯು–ರಾತ್ರಿಯಲ್ಲಿ ಮಿಂಚೊಂದು ಕಾರ್ಮುಗಿಲನ್ನು ಪ್ರವೇಶಿಸುವಂತೆ–ನರ್ತನಾಗಾರಕ್ಕೆ ಹೋದಳು. ಜನಮೇಜಯ! ಉತ್ತರೆಯ ಸೌಂದರ್ಯವು ಅನುಪಮವಾಗಿತ್ತು. ಅವಳ ತೊಡೆಗಳು ಆನೆಯ ಸೊಂಡಿಲಿನಂತಿದ್ದು ಒಂದಕ್ಕೊಂದು ಮಸೆಯುತ್ತಿದ್ದುವು. ಅವಳ ಅಂಗಗಳಲ್ಲಿ ಯಾವ ವಿಧವಾದ ನ್ಯೂನತೆಯೂ ಇರಲಿಲ್ಲ. ಅನಿಂದಿತೆಯಾಗಿದ್ದಳು. ಅವಳಿಗೆ ಬೆಳದಿಂಗಳ ಕಾಂತಿಯನ್ನು ಹೊರಹೊಮ್ಮುತ್ತಿದ್ದ ದಂತಪಂಕ್ತಿಗಳಿದ್ದುವು. ಶೋಭಾಯಮಾನವಾದ ನಡುವಿನಿಂದ ಕೂಡಿದ್ದಳು. ಮದಿಸಿದ ಗಂಡಾನೆಯ ಬಳಿಗೆ ಹೆಣ್ಣಾನೆಯು ಹೋಗುವಂತೆ–ವರವರ್ಣಿನಿಯಾದ ಉತ್ತರೆಯು ಸುವಾಸಿತವಾದ ಪುಷ್ಪಮಾಲೆಯನ್ನು ಧರಿಸಿ ಬೃಹನ್ನಳೆಯ ಸಮೀಪಕ್ಕೆ ಹೋದಳು. ಜನಮೇಜಯ! ನಿಶ್ಚಯವಾಗಿಯೂ ಉತ್ತರೆಯು ವಿರಾಟರಾಜನ ಅರಮನೆಯಲ್ಲಿ ರತ್ನಪ್ರಾಯಳಾಗಿದ್ದಳು. ಎಲ್ಲರಿಗೂ ಬಹುಪ್ರಿಯಳಾಗಿದ್ದಳು. ಇಂದ್ರಭವನದಲ್ಲಿ ಲಕ್ಷ್ಮಿಯು ಸಮ್ಮಾನಿತಳಾಗುತ್ತಿದ್ದಂತೆ–ವಿರಾಟರಾಜನ ಅರಮನೆಯಲ್ಲಿ ಅವನ ಮಗಳಾದ ಉತ್ತರೆಯು ಸರ್ವರಿಂದಲೂ

ಸಮ್ಮಾನಿತಳಾಗಿದ್ದಳು. ವಿಶಾಲನೇತ್ರೆಯಾದ ಅವಳನ್ನು ನೋಡುತ್ತಿದ್ದರೆ ನೋಡುತ್ತಿರುವವರ ಕಣ್ಣುಗಳಿಗೆ ತೃಪ್ತಿಯೆಂಬುದೇ ಇರುತ್ತಿರಲಿಲ್ಲ. ಅಷ್ಟು ಸುದರ್ಶನೀಯಳಾಗಿದ್ದಳು. ಅಂತಹ ವರವರ್ಣಿನಿಯಾದ, ಯಶಸ್ವಿನಿಯಾದ



ಉತ್ತರೆಯು ಅರ್ಜುನನ ಬಳಿಗೆ ಬಂದು ಪ್ರೀತಿಯುಕ್ತವಾದ ಮಾತುಗಳಿಂದ ಅರ್ಜುನನನ್ನು ಅಭಿನಂದಿಸಿದಳು. ಸುಸಂಹತವಾದ ತೊಡೆಗಳನ್ನು ಹೊಂದಿದ್ದ, ಸುವರ್ಣದಂತೆ ಥಳ-ಥಳನೆ ಹೊಳೆಯುತ್ತಿದ್ದ ಶರೀರಕಾಂತಿಯನ್ನು ಹೊಂದಿದ್ದ ರಾಜಕುಮಾರಿಯನ್ನು ಅರ್ಜುನನು ಪ್ರಶ್ನಿಸಿದನು :

"ಹೇಮಮಾಲಿನಿ! (ಸುವರ್ಣಮಯವಾದ ಮಾಲೆಯನ್ನು ಧರಿಸಿರು

ವವಳೇ!) ಜಿಂಕೆಯ ಕಣ್ಣುಗಳಂತೆ ಅತಿಚಂಚಲವಾದ ಕಣ್ಣುಗಳುಳ್ಳವಳೇ! ನೀನು ಇಲ್ಲಿಗೆ ಬಂದುದರ ಕಾರಣವೇನು? ನೀನಿಲ್ಲಿಗೆ ಅವಸರದ ಕಾರ್ಯ ನಿಮಿತ್ತವಾಗಿಯೇ ಬಂದಿರುವಂತೆ ಕಾಣುತ್ತಿದೆ. ನಿನ್ನ ಮುಖವು ಸ್ವಲ್ಪ ಮ್ಲಾನಿಹೊಂದಿರುವಂತೆ ತೋರುತ್ತದೆ. ವರಾಂಗನೇ! ನೀನು ಬಂದಿರುವ ಕಾರಣವನ್ನು ಶೀಘ್ರವಾಗಿ ತಿಳಿಸು."

ಜನಮೇಜಯ! ಬೃಹನ್ನಳೆಯು ಉತ್ತರೆಯನ್ನು ತನ್ನ ಸಖಿಯನ್ನಾಗಿ ಮಾಡಿಕೊಂಡಿದ್ದಳು. ವಿಶಾಲಾಕ್ಷಿಯಾದ, ರಾಜಪುತ್ರಿಯಾದ, ಎಲ್ಲಕ್ಕಿಂತಲೂ ಮಿಗಿಲಾಗಿ ತನ್ನ ಸಖಿಯಾದ ಉತ್ತರೆಯ ಮುಖಭಾವದಿಂದಲೇ ಅವಳು ಗಾಬರಿಗೊಂಡು ಬಂದಿರುವಳೆಂಬುದನ್ನು ಊಹಿಸಿದ ಬೃಹನ್ನಳೆಯು ನಸು ನಗುತ್ತಲೇ ಅವಳ ಆಗಮನಕ್ಕೆ ಕಾರಣವನ್ನು ಕೇಳಿದಳು. ರಾಜಪುತ್ರಿಯಾದ ಉತ್ತರೆಯು ಸಖೀಜನರಿಂದ ಪರಿವೃತಳಾಗಿದ್ದ ಬೃಹನ್ನಳೆಯ ವಿಷಯದಲ್ಲಿ ಹೆಚ್ಚಿನ ಪ್ರಣಯವನ್ನು ತೋರುತ್ತಾ ಈ ಮಾತುಗಳನ್ನು ಹೇಳಿದಳು :

"ಬೃಹನ್ನಳೇ! ನಮ್ಮ ರಾಜ್ಯದ ಗೋಧನವನ್ನು ಕುರುಯೋಧರು ಕೊಳ್ಳೆಹೊಡೆದುಕೊಂಡು ಹೋಗುತ್ತಿದ್ದಾರೆ. ಕುರುಯೋಧರನ್ನು ಗೆದ್ದು ಹಸುಗಳನ್ನು ಬಿಡಿಸಿಕೊಂಡು ಬರಲು ನಮ್ಮಣ್ಣನಾದ ಉತ್ತರಕುಮಾರನು ಧನುಷ್ಪಾಣಿಯಾಗಿ ಯುದ್ಧಕ್ಕೆ ಹೊರಟುನಿಂತುಬಿಟ್ಟಿದ್ದಾನೆ. ಆದರೆ ಸ್ವಲ್ಪ ದಿನಗಳ ಹಿಂದೆ ನಮ್ಮಣ್ಣನ ಸಾರಥಿಯು ಯುದ್ಧವೊಂದರಲ್ಲಿ ಸತ್ತುಹೋದನು. ನಮ್ಮಣ್ಣನ ರಥವನ್ನು ನಡೆಸಲು ಅಥವಾ ನಮ್ಮ ಅಣ್ಣನನ್ನು ರಣರಂಗಕ್ಕೆ ಒಯ್ಯಲು ಸತ್ತುಹೋದ ಸಾರಥಿಗೆ ಸರಿಸಮನಾದ ಸಾರಥಿಯು ನಮ್ಮಣ್ಣನಿಗೆ ಇದುವರೆಗೂ ಸಿಕ್ಕಿರುವುದಿಲ್ಲ. ಹೊಸಬನೊಬ್ಬ ಸಾರಥಿಯು ಬೇಕೆಂದು ನಮ್ಮಣ್ಣನು ಉದ್ಘೋಷಿಸಿದನು. ಬಹುವಾಗಿ ಪ್ರಯತ್ನಿಸಿದನು. ಆ ಸಮಯದಲ್ಲಿ ಸೈರಂಧ್ರಿಯು ನಮ್ಮಣ್ಣನ ಸಮೀಪಕ್ಕೆ ಬಂದು ಅಶ್ವನಯನ ದಲ್ಲಿ ನೀನು ಬಹಳ ಚತುರೆಯಾಗಿರುವೆಯೆಂದೂ, ಈ ಹಿಂದೆ ನೀನು ಸುಪ್ರ ಸಿದ್ಧನಾದ ಅರ್ಜುನನ ಸಾರಥಿಯಾಗಿದ್ದೆಯೆಂದೂ, ನಿನ್ನಲ್ಲಿ ಅರ್ಜುನನು ಬಹಳ ಪ್ರೀತಿಯನ್ನಿಟ್ಟಿದ್ದನೆಂದೂ ಹೇಳಿದಳು. ನಿನ್ನ ಸಾರಥ್ಯದ ಸಹಾಯ ದಿಂದಲೇ ಅರ್ಜುನನು ಈ ಅಖಂಡಭೂಮಂಡಲವನ್ನೂ ಗೆದ್ದನಂತೆ. ಈ ವಿಷಯವನ್ನು ಅವಳೇ ನಮ್ಮಣ್ಣನೊಡನೆ ಹೇಳಿದಳು. ಬೃಹನ್ನಳೇ! ಈ

ಸಮಯದಲ್ಲಿ ನೀನು ನಮ್ಮಣ್ಣನಿಗೆ ಸಾರಥ್ಯವನ್ನು ಮಾಡು. ಈ ವೇಳೆಗಾಗಲೇ ಕುರುಯೋಧರು ನಮ್ಮ ಹಸುಗಳನ್ನು ಬಹಳ ದೂರದವರೆಗೆ ಹೊಡೆದುಕೊಂಡು ಹೋಗಿಬಿಟ್ಟಿದ್ದಾರೆ. ಸಾವಕಾಶಮಾಡಲಿದು ಸಮಯ ವಲ್ಲ. ಆದುದರಿಂದ ನೀನೀಗ ನನ್ನ ಮಾತಿನಂತೆ ನಮ್ಮಣ್ಣನ ಸಾರಥ್ಯವನ್ನು ವಹಿಸಲು ಒಪ್ಪಿಕೊಳ್ಳಲೇಬೇಕು. ನಾನು ನಿನ್ನ ಮೇಲಿಟ್ಟಿರುವ ಪ್ರೀತಿಯ ಕಾರಣದಿಂದಾಗಿ ನಿನ್ನನ್ನು ಈ ಕಾರ್ಯಕ್ಕೆ ಒತ್ತಾಯಿಸುತ್ತಿದ್ದೇನೆ. ನೀನೇ ನಾದರೂ ನನ್ನ ಮಾತಿಗೊಪ್ಪದಿದ್ದರೆ–ಈ ಸಂದಿಗ್ಧ ಸಮಯದಲ್ಲಿ ನಮ್ಮಣ್ಣನ ಸಾರಥ್ಯವನ್ನು ಮಾಡದಿದ್ದರೆ–ನಾನು ಖಂಡಿತವಾಗಿಯೂ ನನ್ನ ಪ್ರಾಣಗಳನ್ನು ತೊರೆಯುತ್ತೇನೆ."

ಸಖಿಯಾದ, ಸುಶ್ರೋಣಿಯಾದ ಉತ್ತರೆಯು ಹೀಗೆಂದು ಹೇಳಲಾಗಿ ಅರ್ಜುನನು ಏನೊಂದನ್ನೂ ಹೇಳದೆ ನೇರವಾಗಿ ಅಮಿತೌಜಸ್ಕನಾದ ರಾಜ ಪುತ್ರನ ಸಮೀಪಕ್ಕೇ ತೆರಳಿದನು. ಆ ಸಮಯದಲ್ಲಿ ಅರ್ಜುನನ ನಡಿಗೆಯು ಮದೋದಕವನ್ನು ಸುರಿಸಿಕೊಂಡು ಹೋಗುತ್ತಿರುವ ಮದಿಸಿದ ಆನೆ ಯಂತೆಯೇ ಇದ್ದಿತು. ಹೆಣ್ಣಾನೆಯು ಸಲಗನನ್ನು ಅನುಸರಿಸಿ ಹೋಗು ವಂತೆ–ವಿಶಾಲಾಕ್ಷಿಯಾದ ಉತ್ತರೆಯು ಅರ್ಜುನನನ್ನು ಅನುಸರಿಸಿಯೇ ಹೋದಳು.

ಬೃಹನ್ನಳೆಯು ಇನ್ನೂ ದೂರದಲ್ಲಿ ಬರುತ್ತಿರುವಾಗಲೇ ಅವಳನ್ನು ಕಂಡ ಉತ್ತರಕುಮಾರನು ಉತ್ಸಾಹದಿಂದ ಹೇಳತೊಡಗಿದನು :

"ಬೃಹನ್ನಳೆ! ನಿನ್ನನ್ನು ಪಾರ್ಥನು ಸಾರಥಿಯನ್ನಾಗಿ ಮಾಡಿಕೊಂಡು ಖಾಂಡವವನದಲ್ಲಿ ಯಜ್ಞೇಶ್ವರನನ್ನು ಸಂತೃಪ್ತಿಗೊಳಿಸಿದನು. ಇಷ್ಟು ಮಾತ್ರ ವಲ್ಲದೆ ಅಖಂಡವಾದ ಈ ಭೂಮಂಡಲವನ್ನೂ ಗೆದ್ದನು–ಎಂದು ಸೈರಂಧ್ರಿಯು ನಿನ್ನ ವಿಷಯವಾಗಿ ನನ್ನೊಡನೆ ಹೇಳಿದಳು. ಅವಳಿಗೆ ಪಾಂಡ ವರ ವಿಷಯವೆಲ್ಲವೂ ಸಂಪೂರ್ಣವಾಗಿ ತಿಳಿದಿರುವುದು. ಅಂದು ನೀನು ಅರ್ಜುನನಿಗೆ ಸಾರಥ್ಯಮಾಡಿದಂತೆ ಇಂದು ನನಗೂ ಸಾರಥ್ಯವನ್ನು ಮಾಡ ಬೇಕಾಗಿದೆ. ನನ್ನ ರಥದ ಕುದುರೆಗಳನ್ನು ನೀನು ನಡೆಸಬೇಕಾಗಿದೆ. ನಾನು ನಮ್ಮ ಹಸುಗಳನ್ನು ಹಿಂದಕ್ಕೆ ಕರೆತರಲು ಮಹಾಯೋಧರೆನಿಸಿದ ಕುರು ಪ್ರವೀಣರೊಡನೆ ಯುದ್ಧಮಾಡಲಿದ್ದೇನೆ. ನೀನು ಈ ಹಿಂದೆ ಅರ್ಜುನನಿಗೆ

ಮಾಡಿದ ಸಾರಥ್ಯದಿಂದಾಗಿ ಅವನು ಅಖಂಡಭೂಮಂಡಲವನ್ನೂ ಜಯಿಸಲು ಸಾಧ್ಯವಾಯಿತು. ಆದುದರಿಂದ ನಿನ್ನ ಸಾರಥ್ಯದ ನೆರವನ್ನು ಪಡೆದು ನಾನೂ ಕುರುಪ್ರಮುಖರೊಡನೆ ಮಾಡಲಿರುವ ಯುದ್ಧದಲ್ಲಿ ವಿಜಯಗಳಿಸುವುದರಲ್ಲಿ ಕಿಂಚಿತ್ತಾದರೂ ಸಂಶಯವಿಲ್ಲ."

ಉತ್ತರಕುಮಾರನು ಹೇಳಿದ ಮಾತುಗಳನ್ನು ಕೇಳಿ ಬೃಹನ್ನಳೆಯು ರಾಜಪುತ್ರನನ್ನು ಕುರಿತು ಹೇಳಿದಳು :

**ಕಾ ಶಕ್ತಿರ್ಮಮ ಸಾರಥ್ಯಂ ಕರ್ತುಂ ಸಂಗ್ರಾಮಮೂರ್ಧನಿ ॥೨೦॥**

**ಗೀತಂ ವಾ ಯದಿ ವಾ ನೃತ್ಯಂ ವಾದಿತ್ರಂ ವಾ ಪೃಥಗ್ವಿಧಮ್ ।**
**ತತ್ಕರಿಷ್ಯಾಮಿ ಭದ್ರಂ ತೇ ಸಾರಥ್ಯಂ ತು ಕುತೋ ಮಮ ॥೨೧॥**

"ಅಯ್ಯೋ! ಯುದ್ಧಭೂಮಿಯಲ್ಲಿ ಸಾರಥ್ಯಮಾಡಲು ನನಗಾವ ಶಕ್ತಿಯಿದೆ? ರಾಜಕುಮಾರ! ಹಾಡುತ್ತೇನೆ ; ವಾದ್ಯಗಳನ್ನು ನುಡಿಸುತ್ತೇನೆ. ನೃತ್ಯ-ಗೀತೆಗಳಲ್ಲಿ ನನಗೆ ಪರಿಶ್ರಮವಿದೆ. ನಾನಾವಿಧವಾದ ವಾದ್ಯಗಳನ್ನು ನುಡಿಸಲು ಬಲ್ಲೆನು. ನನಗೆ ತಿಳಿದಿರುವ ವಿದ್ಯೆಗಳಲ್ಲಿ ನೀನು ಅಪೇಕ್ಷಿಸುವುದನ್ನು ಹಾಡಿ, ಪಾಡಿ, ಕುಣಿದು ತೋರಿಸಬಲ್ಲೆನು. ಸಾರಥ್ಯಕ್ಕೂ ನಾನು ಕಲಿತಿರುವ ವಿದ್ಯೆಗೂ ಯಾವ ಸಂಬಂಧವಿದೆ? ನನಗೆ ಸಾರಥ್ಯವು ಹೇಗೆ ತಾನೇ ತಿಳಿದಿದ್ದೀತು?"

"ಬೃಹನ್ನಳೇ! ನೀನು ಗಾಯಕಳಾದರೂ ಆಗಿರು ; ನರ್ತಕಿಯಾದರೂ ಆಗಿರು. ಈಗಿನ ಸಂದರ್ಭದಲ್ಲಿ ನೀನು ಸಾವಕಾಶಮಾಡದೇ ನನ್ನ ರಥದಲ್ಲಿ ಕುಳಿತು ಅಶ್ವಗಳನ್ನು ನಿಯಂತ್ರಿಸು."

ಅಶ್ವಗಳ ನಿಯಂತ್ರಣವು ತಿಳಿದಿರಲಿ ; ತಿಳಿಯದಿರಲಿ–ರಾಜಾಜ್ಞೆಯಂತೆ ನಡೆದುಕೊಳ್ಳಲೇಬೇಕಲ್ಲವೇ? ಇದೇ ಅಭಿಪ್ರಾಯವನ್ನು ಅರ್ಜುನನು ನಟನೆಯ ಮೂಲಕವಾಗಿ ತೋರಿಸುತ್ತಿದ್ದನು. ಜನಮೇಜಯ! ಅರ್ಜುನನು ಎಲ್ಲವನ್ನೂ ತಿಳಿದವನಾಗಿದ್ದರೂ ಏನೂ ತಿಳಿಯದವನಂತೆ ನಟಿಸುತ್ತಿದ್ದನು. ಉತ್ತರೆಯು ತಂದುಕೊಟ್ಟ ಕವಚವನ್ನು ತಲೆಕೆಳಗಾಗಿ ತೊಟ್ಟುಕೊಳ್ಳಲು ಹೋದಾಗ ಉತ್ತರೆಯು ಮೊದಲ್ಗೊಂಡು ಅಂತಃಪುರದ ಸ್ತ್ರೀಯರೆಲ್ಲರೂ 'ಘೊಳ್' ಎಂದು ನಕ್ಕರು. ಕವಚವನ್ನು ತೊಟ್ಟುಕೊಳ್ಳಲೂ

ಬಾರದೇ ಹಿಂದೆ-ಮುಂದೆ ತಿರುಗಿಸಿ ನೋಡುತ್ತಿದ್ದುದನ್ನು ಕಂಡು ಉತ್ತರನೇ ಮುಂದೆ ಹೋಗಿ ಬೃಹನ್ನಳೆಯಿಂದ ಕವಚವನ್ನು ತೆಗೆದುಕೊಂಡು ತಾನೇ ಅದನ್ನು ಬೃಹನ್ನಳೆಗೆ ಸರಿಯಾಗಿ ತೊಡಿಸಿದನಂತರ ತಾನೂ ಸೂರ್ಯನ ಪ್ರಕಾಶದಿಂದ ಕೂಡಿದ್ದ ಅನರ್ಘ್ಯವಾದ ಕವಚವನ್ನು ತೊಟ್ಟುಕೊಂಡನು. ಸಿಂಹದ ಲಾಂಛನವಿದ್ದ ಧ್ವಜವನ್ನು ರಥದ ಮೇಲೆ ಬಿಗಿದು, ಬೃಹನ್ನಳೆಯನ್ನು ರಥದ ಮೇಲೆ ಸಾರಥಿಯ ಸ್ಥಾನದಲ್ಲಿ ಕುಳ್ಳಿರಿಸಿ, ಅವಳ ಹಸ್ತದಲ್ಲಿ ಕುದುರೆಯ ಲಗಾಮುಗಳನ್ನಿರಿಸಿದನು. ಉತ್ತಮೋತ್ತಮವಾದ ಧನುಸ್ಸುಗಳನ್ನೂ ಸುಂದರವಾದ ಬಾಣಗಳನ್ನೂ ರಥದಲ್ಲಿಟ್ಟುಕೊಂಡು ಬೃಹನ್ನಳಾ ಸಾರಥಿಯಾದ ಉತ್ತರಕುಮಾರನು ಯುದ್ಧಭೂಮಿಗೆ ಹೊರಟನು. ಬೃಹನ್ನಳೆಯು ಕುದುರೆಗಳ ಕಡಿವಾಣಗಳನ್ನು ಹಿಡಿದು ರಥದ ಮೇಲೆ ಕುಳಿತಿದ್ದಾಗ ಉತ್ತರೆಯೂ ಮತ್ತು ಅವಳ ಸಖಿಯರೂ ಬೃಹನ್ನಳೆಯನ್ನು ಕುರಿತು ಒಕ್ಕೊರಳಿನಿಂದ ಹೇಳಿದರು :

**ಬೃಹನ್ನಲೇ ಆನಯೇಥಾ ವಾಸಾಂಸಿ ರುಚಿರಾಣಿ ಚ ॥೨೮॥**

**ಪಾಂಚಾಲಿಕಾರ್ಥಂ ಚಿತ್ರಾಣಿ ಸೂಕ್ಷ್ಮಾಣಿ ಚ ಮೃದೂನಿ ಚ।**
**ವಿಜಿತ್ಯ ಸಂಗ್ರಾಮಗತಾನ್ಭೀಷ್ಮದ್ರೋಣಮುಖಾನ್ಕುರೂನ್ ॥೨೯॥**

"ಬೃಹನ್ನಳೇ! ನೀವು ಯುದ್ಧದಲ್ಲಿ ಭೀಷ್ಮ-ದ್ರೋಣಾದಿ ಕುರು ಪ್ರಮುಖರನ್ನು ಗೆದ್ದು, ನಮ್ಮ ಬೊಂಬೆಗಳ ಅಲಂಕಾರಕ್ಕಾಗಿ ಅವರು ಧರಿಸಿರುವ ಅಮೋಘವಾದ, ಚಿತ್ರ-ವಿಚಿತ್ರವಾದ ಕವಚಗಳನ್ನೂ ವಸ್ತ್ರಾಭರಣಗಳನ್ನೂ ತಂದುಕೊಡಬೇಕು, ತಿಳಿಯಿತೇ? ಬರಿಗೈಯಲ್ಲಿ ಬರಬಾರದು."

ಹೀಗೆಂದು ಹೇಳಿದ ರಾಜಕನ್ಯೆಯರ ಮಾತುಗಳನ್ನು ಕೇಳಿ ಪಾಂಡುನಂದನನಾದ ಅರ್ಜುನನು ನಸುನಗುತ್ತಾ ಗುಡುಗಿನ ಶಬ್ದವನ್ನೂ ಭೇರಿಯ ಧ್ವನಿಯನ್ನೂ ಅನುಕರಿಸುವ ಧ್ವನಿಯಿಂದ ಉತ್ತರಿಸಿದನು :

**ಯದ್ಯುತ್ತರೋಽಯಂ ಸಂಗ್ರಾಮೇ ವಿಜೇಷ್ಯತಿ ಮಹಾರಥಾನ್ ।**
**ಅಥಾಹರಿಷ್ಯೇ ವಾಸಾಂಸಿ ದಿವ್ಯಾನಿ ರುಚಿರಾಣಿ ಚ ॥೩೦॥**

“ಸಖಿಯರೇ! ಈ ಉತ್ತರಕುಮಾರನೇನಾದರೂ ಯುದ್ಧದಲ್ಲಿ ಮಹಾರಥರಾದ ಕುರುಭೂಪರನ್ನು ಜಯಿಸಿದ್ದೇ ಆದರೆ ನಾನು ಖಂಡಿತ ವಾಗಿಯೂ ಅತಿರಥ-ಮಹಾರಥರ ದಿವ್ಯವಾದ ಮತ್ತು ನಯನಮನೋಹರ ವಾದ ಬಟ್ಟೆಗಳನ್ನೂ ಆಭರಣಗಳನ್ನೂ ಖಂಡಿತವಾಗಿಯೂ ತರುತ್ತೇನೆ.”

ಹೀಗೆಂದು ಹೇಳುತ್ತಲೇ ಬೀಭತ್ಸುವು ಕುದುರೆಗಳ ಬೆನ್ನಿನ ಮೇಲೆ ಕೈಯಿಟ್ಟು ನಾನಾಧ್ವಜಪತಾಕೆಗಳಿಂದ ಕೂಡಿದ್ದ ಕುರುಸೇನೆಗೆ ಅಭಿಮುಖವಾಗಿ ರಥವನ್ನು ಓಡಿಸಿದನು.

ಬೃಹನ್ನಳಾಸಾರಥಿಯಾದ, ಮಹಾಬಾಹುವಾದ ಉತ್ತರಕುಮಾರನು ರಥದ ಮೇಲೆ ಯುದ್ಧಸನ್ನದ್ಧನಾಗಿ ಹೊರಟಿರುವುದನ್ನು ಕಂಡು ಪಟ್ಟಣದ ಸ್ತ್ರೀಯರೂ, ಕನ್ಯೆಯರೂ ಮತ್ತು ಸುವ್ರತರಾದ ಬ್ರಾಹ್ಮಣರೂ ಶುಭಾ ಕಾಂಕ್ಷಿಗಳಾಗಿ ರಥಕ್ಕೆ ಪ್ರದಕ್ಷಿಣೆಮಾಡಿದರು. ಅನಂತರದಲ್ಲಿ ಕನ್ಯೆಯರೂ ಸ್ತ್ರೀಯರೂ ಶುಭಾಶಿಷಗಳನ್ನು ಹೇಳಿದರು :

ಯದರ್ಜುನಸ್ಯರ್ಷಭತುಲ್ಯಗಾಮಿನಃ
ಪುರಾಭವತ್ಖಾಣ್ಡವದಾಹಮಙ್ಗಲಮ್ ।
ಕುರೂನ್ಸಮಾಸಾದ್ಯ ರಣೇ ಬೃಹನ್ನಳೇ
ಸಹೋತ್ತರೇಣಾದ್ಯ ತದಸ್ತು ಮಙ್ಗಲಮ್ ॥೩೪॥

“ಬೃಹನ್ನಳೇ! ವೃಷಭಸದೃಶಗಮನವುಳ್ಳ ಅರ್ಜುನನಿಗೆ ಖಾಂಡವ ದಾಹಸಮಯದಲ್ಲಿ ಹೇಗೆ ಮಂಗಳವುಂಟಾಯಿತೋ–ಕುರುಪ್ರಮುಖ ರೊಡನೆ ಮಾಡಲಿರುವ ಈ ಯುದ್ಧದಲ್ಲಿಯೂ ಉತ್ತರಕುಮಾರನೊಡ ಗೂಡಿದ ನಿನಗೆ ಅದೇ ವಿಧವಾದ ಮಂಗಳವುಂಟಾಗಲಿ.”

೩೭ನೆಯ ಅಧ್ಯಾಯವು ಮುಗಿಯಿತು.

# ಭಯಪಟ್ಟು ರಥದಿಂದ ಧುಮುಕಿ ಓಡಿಹೋಗುತ್ತಿದ್ದ ಉತ್ತರನನ್ನು ಅರ್ಜುನನು ಸಮಾಧಾನಪಡಿಸಿ ರಥದ ಸಮೀಪಕ್ಕೆ ಕರೆತಂದುದು

ವೈಶಂಪಾಯನರು ಹೇಳುತ್ತಾರೆ :

**ಸ ರಾಜಧಾನ್ಯಾ ನಿರ್ಯಾಯ ವೈರಾಟಿರಕುತೋಭಯಃ ।**
**ಪ್ರಯಾಹೀತ್ಯಬ್ರವೀತ್ಸೂತಂ ಯತ್ರ ತೇ ಕುರವೋ ಗತಾಃ ॥೧॥**

"ಜನಮೇಜಯ! ವೈರಾಟಿಯು ಯಾವ ಭಯವೂ ಇಲ್ಲದವನಾಗಿ ರಾಜಧಾನಿಯಿಂದ ಹೊರಹೊರಟು, ಕುರುಪ್ರಮುಖರಿರುವೆಡೆಗೆ ರಥವನ್ನು ಓಡಿಸುವಂತೆ ಸಾರಥಿಗೆ ಹೇಳಿದನು.

ಉತ್ತರನು ತನ್ನ ಆತ್ಮಶ್ಲಾಘನೆಯನ್ನು ಇನ್ನೂ ನಿಲ್ಲಿಸಲಿಲ್ಲ. ಬೃಹನ್ನಳೆಯನ್ನು ಕುರಿತು ಪುನಃ ಹೇಳಿದನು : "ಬೃಹನ್ನಳೇ! ನಮ್ಮನ್ನು ಜಯಿಸಿ ನಮ್ಮ ಗೋಧನವನ್ನು ಕೊಳ್ಳೆಹೊಡೆದುಕೊಂಡು ಹೋಗುವ ದುರುದ್ದೇಶದಿಂದ ಆಗಮಿಸಿರುವ ಕುರುಪ್ರಮುಖರನ್ನು ಪರಾಜಯಗೊಳಿಸಿ, ನಮ್ಮ ಗೋವುಗಳನ್ನು ಬಿಡಿಸಿಕೊಂಡು ಆದಷ್ಟು ಬೇಗ ನಗರಿಗೆ ಹಿಂದಿರುಗುತ್ತೇನೆ. ಆದುದರಿಂದ ಶೀಘ್ರವಾಗಿ ಕುದುರೆಗಳನ್ನು ಓಡಿಸು, ಬೃಹನ್ನಳೇ!"

ಉತ್ತರಕುಮಾರನ ಮಾತುಗಳನ್ನು ಕೇಳಿ ಅರ್ಜುನನು ನಸುನಗುತ್ತಾ ಕುದುರೆಗಳ ಮೇಲೆ ಕೈಯಿಟ್ಟು ಅವುಗಳನ್ನು ಪ್ರೋತ್ಸಾಹಿಸಿದನು. ನರಸಿಂಹನಾದ ಅರ್ಜುನನಿಂದ ಪ್ರಚೋದಿತವಾದ, ಕಾಂಚನದ ಮಾಲೆಗಳನ್ನು ಧರಿಸಿದ್ದ ಆ ಅಶ್ವಗಳು ಆಕಾಶವನ್ನೇ ಭೇದಿಸಿಕೊಂಡು ಹೋಗುತ್ತಿವೆಯೋ ಎಂಬಂತೆ ವಾಯುವೇಗದಲ್ಲಿ ಓಡಲು ಉಪಕ್ರಮಿಸಿದುವು. ಸ್ವಲ್ಪದೂರ ಹೋಗುತ್ತಲೇ ಶತ್ರುನಾಶಕರಾದ ವೈರಾಟಿ-ಧನಂಜಯರು ಬಲಿಷ್ಠವಾಗಿದ್ದ ಕುರುಕುಲಾವತಂಸರ ಸೈನ್ಯವನ್ನು ದೂರದಿಂದಲೇ ನೋಡಿದರು. ರಥವು ಶ್ಮಶಾನದ ಸಮೀಪಕ್ಕೆ ಬರಲಾಗಿ ಬನ್ನಿಯ ಮರದ ಸಮೀಪದಲ್ಲಿ ನಿಂತು– ಕುರುಸೈನ್ಯವು ಸುಸಜ್ಜಿತವಾಗಿ, ವ್ಯವಸ್ಥಿತವಾಗಿ ವ್ಯೂಹರಚನೆಯಿಂದ

ಕೂಡಿರುವುದನ್ನು ವೈರಾಟಿ-ಧನಂಜಯರು ವೀಕ್ಷಿಸಿದರು. ಕೌರವಸೈನ್ಯವು ಸಾಗರೋಪಮವಾಗಿತ್ತು. ಚತುರಂಗಬಲವು ಅತ್ತಲಿತ್ತ ಚಲಿಸುತ್ತಿರುವುದನ್ನು ನೋಡಿದರೆ–ಆಕಾಶದಲ್ಲಿ ವೃಕ್ಷಭರಿತವಾದ ಅರಣ್ಯವೊಂದು ಸಂಚರಿಸುತ್ತಿರುವುದೋ–ಎಂಬಂತೆ ಕಾಣುತ್ತಿದ್ದಿತು. ಸೈನಿಕರ ಪಥಸಂಚಲನದಿಂದ ಉದ್ಭೂತವಾದ ಧೂಳಿಯು ಅಂತರಿಕ್ಷದವರೆಗೂ ಪ್ರಸರಿಸಿ ಅಲ್ಲಿಯೂ ವ್ಯಾಪ್ತವಾಗಿದ್ದುದರಿಂದ ಭೂಮಿಯ ಮೇಲಿನ ಯಾವ ಪ್ರಾಣಿಯೂ ಆಕಾಶವನ್ನು ನೇರವಾಗಿ ನೋಡಲಾಗುತ್ತಿರಲಿಲ್ಲ. ಧೂಳಿನಿಂದ ಜನರ ಕಣ್ಣು ಕಾಣದಂತಾಗಿತ್ತು. ಜನಮೇಜಯ! ಗಜಾಶ್ವ-ರಥ-ಪದಾತಿಗಳಿಂದ ಕೂಡಿದ್ದ, ಕರ್ಣ-ದುರ್ಯೋಧನ-ಕೃಪ-ಭೀಷ್ಮ-ದ್ರೋಣ-ಅಶ್ವತ್ಥಾಮಾ–ಇವರೇ ಮೊದಲಾದ ಅತಿರಥ-ಮಹಾರಥರಿಂದ ಪರಿರಕ್ಷಿತವಾಗಿದ್ದ ಸೈನ್ಯಸಮುದ್ರವನ್ನು ನೋಡಿ ಉತ್ತರನಿಗೆ ರೋಮಾಂಚನವಾಯಿತು. ಅವನು ಭಯದಿಂದ ಉದ್ವಿಗ್ನನಾದನು. ಎದೆಯು ಡವ-ಡವನೆ ಹೊಡೆದುಕೊಳ್ಳಲಾರಂಭಿಸಿತು. ಮುಖವು ಬೆವರಿಟ್ಟಿತು. ಕೈಯಲ್ಲಿ ಹಿಡಿದಿದ್ದ ಧನುಸ್ಸು ಕೆಳಕ್ಕೆ ಜಾರಿತು. ವೀರಾಸನದಲ್ಲಿ ಅಧೀರನಂತೆ ಕುಳಿತಿದ್ದ ವೈರಾಟಿಯು ಸ್ವಲ್ಪ ಮುಂದಕ್ಕೆ ಸರಿದು ಬೃಹನ್ನಳೆಗೆ ಹೇಳಿದನು :

"ಬೃಹನ್ನಳೇ! ರಥವನ್ನು ಹಿಂದಿರುಗಿಸು."

ಅರ್ಜುನನಿಗೆ ಉತ್ತರನ ಸಾಹಸವೆಷ್ಟೆಂಬುದು ಚೆನ್ನಾಗಿ ತಿಳಿದಿತ್ತು. ನಗು-ನಗುತ್ತಲೇ ಹಿಂದಿರುಗಿ ನೋಡಿದನು. ಉತ್ತರನು ಭೀತ-ಭೀತನಾಗಿ ಪುನಃ ಹೇಳಿದನು : "ರಥವನ್ನು ನಿಲ್ಲಿಸು, ಬೃಹನ್ನಳೇ! ನಾನು ಈ ಕುರುಸೈನ್ಯದೊಡನೆ ಸರ್ವಥಾ ಯುದ್ಧಮಾಡಲಾರೆನು. ಸಮುದ್ರೋಪಮವಾದ ಈ ಸೈನ್ಯವನ್ನು ನೋಡಿದ ಕೂಡಲೇ ನನ್ನಲ್ಲಿದ್ದ ಉತ್ಸಾಹವೆಲ್ಲವೂ ಉಡುಗಿಹೋಯಿತು. ನನ್ನ ಶರೀರದಲ್ಲಿರುವ ರೋಮಕೋಟಿಗಳು ಮನಸ್ಸಿನ ಭಯದಿಂದಾಗಿ ನಿಮಿರಿನಿಂತಿರುವುದನ್ನಾದರೂ ನೋಡು. ಅನೇಕಾನೇಕ ವೀರರಿಂದ ಪೂರ್ಣವಾಗಿರುವ ಮತ್ತು ಅತ್ಯುಗ್ರವಾಗಿರುವ ಈ ಕೌರವಸೇನೆಯನ್ನೆದುರಿಸಿ ಯುದ್ಧಮಾಡಲು ದೇವತೆಗಳಿಂದಲೇ ಸಾಧ್ಯವಿಲ್ಲವೆಂಬುದು ನನ್ನ ಅಭಿಮತವಾಗಿದೆ. ಹೀಗಿರುವಾಗ ನಾನು ಹೇಗೆತಾನೇ ಇವರೊಡನೆ ಯುದ್ಧಮಾಡಲು ಸಮರ್ಥನಾಗುವೆನು? ಅಸಂಖ್ಯಾತವಾದ

ಈ ಕುರುಸೇನೆಯನ್ನು ಎದುರಿಸಿ ಯುದ್ಧಮಾಡಲು ನಾನು ಖಂಡಿತವಾಗಿಯೂ ಸಮರ್ಥನಲ್ಲ. ಆದುದರಿಂದ ಭಯಂಕರವಾದ ಧನುಸ್ಸುಗಳನ್ನು ಧರಿಸಿರುವ ಈ ಭಾರತಸೇನೆಯೊಳಕ್ಕೆ ನುಗ್ಗಿಹೋಗಲು ನಾನು ಖಂಡಿತವಾಗಿಯೂ ಇಚ್ಛೆಪಡುವುದಿಲ್ಲ. ಅಲ್ಲಿ ಕಾಣುತ್ತಿರುವ ಅಸಂಖ್ಯಾತವಾದ ರಥಗಳು, ಆನೆಗಳು, ಕುದುರೆಗಳು, ಪದಾತಿಗಳು, ರಥಗಳ ಮೇಲೆ ಹಾರಾಡುತ್ತಿರುವ ಬಣ್ಣ-ಬಣ್ಣದ ಧ್ವಜಗಳು–ಇವುಗಳನ್ನು ನೋಡಿದಮಾತ್ರದಿಂದಲೇ ನನ್ನ ಹೃದಯವು ವ್ಯಥಿತವಾಗಿದೆ. ಬೃಹನ್ನಳೇ! ಈ ಕೌರವಸೇನೆಯಲ್ಲಿ ಅಸಮಾನಶೂರರಿದ್ದಾರೆ. ಅಸಹಾಯಶೂರರಿದ್ದಾರೆ. ದ್ರೋಣ, ಭೀಷ್ಮ, ಕೃಪ, ಕರ್ಣ, ವಿವಿಂಶತಿ, ಅಶ್ವತ್ಥಾಮಾ, ವಿಕರ್ಣ, ಸೋಮದತ್ತ, ಬಾಹ್ಲಿಕ, ರಥಿಕರಲ್ಲಿ ಶ್ರೇಷ್ಠನಾದ, ಕುರುರಾಜನಾದ ದುರ್ಯೋಧನ–ಇವರುಗಳೇ ಮೊದಲಾದ ಮಹಾವೀರರಿದ್ದಾರೆ. ಇವರೆಲ್ಲರೂ ಮಹಾತೇಜಸ್ವಿಗಳು. ಮಹಾಧನುಸ್ಸನ್ನು ಧರಿಸಿರುವವರು ಮತ್ತು ಯುದ್ಧವಿಶಾರದರು. ಯುದ್ಧಸನ್ನದ್ಧರಾಗಿ ನಿಂತಿರುವ ಈ ಕುರುಯೋಧರನ್ನು ನೋಡಿದಮಾತ್ರದಿಂದಲೇ ನನಗೆ ರೋಮಾಂಚನವಾಗಿದೆ. ನನ್ನ ಮನಸ್ಸು ಭ್ರಾಂತಿಗೊಂಡಿದೆ. ಈಗ ನಾನು ಮೂರ್ಛೆಹೊಂದುವ ಸ್ಥಿತಿಯಲ್ಲಿದ್ದೇನೆ. ಆದುದರಿಂದ ನೀನೀಗಲೇ ರಥವನ್ನು ಹಿಂದಿರುಗಿಸಿಬಿಡು. ಪಟ್ಟಣಕ್ಕೆ ಹೊರಟುಹೋಗೋಣ."

ಜನಮೇಜಯ! ಆದರೆ ಅರ್ಜುನನು ಆ ಮಹಾಸೈನ್ಯವನ್ನು ನೋಡಿ ಹೆದರಲಿಲ್ಲ ; ಹೆದರಿ ಕಂಗೆಟ್ಟಿದ್ದ ಉತ್ತರನ ಮಾತುಗಳನ್ನು ಗೌರವಿಸಲೂ ಇಲ್ಲ. ಉತ್ತರನು ಸಾಧಾರಣನಾದ ಒಬ್ಬ ರಾಜಕುಮಾರನಾಗಿದ್ದನು. ಬೃಹನ್ನಳೆಯ ವೇಷಧರಿಸಿದ್ದ ತನ್ನ ಸಾರಥಿಯು ವೀರನಾದ ಅರ್ಜುನನೆಂಬುದು ಉತ್ತರನಿಗೆ ತಿಳಿಯದು. ಸೈರಂಧ್ರಿಯ ಹೇಳಿಕೆಯಿಂದ ಬೃಹನ್ನಳೆಯು ಅರ್ಜುನನ ಸಾರಥಿಯಾಗಿದ್ದಿರಬಹುದೆಂದು ನಂಬಿದ್ದನಾದರೂ ಅವನು ಪರಾಕ್ರಮಿಯೆಂಬುದನ್ನು ಉತ್ತರನಿಗೆ ಊಹಿಸಲು ಕೂಡ ಸಾಧ್ಯವಿರಲಿಲ್ಲ. ಯುದ್ಧಭೂಮಿಗೆ ಹೋದ ಮರುಕ್ಷಣದಲ್ಲಿಯೇ ತನ್ನ ಅಂತ್ಯವಾಗುವುದೆಂದು ಹೆದರಿದ ಉತ್ತರನು ಸವ್ಯಸಾಚಿಯ ಸಮ್ಮುಖದಲ್ಲಿ ವಿಲಪಿಸುತ್ತಾ ಅವನನ್ನು ಕುರಿತು ಪುನಃ ಹೇಳಿದನು : "ಬೃಹನ್ನಳೇ! ತ್ರಿಗರ್ತರೊಡನೆ ಯುದ್ಧಮಾಡಲು ರಾಜಧಾನಿಯಲ್ಲಿದ್ದ ಎಲ್ಲ ಸೈನಿಕರನ್ನೂ ಕರೆದುಕೊಂಡು

ನಮ್ಮ ತಂದೆಯು ಹೊರಟುಹೋದನು. ನಗರದ ರಕ್ಷಣೆಯ ಭಾರವನ್ನು ನನ್ನೊಬ್ಬನ ಮೇಲೆ ಹೊರಿಸಿಬಿಟ್ಟನು. ನನ್ನ ಸಹಾಯಕ್ಕೆ ಒಬ್ಬನಾದರೂ ಸೈನಿಕನು ರಾಜಧಾನಿಯಲ್ಲಿರುವುದಿಲ್ಲ. ಹೀಗಿರುವಾಗ ನಾನೊಬ್ಬ–ಅದರಲ್ಲಿಯೂ ಬಾಲಕ–ಮೇಲಾಗಿ ಯುದ್ಧಪರಿಶ್ರಮವಿಲ್ಲದವನು - ಶಸ್ತ್ರಾಸ್ತ್ರಗಳಲ್ಲಿ ಪರಿಣತರಾದ ಕೌರವರೊಡನೆ ಯುದ್ಧಮಾಡಲು ಖಂಡಿತವಾಗಿಯೂ ಸಮರ್ಥನಾಗಿರುವುದಿಲ್ಲ. ಆದುದರಿಂದ ಈ ಕೂಡಲೇ ರಥವನ್ನು ಹಿಂದಿರುಗಿಸಿಬಿಡು!"

ಬೃಹನ್ನಳೆಯು ಹೇಳಿದಳು :

**ಭಯೇನ ದೀನರೂಪೋಽಸಿ ದ್ವಿಷತಾಂ ಹರ್ಷವರ್ಧನಃ ।**
**ನ ಚ ತಾವತ್ಕೃತಂ ಕರ್ಮ ಪರೈಃ ಕಿಂಚಿದ್ರಣಾಜಿರೇ ॥೧೯॥**

"ಇದೇನು ರಾಜಕುಮಾರ! ಭಯದಿಂದ ಇಷ್ಟು ವಿಹ್ವಲನಾಗಿರುವೆ? ನಿನ್ನ ಈ ದೈನ್ಯವು ಶತ್ರುಗಳಿಗೆ ಹರ್ಷವನ್ನುಂಟುಮಾಡುವುದೆಂಬುದನ್ನರಿಯೆಯಾ? ಮೇಲಾಗಿ ನೀನಿನ್ನೂ ಯುದ್ಧರಂಗವನ್ನೇ ತಲುಪಿರುವುದಿಲ್ಲ. ಒಂದು ಬಾಣವನ್ನಾದರೂ ಧನುಸ್ಸಿನ ಹೆದೆಗೇರಿಸಿ ಪ್ರಯೋಗಿಸಿರುವುದಿಲ್ಲ. ಶತ್ರುಗಳು ನಿನಗೇನೂ ಮಾಡಿಲ್ಲ. ಈಗಲೇ ನೀನಿಷ್ಟೊಂದು ಭಯಪಡುವುದೇ? ಅಂತಃಪುರದ ಸ್ತ್ರೀಯರ ಮಧ್ಯದಲ್ಲಿ ಯುದ್ಧರಂಗಕ್ಕೆ ರಥವನ್ನು ಒಯ್ಯುವಂತೆ ನೀನೇ ಆಜ್ಞೆಮಾಡಿದೆಯಲ್ಲವೇ? ನಿನ್ನ ಆಜ್ಞಾನುಸಾರವಾಗಿ ಸಾವಿರಾರು ಧ್ವಜಗಳು ಹಾರಾಡುತ್ತಿರುವ ಆ ಪ್ರದೇಶಕ್ಕೆ ಕರೆದುಕೊಂಡು ಹೋಗಿ ಬಿಟ್ಟುಬಿಡುತ್ತೇನೆ. ಇದು ನನ್ನ ಕರ್ತವ್ಯವಾಗಿರುತ್ತದೆ. ರಣಹದ್ದು ಭೂಮಿಯ ಮೇಲೆ ಮಾಂಸದ ತುಂಡೊಂದನ್ನು ಕಂಡೊಡನೆಯೇ ಕೆಳಗಿಳಿಯುವಂತೆ–ನಿನ್ನ ರಾಜ್ಯದಲ್ಲಿರುವ ಗೋಧನವನ್ನು ಅಪಹರಿಸಬೇಕೆಂಬ ಆಶಯದಿಂದ ಆಗಮಿಸಿರುವ, ನೃಶಂಸರಾದ ಯುದ್ಧಸನ್ನದ್ಧರಾಗಿರುವ ಕುರುಯೋಧರ ಮಧ್ಯದಲ್ಲಿಯೇ ನಿನ್ನ ರಥವನ್ನು ನಿಲ್ಲಿಸುತ್ತೇನೆ.

**ತಥಾ ಸ್ತ್ರೀಷು ಪ್ರತಿಶ್ರುತ್ಯ ಪೌರುಷಂ ಪುರುಷೇಷು ಚ ।**
**ಕತ್ಥಮಾನೋಽಭಿನಿರ್ಯಾಯ ಕಿಮರ್ಥಂ ನ ಯುಯುತ್ಸಸೇ ॥೨೨॥**

ಉತ್ತರಕುಮಾರ! ನೀನು ಅರಮನೆಯಲ್ಲಿದ್ದಾಗ ಅಲ್ಲಿದ್ದ ಸ್ತ್ರೀ-ಪುರುಷ

ರೊಡನೆ ನಿನ್ನ ಪೌರುಷದ ವಿಷಯವಾಗಿ ಹೇಳಿಕೊಂಡೆ. ಗೋಧನವನ್ನು ಮುಹೂರ್ತಮಾತ್ರದಲ್ಲಿ ಬಿಡಿಸಿಕೊಂಡು ಬರುವುದಾಗಿಯೂ ಪ್ರತಿಜ್ಞೆ ಮಾಡಿದೆ. ಈಗೇಕೆ ಯುದ್ಧಮಾಡಲು ಹಿಂಜರಿಯುತ್ತಿರುವೆ?

ನೀನೇನಾದರೂ ಈ ಕುರುಯೋಧರೊಡನೆ ಯುದ್ಧಮಾಡದೇ– ಇವರನ್ನು ಪರಾಜಯಗೊಳಿಸಿ ಹಸುಗಳನ್ನು ಬಿಡುಗಡೆಮಾಡದೆಯೇ– ನಗರಿಗೆ ಹಿಂದಿರುಗಿದೆಯಾದರೆ ಪಟ್ಟಣದಲ್ಲಿರುವ ವೀರಪುರುಷರೂ, ಹೆಂಗಸರೂ ಒಂದಾಗಿ ಸೇರಿ ನಿನ್ನನ್ನು ನೋಡಿ ಗಹ-ಗಹಿಸಿ ನಗುತ್ತಾರೆ. ಒಂದು ವೇಳೆ ನಕ್ಕರೆ ನಗಲೆಂದು ನೀನಾದರೂ ಸುಮ್ಮನಿದ್ದು ಬಿಡಬಹುದು. ಆದರೆ ರಥವನ್ನು ಹಿಂದಿರುಗಿಸಿದರೆ ನನ್ನ ಗೌರವವಾದರೂ ಉಳಿದೀತೇ? ಸೈರಂಧ್ರಿಯಾದರೋ ನನ್ನನ್ನು ಉತ್ತಮೋತ್ತಮನಾದ ಸಾರಥಿಯೆಂದು ಎಲ್ಲರ ಸಮ್ಮುಖದಲ್ಲಿಯೂ ಘೋಷಿಸಿಬಿಟ್ಟಿರುವಳು. ಆದುದರಿಂದ ಶತ್ರುಗಳನ್ನು ಪರಾಜಯಗೊಳಿಸದೇ ಹಸುಗಳನ್ನು ಬಿಡಿಸಿಕೊಳ್ಳದೇ ನಾನಂತೂ ನಗರಕ್ಕೆ ಹಿಂದಿರುಗುವವಳಲ್ಲ. ಸೈರಂಧ್ರಿಯು ನನ್ನನ್ನು ಎಲ್ಲರ ಎದುರಿನಲ್ಲೂ ಬಹುವಾಗಿ ಸ್ತೋತ್ರಮಾಡಿಬಿಟ್ಟಿರುವಳು. ಅವಳ ಮಾತುಗಳಲ್ಲಿ ವಿಶ್ವಾಸವನ್ನಿಟ್ಟು ನೀನು ನನ್ನನ್ನು ಸಾರಥಿಯನ್ನಾಗಿ ಮಾಡಿಕೊಂಡಿರುವೆ. ಹೀಗಿರುವಾಗ ನಾನು ಕುರುಯೋಧರೊಡನೆ ಯುದ್ಧಮಾಡದೇ ಹೇಗೆತಾನೇ ಹಿಂದಿರುಗಲಿ? ಉತ್ತರಕುಮಾರ! ನಾನೇ ಅವರೊಡನೆ ಯುದ್ಧಮಾಡುತ್ತೇನೆ. ನೀನು ಸೇನೆಯನ್ನು ನೋಡಿದ ಮಾತ್ರದಿಂದ ಭಯಪಡದೇ ದೃಢವಾಗಿ ರಥದಲ್ಲಿ ಕುಳಿತಿರು.''

**ಕಾಮಂ ಹರನ್ತು ಮತ್ಸ್ಯಾನಾಂ ಭೂಯಾಂಸಃ ಕುರವೋ ಧನಮ್ ।**
**ಪ್ರಹಸನ್ತು ಚ ಮಾಂ ನಾರ್ಯೋ ನರಾ ವಾಪಿ ಬೃಹನ್ನಲೇ ॥೨೬॥**
**ಸಂಗ್ರಾಮೇ ನ ಚ ಕಾರ್ಯಂ ಮೇ ಗಾವೋ ಗಚ್ಛನ್ತು ಚಾಪಿ ಮೇ ।**
**ಶೂನ್ಯಂ ಮೇ ನಗರಂ ಚಾಪಿ ಪಿತುಶ್ಚೈವ ಬಿಭೇಮ್ಯಹಮ್ ॥೨೭॥**

“ಬೃಹನ್ನಳೇ! ನೀನೇನೇ ಹೇಳಿದರೂ ನಾನು ಮಾತ್ರ ಯುದ್ಧ ಮಾಡಲು ಸಿದ್ಧನಾಗಿಲ್ಲ. ಈ ಕುರುಯೋಧರು ಬಂದು ನಮ್ಮ ಸಕಲೈಶ್ವರ್ಯ ಗಳನ್ನೂ ಕೊಳ್ಳೆಹೊಡೆದುಕೊಂಡು ಹೋದರೂ ಚಿಂತೆಯಿಲ್ಲ. ನಗರದ ನರ-ನಾರಿಯರು ನನ್ನನ್ನು ನೋಡಿ ಗಹ-ಗಹಿಸಿಯಾದರೂ ನಗಲಿ. ನಮ್ಮ

ಗೋಧನವು ಹಾಳಾಗಿಹೋಗಲಿ. ಈ ಯುದ್ಧದಲ್ಲಿ ನನ್ನ ಕರ್ತವ್ಯವೇನೂ ಇಲ್ಲ. ನಮ್ಮ ನಗರವೀಗ ರಕ್ಷಕರಿಂದ ಶೂನ್ಯವಾಗಿದೆ. ತಂದೆಯವರು ನನಗೆ ನಗರರಕ್ಷಣೆಯ ಭಾರವನ್ನು ವಹಿಸಿದ್ದಾರೆ. ನಗರರಕ್ಷಣಾಭಾರವು ನನ್ನದಾಗಿರುತ್ತದೆ. ಅದನ್ನು ನಾನು ರಕ್ಷಿಸಿಯೇ ತೀರಬೇಕು. ಇಲ್ಲದಿದ್ದರೆ ನಮ್ಮ ತಂದೆಯವರು ಕೋಪಿಸಿಕೊಂಡಾರು. ನಾನು ನನ್ನ ತಂದೆಯವರಿಗೆ ಬಹಳವಾಗಿ ಹೆದರುತ್ತೇನೆ. ಆದುದರಿಂದ ಕೂಡಲೇ ರಥವನ್ನು ನಗರಕ್ಕೆ ಹಿಂದಿರುಗಿಸು."

ಜನಮೇಜಯ! ಹೀಗೆಂದು ಹೇಳಿದ ಉತ್ತರಕುಮಾರನು ಅಭಿಮಾನ-ದರ್ಪಗಳ ಜೊತೆಗೆ ಧನುಸ್ಸನ್ನೂ ರಥದಲ್ಲಿಯೇ ಬಿಟ್ಟು ರಥದಿಂದ ಹಾರಿ ಪಟ್ಟಣದ ಕಡೆಗೆ ಓಡಲುಪಕ್ರಮಿಸಿದನು. ಅರ್ಜುನನು ಹಿಂದಿರುಗಿ ನೋಡಿ ಓಡುತ್ತಿರುವ ಉತ್ತರನನ್ನು ಗಟ್ಟಿಯಾಗಿ ಕೂಗಿ ಹೇಳಿದನು :

**ನೈಷ ಶೂರೈಃ ಸ್ಮೃತೋ ಧರ್ಮಃ ಕ್ಷತ್ರಿಯಸ್ಯ ಪಲಾಯನಮ್ ।**
**ಶ್ರೇಯಸ್ತು ಮರಣಂ ಯುದ್ಧೇ ನ ಭೀತಸ್ಯ ಪಲಾಯನಮ್ ॥೨೯॥**

"ಓ ಉತ್ತರಕುಮಾರ! ವೀರರಾದವರು ಅನುಸರಿಸುವ ಮಾರ್ಗವಿದಲ್ಲ. ಕ್ಷತ್ರಿಯರಾದವರು ಯುದ್ಧಭೂಮಿಯಿಂದ ಖಂಡಿತವಾಗಿಯೂ ಪಲಾಯನಮಾಡಬಾರದು. ಭಯಪಟ್ಟು ಪಲಾಯನಮಾಡುವುದಕ್ಕಿಂತಲೂ ಕ್ಷತ್ರಿಯನಾದವನು ಯುದ್ಧಮಾಡಿ ಮರಣಹೊಂದುವುದೇ ಶ್ರೇಯಸ್ಕರ."

ಆದರೆ ಅರ್ಜುನನ ಆ ಕೂಗಿನಿಂದೇನೂ ಪ್ರಯೋಜನವಾಗಲಿಲ್ಲ. ಉತ್ತರನು ಉಸಿರುಕಟ್ಟಿಕೊಂಡು ಹಿಂದಿರುಗಿಯೂ ನೋಡದೇ ಓಡುತ್ತಲೇ ಇದ್ದನು. ಒಡನೆಯೇ ಅರ್ಜುನನು ಕುದುರೆಗಳ ಕಡಿವಾಣಗಳನ್ನು ರಥದ ಕಂಬಕ್ಕೆ ಬಿಗಿದು, ತಾನೂ ರಥದಿಂದ ಕೆಳಕ್ಕೆ ನೆಗೆದು ಉತ್ತರಕುಮಾರನ ಬೆನ್ನಟ್ಟಿ ಹೋದನು. ಅರ್ಜುನನು ಓಡುತ್ತಿದ್ದಾಗ ಅವನ ಮುಡಿಯು ಬಿಚ್ಚಿಹೋಗಿ ಅವನುಟ್ಟಿದ್ದ ಕೆಂಪುಸೀರೆಯ ಸೆರಗು ಮೇಲಿಂದ ಮೇಲೆ ಹಾರಾಡುತ್ತಿದ್ದಿತು. ಅವನ ವಿಚಿತ್ರರೂಪವನ್ನು ನೋಡಿ ಅವನಾರೆಂಬುದನ್ನು ತಿಳಿಯದಿದ್ದ ಕುರುಸೈನಿಕರು ಗಹ-ಗಹಿಸಿ ನಗುತ್ತಿದ್ದರು. ರಾಜಕುಮಾರನೊಬ್ಬನು ರಥದಿಂದಿಳಿದು ಓಡುತ್ತಿರುವುದು ಮತ್ತು ಅವನನ್ನು ನಪುಂಸಕನೊಬ್ಬನು ಬೆನ್ನಟ್ಟಿ ಹೋಗುತ್ತಿರುವುದು–ಈ ದೃಶ್ಯವನ್ನು ನೋಡಿ

ಕುರುಪ್ರಮುಖರಿಗೆ ಅಚ್ಚರಿಯಾಯಿತು. ಅವರು ತಮ್ಮ-ತಮ್ಮಲ್ಲಿಯೇ ಮಾತನಾಡಿಕೊಂಡರು.

"ರಾಜಕುಮಾರನನ್ನು ಬೆನ್ನಟ್ಟಿಹೋಗುತ್ತಿರುವ ವ್ಯಕ್ತಿಯ ವೇಷ-ಭೂಷಣಗಳು ವಿಚಿತ್ರವಾಗಿವೆಯಲ್ಲವೇ? ಸ್ವಲ್ಪಭಾಗ ಪುರುಷವೇಷವಿದೆ. ಸ್ವಲ್ಪಭಾಗ ಸ್ತ್ರೀವೇಷವಿದೆ. ನಪುಂಸಕನ ವೇಷ-ಭೂಷಣಗಳನ್ನು ತೊಟ್ಟಿದ್ದಾನೆ. ಆದರೆ ವಸ್ತುತಃ ಇವನು ನಪುಂಸಕನಿರಲಾರನು. ಬೂದಿಮುಚ್ಚಿದ ಕೆಂಡದಂತೆ ಯಾವನೋ ಒಬ್ಬ ಮಹಾಪುರುಷನು ತನ್ನ ವೇಷವನ್ನು ಬದಲಾಯಿಸಿಕೊಂಡಿರಬೇಕು. ಇವನು ನಿಜವಾದ ನಪುಂಸಕನೇ ಆಗಿದ್ದರೆ ನಮ್ಮೊಡನೆ ಮಾಡುವ ಯುದ್ಧದಲ್ಲಿ ಸಾರಥ್ಯಮಾಡಲು ಬರುತ್ತಿರಲಿಲ್ಲ. ಮೇಲಾಗಿ ಓಡಿಹೋಗುತ್ತಿರುವ ರಾಜಕುಮಾರನನ್ನು ಯುದ್ಧಕ್ಕೆ ಸೆಳೆದು ತರಲೂ ಯತ್ನಿಸುತ್ತಿರಲಿಲ್ಲ."

"ಇವನು ಅರ್ಜುನನಂತೆಯೇ ಇರುವನೆಂದು ನನಗೆ ಭಾಸವಾಗುತ್ತಿದೆ. ಅರ್ಜುನನೇ ಈ ನಪುಂಸಕವೇಷವನ್ನು ಧರಿಸಿರಲೂಬಹುದು. ಅವನದೇ ಶಿರಸ್ಸು ; ಪರಿಘೋಪಮವಾದ ಆ ತೋಳುಗಳಲ್ಲಿಯೂ ಯಾವ ವ್ಯತ್ಯಾಸವೂ ಕಾಣುತ್ತಿಲ್ಲ. ಇವನ ನಡಿಗೆಯೂ ಅರ್ಜುನನ ಮದಗಜಗಮನ ವನ್ನೇ ಹೋಲುತ್ತಿದೆ. ಆದುದರಿಂದ ಇವನು ಅರ್ಜುನನೇ ಆಗಿರಬೇಕೆಂದು ನಾನು ಭಾವಿಸುತ್ತೇನೆ."

**ಅಮರೇಷ್ವಿವ ದೇವೇನ್ದ್ರೋ ಮಾನುಷೇಷು ಧನಂಜಯಃ ।**
**ಏಕಃ ಕೋಽಸ್ಮಾನುಪಾಯಾಯಾದನ್ಯೋ ಲೋಕೇ**
**ಧನಂಜಯಾತ್ ॥೩೫॥**

"ದೇವತೆಗಳಲ್ಲಿ ದೇವೇಂದ್ರನಂತೆ–ಮಾನವರಲ್ಲಿ ಧನಂಜಯನಿರುತ್ತಾನೆ. ಮೇಲಾಗಿ ನಮ್ಮೊಡನೆ ಯುದ್ಧಮಾಡಲು ಯಾವ ಸೈನ್ಯದ ಸಹಾಯವೂ ಇಲ್ಲದೇ ಏಕಾಕಿಯಾಗಿ ಬರಬೇಕಾದರೆ ಅವನು ಖಂಡಿತವಾಗಿಯೂ ಧನಂಜಯನಲ್ಲದೇ ಬೇರೊಬ್ಬನಿರಲಾರನು."

"ವಿರಾಟನು ತನ್ನೊಬ್ಬನೇ ಮಗನನ್ನು ನಗರದ ರಕ್ಷಣೆಗೆ ಬಿಟ್ಟು ತಾನು ಸಸೈನ್ಯನಾಗಿ ತ್ರಿಗರ್ತರೊಡನೆ ಯುದ್ಧಮಾಡಲು ಹೊರಟುಹೋಗಿರುತ್ತಾನೆ. ಬಾಲಬುದ್ಧಿಯ ಈ ಉತ್ತರನು ಹುಡುಗಾಟಿಕೆಯ ಕಾರಣದಿಂದ

ನಮ್ಮೊಡನೆ ಯುದ್ಧಮಾಡಲು ಬಂದಿರುತ್ತಾನೆ. ಹುಡುಗಾಟಿಕೆಯಲ್ಲದೇ ಇವನಲ್ಲಿ ಮತ್ತಾವ ಮಹತ್ತಾದ ಪೌರುಷವೂ ಕಾಣುವುದಿಲ್ಲ. ವೇಷವನ್ನು ಮರೆಯಿಸಿಕೊಂಡು ತನ್ನ ರಾಜಧಾನಿಯಲ್ಲಿದ್ದ ಅರ್ಜುನನನ್ನು ಉತ್ತರನು ಸಾರಥಿಯನ್ನಾಗಿ ಮಾಡಿಕೊಂಡು ನಮ್ಮೊಡನೆ ಯುದ್ಧಮಾಡಲು ಬಂದಿರುತ್ತಾನೆ. ಈಗಿನ ಇಲ್ಲಿಯ ಪರಿಸ್ಥಿತಿಯನ್ನು ನೋಡಿದರೆ ಉತ್ತರಕುಮಾರನು



ನಮ್ಮನ್ನು ನೋಡಿದೊಡನೆಯೇ ಪಲಾಯನಮಾಡಲು ಉದ್ಯುಕ್ತನಾದನೆಂದು ಕಾಣುತ್ತದೆ. ಅವನನ್ನು ಹಿಡಿದು ತರಲು ಧನಂಜಯನು ಅವನನ್ನು ಬೆನ್ನಟ್ಟಿ ಹೋಗುತ್ತಿದ್ದಾನೆ. ಒಂದು ವೇಳೆ ಅವನು ಸಾಮಾನ್ಯನಾದೊಬ್ಬ ಸಾರಥಿಯೇ ಆಗಿದ್ದರೆ ರಾಜಕುಮಾರನ ಆಶಯದಂತೆ ರಥವನ್ನು ಹಿಂತಿರುಗಿಸಿಕೊಂಡು

ಹೋಗುತ್ತಿದ್ದನೇ ಹೊರತು ಓಡುತ್ತಿರುವ ಉತ್ತರನನ್ನು ಪುನಃ ಕರೆತರಲು ಪ್ರಯತ್ನಿಸುತ್ತಿರಲಿಲ್ಲ. ಆದುದರಿಂದ ವಿಚಿತ್ರವೇಷಧರನಾದ ಇವನು ಧನಂಜಯನೇ ಇರಬೇಕೆಂಬುದರಲ್ಲಿ ಯಾವ ಸಂಶಯವೂ ಕಾಣುವುದಿಲ್ಲ."

ಜನಮೇಜಯ! ಇವೇ ಮುಂತಾಗಿ ಕೌರವಪ್ರಮುಖರು ಊಹಾ ಪೋಹಗಳನ್ನು ಮಾಡುತ್ತಿದ್ದರೇ ಹೊರತು ನಪುಂಸಕವೇಷವನ್ನು ಧರಿಸಿದ್ದವನ ವಿಷಯವಾಗಿ ಅವರು ಯಾವ ವಿಧವಾದ ನಿರ್ಧಾರಕ್ಕೂ ಬರಲು ಸಾಧ್ಯ ವಾಗಲಿಲ್ಲ.

ಅತ್ತಲಾಗಿ ಅರ್ಜುನನು ಉತ್ತರನನ್ನು ಬೆನ್ನಟ್ಟಿ, ಉತ್ತರನು ನೂರು ಹೆಜ್ಜೆಗಳಷ್ಟು ದೂರ ಓಡಿಹೋಗುವುದರೊಳಗಾಗಿ ಅವನ ಮುಡಿಯನ್ನು ಹಿಡಿದು ನಿಲ್ಲಿಸಿದನು. ಉತ್ತರನ ದುಃಖಕ್ಕೆ ಪಾರವಿಲ್ಲವಾಯಿತು. ಮುಂದಿನ ನಿಮಿಷದಲ್ಲಿ ಪ್ರಾಣವೇ ಹೊರಟುಹೋಗಿಬಿಡುವುದೆಂಬಷ್ಟು ಭಯದಿಂದ ರಾಜಕುಮಾರನು ಬಿಕ್ಕಿ-ಬಿಕ್ಕಿ ಅಳುತ್ತಾ ಹೇಳಿದನು :

"ಬೃಹನ್ನಳೇ! ನಾವು ವ್ಯರ್ಥವಾಗಿ ಪ್ರಾಣತೊರೆಯುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಈ ಅತಿರಥ-ಮಹಾರಥರ ಮುಂದೆ ನಾವು ಕ್ಷಣ ಕಾಲವೂ ನಿಲ್ಲಲಾರೆವು. ಆದುದರಿಂದ ನೀನು ನನ್ನ ಮಾತನ್ನು ಕೇಳು. ವೃಥಾ ಹಠಮಾಡಬೇಡ.

**ಶೃಣುಯಾಸ್ತ್ವಂ ಹಿ ಕಲ್ಯಾಣಿ ಬೃಹನ್ನಲೇ ಸುಮಧ್ಯಮೇ ।**
**ನಿವರ್ತಯ ರಥಂ ಕ್ಷಿಪ್ರಂ ಜೀವನ್ಭದ್ರಾಣಿ ಪಶ್ಯತಿ ॥೪೨॥**

ಕಲ್ಯಾಣಿ! ನನ್ನ ಮಾತನ್ನು ಕೇಳು. ಬೃಹನ್ನಳೇ! ಸುಮಧ್ಯಮೇ! ನಾವು ಜೀವಿಸಿಯಾದರೂ ಇದ್ದರೆ ಎಂದಾದರೊಂದು ದಿನ ಶುಭೋದಯವನ್ನು ಕಾಣಬಹುದು. ಬದುಕಿರುವವನು ಒಳ್ಳೆಯ ದಿನಗಳನ್ನು ಕಂಡೇ ಕಾಣುತ್ತಾನೆ. ಆದುದರಿಂದ ರಥವನ್ನು ಕೂಡಲೇ ಹಿಂದಿರುಗಿಸು.

ನಾನು ಯುದ್ಧಮಾಡದೇ ಹಿಂದಿರುಗಿದ ಕಾರಣದಿಂದ ನಿನ್ನ ಸಾರಥ್ಯಕ್ಕೆ ಯೋಗ್ಯವಾದ ಪ್ರತಿಫಲವು ಸಿಕ್ಕುವುದಿಲ್ಲವೆಂದೇನೂ ಭಾವಿಸಬೇಡ. ನನ್ನನ್ನು ಪ್ರಾಣಸಹಿತವಾಗಿ ಬಿಟ್ಟುಬಿಟ್ಟರೆ ನಿನಗೆ ಬೇಕಾದುದೆಲ್ಲವನ್ನೂ ನಾನು ಕೊಡು

ತ್ತೇನೆ. ಶುದ್ಧಸ್ವರ್ಣದ ನೂರು ವರಹಗಳನ್ನು ಕೊಡುತ್ತೇನೆ. ಮಹಾ ಪ್ರಭೆಯುಳ್ಳ, ಸುವರ್ಣದಲ್ಲಿ ಮೆಟ್ಟಿದ ಎಂಟು ವೈಡೂರ್ಯಮಣಿಗಳನ್ನು ಕೊಡುತ್ತೇನೆ. ಸುವರ್ಣಮಯಪತಾಕೆಯುಳ್ಳ ಉತ್ತಮವಾದ ಅಶ್ವಗಳಿಂದ ಕೂಡಿದ ರಥವನ್ನು ಕೊಡುತ್ತೇನೆ. ಮದಿಸಿದ ಹತ್ತು ಆನೆಗಳನ್ನು ಕೊಡುತ್ತೇನೆ. ಇನ್ನೇನಾದರೂ ಅಪೇಕ್ಷೆಯಿದ್ದರೂ ತಿಳಿಸು. ಆದರೆ ನನ್ನನ್ನು ಮಾತ್ರ ಬಿಟ್ಟುಬಿಡು."

ಜನಮೇಜಯ! ಉತ್ತರನು ಅಳುತ್ತಳುತ್ತಾ ಇವೇ ಮುಂತಾಗಿ ಎಷ್ಟೋ ಹೇಳಿದನು. ಪರಿ-ಪರಿಯಾಗಿ ಪ್ರಾರ್ಥಿಸಿದನು. ಭಯದಿಂದ ವಿಹ್ವಲ ನಾದ ಅವನಿಗೆ ಸರಿಯಾಗಿ ಪ್ರಜ್ಞೆಯೂ ಇರಲಿಲ್ಲ. ಅವನ ಮಾತನ್ನೂ, ಅವನು ಮಾಡುತ್ತಿದ್ದ ವಿಲಾಪವನ್ನೂ ಕೇಳಿ ಅರ್ಜುನನು ಗಹ-ಗಹಿಸಿ ನಗು ತ್ತಲೇ ಅವನನ್ನು ರಥದ ಸಮೀಪಕ್ಕೆ ಸೆಳೆದುತಂದನು. ರಾಜಕುಮಾರನ ತಲೆಸವರಿ, ಸಮಾಧಾನಗೊಳಿಸುತ್ತಾ, ಬಹಳ ಭಯಪಟ್ಟಿದ್ದ ಮತ್ತು ಅದೇ ಕಾರಣದಿಂದ ತನ್ನ ಚೈತನ್ಯವನ್ನೂ ಸಂಪೂರ್ಣವಾಗಿ ಕಳೆದುಕೊಂಡಿದ್ದ ಉತ್ತರನನ್ನು ಕುರಿತು ಅರ್ಜುನನು ಹೇಳಿದನು : "ಹೆದರಬೇಡ, ರಾಜ ಕುಮಾರ! ಧೈರ್ಯವನ್ನು ತಂದುಕೋ. ಕ್ಷತ್ರಿಯರಿಗೆ ಉಚಿತವೆನಿಸುವ ರೀತಿಯಲ್ಲಿ ವರ್ತಿಸು. ಶತ್ರುಗಳನ್ನು ಮುಹೂರ್ತಮಾತ್ರದಲ್ಲಿ ಧ್ವಂಸಮಾಡಿ ಬಿಡುವೆನೆಂದು ಸ್ತ್ರೀಯರ ಮುಂದೆ ಹೇಳಿ, ಶತ್ರುಕರ್ಷಣನೆಂಬ ಹೆಸರನ್ನು ಪಡೆದು, ಶತ್ರುಗಳನ್ನು ನೋಡಿದೊಡನೆಯೇ ಪಲಾಯನಮಾಡಬಹುದೇ? ಈಗ ನೀನು ಶತ್ರುಗಳೊಡನೆ ಯುದ್ಧಮಾಡಲು ನಿರುತ್ಸಾಹನಾಗಿದ್ದರೆ ನೀನು ಯುದ್ಧಮಾಡಬೇಡ. ನಾನೇ ಶತ್ರುಗಳೊಡನೆ ಯುದ್ಧಮಾಡುತ್ತೇನೆ. ನೀನು ರಥದಲ್ಲಿ ಕುಳಿತು ಕುದುರೆಗಳನ್ನಾದರೂ ನಿಯಂತ್ರಿಸಬಹುದಲ್ಲವೇ? ನನ್ನ ಬಾಹುಬಲದಿಂದ ಸಂರಕ್ಷಿತನಾದ ನೀನು ಈ ರಥವನ್ನು ಅಭೇದ್ಯವಾದ, ಘೋರವಾದ, ವೀರರಾದ ಮಹಾರಥರಿಂದ ಸುರಕ್ಷಿತವಾದ ಕುರುಸೈನ್ಯದ ಮಧ್ಯಕ್ಕೆ ನುಗ್ಗಿಸು. ಹೆದರಬೇಡ, ರಾಜಕುಮಾರ! ನೀನು ಕ್ಷತ್ರಿಯವಂಶ ಸಂಭೂತನಾಗಿರುವೆ. ವಿರಾಟರಾಜನ ಮಗನಾಗಿರುವೆ. ಇಂತಹ ಪುರುಷ ವ್ಯಾಘ್ರನಾದ ನೀನು ಶತ್ರುಗಳ ಸಮ್ಮುಖದಲ್ಲಿ ನಿಂತು ವಿಷಾದಿಸುವುದೇಕೆ?

ನಾನು ಈ ಕುರುಯೋಧರೊಡನೆ ಯುದ್ಧಮಾಡುತ್ತೇನೆ. ದುರಾಸದವಾದ ಈ ಸೈನ್ಯವ್ಯೂಹದೊಳಗೆ ನುಗ್ಗಿ, ಶತ್ರುಗಳನ್ನು ಗೆದ್ದು, ಅವರು ಅಪಹರಿಸಿರುವ ಗೋವುಗಳನ್ನು ಹಿಂದಿರುಗಿಸುತ್ತೇನೆ. ನಾನು ನಿನ್ನ ಪ್ರಾಣರಕ್ಷಕನಾಗಿದ್ದುಕೊಂಡು ಕುರುಭೂಪರೊಡನೆ ಯುದ್ಧಮಾಡುತ್ತೇನೆ."

ಜನಮೇಜಯ! ಅಪರಾಜಿತನಾದ ಕಿರೀಟಿಯು ಈ ರೀತಿಯಾಗಿ ಸುಮಾರು ಒಂದು ಮುಹೂರ್ತಕಾಲದವರೆಗೆ ಉತ್ತರನಿಗೆ ಸಮಾಧಾನ ಹೇಳಿದನು. ಅವನೆಷ್ಟೇ ಸಮಾಧಾನಹೇಳಿದರೂ ಉತ್ತರನಿಗೆ ಧೈರ್ಯ ಬರಲಿಲ್ಲ. ಆದರೆ ಉತ್ತರನನ್ನು ಬಿಟ್ಟು ಅರ್ಜುನನು ಯುದ್ಧಕ್ಕೆ ಹೋಗುವಂತೆಯೂ ಇರಲಿಲ್ಲ. ಸಾರಥಿಯ ಅವಶ್ಯಕತೆಯಿದ್ದಿತು. ಬಹುಭ್ರಾಂತನಾಗಿದ್ದ, ಭಯದಿಂದ ಪೀಡಿತನಾಗಿದ್ದ ಉತ್ತರಕುಮಾರನನ್ನು–ಅವನಿಗೆ ಸ್ವಲ್ಪವೂ ಇಚ್ಛೆಯಿಲ್ಲದಿದ್ದರೂ ಶತ್ರುಗಳನ್ನು ಪ್ರಹರಿಸುವುದರಲ್ಲಿ ಶ್ರೇಷ್ಠನೆನಿಸಿದ ಪಾರ್ಥನು ಮೇಲೆತ್ತಿ ರಥದಲ್ಲಿ ಕುಳ್ಳಿರಿಸಿದನು.

ಃ೮ನೆಯ ಅಧ್ಯಾಯವು ಮುಗಿಯಿತು.

೩೯ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ದ್ರೋಣರಿಂದ ಅರ್ಜುನನ ಪ್ರಶಂಸೆ

ಜನಮೇಜಯ! ಅರ್ಜುನನು ಉತ್ತರನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಶಮೀವೃಕ್ಷದ ಸಮೀಪಕ್ಕೆ ಹೋದನು. ಅರ್ಜುನನು ನಪುಂಸಕನ ವೇಷವನ್ನು ಧರಿಸಿದ್ದರೂ ತಮ್ಮೊಡನೆ ಯುದ್ಧಮಾಡಲು ಬರುತ್ತಿರುವವನು ಅರ್ಜುನನೇ ಇರಬಹುದೆಂದು ನಿಶ್ಚಯಿಸಿದ ಭೀಷ್ಮ-ದ್ರೋಣ ಪ್ರಮುಖರಾದ ಕುರುಪುಂಗವರು–ಧನಂಜಯನೊಡನೆ ನಡೆಯಲಿರುವ ಮುಂದಿನ ಯುದ್ಧವನ್ನು ನೆನೆದು ಭಯಗೊಂಡರು. ಮುಂದಾಗುವ ಪರಾಭವವನ್ನು ಸೂಚಿಸಲೋ ಎಂಬಂತೆ–ಅನೇಕ ಅಶುಭಸೂಚಕ ಚಿಹ್ನೆಗಳೂ ಕಾಣಿಸಿಕೊಂಡುವು. ಸೈನಿಕರು ನಿರುತ್ಸಾಹಿಗಳಾದರು. ಅದನ್ನು ಕಂಡು ಶಸ್ತ್ರವಿದರಲ್ಲಿ ಶ್ರೇಷ್ಠರಾದ ಆಚಾರ್ಯದ್ರೋಣರು ಹೀಗೆಂದು ಹೇಳಿದರು :

**ಚಣ್ಡಾಶ್ಚ ವಾತಾಃ ಸಂವಾನ್ತಿ ರೂಕ್ಷಾಃ ಶರ್ಕರವರ್ಷಿಣಃ ।**
**ಭಸ್ಮವರ್ಣಪ್ರಕಾಶೇನ ತಮಸಾ ಸಂವೃತಂ ನಭಃ ॥೪॥**

**ರೂಕ್ಷವರ್ಣಾಶ್ಚ ಜಲದಾ ದೃಶ್ಯನ್ತೇಽದ್ಭುತದರ್ಶನಾಃ ।**
**ನಿಃಸರನ್ತಿ ಚ ಕೋಶೇಭ್ಯಃ ಶಸ್ತ್ರಾಣಿ ವಿವಿಧಾನಿ ಚ ॥೫॥**

**ಶಿವಾಶ್ಚ ವಿನದನ್ತ್ಯೇತಾ ದೀಪ್ತಾಯಾಂ ದಿಶಿ ದಾರುಣಾಃ ।**
**ಹಯಾಶ್ಚಾಶ್ರೂಣಿ ಮುಞ್ಚನ್ತಿ ಧ್ವಜಾಃ ಕಮ್ಪನ್ತ್ಯಕಮ್ಪಿತಾಃ ॥೬॥**

**ಯಾದೃಶಾನ್ಯತ್ರ ರೂಪಾಣಿ ಸಂದೃಶ್ಯನ್ತೇ ಬಹೂನಿ ಚ ।**
**ಯತ್ತಾ ಭವನ್ತಸ್ತಿಷ್ಠನ್ತು ಸಾಧ್ವಸಂ ಸಮುಪಸ್ಥಿತಮ್ ॥೭॥**

**ರಕ್ಷಧ್ವಮಪಿ ಚಾತ್ಮಾನಂ ವ್ಯೂಹಧ್ವಂ ವಾಹಿನೀಮಪಿ ।**
**ವೈಶಸಂ ಚ ಪ್ರತೀಕ್ಷಧ್ವಂ ರಕ್ಷಧ್ವಂ ಚಾಪಿ ಗೋಧನಮ್ ॥೮॥**

"ಚಂಡಮಾರುತವು ಬೀಸುತ್ತಿದೆ. ಕಲ್ಲಿನ ಮಳೆಯನ್ನು ಸುರಿಸುತ್ತಿದೆ. ಆಕಾಶವು ಬೂದಿಯ ಬಣ್ಣದ ಪ್ರಕಾಶವುಳ್ಳ ಕತ್ತಲಿನಿಂದ ಆವೃತವಾಗಿದೆ. ಆಕಾಶದಲ್ಲಿ ಆವರಿಸಿರುವ ಕ್ರೂರವರ್ಣದ ಮೋಡಗಳು ಅದ್ಭುತವಾಗಿ ಕಾಣುತ್ತಿವೆ. ನಾನಾವಿಧವಾದ ನಮ್ಮ ಶಸ್ತ್ರಾಸ್ತ್ರಗಳು ಕೋಶಗಳಿಂದ ಕೆಳಕ್ಕೆ ಬೀಳುತ್ತಿವೆ. ಆಗ್ನೇಯದಿಕ್ಕಿನಲ್ಲಿ ಅಗ್ನಿಯು ನಿಷ್ಕಾರಣವಾಗಿ ಹತ್ತಿ ಕೊಂಡು ಉರಿಯುತ್ತಿದೆ. ಇದನ್ನು ನೋಡಿ ಗಾಬರಿಗೊಂಡ ಗುಳ್ಳೇನರಿಗಳು ವಿಕಾರಸ್ವರದಿಂದ ಅರಚಿಕೊಳ್ಳುತ್ತಿವೆ. ನಮ್ಮ ರಥಗಳಿಗೆ ಕಟ್ಟಿರುವ ಕುದುರೆ ಗಳು ಕಣ್ಣೀರು ಸುರಿಸುತ್ತಿವೆ. ನಮ್ಮ ರಥಗಳ ಮೇಲಿರುವ ಧ್ವಜದಂಡಗಳು ಅಲುಗಾಡುತ್ತಿವೆ. ಇಂತಹ ಅನೇಕಾನೇಕ ಅಶುಭಸೂಚನೆಗಳು ನಮ್ಮ ಸುತ್ತಲೂ ಕಂಡುಬರುತ್ತಿವೆ. ಆದುದರಿಂದ ಮುಂದೆ ನಾವು ವಿಪತ್ತನ್ನು ಎದುರಿಸಬೇಕಾದುದು ಅನಿವಾರ್ಯವೆಂದೇ ನಾನು ಭಾವಿಸುತ್ತೇನೆ. ಎಲ್ಲರೂ ಜಾಗರೂಕತೆಯಿಂದ ಯುದ್ಧಸನ್ನದ್ಧರಾಗಿ ನಿಲ್ಲಿರಿ. ನೀವು ಮೊದಲು ನಿಮ್ಮ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕು. ಸೇನೆಗಳನ್ನು ವ್ಯೂಹಕ್ರಮದಲ್ಲಿ ನಿಲ್ಲಿಸಿರಿ. ನಮ್ಮ ಸೈನ್ಯದಲ್ಲಾಗುವ ಘೋರವಾದ ಹತ್ಯೆಯನ್ನು ಪ್ರತೀಕ್ಷಿಸಿ ನಿಲ್ಲಿರಿ. ಇದರ ಜೊತೆಗೆ ನಾವು ಆಕ್ರಮಿಸಿರುವ ಹಸುಗಳನ್ನೂ ರಕ್ಷಿಸಿಕೊಳ್ಳ ಬೇಕಾಗಿದೆ. ಮಹಾಧನುರ್ಧರನಾದ, ಶಸ್ತ್ರವಿದರಲ್ಲಿ ಶ್ರೇಷ್ಠನಾದ, ವೀರನಾದ

ಪಾರ್ಥನೇ ಈಗ ನಪುಂಸಕವೇಷದಲ್ಲಿ ಯುದ್ಧರಂಗಕ್ಕೆ ಆಗಮಿಸಿದ್ದಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

**ನದೀಜ ಲಙ್ಕೇಶವನಾರಿಕೇತು-**
**ರ್ನಗಾಹ್ವಯೋ ನಾಮ ನಗಾರಿಸೂನುಃ ।**
**ಏಷೋಽಙ್ಗನಾವೇಷಧರಃ ಕಿರೀಟೀ**
**ಜಿತ್ವಾ ವಯಂ ನೇಷ್ಯತಿ ಚಾದ್ಯ ಗಾವಃ ॥೧೦॥**

ಗಾಂಗೇಯ! ಇಂದಿನ ಯುದ್ಧದ ಫಲಿತಾಂಶವನ್ನೂ ನಾನು ಈಗಲೇ ಹೇಳಿಬಿಡುತ್ತೇನೆ. ಸ್ತ್ರೀವೇಷವನ್ನು ಧರಿಸಿರುವ ಇವನು–ಲಂಕೇಶನಾದ ರಾವಣನ ಅಶೋಕವನವನ್ನು ನಿರ್ಮೂಲಮಾಡಿದ ಆಂಜನೇಯನನ್ನೇ ಧ್ವಜ ದಲ್ಲಿ ಧರಿಸಿರುವ, ಒಂದು ವೃಕ್ಷದ ಹೆಸರನ್ನೇ ಇಟ್ಟುಕೊಂಡಿರುವ (ಅರ್ಜುನ–ಎಂಬ ವೃಕ್ಷದ ಹೆಸರನ್ನಿಟ್ಟುಕೊಂಡಿರುವ ), ಪರ್ವತಗಳಿಗೆಲ್ಲಾ ಶತ್ರುವಾದ ಇಂದ್ರನ ಮಗನಾದ 'ಕಿರೀಟೀ' ಎನ್ನುವುದರಲ್ಲಿ ಸಂದೇಹವೇ ಇಲ್ಲ. ಇವನು ಯಾರನ್ನು ಸೋಲಿಸಿ ಗೋವುಗಳನ್ನು ಬಿಡಿಸಿಕೊಂಡು ಹೋಗಲು ಬಂದಿರುವನೋ–ಆ ದುರ್ಯೋಧನನನ್ನು ರಕ್ಷಿಸು, ಪಿತಾಮಹ!

ಶತ್ರುತಾಪಕನಾದ, ಸವ್ಯಸಾಚಿಯೆಂದು ಪ್ರಸಿದ್ಧನಾಗಿರುವ ಪಾರ್ಥನನ್ನು ದೇವ-ದಾನವರೆಲ್ಲರೂ ಸೇರಿ ಎದುರಿಸಿದರೂ ಅವನು ಹೆದರಿಕೆಯಿಂದ ಹಿಂದಿರುಗತಕ್ಕವನಲ್ಲ. ಮೇಲಾಗಿ ಇವನು ಅರಣ್ಯವಾಸದಿಂದ ಬಹಳ ಕ್ಲೇಶಪಟ್ಟಿದ್ದಾನೆ. ಆದರಿಂದಿವನು ಅತ್ಯಂತಕುಪಿತನೂ ಆಗಿರುತ್ತಾನೆ. ಸಾಕ್ಷಾತ್ ದೇವೇಂದ್ರನಿಂದಲೇ ಸಕಲವಿಧವಾದ ಅಸ್ತ್ರಗಳನ್ನೂ ಪಡೆದುಬಂದಿರು ತ್ತಾನೆ. ಆದುದರಿಂದ ಇವನು ಸಾಕ್ಷಾತ್ ಪುರಂದರನಿಗೆ ಸಮನಾಗಿ ಯುದ್ಧಮಾಡುತ್ತಾನೆ. ಇವನನ್ನು ಎದುರಿಸಿ ನಿಂತು ಯುದ್ಧಮಾಡುವವ ರನ್ನು ನಾನು ಈ ಕೌರವಸೇನೆಯಲ್ಲಿ ಕಾಣೆನಾಗಿದ್ದೇನೆ. ಪಿತಾಮಹ! ಇಂದ್ರನು ಮಾತ್ರವೇ ಅಲ್ಲ. ಮಹಾದೇವನೂ ಈ ಅರ್ಜುನನ ವಿಷಯದಲ್ಲಿ ಪ್ರಸನ್ನನಾದನೆಂದು ನಾನು ಕೇಳಿದ್ದೇನೆ. ಅರ್ಜುನನು ಹಿಮವತ್ಪರ್ವತದಲ್ಲಿ ಶಿವನನ್ನು ಕುರಿತು ಪಾಶುಪತಾಸ್ತ್ರಕ್ಕಾಗಿ ತಪಸ್ಸು ಮಾಡುತ್ತಿದ್ದುದಾಗಿಯೂ–ಆ ಸಮಯದಲ್ಲಿ ಪರಶಿವನು ಕಿರಾತವೇಷವನ್ನು ಧರಿಸಿ ಅರ್ಜುನ

ನೊಡನೆ ಯುದ್ಧಮಾಡಿ ಯುದ್ಧದಲ್ಲಿ ಇವನ ಸಾಹಸವನ್ನು ಕಂಡು ಸಂತುಷ್ಟ ನಾದುದಾಗಿಯೂ ಕೇಳಿದ್ದೇನೆ."

(ಶತ್ರುಪಕ್ಷದಲ್ಲಿ ಎಂತಹ ಗುಣಗಳೇ ಇದ್ದರೂ ಅದನ್ನೇ ಹೊಗಳುತ್ತಾ ಹೋಗುವುದು ಎಲ್ಲರಿಗೂ ಸರಿಯೆನಿಸುವುದಿಲ್ಲ. ಇದು ಉದಾತ್ತವಾದ ಧೋರಣೆಯೆಂಬುದೇನೋ ನಿಜ. ಎದುರಾಳಿಯನ್ನು ಹೊಗಳುವುದರಿಂದ ಸ್ವಪಕ್ಷದ ಯೋಧರಿಗೆ ಉತ್ಸಾಹವು ಕುಗ್ಗುವುದೆಂಬ ಒಂದು ಅಂಶವೂ ಅಷ್ಟೇ ನಿಜ.)

ದ್ರೋಣರು ಅರ್ಜುನನನ್ನು ಪರಿ-ಪರಿಯಾಗಿ ಹೊಗಳಿದುದು ಕರ್ಣನಿಗೆ ಸರಿಯೆನಿಸಲಿಲ್ಲ. ತನ್ನ ಅಸಮಾಧಾನವನ್ನು ಸ್ಪಷ್ಟವಾಗಿ ದ್ರೋಣರಿಗೆ ತಿಳಿಸಿದನು:

"ಆಚಾರ್ಯರೇ! ನೀವು ಯಾವಾಗಲೂ ಅರ್ಜುನನನ್ನು ಹೊಗಳುತ್ತಲೇ ಇರುತ್ತೀರಿ. ಈ ಹೊಗಳಿಕೆಯ ಮೂಲಕವಾಗಿ ನಮ್ಮನ್ನೂ–ನಮ್ಮ ಪರಾಕ್ರಮವನ್ನೂ ಅಲ್ಲಗಳೆಯುವ ಉದ್ದೇಶವೇ ನಿಮ್ಮದಾಗಿರುತ್ತದೆ. ನನ್ನ ಮತ್ತು ದುರ್ಯೋಧನನ ಪರಾಕ್ರಮದ ವಿಷಯವಾಗಿ ನಾನು ಹೇಳುವುದಾದರೆ:

**ನ ಚಾರ್ಜುನಃ ಕಲಾಪೂರ್ಣೋ ಮಮ ದುರ್ಯೋಧನಸ್ಯ ಚ ॥**

ನಮ್ಮ ಪರಾಕ್ರಮದ ಹದಿನಾರನೆಯ ಒಂದಂಶದಷ್ಟು ಪರಾಕ್ರಮವೂ ಅರ್ಜುನನಲ್ಲಿರುವುದಿಲ್ಲ. ಹೀಗಿದ್ದರೂ ಸದಾ ಅರ್ಜುನನನ್ನೇ ಹೊಗಳುವ ನಿಮ್ಮ ಆಶಯವೇನೆಂಬುದು ತಿಳಿಯದಾಗಿದೆ."

ಒಂದೇ ವಿಷಯದಲ್ಲಿ ಒಬ್ಬೊಬ್ಬರ ಅಭಿಪ್ರಾಯಗಳು ಬೇರೆಯ ದಾಗಿಯೇ ಇರಬಹುದು. ಪ್ರಕೃತಸಂದರ್ಭದಲ್ಲಿ ದ್ರೋಣರು ಮಾಡಿದ ಅರ್ಜುನನ ಹೊಗಳಿಕೆಯು ದುರ್ಯೋಧನನ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಲಿಲ್ಲ. ನಪುಂಸಕವೇಷಧಾರಿಯಾದವನನ್ನು ಆಚಾರ್ಯರು ಅರ್ಜುನನೆಂದು ಕಂಡುಹಿಡಿದುದಕ್ಕಾಗಿ ಅವನಿಗೆ ಪರಮ ಸಂತೋಷವೇ ಆಯಿತು. ಅದನ್ನೇ ವ್ಯಕ್ತಪಡಿಸುತ್ತಾ ದುರ್ಯೋಧನನು ಕರ್ಣನೊಡನೆ ಹೇಳಿದನು :

**ಯದ್ಯೇಷ ಪಾರ್ಥೋ ರಾಧೇಯ ಕೃತಂ ಕಾರ್ಯಂ ಭವೇನ್ಮಮ ।**
**ಜ್ಞಾತಾಃ ಪುನಶ್ಚರಿಷ್ಯನ್ತಿ ದ್ವಾದಶಾಬ್ದಾನ್ವಿಶಾಮ್ಪತೇ ॥೧೫॥**

**ಅಥೈಷ ಕಶ್ಚಿದೇವಾನ್ಯಃ ಕ್ಲೀಬವೇಷೇಣ ಮಾನವಃ ।**
**ಶರೈರೇನಂ ಸುನಿಶಿತೈಃ ಪಾತಯಿಷ್ಯಾಮಿ ಭೂತಲೇ ॥೧೬॥**

"ರಾಧೇಯ! ಇವನು ನಿಶ್ಚಯವಾಗಿಯೂ ಅರ್ಜುನನೇ ಆಗಿದ್ದರೆ– ನನ್ನ ಕಾರ್ಯವು ಫಲಿಸಿದಂತೆಯೇ ಆಯಿತು. ಇವನನ್ನು ನಾವು ಅರ್ಜುನನೆಂದು ಸಿದ್ಧಪಡಿಸಿಬಿಟ್ಟರೆ ಪುನಃ ಹನ್ನೆರಡು ವರ್ಷಗಳ ಪರ್ಯಂತವಾಗಿ ಪಾಂಡವರು ಅರಣ್ಯವಾಸವನ್ನು ಮಾಡಲೇಬೇಕು. ಇವನು ಅರ್ಜುನನಾಗಿರದೆ ನಿಶ್ಚಯವಾಗಿಯೂ ನಪುಂಸಕನೋ ಅಥವಾ ನಪುಂಸಕವೇಷಧಾರಿಯಾದ ಯಾವನಾದರೂ ಮಾನವನೋ ಆಗಿದ್ದರೆ–ನಿಶಿತವಾದ ಬಾಣಗಳಿಂದ ಕ್ಷಣಮಾತ್ರದಲ್ಲಿ ಇವನನ್ನು ಭೂಮಿಗೆ ಕೆಡಹುತ್ತೇನೆ. ಈ ಎರಡರಲ್ಲಿ ಯಾವುದಕ್ಕೂ ನಾವು ಚಿಂತಿಸಬೇಕಾಗಿಲ್ಲ. ಅಲ್ಲವೇ? ಕರ್ಣ!"

ಜನಮೇಜಯ! ದುರ್ಯೋಧನನಾಡಿದ ಯುಕ್ತಿಯುಕ್ತವಾದ ಹಾಗೂ ಪೌರುಷದ ಮಾತನ್ನು ಭೀಷ್ಮ, ದ್ರೋಣ, ಕೃಪ ಮತ್ತು ಅಶ್ವತ್ಥಾಮರು ಶ್ಲಾಘಿಸಿದರು.

೩೯ನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಶಮೀವೃಕ್ಷದಿಂದ ಅಸ್ತ್ರಗಳನ್ನು ಕೆಳಗಿಳಿಸುವಂತೆ ಉತ್ತರನಿಗೆ ಅರ್ಜುನನ ಆದೇಶ

ಜನಮೇಜಯ! ಉತ್ತರನು ಯುದ್ಧದಲ್ಲಿ ಹೆಚ್ಚಿನ ಪರಿಶ್ರಮವಿಲ್ಲದವನೆಂದೂ, ಕಷ್ಟಸಹಿಷ್ಣುವಲ್ಲದ ಸುಕುಮಾರನೆಂದೂ–ಅರ್ಜುನನು ತಿಳಿದುಕೊಂಡವನಾಗಿ ಶಮೀವೃಕ್ಷದ ಸಮೀಪಕ್ಕೆ ಹೋದನಂತರ ಅವನನ್ನು ಕುರಿತು ಹೇಳಿದನು :

"ಉತ್ತರಕುಮಾರ! ಈ ಶಮೀವೃಕ್ಷವನ್ನು ಹತ್ತಿ ಅಲ್ಲಿರುವ ಆಯುಧಗಳನ್ನು ಕೆಳಕ್ಕೆ ತೆಗೆದುಕೊಂಡು ಬರುವವನಾಗು. ರಥದಲ್ಲಿ ನೀನಿಟ್ಟಿರುವ

ಧನುರ್ಬಾಣಗಳು ನಾನು ಉಪಯೋಗಿಸಲು ಯೋಗ್ಯವಾಗಿಲ್ಲ. ನನ್ನ ಶಕ್ತಿಯನ್ನು ಇವು ತಡೆದುಕೊಳ್ಳಲಾರವು. (ನಾನೊಮ್ಮೆ ಶಿಂಜಿನಿಯನ್ನು ಹಿಡಿದು ಸೆಳೆದೆನೆಂದರೆ ಈ ಧನುಸ್ಸು ಎರಡು ಭಾಗಗಳಾಗಿ ಹೋಗುವುದು.) ಆನೆಗಳ, ಕುದುರೆಗಳ ಮತ್ತು ಶತ್ರುಗಳ ನಿರ್ಮೂಲನಕ್ಕಾಗಿ ನಾನು ಮಾಡುವ ಬಲಪ್ರಯೋಗದ ಭಾರವನ್ನು ಈ ನಿನ್ನ ಆಯುಧಗಳೊಂದೂ ತಡೆದುಕೊಳ್ಳಲಾರವು. ಉತ್ತರ! ದೊಡ್ಡ ಕೊಂಬೆಗಳುಳ್ಳ ಈ ಶಮೀವೃಕ್ಷವನ್ನು ಹತ್ತು. ಹಸಿರೆಲೆಗಳಿಂದ ದಟ್ಟವಾಗಿರುವ ಈ ವೃಕ್ಷದ ಕೊಂಬೆಗಳಲ್ಲಿ–ಪಂಚಪಾಂಡವರ ಬಿಲ್ಲುಗಳನ್ನೂ, ಬಾಣಗಳನ್ನೂ, ಧ್ವಜಗಳನ್ನೂ, ಕವಚಗಳನ್ನೂ ಕಟ್ಟಿ ಇಡಲಾಗಿದೆ. ಮಹಾಶಕ್ತಿಯುತವಾದ ಅರ್ಜುನನ ಗಾಂಡೀವಧನುಸ್ಸೂ ಇಲ್ಲಿಯೇ ಇದೆ. ಆ ಮಹಾಧನುಸ್ಸು ಒಂದು ಲಕ್ಷ ಸಾಮಾನ್ಯ ಧನುಸ್ಸುಗಳಿಗೆ ಸರಿದೂಗುತ್ತದೆ. ರಾಷ್ಟ್ರವನ್ನು ವರ್ಧಿಸಲು ಆ ಧನುಸ್ಸು ಹೆಚ್ಚು ಸಹಾಯಕವಾಗುತ್ತದೆ. ಮಹತ್ತರವಾದ ಬಲಪ್ರಯೋಗದಿಂದ ಅದರ ಶಿಂಜಿನಿಯನ್ನು ಹಿಡಿದು ಸೆಳೆದರೂ ಆ ಮಹಾಧನುಸ್ಸು ತಡೆದುಕೊಳ್ಳುತ್ತದೆ. ಬಲವಾಗಿ ಸೆಳೆಯುವಿಕೆಯಿಂದ ಅದು ಭಗ್ನವಾಗುವುದಿಲ್ಲ. ತಾಳೆಯ ಮರದಂತೆ ಅದು ದೊಡ್ಡದಾಗಿದೆ. ಆ ಆಯುಧವು ಎಲ್ಲ ಆಯುಧಗಳಿಗಿಂತಲೂ ದೊಡ್ಡದು. ಶತ್ರುವನ್ನು ತಡೆದು ನಿಲ್ಲಿಸುವುದರಲ್ಲಿ ಹೆಚ್ಚು ಸಾಮರ್ಥ್ಯವುಳ್ಳದ್ದು. ಆ ಧನುಸ್ಸು ಬಹಳ ಸುಂದರವಾಗಿಯೂ ಇದೆ. ಅದು ದೇವನಿರ್ಮಿತವಾದುದು. ಅದರ ಸ್ಪರ್ಶವೂ ಸುಖದಾಯಕ. ಆ ಧನುಸ್ಸು ಇಷ್ಟು ದೊಡ್ಡದಾಗಿದ್ದರೂ ಅದರ ನಡುಭಾಗದಲ್ಲಿ ಗಿಣ್ಣುಗಳಿರುವುದಿಲ್ಲ. ಅದಕ್ಕೆ ಚಿನ್ನದ ತಗಡಿನ ಹೊದ್ದಿಕೆಯಿದೆ. ಆ ಧನುಸ್ಸು ಬಹಳ ದೃಢವಾಗಿದೆ. ಅದು ಶತ್ರುಗಳಿಗೆ ಭಯಂಕರವಾದ ಧನುಸ್ಸಾದರೂ ನೋಡಲು ಸುಮನೋಹರವಾಗಿದೆ. ಎಂತಹ ಭಾರವನ್ನಾದರೂ (ಎಷ್ಟು ಬಲವನ್ನಾದರೂ) ತಡೆದುಕೊಳ್ಳಲು ಸಮರ್ಥವಾಗಿದೆ. ಅರ್ಜುನನ ಗಾಂಡೀವ ಧನುಸ್ಸಿನಂತೆಯೇ ಯುಧಿಷ್ಠಿರ-ಭೀಮ-ನಕುಲ-ಸಹದೇವರ ಧನುಸ್ಸುಗಳೂ ದೃಢವಾಗಿಯೂ, ಬಲಿಷ್ಠವಾಗಿಯೂ ಇವೆ."

೪೦ನೆಯ ಅಧ್ಯಾಯವು ಮುಗಿಯಿತು.

೪೧ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಅರ್ಜುನನ ಆದೇಶದಂತೆ ಉತ್ತರನು ವೃಕ್ಷದ ಮೇಲಿದ್ದ ಅಸ್ತ್ರ-ಶಸ್ತ್ರಗಳನ್ನಿಳಿಸಿದುದು

ಪಾರಿಕ್ಷಿತ! ಬೃಹನ್ನಳಾರೂಪಿಯಾದ ಪಾರ್ಥನನ್ನು ಕುರಿತು ಉತ್ತರನು ಹೇಳುತ್ತಾನೆ :



"ಬೃಹನ್ನಳೇ! ಈ ವೃಕ್ಷದಲ್ಲಿ ಹೆಣವೊಂದನ್ನು ತೂಗುಹಾಕಿದ್ದಾರೆಂದು ನಾನು ಕೇಳಿದ್ದೇನೆ. ರಾಜಪುತ್ರನಾದ ನಾನು ಶವವನ್ನು ಹೇಗೆ ಸ್ಪರ್ಶಿಸಲಿ? ಕ್ಷತ್ರಿಯವಂಶದಲ್ಲಿ ಹುಟ್ಟಿ, ಸುಪ್ರಸಿದ್ಧನಾದ–ಧರ್ಮಾತ್ಮನಾದ ರಾಜನೊಬ್ಬನ ಮಗನಾಗಿ, ಮಂತ್ರ-ಯಜ್ಞಗಳ ವಿಷಯಗಳನ್ನು

ತಿಳಿದಿರುವ, (ಅನುದಿನವೂ ಯಜ್ಞ-ಯಾಗಾದಿಗಳನ್ನೂ ಮಂತ್ರಗಳ ಪುನಶ್ಚರಣೆಯನ್ನೂ ಮಾಡುತ್ತಿರುವ) ನಾನು ಹೆಣವನ್ನು ಹೇಗೆತಾನೇ ಮುಟ್ಟಲಿ? ಬೃಹನ್ನಳೇ! ನಿನ್ನ ಮಾತಿನಂತೆ ನಡೆಯಲಿಲ್ಲವೆಂದು ಅಸಮಾಧಾನಪಟ್ಟುಕೊಳ್ಳಬೇಡ. ನೀನಾದರೂ ನನ್ನನ್ನು ಈ ಅಶುಚಿಯಾದ ಕಾರ್ಯದಲ್ಲಿ ಏಕೆ ನಿಯೋಜಿಸುವೆ? ಸ್ಪರ್ಶಿಸಲೂ ಅನರ್ಹವಾದ ಶವವನ್ನು ಮುಟ್ಟೆಂದು ಏಕೆ ಹೇಳುವೆ? ಅದನ್ನು ಮುಟ್ಟುವುದರಿಂದ ಶವವನ್ನು ಹೊತ್ತವರಿಗೆ ಪ್ರಾಪ್ತವಾಗುವ ಅಶೌಚವೇ ನನಗೂ ಪ್ರಾಪ್ತವಾಗುವುದಿಲ್ಲವೇ? ಆದುದರಿಂದ ಇಂತಹ ವಿಹೀನವಾದ ಕಾರ್ಯವನ್ನೆಂದಿಗೂ ರಾಜಕುಮಾರ ನಾದ ನನ್ನಿಂದ ಮಾಡಿಸಬೇಡ, ಬೃಹನ್ನಳೇ!"

"ಉತ್ತರಕುಮಾರ! ನೀನು ಆ ಧನುಸ್ಸನ್ನು ತರುವುದರಿಂದ ಅಪವಿತ್ರನಾಗುವುದಿಲ್ಲ. ನಿನ್ನಲ್ಲಿರುವ ಶುಚಿತ್ವವು ಯಥಾವತ್ತಾಗಿಯೇ ಉಳಿಯುವುದು. ಯಾರೋ ಕೆಲವರು ಈ ವೃಕ್ಷದಲ್ಲಿ ಹೆಣವು ಕಾಣುತ್ತಿದೆ ಯೆಂದು ಹೇಳಿದ ಮಾತ್ರದಿಂದ ನೀನು ಭಯಪಡುವ ಕಾರಣವಿಲ್ಲ. ಇಲ್ಲಿ ಪ್ರಾಣತೊರೆದ ಯಾವ ಶರೀರವೂ ಇರುವುದಿಲ್ಲ. ಇಲ್ಲಿರುವುದು ಧನುಸ್ಸು ಗಳು, ಕವಚಗಳು–ಇತ್ಯಾದಿಗಳು ಮಾತ್ರ.

ಮತ್ಸ್ಯರಾಜನ ಮಗನಾದ, ಸತ್ಕುಲಪ್ರಸೂತನಾದ, ಜಿತೇಂದ್ರಿಯನಾದ ನಿನ್ನಿಂದ ನಿಂದ್ಯವಾದ ಕಾರ್ಯವನ್ನು ನಾನೆಂದಾದರೂ ಮಾಡಿಸುವೆನೇ? ಸ್ವಲ್ಪವೂ ಸಂಶಯಿಸಬೇಡ ಮತ್ತು ಭಯಪಡಬೇಡ. ಶೀಘ್ರವಾಗಿ ಹೋಗಿ ಧನುಸ್ಸನ್ನೂ–ಬತ್ತಳಿಕೆಗಳನ್ನೂ ತೆಗೆದುಕೊಂಡು ಬಾ."

ಜನಮೇಜಯ! ಅರ್ಜುನನು ಅಷ್ಟು ಧೈರ್ಯ ಹೇಳಿದರೂ ಉತ್ತರನಿಗೆ ಮರವನ್ನು ಹತ್ತಲು ಮನಸ್ಸಾಗಲಿಲ್ಲ. ಆದರೆ ಬೃಹನ್ನಳೆಯ ಮಾತನ್ನು ಮೀರುವ ಧೈರ್ಯವೂ ಉತ್ತರನಿಗಿರಲಿಲ್ಲ. ಅರೆಮನಸ್ಸಿನಿಂದಲೇ ಶಮೀವೃಕ್ಷವನ್ನು ಉತ್ತರನು ಹತ್ತಿದನು. ರಥದಲ್ಲಿಯೇ ಕುಳಿತಿದ್ದ ಶತ್ರುಘ್ನನಾದ ಅರ್ಜುನನು ಮರವನ್ನು ಹತ್ತಿದ ಉತ್ತರನಿಗೆ ಹೇಳಿದನು : "ಉತ್ತರಕುಮಾರ! ಕವಲೊಡೆದಿರುವ ರೆಂಬೆಯ ಮೇಲೆ ಭದ್ರವಾಗಿ ನಿಂತು ಮರದ ತುದಿಯಲ್ಲಿರುವ ಹೊರೆಯನ್ನು ಜೋಪಾನವಾಗಿ ಕೆಳಗಿಳಿಸು. ಅನಂತರ ಹೊರೆಯ ಹಗ್ಗವನ್ನು ಬಿಚ್ಚು."

ಅರ್ಜುನನು ಹೇಳಿದಂತೆಯೇ ಉತ್ತರನು ವೃಕ್ಷದ ಅಗ್ರಭಾಗದಲ್ಲಿ ರೆಂಬೆಯೊಡನೆ ಹೊರೆಗೆ ಬಿಗಿದಿದ್ದ ಹಗ್ಗವನ್ನು ಬಿಚ್ಚಿ, ಆ ಹೊರೆಯನ್ನು ಮೆಲ್ಲನೆ ತಾನು ನಿಂತಿದ್ದ ಸ್ಥಳಕ್ಕಿಳಿಸಿಕೊಂಡು ಹೊರೆಯನ್ನು ಬಿಚ್ಚಿನೋಡಿದನು. ಆ ಹೊರೆಯಲ್ಲಿ ಪ್ರಕಾಶಮಾನವಾದ ಗಾಂಡೀವಧನುಸ್ಸನ್ನೂ ಮತ್ತು ಇತರ ನಾಲ್ಕು ಧನುಸ್ಸುಗಳನ್ನೂ ಉತ್ತರನು ಅಚ್ಚರಿಯಿಂದ ವೀಕ್ಷಿಸಿದನು. ಆ ಧನುಸ್ಸುಗಳೆಲ್ಲವೂ ಸೂರ್ಯನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದುವು. ಸೂರ್ಯ-ಚಂದ್ರ-ಶುಕ್ರಾದಿ ಗ್ರಹಗಳು ಅವುಗಳ ಉದಯ ಕಾಲದಲ್ಲಿ ಪ್ರಕಾಶಿಸುವಂತೆ ಆ ದಿವ್ಯಧನುಸ್ಸುಗಳು ಪ್ರಕಾಶಿಸುತ್ತಿದ್ದುವು. ಬುಸುಗುಟ್ಟುವ ಸರ್ಪಗಳೋಪಾದಿಯಲ್ಲಿ ಕಾಣುತ್ತಿದ್ದ ಆ ಮಹಾಧನುಸ್ಸುಗಳನ್ನು ನೋಡಿದೊಡನೆಯೇ ಉತ್ತರನು ರೋಮಾಂಚಿತನಾದನು. ಶರೀರಾದ್ಯಂತವಾಗಿ ರೋಮಗಳು ನಿಮಿರಿನಿಂತುವು. ಕುಮಾರನು ಭಯೋದ್ವಿಗ್ನನಾದನು. ಬಹಳ ದೊಡ್ಡವುಗಳಾಗಿಯೂ ಸೂರ್ಯನಂತೆ ಪ್ರಕಾಶಮಾನವಾಗಿಯೂ ಇದ್ದ ಆ ಧನುಸ್ಸುಗಳನ್ನು ಉತ್ತರನೊಮ್ಮೆ ಭೀತ-ಭೀತನಾಗಿಯೇ ಸಂಸ್ಪರ್ಶಿಸಿ ಅರ್ಜುನನಿಗೆ ಹೇಳಿದನು.

೪೧ನೆಯ ಅಧ್ಯಾಯವು ಮುಗಿಯಿತು.

೪೨ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಮರದ ಮೇಲಿದ್ದ ಅಸ್ತ್ರ-ಶಸ್ತ್ರಗಳ ವಿಷಯವಾಗಿ ಉತ್ತರನು ಬೃಹನ್ನಳೆಯನ್ನು ಪ್ರಶ್ನಿಸಿದುದು

ಜನಮೇಜಯ! ಉತ್ತರನು ಹೇಳುತ್ತಾನೆ :

**ಬಿನ್ದವೋ ಜಾತರೂಪಸ್ಯ ಶತಂ ಯಸ್ಮಿನ್ನಿಪಾತಿತಾಃ ।**
**ಸಹಸ್ರಕೋಟಿ ಸೌವರ್ಣಾಃ ಕಸ್ಯೈತದ್ಧನುರುತ್ತಮಮ್ ॥೧॥**

“ಬೃಹನ್ನಳೇ! ಇಲ್ಲಿರುವ ಒಂದು ಮಹಾಧನುಸ್ಸಿನ ಮೇಲೆ ಚಿನ್ನದ ನೂರು ಹೂಗಳನ್ನು ಕೆತ್ತಿದ್ದಾರೆ. ಈ ಧನುಸ್ಸಿನ ಎರಡು ತುದಿಗಳಲ್ಲಿಯೂ ಥಳ-ಥಳಿಸುವ ಸುವರ್ಣವರ್ಣದ ಹಲವಾರು ಕುಚ್ಚುಗಳಿವೆ. ಈ ಮಹಾ ಧನುಸ್ಸು ಯಾರದು?

**ವಾರಣಾ ಯತ್ರ ಸೌವರ್ಣಾಃ ಪೃಷ್ಠೇ ಭಾಸನ್ತಿ ದಂಶಿತಾಃ ।**
**ಸುಪಾರ್ಶ್ವಂ ಸುಗ್ರಹಂ ಚೈವ ಕಸ್ಯೈತದ್ಧನುರುತ್ತಮಮ್ ॥೨॥**

ಮತ್ತೊಂದು ಧನುಸ್ಸಿನ ಬೆನ್ನಿನ ಮೇಲೆ ಸುವರ್ಣಮಯವಾದ ಆನೆಗಳು ಚಿತ್ರಿತವಾಗಿವೆ. ಇದರ ಎರಡು ಪಾರ್ಶ್ವಗಳೂ ಸುಶೋಭಿತವಾಗಿವೆ. ಇದು ಹಿಡಿದುಕೊಳ್ಳಲು ಬಹಳ ಸುಲಭವಾಗಿದೆ. ಇದು ಯಾರದ್ದೆಂದು ಹೇಳುವೆಯಾ?

**ತಪನೀಯಸ್ಯ ಶುದ್ಧಸ್ಯ ಷಷ್ಟಿರ್ಯಸ್ಯೇನ್ದ್ರಗೋಪಕಾಃ ।**
**ಪೃಷ್ಠೇ ವಿಭಕ್ತಾಃ ಶೋಭನ್ತೇ ಕಸ್ಯೈತದ್ಧನುರುತ್ತಮಮ್ ॥೩॥**

ಮೂರನೆಯದರ ಬೆನ್ನಿನಲ್ಲಿ ಶುದ್ಧಸುವರ್ಣದ ಅರುವತ್ತು ಇಂದ್ರ ಗೋಪಕಕೀಟಗಳನ್ನು (ಕೆಂಪುಬಣ್ಣದ ಒಂದು ಬಗೆಯ ಹುಳು) ಸುವ್ಯವಸ್ಥಿತ ವಾಗಿ ನಿಯತವಾದ ಸ್ಥಳಗಳಲ್ಲಿ ಮೆಟ್ಟಿದ್ದಾರೆ. ಇದರಿಂದಾಗಿ ಈ ಧನುಸ್ಸು ಬಹಳ ಶೋಭಾಯಮಾನವಾಗಿ ಕಾಣುತ್ತಿದೆ. ಇದು ಯಾರದ್ದಾಗಿರಬಹುದು?

**ಸೂರ್ಯಾ ಯತ್ರ ಚ ಸೌವರ್ಣಾಸ್ತ್ರಯೋ ಭಾಸನ್ತಿ ದಂಶಿತಾಃ ।**
**ತೇಜಸಾ ಪ್ರಜ್ವಲನ್ತೋ ಹಿ ಕಸ್ಯೈತದ್ಧನುರುತ್ತಮಮ್ ॥೪॥**

ಮತ್ತೊಂದು ಧನುಸ್ಸು ಮತ್ತೂ ಸುಂದರವಾಗಿದೆ, ಬೃಹನ್ನಳೇ! ಈ ಧನುಸ್ಸಿನಲ್ಲಿ ಶುದ್ಧಸುವರ್ಣದಿಂದ ಮಾಡಿದ ಸೂರ್ಯನ ಮೂರು ಆಕೃತಿ ಗಳಿವೆ. ಇದರಿಂದಾಗಿ ಈ ಧನುಸ್ಸು ಕಣ್ಣುಗಳನ್ನು ಕೋರೈಸುವಷ್ಟು ಜಾಜ್ವಲ್ಯಮಾನವಾಗಿ ಕಾಣುತ್ತಿದೆ. ಇದೂ ಸಹ ಯಾರದೆಂಬುದು ನಿನಗೆ ತಿಳಿದೇ ಇರಬೇಕು.

**ಶಲಭಾ ಯತ್ರ ಸೌವರ್ಣಾಸ್ತಪನೀಯವಿಭೂಷಿತಾಃ ।**
**ಸುವರ್ಣಮಣಿಚಿತ್ರಂ ಚ ಕಸ್ಯೈತದ್ಧನುರುತ್ತಮಮ್ ॥೫॥**

ಐದನೆಯದು ಚಿನ್ನದಿಂದಲೂ ವೈಡೂರ್ಯಾದಿ ಮಣಿಗಳಿಂದಲೂ ಚಿತ್ರಿತವಾಗಿದೆ. ಸುವರ್ಣಮಯವಾದ ಪತಂಗಗಳಿಂದ ವಿಭೂಷಿತವಾಗಿದೆ. ಈ ಧನುಸ್ಸೂ ನೋಡಲು ಬಹುಸುಂದರವಾಗಿದೆ. ಇದರ ಒಡೆಯನಾರೆಂಬು ದನ್ನು ಹೇಳು. ಬೃಹನ್ನಳೇ! ಇಲ್ಲಿರುವ ಬಾಣ-ಬತ್ತಳಿಕೆಗಳನ್ನೂ ವಿವರಿಸಿ

ಹೇಳುತ್ತೇನೆ. ಇವುಗಳೂ ಯಾರವೆಂಬುದನ್ನು ಹೇಳಬೇಕು. ಸುಮಾರು ಒಂದು ಸಾವಿರ ಸುವರ್ಣಮಯವಾದ ಶಿರಗಳುಳ್ಳ ಬಾಣಗಳು ಸುವರ್ಣಮಯವಾದ ಬತ್ತಳಿಕೆಯಲ್ಲಿವೆ. ಉದ್ದವಾಗಿಯೂ ದಪ್ಪನಾಗಿಯೂ ಇರುವ ಮತ್ತೆ ಕೆಲವು ಬಾಣಗಳಿಗೆ ಹದ್ದುಗಳ ಗರಿಗಳಿವೆ. ಕಲ್ಲಿನ ಮೇಲೆ ಉಜ್ಜಿ ಇವುಗಳನ್ನು ಹರಿತ ಮಾಡಲಾಗಿದೆ. ಇವುಗಳ ಬಣ್ಣವು ಹಳದಿಯಾಗಿದೆ. ಇವುಗಳಿಗೆ ಚೂಪಾದ ಅಗ್ರಭಾಗವಿದೆ. ಇವುಗಳೆಲ್ಲವೂ ಉಕ್ಕಿನಿಂದ ಮಾಡಲ್ಪಟ್ಟಿವೆ. ಇವುಗಳು ಯಾರವೆಂದು ಹೇಳಬೇಕು.

ಇಲ್ಲಿರುವ ಒಂದು ಬತ್ತಳಿಕೆಯ ಅಗ್ರಭಾಗದಲ್ಲಿ ಐದು ಹುಲಿಗಳ ಚಿಹ್ನೆಗಳಿವೆ. ಈ ಬತ್ತಳಿಕೆಯಲ್ಲಿ ಹಂದಿಯ ಕಿವಿಗೆ ಸಮಾನವಾದ ನಡು ಭಾಗಗಳುಳ್ಳ ಹತ್ತು ಬಾಣಗಳಿವೆ. ಈ ಬತ್ತಳಿಕೆಯು ಯಾರದ್ದೆಂದು ಹೇಳ ಬೇಕು.

ಮತ್ತೊಂದು ಬತ್ತಳಿಕೆಯಲ್ಲಿ ದಪ್ಪವಾಗಿಯೂ ಉದ್ದವಾಗಿಯೂ ಇರುವ ಸುಮಾರು ಏಳು ನೂರು ಬಾಣಗಳಿವೆ. ಇವುಗಳೆಲ್ಲವೂ ಶತ್ರುವಿನ ರಕ್ತಪಾನ ಮಾಡುವುದರಲ್ಲಿ ಸಮರ್ಥವಾಗಿವೆ. ಇವುಗಳು ಅರ್ಧಚಂದ್ರಾಕಾರವಾಗಿವೆ.

ಇನ್ನೊಂದು ಬತ್ತಳಿಕೆಯಲ್ಲಿರುವ ಬಾಣಗಳು ಸುವರ್ಣಮಯವಾದ ರೆಕ್ಕೆಗಳನ್ನು ಹೊಂದಿವೆ. ಇವುಗಳನ್ನು ಕಲ್ಲಿನ ಮೇಲೆ ಉಜ್ಜಿ ಹರಿತಮಾಡಿದ್ದಾರೆ. ಈ ಬಾಣಗಳ ಹಿಂಭಾಗದಲ್ಲಿ ಗಿಣಿಯ ರೆಕ್ಕೆಗಳಿವೆ. ಮುಂಭಾಗವು ಉಕ್ಕಿನಿಂದ ಮಾಡಲ್ಪಟ್ಟಿದೆ.

ಈ ಐದು ವಿಧವಾದ ಬಾಣಗಳೂ ಯಾರವೆಂದು ತಪ್ಪದೇ ಹೇಳ ಬೇಕು, ಬೃಹನ್ನಳೇ! ಇಲ್ಲಿ ಬಾಣ, ಬತ್ತಳಿಕೆ, ಧನುಸ್ಸುಗಳು ಮಾತ್ರವಲ್ಲ ; ಅಮೋಘವಾದ ಕತ್ತಿಗಳೂ ಇವೆ. ಇವುಗಳಲ್ಲಿ ಒಂದು ಕತ್ತಿಯ ಮೇಲೆ ಜೇನುಹುಳುವಿನ ಚಿಹ್ನೆಯಿದೆ. ಇದು ಭಾರವಾಗಿರುವುದಲ್ಲದೇ–ವೀರರ ಬಲಪ್ರಯೋಗವನ್ನೂ ಇದು ತಡೆದುಕೊಳ್ಳುತ್ತದೆ. ದಿವ್ಯವಾಗಿದೆ. ಇದನ್ನು ಕೈಯಲ್ಲಿ ಹಿಡಿದು ಹೊರಟರೆ ಶತ್ರುಗಳ ಹೃದಯದಲ್ಲಿ ಭಯವುಂಟಾಗುವುದ ರಲ್ಲಿ ಸಂಶಯವೇ ಇಲ್ಲ. ಇದು ಬಹಳ ಉದ್ದವಾಗಿದೆ. ಇದರ ಬೆನ್ನಿನ ಮೇಲೆ

ಜೇನುಹುಳುವಿನ ಚಿಹ್ನೆಯಿರುವುದಲ್ಲದೇ ಇದರ ಮುಖವೂ ಜೇನುಹುಳುವಿನ ಆಕಾರವನ್ನು ಹೊಂದಿದೆ. ಮತ್ತೊಂದು ಕತ್ತಿಯು ಹುಲಿಯ ಚರ್ಮದಿಂದ ಮಾಡಿದ ಒರೆಯಲ್ಲಿದೆ. ಇದು ಸುವರ್ಣದಿಂದ ಚಿತ್ರಿತವಾಗಿದೆ. ಇದಕ್ಕೆ ಚಿನ್ನದ ಹಿಡಿಯಿದೆ. ಹಿಡಿಯ ಸುತ್ತಲೂ ಗೆಜ್ಜೆಗಳಿವೆ. ಬಹಳ ಹರಿತವಾದ ಅಲುಗಿನಿಂದ ಕೂಡಿದೆ. ನೋಡಲು ಬಹುಸುಂದರವಾಗಿಯೂ ಸ್ವಚ್ಛವಾಗಿಯೂ ಇದೆ. ಇಲ್ಲಿರುವ ಮತ್ತೊಂದು ಕತ್ತಿಯು ಎತ್ತಿನ ಚರ್ಮದಿಂದ ಮಾಡಿದ ಒರೆಯಲ್ಲಿದೆ. ಇದು ನಿಷಧದೇಶದಲ್ಲಿ ಮಾಡಲ್ಪಟ್ಟಿದೆ. ಇದು ಅಭೇದ್ಯವಾದುದು. ಇದರ ಹಿಡಿಯು ಚಿನ್ನದಿಂದ ಮಾಡಲ್ಪಟ್ಟಿದೆ. ಇದೂ ಸಹ ಮಹತ್ತರವಾದ ಬಲಪ್ರಯೋಗವನ್ನೂ ಸಹಿಸುವ ಸಾಮರ್ಥ್ಯವನ್ನು ಹೊಂದಿದೆ. ಈ ಕತ್ತಿಯು ಯಾರದೆಂಬುದನ್ನು ಹೇಳಬೇಕು. ಕಾಡುಹಂದಿಯ ಚರ್ಮದ ಒರೆಯಲ್ಲಿ ಮತ್ತೊಂದು ಸುಂದರವಾದ ಕತ್ತಿಯಿದೆ. ಇದು ಬಹು ಸುಂದರವಾಗಿದೆ. ಆಕಾಶದ ಬಣ್ಣದಿಂದ ಕೂಡಿದೆ. ಇದಕ್ಕೂ ಚಿನ್ನದ ಹಿಡಿಯಿದೆ. ಬಹಳ ಹರಿತವಾಗಿದೆ. ಮತ್ತೊಂದು ಕತ್ತಿಯು ಯಜ್ಞೇಶ್ವರನಿಗೆ ಸಮಾನವಾದ ಸುವರ್ಣಪ್ರಭೆಯುಳ್ಳ ಸುವರ್ಣಮಯವಾದ ಕೋಶದಲ್ಲಿದೆ. ಬಹುಭಾರವಾಗಿದೆ. ಮೂವತ್ತು ಅಂಗುಲಗಳಷ್ಟು ಉದ್ದವಾಗಿದೆ. ಇದನ್ನು ನೋಡಿದರೆ ಇತರ ಆಯುಧಗಳೊಡನೆ ಇದು ಬಹುವಾಗಿ ಘರ್ಷಣೆ ಮಾಡಿರುವಂತೆ ಕಾಣುತ್ತದೆ. ಮತ್ತೊಂದು ಖಡ್ಗವು ಹೇಮಬಿಂದುಗಳಿಂದ ಕೂಡಿದ್ದು ಶೋಭಾಯಮಾನವಾಗಿದೆ. ಇದನ್ನು ಸ್ಪರ್ಶಿಸಿದರೆ ವಿಷಸರ್ಪವನ್ನು ಸ್ಪರ್ಶಿಸಿದ ಸ್ಫುರಣೆಯುಂಟಾಗುತ್ತದೆ. ಶತ್ರುಗಳ ಶರೀರವನ್ನು ಇದು ಬಹುಸುಲಭವಾಗಿ ಭೇದಿಸುತ್ತದೆ. ಇದೂ ಸಹ ಬಲಪ್ರಯೋಗವನ್ನು ಸಹಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿರುವುದು. ಇದನ್ನು ಝಳಪಿಸುತ್ತಾ ಹೊರಟರೆ ಶತ್ರುಗಳ ಹೃದಯಗಳು ಕಂಪಿಸುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಬೃಹನ್ನಳೇ! ನಾನು ವಿವರಿಸಿದ ಧನುಸ್ಸುಗಳೂ, ಬಾಣಗಳೂ, ಕತ್ತಿಗಳೂ–ಯಾರವೆಂಬುದನ್ನೂ ನೀನು ಹೇಳಬೇಕು. ಇವುಗಳೆಲ್ಲವನ್ನೂ ನೋಡಿ ನಾನು ವಿಸ್ಮಿತನಾಗಿದ್ದೇನೆ.”

೪೨ನೆಯ ಅಧ್ಯಾಯವು ಮುಗಿಯಿತು.

೪೩ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಬೃಹನ್ನಳೆಯು ಉತ್ತರನಿಗೆ ಪಾಂಡವರ ಶಸ್ತ್ರಾಸ್ತ್ರಗಳ ಪರಿಚಯವನ್ನು ಮಾಡಿಕೊಟ್ಟುದು

ಬೃಹನ್ನಳೆಯು ಹೇಳುತ್ತಾನೆ :

"ಉತ್ತರ ಕುಮಾರ!

**ಯನ್ಮಾಂ ಪೂರ್ವಮಿಹಾಪೃಚ್ಛಃ ಶತ್ರುಸೇನಾಪಹಾರಿಣಮ್ ।**
**ಗಾಣ್ಡೀವಮೇತತ್ಪಾರ್ಥಸ್ಯ ಲೋಕೇಷು ವಿದಿತಂ ಧನುಃ ॥೧॥**

**ಸರ್ವಾಯುಧಮಹಾಮಾತ್ರಂ ಶಾತಕುಮ್ಭಪರಿಷ್ಕೃತಮ್ ।**
**ಏತತ್ತದರ್ಜುನಸ್ಯಾಸೀದ್ಗಾಣ್ಡೀವಂ ಪರಮಾಯುಧಮ್ ॥೨॥**

ನೀನು ಮೊದಲು ಹೇಳಿದ ಧನುಸ್ಸೇ ಅರ್ಜುನನ ಲೋಕಪ್ರಸಿದ್ಧವಾದ ಗಾಂಡೀವವೆಂಬ ದಿವ್ಯವಾದ ಧನುಸ್ಸು. ಶತ್ರುಸೇನೆಯನ್ನು ಸಂಪೂರ್ಣವಾಗಿ ವಿನಾಶಮಾಡಬಲ್ಲ ಸಾಮರ್ಥ್ಯವನ್ನು ಈ ಧನುಸ್ಸು ಹೊಂದಿರುವುದು. ಸುವರ್ಣಬಿಂದುಗಳಿಂದ ಅಲಂಕೃತವಾಗಿರುವುದು. ಎಲ್ಲ ಧನುಸ್ಸುಗಳಿಗಿಂತಲೂ ಉದ್ದವಾಗಿಯೂ, ದೊಡ್ಡದಾಗಿಯೂ ಇರುವುದು. ಗಾಂಡೀವ ಧನುಸ್ಸೊಂದೇ ಲಕ್ಷಸಂಖ್ಯೆಯ ಆಯುಧಗಳಿಗೆ ಸಮಾನವಾಗಿದೆ. ನಿಮ್ಮ ರಾಷ್ಟ್ರವನ್ನು ವರ್ಧಿಸಲು ಉತ್ತಮವಾದ ಸಾಧನವಿದು. ಈ ಧನುಸ್ಸಿನ ಸಹಾಯದಿಂದಲೇ ಪಾರ್ಥನು ಮನುಷ್ಯರನ್ನೂ ದೇವತೆಗಳನ್ನೂ ಯುದ್ಧದಲ್ಲಿ ಎದುರಿಸಿ ವಿಜಯಿಯಾಗಿದ್ದಾನೆ. ನಾನಾವರ್ಣಗಳಿಂದ ಕೂಡಿರುವ ಈ ಧನುಸ್ಸಿನಲ್ಲಿ ಯಾವುದೊಂದು ಕಳಂಕವೂ ಇಲ್ಲ. ಇದು ಸುಕೋಮಲವಾಗಿದೆ. ಬಹಳ ಉದ್ದವಾಗಿದೆ. ದೇವ-ದಾನವ-ಗಂಧರ್ವರು ಇದನ್ನು ಅನೇಕಾನೇಕ ವರ್ಷಗಳ ಪರ್ಯಂತವಾಗಿ ಪೂಜಿಸುತ್ತಿದ್ದರು.

**ಏತದ್ವರ್ಷಸಹಸ್ರಂ ತು ಬ್ರಹ್ಮಾ ಪೂರ್ವಮಧಾರಯತ್ ।**
**ತತೋಽನನ್ತರಮೇವಾಥ ಪ್ರಜಾಪತಿರಧಾರಯತ್ ॥೩॥**

**ತ್ರೀಣಿ ಪಞ್ಚಶತಂ ಚೈವ ಶಕ್ರೋಽಶೀತಿ ಚ ಪಞ್ಚ ಚ ।**

**ಸೋಮಃ ಪಞ್ಚಶತಂ ರಾಜಾ ತಥೈವ ವರುಣಃ ಶತಮ್ ।**
**ಪಾರ್ಥಃ ಪಞ್ಚ ಚ ಷಷ್ಟಿಂ ಚ ವರ್ಷಾಣಿ ಶ್ವೇತವಾಹನಃ ॥೬॥**

**ಮಹಾವೀರ್ಯಂ ಮಹಾದಿವ್ಯಮೇತತ್ತದ್ಧನುರುತ್ತಮಮ್ ।**
**ಏತತ್ಪಾರ್ಥಮನುಪ್ರಾಪ್ತಂ ವರುಣಾಚ್ಚಾರುದರ್ಶನಮ್ ॥೭॥**

ಈ ಮಹಾಧನುಸ್ಸು ಒಂದು ಸಾವಿರ ವರ್ಷಗಳ ಪರ್ಯಂತವಾಗಿ ಬ್ರಹ್ಮನಲ್ಲಿದ್ದಿತು. ಅನಂತರದಲ್ಲಿ ಪ್ರಜಾಪತಿಯು ಈ ಮಹಾಧನುಸ್ಸನ್ನು ಐದು ನೂರ ಮೂರು ವರ್ಷಗಳವರೆಗೆ ಇಟ್ಟುಕೊಂಡಿದ್ದನು. ಅನಂತರದಲ್ಲಿ ಶಕ್ರನು ಇದೇ ಧನುಸ್ಸನ್ನು ಎಂಬತ್ತೈದು ವರ್ಷಗಳ ಕಾಲ ತನ್ನಲ್ಲಿಯೇ ಇಟ್ಟುಕೊಂಡಿದ್ದನು. ಅನಂತರದಲ್ಲಿ ಈ ಮಹಾಧನುಸ್ಸು ಐದುನೂರು ವರ್ಷಗಳ ಪರ್ಯಂತವಾಗಿ ಸೋಮನಲ್ಲಿದ್ದಿತು. ವರುಣನ ಬಳಿಯಲ್ಲಿಯೂ ಇದು ನೂರು ವರ್ಷಗಳ ಪರ್ಯಂತವಾಗಿದ್ದಿತು. ಅನಂತರ ಈ ಮಹಾ ಧನುಸ್ಸು ಪಾರ್ಥನಿಗೆ ಸೇರಿ ಅವನಲ್ಲಿದು ಅರುವತ್ತೈದು ವರ್ಷಗಳಿಂದಲೂ ಇರುವುದು. ಮಹಾವೀರ್ಯವತ್ತಾದ, ದಿವ್ಯವಾದ, ಸುದರ್ಶನೀಯವಾದ ಉತ್ತಮೋತ್ತಮವಾದ ಈ ಧನುಸ್ಸು ವರುಣನಿಂದ ಪಾರ್ಥನಿಗೆ ಬಂದಿತು.

**ಪೂಜಿತಂ ಸುರಮರ್ತ್ಯೇಷು ಬಿಭರ್ತಿ ಪರಮಂ ವಪುಃ ।**
**ಸುಪಾರ್ಶ್ವಂ ಭೀಮಸೇನಸ್ಯ ಜಾತರೂಪಗ್ರಹಂ ಧನುಃ ।**
**ಯೇನ ಪಾರ್ಥೋಽಜಯತ್ಕೃತ್ಸ್ನಾಂ ದಿಶಂ ಪ್ರಾಚೀಂ ಪರಂತಪಃ ॥೮॥**

ಚಿನ್ನದ ಹಿಡಿಯಿರುವ, ಬೆನ್ನಿನ ಮೇಲೆ ಸುವರ್ಣಮಯವಾದ ಆನೆಗಳ ಚಿಹ್ನೆಗಳಿರುವ, ಸುಮನೋಹರವಾದ ಪಾರ್ಶ್ವಗಳಿರುವ, ಸುರರಿಂದಲೂ ಮತ್ತು ಮರ್ತ್ಯರಿಂದಲೂ ಪೂಜಿಸಲ್ಪಡುವ ಬಹಳ ದೊಡ್ಡದಾದ ಧನುಸ್ಸೇ ಭೀಮನದು. ರಾಜಕುಮಾರ! ಈ ಮಹಾಧನುಸ್ಸಿನ ಸಹಾಯದಿಂದಲೇ ಕುಂತೀಪುತ್ರನಾದ ಭೀಮಸೇನನು ಪೂರ್ವದಿಕ್ಕಿನ ದೇಶಗಳೆಲ್ಲವನ್ನೂ ಗೆದ್ದನು.

**ಇನ್ದ್ರಗೋಪಕಚಿತ್ರಂ ಚ ಯದೇತಚ್ಚಾರುದರ್ಶನಮ್ ।**
**ರಾಜ್ಞೋ ಯುಧಿಷ್ಠಿರಸ್ಯೈತದ್ವೈರಾಟೇ ಧನುರುತ್ತಮಮ್ ॥೯॥**

ವಿರಾಟತನಯನೇ! ಸುವರ್ಣಯವಾದ ಅರುವತ್ತು ಇಂದ್ರಗೋಪ

ಕೀಟಗಳು ಹಿಂಭಾಗದಲ್ಲಿರುವ, ಸುದರ್ಶನೀಯವಾದ, ಉತ್ತಮೋತ್ತಮವಾದ ಧನುಸ್ಸು ರಾಜನಾದ ಯುಧಿಷ್ಠಿರನದಾಗಿದೆ.

**ಸೂರ್ಯಾ ಯಸ್ಮಿಂಸ್ತು ಸೌವರ್ಣಾಃ ಪ್ರಕಾಶನ್ತೇ ಪ್ರಕಾಶಿನಃ ।**
**ತೇಜಸಾ ಪ್ರಜ್ವಲನ್ತೋ ವೈ ನಕುಲಸ್ಯೈತದಾಯುಧಮ್ ॥೧೦॥**

ಸುವರ್ಣಮಯವಾದ ಮೂರು ಸೂರ್ಯಬಿಂಬಗಳನ್ನೊಳಗೊಂಡು ಬಹಳ ಪ್ರಕಾಶಮಾನವಾಗಿ ಕಾಣುತ್ತಿರುವ ಧನುಸ್ಸು ನಕುಲನದಾಗಿದೆ.

**ಶಲಭಾ ಯತ್ರ ಸೌವರ್ಣಾಸ್ತಪನೀಯವಿಚಿತ್ರಿತಾಃ ।**
**ಏತನ್ಮಾದ್ರೀಸುತಸ್ಯಾಪಿ ಸಹದೇವಸ್ಯ ಕಾರ್ಮುಕಮ್ ॥೧೧॥**

ಯಾವ ಧನುಸ್ಸಿನ ಬೆನ್ನಿನ ಭಾಗದಲ್ಲಿ ಸುವರ್ಣಮಯವಾದ ಪತಂಗದ ಹುಳುಗಳಿವೆಯೋ ಆ ದಿವ್ಯಧನುಸ್ಸೇ ಸಹದೇವನದು.

ಉತ್ತರಕುಮಾರ! ನೀನು ಪ್ರಶ್ನಿಸಿದ ಐದು ಧನುಸ್ಸುಗಳೂ ಯಾರವೆಂದು ಹೇಳಿದೆನಲ್ಲವೇ? ಮುಂದೆ ಬಾಣಗಳು ಮತ್ತು ಬತ್ತಳಿಕೆಗಳೂ ಯಾರವೆಂದು ಹೇಳುವೆನು ; ಕೇಳು.

ಸಹಸ್ರಸಂಖ್ಯೆಯಲ್ಲಿರುವ, ಕತ್ತಿಯ ಅಲುಗಿನಂತೆ ಬಹಳ ಹರಿತವಾದ ಅಗ್ರಭಾಗಗಳುಳ್ಳ, ರೆಕ್ಕೆಗಳಿಂದ ಕೂಡಿರುವ, ಸರ್ಪದ ವಿಷಕ್ಕೆ ಸಮಾನವಾಗಿರುವ ಬಾಣಗಳು ಅರ್ಜುನನಿಗೆ ಸೇರಿದುವುಗಳು. ಸಂಗ್ರಾಮದಲ್ಲಿ ಪ್ರಯೋಗಿಸಲ್ಪಡುವ ಈ ಬಾಣಗಳು ಪ್ರಜ್ವಲಿಸುತ್ತಾ ಬಹುವೇಗವಾಗಿ ಹೋಗಿ ಶತ್ರುಗಳ ಹೃದಯಗಳನ್ನು ಭೇದಿಸುತ್ತವೆ. ಶತ್ರುಗಳಿಗೆ ಅವನ್ನು ಕತ್ತರಿಸುವ ಸಾಧ್ಯತೆಯಿಲ್ಲ. ಈ ಬತ್ತಳಿಕೆಯಲ್ಲಿರುವ ಬಾಣಗಳೆಂದಿಗೂ ಕ್ಷಯಿಸುವುದಿಲ್ಲ. ಯಥಾಪೂರ್ವಸಂಖ್ಯೆಯಲ್ಲಿಯೇ ಇರುತ್ತವೆ.

ಬೃಹತ್ತಾಗಿಯೂ, ಉದ್ದವಾಗಿಯೂ, ಹಿಂಭಾಗದಲ್ಲಿ ಅರ್ಧಚಂದ್ರಾಕಾರದಲ್ಲಿಯೂ ಇರುವ ಬಾಣಗಳು ಭೀಮನವು. ಅವುಗಳೂ ತೀಕ್ಷ್ಣವಾಗಿಯೂ, ರಿಪುಕ್ಷಯಕರವಾಗಿಯೂ ಇರುತ್ತವೆ.

ಐದು ಹುಲಿಗಳ ಚಿತ್ರವುಳ್ಳ ಬತ್ತಳಿಕೆಯು ನಕುಲನದು. ಆ ಬತ್ತಳಿಕೆಯಲ್ಲಿ ಇರುವ ಹಳದಿಯ ಬಣ್ಣದ, ಸುವರ್ಣಮಯವಾದ ರೆಕ್ಕೆಗಳಿಂದ

ಕೂಡಿರುವ, ಶಿಲೆಯಿಂದ ನಿಶಿತವಾಗಿ ಮಾಡಲ್ಪಟ್ಟಿರುವ ಬಾಣಗಳನ್ನಿಟ್ಟು ಕೊಂಡು ನಕುಲನು ವಿಜಯಯಾತ್ರೆಗೆ ಹೊರಟು ಪಶ್ಚಿಮದಿಕ್ಕಿನ ದೇಶಗಳೆಲ್ಲ ವನ್ನೂ ಜಯಿಸಿದನು.

ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಕೂಡಿರುವ, ಚಿತ್ರ-ವಿಚಿತ್ರವಾಗಿರುವ, ಸಾವಿರಾರು ಶತ್ರುಗಳನ್ನು ಧ್ವಂಸಮಾಡುವ ಸಾಮರ್ಥ್ಯ ವನ್ನು ಹೊಂದಿರುವ ಬಾಣಗಳೇ ಸಹದೇವನವು. ಚೂಪಾದ ಮೊನೆ ಯುಳ್ಳವುಗಳಾಗಿಯೂ, ಹಳದೀ ಬಣ್ಣದವುಗಳಾಗಿಯೂ, ದೊಡ್ಡ ದಾಗಿಯೂ ಮತ್ತು ಉದ್ದವಾಗಿಯೂ, ಚಿನ್ನದ ಬಣ್ಣದ ರೆಕ್ಕೆಗಳುಳ್ಳವು ಗಳಾಗಿಯೂ, ಮೂರು ಗಿಣ್ಣುಗಳುಳ್ಳವುಗಳಾಗಿಯೂ ಇರುವ ಮಹಾಶರ ಗಳು ಮಹಾರಾಜನಾದ ಯುಧಿಷ್ಠಿರನಿಗೆ ಸೇರಿದುವುಗಳು.

ಶಿಲೀಪೃಷ್ಠ ಮತ್ತು ಶಿಲೀಮುಖವುಳ್ಳದ್ದಾಗಿಯೂ, ಸುದೀರ್ಘ ವಾಗಿಯೂ, ದೃಢವಾಗಿಯೂ, ಪ್ರಬಲವಾದ ಆಘಾತವನ್ನೂ ಸಹಿಸುವುದಾ ಗಿಯೂ ಇರುವ ಕತ್ತಿಯು ಅರ್ಜುನನಿಗೆ ಸೇರಿದುದು.

ವ್ಯಾಘ್ರಚರ್ಮದ ಕೋಶದಲ್ಲಿರುವ, ಗುರುತರವಾದ ಭಾರವನ್ನು ಸಹಿಸಲು ಸಾಮರ್ಥ್ಯವಿರುವ, ಶತ್ರುಗಳಿಗೆ ಭಯವನ್ನುಂಟುಮಾಡುವ ದಿವ್ಯ ವಾದ ಖಡ್ಗವು ಭೀಮನದು.

ಸುಂದರವಾದ, ಬಹುತೀಕ್ಷ್ಣವಾದ ಅಲುಗಿನಿಂದ ಕೂಡಿರುವ, ಸುವರ್ಣಮಯವಾದ ಹಿಡಿಯುಳ್ಳ ವಿಚಿತ್ರವಾದ ಒರೆಯಲ್ಲಿರುವ, ಮೂವತ್ತು ಅಂಗುಲಗಳಿಗಿಂತಲೂ ಉದ್ದವಿರುವ ಖಡ್ಗವು ಧೀಮಂತನಾದ ಧರ್ಮರಾಜನಿಗೆ ಸೇರಿದ್ದಾಗಿದೆ. ವೀರರ ಬಾಹುಬಲದ ಸಾಮರ್ಥ್ಯವನ್ನು ಸಹಿಸಿಕೊಳ್ಳುವಷ್ಟು ಗಟ್ಟಿಯಾಗಿರುವ, ಖಡ್ಗಯುದ್ಧದಲ್ಲಿ ಶತ್ರುಗಳನ್ನೆದುರಿ ಸಲು ಸಮರ್ಥವಾಗಿರುವ, ಕಾಡುಹಂದಿಯ ಚರ್ಮದ ಒರೆಯಲ್ಲಿರುವ ಖಡ್ಗವು ನಕುಲನಿಗೆ ಸೇರಿದುದಾಗಿದೆ.

ಬಹಳ ದೊಡ್ಡದಾದ, ಎತ್ತಿನ ಚರ್ಮದಿಂದ ಮಾಡಿದ ಒರೆಯಲ್ಲಿರುವ, ಶತ್ರುಗಳ ಪ್ರತಿಪ್ರಹಾರವನ್ನು ತಡೆಯುವಷ್ಟು ಗಟ್ಟಿಯಾಗಿರುವ ಕತ್ತಿಯು ಸಹದೇವನಿಗೆ ಸೇರಿದುದಾಗಿದೆ.”

೪೩ನೆಯ ಅಧ್ಯಾಯವು ಮುಗಿಯಿತು.

ಳಳನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಅರ್ಜುನನು ಉತ್ತರಕುಮಾರನಿಗೆ ತನ್ನ, ಸೋದರರ ಮತ್ತು ದ್ರೌಪದಿಯ ನಿಜಸ್ವರೂಪಗಳನ್ನು ತಿಳಿಸಿದುದು

ಪಾರಿಕ್ಷಿತ! ಉತ್ತರನು ಅರ್ಜುನನನ್ನು ಕುರಿತು ಹೇಳುತ್ತಾನೆ :

“ಬೃಹನ್ನಳೇ! ಶೀಘ್ರವಾಗಿ ಕಾರ್ಯಮಾಡುವ ಮಹಾತ್ಮರಾದ ಪಾಂಡವರ ಸುವರ್ಣಚಿತ್ರಿತವಾದ ಈ ಆಯುಧಗಳು ಬಹಳ ಸುಂದರವಾಗಿ ಪ್ರಕಾಶಿಸುತ್ತಿವೆ. ಈ ಆಯುಧಗಳೆಲ್ಲವೂ ಪಾಂಡವರದೆಂದು ತಿಳಿದಿರುವ ನಿನಗೆ ಅವರು ಎಲ್ಲಿರುವರೆಂಬ ವಿಷಯವೂ ತಿಳಿದಿರಬಹುದು. ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರು ಈಗೆಲ್ಲಿರುವರೆಂಬುದನ್ನು ಹೇಳುವೆಯಾ? ಬೃಹನ್ನಳೇ! ನಮಗೆ ತಿಳಿದಿರುವಂತೆ ಅವರೆಲ್ಲರೂ ಮಹಾತ್ಮರು ; ಶತ್ರುಗಳನ್ನು ಸಂಪೂರ್ಣವಾಗಿ ನಿರ್ನಾಮ ಮಾಡುವ ಸಾಮರ್ಥ್ಯವುಳ್ಳವರು. ಪಗಡೆಯಾಟದಿಂದ ರಾಜ್ಯವನ್ನು ಕಳೆದುಕೊಂಡು ಅರಣ್ಯಕ್ಕೆ ಹೊರಟುಹೋದ ಪಾಂಡವರು ಏನಾದರೆಂಬುದೇ ತಿಳಿಯದಾಗಿದೆ. ಅವರ ಪತ್ನಿಯಾದ ದ್ರೌಪದಿಯು ಈಗೆಲ್ಲಿರುವಳೋ ಅದೂ ತಿಳಿಯದು. ಪಾಂಚಾಲದೇಶದ ರಾಜಕುಮಾರಿಯಾದ ಅವಳು ಸ್ತ್ರೀರತ್ನಳೆಂದು ಪ್ರಸಿದ್ಧಳಾಗಿದ್ದಳು. ಪಾಂಡವರು ಪಗಡೆಯಾಟದಲ್ಲಿ ಸೋತುಹೋದನಂತರ ಅವಳು ಅವರನ್ನೇ ಅನುಸರಿಸಿ ಕಾಡಿಗೂ ಹೋದಳು.”

ಅರ್ಜುನನು ಉತ್ತರಿಸುತ್ತಾನೆ :

**ಅಹಮಸ್ಮ್ಯರ್ಜುನಃ ಪಾರ್ಥಃ ಸಭಾಸ್ತಾರೋ ಯುಧಿಷ್ಠಿರಃ ।**
**ಬಲ್ಲವೋ ಭೀಮಸೇನಸ್ತು ಪಿತುಸ್ತೇ ರಸಪಾಚಕಃ ॥೫॥**

**ಅಶ್ವಬನ್ಧೋಽಥ ನಕುಲಃ ಸಹದೇವಸ್ತು ಗೋಕುಲೇ ।**
**ಸೈರನ್ಧ್ರೀಂ ದ್ರೌಪದೀಂ ವಿದ್ಧಿ ಯತ್ಕೃತೇ ಕೀಚಕಾ ಹತಾಃ ॥೬॥**

“ಉತ್ತರ! ಇಂದು ನಾನು ನಿನಗೆ ಪಾಂಡವರೆಲ್ಲಿರುವರೆಂಬ ವಿಷಯ

ವನ್ನು ಹೇಳಿಬಿಡುತ್ತೇನೆ. ಅದನ್ನು ಹೇಳಬಹುದಾದ ಕಾಲವೀಗ ಸನ್ನಿಹಿತವಾಗಿದೆ. ಪೃಥಾಪುತ್ರನಾದ ಅರ್ಜುನನೇ ನಾನು. ರಾಜನ ಸಭೆಯಲ್ಲಿ ಮಾನನೀಯನಾದ ಸದಸ್ಯನಾಗಿರುವ ಕಂಕನೇ ಯುಧಿಷ್ಠಿರನು. ನಿನ್ನ ತಂದೆಗೆ ರುಚಿ-ರುಚಿಯಾದ ಅಡಿಗೆಯನ್ನು ಸಿದ್ಧಪಡಿಸುತ್ತಿರುವ ಬಲ್ಲವನೇ ಭೀಮಸೇನನು. ಅಶ್ವಶಾಲೆಯ ಅಧ್ಯಕ್ಷನಾಗಿರುವ ಗ್ರಂಥಿಕನೇ ನಕುಲನು. ಗೋಶಾಲಾಧ್ಯಕ್ಷನಾಗಿರುವ ತಂತಿಪಾಲನೇ ಸಹದೇವನು. ಯಾವಳ ಕಾರಣದಿಂದ ಕೀಚಕರೆಲ್ಲರೂ ಹತರಾದರೋ–ಆ ಸೈರಂಧ್ರಿಯೇ ದ್ರೌಪದಿಯು. ತಿಳಿಯಿತೇ?"

ಉತ್ತರನು ಅಚ್ಚರಿಯಿಂದ ಪಾರ್ಥನನ್ನು ಕುರಿತು ಹೇಳುತ್ತಾನೆ :

"ಬೃಹನ್ನಳೆ! ನೀನೇ ಅರ್ಜುನನೇ? ಹಾಗಾದರೆ ಅರ್ಜುನನಿಗೆ ಹತ್ತು ಹೆಸರುಗಳಿವೆಯೆಂದು ಹಿಂದೆ ನಾನು ಕೇಳಿದ್ದೆನು. ಆ ಹತ್ತು ಹೆಸರುಗಳಾವುವೆಂಬುದನ್ನು ಹೇಳು. ನೀನವುಗಳನ್ನು ಹೇಳಿದೆಯಾದರೆ ನಿನ್ನ ಮಾತಿನಲ್ಲಿ ನನಗೆ ವಿಶ್ವಾಸವುಂಟಾಗುತ್ತದೆ."

"ಉತ್ತರ! ಹಿಂದೆ ನೀನು ಕೇಳಿದ್ದ ನನ್ನ ಆ ಹತ್ತು ಹೆಸರುಗಳನ್ನೂ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ನಾನು ಹೇಳಲಿರುವ ನನ್ನ ಆ ಎಲ್ಲ ನಾಮಧೇಯಗಳನ್ನೂ ಕೇಳು :

**ಅರ್ಜುನಃ ಫಾಲ್ಗುನೋ ಜಿಷ್ಣುಃ ಕಿರೀಟೀ ಶ್ವೇತವಾಹನಃ ।**
**ಬೀಭತ್ಸುರ್ವಿಜಯಃ ಕೃಷ್ಣಃ ಸವ್ಯಸಾಚೀ ಧನಂಜಯಃ ॥೯॥***

ಅರ್ಜುನ, ಫಾಲ್ಗುನ, ಜಿಷ್ಣು (ಪಾರ್ಥ), ಕಿರೀಟೀ, ಶ್ವೇತವಾಹನ, ಬೀಭತ್ಸು, ವಿಜಯ, ಕೃಷ್ಣ, ಸವ್ಯಸಾಚೀ, ಧನಂಜಯ–ಇವೇ ನನ್ನ ಆ ಹತ್ತು ನಾಮಧೇಯಗಳು."

ಉತ್ತರನು ಅಷ್ಟರಿಂದಲೇ ತೃಪ್ತನಾಗಲಿಲ್ಲ. ಏಕೆಂದರೆ : ಅರ್ಜುನನ

---

* ಅರ್ಜುನಃ ಫಲ್ಗುನಃ ಪಾರ್ಥಃ –ಎಂಬ ಒಂದು ಪಾಠವೂ ಬೀಭತ್ಸುರ್ವಿಜಯಃ ಪಾರ್ಥಃ ಎಂಬ ಮತ್ತೊಂದು ಪಾಠವೂ ಇರುವುದು.

ಈ ಹತ್ತು ಹೆಸರುಗಳನ್ನು ಯಾರಾದರೂ ಹೇಳಬಹುದಾಗಿದ್ದಿತು. ಹೆಸರುಗಳನ್ನು ಹೇಳಿದ ಮಾತ್ರದಿಂದಲೇ ಅರ್ಜುನನೆಂದು ನಿಶ್ಚಯಿಸುವುದಕ್ಕಾಗುವುದಿಲ್ಲ. ಆ ಹೆಸರುಗಳಲ್ಲಿರುವ ರಹಸ್ಯವನ್ನು ಅಥವಾ ಆ ಹೆಸರುಗಳು ಅವನಿಗೆ ಬಂದುದಕ್ಕೆ ಕಾರಣವನ್ನು ಕೇಳಿಬಿಟ್ಟರೆ ಆಗ ಸಮಸ್ಯೆಯ ಪರಿಹಾರವಾಗುವುದೆಂದು ಉತ್ತರನು ಭಾವಿಸಿ ಪುನಃ ಪ್ರಶ್ನಿಸುತ್ತಾನೆ :

**ಕೇನಾಸಿ ವಿಜಯೋ ನಾಮ ಕೇನಾಸಿ ಶ್ವೇತವಾಹನಃ ।**
**ಕಿರೀಟೀ ನಾಮ ಕೇನಾಸಿ ಸವ್ಯಸಾಚೀ ಕಥಂ ಭವಾನ್ ॥೧೦॥**

**ಅರ್ಜುನಃ ಫಾಲ್ಗುನೋ ಜಿಷ್ಣುಃ ಕೃಷ್ಣೋ ಬೀಭತ್ಸುರೇವ ಚ ।**
**ಧನಂಜಯಶ್ಚ ಕೇನಾಸಿ ಬ್ರೂಹಿ ತನ್ಮಮ ತತ್ತ್ವತಃ ॥೧೧॥**

"ಬೃಹನ್ನಳೇ! ನಿನಗೆ ವಿಜಯ–ಎಂಬ ಹೆಸರು ಬರಲು ಕಾರಣವೇನು? ನೀನು ಶ್ವೇತವಾಹನನು ಹೇಗಾದೆ? ನಿನಗೆ ಕಿರೀಟೀ–ಎಂಬ ಹೆಸರು ಬರಲು ಕಾರಣವೇನು? ಸವ್ಯಸಾಚಿಯು ಹೇಗಾದೆ? ಅರ್ಜುನ, ಫಾಲ್ಗುನ, ಜಿಷ್ಣು, ಕೃಷ್ಣ, ಬೀಭತ್ಸು, ಧನಂಜಯ–ಈ ನಾಮಧೇಯಗಳು ನಿನಗೆ ಪ್ರಾಪ್ತವಾದ ಸನ್ನಿವೇಶಗಳು ಯಾವುವು ಮತ್ತು ಕಾರಣಗಳೇನು? ಅರ್ಜುನನಿಗೆ ಈ ಹತ್ತು ನಾಮಧೇಯಗಳು ಪ್ರಾಪ್ತವಾದ ಕಾರಣಗಳೆಲ್ಲವನ್ನೂ ನಾನು ತಿಳಿದುಕೊಂಡಿರುತ್ತೇನೆ. ನಾನು ತಿಳಿದುಕೊಂಡಿರುವಂತೆಯೇ ನೀನೂ ಹೇಳಿದೆಯಾದರೆ ನಿನ್ನ ಮಾತುಗಳಲ್ಲಿ ನಾನು ವಿಶ್ವಾಸವನ್ನಿಡುವೆನು."

ಅರ್ಜುನನು ಉತ್ತರಿಸುತ್ತಾನೆ :

**ಸರ್ವಾನ್ಜನಪದಾನ್ಜಿತ್ವಾ ವಿತ್ತಮಾದಾಯ ಕೇವಲಮ್ ।**
**ಮಧ್ಯೇ ಧನಸ್ಯ ತಿಷ್ಠಾಮಿ ತೇನಾಹುರ್ಮಾಂ ಧನಂಜಯಮ್ ॥೧೨॥**

"ನಾನು ಪೃಥ್ವಿಯ ಸಕಲರಾಜರನ್ನೂ ಗೆದ್ದು ಕಪ್ಪ-ಕಾಣಿಕೆಗಳ ರೂಪದಲ್ಲಿ ಅವರ ಸಕಲೈಶ್ವರ್ಯಗಳನ್ನೂ ತಂದು ಯುಧಿಷ್ಠಿರನ ಬೊಕ್ಕಸವನ್ನು ತುಂಬುತ್ತಿದ್ದೆನು. ದೇಶ-ವಿದೇಶಗಳಿಂದ ತಂದ ಹಣವನ್ನು ರಾಜನ ಮುಂದೆ ಸುರಿದು ಅದರ ಮಧ್ಯದಲ್ಲಿ ನಿಂತು ಅವುಗಳನ್ನು ಎಣಿಕೆ

ಮಾಡುತ್ತಾ ಮತ್ತು ರತ್ನಾದಿಗಳ ಮೌಲ್ಯವನ್ನು ರಾಜನಿಗೆ ತಿಳಿಯಪಡಿಸುತ್ತಾ ಇರುತ್ತಿದ್ದೆನು. ಆದರಿಂದ ನನಗೆ ಧನಂಜಯನೆಂಬ ಹೆಸರು ಪ್ರಾಪ್ತವಾಯಿತು.

**ಅಭಿಪ್ರಯಾಮಿ ಸಂಗ್ರಾಮೇ ಯದಹಂ ಯುದ್ಧದುರ್ಮದಾನ್ ।**
**ನಾಜಿತ್ವಾ ವಿನಿವರ್ತಾಮಿ ತೇನ ಮಾಂ ವಿಜಯಂ ವಿದುಃ ॥೧೪॥**

ಶತ್ರುರಾಜರೊಡನೆ ಯುದ್ಧಕ್ಕೆ ಹೋದಾಗ ಯುದ್ಧೋನ್ಮತ್ತರಾದ ರಾಜರನ್ನು ಯುದ್ಧದಲ್ಲಿ ಗೆಲ್ಲದೇ ಹಿಂದಿರುಗತಕ್ಕವನಲ್ಲವಾದುದರಿಂದ–ಎಲ್ಲ ಯುದ್ಧಗಳಲ್ಲಿಯೂ ಜಯವನ್ನೇ ಗಳಿಸಿ ಬರುತ್ತಿದ್ದೆನಾದುದರಿಂದ–ನನ್ನನ್ನು ವಿಜಯನೆಂದು (ಸರ್ವದಾ ಜಯಗಳಿಸುವವನು–ಎಂದು) ತಿಳಿದು ಅದೇ ಹೆಸರಿನಿಂದಲೇ ನನ್ನನ್ನು ಕರೆದರು.

**ಶ್ವೇತಾಃ ಕಾಞ್ಚನಸಂನಾಹಾ ರಥೇ ಯುಜ್ಯನ್ತಿ ಮೇ ಹಯಾಃ ।**
**ಸಂಗ್ರಾಮೇ ಯುಧ್ಯಮಾನಸ್ಯ ತೇನಾಹಂ ಶ್ವೇತವಾಹನಃ ॥೧೬॥**

ನಾನು ಯುದ್ಧಮಾಡಲು ಹೊರಡುವಾಗ ಸ್ವರ್ಣಮಯವಾದ ಕವಚಗಳನ್ನೂ, ಕಡಿವಾಣಗಳನ್ನೂ ಹೊಂದಿರುವ ಬಿಳಿಯ ಬಣ್ಣದ ಕುದುರೆಗಳನ್ನೇ ನನ್ನ ರಥಕ್ಕೆ ಕಟ್ಟುವುದರಿಂದ ನಾನು ಶ್ವೇತವಾಹನನಾಗಿದ್ದೇನೆ. ( ನನ್ನನ್ನು ಶ್ವೇತವಾಹನನೆಂದು ಕರೆಯುತ್ತಾರೆ. )

**ಉತ್ತರಾಭ್ಯಾಂ ಫಲ್ಗುನೀಭ್ಯಾಂ ನಕ್ಷತ್ರಾಭ್ಯಾಮಹಂ ದಿವಾ ।**
**ಜಾತೋ ಹಿಮವತಃ ಪೃಷ್ಠೇ ತೇನ ಮಾಂ ಫಾಲ್ಗುನಂ ವಿದುಃ ॥೧೭॥**

ಹಿಮವತ್ಪರ್ವತದ ತಪ್ಪಲಿನಲ್ಲಿ ಉತ್ತರಾಫಲ್ಗುನೀ ನಕ್ಷತ್ರವಿದ್ದ ದಿನದ ಹಗಲಿನಲ್ಲಿ ಹುಟ್ಟಿದೆನಾದುದರಿಂದ ನನ್ನನ್ನು ಫಾಲ್ಗುನನೆಂದು ತಿಳಿಯುತ್ತಾರೆ.

**ಪುರಾ ಶಕ್ರೇಣ ಮೇ ದತ್ತಂ ಯುಧ್ಯತೋ ದಾನವರ್ಷಭೈಃ ।**
**ಕಿರೀಟಂ ಮೂರ್ಧ್ನಿ ಸೂರ್ಯಾಭಂ ತೇನಾಹುರ್ಮಾಂ ಕಿರೀಟಿನಮ್॥**

ಹಿಂದೆ ನಾನೊಮ್ಮೆ ದೇವತೆಗಳ ಪರವಾಗಿ ದಾನವರೊಡನೆ ಯುದ್ಧ ಮಾಡಬೇಕಾಗಿದ್ದ ಸಮಯದಲ್ಲಿ ದೇವಾಧಿಪತಿಯಾದ ಇಂದ್ರನು ಸೂರ್ಯನಿಗೆ ಸಮಾನವಾದ ಪ್ರಕಾಶದಿಂದ ಕೂಡಿದ್ದ ಸುವರ್ಣಮಯವಾದ ಕಿರೀಟ

ವನ್ನು ನನ್ನ ತಲೆಗೆ ತೊಡಿಸಿದನು. ಆದುದರಿಂದ ನಾನು ಕಿರೀಟಿಯಾದೆನು. ಅಂದಿನಿಂದಲೇ ನನ್ನನ್ನು ಕಿರೀಟಿಯೆಂದೂ ಕರೆಯುತ್ತಾರೆ.

**ನ ಕುರ್ಯಾಂ ಕರ್ಮ ಬೀಭತ್ಸುಂ ಯುಧ್ಯಮಾನಃ ಕಥಂಚನ ।**
**ತೇನ ದೇವಮನುಷ್ಯೇಷು ಬೀಭತ್ಸುರಿತಿ ವಿಶ್ರುತಃ ॥೧೮॥**

ನಾನು ಯುದ್ಧಮಾಡುವಾಗ ಹೇಯವಾದ ಅಥವಾ ಕ್ರೂರವಾದ ಕರ್ಮಗಳನ್ನೆಂದಿಗೂ ಮಾಡುವುದಿಲ್ಲ. ಆದುದರಿಂದಲೇ ನಾನು ದೇವ-ಮಾನವರಲ್ಲಿ ಬೀಭತ್ಸುವೆಂಬ ಹೆಸರನ್ನು ಪಡೆದಿರುತ್ತೇನೆ. ( ಕೆಲವು ಕಾರ್ಯಗಳಿಗೆ ಅಮಂಗಳವೆನಿಸಿದ ದಿನಕ್ಕೆ ಮಂಗಳವಾರ ಎಂಬ ಹೆಸರಿರುವಂತೆ ಬೀಭತ್ಸಕರ್ಮವನ್ನು ಅರ್ಥಾತ್ ಹೇಯವಾದ ಕರ್ಮವನ್ನು ಮಾಡದಿರುವ ಅರ್ಜುನನಿಗೆ ಬೀಭತ್ಸುವೆಂದೇ ಹೆಸರು ಬಂದಿದೆ. ಮಂಗಳವಾರದಂತೆಯೇ ಇದೊಂದು ವಿಚಿತ್ರವಾದ ನಾಮಧೇಯ. 'ಭ' ಎಂಬ ಅಕ್ಷರವು ಮಧ್ಯೇ ಬಂದಿರುವುದರಿಂದ **ಭದಿ ಕಲ್ಯಾಣೇ-ಸುಖೇ ಚ** ಎಂಬ ಧಾತ್ವರ್ಥವನ್ನು ಕಲ್ಪಿಸಿ ವ್ಯುತ್ಪತ್ತಿಮಾಡಿ ಕಲ್ಯಾಣದಾಯಕನಾದುದರಿಂದ ಬೀಭತ್ಸುವೆಂಬ ಹೆಸರು ಪಡೆದನೆಂದೂ ವಿದ್ವಾಂಸರು ಅರ್ಥಮಾಡಿರುತ್ತಾರೆ. )

**ಉಭೌ ಮೇ ದಕ್ಷಿಣೌ ಪಾಣೀ ಗಾಣ್ಡೀವಸ್ಯ ವಿಕರ್ಷಣೇ ।**
**ತೇನ ದೇವಮನುಷ್ಯೇಷು ಸವ್ಯಸಾಚೀತಿ ಮಾಂ ವಿದುಃ ॥೧೯॥**

ಗಾಂಡೀವಧನುಸ್ಸಿಗೆ ಹೆದೆಯೇರಿಸಿ ಬಾಣಗಳನ್ನು ಸೆಳೆದುಬಿಡುವುದರಲ್ಲಿ ನನ್ನೆರಡು ಕೈಗಳೂ ಸಮರ್ಥವಾಗಿವೆ. ಎರಡು ಕೈಗಳಿಂದಲೂ ನಾನು ಬಾಣಪ್ರಯೋಗವನ್ನು ಮಾಡಬಲ್ಲೆನು. ಅದರಿಂದಲೇ ದೇವ-ಮಾನವರು ನನ್ನನ್ನು ಸವ್ಯಸಾಚೀ ಎಂದು ಕರೆಯುತ್ತಾರೆ.

**ಪೃಥಿವ್ಯಾಂ ಚತುರನ್ತಾಯಾಂ ವರ್ಣೋ ಮೇ ದುರ್ಲಭಃ ಸಮಃ ।**
**ಕರೋಮಿ ಕರ್ಮ ಶುಕ್ಲಂ ಚ ತಸ್ಮಾನ್ಮಾಮರ್ಜುನಂ ವಿದುಃ ॥೨೦॥**

ಚತುಃಸಾಗರಪರ್ಯಂತವಾದ ಈ ಭೂಮಿಯಲ್ಲಿ ನನ್ನ ಶರೀರದ ಬಣ್ಣಕ್ಕೆ ಸದೃಶವಾದ ಬಣ್ಣವುಳ್ಳವರು ದುರ್ಲಭರು. ನನ್ನ ಶರೀರಕಾಂತಿಗೆ ಅನುರೂಪವಾದ ಶರೀರಕಾಂತಿಯುಳ್ಳವರು ಮತ್ತಾರೂ ಇರುವುದಿಲ್ಲ.

ಮೇಲಾಗಿ ನಾನು ಮಾಡುವ ಕಾರ್ಯಗಳೆಲ್ಲವೂ ಪರಿಶುದ್ಧವೂ–ಕಳಂಕ ರಹಿತವೂ ಆಗಿವೆ. ಈ ಕಾರಣದಿಂದಾಗಿ ನನ್ನನ್ನು ಅರ್ಜುನನೆಂದು ಕರೆಯುವರು.

(ಅರ್ಜುನಶಬ್ದಕ್ಕೆ ವಕ್ರವಿಲ್ಲದಿರುವಿಕೆ ( ನೇರ್ಮ-ಸರಳತೆ ), ದೀಪ್ತಿ ಮತ್ತು ಶುದ್ಧಕರ್ಮಕಾರಿತ್ವ–ಈ ಅರ್ಥಗಳೂ ಇವೆ. ಈ ಎಲ್ಲ ಅರ್ಥಗಳಿಗೂ ಅನುಗುಣವಾಗಿ ಅರ್ಜುನನಿರುವುದರಿಂದ ಅವನಿಗೆ ಅರ್ಜುನನೆಂಬ ನಾಮ ಧೇಯವು ಅನ್ವರ್ಥವಾಗಿದೆ.)

**ಅಹಂ ದುರಾಪೋ ದುರ್ಧರ್ಷೋ ದಮನಃ ಪಾಕಶಾಸನಿಃ ।**
**ತೇನ ದೇವಮನುಷ್ಯೇಷು ಜಿಷ್ಣುರ್ನಾಮಾಸ್ಮಿ ವಿಶ್ರುತಃ ॥೨೦॥**

ಶತ್ರುಗಳು ನನ್ನ ಸಮೀಪಕ್ಕೂ ಬರಲಾರರು. ನನ್ನೆದುರಾಗಿ ನಿಂತು ಯುದ್ಧವನ್ನು ಮಾಡಲಾರರು. ನನ್ನನ್ನು ಭಯಪಡಿಸಲಂತೂ ಅವರಿಗೆ ಸಾಧ್ಯವೇ ಇಲ್ಲ. ಕಾದಲು ಬಂದ ಎಲ್ಲ ಶತ್ರುಗಳ ಗರ್ವವನ್ನೂ ದಮನಮಾಡುತ್ತೇನೆ. ಎಲ್ಲ ಶತ್ರುಗಳನ್ನೂ ಜಯಿಸುತ್ತೇನೆ. ಇಂದ್ರನ ಮಗನಾಗಿದ್ದೇನೆ. ಈ ಕಾರಣದಿಂದಾಗಿ ನಾನು ದೇವ-ಮಾನವರಲ್ಲಿ ಜಿಷ್ಣುವೆಂದೂ ಪ್ರಸಿದ್ಧನಾಗಿರುತ್ತೇನೆ.

**ಕೃಷ್ಣ ಇತ್ಯೇವ ದಶಮಂ ನಾಮ ಚಕ್ರೇ ಪಿತಾ ಮಮ ।**
**ಕೃಷ್ಣಾವದಾತಸ್ಯ ತತಃ ಪ್ರಿಯತ್ವಾದ್ಬಾಲಕಸ್ಯ ವೈ ॥೨೧॥**

ನಾನು ಬಾಲ್ಯದಲ್ಲಿ ನನ್ನ ಸುಕೋಮಲವಾದ ಶರೀರಕಾಂತಿಯಿಂದ ಎಲ್ಲರನ್ನೂ ಆಕರ್ಷಿಸುತ್ತಿದ್ದುದರಿಂದಲೂ ಮತ್ತು ನನ್ನ ತಂದೆಗೆ ಬಹುಪ್ರಿಯ ನಾದ ಬಾಲಕನಾಗಿದ್ದುದರಿಂದಲೂ ನನ್ನ ತಂದೆಯೇ ನನಗೆ ಹತ್ತನೆಯದಾದ 'ಕೃಷ್ಣ' ಎಂಬ ಹೆಸರನ್ನಿಟ್ಟನು."

ಜನಮೇಜಯ! ಅರ್ಜುನನು ತನ್ನ ಹತ್ತು ಹೆಸರುಗಳ ಮೂಲ ಕಾರಣಗಳನ್ನು ತಿಳಿಸಿದೊಡನೆಯೇ ಪರಮಹೃಷ್ಟನಾದ ಉತ್ತರನು ಅರ್ಜುನ ನನ್ನು ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಹೇಳಿದನು :

**ಅಹಂ ಭೂಮಿಂಜಯೋ ನಾಮ ನಾಮ್ನಾಹಮಪಿ ಚೋತ್ತರಃ ॥**

"ನಾನು ಭೂಮಿಂಜಯನೆಂಬ ಹೆಸರಿನ ರಾಜಕುಮಾರನು. ನನ್ನನ್ನು ಉತ್ತರನೆಂದೂ ಕರೆಯುತ್ತಾರೆ. ಅದೃಷ್ಟವಿಶೇಷದಿಂದಲೇ ನಾನಿಂದು ನಿನ್ನನ್ನು ಕಾಣುತ್ತಿದ್ದೇನೆ. ಧನಂಜಯ! ಲೋಹಿತಾಕ್ಷನೇ! ಮದಿಸಿದ ಆನೆಯ ಸೊಂಡಿಲಿನಂತೆ ದೀರ್ಘವಾದ ಮಹಾಬಾಹುಗಳುಳ್ಳವನೇ! ನಿನಗೆ ಸ್ವಾಗತ ವನ್ನು ಬಯಸುತ್ತೇನೆ. ನಾನು ಅಜ್ಞಾನದಿಂದ ಹೇಳಿದ ಮಾತುಗಳನ್ನು ನೀನು ಕ್ಷಮಿಸಲು ಅರ್ಹನಾಗಿರುವೆ. ಈ ಹಿಂದೆ ನೀನು ವಿಚಿತ್ರತರವಾದ ಸುದುಷ್ಕರವಾದ ಅನೇಕ ಸಾಹಸಕಾರ್ಯಗಳನ್ನು ಮಾಡಿರುವೆ. ಈ ಕಾರಣ ದಿಂದಾಗಿ ನನ್ನಲ್ಲಿ ಉದ್ಭೂತವಾಗಿದ್ದ (ರಣರಂಗದರ್ಶನದ) ಭಯವು ದೂರವಾಗಿ ಹೋಗಿದೆ. ನಿನ್ನ ಮೇಲೆ ನನಗೆ ಅತುಲವಾದ ಪ್ರೀತಿಯೂ ಉಂಟಾಗಿದೆ."

ಳಳನೆಯ ಅಧ್ಯಾಯವು ಮುಗಿಯಿತು.

ಳ೫ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಅರ್ಜುನನ ಯುದ್ಧಸಿದ್ಧತೆ : ಅಸ್ತ್ರ-ಶಸ್ತ್ರಗಳನ್ನು ಸ್ಮರಿಸಿ ಆವಾಹಿಸಿಕೊಂಡುದು : ಉತ್ತರನ ಭಯದ ನಿವಾರಣೆ

ಜನಮೇಜಯ! ಉತ್ತರನು ಮುಂದುವರಿದು ಹೇಳುತ್ತಾನೆ :

"ಅರ್ಜುನ! ನನ್ನನ್ನು ನೀನು ಸಾರಥಿಯನ್ನಾಗಿ ಮಾಡಿಕೊಂಡು ಸುಂದರವಾದ ಈ ರಥದಲ್ಲಿ ಕುಳಿತು ಶತ್ರುಸೈನ್ಯದಲ್ಲಿ ಯಾವ ಭಾಗವನ್ನು ಪ್ರವೇಶಿಸಲಿಚ್ಛಿಸುವೆಯೋ–ಆ ದಿಕ್ಕಿನ ಕಡೆಗೇ ರಥವನ್ನು ನಡೆಸುತ್ತೇನೆ."

ಅದಕ್ಕೆ ಧನಂಜಯನು ಉತ್ತರಿಸುತ್ತಾನೆ :

"ಪುರುಷವ್ಯಾಘ್ರನೇ! ನಿನ್ನ ವಿಷಯದಲ್ಲಿ ನಾನು ಸುಪ್ರೀತನಾಗಿದ್ದೇನೆ. ನೀನು ಯುದ್ಧದ ವಿಷಯದಲ್ಲಿ ಸ್ವಲ್ಪವಾದರೂ ಭಯಪಡಬೇಕಾಗಿಲ್ಲ. ರಣವಿಶಾರದನೇ! ನಿನ್ನೊಡನೆ ಯುದ್ಧಮಾಡಲು ಆಗಮಿಸಿರುವ ನಿನ್ನ ಶತ್ರುಗಳೆಲ್ಲರನ್ನೂ ಓಡಿಸಿಬಿಡುತ್ತೇನೆ. ನೀನು ಸ್ವಲ್ಪವಾದರೂ ಉದ್ವಿಗ್ನ ನಾಗುವ ಕಾರಣವಿಲ್ಲ. ಸ್ವಸ್ಥಚಿತ್ತನಾಗಿರು. ಮುಂದೆ ನಡೆಯಲಿರುವ ಮಹಾಯುದ್ಧದಲ್ಲಿ ನಾನು ಶತ್ರುಗಳೊಡನೆ ಹೇಗೆ ಯುದ್ಧಮಾಡುವೆನೆಂಬು

ದನ್ನಾದರೂ ನೋಡು. ದೊಡ್ಡದಾದ, ಭಯಂಕರವಾದ ಆರ್ಭಟವನ್ನು ಮಾಡುತ್ತಾ ಶತ್ರುಗಳೊಡನೆ ಯುದ್ಧಮಾಡುತ್ತೇನೆ. ಬತ್ತಳಿಕೆಗಳನ್ನು ತಂದು ಶೀಘ್ರವಾಗಿ ರಥದಲ್ಲಿಡು. ಸ್ವರ್ಣಮಯವಾದ ಹಿಡಿಯುಳ್ಳ ಒಂದು ಕತ್ತಿಯನ್ನೂ ಶಮೀವೃಕ್ಷದ ಮೇಲಿನಿಂದ ತೆಗೆದುಕೊಂಡು ಬಾ."

ಅರ್ಜುನನ ಮಾತುಗಳನ್ನು ಕೇಳಿದೊಡನೆಯೇ ಉತ್ತರನು ತನ್ನ ಆಲಸಿಕೆಯನ್ನು ಸಂಪೂರ್ಣವಾಗಿ ದೂರಮಾಡಿ ಅರ್ಜುನನ ಬಾಣ, ಬತ್ತಳಿಕೆ, ಧನುಸ್ಸು, ಕತ್ತಿಗಳೆಲ್ಲವನ್ನೂ ತೆಗೆದುಕೊಂಡು ವೇಗವಾಗಿ ಮರದಿಂದ ಕೆಳಗಿಳಿದನು.

ಉತ್ತರನು ರಥದಲ್ಲಿ ಕುಳಿತೊಡನೆಯೇ ಅರ್ಜುನನು ಉತ್ತರನನ್ನು ಕುರಿತು ಪುನಃ ಹೇಳಿದನು :

"ಉತ್ತರಕುಮಾರ! ನಾನು ಈ ಕುರುವೀರರೊಡನೆ ಯುದ್ಧಮಾಡಿ ನಿನ್ನ ಗೋಧನವನ್ನು ಬಿಡಿಸಿಕೊಡುತ್ತೇನೆ. ನನ್ನಿಂದ ರಕ್ಷಿತನಾಗುವ ನೀನು ದುರ್ಭೇದ್ಯವಾದ ಕೋಟೆಯೊಳಗಿರುವಂತೆ ಸುರಕ್ಷಿತನಾಗಿರುವೆ. ಈ ರಥ ದಲ್ಲಿರುವ ಧುರಿಯು ( ಮೂಕಿಯಮರವು ) ಸುಗುಪ್ತವಾದ ಪಟ್ಟಣದಲ್ಲಿ ರುವ ಬೀದಿಗಳಂತಿರುತ್ತದೆ. ನನ್ನ ಬಾಹುಲತೆಗಳು ಸುಗುಪ್ತನಗರಿಯ ಮಹಾ ದ್ವಾರದಂತೆಯೂ, ರಥ ಮತ್ತು ಕೋಟೆಯಂತೆಯೂ ಇವೆ. ಈ ರಥ ದಂಡವೂ ಮತ್ತು ಬತ್ತಳಿಕೆಗಳೂ ಪಟ್ಟಣದ ರಕ್ಷಣೆಗಾಗಿ ಕಲ್ಪಿಸಿರುವ ಕೊತ್ತಲುಗಳಂತಿವೆ. ಸುಗುಪ್ತವಾದ ನಗರದಲ್ಲಿ ಹಾರಾಡುತ್ತಿರುವ ಪತಾಕೆ ಗಳಂತೆ ಧ್ವಜಗಳಿವೆ. ನನ್ನ ಈ ಧನುಸ್ಸಿನಲ್ಲಿರುವ ಶಿಂಜಿನಿಯು ಶತ್ರುಗಳ ಮೇಲೆ ಪ್ರಯೋಗಿಸಲು ಕೋಟೆಯ ಸುತ್ತಲೂ ಇಟ್ಟಿರುವ ತುಪಾಕಿಗಳಂತಿದೆ. ನನ್ನ ಕೋಪವೆಂಬುದೇ ರಥರೂಪವಾದ ಈ ನಗರಿಗೆ ಅಭೇದ್ಯವಾದ ಕೋಟೆಯಾಗಿದೆ. ನನ್ನ ಈ ರಥನೇಮಿಯ ನಿನಾದವು ಪಟ್ಟಣದ ರಕ್ಷಣೆಗಾಗಿ ಮಾಡುವ ಭೇರೀ ನಿನಾದವನ್ನೇ ಅನುಕರಿಸುತ್ತದೆ. ಇಂತಹ ದುರ್ಭೇದ್ಯವಾದ ಮತ್ತು ಸುಗುಪ್ತವಾದ ರಥದಲ್ಲಿ ನೀನು ಸುಗುಪ್ತವಾದ ಅರಮನೆಯಲ್ಲಿರು ವಂತೆಯೇ ಅನುದ್ವಿಗ್ನನಾಗಿರು. ನಾನು ಗಾಂಡೀವಧನುಸ್ಸನ್ನು ಹಿಡಿದು ರಥದಲ್ಲಿ ಕುಳಿತು ಹೊರಟೆನೆಂದರೆ ಯಾರೂ ನನ್ನನ್ನು ಎದುರಿಸಿ ನಿಲ್ಲ ಲಾರರು. ನನ್ನನ್ನು ಸೋಲಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.

ಆದುದರಿಂದ ನಿನ್ನ ಮನಸ್ಸಿನಲ್ಲುಂಟಾಗಿರುವ ಭಯವು ಸಂಪೂರ್ಣವಾಗಿ ತೊಲಗಿಹೋಗಲಿ."

"ಅರ್ಜುನ! ನಾನಿನ್ನು ಶತ್ರುಗಳಿಗೆ ಭಯಪಡುವೆನೇ? ಎಂದಿಗೂ ಇಲ್ಲ. ಇವರ ವಿಷಯದಲ್ಲಿನ್ನು ನನಗೆ ಸ್ವಲ್ಪವಾದರೂ ಭಯವೆಂಬುದೇ ಇಲ್ಲ. ನೀನು ಯುದ್ಧದಲ್ಲಿ ಸುಸ್ಥಿರನಾಗಿದ್ದು ಶತ್ರುಗಳನ್ನು ಹಿಮ್ಮೆಟ್ಟಿಸುವೆಯೆಂಬುದು ನನಗೆ ಚೆನ್ನಾಗಿ ತಿಳಿದಿದೆ. ನೀನು ಪರಂಧಾಮನಾದ ಕೇಶವನಿಗೂ, ದೇವಾಧಿಪತಿಯಾದ ಇಂದ್ರನಿಗೂ ಸಮಾನನಾಗಿರುವೆ. ಆದರೆ ಒಂದೇ ಒಂದು ವಿಷಯವಾಗಿ ನನ್ನ ಚಿಂತೆಯಿನ್ನೂ ದೂರವಾಗಲೇ ಇಲ್ಲ. ಎಷ್ಟೆಷ್ಟು ಯೋಚಿಸಿದರೂ ಮೂಢನಾದ ನನಗೆ ಸಮಂಜಸವಾದ ಕಾರಣವು ಹೊಳೆದಿರುವುದಿಲ್ಲ.

**ಏವಂ ಯುಕ್ತಾಙ್ಗರೂಪಸ್ಯ ಲಕ್ಷಣೈಃ ಸೂಚಿತಸ್ಯ ಚ ।**
**ಕೇನ ಕರ್ಮವಿಪಾಕೇನ ಕ್ಲೀಬತ್ವಮಿದಮಾಗತಮ್ ॥೧೨॥**

**ಮನ್ಯೇ ತ್ವಾಂ ಕ್ಲೀಬವೇಷೇಣ ಚರನ್ತಂ ಶೂಲಪಾಣಿನಮ್ ।**
**ಗನ್ಧರ್ವರಾಜಪ್ರತಿಮಂ ದೇವಂ ಚಾಪಿ ಶತಕ್ರತುಮ್ ॥೧೩॥**

ಸರ್ವಾಂಗಸುಂದರನಾದ, ಸರ್ವಲಕ್ಷಣಸಂಪನ್ನನಾದ, ಶುದ್ಧಚರಿತನಾದ, ಪುರುಷಶ್ರೇಷ್ಠನಾದ ನಿನಗೆ ಯಾವ ಕರ್ಮವಿಪಾಕದಿಂದಾಗಿ ಈ ವಿಧವಾದ ಕ್ಲೀಬತ್ವವು ಪ್ರಾಪ್ತವಾಯಿತು? ಇದಕ್ಕೆ ಕಾರಣವನ್ನು ತಿಳಿಯಲು ಮಾತ್ರ ನಾನು ಸಮರ್ಥನಾಗಲಿಲ್ಲ. ಎಷ್ಟೆಷ್ಟು ಯೋಚಿಸಿದರೂ ಇದಕ್ಕೆ ಕಾರಣವು ನನಗೆ ಸ್ಫುರಣೆಯಾಗಲಿಲ್ಲ. ನೀನು ನಪುಂಸಕವೇಷವನ್ನು ಧರಿಸಿ ಸಂಚರಿಸುತ್ತಿದ್ದರೂ–ಶೂಲಪಾಣಿಯಾದ ಈಶ್ವರನಂತೆಯೂ, ಗಂಧರ್ವ ರಾಜನಿಗೆ ಅನುರೂಪನಾಗಿಯೂ, ದೇವರಾಜನಿಗೆ ಸಮಾನನಾಗಿಯೂ ಕಾಣುತ್ತಿದ್ದೆ."

ಅರ್ಜುನನು ಹೇಳುತ್ತಾನೆ :

**ಭ್ರಾತುರ್ನಿಯೋಗಾಜ್ಜ್ಯೇಷ್ಠಸ್ಯ ಸಂವತ್ಸರಮಿದಂ ವ್ರತಮ್ ।**
**ಚರಾಮಿ ವ್ರತಚರ್ಯಂ ಚ ಸತ್ಯಮೇತದ್ಬ್ರವೀಮಿ ತೇ ॥೧೪॥**

**ನಾಸ್ಮಿ ಕ್ಲೀಬೋ ಮಹಾಬಾಹೋ ಪರವಾನ್ಧರ್ಮಸಂಯುತಃ ।**
**ಸಮಾಪ್ತವ್ರತಮುತ್ತೀರ್ಣಂ ವಿದ್ಧಿ ಮಾಂ ತ್ವಂ ನೃಪಾತ್ಮಜ ॥೧೫॥**

"ಉತ್ತರಕುಮಾರ! ನಾನು ನಿಶ್ಚಯವಾಗಿಯೂ ನಪುಂಸಕನಲ್ಲ. ನಮ್ಮಣ್ಣನ ಆಜ್ಞೆಯಂತೆ ಒಂದು ವರ್ಷಪರ್ಯಂತವಾಗಿ ನಪುಂಸಕವ್ರತ ವನ್ನು ಕೈಗೊಂಡಿದ್ದೆನು. (ನಪುಂಸಕನಂತೆ ವರ್ತಿಸುತ್ತಿದ್ದೆನು.) ಇದುವರೆಗೂ ಧರ್ಮಸಮ್ಮತವಾದ ರೀತಿಯಲ್ಲಿದ್ದು ಇಂದು ಆ ವ್ರತದಿಂದಲೂ ವಿಮುಕ್ತ ನಾಗಿದ್ದೇನೆ. ವರ್ಷದಲ್ಲಿ ಒಮ್ಮೆಯಾದರೂ ವ್ರತಭಂಗಮಾಡದೇ ಉತ್ತೀರ್ಣನಾಗಿದ್ದೇನೆ."

"ಅರ್ಜುನ! ನೀನು ನನ್ನ ವಿಷಯದಲ್ಲಿ ಪರಮಾನುಗ್ರಹವನ್ನೇ ಮಾಡಿರುವೆ. ಏಕೆಂದರೆ : ನನ್ನ ಮನಸ್ಸಿನಲ್ಲಿದ್ದ ಸಂಶಯಗಳನ್ನೆಲ್ಲಾ ಸಂಪೂರ್ಣವಾಗಿ ನಿವಾರಣೆಮಾಡಿರುವೆ. 'ಈ ಬೃಹನ್ನಳೆಯು ನಿಜವಾಗಿಯೂ ನಪುಂಸಕನೇ? ಇಂದ್ರನಿಗೆ ಸದೃಶವಾದ ರೂಪ ಮತ್ತು ಕಾಂತಿಗಳಿಂದ ಪರಿ ಶೋಭಿಸುತ್ತಿರುವನಲ್ಲಾ'–ಎಂಬ ಶಂಕೆಯು ನನಗೆ ಬಹಳ ದಿವಸಗಳಿಂದಲೂ ಇದ್ದಿತು. ಆ ನನ್ನ ಸಂಶಯವು ವ್ಯರ್ಥವಾದುದಲ್ಲವೆಂಬುದು ಇಂದು ನಿಶ್ಚಯವಾಯಿತು. ಅರ್ಜುನ! ನನಗೀಗ ಮಹಾಪರಾಕ್ರಮಿಯೊಬ್ಬನ ಸಹಾಯವು ಸಿಕ್ಕಿದೆ. ಈಗ ನಾನು ದೇವತೆಗಳೊಡನೆಯೂ ಯುದ್ಧಮಾಡಬಲ್ಲೆನು. ನನ್ನ ಮನಸ್ಸನ್ನು ಆವರಿಸಿಕೊಂಡಿದ್ದ ಭಯವೆಂಬ ಭೂತವು ಹೊರಟುಹೋಯಿತು. ನಾನೀಗ ಏನುಮಾಡಬೇಕೆಂಬುದನ್ನು ಆಜ್ಞಾಪಿಸು.

ಅರ್ಜುನ! ನಾನು ಆಚಾರ್ಯರ ಮೂಲಕ ಸಾರಥ್ಯವನ್ನು ಅಭ್ಯಾಸ ಮಾಡಿರುತ್ತೇನೆ. ಶತ್ರುಗಳ ರಥಗಳನ್ನು ಭೇದಿಸಲು ನಾನು ಸಮರ್ಥ ನಾಗಿರುತ್ತೇನೆ. ವಾಸುದೇವನಿಗೆ ದಾರುಕನು ಸಮರ್ಥನಾದ ಸಾರಥಿಯಾಗಿರು ವಂತೆ–ಇಂದ್ರನಿಗೆ ಮಾತಲಿಯು ಕುಶಲನಾದ ಸಾರಥಿಯಾಗಿರುವಂತೆ– ನಾನು ನಿನಗೆ ಸಾರಥಿಯಾಗುತ್ತೇನೆ. (ದಾರುಕ ಮತ್ತು ಮಾತಲಿಗಳಿಗೆ ಇರುವ ಸಾರಥ್ಯದ ಕೌಶಲ್ಯವೇ ನನಗೂ ಇರುವುದು.) ನನ್ನ ಈ ರಥದ ವಿಷಯ ವಾಗಿ ಅಥವಾ ಈ ರಥಕ್ಕೆ ಕಟ್ಟಿರುವ ನಾಲ್ಕು ಕುದುರೆಗಳ ವಿಷಯವಾಗಿ

ನೀನು ಶಂಕೆಪಡುವ ಕಾರಣವಿಲ್ಲ. ಅರ್ಜುನ! ರಥದ ಬಲಭಾಗದಲ್ಲಿರುವ ಈ ಕುದುರೆಯು ಶ್ರೀಕೃಷ್ಣನ ರಥದಲ್ಲಿರುವ ಸುಗ್ರೀವವೆಂಬ ಕುದುರೆಗೆ ಸದೃಶವಾಗಿದೆ. ಇದು ರಥವನ್ನೆಳೆದುಕೊಂಡು ಓಡುವಾಗ ಇದರ ಹೆಜ್ಜೆಗಳ ಗುರುತುಗಳು ಭೂಮಿಯ ಮೇಲೆ ಕಾಣುವುದೇ ಇಲ್ಲ. (ಅಷ್ಟು ರಭಸದಿಂದ ಓಡುತ್ತದೆ.) ಭಾರವನ್ನು ಹೊರುವುದರಲ್ಲಿ ಬಹುಸಮರ್ಥವಾದ, ಬಹುಸುಂದರವಾದ, ರಥದ ಎಡಭಾಗಕ್ಕೆ ಕಟ್ಟಿರುವ ಈ ಕುದುರೆಯು ಮೇಘಪುಷ್ಪವೆಂಬ ಕುದುರೆಗೆ ಸಮಾನವಾಗಿದೆ. ಅದರ ಪಕ್ಕದಲ್ಲಿಯೇ ಇರುವ, ಸ್ವರ್ಣಮಯಕವಚವನ್ನೂ, ಕಡಿವಾಣಗಳನ್ನೂ ಹೊಂದಿರುವ ಕುದುರೆಯು ವೇಗದಲ್ಲಿ ಶ್ರೀಕೃಷ್ಣನ ರಥದ ಮತ್ತೊಂದು ಕುದುರೆಯಾದ ಶೈಬ್ಯಕ್ಕೆ ಅನುರೂಪವಾಗಿದೆ. ಆದರೆ ಬಲದಲ್ಲಿ ಶೈಬ್ಯಕ್ಕೂ ಹೆಚ್ಚಿನದಾಗಿದೆಯೆಂದು ನಾನು ಭಾವಿಸಿದ್ದೇನೆ. ಬಲಪಾರ್ಶ್ವದಲ್ಲಿರುವ ಈ ಕುದುರೆಯು ಶ್ರೀಕೃಷ್ಣನ ರಥದ ನಾಲ್ಕನೆಯ ಕುದುರೆಯಾದ ಬಲಾಹಕನಿಗಿಂತಲೂ ವೇಗದಲ್ಲಿಯೂ ಬಲದಲ್ಲಿಯೂ ಶ್ರೇಷ್ಠವಾದುದೆಂಬುದರಲ್ಲಿ ಸಂಶಯವೇ ಇಲ್ಲ. ಈ ರಥವೂ ನಿನ್ನಂತಹ ಪರಮಶ್ರೇಷ್ಠನಾದ ಧನುರ್ಧಾರಿಯನ್ನು ಯುದ್ಧಕ್ಕೊಯ್ಯಲು ಸಮರ್ಥವಾಗಿದೆ. ನೀನು ಈ ಮಹಾರಥದಲ್ಲಿ ಕುಳಿತು ಶತ್ರುಗಳೊಡನೆ ಯುದ್ಧಮಾಡಲು ಅರ್ಹನಾಗಿರುವೆಯೆಂದೂ ನಾನು ಭಾವಿಸುತ್ತೇನೆ. ಆದುದರಿಂದ ನೀನು ಸಾರಥಿಯ ವಿಷಯದಲ್ಲಾಗಲೀ, ರಥಕ್ಕೆ ಕಟ್ಟಿರುವ ಕುದುರೆಗಳ ವಿಷಯದಲ್ಲಾಗಲೀ ಯೋಚಿಸುವ ಕಾರಣವಿಲ್ಲ."

ಜನಮೇಜಯ! ಉತ್ತರನು ಹೇಳಿದ ಮಾತುಗಳನ್ನು ಕೇಳಿದನಂತರ ಮಹಾಪರಾಕ್ರಮಿಯಾದ ಅರ್ಜುನನು ತಾನು ತೊಟ್ಟಿದ್ದ ತೋಳುಬಳೆಗಳನ್ನು ತೆಗೆದುಹಾಕಿ ಸ್ವರ್ಣಮಯವಾದ ಕವಚವನ್ನು ತೊಟ್ಟುಕೊಂಡನು. ತನ್ನ ಕಪ್ಪಾದ ಕೇಶರಾಶಿಯನ್ನು ಬಿಳಿಯ ವಸ್ತ್ರದಿಂದ ಕಟ್ಟಿಕೊಂಡು, ಪೂರ್ವಾಭಿಮುಖವಾಗಿ ಕುಳಿತು, ಮನಸ್ಸನ್ನು ಪರಿಶುದ್ಧಗೊಳಿಸಿ, ಏಕಾಗ್ರಚಿತ್ತನಾಗಿ ಮಹಾಸ್ತ್ರಗಳೆಲ್ಲವನ್ನೂ ಸ್ಮರಿಸಿಕೊಂಡನು. ಮಹಾಸ್ತ್ರಗಳ ಅಧಿದೇವತೆಗಳೆಲ್ಲರೂ ಪಾರ್ಥನ ಬಳಿಗೆ ಬಂದು ಬದ್ಧಾಂಜಲಿಗಳಾಗಿ ನಿಂತು ಹೇಳಿದರು : "ಪಾಂಡುನಂದನ! ನಿನ್ನ ವಿಷಯದಲ್ಲಿ ಹೆಚ್ಚಿನ ಆದರವಿರುವ ನಾವು ನಿನ್ನ

ಕಿಂಕರರಾಗಿ ನಿನ್ನ ಬಳಿಗೆ ಬಂದಿರುತ್ತೇವೆ.” ಒಡನೆಯೇ ಅರ್ಜುನನು ಅವರೆಲ್ಲರನ್ನೂ ಮನಸ್ಸಿನಲ್ಲಿಯೇ ನಮಸ್ಕರಿಸಿ, ಸ್ಪರ್ಶಿಸಿ ಹೇಳಿದನು :

“ಅಸ್ತ್ರಾಧಿದೇವತೆಗಳೇ! ನೀವೆಲ್ಲರೂ ನನ್ನ ಮನಸ್ಸನ್ನೇ ಆಲಯವನ್ನಾಗಿ ಮಾಡಿಕೊಳ್ಳಿರಿ.”

‘ಹಾಗೆಯೇ ಆಗಲಿ’ ಎಂದು ಹೇಳಿದ ಅಸ್ತ್ರಾಧಿದೇವತೆಗಳೆಲ್ಲರೂ ಅರ್ಜುನನಲ್ಲಿಯೇ ಲೀನರಾದರು. ಮಹಾಸ್ತ್ರಗಳನ್ನು ಆವಾಹಿಸಿಕೊಂಡ ಅರ್ಜುನನು ಪ್ರಹೃಷ್ಟನಾದನು. ಅವನ ಮುಖಾರವಿಂದವು ಅರಳಿತು. ಗಾಂಡೀವ ಮಹಾಧನುಸ್ಸನ್ನು ಕೈಯಲ್ಲಿ ಹಿಡಿದು ಹೆದೆಯೇರಿಸಿ ಟೇಂಕಾರ ಮಾಡಿದನು. ಅವನು ಮಾಡಿದ ಧನುಷ್ಟೇಂಕಾರಶಬ್ದವು ಎರಡು ಮಹಾಪರ್ವತಗಳ ಸಂಘರ್ಷಣಶಬ್ದಕ್ಕೆ ಸದೃಶವಾಗಿದ್ದಿತು. ಆ ಭಯಂಕರ ಶಬ್ದವು ಭೂಮಿಯೆಲ್ಲವನ್ನೂ ವ್ಯಾಪಿಸಿತು. ಎಲ್ಲ ದಿಕ್ಕುಗಳಲ್ಲಿಯೂ ಬಿರುಗಾಳಿಯು ಬೀಸತೊಡಗಿತು. ಉಲ್ಕಾಪಾತಗಳಾದುವು. ನಾಲ್ಕು ದಿಕ್ಕುಗಳಲ್ಲಿಯೂ ಕತ್ತಲೆಯು ಕವಿಯಿತು. ಆಕಾಶದಲ್ಲಿ ಹಾರಾಡುತ್ತಿದ್ದ ಪಕ್ಷಿಗಳು ಭ್ರಾಂತಿಗೊಂಡುವು. ಚಂಡಮಾರುತದ ಆಘಾತಕ್ಕೆ ಸಿಕ್ಕಿ ಮಹಾವೃಕ್ಷಗಳೂ ಅಳ್ಳಾಡಿದುವು. ಧನುಷ್ಟೇಂಕಾರವನ್ನು ಕೇಳಿದ ಕುರುವೀರರು ಆ ಘೋರ ಶಬ್ದವನ್ನು ಸಿಡಿಲಿನ ಶಬ್ದವೆಂದೇ ಭಾವಿಸಿದರು.

ಇತ್ತಲಾಗಿ ಉತ್ತರನೊಮ್ಮೆ ಕೌರವರ ಅಪಾರವಾದ ಸೈನ್ಯವನ್ನು ವೀಕ್ಷಿಸಿ ಅರ್ಜುನನನ್ನು ಕುರಿತು ಹೇಳಿದನು :

“ಪಾಂಡವಶ್ರೇಷ್ಠನೇ! ಏಕಾಕಿಯಾಗಿರುವ ನೀನೊಬ್ಬನು ಶತ್ರುಪಕ್ಷದಲ್ಲಿರುವ ಅತಿರಥ-ಮಹಾರಥರನ್ನು ಹೇಗೆ ಎದುರಿಸುವೆ? ಮೇಲಾಗಿ ಅವರೆಲ್ಲರೂ ಸರ್ವಾಸ್ತ್ರವಿಶಾರದರೂ ಆಗಿರುತ್ತಾರೆ. ನೀನು ಅಸಹಾಯನಾಗಿರುವೆ. ಕುರುವೀರರ ಹಿಂಬದಿಯಲ್ಲಿ ಅಪಾರಸೈನ್ಯವಿದೆ. ಅವರೆಲ್ಲರನ್ನೂ ನೀನು ಹೇಗೆ ಜಯಿಸುವೆ?–ಇದನ್ನೇ ಯೋಚಿಸುತ್ತಾ ನಾನು ಭಯಭ್ರಾಂತನಾಗಿ ಮುಂದೆ ನಿಂತಿದ್ದೇನೆ.”

ಉತ್ತರನ ಆ ಮಾತುಗಳನ್ನು ಕೇಳಿ ಅರ್ಜುನನು ಗಹ-ಗಹಿಸಿ ನಗುತ್ತಾ ಹೇಳಿದನು :

“ಹೆದರಬೇಡ, ಉತ್ತರ! ನೀನು ಕಿಂಚಿತ್ತಾದರೂ ಭಯಪಡುವ

ಕಾರಣವಿಲ್ಲ. ನಾನು ಈ ಹಿಂದೆ ಮಾಡಿದ ಯುದ್ಧಗಳನ್ನೇನಾದರೂ ನೀನು ಸ್ಮರಿಸಿಕೊಂಡಿದ್ದರೆ ನೀನು ಈ ಪ್ರಶ್ನೆಯನ್ನೇ ಎತ್ತುತ್ತಿರಲಿಲ್ಲ. ನಿನಗೆ ಈ ವಿಧವಾದ ಭಯವೂ ಉಂಟಾಗುತ್ತಿರಲಿಲ್ಲ. ದುರ್ಯೋಧನನು ತನ್ನ ವೈಭವವನ್ನು ನಮ್ಮ ಮುಂದೆ ಪ್ರದರ್ಶಿಸಲು ಘೋಷಯಾತ್ರಾವ್ಯಾಜದಿಂದ ನಾವಿದ್ದ ಅರಣ್ಯಕ್ಕೆ ಸಪರಿವಾರನಾಗಿ–ಆಗಮಿಸಿದ್ದನು. ಅವನ ದರ್ಪವನ್ನು ಸಹಿಸದ ಗಂಧರ್ವನು ದುರ್ಯೋಧನನನ್ನು ಸೆರೆಹಿಡಿದುಕೊಂಡು ಹೊರಟುಹೋದನು. ಆ ಸಮಯದಲ್ಲಿ ಯುಧಿಷ್ಠಿರನ ಆಜ್ಞೆಯಂತೆ ನಾನು ಗಂಧರ್ವನೊಡನೆ ಯುದ್ಧಮಾಡಿ ದುರ್ಯೋಧನನನ್ನು ಬಿಡಿಸಬೇಕಾಯಿತು. ಆಗ ನನಗೆ ಸಹಾಯಕರು ಯಾರಿದ್ದರು? ಖಾಂಡವದಾಹದ ಕಾಲದಲ್ಲಿಯೂ ನಾನು ದೇವಾಧಿಪತಿಯಾದ ಇಂದ್ರನನ್ನೇ ಎದುರಿಸಿ ನಿಲ್ಲಬೇಕಾಯಿತು. ಆ ಸಮಯದಲ್ಲಾದರೂ ನನಗೆ ಸಹಾಯಕರು ಯಾರಿದ್ದರು? ದೇವತೆಗಳ ಸಲುವಾಗಿಯೇ ನಾನು ನಿವಾತಕವಚರೊಡನೆಯೂ ಪೌಲೋಮರೊಡನೆಯೂ ಯುದ್ಧಮಾಡಬೇಕಾಯಿತು. ಆ ಸಮಯದಲ್ಲಿಯೂ ನಾನು ಏಕಾಕಿಯಾಗಿಯೇ ಯುದ್ಧಮಾಡಿ ಜಯಗಳಿಸಿದೆನು. ಉತ್ತರ! ದ್ರೌಪದಿಯ ಸ್ವಯಂವರಸಮಯದಲ್ಲಿ ನಿರಾಶರಾದ ಅನೇಕರಾಜರು ನಮ್ಮ ಮೇಲೆ ದಂಗೆಯೆದ್ದರು. ಅವರೆಲ್ಲರನ್ನೂ ಏಕಾಕಿಯಾದ ನಾನೇ ಎದುರಿಸಿ ಪರಾಜಯಗೊಳಿಸಲಿಲ್ಲವೇ? ಉತ್ತರಕುಮಾರ!

**ಉಪಜೀವ್ಯ ಗುರುಂ ದ್ರೋಣಂ ಶಕ್ರಂ ವೈಶ್ರವಣಂ ಯಮಮ್ ।**
**ವರುಣಂ ಪಾವಕಂ ಚೈವ ಕೃಪಂ ಕೃಷ್ಣಂ ಚ ಮಾಧವಮ್ ॥೪೦॥**

**ಪಿನಾಕಪಾಣಿನಂ ಚೈವ ಕಥಮೇತಾನ್ನ ಯೋಧಯೇ ।**
**ರಥಂ ವಾಹಯ ಮೇ ಶೀಘ್ರಂ ವ್ಯೇತು ತೇ ಮಾನಸೋ ಜ್ವರಃ ॥೪೧॥**

ಆಚಾರ್ಯರಾದ ದ್ರೋಣರು, ಇಂದ್ರ, ಕುಬೇರ, ಯಮ, ವರುಣ, ಅಗ್ನಿ, ಕೃಪರು, ಲಕ್ಷ್ಮೀಪತಿಯಾದ ಶ್ರೀಕೃಷ್ಣ, ಈಶ್ವರ–ಇವರೆಲ್ಲರನ್ನೂ ಶುಶ್ರೂಷೆಮಾಡಿ, ಮಹತ್ತರವಾದ ಅನುಗ್ರಹವನ್ನು ಸಂಪಾದಿಸಿರುವ ನಾನು ಸಾಧಾರಣವೀರರೆನಿಸಿದ ಈ ಕುರುರಾಜರೊಡನೆ ಯುದ್ಧಮಾಡಲಾರೆನೇ? ಯುದ್ಧಮಾಡಿ ಜಯಗಳಿಸಲಾರೆನೇ? ಹಾಗೆಂದಿಗೂ ಭ್ರಾಂತನಾಗಬೇಡ.

ರಾಜಕುಮಾರ! ನಿನ್ನ ಮನಸ್ಸಿನಲ್ಲಿರುವ ಭಯವನ್ನು ದೂರಮಾಡು. ರಥವನ್ನು ಕುರುಸೇನೆಯ ಬಳಿಗೆ ತಡಮಾಡದೇ ಒಯ್ಯುವವನಾಗು"– ಎಂದು ಹೇಳುತ್ತಾ ಉತ್ತರಕುಮಾರನಿಗೆ ಧೈರ್ಯವನ್ನು ತುಂಬಿದನು."

ೞ೫ನೆಯ ಅಧ್ಯಾಯವು ಮುಗಿಯಿತು.

ೞ೬ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಉತ್ತರನ ರಥದ ಮೇಲೆ ಅರ್ಜುನನ ಕಪಿಧ್ವಜವು ಉಪಸ್ಥಿತ ವಾದುದು : ಅರ್ಜುನನು ಶಂಖನಾದವನ್ನು ಮಾಡಿದುದು : ದ್ರೋಣರು ಆ ಸಮಯದಲ್ಲಾದ ಅಪಶಕುನಗಳನ್ನು ವಿವರಿಸಿದುದು

ವೈಶಂಪಾಯನರು ಮಹಾಭಾರತದ ಕಥೆಯನ್ನು ಮುಂದುವರಿಸುತ್ತಾ ಹೇಳುತ್ತಾರೆ :

"ಜನಮೇಜಯ! ಅರ್ಜುನನು ಉತ್ತರನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಶಮೀವೃಕ್ಷಕ್ಕೆ ಪ್ರದಕ್ಷಿಣೆಮಾಡಿ, ತನ್ನ ಎಲ್ಲ ಆಯುಧ ಗಳನ್ನೂ ರಥದಲ್ಲಿಟ್ಟುಕೊಂಡು ರಣರಂಗಕ್ಕೆ ಹೊರಟನು. ಹೊರಡುವ ಮೊದಲು ಉತ್ತರನ ಸಿಂಹಧ್ವಜವನ್ನು ರಥದಿಂದ ಕೆಳಗಿಳಿಸಿ, ಅದನ್ನು ಶಮೀ ವೃಕ್ಷದಲ್ಲಿಟ್ಟು, ದೇವಶಿಲ್ಪಿಯಾದ ವಿಶ್ವಕರ್ಮನಿಂದಲೇ ನಿರ್ಮಿಸಲ್ಪಟ್ಟಿದ್ದ, ಅಗ್ನಿದತ್ತವಾದ ಮತ್ತು ದಿವ್ಯವಾದ ಸಿಂಹದ ಪುಚ್ಛವುಳ್ಳ ಕಪಿಯಿಂದ ಕೂಡಿದ್ದ ಸುವರ್ಣಧ್ವಜವನ್ನು ತಾನು ಕುಳಿತಿದ್ದ ರಥದ ಮೇಲೆ ಹಾರಿಸಿ, ಧ್ವಜ ಪ್ರದಾತೃವಾದ ಅಗ್ನಿದೇವನನ್ನು ಮನಸ್ಸಿನಲ್ಲಿಯೇ ಸ್ಮರಿಸಿದನು. ಅರ್ಜುನನ ಮನೋಭಿಲಾಷೆಯನ್ನು ತಿಳಿದ ಅಗ್ನಿದೇವನು ಧ್ವಜಸಂರಕ್ಷಣೆಗಾಗಿ ಭೂತ ಗಳನ್ನು ನಿಯೋಜಿಸಿದನು. ವಿಚಿತ್ರವಾದ ವರ್ಣಗಳಿದ್ದ ಪತಾಕೆಗಳಿಂದಲೂ, ಬತ್ತಳಿಕೆಗಳಿಂದಲೂ ಕೂಡಿದ್ದ ರಥದಲ್ಲಿ ಹತ್ತಿಕುಳಿತು ಮಹಾರಥನಾದ, ಕುಂತಿಯ ಪುತ್ರನಾದ, ಶ್ವೇತವಾಹನನಾದ, ಬೀಭತ್ಸುವು ಸೊಂಟಕ್ಕೆ ಕತ್ತಿಯನ್ನು ಬಿಗಿದು ಗೋಧಾಂಗುಲಿತ್ರಗಳನ್ನು ಬೆರಳುಗಳಿಗೆ ಹಾಕಿಕೊಂಡು ಧನುಷ್ಪಾಣಿಯಾಗಿ ಉತ್ತರದಿಕ್ಕಿನ ಕಡೆಗೆ ಹೊರಟನು.

ಬಲಿಷ್ಠನಾದ ಅರಿಮರ್ದನನಾದ ಅರ್ಜುನನು ಶತ್ರುಗಳಿಗೆ ರೋಮಾಂಚನವನ್ನುಂಟುಮಾಡುವ ಮಹಾಧ್ವನಿಯುಕ್ತವಾದ ಮಹಾಶಂಖ ವನ್ನು, ಶ್ವಾಸವನ್ನು ಬಲವಾಗಿ ಸೆಳೆದು ಊದಿದನು. ಬಹುಗಂಭೀರವಾದ ಆ ಶಂಖಧ್ವನಿಯನ್ನು ಕೇಳಿದೊಡನೆಯೇ ಅತಿವೇಗವಾಗಿ ಹೋಗುತ್ತಿದ್ದ



ಕುದುರೆಗಳು ಭಯದಿಂದ ತತ್ತರಿಸಿ ಮೊಳಕಾಲೂರಿ ನಿಂತುವು. ಸಾರಥಿ ಯಾಗಿದ್ದ ಉತ್ತರನೂ ಶಂಖಧ್ವನಿಯನ್ನು ಕೇಳಿ ಬಹಳ ಭೀತನಾಗಿ ಹಿಂದಕ್ಕೆ ಸರಿದು ಕುಳಿತುಬಿಟ್ಟನು. ಒಡನೆಯೇ ಅರ್ಜುನನು ಕುದುರೆಗಳ ಕಡಿವಾಣ ಗಳನ್ನು ಹಿಡಿದು ಮೊಳಕಾಲುಗಳ ಮೇಲೆ ನಿಂತಿದ್ದ ಕುದುರೆಗಳನ್ನು ಮೇಲೆತ್ತಿ ಅವುಗಳ ಕಡಿವಾಣಗಳನ್ನು ಸರಿಪಡಿಸಿ ಸಮಸ್ಥಿತಿಯಲ್ಲಿ ನಿಲ್ಲಿಸಿದನು. ಬಹು

ಭೀತನಾಗಿದ್ದ ಉತ್ತರನನ್ನು ಆದರದಿಂದ ಆಲಿಂಗನಮಾಡಿಕೊಂಡು ತಲೆಯನ್ನು ಸವರಿ ಆಶ್ವಾಸನೆಮಾಡುತ್ತಾ ಹೇಳಿದನು : "ರಾಜಕುಮಾರ! ಇಷ್ಟೊಂದು ಭಯಪಡುವುದೇಕೆ? ನೀನು ಕ್ಷತ್ರಿಯವೀರನಲ್ಲವೇ? ಕ್ಷತ್ರಿಯ ವೀರನಾಗಿದ್ದುಕೊಂಡು ಶತ್ರುಗಳ ಮಧ್ಯದಲ್ಲಿ ನಿಂತಿರುವಾಗ ದುಃಖಿಸ ಬಹುದೇ? ಚಿಂತಿಸಬಹುದೇ? ಈ ಹಿಂದೆಯೂ ನೀನು ರಣರಂಗದಲ್ಲಿ ಅನೇಕಾನೇಕ ಶಂಖಧ್ವನಿಗಳನ್ನೂ–ಆನೆಗಳ ಗರ್ಜನೆಗಳನ್ನೂ ಕೇಳಿರುವೆ ಯಲ್ಲವೇ? ಕೇಳಿಯೇ ಇರಬೇಕು. ರಣರಂಗದಲ್ಲಿ ಇಂತಹ ವೀರನಿನಾದಗಳು ಸ್ವಾಭಾವಿಕವಾಗಿಯೇ ಆಗುತ್ತಿರುತ್ತವೆ. ಹೀಗಿರುವಾಗ ನಾನು ಮಾಡಿದ ಈ ಶಂಖಧ್ವನಿಯನ್ನು ಕೇಳಿ ನೀನು ಸಾಮಾನ್ಯಮನುಷ್ಯನಂತೆ ಭಯಪಟ್ಟು ಕಳೆಗುಂದಿರುವೆಯೇಕೆ? ನಿನ್ನ ಮುಖವು ಬಾಡಿಹೋಗಿದೆ. ಮುಖದಲ್ಲಿ ಕಾಂತಿಯೇ ಇಲ್ಲವಾಗಿದೆ."

ಉತ್ತರನು ಹೇಳುತ್ತಾನೆ :

"ಅರ್ಜುನ! ನಾನು ಈ ಹಿಂದೆ ಶಂಖನಿನಾದಗಳನ್ನೂ ಕೇಳಿದ್ದೆನು. ಅನೇಕಾನೇಕವಾದ ಭೇರೀಶಬ್ದಗಳನ್ನೂ ಕೇಳಿದ್ದೆನು. ಸೈನ್ಯವ್ಯೂಹದಲ್ಲಿರು ತ್ತಿದ್ದ ಸಲಗಗಳ ಘೋರಗರ್ಜನೆಗಳನ್ನೂ ಕೇಳಿದ್ದೆನು. ಆದರೆ ಇಂತಹ ಪರಮಾದ್ಭುತವಾದ ಶಂಖಧ್ವನಿಯನ್ನು ಮಾತ್ರ ನಾನಿದುವರೆಗೂ ಕೇಳಿಯೇ ಇರಲಿಲ್ಲ. ವಿಚಿತ್ರವಾದ ಇಂತಹ ಕಪಿಧ್ವಜವನ್ನೂ ನಾನು ಇದುವರೆಗೂ ನೋಡಿಯೂ ಇರಲಿಲ್ಲ. ಇಷ್ಟು ಮಾತ್ರವಲ್ಲ. ಅರ್ಜುನ! ನೀನು ಮಾಡಿದಂತಹ ಧನುಷ್ಟೇಂಕಾರವನ್ನು ನಾನು ಇದುವರೆಗೂ ಕೇಳಿರಲಿಲ್ಲ. ಬೇರೆಯವರು ಮಾಡುವ ಸಹಸ್ರಾರು ಧನುಷ್ಟೇಂಕಾರಗಳಿಗಿಂತಲೂ ಇದು ಪರಮಾದ್ಭುತವಾಗಿದೆ. ನೀನು ಮಾಡಿದ ಶಂಖಧ್ವನಿ, ಧನುಷ್ಟೇಂಕಾರ ಮತ್ತು ನಿನ್ನ ಧ್ವಜದಲ್ಲಿರುವ ಅತಿಮಾನವರ (ಭೂತಾದಿ ಗಣಗಳ) ಹಾಗೂ ಕಪೀಶ್ವರನ ಅಟ್ಟಹಾಸಗಳು ಮತ್ತು ನಾವು ಪ್ರಯಾಣಮಾಡುತ್ತಿರುವ ಈ ರಥದ ಚಕ್ರಗಳು ಮಾಡುತ್ತಿರುವ ಕರ್ಕಶ ಧ್ವನಿ–ಇವುಗಳು ನನ್ನನ್ನು ಬಹುಭ್ರಾಂತನನ್ನಾಗಿ ಮಾಡಿಬಿಟ್ಟಿವೆ. ನನ್ನ ಕಣ್ಣಿಗೆ ನಾಲ್ಕು ದಿಕ್ಕುಗಳೂ ಸುತ್ತುತ್ತಿರುವಂತೆ ಕಾಣುತ್ತಿವೆ. ನನ್ನ

ಹೃದಯವು ಬಹುವ್ಯಥಿತವಾಗಿದೆ. ಪರಮಾದ್ಭುತವಾದ ಆ ನಿನ್ನ ಕಪಿಧ್ವಜವು ಎಲ್ಲ ದಿಕ್ಕುಗಳನ್ನೂ ಆವರಿಸಿಬಿಟ್ಟಿರುವುದೋ–ಎಂಬಂತೆ ಕಾಣುತ್ತಿದೆ. ಈ ಕಾರಣದಿಂದಾಗಿ ನನಗೆ ದಿಕ್ಕುಗಳೇ ಸ್ಪಷ್ಟವಾಗಿ ಕಾಣುತ್ತಿಲ್ಲ.

ಅರ್ಜುನ! ನಿನ್ನ ಗಾಂಡೀವಧನುಸ್ಸಿನ ಟೇಂಕಾರದಿಂದಾಗಿ ನಾನು ಶ್ರವಣಸಾಮರ್ಥ್ಯವನ್ನೇ ಕಳೆದುಕೊಂಡು ಕಿವುಡನಾಗಿಬಿಟ್ಟಿದ್ದೇನೆ. ಈ ಘೋರಶಬ್ದದಿಂದ ನನ್ನ ಕಿವಿಯೊಳಗಿನ ಪೊರೆಯು ಒಡೆದುಹೋಗಿದೆಯೆಂದೇ ಭಾವಿಸುತ್ತೇನೆ."

ರಥವು ಮುಂದೆ ಸಾಗುತ್ತಿತ್ತು. ಸ್ವಲ್ಪದೂರ ಪ್ರಯಾಣಮಾಡಿದನಂತರ ಅರ್ಜುನನು ಉತ್ತರನನ್ನು ಕುರಿತು ಹೇಳಿದನು :

"ಉತ್ತರಕುಮಾರ! ಸಾರಥಿಯ ಪೀಠದ ಮೇಲೆ ಸರಿಯಾಗಿ ಕುಳಿತುಕೋ. ಹೆಜ್ಜೆಗಳನ್ನು ದೃಢವಾಗಿ ಊರು. ಕುದುರೆಗಳ ಕಡಿವಾಣಗಳನ್ನು ಬಲವಾಗಿ ಹಿಡಿದುಕೋ. ಹಿಂದಿನಂತೆಯೇ ಪುನಃ ಭ್ರಾಂತನಾಗಬೇಡ. ನಾನು ಮತ್ತೊಮ್ಮೆ ಶಂಖವನ್ನು ಊದುತ್ತೇನೆ."

ಹೀಗೆಂದು ಹೇಳಿ ಅರ್ಜುನನು ಪುನಃ ಶಂಖವನ್ನು ಗಟ್ಟಿಯಾಗಿ ಊದಿದನು. ಮಹತ್ತರವಾದ ಆ ಶಂಖಧ್ವನಿಯು ಪರ್ವತವನ್ನೇ ಸೀಳಿಬಿಡುವುದೋ–ಎಂಬಂತಿದ್ದಿತು. ಪರ್ವತದ ಗುಹೆಗಳಲ್ಲಿಯೂ ಶಂಖನಿನಾದವು ಪ್ರತಿಧ್ವನಿತವಾಗಿ ಗುಹೆಯೊಳಗೆ ಆಸ್ಫೋಟವಾಗಿರಬಹುದೆಂಬ ಭ್ರಾಂತಿಯನ್ನು ಉಂಟುಮಾಡುತ್ತಿದ್ದಿತು. ನಾಲ್ಕು ದಿಕ್ಕುಗಳಲ್ಲಿಯೂ ಇದೇ ವಿಧವಾಗಿ ಪ್ರತಿಧ್ವನಿಯುಂಟಾಯಿತು. ಉತ್ತರನು ಬಹಳ ಭ್ರಾಂತನಾಗಿ ರಥದ ಕಂಬವನ್ನೊರಗಿ ಕುಳಿತನು. ಶಂಖನಿನಾದದಿಂದಲೂ, ರಥದ ಅಚ್ಚಿನ ಕರ್ಕಶ ಶಬ್ದದಿಂದಲೂ, ಗಾಂಡೀವಧನುಸ್ಸಿನ ಟೇಂಕಾರದಿಂದಲೂ ಭೂಮಿಯೇ ಕಂಪಿಸಿತು. ಕುಂದಿದ ಮುಖಭಾವದಿಂದ ಕುಳಿತಿದ್ದ ಉತ್ತರನನ್ನು ಅರ್ಜುನನು ಪುನಃ ಸಂತೈಸಿ ಧೈರ್ಯತುಂಬಿದನು.

ಕೌರವಸೇನೆಯಲ್ಲಿದ್ದ ದ್ರೋಣರು ಆ ಶಂಖಧ್ವನಿಯನ್ನೂ ಧನು

ಷ್ಟೇಂಕಾರವನ್ನೂ ಕೇಳಿ ತಮ್ಮ ಸೈನಿಕರನ್ನು ಕುರಿತು ಹೇಳಿದರು : "ರಥಚಕ್ರಗಳ ಕರ್ಕಶಧ್ವನಿಯು ಕೇಳಿಬರುತ್ತಿರುವ ರೀತಿ, ರಣರಂಗದ ಮೇಲ್ಭಾಗದಲ್ಲಿ ಕಾರ್ಮುಗಿಲು ಘೇರಾಯಿಸಿಕೊಳ್ಳುತ್ತಿರುವ ರೀತಿ, ಶಂಖಧ್ವನಿ ಮತ್ತು ಧನುಷ್ಟೇಂಕಾರ–ಇವುಗಳಿಂದ ಭೂಮಿಯೇ ಕಂಪಿಸುತ್ತಿರುವುದು ಈ ಲಕ್ಷಣಗಳೆಲ್ಲವನ್ನೂ ನೋಡಿದರೆ ಈಗ ನಮಗೆ ಎದುರಾಗಿ ಬರುತ್ತಿರುವವನು ಅರ್ಜುನನಲ್ಲದೇ ಬೇರೊಬ್ಬನಿರಲಾರನು. ಅಶುಭಸೂಚನೆಯೋ ಎಂಬಂತೆ ಈ ಕ್ಷಣದಲ್ಲಿ ನಮ್ಮ ಆಯುಧಗಳೂ ಕಂಗೊಳಿಸುತ್ತಿರುವುದಿಲ್ಲ. ನಮ್ಮ ಕುದುರೆಗಳು ಹಿಂದಿನಂತೆ ಉತ್ಸಾಹದಿಂದ ಮುನ್ನುಗ್ಗುತ್ತಿಲ್ಲ. ಸಮಿತ್ತಿನಿಂದ ಹುತಮಾಡಿದರೂ ನಮ್ಮ ಔಪಾಸನಾಗ್ನಿಗಳು ಪ್ರಜ್ವಲಿಸುತ್ತಿರುವುದಿಲ್ಲ. ನಮ್ಮ ಸೈನ್ಯದಲ್ಲಿರುವ ಪ್ರಾಣಿಗಳೆಲ್ಲವೂ ಸೂರ್ಯನಿಗೆ ಅಭಿಮುಖವಾಗಿ ನಿಂತು ಕರ್ಕಶಸ್ವರಗಳಿಂದ ಕೂಗಿಕೊಳ್ಳುತ್ತಿವೆ. ನಮ್ಮ ಧ್ವಜಸ್ತಂಭಗಳ ಮೇಲೆ ಕಾಗೆಗಳು ನಿರ್ಭಯವಾಗಿ ಕುಳಿತಿವೆ. ಅಂತರಿಕ್ಷದಲ್ಲಿ ಹಾರಾಡುತ್ತಿರುವ ಪಕ್ಷಿಗಳು ನಮ್ಮ ಎಡಭಾಗದಿಂದ ಬಲಭಾಗಕ್ಕೆ ( ಅಪ್ರದಕ್ಷಿಣವಾಗಿ ) ಹಾರಿಹೋಗುತ್ತಿವೆ. ಇದು ಮುಂದೆ ಪ್ರಾಪ್ತವಾಗಲಿರುವ ಮಹಾಭಯದ ಸೂಚಕವಾಗಿದೆ. ಈ ಗೋಮಾಯವು ರೋದನಮಾಡುತ್ತಾ ನಮ್ಮ ಸೇನೆಗಳ ಮಧ್ಯಭಾಗದಲ್ಲಿಯೇ ಓಡಿಹೋಗುತ್ತಿದೆ. ನಮ್ಮ ಸೈನಿಕರು ಪ್ರಯತ್ನಿಸಿದರೂ ಅದನ್ನು ಹೊಡೆಯಲೂ ಆಗಲಿಲ್ಲ ; ಹಿಡಿಯಲೂ ಆಗಲಿಲ್ಲ. ಇದು ನಿಶ್ಚಯವಾಗಿಯೂ ಮಹಾಭಯದ ದ್ಯೋತಕವಾಗಿದೆ. ನಿಮ್ಮೆಲ್ಲರ ರೋಮಕೋಟಿಗಳೂ ನಿಮಿರಿ ನಿಂತಿರುವುದನ್ನು ನಾನು ಕಾಣುತ್ತಿದ್ದೇನೆ. ಈ ಯುದ್ಧದಲ್ಲಿ ಕ್ಷತ್ರಿಯರ ವಿನಾಶವಾಗುವುದೆಂಬುದನ್ನು ಇದು ಸೂಚಿಸುತ್ತದೆ. ಸೂರ್ಯನ ಕಿರಣಗಳು ಅನುದಿನದಂತೆ ಬೆಳಕನ್ನು ಕೊಡುತ್ತಿಲ್ಲ. ಮೃಗ-ಪಕ್ಷಿಗಳ ಕೂಗು ಬಹುದಾರುಣವಾಗಿ ಕೇಳಿಬರುತ್ತಿದೆ. ಕ್ಷತ್ರಿಯರ ವಿನಾಶಸೂಚಕಗಳಾದ ಹಲವು ಬಗೆಯ ಉತ್ಪಾತಗಳು ಕಾಣಿಸಿಕೊಳ್ಳುತ್ತಿವೆ.

ದುರ್ಯೋಧನ! ಈ ಅಶುಭಸೂಚನೆಗಳು ನಮ್ಮ ಶತ್ರುಗಳಿಗೆ ಅನ್ವಯಿಸುವುದಿಲ್ಲ. ಇವುಗಳೆಲ್ಲವೂ ನಮಗೆ ಮಾತ್ರ ವಿನಾಶದ ಸೂಚಕಗಳಾಗಿವೆ. ಆಕಾಶದಿಂದ ಅನವರತವಾಗಿ ಬೀಳುತ್ತಿರುವ ಬಾಲಚುಕ್ಕೆಗಳು ನಿನ್ನ ಸೈನಿಕ

ರನ್ನು ಬಾಧೆಪಡಿಸುತ್ತಿವೆ. ನಿನ್ನ ಸೈನ್ಯದಲ್ಲಿರುವ ಆನೆ, ಕುದುರೆ ಮೊದಲಾದ ಪ್ರಾಣಿಗಳೂ ನಿರುತ್ಸಾಹದಿಂದಿರುವುದು ಮಾತ್ರವಲ್ಲದೆ ರೋದನಮಾಡುತ್ತಿವೆಯೋ–ಎಂಬಂತೆ ಕಾಣುತ್ತಿವೆ. ನಿನ್ನ ಸೈನ್ಯದ ಸುತ್ತಲೂ ರಣಹದ್ದುಗಳು ಕಾದು ಕುಳಿತಿವೆ. ಇದು ನಮ್ಮ ಸೈನ್ಯದ ವಿನಾಶಕ್ಕೆ ಸೂಚಕವಾಗಿದೆ. ಪಾರ್ಥನ ಬಾಣಗಳಿಂದ ಪೀಡಿತವಾದ ಸೈನ್ಯವನ್ನು ನೋಡಿ ನೀನು ಪಶ್ಚಾತ್ತಾಪ ಪಡಬೇಕಾಗಬಹುದೆಂದು ನನಗನ್ನಿಸುತ್ತಿದೆ. ಈಗಿನ ವಾತಾವರಣವನ್ನು ನೋಡಿದರೆ ನಿನ್ನ ಸೈನಿಕರು ಈಗಾಗಲೇ ಪರಾಜಿತರಾದಂತೆಯೇ ಕಾಣುತ್ತಿದ್ದಾರೆ. ಇವರ ಮುಖಗಳಲ್ಲಿ ಸ್ವಲ್ಪವಾದರೂ ಕಾಂತಿಯೆಂಬುದೇ ಇಲ್ಲವಾಗಿದೆ. ಯಾರೊಬ್ಬರಿಗೂ ಯುದ್ಧಮಾಡುವ ಉತ್ಸಾಹವಿರುವಂತೆಯೇ ಕಂಡುಬರುತ್ತಿಲ್ಲ. ಇವರ ಮುಖಗಳೆಲ್ಲವೂ ಕುಂದಿಹೋಗಿವೆ. ಇವರೆಲ್ಲರೂ ಈಗಾಗಲೇ ಗತಪ್ರಜ್ಞರಂತೆಯೇ ಕಾಣುತ್ತಿದ್ದಾರೆ. ಆದುದರಿಂದ ನಾವೀಗಲೇ ಹಸುಗಳನ್ನು ಹಸ್ತಿನಾಪುರದೆಡೆಗಟ್ಟಿ, ನಮ್ಮ ಸೈನ್ಯವನ್ನು ವ್ಯೂಹದಲ್ಲಿ ನಿಲ್ಲಿಸಿ, ಆಯುಧಗಳನ್ನು ಹಿಡಿದು ಯುದ್ಧಸನ್ನದ್ಧರಾಗೋಣ."

೪೬ನೆಯ ಅಧ್ಯಾಯವು ಮುಗಿಯಿತು.

೪೭ನೆಯ ಅಧ್ಯಾಯ — ಗೋಹರಣಪರ್ವ (ಮುಂದುವರಿದಿದೆ.)

## ದುರ್ಯೋಧನನ ಯುದ್ಧಸಿದ್ಧತೆ : ಕರ್ಣನ ಆತ್ಮಪ್ರಶಂಸೆ

ಜನಮೇಜಯ! ದ್ರೋಣರು ತಮ್ಮ ಸೈನಿಕರ ದುರವಸ್ಥೆಯನ್ನು ಈ ರೀತಿಯಲ್ಲಿ ವಿವರಿಸಿ ಹೇಳಿದನಂತರ ದುರ್ಯೋಧನನು ಭೀಷ್ಮ-ದ್ರೋಣ-ಕೃಪರನ್ನು ಉದ್ದೇಶಿಸಿ ಹೇಳಿದನು :

"ಆಚಾರ್ಯರೇ! ನಾನು ಈಗ ಹೇಳಲಿರುವ ವಿಷಯವನ್ನು ಹಿಂದೆಯೂ ಅನೇಕ ಬಾರಿ ಹೇಳಿದ್ದೇನೆ. ಕರ್ಣನೂ ಹೇಳಿದ್ದಾನೆ. ಈಗ ಪುನಃ ಆ ವಿಷಯವನ್ನೇ ಹೇಳುತ್ತೇನೆ. ಏಕೆಂದರೆ ಆ ವಿಷಯವನ್ನು ಎಷ್ಟು ಬಾರಿ ಹೇಳಿದರೂ ನನಗೆ ತೃಪ್ತಿಯೆಂಬುದೇ ಇಲ್ಲ.

ನಾವೂ ಮತ್ತು ಪಾಂಡವರೂ ಪಗಡೆಯಾಡಲು ಪ್ರಾರಂಭಿಸಿದಾಗ ಮಾಡಿಕೊಂಡ ಒಪ್ಪಂದವನ್ನು ಪುನಃ ನಿಮ್ಮ ಸ್ಮೃತಿಗೂ ತರಲಿಚ್ಛಿಸುತ್ತೇನೆ.

**ಪರಾಭೂತೈರ್ಹಿ ವಸ್ತವ್ಯಂ ತೈಶ್ಚ ದ್ವಾದಶ ವತ್ಸರಾನ್ ।**
**ವನೇ ಜನಪದೇಽಜ್ಞಾತೈರೇಷ ಏವ ಪಣೋ ಹಿ ನಃ ॥೩॥**

ಪಗಡೆಯಾಟದಲ್ಲಿ ಸೋತುಹೋಗುವವರು ಹನ್ನೆರಡು ವರ್ಷಗಳ ಕಾಲ ಅರಣ್ಯದಲ್ಲಿರಬೇಕು. ಆ ಸಮಯದಲ್ಲಿ ಅವರೆಲ್ಲಿರುವರೆಂಬ ವಿಷಯವು ಎಲ್ಲರಿಗೂ ತಿಳಿದಿರಬಹುದಾಗಿದೆ. ಆದರೆ ಹದಿಮೂರನೆಯ ವರ್ಷ ಮಾತ್ರ ಸೋತವರು ಅಜ್ಞಾತವಾಸಿಗಳಾಗಿ ಯಾವುದಾದರೂ ದೇಶದಲ್ಲಿರಬೇಕು. ಅವರೆಲ್ಲಿರುವರೆಂಬ ವಿಷಯವು ಯಾರಿಗೂ ತಿಳಿಯಬಾರದು ಆ ವರ್ಷದಲ್ಲೇನಾದರೂ ಅಜ್ಞಾತವಾಸಿಗಳಾಗಿರುವ ಅವರನ್ನು ಪತ್ತೆಹಚ್ಚಿದಲ್ಲಿ ಪುನಃ ಅವರು ಹನ್ನೆರಡು ವರ್ಷಗಳ ಕಾಲ ವನವಾಸವನ್ನೂ, ಒಂದು ವರ್ಷಕಾಲ ಅಜ್ಞಾತವಾಸವನ್ನೂ ಮಾಡಲೇಬೇಕು. ಇದು ನಾವು ಗೊತ್ತುಮಾಡಿಕೊಂಡ ಜೂಜಿನ ಪಣವಾಗಿರುತ್ತದೆ. ಆ ಒಪ್ಪಂದದ ವಿಷಯವು ನಿಮ್ಮೆಲ್ಲರಿಗೂ ಆಮೂಲಾಗ್ರವಾಗಿ ತಿಳಿದೇ ಇರುವುದು. ಪಾಂಡವರು ಹನ್ನೆರಡು ವರ್ಷಗಳ ಕಾಲ ಅರಣ್ಯವಾಸವನ್ನೇನೋ ಮಾಡಿದರು. ಆದರೆ ಒಂದು ವರ್ಷದ ಅಜ್ಞಾತವಾಸದ ಅವಧಿಯು ಇನ್ನೂ ಮುಗಿದಿರುವುದಿಲ್ಲ. ಈ ಅಜ್ಞಾತವಾಸದ ಕಾಲದಲ್ಲಿ ಅವರನ್ನು ಪತ್ತೆಹಚ್ಚಲೆಂದೇ ನಾವೆಲ್ಲರೂ ಬಹುವಾಗಿ ಪ್ರಯತ್ನಿಸಿದೆವು. ಯದ್ಯಪಿ ನಮ್ಮ ಪ್ರಯತ್ನಗಳೆಲ್ಲವೂ ವಿಫಲವಾದರೂ ಅಜ್ಞಾತವಾಸವು ಮುಗಿಯುವುದರೊಳಗಾಗಿ ಅರ್ಜುನನು ನಮ್ಮೆದುರಾಗಿ ಬಂದಿರುತ್ತಾನೆ.

ಈ ಸಮಯದಲ್ಲಿ ನೀವು ನಿಮ್ಮ ಸ್ಪಷ್ಟವಾದ ಅಭಿಪ್ರಾಯವನ್ನು ನೀಡಲೇಬೇಕು. ಮೊದಲನೆಯದಾಗಿ : ಪಾಂಡವರ ಅಜ್ಞಾತವಾಸದ ಅವಧಿಯು ಮುಗಿದಿರುವುದೇ? ಮುಗಿದಿರಲಾರದೆಂದು ನಾನು ಭಾವಿಸಿದ್ದೇನೆ. ನನ್ನ ಗಣನೆಯ ಪ್ರಕಾರ ಅವಧಿಯು ಮುಗಿಯುವುದರೊಳಗಾಗಿಯೇ ಬೀಭತ್ಸುವು ಆಗಮಿಸಿರುವನೆಂಬುದು ಸ್ಥಿರಪಟ್ಟಿದೆ. ಪುನಃ ಹನ್ನೆರಡು

ವರ್ಷಗಳ ಕಾಲ ಅರಣ್ಯವಾಸವನ್ನೂ, ಒಂದು ವರ್ಷಕಾಲ ಅಜ್ಞಾತವಾಸ ವನ್ನೂ ಪಾಂಡವರು ಕೈಗೊಳ್ಳಲೇಬೇಕಾಗುವುದು.

**ಲೋಭಾದ್ವಾ ತೇ ನ ಜಾನೀಯುರಸ್ಮಾನ್ವಾ ಮೋಹ ಆವಿಶತ್ ।**
**ಹೀನಾತಿರಿಕ್ತಮೇತೇಷಾಂ ಭೀಷ್ಮೋ ವೇದಿತುಮರ್ಹತಿ ॥೬॥**

ರಾಜ್ಯವನ್ನು ಸಾಧ್ಯವಾದಷ್ಟು ಬೇಗ ಪಡೆದುಕೊಳ್ಳಬೇಕೆನ್ನುವ ಲೋಭದಿಂದಾಗಿ ಪಾಂಡವರು ದಿವಸಗಳನ್ನು ತಪ್ಪಾಗಿ ಗಣನೆಮಾಡಿರ ಬಹುದು ಅಥವಾ ನಾವೇ ಈ ವಿಷಯದಲ್ಲಿ ಭ್ರಾಂತರಾಗಿಯೂ ಇರಬಹುದು. ಈ ವಿಷಯದಲ್ಲಿ ನಮ್ಮ ಪಿತಾಮಹರಾದ ಭೀಷ್ಮರೇ ತಮ್ಮ ಖಚಿತವಾದ ಅಭಿಪ್ರಾಯವನ್ನು ಕೊಡಲಿ. ಇಂದಿಗೆ ಪಾಂಡವರ ಅಜ್ಞಾತವಾಸವು ಮುಗಿದಿರುವುದೇ? ಅಥವಾ ಮುಗಿಯಲು ಇನ್ನೂ ಕೆಲವು ದಿನಗಳು ಉಳಿದಿರುವುದೇ? ಅಥವಾ ಅಜ್ಞಾತವಾಸದ ಅವಧಿಯು ಮುಗಿದು ನಾಲ್ಕಾರು ದಿನಗಳೇ ಕಳೆದಿವೆಯೇ?–ಈ ವಿಷಯವನ್ನು ಭೀಷ್ಮರೇ ಸ್ಪಷ್ಟವಾಗಿ ತಿಳಿಸಬಲ್ಲವರಾಗಿರುತ್ತಾರೆ.

**ಅರ್ಥಾನಾಂ ಚ ಪುನರ್ದ್ವೈಧೇ ನಿತ್ಯಂ ಭವತಿ ಸಂಶಯಃ ।**
**ಅನ್ಯಥಾ ಚಿನ್ತಿತೋ ಹ್ಯರ್ಥಃ ಪುನರ್ಭವತಿ ಸೋಽನ್ಯಥಾ ॥೭॥**

ಆಲೋಚನೆ ಮಾಡಿದ ರೀತಿಯಲ್ಲಿ ಒಂದು ವಿಷಯವು ನಡೆಯದೆ ಮತ್ತೊಂದು ರೀತಿಯಲ್ಲಿ ನಡೆದರೆ ಏನುಮಾಡಬೇಕೆಂಬ ವಿಷಯದಲ್ಲಿ ನಿಶ್ಚಯ ವಾಗಿಯೂ ಸಂಶಯವುಂಟಾಗುತ್ತದೆ. ಏಕೆಂದರೆ : ಬೇರೆಯ ರೀತಿಯಲ್ಲಿ ಆಲೋಚಿಸಿದ ವಿಷಯವು ಬೇರೊಂದು ರೀತಿಯಲ್ಲಿ ಪರಿಣಮಿಸಬಹುದು.

ಹನ್ನೆರಡು ವರ್ಷಗಳು ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸ ಎಂಬುದೊಂದು ನಿಶ್ಚಿತವಾಗಿದ್ದರೂ ಕಾಲದ ಅವಧಿಯು ಯಾವಾಗ ಮುಗಿ ಯುತ್ತದೆಂಬ ವಿಷಯದಲ್ಲಿ ಎರಡು ಅಭಿಪ್ರಾಯಗಳು ಹುಟ್ಟಿಕೊಂಡಿವೆ. ಅಂದು ನಾವು ಒಪ್ಪಂದಮಾಡಿಕೊಂಡಾಗ ಆ ಅವಧಿಯು ಇಂತಹ ಸಂವ ತ್ಸರ, ಇಂತಹ ತಿಂಗಳು, ಇಂತಹ ದಿನವೇ ಮುಗಿಯುವುದೆಂದು ಇತ್ಯರ್ಥ ಮಾಡಿಕೊಂಡಿರಲಿಲ್ಲ ಮತ್ತು ವರ್ಷಗಳನ್ನು ಯಾವ ಗಣನೆಯಿಂದ ಎಣಿಕೆ ಮಾಡಬೇಕೆಂಬ ವಿಷಯವೂ ಇತ್ಯರ್ಥವಾಗಿರಲಿಲ್ಲ. ಇಂತಹ ಸಮಯದಲ್ಲಿ ಯಾವುದಾದರೂ ಗಣನೆಯನ್ನಿಟ್ಟುಕೊಂಡು ವರ್ಷವು ಮುಗಿಯಿತೆಂದು

ಹೇಳಲು ಸಾಧ್ಯವಾಗಬಹುದು. ಅಥವಾ ನಮ್ಮ ಇತ್ಯರ್ಥವೇ ಬದಲಾಗಲೂ ಬಹುದು. ಆದರೆ ಈ ವಿಷಯದಲ್ಲಿ ಅವರಾಗಲೀ–ನಾವಾಗಲೀ ಪ್ರಾಜ್ಞರ ಅಭಿಪ್ರಾಯಗಳನ್ನು ಮೀರಲಾಗುವುದಿಲ್ಲ. ನಮ್ಮ ಪಿತಾಮಹರಾದ ಭೀಷ್ಮರು ಪ್ರಾಜ್ಞರಾಗಿಯೂ ನಮ್ಮಿಬ್ಬರ ಹಿತಚಿಂತಕರಾಗಿಯೂ ಇರುತ್ತಾರೆ. ಆದುದರಿಂದ ಅವರೇ ಈ ವಿಷಯದಲ್ಲಿ ನಿಶ್ಚಿತವಾದ ಅಭಿಪ್ರಾಯವನ್ನು ನೀಡಲಿ. (ಈ ಶ್ಲೋಕಕ್ಕೆ ಹೀಗೂ ಅರ್ಥಮಾಡಿದ್ದಾರೆ : 'ಒಂದು ವೇಳೆ ಪಾಂಡವರ ಅಜ್ಞಾತವಾಸವು ಮುಗಿದಿರುವುದೆಂದು ಭಾವಿಸಬಹುದಾದರೂ ಅರ್ಜುನನು ನಮ್ಮೊಡನೆ ಯುದ್ಧಮಾಡುವ ಕಾರಣವಿಲ್ಲ. ಅವರ ವನವಾಸ-ಅಜ್ಞಾತವಾಸಗಳು ಕಳೆದೊಡನೆಯೇ ನಾವು ಅವರಿಗೆ ರಾಜ್ಯವನ್ನು ಕೊಡುತ್ತೇವೆಯೋ–ಬಿಡುತ್ತೇವೆಯೋ ಎಂಬ ವಿಷಯವು ಸಂಶಯದಲ್ಲಿಯೇ ಉಳಿದಿದೆ. ಹೀಗಿರುವಾಗ ಅರ್ಜುನನು ನಮ್ಮೊಡನೆ ಯುದ್ಧಮಾಡಲು ಬರಬಾರದಾಗಿತ್ತು. ನಮ್ಮನ್ನು ಗೆದ್ದುಬಿಡುತ್ತೇನೆಂಬ ದುರಭಿಮಾನದಿಂದಲೇ ಅವನಿಲ್ಲಿಗೆ ಬಂದಿರುತ್ತಾನೆ. ಆದರೆ ಅವನು ಯೋಚಿಸಿರುವಂತೆಯೇ ನಡೆಯುವುದೆಂದು ಹೇಳಲಾಗುವುದಿಲ್ಲ. ಬೇರೆಯ ವಿಧವಾಗಿಯೂ ಪರಿಣಮಿಸಬಹುದು. ನಮ್ಮೊಡನೆ ಯುದ್ಧಮಾಡಿ ಅವನು ಸೋಲಲೂಬಹುದು. ಅಜ್ಞಾತವಾಸವನ್ನು ಮುಗಿಸದೇ ಬಂದುದಕ್ಕಾಗಿ ಪುನಃ ಹನ್ನೆರಡು ವರ್ಷಗಳ ಕಾಲ ತನ್ನ ಸಹೋದರರೊಡನೆ ವನಕ್ಕಾದರೂ ಹೋಗಬೇಕಾಗಬಹುದು.')

(ಯದ್ಯಪಿ ದುರ್ಯೋಧನನಿಗೆ ಅವಧಿಯ ಮೊದಲೇ ಪಾಂಡವರು ಸಿಕ್ಕಿದರೆಂಬ ಸಂತೋಷವಿದ್ದರೂ, ಅಜ್ಞಾತವಾಸದ ಸಮಯದಲ್ಲಿ ಅವರನ್ನು ಹುಡುಕಿಸಲೆಂದೇ ಅವನು ಬಹುವಾಗಿ ಪ್ರಯತ್ನಿಸಿದ್ದರೂ ಪ್ರಕೃತ ಸಂದರ್ಭದಲ್ಲಿ ಅಜ್ಞಾತವಾಸದ ಅವಧಿಗೆ ಮೊದಲು ಪಾಂಡವರನ್ನು ಹುಡುಕಲು ಅಥವಾ ಕಾಣಲು ತಾನು ಇಲ್ಲಿಗೆ ಬರಲಿಲ್ಲವೆಂದು ಹೇಳಿಕೊಳ್ಳುತ್ತಾನೆ. ತಾವಾಗಿಯೇ ಸಿಕ್ಕಿಬಿದ್ದರೆ ಅವರ ದುರ್ಗತಿಗೆ ಅವರೇ ಕಾರಣರೇ ಹೊರತು ತಾವು ಕಾರಣರಲ್ಲವೆಂಬುದು ದುರ್ಯೋಧನನ ಅಭಿಪ್ರಾಯವಾಗಿದೆ. ಅದನ್ನೇ ಸಮರ್ಥಿಸುತ್ತಾ ದುರ್ಯೋಧನನು ಭೀಷ್ಮನನ್ನೂ, ದ್ರೋಣ-ಕೃಪರನ್ನೂ ಕುರಿತು ಹೇಳುತ್ತಾನೆ.) ನಾವು ಮತ್ಸ್ಯರ ಉತ್ತರದಿಕ್ಕಿನ ಗೋವುಗಳನ್ನು ಆಕ್ರಮಣಮಾಡಲು ಬಂದೆವು. ಮತ್ಸ್ಯದೇಶದ ಸೈನಿಕರೊಡನೆ

ಯುದ್ಧಮಾಡಬೇಕೆಂಬುದು ನಮ್ಮ ನಿರೀಕ್ಷೆಯಾಗಿದ್ದಿತು. ಈ ಮಧ್ಯದಲ್ಲಿ ಬೀಭತ್ಸುವು ತಾನೇ ತಾನಾಗಿ ಅಜ್ಞಾತವಾಸದ ಕಾಲಾವಧಿಯು ಮುಗಿಯಿತೇ, ಇಲ್ಲವೇ–ಎಂಬುದನ್ನೂ ವಿವೇಚಿಸದೇ ನಮ್ಮೊಡನೆ ಯುದ್ಧಕ್ಕೆ ಬಂದರೆ ಇದು ನಮ್ಮ ಅಪರಾಧವೇ? ನಾವು ಈ ವಿಷಯದಲ್ಲಿ ಯಾವ ಅಪರಾಧವನ್ನು ಮಾಡಿರುತ್ತೇವೆ? ನಮಗೂ ಮತ್ಸ್ಯರಿಗೂ ನಡೆಯಬೇಕಾಗಿರುವ ಯುದ್ಧದ ಮಧ್ಯದಲ್ಲಿ ಅರ್ಜುನನು ಪ್ರವೇಶಮಾಡಿರುವುದರಿಂದ ಅವನೇ ಅಪರಾಧಿಯಾಗಿದ್ದಾನೆ. ತ್ರಿಗರ್ತರ ಪರವಾಗಿ ನಾವು ಮತ್ಸ್ಯಯೋಧರೊಡನೆ ಯುದ್ಧಮಾಡಲು ಇಲ್ಲಿಗೆ ಬಂದಿರುತ್ತೇವೆ. ತ್ರಿಗರ್ತರು ಮೊದಲಿನಿಂದಲೂ ನಮ್ಮ ಸ್ನೇಹಿತರು. ಮತ್ಸ್ಯರು ತ್ರಿಗರ್ತರ ವಿಷಯದಲ್ಲಿ ಬಹಳವಾದ ಅಪರಾಧವನ್ನೆಸಗಿದ್ದಾರೆ. ಪದೇ-ಪದೇ ಕಿರುಕುಳಗಳನ್ನು ಕೊಡುತ್ತಲೇ ಇರುತ್ತಾರೆಂಬ ವಿಷಯವನ್ನು ತ್ರಿಗರ್ತರು ನಮ್ಮೊಡನೆ ಆಗಿಂದಾಗ್ಗೆ ಹೇಳುತ್ತಲೇ ಇದ್ದರು. ಅವರಿಗೆ ಬೆಂಬಲನೀಡುವುದು ಮಿತ್ರರಾದ ನಮ್ಮ ಮುಖ್ಯಕರ್ತವ್ಯವಾಗಿದ್ದಿತು. ಅಂತೆಯೇ ನಾವು ಮತ್ಸ್ಯರಿಂದ ಭೀತರಾಗಿದ್ದ ತ್ರಿಗರ್ತರಿಗೆ ಬೆಂಬಲನೀಡಲು ಸಮ್ಮತಿಸಿದೆವು. ಸಪ್ತಮಿಯ ದಿನ ಅಪರಾಹ್ಣದ ಸಮಯದಲ್ಲಿ ತ್ರಿಗರ್ತರು ಮೊದಲು ವಿರಾಟನಗರದ ದಕ್ಷಿಣದಿಕ್ಕಿನಲ್ಲಿರುವ ಗೋವುಗಳನ್ನು ಹಿಡಿಯಬೇಕೆಂದು ಮಾತನಾಡಿಕೊಂಡಿದ್ದೆವು. ಅಂತೆಯೇ ಅವರು ದಕ್ಷಿಣದಿಕ್ಕಿನ ಗೋವುಗಳನ್ನು ಹಿಡಿದರು. ತ್ರಿಗರ್ತರಿಂದ ದಕ್ಷಿಣದಿಕ್ಕಿನ ಗೋಗ್ರಹಣವಾಗಿರುವುದನ್ನು ತಿಳಿದೊಡನೆಯೇ ವಿರಾಟನು ಸೈನ್ಯಸಮೇತನಾಗಿ ಗೋವುಗಳನ್ನು ಬಿಡಿಸಿಕೊಳ್ಳಲು ಹೋಗುವನೆಂದು ಊಹಿಸಿ ಅಷ್ಟಮಿಯ ಸೂರ್ಯೋದಯಕ್ಕೆ ಸರಿಯಾಗಿ ನಾವು ಉತ್ತರದಿಕ್ಕಿನ ಗೋಗ್ರಹಣಮಾಡಲು ಸಂಚುಹಾಕಿದೆವು. ನಮ್ಮ ಯೋಜನೆಗೆ ಅನುಗುಣವಾಗಿಯೇ ಎಲ್ಲವೂ ನಡೆದಿರುವುದೆಂದು ಭಾವಿಸಿದ್ದೇನೆ. ವಿರಾಟನು ತ್ರಿಗರ್ತರ ಬೆನ್ನಟ್ಟಿಹೋಗಿರುವುದಂತೂ ನಿಶ್ಚಯ. ಮುಂದಿನದು ಜಯಾಪಜಯಗಳ ವಿಷಯ. ತ್ರಿಗರ್ತಾಧಿಪತಿಯು ಸಸೈನ್ಯನಾದ ವಿರಾಟನನ್ನು ಸೋಲಿಸಿ ಹಸುಗಳ ಸಮೇತನಾಗಿ ಇಲ್ಲಿಗೆ ಬರುತ್ತಾನೆ. ಒಂದು ವೇಳೆ ಅವನು ಸೋತುಹೋಗಿದ್ದರೂ ನಮ್ಮಲ್ಲಿಗೆ ಬಂದು ನಮ್ಮ ಸಹಾಯಪಡೆದು ವಿರಾಟನೊಡನೆ ಯುದ್ಧಮಾಡುತ್ತಾನೆ. ಹಾಗಲ್ಲದೇ ವಿರಾಟರಾಜನೇ ತ್ರಿಗರ್ತರನ್ನು

ಸಂಪೂರ್ಣವಾಗಿ ಸೋಲಿಸಿಬಿಟ್ಟಿದ್ದರೆ, ಭಯಂಕರವಾದ ಅಪಾರಸೈನ್ಯವನ್ನು ತೆಗೆದುಕೊಂಡು ಇಂದು ರಾತ್ರಿ ನಮ್ಮೊಡನೆ ಯುದ್ಧಮಾಡಲು ವಿರಾಟನೇ ಬರಬಹುದು. ಮತ್ಸ್ಯದೇಶದ ಮಹಾಯೋಧರಲ್ಲಿ ಈ ಒಬ್ಬನು ಪೂರ್ವ ಭಾವಿಯಾಗಿ ಯುದ್ಧರಂಗಕ್ಕೆ ಆಗಮಿಸಿರಬಹುದು. ಉಳಿದವರೆಲ್ಲರೂ ಇವನನ್ನೇ ಅನುಸರಿಸಿ ಬರಬಹುದು. ನಮ್ಮನ್ನು ಜಯಿಸಲಿಚ್ಛಿಸಿ ನಮ್ಮೆದುರಾಗಿ ಬರುತ್ತಿರುವ ಈ ಧೀರನು ಸ್ವಯಂ ವಿರಾಟನೇ ಆಗಿರಬಹುದು. ಇಲ್ಲಿ ಬಂದಿರುವವನು ವಿರಾಟನಾದರೂ ಸರಿಯೇ, ಅರ್ಜುನನಾದರೂ ಸರಿಯೇ– ನಾವು ಅವರೊಡನೆ ಯುದ್ಧಮಾಡಬೇಕು. ನಾವು ತ್ರಿಗರ್ತರೊಡನೆ ಇದೇ ಒಪ್ಪಂದವನ್ನು ಮಾಡಿಕೊಂಡಿರುತ್ತೇವೆ. ಹೀಗಿರುವಾಗ ಅರ್ಜುನನು ಬಂದುಬಿಟ್ಟನೆಂಬ ಭ್ರಾಂತಿಯಿಂದ ಭೀಷ್ಮ, ದ್ರೋಣ, ಕೃಪ, ವಿಕರ್ಣ, ಅಶ್ವತ್ಥಾಮಾ–ಇವರೇ ಮೊದಲಾದ ಅತಿರಥ-ಮಹಾರಥರು, ಶತ್ರುಗಳೊಡನೆ ಯುದ್ಧವು ಅನಿವಾರ್ಯವೆಂದು ನಿಶ್ಚಿತವಾಗಿರುವ ಈ ಸಮಯದಲ್ಲಿ, ಭ್ರಾಂತ ಚಿತ್ತರಾಗಿ, ಕುಂದಿದ ಮುಖಗಳಿಂದ ಕೂಡಿದವರಾಗಿ ರಥಗಳಲ್ಲೇಕೆ ಕುಳಿತಿದ್ದಾರೆ? ವಿರಾಟನಾಗಲೀ, ಅರ್ಜುನನಾಗಲೀ–ಬಹುಪರಾಕ್ರಮಿಗಳೇ ಆಗಿರಬಹುದು. ಆದರೆ ಭೀಷ್ಮ-ದ್ರೋಣರು ಅಪ್ರತಿಮಸಾಹಸಿಗಳಲ್ಲವೇ? ರಥಿಗಳಲ್ಲಿ ಶ್ರೇಷ್ಠರಲ್ಲವೇ?

**ನಾನ್ಯತ್ರ ಯುದ್ಧಾಚ್ಛ್ರೇಯೋಽಸ್ತಿ ತಥಾತ್ಮಾ ಪ್ರಣಿಧೀಯ**
**ತಾಮ್ ॥೧೭॥**

ಈ ಸಮಯದಲ್ಲಿ ಯುದ್ಧಮಾಡುವುದಕ್ಕಿಂತಲೂ ಶ್ರೇಯಸ್ಕರವಾದ ಕಾರ್ಯವು ಬೇರೊಂದಿಲ್ಲ–ಎಂಬುದನ್ನು ನಿರ್ಧರಿಸಿಕೊಂಡು ಮನಸ್ಸನ್ನು ಗಟ್ಟಿಮಾಡಿ ಯುದ್ಧಸನ್ನದ್ಧರಾಗಿರಿ. ನಾವು ಗೋವುಗಳನ್ನು ಆಕ್ರಮಿಸಿದ ನಂತರ ಪುನಃ ಅವನ್ನು ಯಾವ ವಿಧವಾದ ಹೆದರಿಕೆಯಿಂದಲೂ ಬಿಟ್ಟುಕೊಡುವ ಸಾಧ್ಯತೆಯೇ ಇಲ್ಲ. ವಿರಾಟರಾಜನ ಗೋವುಗಳನ್ನು ಆಕ್ರಮಣ ಮಾಡಿದನಂತರ ಯಾರೇ ಬಂದರೂ ಅವರೊಡನೆ ನಾವು ಯುದ್ಧ ಮಾಡಲೇಬೇಕು. ಯುದ್ಧಸನ್ನದ್ಧರಾಗಿಯೇ ನಾವು ಗೋವುಗಳನ್ನು ಆಕ್ರಮಣಮಾಡಿರುತ್ತೇವೆ. ನಮ್ಮನ್ನೆದುರಿಸಲು ಅರ್ಜುನನೇ ಬಂದಿರುವನೆಂಬುದಿನ್ನೂ ಸ್ಪಷ್ಟವಾಗಿ ತಿಳಿಯದೇ ಇರುವಾಗ–ಅರ್ಜುನನೆಂಬ

ಭ್ರಾಂತಿಯಿಂದಲೇ ನೀವೆಲ್ಲರೂ ಅಧೀರರಾಗಿರುವಂತೆ ಕಾಣುತ್ತದೆ. ಅರ್ಜುನನು ಮಾತ್ರವಲ್ಲ ; ಯಾರೇ ಬಂದರೂ ನಾವು ಅವರೊಡನೆಯೂ ಯುದ್ಧಮಾಡಲೇಬೇಕು. ವಜ್ರಪಾಣಿಯಾದ ಇಂದ್ರನೊಡನೆಯಾದರೂ ಸರಿಯೇ ; ಸರ್ವಪ್ರಾಣಿಗಳ ಪ್ರಾಣಾಪಹಾರಕನಾದ ಯಮನೊಡನೆ ಯಾದರೂ ಸರಿಯೇ–ನಾವು ಯುದ್ಧಮಾಡಲೇಬೇಕು. ಯುದ್ಧಸನ್ನದ್ಧರಾಗಿ ಬಂದು, ಯುದ್ಧರಂಗದಲ್ಲಿ ನಿಂತು, ಎದುರಾಳಿಯನ್ನು ನೋಡಿದೊಡನೆಯೇ ಹೆದರಿ ಹಾಸ್ತಿನಪುರಕ್ಕೆ ಯಾರು ತಾನೇ ಓಡಿಹೋಗುತ್ತಾರೆ? ಒಂದು ವೇಳೆ ನಮ್ಮ ಪದಾತಿಸೈನ್ಯಗಳು ಈ ಗಹನವಾದ ಅರಣ್ಯದಲ್ಲಿ ತಪ್ಪಿಸಿಕೊಳ್ಳಲು ಯತ್ನಿಸಿದ್ದೇ ಆದರೆ ಅವರನ್ನು ನಾನು ಖಂಡಿತವಾಗಿಯೂ ಪ್ರಾಣಗಳಿಂದ ಉಳಿಸುವುದಿಲ್ಲ. ನನ್ನ ಈ ಬಾಣಗಳಿಂದಲೇ ಅವರೆಲ್ಲರನ್ನೂ ಧ್ವಂಸಮಾಡಿ ಬಿಡುತ್ತೇನೆ. ಎದುರಾಳಿಯೊಡನೆ ಯುದ್ಧಮಾಡಿದಲ್ಲಿ ಅವರು ಉಳಿದಾದರೂ ಉಳಿಯಬಹುದು. (ಯುದ್ಧದಲ್ಲಿ ಸತ್ತರೆ ಸ್ವರ್ಗವಾದರೂ ಪ್ರಾಪ್ತವಾಗುತ್ತದೆ.) ಓಡಿಹೋಗಲು ಯತ್ನಿಸಿದರೆ ಮಾತ್ರ ಅವರು ಸರ್ವಥಾ ಉಳಿಯ ಲಾರರು. ಶತ್ರುಗಳಿಗೆ ಬೆನ್ನು ತಿರುಗಿಸಿ ನನ್ನಿಂದ ಹತರಾದರೆ ಅವರಿಗೆ ಸ್ವರ್ಗಪ್ರಾಪ್ತಿಯೂ ಇಲ್ಲವಾಗುತ್ತದೆ. ಆದುದರಿಂದ ಯಾರೊಬ್ಬರೂ ಓಡಿಹೋಗಲು ನಿರ್ಧರಿಸಕೂಡದೆಂದು ನಾನು ಎಚ್ಚರಿಸುತ್ತೇನೆ. ಅಶ್ವಸೈನಿಕರೇನೋ ಓಡಿ ಹೋಗಬಹುದು. ಆದರೆ ಅವರಾದರೂ ನನ್ನ ಬಾಣಪ್ರಹಾರಗಳಿಂದ ಅಷ್ಟು ಸುಲಭವಾಗಿ ತಪ್ಪಿಸಿಕೊಂಡುಹೋಗಲಾರರು. ಸರ್ವಪ್ರಯತ್ನಗಳಿಂದಲೂ ನಾನು ಯುದ್ಧಭೀತಿಯಿಂದ ಓಡಿಹೋಗು ವವರನ್ನು ಸಂಹರಿಸಿಯೇ ತೀರುತ್ತೇನೆ. ಆದುದರಿಂದ ಓಡಿಹೋಗಲು ಖಂಡಿತವಾಗಿಯೂ ಪ್ರಯತ್ನಿಸಬೇಡಿರಿ.”

ದುರ್ಯೋಧನನ ಆ ಮಾತುಗಳನ್ನು ಕೇಳಿ ಕರ್ಣನು ಹಿರಿಹಿಗ್ಗಿದನು. ದುರ್ಯೋಧನನು ಹೇಳಿದುದು ನಿಶ್ಚಯವಾಗಿಯೂ ವೀರೋಚಿತವಾದ ಮಾತುಗಳೇ ಆಗಿದ್ದುವು. ದುರ್ಯೋಧನನ ಆ ವೀರವಾಣಿಯನ್ನು ಕರ್ಣನು ಬಹುವಾಗಿ ಶ್ಲಾಘಿಸುತ್ತಾ ಹೇಳಿದನು : “ದುರ್ಯೋಧನ! ದ್ರೋಣರನ್ನೂ ದ್ರೋಣರು ಹೇಳಿದ ಮಾತನ್ನೂ ನಿರ್ಲಕ್ಷಿಸಿ ಯುದ್ಧದ ಸಿದ್ಧತೆಯನ್ನು ಮಾಡು. ಪಾಂಡವರ ಅಭಿಪ್ರಾಯವೇನೆಂಬುದು ನಮ್ಮ ಆಚಾರ್ಯರಿಗೂ

ಚೆನ್ನಾಗಿ ತಿಳಿದಿರುವುದು. ಪಾಂಡವರು ಯಾವಾಗಲೂ ನಮ್ಮ ನಿರ್ಮೂಲನ ದಲ್ಲಿಯೇ ಆಸಕ್ತರಾಗಿರುತ್ತಾರೆ. ಅವರ ಯೋಜನೆಗೆ ಸಹಕಾರಕೊಡಲು ನಮ್ಮ ಆಚಾರ್ಯರು ನಮ್ಮ ಸೈನಿಕರನ್ನೇ ಭಯಪಡಿಸುತ್ತಿದ್ದಾರೆ. ನಮ್ಮ ಸೈನಿಕರು ಯುದ್ಧಮಾಡುವ ಮೊದಲೇ ಭೀತಿಯಿಂದ ಕಂಗೆಟ್ಟುಹೋಗಲೆಂಬುದೇ ಇವರ ದುರಭಿಪ್ರಾಯವಾಗಿದೆ. ಇವರಿಗೆ ಅರ್ಜುನನ ಮೇಲೆ ಬಹಳ ಪ್ರೀತಿ ಯಿದೆಯೆಂಬುದನ್ನು ನಾನು ಬಹಳ ದಿವಸಗಳಿಂದಲೂ ಲಕ್ಷಿಸುತ್ತಲೇ ಇದ್ದೇನೆ. ಆದುದರಿಂದಲೇ ಇವರು ಅವನಿನ್ನೂ ಬರುತ್ತಿರುವಾಗಲೇ ಅವನ ಪ್ರಶಂಸೆಯನ್ನು ಆರಂಭಿಸಿಬಿಟ್ಟಿದ್ದಾರೆ. ಯಾರೇ ಬಂದರೂ ಧೈರ್ಯಗೆಡ ಬೇಡಿರೆಂದು ಸೈನಿಕರಿಗೆ ಹೇಳುವುದು ಆಚಾರ್ಯರಿಗೆ ಯುಕ್ತವಾಗಿದೆಯೇ ಹೊರತು :

**ಪರಾಭೂತಾ ಚ ವಃ ಸೇನಾ ನ ಕಶ್ಚಿದ್ಯೋದ್ಧುಮಿಚ್ಛತಿ ।**

"ನಮ್ಮ ಸೇನೆಯು ಅರ್ಜುನನನ್ನು ನೋಡುತ್ತಲೇ ಪರಾಭವ ಗೊಂಡಿದೆ. ಈ ನಮ್ಮ ಸೇನೆಯಲ್ಲಿ ಯಾವನೊಬ್ಬನೂ ಯುದ್ಧಮಾಡಲು ಇಚ್ಛಿಸುವುದಿಲ್ಲ"–ಎಂದು ಮುಂತಾಗಿ ಹೇಳಿ ಉತ್ಸಾಹಿಗಳಾದ ಸೈನಿಕರನ್ನು ನಿರುತ್ಸಾಹಗೊಳಿಸುವುದು ನಮ್ಮ ಆಚಾರ್ಯರಿಗೆ ಖಂಡಿತವಾಗಿಯೂ ಉಚಿತವೆನಿಸುವುದಿಲ್ಲ. ಆದರೆ ಅದು ಅವರ ಸಹಜಗುಣವಾಗಿದೆ. ನಾವು ಮಾತ್ರ ಈಗ ನಮ್ಮ ಸೇನೆಯಲ್ಲಿ ಭಿನ್ನಾಭಿಪ್ರಾಯಗಳು ಬಾರದಂತೆ ಎಚ್ಚರಿಕೆ ವಹಿಸಬೇಕಾಗಿದೆ. ಅಂತಹ ನೀತಿಯನ್ನೇ ನಿರೂಪಿಸಬೇಕಾಗಿದೆ. ನೀನು ಉದ್ಘೋಷಿಸಿರುವ ವೀರವಾಣಿಯು ಸಮಯೋಚಿತವಾಗಿದೆಯೆಂದೇ ನಾನು ಭಾವಿಸುತ್ತೇನೆ. ಕೇಳಿಬರುತ್ತಿರುವುದು ಅರ್ಜುನನ ಕುದುರೆಗಳು ಕೆನೆಯುವ ಶಬ್ದವೆಂದು ದ್ರೋಣರು ಹೇಳಿದೊಡನೆಯೇ ನಮ್ಮ ಸೇನೆಯಲ್ಲಿ ಅವ್ಯವಸ್ಥೆ ಯುಂಟಾಯಿತು. ಮಹಾರಾಜ! ಈಗ ನಾವು ಪರದೇಶಕ್ಕೆ ಬಂದಿರುತ್ತೇವೆ. ಮಹಾರಣ್ಯದ ಸಮೀಪದಲ್ಲಿದ್ದೇವೆ. ನಾವು ಬಂದಿರುವ ಕಾಲವು ಗ್ರೀಷ್ಮರ್ತು ವಾಗಿದ್ದು ಬಿಸಿಲಿನ ಬೇಗೆಯೂ ಸಹಿಸಲು ಅಶಕ್ಯವಾಗಿದೆ. ಇಂತಹ ಕಠಿನ ಪರಿಸ್ಥಿತಿಯಲ್ಲಿ ನಾವು ಶತ್ರುಗಳೊಡನೆ ಯುದ್ಧಮಾಡಲು ಹೊರಟಿದ್ದೇವೆ. ಈ ಸಂದರ್ಭದಲ್ಲಿ ನಮ್ಮ ಸೈನ್ಯದಲ್ಲಿ ಅನಾಯಕತ್ವವೂ, ಅವ್ಯವಸ್ಥೆಯೂ,

ಭ್ರಾಂತಿಯೂ ತಲೆದೋರದಂತೆ ಎಚ್ಚರಿಕೆವಹಿಸುವುದು ಆದ್ಯಕರ್ತವ್ಯ ವಾಗಿರುತ್ತದೆ.

ಪಾಂಡವರು ನಮ್ಮ ಆಚಾರ್ಯರಿಗೆ ಬಹಳ ಇಷ್ಟರಾದವರಾಗಿದ್ದಾರೆ. ತಾವು ಪ್ರಯೋಜನಪಡೆಯಲೆಂದೇ ಸ್ವಾರ್ಥಿಗಳಾದ ಪಾಂಡವರು ತಮ್ಮ ಕಡೆಯ ಈ ಆಚಾರ್ಯರನ್ನು ನಮ್ಮ ಮಧ್ಯದಲ್ಲಿ ಇಟ್ಟಿದ್ದಾರೆಂದು ಹೇಳಿದರೂ ಅತಿಶಯೋಕ್ತಿಯೆನಿಸಲಾರದು. ದ್ರೋಣರು ಹೇಳುವ ಮಾತುಗಳಿಂದಲೇ ನಾವಿದನ್ನು ಬಹುಸ್ಪಷ್ಟವಾಗಿ ತಿಳಿಯಬಹುದಾಗಿದೆ. ಅವರ ಮನಸ್ಸಿನ ಆಶಯವೇನಿರಬಹುದೆಂಬುದಕ್ಕೆ ಅವರಾಡಿರುವ ಮಾತುಗಳೇ ಸಾಕ್ಷಿಗಳಾಗಿವೆ. ಪ್ರಸಕ್ತಸಂದರ್ಭವನ್ನೇ ಪರಿಶೀಲಿಸೋಣ. ಕುದುರೆಗಳು ಕೆನೆಯುವುದನ್ನು ಕೇಳಿಯೇ ಯಾರಾದರೂ ಪ್ರಶಂಸೆಮಾಡಲು ಪ್ರಾರಂಭಿಸುವರೇ? ದುರ್ಯೋಧನ! ಕುದುರೆಗಳು ಕೆನೆಯುವುದು ಯಾವಾಗ? ನಿಂತಾಗಲೂ ಕೆನೆಯುತ್ತವೆ ; ಓಡುವಾಗಲೂ ಕೆನೆಯುತ್ತವೆ. ಕುದುರೆಯು ಕೆನೆಯುವುದಕ್ಕೂ ವಿಶೇಷಾರ್ಥವನ್ನು ಕಲ್ಪಿಸುವುದೇ? ಎಲ್ಲವೂ ಇವರ ಅರ್ಥಹೀನವಾದ ಕಲ್ಪನೆಗಳೇ ಆಗಿವೆ. ಯಾವಾಗಲೂ ಗಾಳಿಯು ಬೀಸುತ್ತಲೇ ಇರುತ್ತದೆ. ಇಂದ್ರನು ಮಳೆಗರೆಯುತ್ತಲೇ ಇರುತ್ತಾನೆ. ಮೋಡಗಳು ಗುಡುಗು-ಸಿಡಿಲುಗಳ ಮೂಲಕವಾಗಿ ಗರ್ಜನೆಮಾಡುತ್ತಲೇ ಇರುತ್ತವೆ. ಇವುಗಳಲ್ಲಿ ಪಾರ್ಥನ ಪಾತ್ರವೇನಿದೆ? ಇವೆಲ್ಲವೂ ಪ್ರಕೃತಿಯ ನಿಯಮದಂತೆ ನಡೆಯುತ್ತಾ ಹೋಗುತ್ತವೆ. ಒಂದು ವೇಳೆ ಸಂದರ್ಭಾನುಸಾರವಾಗಿ ಇವು ಘಟಿಸಿವೆಯೆಂದು ಹೇಳುವುದಾದರೂ ಪಾರ್ಥನನ್ನು ಇದೇ ಕಾರಣಕ್ಕಾಗಿ ಪ್ರಶಂಸಿಸುವುದೇಕೆ? ಇದಕ್ಕೆ ಮತ್ತೇನೂ ಕಾರಣವಿಲ್ಲ. ದುರ್ಯೋಧನ! ನಮ್ಮ ಆಚಾರ್ಯರಿಗೆ ಅರ್ಜುನನನ್ನೂ ಮತ್ತು ಅವನ ಪಕ್ಷವನ್ನೂ ಕಂಡರೆ ಮಹಾಪ್ರೀತಿ. ನಮ್ಮನ್ನು ಕಂಡರೆ ದ್ವೇಷ ಮತ್ತು ಕೋಪ. ನಾವು ಮಾಡುವ ಯಾವ ಕಾರ್ಯದಲ್ಲಿಯೂ ಇವರಿಗೆ ಸೈರಣೆಯಿಲ್ಲ. ನೆಪವಲ್ಲದ ನೆಪದಿಂದ ಅರ್ಜುನನನ್ನು ಶ್ಲಾಘಿಸಿ, ನಮ್ಮ ಸೇನೆಗೆ ಭಯವನ್ನುಂಟುಮಾಡಿ ಅವರು ಯುದ್ಧದಲ್ಲಿ ನಿರಾಸಕ್ತರಾಗುವಂತೆ ಮಾಡುವುದು ; ತನ್ಮೂಲಕವಾಗಿ ಅರ್ಜುನನಿಗೆ ಜಯಗಳಿಸಿಕೊಡುವುದು–ನಮ್ಮ ಆಚಾರ್ಯರ ಮುಖ್ಯವಾದ ಉದ್ದೇಶವಾಗಿದೆ.

**ಆಚಾರ್ಯಾ ವೈ ಕಾರುಣಿಕಾಃ ಪ್ರಾಜ್ಞಾಶ್ಚಾಪಾಪದರ್ಶಿನಃ ।**
**ನೈತೇ ಮಹಾಭಯೇ ಪ್ರಾಪ್ತೇ ಸಮ್ಪ್ರಷ್ಟವ್ಯಾಃ ಕಥಂಚನ ॥೨೮॥**

ಆಚಾರ್ಯರಾದವರು ಯಾವಾಗಲೂ ಪರಮಕಾರುಣಿಕರಾಗಿಯೂ, ಪ್ರಾಜ್ಞರಾಗಿಯೂ, ಪಾಪರಹಿತರಾಗಿಯೂ ಇರುತ್ತಾರೆ. ಆದರೆ ಇಂತಹ ಮಹಾಭಯವು ಪ್ರಾಪ್ತವಾದಾಗ ಮಾತ್ರ ನಾವು ಅವರನ್ನು ಯಾವ ಸಲಹೆ ಗಳನ್ನೂ ಕೇಳಬಾರದು. ಇವರ ಶಕುನಶಾಸ್ತ್ರದ ಪಾಂಡಿತ್ಯವಾಗಲೀ, ಕುದುರೆಗಳು ಕೆನೆಯುವುದರ ಅರ್ಥದ ವಿವರಣೆಯಾಗಲೀ–ನಮಗೆ ಯಾವ ವಿಧವಾದ ಪ್ರಯೋಜನವನ್ನೂ ಉಂಟುಮಾಡುವುದಿಲ್ಲ. ಇಲ್ಲಿ ಕೇವಲ ಯುದ್ಧದ ನೀತಿಯನ್ನೇ ಅನುಸರಿಸಬೇಕು ಮತ್ತು ಯುದ್ಧಮಾಡಲು ವಿಶೇಷ ವಾದ ಧೈರ್ಯ-ಸಾಹಸಗಳೇ ಇರಬೇಕು.

**ಪ್ರಾಸಾದೇಷು ವಿಚಿತ್ರೇಷು ಗೋಷ್ಠೀಷೂಪವನೇಷು ಚ ।**
**ಕಥಾ ವಿಚಿತ್ರಾಃ ಕುರ್ವಾಣಾಃ ಪಣ್ಡಿತಾಸ್ತತ್ರ ಶೋಭನಾಃ ॥೨೯॥**

ದ್ರೋಣಾಚಾರ್ಯರಂತಹ ಪಂಡಿತರು ವಿಚಿತ್ರವಾದ ಮತ್ತು ಸುಂದರ ವಾದ ಪ್ರಾಸಾದಗಳಲ್ಲಿ, ಸಭಾಮಧ್ಯದಲ್ಲಿ ಮತ್ತು ಉಪವನಗಳಲ್ಲಿ ಕುಳಿತು ಚಿತ್ರ-ವಿಚಿತ್ರವಾದ, ಮನೋರಂಜಕವಾದ ಕಥೆಗಳನ್ನು ಹೇಳಲು ಯೋಗ್ಯ ರಾಗಿರುತ್ತಾರೆ. ಅಂತಹ ಸಭೆಗಳಲ್ಲಿಯೇ ಇಂತಹವರು ಶೋಭಾಯಮಾನ ರಾಗಿ ಕಾಣಿಸುತ್ತಾರೆ. ಇವರಿಗೆ ಯುದ್ಧರಂಗದಲ್ಲಿರುವುದು ಶೋಭಾಯ ಮಾನವಾಗಿ ಕಾಣುವುದಿಲ್ಲ.

**ಬಹೂನ್ಯಾಶ್ಚರ್ಯರೂಪಾಣಿ ಕುರ್ವಾಣಾ ಜನಸಂಸದಿ ।**
**ಇಜ್ಯಾಸ್ತ್ರೇ ಚೋಪಸಂಧಾನೇ ಪಣ್ಡಿತಾಸ್ತತ್ರ ಶೋಭನಾಃ ॥೩೦॥**

ಜನಗಳ ಮಧ್ಯದಲ್ಲಿ ಕುಳಿತು ಆಶ್ಚರ್ಯಕರವಾದ ಘಟನೆಗಳನ್ನು ಬಣ್ಣ-ಬಣ್ಣವಾಗಿ ಬಣ್ಣಿಸುತ್ತಾ ಕಾಲಕಳೆಯುವುದರಲ್ಲಿ, ಯಜ್ಞಗಳಿಗೆ ಸಂಬಂಧಿಸಿದ ಆಜ್ಯಪಾತ್ರೆ, ಸ್ರುಕ್-ಸ್ರುವಗಳು ಇತ್ಯಾದಿಗಳನ್ನು ಸಿದ್ಧಮಾಡು ವುದರಲ್ಲಿ, ಅವುಗಳನ್ನು ಯಥೋಕ್ತವಾದ ಸ್ಥಾನಗಳಲ್ಲಿಡುವುದರಲ್ಲಿ ಮತ್ತು ಶುದ್ಧಿಗೊಳಿಸುವುದರಲ್ಲಿ ಇವರಿಗೆ ಸ್ಥಾನವಿದೆ. ಅಂತಹ ಸ್ಥಳಗಳಲ್ಲಿ ಮಾತ್ರವೇ

ಇವರು ಶೋಭಿಸುತ್ತಾರೆ. ಉಳಿದೆಡೆಗಳಲ್ಲಿ ಖಂಡಿತವಾಗಿಯೂ ಇವರಿಗೆ ಸ್ಥಾನವಿಲ್ಲ. ಪಂಡಿತರ ಗುಣ-ಕರ್ಮ-ಸ್ವಭಾವಗಳನ್ನು ಇನ್ನೂ ವಿವರಿಸಿ ಹೇಳುತ್ತೇನೆ : ಕೇಳು, ದುರ್ಯೋಧನ!

**ಪರೇಷಾಂ ವಿವರಜ್ಞಾನೇ ಮನುಷ್ಯಚರಿತೇಷು ಚ ।**
**ಹಸ್ತ್ಯಶ್ವರಥಚರ್ಯಾಸು ಖರೋಷ್ಟ್ರಾಜಾವಿಕರ್ಮಣಿ ॥೩೧॥**

**ಗೋಧನೇಷು ಪ್ರತೋಲೀಷು ವರದ್ವಾರಮುಖೇಷು ಚ ।**
**ಅನ್ನಸಂಸ್ಕಾರದೋಷೇಷು ಪಣ್ಡಿತಾಸ್ತತ್ರ ಶೋಭನಾಃ ॥೩೨॥**

ಇತರರ ದೋಷಗಳನ್ನು ಕಂಡುಹಿಡಿಯುವುದರಲ್ಲಿ, ಇತರರ ಮನಸ್ಸಿನ ಇಂಗಿತವನ್ನು ತಿಳಿಯುವುದರಲ್ಲಿ, ಇತರರ ಗುಣ-ಚಾರಿತ್ರ್ಯಗಳನ್ನು ನಿರ್ಣಯ ಮಾಡುವುದರಲ್ಲಿ, ಆನೆ-ಕುದುರೆ ಮತ್ತು ರಥಗಳ ಪರೀಕ್ಷೆಯಲ್ಲಿ, ಕತ್ತೆ-ಒಂಟೆ ಮತ್ತು ಆಡುಗಳಿಗೆ ಚಿಕಿತ್ಸೆಮಾಡುವುದರಲ್ಲಿ, ಗೋಧನದ ಸಂಗ್ರಹದಲ್ಲಿ ಮತ್ತು ಪರೀಕ್ಷೆಯಲ್ಲಿ, ಮಹಾಮಾರ್ಗಗಳ ಮತ್ತು ಮಹಾದ್ವಾರಗಳ ರಚನೆಯಲ್ಲಿ (ಶಿಲ್ಪಶಾಸ್ತ್ರದಲ್ಲಿ ), ಅನ್ನ-ಪಾನೀಯಗಳಲ್ಲಿರಬಹುದಾದ ದೋಷಗಳನ್ನು ಕಂಡುಹಿಡಿಯುವುದರಲ್ಲಿ–ಇಂತಹವರಿಗೆ ಸ್ಥಾನವಿದೆ. ಯುದ್ಧ ಮಾಡಲಾಗಲೀ, ಯುದ್ಧದ ನಾಯಕತ್ವವನ್ನು ವಹಿಸಿಕೊಳ್ಳಲಾಗಲೀ ಇವರು ಖಂಡಿತವಾಗಿಯೂ ಯೋಗ್ಯರಲ್ಲ. ಆದುದರಿಂದ, ದುರ್ಯೋಧನ!

**ಪಣ್ಡಿತಾನ್ಪೃಷ್ಠತಃ ಕೃತ್ವಾ ಪರೇಷಾಂ ಗುಣವಾದಿನಃ ।**
**ವಿಧೀಯತಾಂ ತಥಾ ನೀತಿರ್ಯಥಾ ವಧ್ಯೋ ಭವೇತ್ಪರಃ ॥೩೩॥**

ಶತ್ರುಗಳ ಗುಣಗಾನಮಾಡುವ ಇಂತಹ ಪಂಡಿತರನ್ನು ನೀನೀಗಲೇ ಹಿಂದಕ್ಕೆ ಕಳುಹಿಸು. ಶತ್ರುಗಳು ವಧ್ಯರಾಗಬಹುದಾದಂತಹ ನೀತಿಯನ್ನು ಈ ಕೂಡಲೇ ಅನುಸರಿಸುವವನಾಗು. (ಸೇನೆಯ ಆಧಿಪತ್ಯವನ್ನು ಬೇರೆ ಯವರಿಗೆ ವಹಿಸಿಕೊಟ್ಟು, ಕಂಗೆಟ್ಟಿರುವ ಸೈನಿಕರೆಲ್ಲರೂ ಉತ್ಸಾಹಿಗಳಾಗು ವಂತೆ ಮಾಡಿ, ಶತ್ರುಗಳನ್ನು ನಿರ್ಮೂಲನಮಾಡು.) ನಾವು ಆಕ್ರಮಿಸಿರುವ ಗೋವುಗಳನ್ನು ಯುದ್ಧರಂಗಕ್ಕೆ ಸ್ವಲ್ಪ ದೂರದಲ್ಲಿ ನಿಲ್ಲಿಸಿ ರಕ್ಷಿಸಬೇಕು. ಸೇನೆಯ ವ್ಯೂಹಗಳನ್ನು ಕ್ರಮಬದ್ಧವಾಗಿ ರಚಿಸಿ, ಆಯಕಟ್ಟಿನ ಸ್ಥಳಗಳಲ್ಲಿ

ವೀರರಾದ ಮತ್ತು ವಿಧೇಯರಾದ ಯೋಧರನ್ನು ನಿಲ್ಲಿಸಿ, ನಾವು ಶತ್ರುಗಳೊಡನೆ ಯುದ್ಧಮಾಡಬೇಕು.”

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಕರ್ಣನ ವೀರೋಕ್ತಿ

ಪಾರಿಕ್ಷಿತ! ಕರ್ಣನು ದುರ್ಯೋಧನನಿಗೆ ಹೇಳುತ್ತಾನೆ :

“ವಯಸ್ಯ! ಈ ಆಯುಷ್ಮಂತರೆಲ್ಲರೂ ಭಯದಿಂದ ಸಂತ್ರಸ್ತರಾಗಿರುತ್ತಾರೆ. ಇವರಿಗೆ ಯುದ್ಧಮಾಡಲು ಮನಸ್ಸೇ ಇದ್ದಂತೆ ಕಾಣುತ್ತಿಲ್ಲ. ಇವರು ಯುದ್ಧಮಾಡಲು ಸ್ಥಿರಮನಸ್ಕರಾಗಿರುವಂತೆಯೂ ಕಾಣುತ್ತಿಲ್ಲ. ಆದರೆ ನೀನು ಇದರಿಂದ ಅಧೀರನಾಗಬೇಕಾಗಿಲ್ಲ, ಮಹಾರಾಜ! ಇವರು ಯುದ್ಧಮಾಡಿದರೂ ಸರಿಯೇ ; ಮಾಡದಿದ್ದರೂ ಸರಿಯೇ–ನಾನೊಬ್ಬನೇ ಏಕಾಕಿಯಾಗಿ ನಿಂತು–ಸಮುದ್ರದ ವೇಗವನ್ನು ಅದರ ತೀರವು ತಡೆದು ಹಿಡಿದಿರುವಂತೆ–ವಿರಾಟನೇ ಬರಲಿ ; ಅರ್ಜುನನೇ ಬರಲಿ–ಅವರನ್ನು ತಡೆದು ನಿಲ್ಲಿಸುತ್ತೇನೆ. ನನ್ನ ದಿವ್ಯಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ ಡೊಂಕಾದ ಗಿಣ್ಣುಗಳುಳ್ಳ ನನ್ನ ಬಾಣಗಳು ಸರ-ಸರನೆ ಹೋಗುವ ಸರ್ಪಗಳೋಪಾದಿಯಲ್ಲಿ–ಗುರಿಯನ್ನು ಮುಟ್ಟುವುದರಲ್ಲಿ ಸಂಶಯವೇ ಇಲ್ಲ. ನನ್ನ ಪಳಗಿದ ಕೈಗಳಿಂದ ಪ್ರಯುಕ್ತವಾದ, ಸ್ವರ್ಣಮಯವಾದ ರೆಕ್ಕೆಗಳಿಂದ ಕೂಡಿರುವ, ಬಹುತೀಕ್ಷ್ಣವಾದ ಅಗ್ರಭಾಗಗಳುಳ್ಳ ಬಾಣಗಳು-ಶಲಭದ ಹುಳುಗಳು (ಮಿಡತೆಗಳು) ವೃಕ್ಷವನ್ನು ಮುತ್ತಿಬಿಡುವಂತೆ–ಅರ್ಜುನನನ್ನು ಎಲ್ಲ ಭಾಗಗಳಿಂದಲೂ ಮುಚ್ಚಿಬಿಡುವುವು. ನನ್ನ ಧನುಸ್ಸಿಗೆ ಬಾಣಗಳನ್ನು ಯೋಜಿಸಿ ಶಿಂಜಿನಿಯನ್ನು ದೃಢವಾಗಿ ಸೆಳೆದು ಬಿಡುವಾಗ ಉಂಟಾಗುವ ಶಬ್ದವು ಎರಡು ಭೇರಿಗಳ ನಿನಾದವನ್ನು ಅನುಕರಿಸುತ್ತದೆ. ಅಂತಹ ಘೋರಶಬ್ದವನ್ನು ಈ ಯೋಧರು ಕೇಳಿಯಾದರೂ ಉತ್ಸಾಹಿಗಳಾಗಲಿ. ಕಳೆದ ಹದಿಮೂರು ವರ್ಷಗಳಿಂದ ತಪಶ್ಚರಣೆಯಲ್ಲಿಯೂ, ವನ್ಯಮೃಗಗಳ ಬೇಟೆಯಲ್ಲಿಯೂ ಕಾಲಕಳೆಯುತ್ತಿದ್ದ ಅರ್ಜುನನಿಗೆ ಈಗ ನಡೆಯಲಿರುವ ಯುದ್ಧದಲ್ಲಿ ವಿಶೇಷವಾದ ಪ್ರೀತಿಯಿದೆ. (ಹೆಚ್ಚಿನ ಆಸಕ್ತಿಯಿದೆ.) ಆದುದರಿಂದಲೇ ಅವನು

ನನ್ನ ಮೇಲೆ ಬಾಣಗಳನ್ನು ಚೆನ್ನಾಗಿಯೇ ಪ್ರಯೋಗಮಾಡುತ್ತಾನೆ. ಗುಣವಂತನಾದ ಬ್ರಾಹ್ಮಣನಂತೆ–ಪಾರ್ಥನು ನನ್ನಿಂದ ಬಿಡಲ್ಪಡುವ ಸಾವಿರಾರು ಬಾಣಗಳ ಸಮೂಹವನ್ನು ಪ್ರತಿಗ್ರಹಿಸಲು ಅರ್ಹನಾಗಿಯೂ ಇದ್ದಾನೆ. ಮಹಾಧನುಷ್ಮಂತನೆಂದು ಇವನು ಮೂರುಲೋಕಗಳಲ್ಲಿಯೂ ವಿಖ್ಯಾತನಾಗಿರುತ್ತಾನೆ. ನರಶ್ರೇಷ್ಠನಾದ ಅರ್ಜುನನಿಗಿಂತಲೂ ನಾನು ಯಾವುದರಲ್ಲಿಯೂ ಕಡಿಮೆಯವನಾಗಿಲ್ಲ. ಸುವರ್ಣಮಯವಾದ ಮತ್ತು ಹದ್ದಿನ ರೆಕ್ಕೆಗಳನ್ನು ಹಿಂಭಾಗದಲ್ಲಿ ಧರಿಸಿರುವ, ನಾಲ್ಕು ದಿಕ್ಕುಗಳಲ್ಲಿಯೂ ಪ್ರಯೋಗಿಸಲ್ಪಡುವ ನನ್ನ ಬಾಣಗಳಿಂದ ಆಕಾಶವೇ ತುಂಬಿಹೋಗಿ, ಅದು ಮಿಂಚಿನ ಹುಳುಗಳಿಂದ ತುಂಬಿಹೋಗಿದೆಯೋ–ಎಂಬ ಭ್ರಾಂತಿಯನ್ನುಂಟುಮಾಡುವುದು. ಇಂದು ನಾನು ಯುದ್ಧದಲ್ಲಿ ಅರ್ಜುನನನ್ನು ಸಂಹರಿಸಿ, ಹಿಂದೆ ನಾನು ಪ್ರತಿಜ್ಞೆಯ ಮೂಲಕವಾಗಿ ಹೊತ್ತಿದ್ದ ಅಕ್ಷಯಸ್ವರೂಪವಾದ ಋಣವನ್ನು ತೀರಿಸಿಬಿಡುತ್ತೇನೆ. ನಾನು ನಿನಗಿತ್ತಿದ್ದ ಅಭಿವಚನದಂತೆ ಇಂದು ಅರ್ಜುನನನ್ನು ಮುಗಿಸಿಬಿಡುತ್ತೇನೆ. ನಾನು ಧನುಸ್ಸನ್ನು ಸೆಳೆದು ಬಿಡುವ ನಿಶಿತವಾದ ಬಾಣಗಳ ಆಘಾತವನ್ನು ತಡೆದುಕೊಳ್ಳಲು ದೇವತೆಗಳಲ್ಲಿಯೇ ಆಗಲೀ, ಅಸುರರಲ್ಲಿಯೇ ಆಗಲೀ ಯಾರಿದ್ದಾರೆ? (ನನ್ನ ಬಾಣಗಳ ಆಘಾತವನ್ನು ತಡೆದುಕೊಳ್ಳಲು ದೇವಾಸುರರಿಗೇ ಸಾಧ್ಯವಿಲ್ಲದಿರುವಾಗ ಹುಲು ಮನುಜರು ನನ್ನ ಮುಂದೆ ನಿಂತು ಯುದ್ಧಮಾಡುವ ಸಾಧ್ಯತೆಯಿರುವುದೇ?) ಮಧ್ಯಭಾಗದಲ್ಲಿ ಸ್ವಲ್ಪ ಡೊಂಕಾಗಿಯೂ, ರೆಕ್ಕೆಗಳಿಂದಲೂ ಕೂಡಿರುವ ನನ್ನ ಬಾಣಗಳು ನಾಲ್ಕು ದಿಕ್ಕುಗಳಲ್ಲಿಯೂ ಪತಂಗದ ಹುಳುಗಳಂತೆ ವ್ಯಾಪಿಸಿರುವುದನ್ನು ಮುಂದಿನ ಮುಹೂರ್ತದಲ್ಲಿ ನೀವೆಲ್ಲರೂ ನೋಡಬಹುದಾಗಿದೆ. ಮಹೇಂದ್ರಸದೃಶಪರಾಕ್ರಮಿಯಾದ ಅರ್ಜುನನನ್ನು–ಮದಿಸಿದ ಆನೆಯನ್ನು ಪಂಜುಗಳಿಂದ ಪೀಡಿಸುವಂತೆ–ವಜ್ರಾಯುಧಕ್ಕೆ ಸಮಾನವಾದ ನನ್ನ ನಿಶಿತವಾದ ಬಾಣಗಳಿಂದ ಪೀಡಿಸುತ್ತೇನೆ. ರಥಿಗಳಲ್ಲಿ ಶ್ರೇಷ್ಠನೆನಿಸಿದ, ಅತಿರಥನಾದ, ಸಕಲವಿಧವಾದ ಶಸ್ತ್ರಾಸ್ತ್ರಗಳನ್ನೂ ಪಡೆದವರಲ್ಲಿ ಶ್ರೇಷ್ಠನಾದ ಅರ್ಜುನನನ್ನು ನಾನಿಂದು ಯುದ್ಧದಲ್ಲಿ ಭ್ರಾಂತನನ್ನಾಗಿ ಮಾಡಿ–ಗರುಡನು ಹಾವನ್ನು ಎಲ್ಲಿದ್ದರೂ ಬಿಡದೇ ಹಿಡಿದುಬಿಡುವಂತೆ–ಬಂಧಿಸುತ್ತೇನೆ. ಯಜ್ಞೇಶ್ವರನಂತಿರುವ ಪಾರ್ಥನನ್ನು ಸಾಮಾನ್ಯರು ನೋಡಲು ಕೂಡ

ಸಾಧ್ಯವಾಗುವುದಿಲ್ಲ. ಅವನಲ್ಲಿರುವ ಕತ್ತಿ, ಶಕ್ತಿ ಮತ್ತು ಬಾಣಗಳೇ ಪಾರ್ಥನೆಂಬ ಯಜ್ಞೇಶ್ವರನಿಗೆ ಕಾಷ್ಠಪ್ರಾಯಗಳಾಗಿವೆ. ಆ ಸೌದೆಯಿಂದ ಕೂಡಿರುವ ಪಾಂಡವಾಗ್ನಿಯು ಧಗ-ಧಗನೆ ಉರಿಯುತ್ತಾ ಶತ್ರುಪಕ್ಷದವರನ್ನು ಭಸ್ಮ ಮಾಡುತ್ತಿರುತ್ತದೆ. ಆ ಸಮಯದಲ್ಲಿ ನಾನು ಅಶ್ವವೇಗದಿಂದ ಉದ್ಭೂತವಾದ ಗಾಳಿಯಿಂದ ಕೂಡಿದವನಾಗಿ, ರಥಗಳ ನಿನಾದವನ್ನೇ ಮೇಘಗರ್ಜನೆಯನ್ನಾಗಿ ಮಾಡಿಕೊಂಡು, ನಾನೇ ಮಹಾಮೇಘಸ್ವರೂಪನಾಗಿ ಬಾಣಗಳೆಂಬ ಮಳೆಗರೆಯುತ್ತಾ ಪಾಂಡವಾಗ್ನಿಯನ್ನು ಕ್ಷಣಮಾತ್ರದಲ್ಲಿ ಶಮನ ಮಾಡಿಬಿಡುತ್ತೇನೆ. ನನ್ನ ದಿವ್ಯಧನುಸ್ಸಿನಿಂದ ಪ್ರಯೋಗಿಸಲ್ಪಟ್ಟ, ಸರ್ಪಗಳಿಗೆ ಸಮಾನವಾದ ಬಾಣಗಳು–ಹಾವುಗಳು ಸರ-ಸರನೆ ಹುತ್ತದೊಳಗೆ ಹೋಗಿ ಸೇರಿಕೊಳ್ಳುವಂತೆ–ಪಾರ್ಥನ ಶರೀರವನ್ನು ಸೇರಿಕೊಳ್ಳುತ್ತವೆ. ನನ್ನಿಂದ ಪ್ರಯೋಗಿಸಲ್ಪಟ್ಟ ಸ್ವರ್ಣಮಯವಾದ ರೆಕ್ಕೆಗಳುಳ್ಳ, ಬಹುಶುಭ್ರವಾದ, ಗಿಣ್ಣುಗಳಲ್ಲಿ ಸ್ವಲ್ಪ ಬಗ್ಗಿರುವ ಬಾಣಗಳಿಂದ ಅರ್ಜುನನು ಮುಚ್ಚಿಹೋಗಿ–ಪರ್ವತವೊಂದು ಕರ್ಣಿಕಾರಪುಷ್ಪಗಳಿಂದ ಆವೃತವಾಗಿರುವಂತೆ ಕಾಣುವುದನ್ನು–ನೀವೆಲ್ಲರೂ ಸ್ವಲ್ಪಹೊತ್ತಿನಲ್ಲಿಯೇ ಕಾಣುವಿರಿ.

ಋಷಿಸತ್ತಮನಾದ, ಭಗವಂತನಾದ ಪರಶುರಾಮನಿಂದ ಅನುಗೃಹೀತವಾದ ಪರಮಾಸ್ತ್ರಗಳ ಬೆಂಬಲದಿಂದಲೂ ಮತ್ತು ಭುಜಬಲದಿಂದಲೂ ಕೂಡಿರುವ ನಾನು ಸಾಕ್ಷಾತ್ ಪುರಂದರನೇ ಆಗಮಿಸಿದರೂ ಅವನೊಡನೆಯೂ ಹಿಮ್ಮೆಟ್ಟದೆಯೇ ಯುದ್ಧಮಾಡುತ್ತೇನೆ. ಅರ್ಜುನನ ಧ್ವಜದಲ್ಲಿರುವ ಕಪಿಯು ಮುಂದಿನ ಒಂದೆರಡು ಕ್ಷಣಗಳಲ್ಲಿಯೇ ನನ್ನ ಭರ್ಜಿಯಿಂದ ಇರಿಯಲ್ಪಟ್ಟು ಭಯಂಕರವಾಗಿ ಧ್ವನಿಮಾಡುತ್ತಾ ಕೆಳಕ್ಕೆ ಬಿದ್ದು ಪ್ರಾಣತೊರೆಯುವುದನ್ನು ನೀವೆಲ್ಲರೂ ಪ್ರತ್ಯಕ್ಷವಾಗಿಯೇ ಕಾಣುವಿರಿ. ಅರ್ಜುನನ ರಥದಲ್ಲಿರುವ ಮಾರುತಿಗೇ ಇಂತಹ ಅವಸ್ಥೆಯುಂಟಾಗುವುದಾದರೆ ರಥಧ್ವಜಸ್ಥವಾದ ಇತರ ಭೂತಗಳ ವಿಷಯವಾಗಿ ನಾನು ಹೆಚ್ಚು ಹೇಳಬಯಸುವುದಿಲ್ಲ. ಅವುಗಳೆಲ್ಲವೂ ನನ್ನ ಭರ್ಜಿಯ ಇರಿತಕ್ಕೆ ಸಿಕ್ಕಿ ಚೀತ್ಕಾರಮಾಡುತ್ತಾ ದಿಕ್ಕಾಪಾಲಾಗಿ ಓಡಿಹೋಗುತ್ತವೆ. ಆ ಎಲ್ಲ ಪ್ರಾಣಿಗಳ ಒಮ್ಮುಖವಾದ ಘೋರಧ್ವನಿಯು ಸ್ವರ್ಗವನ್ನೂ ವ್ಯಾಪಿಸುವುದರಲ್ಲಿ ಸಂಶಯವೇ ಇಲ್ಲ.

**ಅದ್ಯ ದುರ್ಯೋಧನಸ್ಯಾಹಂ ಶಲ್ಯಂ ಹೃದಿ ಚಿರಸ್ಥಿರಮ್ ।**
**ಸಮೂಲಮುದ್ಧರಿಷ್ಯಾಮಿ ಬೀಭತ್ಸುಂ ಪಾತಯನ್ರಥಾತ್ ॥೨೧॥**

ದುರ್ಯೋಧನನ ಹೃದಯದಲ್ಲಿ ಅರ್ಜುನನ ಭಯರೂಪವಾದ ಶಲ್ಯವೊಂದು ಬಹಳ ಆಳದವರೆಗೂ ನಾಟಿಕೊಂಡುಬಿಟ್ಟಿದೆ. ಅದು ನಾಟಿಕೊಂಡು ಬಹಳ ದಿವಸಗಳಾದುವು. ನಾನು ಅರ್ಜುನನನ್ನು ರಥದಿಂದ ಕೆಳಕ್ಕೆ ಕೆಡಹಿ (ಸಂಹರಿಸಿ ) ದುರ್ಯೋಧನನ ಹೃದಯದ ಶಲ್ಯವನ್ನು ಸಮೂಲವಾಗಿ ಕಿತ್ತುಹಾಕಿಬಿಡುತ್ತೇನೆ. ಪೌರುಷವನ್ನು ತೋರಿಸಲು ಯತ್ನಿಸುವ, ಹತಾಶ್ವನಾದ, ವಿಧ್ವಸ್ತರಥನಾದ, ಹಾವಿನಂತೆ ದೀರ್ಘವಾಗಿ ನಿಟ್ಟುಸಿರುಬಿಡುತ್ತಾ ಪ್ರಾಣೋತ್ಕ್ರಮಣಾವಸ್ಥೆಯಲ್ಲಿ ಭೂಮಿಯ ಮೇಲೆ ಮಲಗುವ ಪಾರ್ಥನನ್ನು ನಮ್ಮ ಕೌರವಪುಂಗವರೆಲ್ಲರೂ ನೋಡಲಿ. ನನಗೆ ಯಾರೊಬ್ಬರ ಸಹಾಯವೂ ಬೇಕಾಗಿಲ್ಲ. ನಾನು ಪಾರ್ಥನೊಡನೆ ಏಕಾಕಿಯಾಗಿಯೇ ಯುದ್ಧಮಾಡುತ್ತೇನೆ. ನಮ್ಮ ಕುರುಪುಂಗವರು ತಾವು ಆಕ್ರಮಿಸಿರುವ ಗೋಧನವನ್ನು ತೆಗೆದುಕೊಂಡು (ಗೋವುಗಳನ್ನು ಹೊಡೆದುಕೊಂಡು) ಸ್ವೇಚ್ಛೆಯಿಂದ ಹೊರಟುಹೋಗಲಿ ಅಥವಾ ನಾನು ಅರ್ಜುನನೊಡನೆ ಮಾಡಲಿರುವ ಘೋರಯುದ್ಧವನ್ನು ವೀಕ್ಷಿಸುತ್ತಾ ರಥದಲ್ಲಾದರೂ ಕುಳಿತಿರಲಿ."

ಳ೮ನೆಯ ಅಧ್ಯಾಯವು ಮುಗಿಯಿತು.

೪೯ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಕರ್ಣ-ದುರ್ಯೋಧನರಿಗೆ ಕೃಪಾಚಾರ್ಯರ ಹಿತೋಕ್ತಿ

(ಆತ್ಮಪ್ರಶಂಸೆಗಿಂತಲೂ ನಿಂದ್ಯವಾದುದು ಬೇರೊಂದಿಲ್ಲ. ಆತ್ಮ ಪ್ರಶಂಸೆಮಾಡಿಕೊಳ್ಳುವುದು ಆತ್ಮಹತ್ಯೆಗೆ ಸಮಾನವೆಂದು ಹಿರಿಯರು ಹೇಳುತ್ತಾರೆ. ಧೀರನಾದವನು ತನ್ನ ಪೌರುಷವನ್ನು ಸ್ವಲ್ಪವಾದರೂ ಹೇಳಿಕೊಳ್ಳದೇ ಇರುವುದಿಲ್ಲ. ಆದರೆ ಅದಕ್ಕೂ ಒಂದು ಮಿತಿಯಿದೆ. ಕರ್ಣನು ಅರ್ಜುನನ ಪರಾಕ್ರಮವೆಷ್ಟೆಂಬುದನ್ನು ಹಿಂದೆ ಕಂಡು ಕೇಳಿದ್ದಾನೆ.

ದುರ್ಯೋಧನನನ್ನು ಗಂಧರ್ವನು ಸೆರೆಹಿಡಿದುಕೊಂಡು ಹೋದ ಕಾಲದಲ್ಲಿ ಅರ್ಜುನನೇ ದುರ್ಯೋಧನನನ್ನು ಗಂಧರ್ವನ ಸೆರೆಯಿಂದ ಬಿಡಿಸಿಕೊಂಡು ಬರಬೇಕಾಯಿತು. ಕರ್ಣನು ಆ ಸಮಯದಲ್ಲಿ ಪಲಾಯನಮಾಡಿದ್ದನು. ನಿಜಸ್ಥಿತಿಯು ಹೀಗಿದ್ದರೂ ಕರ್ಣನು ಅರ್ಜುನನನ್ನು ಸಂಹರಿಸಿಯೇ ಬಿಡುವುದಾಗಿ ಹೇಳುತ್ತಾನೆ. ಭೀಷ್ಮ-ದ್ರೋಣರು ಶತ್ರುಪಕ್ಷದವರನ್ನು ಮಿತಿಮೀರಿ ಪ್ರಶಂಸಿಸಿದರೆಂದು ಹೇಳುವುದಾದರೆ, ಕರ್ಣನೂ ತನ್ನನ್ನು ಮಿತಿಮೀರಿ ಪ್ರಶಂಸಿಸಿಕೊಂಡನೆಂಬುದರಲ್ಲಿ ಸಂದೇಹವೇ ಇಲ್ಲ. ದ್ರೋಣಾದಿಗಳು ಮಾಡಿದ ಶತ್ರುಪಕ್ಷದ ಪ್ರಶಂಸೆಯು ದುರ್ಯೋಧನನ ಸೈನ್ಯದಲ್ಲಿ ಭ್ರಾಂತಿಯನ್ನುಂಟುಮಾಡಿರಬಹುದು. ಆದರೆ ಕರ್ಣನ ಆತ್ಮಪ್ರಶಂಸೆಯೂ ದುರ್ಯೋಧನನ ಕಡೆಯ ಅತಿರಥ-ಮಹಾರಥರ ಮನಸ್ಸನ್ನು ಕಲುಷಿತಗೊಳಿಸಿತೆಂಬುದರಲ್ಲಿಯೂ ಸಂಶಯವಿಲ್ಲ. ಕರ್ಣನ ಆತ್ಮಪ್ರಶಂಸೆಯಿಂದ ಖತಿಗೊಂಡ ಕುರುವೀರರು ತಮ್ಮ ವಿರೋಧವನ್ನು ಮುಂದಿನ ಪ್ರಕರಣದಲ್ಲಿ ವ್ಯಕ್ತಪಡಿಸಿರುತ್ತಾರೆ.)

ಜನಮೇಜಯ! ಕರ್ಣನ ಮಾತುಗಳನ್ನು ಕೇಳಿ ಕೃಪಾಚಾರ್ಯರು ಹೇಳಿದರು :

“ರಾಧೇಯ! ಯುದ್ಧದ ವಿಷಯದಲ್ಲಿ ನಿನ್ನ ಹೃದಯವು ಯಾವಾಗಲೂ ಬಹಳ ಕ್ರೂರವಾಗಿಯೇ ಇರುತ್ತದೆ. ಯುದ್ಧಮಾಡಲು ಹೊರಟಾಗ ದಯಾರ್ದ್ರಹೃದಯನಾಗಿರಬೇಕೆಂಬುದೂ ನಮ್ಮ ಅಭಿಪ್ರಾಯವಲ್ಲ. ಆದರೆ ಯುದ್ಧದ ಸಮಯದಲ್ಲಿ ವಿವೇಚಿಸಿ ಕಾರ್ಯಮಾಡಬೇಕು. ವಿವೇಚನೆಯನ್ನು ಮಾಡದೇ ಇಡುವ ಒಂದೊಂದು ತಪ್ಪುಹೆಜ್ಜೆಯೂ ನಮ್ಮ ಪರಾಭವಕ್ಕೇ ಕಾರಣವಾಗುತ್ತದೆ. ನಿನಗೆ ಕಾರ್ಯಗಳ ಸ್ವರೂಪವೇನೆಂಬುದೇ ತಿಳಿಯದು. ಯಾವ ಕಾರ್ಯವನ್ನು ಮಾಡಿದರೆ ಏನು ಪರಿಣಾಮವಾಗುತ್ತದೆಯೆಂಬುದನ್ನು ವಿವೇಚಿಸುವ ಶಕ್ತಿಯೂ ನಿನಗಿರುವುದಿಲ್ಲ. ನಾನಾದರೂ ನಿನಗಿಂತಲೂ ಯಾವುದರಲ್ಲಿಯೂ ಕಡಿಮೆಯಾಗಿರುವೆನೆಂದು ಭಾವಿಸಬೇಡ. ಅನೇಕಾನೇಕ ಮಾಯಾವಿದ್ಯೆಗಳೂ, ಮಾಯಾಯುದ್ಧ ಪ್ರಕ್ರಿಯೆಗಳೂ ಇವೆ. ಶತ್ರುವು ಎಂತಹ ಅಜೇಯನಾದರೂ ಮಾಯಾ

ಯುದ್ಧದಿಂದ ಅವನನ್ನು ಮುಗ್ಧನನ್ನಾಗಿ ಮಾಡಿ ಪರಾಜಯಗೊಳಿಸಬಹುದು. ಆದರೆ :

**ಮಾಯಾ ಹಿ ಬಹವಃ ಸನ್ತಿ ಶಾಸ್ತ್ರಮಾಶ್ರಿತ್ಯ ಚಿನ್ತಿತಾಃ ।**
**ತೇಷಾಂ ಯುದ್ಧಂ ತು ಪಾಪಿಷ್ಠಂ ವೇದಯನ್ತಿ ಪುರಾವಿದಃ ॥೨॥**

ಶತ್ರುಗಳನ್ನು ಸೋಲಿಸಲು ಹಲವಾರು ತಂತ್ರಗಳನ್ನು ಶಾಸ್ತ್ರಗಳಲ್ಲಿ ಹೇಳಿರುತ್ತಾರೆ. ಅದರಲ್ಲಿ ಯುದ್ಧವು ಎಲ್ಲ ತಂತ್ರಗಳಿಗಿಂತಲೂ ಎಲ್ಲ ಉಪಾಯಗಳಿಗಿಂತಲೂ ಪಾಪಿಷ್ಠವಾದುದೆಂದು ಪ್ರಾಚೀನವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ದೇಶಕಾಲೇನ ಸಂಯುಕ್ತಂ ಯುದ್ಧಂ ವಿಜಯದಂ ಭವೇತ್ ।**
**ಹೀನಕಾಲಂ ತದೇವೇಹ ಫಲಂ ನ ಲಭತೇ ಪುನಃ ।**
**ದೇಶೇ ಕಾಲೇ ಚ ವಿಕ್ರಾನ್ತಂ ಕಲ್ಯಾಣಾಯ ವಿಧೀಯತೇ ॥೩॥**

ಶತ್ರುರಾಜರ ಮೇಲೆ ಯುದ್ಧಮಾಡಬೇಕೆನ್ನುವಾಗ ದೇಶ (ಯುದ್ಧ ಮಾಡುವ ಸ್ಥಳ), ಕಾಲ (ಬೇಸಿಗೆ-ಮಳೆಗಾಲ ಮುಂತಾದುವು)–ಇವೆಲ್ಲ ವನ್ನೂ ಸಂಪೂರ್ಣವಾಗಿ ಸಮಾಲೋಚಿಸಿ ಯುದ್ಧಕ್ಕೆ ಹೊರಟರೆ ಅಂತಹ ಯುದ್ಧವು ವಿಜಯದಲ್ಲಿ ಪರ್ಯವಸಾನಹೊಂದುವುದು. ಆದರೆ ಇದು ಯುದ್ಧೋಚಿತವಾದ ಕಾಲವೂ ಅಲ್ಲ; ಯುದ್ಧಮಾಡಲು ಈ ಸ್ಥಳವೂ ಯೋಗ್ಯವಾಗಿರುವುದಿಲ್ಲ. ದೇಶ-ಕಾಲಗಳು ಅನುಕೂಲವಿಲ್ಲದಿರುವಾಗ ಮಾಡುವ ಯುದ್ಧಗಳು ನಿಷ್ಫಲವಾಗುತ್ತವೆ. ಪರಾಕ್ರಮವನ್ನು ತೋರಿಸ ಬೇಕಾದರೂ ದೇಶ-ಕಾಲಗಳ ವಿವೇಚನೆಯನ್ನು ಮಾಡಬೇಕು. ದೇಶ-ಕಾಲ ಗಳನ್ನು ವಿವೇಚಿಸಿ ಪರಾಕ್ರಮವನ್ನು ತೋರಿದರೆ-ಆಗ ಅಂತಹ ಪರಾಕ್ರಮವು ಕಲ್ಯಾಣರೂಪವಾದ ಜಯವನ್ನು ಗಳಿಸಿಕೊಡುವುದು.

**ಆನುಕೂಲ್ಯೇನ ಕಾರ್ಯಾಣಾಮನ್ತರಂ ಸಂವಿಧೀಯತೇ ।**
**ಭಾರಂ ಹಿ ರಥಕಾರಸ್ಯ ನ ವ್ಯವಸ್ಯನ್ತಿ ಪಣ್ಡಿತಾಃ ॥೪॥**

ಕಾಲ-ದೇಶ-ವರ್ತಮಾನಗಳ ಪರಿಸ್ಥಿತಿಗಳನ್ನು ಸಂಪೂರ್ಣವಾಗಿ ಪರಿ

ಶೀಲಿಸಿದನಂತರವೇ ಯಾವ ಕಾರ್ಯವನ್ನು ಯಾವಾಗ ಮಾಡಬೇಕೆಂಬು ದನ್ನು ಪಂಡಿತರು ನಿರ್ಣಯಿಸುತ್ತಾರೆ. ಪಂಡಿತರು ಯಾವಾಗಲೂ ತಮ್ಮ ಮನಬಂದಂತೆ ವರ್ತಿಸಹೋಗುವುದಿಲ್ಲ ಅಥವಾ ರಥಕಾರನೊಬ್ಬನ (ಸೂತನ) ಅಭಿಪ್ರಾಯವನ್ನು ಪಡೆದು ಅವನ ಅಭಿಮತದಂತೆಯೂ ಕಾರ್ಯದ ಕಾಲವನ್ನು ನಿಶ್ಚಯಮಾಡಲು ಹೋಗುವುದಿಲ್ಲ.

ಜಯಗಳಿಸುವ ಇಚ್ಛೆಯುಳ್ಳವನು ಇಂತಹುದೇ ಕಾಲದಲ್ಲಿ, ನಿರ್ದಿಷ್ಟ ವಾದ ರೀತಿಯಲ್ಲಿ, ಇಂತಹುದೇ ಕಾರಣಕ್ಕಾಗಿ ದಿಗ್ವಿಜಯಕ್ಕಾಗಿ ಹೊರಡ ಬೇಕೆಂದು ವಿಬುಧೇಂದ್ರರು ನಿರ್ಣಯಿಸಿರುವ ಶಾಸ್ತ್ರವಾಕ್ಯಗಳನ್ನೇ ಆಧಾರ ವನ್ನಾಗಿಟ್ಟುಕೊಂಡು ಪಂಡಿತರು ಕಾಲನಿರ್ಣಯಮಾಡುತ್ತಾರೆ. ಇವೆಲ್ಲವನ್ನೂ ಕೂಲಂಕಷವಾಗಿ ವಿಮರ್ಶಿಸಿಯೇ ದ್ರೋಣಾಚಾರ್ಯರು ಪಾರ್ಥನೊಡನೆ ಯುದ್ಧಮಾಡಲು ನಮ್ಮಲ್ಲಿ ಸಾಕಷ್ಟು ಸಾಮರ್ಥ್ಯವಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಅವರ ಈ ಅಭಿಪ್ರಾಯಕ್ಕೆ ಕಾರಣವಿಲ್ಲದಿಲ್ಲ. ಅವೆಲ್ಲವನ್ನೂ ನಾನೇ ವಿವರಿಸಿ ಹೇಳುತ್ತೇನೆ ಕೇಳು, ರಾಧೇಯ!

**ಏಕಃ ಕುರೂನಭ್ಯಗಚ್ಛದೇಕಶ್ಚಾಗ್ನಿಮತರ್ಪಯತ್ ।**
**ಏಕಶ್ಚ ಪಞ್ಚ ವರ್ಷಾಣಿ ಬ್ರಹ್ಮಚರ್ಯಮಧಾರಯತ್ ।**
**ಏಕಃ ಸುಭದ್ರಾಮಾರೋಪ್ಯ ದ್ವೈರಥೇ ಕೃಷ್ಣಮಾಹ್ವಯತ್ ॥೬॥**

**ಏಕಃ ಕಿರಾತರೂಪೇಣ ಸ್ಥಿತಂ ರುದ್ರಮಯೋಧಯತ್ ।**
**ಅಸ್ಮಿನ್ನೇವ ವನೇ ಪಾರ್ಥೋ ಹೃತಾಂ ಕೃಷ್ಣಾಮವಾಜಯತ್ ॥೭॥**

**ಏಕಶ್ಚ ಪಞ್ಚ ವರ್ಷಾಣಿ ಶಕ್ರಾದಸ್ತ್ರಾಣ್ಯಶಿಕ್ಷತಃ ।**
**ಏಕಃ ಸೋಽಯಮರಿಂ ಜಿತ್ವಾ ಕುರೂಣಾಮಕರೋದ್ಯಶಃ ॥೮॥**

**ಏಕೋ ಗನ್ಧರ್ವರಾಜಾನಂ ಚಿತ್ರಸೇನಮರಿಂದಮಃ ।**
**ವಿಜಿಗ್ಯೇ ತರಸಾ ಸಂಖ್ಯೇ ಸೇನಾಂ ಪ್ರಾಪ್ಯ ಸುದುರ್ಜಯಾಮ್ ॥೯॥**

ಅರ್ಜುನನು ಏಕಾಕಿಯಾಗಿಯೇ ಉತ್ತರಕುರುಗಳೊಡನೆ ಯುದ್ಧ ಮಾಡಿ ಅವರನ್ನು ಪರಾಜಯಗೊಳಿಸಿದನು. ಏಕಾಕಿಯಾಗಿಯೇ ಖಾಂಡವ ದಹನದ ಸಮಯದಲ್ಲಿ ಅಗ್ನಿಗೆ ಸಂಪೂರ್ಣವಾಗಿ ರಕ್ಷಣೆಯನ್ನಿತ್ತು ಅವನನ್ನು

ಸಂತೋಷಗೊಳಿಸಿದನು. ಐದು ವರ್ಷಗಳ ಕಾಲ ನಿಯತವಾದ ಬ್ರಹ್ಮ ಚರ್ಯವ್ರತದಲ್ಲಿರಲು ಅರ್ಜುನನೊಬ್ಬನ ಹೊರತಾಗಿ ಬೇರೊಬ್ಬರಿಗೆ ಸಾಧ್ಯವಿಲ್ಲ. ಏಕಾಕಿಯಾಗಿಯೇ ಅರ್ಜುನನು ಸುಭದ್ರೆಯನ್ನು ಅಪಹರಿಸಿ ಕೊಂಡು ಬಂದು ರಥದಲ್ಲಿ ಕುಳ್ಳಿರಿಸಿಕೊಂಡು–ಶ್ರೀಕೃಷ್ಣನೊಡನೆ ದ್ವಂದ್ವ ಯುದ್ಧಕ್ಕೂ ಸಿದ್ಧನಾದನು. ಕಿರಾತವೇಷಧರನಾಗಿ ಬಂದ ಸಾಕ್ಷಾತ್ ಪರಶಿವನೊಡನೆ ಅರ್ಜುನನು ಏಕಾಕಿಯಾಗಿ ನಿಂತು ಯುದ್ಧಮಾಡಿದನು. ಪಾಂಡವರು ವನವಾಸದಲ್ಲಿದ್ದಾಗಲೇ ಜಯದ್ರಥನು ದ್ರೌಪದಿಯನ್ನು ಅಪಹರಿಸಿದ ಕಾಲದಲ್ಲಿ ಅವನೊಡನೆ ಯುದ್ಧಮಾಡಿ, ಅವನನ್ನು ಪರಾಜಯ ಗೊಳಿಸಿ, ದ್ರೌಪದಿಯನ್ನು ಬಿಡಿಸಿಕೊಂಡು ಬಂದನು. ಪಾರ್ಥನೊಬ್ಬನೇ ಸಶರೀರನಾಗಿ ಸ್ವರ್ಗಕ್ಕೂ ಹೋಗಿ, ಐದು ವರ್ಷಗಳ ಕಾಲ ಅಲ್ಲಿದ್ದು, ಇಂದ್ರನಿಂದ ಸಕಲವಾದ ಅಸ್ತ್ರವಿದ್ಯೆಗಳನ್ನೂ ಕಲಿತುಕೊಂಡು ಬಂದನು. ಅರ್ಜುನನೊಬ್ಬನೇ ಶತ್ರುಗಳೆಲ್ಲರನ್ನೂ ಪರಾಜಯಗೊಳಿಸಿ ಕುರುವಂಶಕ್ಕೇ ಕೀರ್ತಿಯನ್ನು ಗಳಿಸಿಕೊಟ್ಟನು. ಶತ್ರುಹಂತಕನಾದ ಅರ್ಜುನನೊಬ್ಬನೇ ಗಂಧರ್ವರಾಜನಾದ ಚಿತ್ರಸೇನನೊಡನೆಯೂ, ದುರ್ಜಯವೆನಿಸಿದ್ದ ಅವನ ಸೇನೆಯೊಡನೆಯೂ ಯುದ್ಧಮಾಡಿ ಸಸೈನ್ಯನಾದ ಅವನನ್ನು ಪರಾಜಯ ಗೊಳಿಸಿ ಜಯಶಾಲಿಯಾದನು. ಇವೆಲ್ಲವೂ ಮರೆತುಹೋಯಿತೇ? ರಾಧೇಯ!

**ತಥಾ ನಿವಾತಕವಚಾಃ ಕಾಲಖಞ್ಜಾಶ್ಚ ದಾನವಾಃ ।**
**ದೈವತೈರಪ್ಯವಧ್ಯಾಸ್ತೇ ಏಕೇನ ಯುಧಿ ಪಾತಿತಾಃ ॥೧೦॥**

ನಿವಾತಕವಚರೆಂಬ ಮತ್ತು ಕಾಲಖಂಜರೆಂಬ ರಾಕ್ಷಸರು ಇಂದ್ರನೇ ಮೊದಲಾದ ದೇವತೆಗಳಿಂದಲೂ ಅವಧ್ಯರಾಗಿದ್ದರು. ಅವರನ್ನು ಪರಾಜಯ ಗೊಳಿಸಲು ದೇವತೆಗಳಿಗೂ ಸಾಧ್ಯವಾಗಿರಲಿಲ್ಲ. ಅಂತಹ ಬಲಿಷ್ಠರಾದ ಅಸುರರನ್ನೂ ಅರ್ಜುನನೊಬ್ಬನೇ ಎದುರಿಸಿ, ಅವರೊಡನೆ ಘೋರಯುದ್ಧ ಮಾಡಿ ತನ್ನಲ್ಲಿದ್ದ ಮಹಾಸ್ತ್ರಗಳಿಂದ ಅವರೆಲ್ಲರನ್ನೂ ಸಂಹರಿಸಿಬಿಟ್ಟನು.

**ಏಕೇನ ಹಿ ತ್ವಯಾ ಕರ್ಣಂ ಕಿಂ ನಾಮೇಹ ಕೃತಂ ಪುರಾ ।**
**ಏಕೈಕೇನ ಯಥಾ ತೇಷಾಂ ಭೂಮಿಪಾಲಾ ವಶೇ ಕೃತಾಃ ॥೧೧॥**

ಕರ್ಣ! ನೀನೊಬ್ಬನೇ ಹೋಗಿ ಶತ್ರುರಾಜರೊಡನೆ ಯುದ್ಧಮಾಡಿ ಗೆದ್ದುಬಂದ ನಿದರ್ಶನವು ಒಂದಾದರೂ ಇರುವುದೇ? ಪಾಂಡವರಲ್ಲಿ ಭೀಮಾರ್ಜುನ-ನಕುಲ-ಸಹದೇವರು ಒಬ್ಬೊಬ್ಬರೇ ಒಂದೊಂದು ದಿಕ್ಕಿಗೆ ಹೋಗಿ, ಆಯಾ ದಿಕ್ಕುಗಳಲ್ಲಿದ್ದ ಭೂಪಾಲರನ್ನು ಗೆದ್ದು, ಅವರನ್ನು ಆಶ್ರಿತರನ್ನಾಗಿ ಮಾಡಿಕೊಂಡು, ಅವರಿಂದ ಯಥೇಚ್ಛವಾಗಿ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಬಂದು ಅಣ್ಣನಿಗೊಪ್ಪಿಸಿದರು. ನಿನ್ನ ಜೀವಿತಕಾಲದಲ್ಲಿ ಇಂತಹ ಒಂದೇ ಒಂದು ನಿದರ್ಶನವಾದರೂ ಇದ್ದರೆ ಹೇಳು ; ನೋಡೋಣ!

ಹೆಚ್ಚೇನು ಹೇಳಲಿ, ಸೂತಪುತ್ರ!

**ಇನ್ದ್ರೋಽಪಿ ಹಿ ನ ಪಾರ್ಥೇನ ಸಂಯುಗೇ ಯೋದ್ಧುಮರ್ಹತಿ ।**
**ಯಸ್ತೇನಾಶಂಸತೇ ಯೋದ್ಧುಂ ಕರ್ತವ್ಯಂ ತಸ್ಯ ಭೇಷಜಮ್ ॥೧೨॥**

ಇಂದ್ರನೇ ಆದರೂ ಪಾರ್ಥನೊಡನೆ ಯುದ್ಧಮಾಡಲು ಸಮರ್ಥನಲ್ಲ. ಇಂತಹ ಅತುಲಪರಾಕ್ರಮಿಯೊಡನೆ ಯಾರಾದರೂ ಯುದ್ಧವನ್ನಿಚ್ಛಿಸಿದರೆ ಅವರ ಬುದ್ಧಿಯು ಸರಿಯಾಗಿಲ್ಲವೆಂದೇ ನಿಶ್ಚಯಿಸಿ ಅವರ ಹುಚ್ಚುತನಕ್ಕೆ ಔಷಧವನ್ನು ಕೊಡಿಸುವುದು ಸೂಕ್ತವಾಗಿದೆ.

**ಆಶೀವಿಷಸ್ಯ ಕ್ರುದ್ಧಸ್ಯ ಪಾಣಿಮುದ್ಯಮ್ಯ ದಕ್ಷಿಣಮ್ ।**
**ಅವಮುಚ್ಯ ಪ್ರದೇಶಿನ್ಯಾ ದಂಷ್ಟ್ರಾಮಾದಾತುಮಿಚ್ಛಸಿ ॥೧೩॥**

ಕೋಪಗೊಂಡಿರುವ ವಿಷಸರ್ಪವೊಂದು ಬುಸುಗುಟ್ಟುತ್ತಾ ಹೆಡೆಯೆತ್ತಿ ಹೊಡೆಯಲು (ಕಚ್ಚಲು) ಸಿದ್ಧವಾಗಿರುವ ಸಮಯದಲ್ಲಿ ಬಲಗೈಯ್ಯನ್ನು ಮೇಲೆತ್ತಿ, ಅದರ ಬಾಯೊಳಗಿರುವ ವಿಷದ ಹಲ್ಲನ್ನು ತೋರುಬೆರಳಿನಿಂದ ಕೀಳಲು ಇಚ್ಛಿಸುತ್ತಿದ್ದೀಯೆ. (ಇದರಿಂದ ಯಾವ ಪರಿಣಾಮವಾಗುವುದೋ–ಅದೇ ಪರಿಣಾಮವೇ ಅರ್ಜುನನನ್ನು ಕೆಣಕಲು ಹೋದರೂ ಉಂಟಾಗುವುದೆಂಬುದರಲ್ಲಿ ಸಂಶಯವಿಲ್ಲ.)

**ಅಥವಾ ಕುಞ್ಜರಂ ಮತ್ತಮೇಕ ಏವ ಚರನ್ವನೇ ।**
**ಅನಙ್ಕುಶಂ ಸಮಾರುಹ್ಯ ನಗರಂ ಗನ್ತುಮಿಚ್ಛಸಿ ॥೧೪॥**

ಅರಣ್ಯದಲ್ಲಿ ಏಕಾಕಿಯಾಗಿ ಸಂಚರಿಸುತ್ತಿರುವಾಗ ಅಂಕುಶರಹಿತನಾಗಿ

ಮದಗಜದ ಮೇಲೆ ಹತ್ತಿ ನಗರದ ಕಡೆಗೆ ಹೋಗಲಿಚ್ಛಿಸಿರುವೆ. ಮದಿಸಿದ ಆನೆಯ ಮೇಲೆ ಅನಂಕುಶನಾಗಿ ಹೊರಟರೆ ನಿನಗೆ ಉದ್ದೇಶಿಸಿದ ನಗರವಂತೂ ಸಿಕ್ಕಲಾರದು. ಯಾವುದೋ ಅರಣ್ಯದಲ್ಲಿ ನಿನ್ನನ್ನದು ಎತ್ತಿಹಾಕಿಬಿಡುತ್ತದೆ. (ಪಾರ್ಥನೊಡನೆ ನೀನು ಯುದ್ಧಕ್ಕೆ ಹೋದರೆ ಆಗುವ ಪರಿಣಾಮವಾದರೂ ಇದೇ ಆಗಿರುತ್ತದೆ. )

**ಸಮಿದ್ಧಂ ಪಾವಕಂ ಚೈವ ಘೃತಮೇದೋವಸಾಹುತಮ್ ।**
**ಘೃತಾಕ್ತಶ್ಚೀರವಾಸಾಸ್ತ್ವಂ ಮಧ್ಯೇನೋತ್ತರ್ತುಮಿಚ್ಛಸಿ ॥೧೫॥**

ಸಮಿತ್ತಿನಿಂದ ಹುತನಾಗಿ ಪ್ರಜ್ವಲಿಸುತ್ತಿರುವ ಯಜ್ಞೇಶ್ವರನಲ್ಲಿ ಆಜ್ಯ, ಮೇದಸ್ಸು, ವಸೆ–ಇತ್ಯಾದಿಗಳಿಂದಲೂ ಹೋಮಮಾಡಿ ಆ ಸಮಯದಲ್ಲಿ ಧಗ-ಧಗಿಸುವ ಯಜ್ಞೇಶ್ವರನನ್ನು ತುಪ್ಪದಲ್ಲಿ ನೆನೆಸಿದ ಬಟ್ಟೆಯನ್ನುಟ್ಟುಕೊಂಡು ದಾಟಿಹೋಗಲಿಚ್ಛಿಸಿರುವೆ. (ಪರಿಣಾಮವೇನೆಂಬುದನ್ನು ಬಲ್ಲೆಯಾ, ಕರ್ಣ! ಉರಿದು ಭಸ್ಮವಾಗಿಹೋಗುವೆ. ಅಂತೆಯೇ ನೀನು ಯಜ್ಞೇಶ್ವರಸದೃಶನಾದ ಪಾರ್ಥನೊಡನೆ ಯುದ್ಧಕ್ಕೆ ಹೋದರೆ ಖಂಡಿತವಾಗಿಯೂ ಉಳಿಯಲಾರೆ.)

**ಆತ್ಮಾನಂ ಕಃ ಸಮುದ್ಬುಧ್ಯ ಕಣ್ಠೇ ಬದ್ಧ್ವಾ ಮಹಾಶಿಲಾಮ್ ।**
**ಸಮುದ್ರಂ ತರತೇ ದೋರ್ಭ್ಯಾಂ ತತ್ರ ಕಿಂ ನಾಮ ಪೌರುಷಮ್ ॥**

ಸಮುದ್ರವನ್ನು ದಾಟಲಿಚ್ಛಿಸುವವನೊಬ್ಬನು ಮೊದಲು ತನ್ನನ್ನು ಹಗ್ಗದಿಂದ ಬಿಗಿದುಕೊಂಡನಂತೆ ; ಅನಂತರದಲ್ಲಿ ಕುತ್ತಿಗೆಗೆ ಒಂದು ದೊಡ್ಡ ದಾದ ಕಲ್ಲನ್ನೂ ಕಟ್ಟಿಕೊಂಡನಂತೆ ; ಅನಂತರ ತನ್ನೆರಡು ಕೈಗಳಿಂದಲೂ ಸಮುದ್ರವನ್ನು ದಾಟಲು ಬಹುವಾಗಿ ಪ್ರಯತ್ನಿಸಿದನಂತೆ. ಅವನ ಪ್ರಯತ್ನಕ್ಕೆ ಫಲವಿದೆಯೇ, ಕರ್ಣ! ಹೀಗೆ ಮಾಡುವುದೂ ಒಂದು ಪೌರುಷವೇ? ನಿನ್ನ ಯೋಗ್ಯತೆಯೇನೆಂಬುದು ನಿನಗೇ ತಿಳಿಯದು. ಇಂತಹ ನೀನು ತ್ರೈಲೋಕ್ಯ ಪರಾಕ್ರಮಿಯಾದ ಪಾರ್ಥನೊಡನೆ ಯುದ್ಧಮಾಡುವೆಯಾ? ಪಾರ್ಥ ನೊಡನೆ ನಿನ್ನನ್ನು ಹೋಲಿಸಿಕೊಳ್ಳಲಾದರೂ ನಿನಗೆ ಸಂಕೋಚವಾಗು ವುದಿಲ್ಲವೇ?

**ಅಕೃತಾಸ್ತ್ರಃ ಕೃತಾಸ್ತ್ರಂ ವೈ ಬಲವಂತಂ ಸುದುರ್ಬಲಃ ।**
**ತಾದೃಶಂ ಕರ್ಣ ಯಃ ಪಾರ್ಥಂ ಯೋದ್ಧುಮಿಚ್ಛೇತ್ಸ ದುರ್ಮತಿಃ ॥**

ಅಸ್ತ್ರ-ಶಸ್ತ್ರಗಳ ಪರಿಜ್ಞಾನವು ಪೂರ್ಣವಾಗಿಲ್ಲದೇ ದುರ್ಬಲನಾಗಿದ್ದುಕೊಂಡು ಸಕಲಶಸ್ತ್ರಾಸ್ತ್ರಗಳಲ್ಲಿಯೂ ಪ್ರವೀಣನಾದ ಮಹಾಬಲಿಷ್ಠನಾದ ಪಾರ್ಥನೊಡನೆ ಯಾವನು ಯುದ್ಧಮಾಡಲಿಚ್ಛಿಸುತ್ತಾನೆಯೋ–ಅವನು ನಿಶ್ಚಯವಾಗಿಯೂ ದುರ್ಮತಿಯೇ ಸರಿ. ಅವನಿಗೆ ಬುದ್ಧಿಯು ಸರಿಯಾಗಿರುವುದೆಂದು ಖಂಡಿತವಾಗಿಯೂ ಹೇಳುವ ಸಾಧ್ಯತೆಯಿಲ್ಲ. ನಾವು ಅರ್ಜುನನನ್ನು ಮೋಸದಿಂದ ಹದಿಮೂರು ವರ್ಷಗಳು ಕಾಡಿಗಟ್ಟಿದೆವು. ಪಾಶದಿಂದ ವಿಮುಕ್ತವಾದ ಸಿಂಹದಂತೆ–ಇವನು ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಮುಗಿಸಿ ಬಂದಿರುತ್ತಾನೆ. ಇವನಿಂದು ನಮ್ಮಲ್ಲಿ ಯಾರೊಬ್ಬರನ್ನೂ ಉಳಿಸುವಂತೆ ಕಾಣುವುದಿಲ್ಲ. ಒಂದು ಬಾವಿಯಲ್ಲಿ ಅಗ್ನಿಯಿದೆಯೆಂಬುದನ್ನು ತಿಳಿಯದೇ ಅದನ್ನು ಸಮೀಪಿಸಿ ಅಪಾಯಕ್ಕೊಳಗಾಗುವಂತೆ–ನಾವಿಂದು ಪಾರ್ಥನಿಲ್ಲಿರುವನೆಂಬುದನ್ನು ತಿಳಿಯದೇ ಇವನನ್ನು ಎದುರಿಸಬೇಕಾಗಿ ಬಂದು ಮಹತ್ತರವಾದ ಅಪಾಯಕ್ಕೆ ತುತ್ತಾಗಿದ್ದೇವೆ. ನಿನ್ನೊಬ್ಬನಿಂದ ಪಾರ್ಥನನ್ನೆದುರಿಸಿ ನಿಲ್ಲುವ ಸಾಧ್ಯತೆಯೇ ಇಲ್ಲ, ಕರ್ಣ! ಯುದ್ಧದುರ್ಮದನಾಗಿರುವ ಪಾರ್ಥನನ್ನು ನಾವೆಲ್ಲರೂ ಒಟ್ಟಾಗಿ ಸೇರಿಯೇ ಎದುರಿಸಬೇಕಾಗಿದೆ. ಸೈನಿಕರೆಲ್ಲರೂ ಯುದ್ಧಸನ್ನದ್ಧರಾಗಿ ನಿಲ್ಲಲಿ. ಸುಭದ್ರವಾದ ಸೇನಾವ್ಯೂಹವು ರಚಿಸಲ್ಪಡಲಿ. ಆ ವ್ಯೂಹದಲ್ಲಿ ಸೈನಿಕರು ಸುಸಜ್ಜಿತರಾಗಿ ನಿಲ್ಲಲಿ. ರಾಧೇಯ! ದ್ರೋಣ, ದುರ್ಯೋಧನ, ಭೀಷ್ಮ, ನೀನು, ಅಶ್ವತ್ಥಾಮಾ ಮತ್ತು ನಾನು–ಈ ಆರು ಮಂದಿಯೂ ಸೇರಿ ಪಾರ್ಥನನ್ನು ಎದುರಿಸೋಣ. ಏಕಾಕಿಯಾಗಿ ಅವನೊಡನೆ ಯುದ್ಧಮಾಡುವ ಸಾಹಸವನ್ನು ಮಾತ್ರ ಮಾಡಬೇಡ, ಕರ್ಣ! ಅದು ಆಗದಮಾತು. ವಜ್ರಪಾಣಿಯಾದ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ, ಯುದ್ಧ ಮಾಡಲೆಂದೇ ನಿಶ್ಚಯಿಸಿ ಆಗಮಿಸಿರುವ ಪಾರ್ಥನನ್ನು ಎದುರಿಸಬೇಕಾದರೆ ನಾವು ಆರು ಮಂದಿಯೂ ಒಟ್ಟಾಗಿಯೇ ಎದುರಿಸಬೇಕು. ನಮ್ಮ ಆರು ರಥಗಳೂ ಅವನ ರಥವನ್ನು ಆಕ್ರಮಿಸಿ ನಿಲ್ಲಬೇಕು. ಹಾಗೆ ಮಾಡಿದರೆ

ಮಾತ್ರವೇ ಅವನನ್ನೆದುರಿಸಿ ಯುದ್ಧಮಾಡಲು ಸಾಧ್ಯವಾಗುವುದು. ನಮ್ಮಲ್ಲಿ ಏಕಾಕಿಯಾಗಿ ಯಾರೂ ಪಾರ್ಥನನ್ನು ಎದುರಿಸಿ ನಿಲ್ಲಲಾರೆವು. ಸೇನಾ ವ್ಯೂಹದ ರಚನೆಯಾಗಲಿ. ಶ್ರೇಷ್ಠರಾದ ಧನುರ್ಧಾರಿಗಳೆಲ್ಲರೂ ಸಾವಧಾನ ವಾಗಿ ಯುದ್ಧಸನ್ನದ್ಧರಾಗಿ ನಿಲ್ಲೋಣ. ದಾನವರು ಇಂದ್ರನೊಡನೆ ಯುದ್ಧ ಮಾಡಿದಂತೆ–ನಾವು ಅರ್ಜುನನೊಡನೆ ಯುದ್ಧಮಾಡೋಣ."

೪೯ನೆಯ ಅಧ್ಯಾಯವು ಮುಗಿಯಿತು.

೫೦ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಕರ್ಣನ ಮಾತಿಗೆ ಅಶ್ವತ್ಥಾಮನ ಪ್ರತಿಭಟನೆ

(ಅಶ್ವತ್ಥಾಮನ ತಂದೆಯಾದ ದ್ರೋಣಾಚಾರ್ಯರನ್ನೇ ಕರ್ಣನು ಮೂದಲಿಸಿದನಲ್ಲವೇ? ಶೀಘ್ರಕೋಪಿಯಾದ ಅಶ್ವತ್ಥಾಮನು ಕರ್ಣನ ಮಾತುಗಳನ್ನು ಕೇಳಿ ಕುಪಿತನಾದುದರಲ್ಲಿ ಆಶ್ಚರ್ಯವೇನಿಲ್ಲ. ಕೃಪರು ಮಾತನಾಡುವವರೆಗೂ ಮಧ್ಯದಲ್ಲಿ ಬಾಯ್ದೆರೆಯದೇ ಇದ್ದುದೇ ಆಶ್ಚರ್ಯದ ಸಂಗತಿ.)

ಜನಮೇಜಯ! ಅಶ್ವತ್ಥಾಮನು ಕರ್ಣನನ್ನು ಉದ್ದೇಶಿಸಿ ಹೇಳಿದನು:

"ರಾಧೇಯ! ಇದುವರೆಗೂ ನಾವು ಗೋವುಗಳನ್ನು ಜಯಿಸಿರುವುದಿಲ್ಲ. ಗೋವುಗಳನ್ನು ಜಯಿಸಿದುದಕ್ಕೆ ಕುರುಹಾಗಿ ಈ ಗೋವುಗಳು ಮತ್ಸ್ಯದೇಶದ ಗಡಿಯನ್ನು ದಾಟಿಹೋಗಬೇಕಾಗಿದ್ದಿತು. ಗೋಪಾಲಕರನ್ನು ಹೆದರಿಸಿ, ಹಸುಗಳ ರಕ್ಷಣೆಗೆ ನಮ್ಮ ಪಹರೆಯವರನ್ನಿಟ್ಟಿರಲಾಗಿದೆಯೇ ಹೊರತು ಮತ್ಸ್ಯರಾಜನ ರಾಜ್ಯದ ಗಡಿಯಿಂದ ಹೊರಕ್ಕೆ ಅವುಗಳನ್ನು ಕಳುಹಿಸಿಲ್ಲ. ವಿಜಯವನ್ನು ಗಳಿಸಿ ನಾವಿನ್ನೂ ಹಸ್ತಿನಾಪುರವನ್ನೂ ಸೇರಿರುವುದಿಲ್ಲ. ಹೀಗಿದ್ದರೂ ನೀನೀಗ ಮನಬಂದಂತೆ ವ್ಯರ್ಥವಾಗಿ ಮಾತನಾಡುತ್ತಿರುವೆಯೇಕೆ? ಏನನ್ನಾದರೂ ಸಾಧಿಸಿದ್ದರೆ ನಿನ್ನ ಮಾತಿಗೆ ಸ್ವಲ್ಪವಾದರೂ ಗೌರವವನ್ನು ಕೊಡಬಹುದಾಗಿದ್ದಿತು. ಆದರೆ ಕಾರ್ಯತಃ ಯಾವುದೊಂದನ್ನೂ ಮಾಡದೇ ಆತ್ಮಪ್ರಶಂಸೆಯನ್ನು ಮಾತ್ರವೇ ಮಾಡಿ

ಕೊಳ್ಳುತ್ತಿರುವೆ. ಕಾರ್ಯವನ್ನು ಸಾಧಿಸುವವರ ಮತ್ತು ಕಾರ್ಯನಿರತ ರಾಗಿರುವವರ ಗುಣ-ಲಕ್ಷಣಗಳನ್ನು ಹೇಳುವೆನು ಕೇಳು, ಕರ್ಣ!

**ಸಂಗ್ರಾಮಾಂಶ್ಚ ಬಹೂಞ್ಜಿತ್ವಾ ಲಬ್ಧ್ವಾ ಚ ವಿಪುಲಂ ಧನಮ್ ।**
**ವಿಜಿತ್ಯ ಚ ಪರಾಂ ಸೇನಾಂ ನಾಹುಃ ಕಿಂಚನ ಪೌರುಷಮ್ ॥೨॥**

ಅನೇಕಾನೇಕಯುದ್ಧಗಳಲ್ಲಿ ಜಯಶಾಲಿಗಳಾದರೂ, ಗೆದ್ದ ದೇಶಗಳಿಂದ ವಿಪುಲವಾದ ಐಶ್ವರ್ಯವನ್ನು ತಂದರೂ, ದುರ್ಜಯವೆನಿಸಿದ ಸೇನೆಯನ್ನೇ ಗೆದ್ದರೂ–ವೀರರಾದವರು ತಮ್ಮ ಪೌರುಷದ ವಿಷಯವಾಗಿ ಯಾವು ದೊಂದು ಮಾತನ್ನೂ ಆಡುವುದಿಲ್ಲ. ಇದು ಕಾರ್ಯನಿರತರ ಲಕ್ಷಣ. ಪೃಥ್ವಿಯಲ್ಲಿ ಮಹತ್ತರವಾದ ಕಾರ್ಯವನ್ನು ಅನುದಿನವೂ ಮಾಡುತ್ತಿದ್ದರೂ ತಾವು ಇಂತಹ ಕಾರ್ಯವನ್ನು ಮಾಡುತ್ತಿದ್ದೇವೆಂಬುದನ್ನು ಯಾರೊಡ ನೆಯೂ ಹೇಳದೇ, ಕರ್ತವ್ಯವೆಂದು ಭಾವಿಸಿ ಮೌನವಾಗಿ ಅಗಾಧವಾದ ಕಾರ್ಯಮಾಡುತ್ತಿರುವವರನ್ನು ಉದಾಹರಿಸುತ್ತೇನೆ.

**ದಹತ್ಯಗ್ನಿರವಾಕ್ಯಸ್ತು ತೂಷ್ಣೀಂ ಭಾತಿ ದಿವಾಕರಃ ।**
**ತೂಷ್ಣೀಂ ಧಾರಯತೇ ಲೋಕಾನ್ವಸುಧಾ ಸಚರಾಚರಾನ್ ॥೩॥**

ಯಾವ ಮಾತನ್ನೂ ಆಡದೇ ಅಗ್ನಿಯು ದಹನಕ್ರಿಯೆಯನ್ನು ಮಾಡುತ್ತಲೇ ಇರುತ್ತಾನೆ. ಒಂದು ದಿನವೇನಾದರೂ ಅಗ್ನಿಯು ದಹನ ಕ್ರಿಯೆಯನ್ನು ನಿಲ್ಲಿಸಿದನೆಂದರೆ ಲೋಕವೇ ಉಳಿಯದು. ತಾನು ಮಾಡು ತ್ತಿರುವ ಕಾರ್ಯವು ಅಷ್ಟು ಮಹತ್ವವುಳ್ಳದ್ದಾದರೂ ಯಜ್ಞೇಶ್ವರನು ತಾನು ಮಾಡುತ್ತಿರುವ ಮಹಾಕಾರ್ಯದ ವಿಷಯವಾಗಿ ಒಮ್ಮೆಯಾದರೂ ಹೇಳಿಕೊಳ್ಳದೇ ತನ್ನ ಪಾಡಿಗೆ ತಾನು ತನ್ನ ಕರ್ತವ್ಯವನ್ನು ಮಾಡುತ್ತಲೇ ಇರುತ್ತಾನೆ. ಸೂರ್ಯನು ಅನುದಿನವೂ ಹುಟ್ಟುತ್ತಿರುತ್ತಾನೆ ; ಮುಳುಗು ತ್ತಿರುತ್ತಾನೆ. ಆದರೆ ಒಂದು ಹಗಲಿನಲ್ಲಿ ಸೂರ್ಯನನ್ನು ಕಾಣದಿದ್ದರೆ ಆ ದಿನವನ್ನು ದುರ್ದಿನವೆಂದು ಪರಿಗಣಿಸುತ್ತಾರೆ. ಸೂರ್ಯನೇ ಹುಟ್ಟದಿದ್ದರೆ ಲೋಕಗಳೇ ಉಳಿಯುವುದಿಲ್ಲ. ಇಂತಹವನೂ ತಾನು ಇಂತಹ ಕಾರ್ಯ ಮಾಡುವೆನೆಂದು ಯಾರೊಡನೆಯೂ ಹೇಳಿಕೊಳ್ಳದೇ ತನ್ನ ಪಾಡಿಗೆ ತಾನು ಉದಯಿಸಿ ಪ್ರಪಂಚಕ್ಕೆಲ್ಲಾ ಬೆಳಕು ಚೆಲ್ಲಿ ಸಾಯಂಕಾಲವಾದೊಡನೆಯೇ

ಅಸ್ತನಾಗುತ್ತಾನೆ. ಇದು ಪುರುಷರ ವಿಷಯವಾಯಿತು. ಹೆಂಗಸರೂ ಸಹ ತಾವು ಮಾಡಿದ ಕಾರ್ಯವನ್ನು ಮತ್ತೊಬ್ಬರೊಡನೆ ಹೇಳಿಕೊಳ್ಳುವುದಿಲ್ಲ. ಭೂದೇವಿಯ ಆದರ್ಶವನ್ನಾದರೂ ನೋಡು, ಕರ್ಣ! ಚರಾಚರಗಳಿಂದ ಕೂಡಿರುವ ಈ ಲೋಕಗಳನ್ನು ಅವಳು ಸ್ವಲ್ಪವಾದರೂ ಬೇಸರಪಟ್ಟುಕೊಳ್ಳದೇ ಹೊತ್ತು ನಿಂತಿದ್ದಾಳೆ. ಇದರಿಂದವಳು ಅಹಂಕಾರಪಟ್ಟಿಲ್ಲ. ತಾನು ಇಂತಹ ಮಹಾಕಾರ್ಯಮಾಡುತ್ತಿರುವೆನೆಂದು ಯಾರೊಡನೆಯೂ ಹೇಳಿಕೊಂಡಿಲ್ಲ. ಇದು ಕಾರ್ಯನಿರತರ ಲಕ್ಷಣ.

ಕರ್ಣ! ಪಂಡಿತರ ಗುಣ-ಲಕ್ಷಣಗಳನ್ನು ಹೇಳಿ ಅವರಿರಬೇಕಾದ ಸ್ಥಳವನ್ನೂ ನಿರೂಪಿಸಿದೆಯಲ್ಲವೇ? ನನಗೆ ತಿಳಿದಿರುವಂತೆ ಚಾತುರ್ವರ್ಣ್ಯಗಳ ಧರ್ಮಗಳನ್ನು ಹೇಳುವೆನು ; ಕೇಳು :

**ಚಾತುರ್ವರ್ಣ್ಯಸ್ಯ ಕರ್ಮಾಣಿ ವಿಹಿತಾನಿ ಸ್ವಯಮ್ಭುವಾ ।**
**ಧನಂ ಯೈರಧಿಗನ್ತವ್ಯಂ ಯಚ್ಚ ಕುರ್ವನ್ನ ದುಷ್ಯತಿ ॥೪॥**

ಚಾತುರ್ವರ್ಣ್ಯದವರು ಯಾವ ಯಾವ ಕರ್ತವ್ಯಗಳನ್ನು ಮಾಡಬೇಕೆಂಬುದನ್ನು ಸಾಕ್ಷಾತ್ ಬ್ರಹ್ಮನೇ ಹೇಳಿಬಿಟ್ಟಿದ್ದಾನೆ. ಯಾರು ಹಣವನ್ನು ಸಂಪಾದಿಸಬೇಕು? ಹೇಗೆ ಸಂಪಾದಿಸಬೇಕು? ಹೇಗೆ ಸಂಪಾದಿಸುವುದರಿಂದ ಅವನು ದೋಷಕ್ಕೆ ಭಾಗಿಯಾಗುವುದಿಲ್ಲ?—ಈ ಎಲ್ಲ ವಿಷಯಗಳನ್ನೂ ಬ್ರಹ್ಮನು ಸ್ಪಷ್ಟವಾಗಿ ಹೇಳಿದ್ದಾನೆ.

**ಅಧೀತ್ಯ ಬ್ರಾಹ್ಮಣೋ ವೇದಾನ್ಯಾಜಯೇತ ಯಜೇತ ವಾ ।**
**ಕ್ಷತ್ರಿಯೋ ಧನುರಾಶ್ರಿತ್ಯ ಯಜೇಚ್ಚೈವ ನ ಯಾಜಯೇತ್ ॥೫॥**

ಬ್ರಾಹ್ಮಣನಾದವನು ವೇದಗಳನ್ನು ಅಧ್ಯಯನಮಾಡಿ, ಯಜ್ಞವನ್ನು ಮಾಡಲು ಮತ್ತು ಮಾಡಿಸಲು ಅಧಿಕಾರಿಯಾಗುತ್ತಾನೆ. ಕ್ಷತ್ರಿಯನಾದವನು ಧನುರ್ವಿದ್ಯೆಯನ್ನು ಆಶ್ರಯಿಸಿ ಪ್ರಜಾರಕ್ಷಣೆಯಲ್ಲಿ ನಿರತನಾಗಿ ಯಜ್ಞ-ಯಾಗಾದಿಗಳನ್ನು ಮಾಡಲು ಅರ್ಹನಾಗುತ್ತಾನೆಯೇ ಹೊರತು ಮಾಡಿಸಲು ಅರ್ಹನಾಗುವುದಿಲ್ಲ.

**ವೈಶ್ಯೋಽಧಿಗಮ್ಯ ವಿತ್ತಾನಿ ಬ್ರಹ್ಮಕರ್ಮಾಣಿ ಕಾರಯೇತ್ ।**

**ಶೂದ್ರಃ ಶುಶ್ರೂಷಣಂ ಕುರ್ಯಾತ್ತ್ರಿಷು ವರ್ಣೇಷು ನಿತ್ಯಶಃ ।**
**ವನ್ದನಾಯೋಗವಿಧಿಭಿರ್ವೈತಸೀಂ ವೃತ್ತಿಮಾಸ್ಥಿತಃ ॥೬॥**

ವೈಶ್ಯನು ಕೃಷಿ ಮತ್ತು ವ್ಯಾಪಾರಾದಿಗಳಿಂದ ಹಣವನ್ನು ಸಂಪಾದಿಸಿ ಬ್ರಾಹ್ಮಣರ ಮೂಲಕವಾಗಿ ವೇದೋಕ್ತಕರ್ಮಗಳನ್ನು ಮಾಡಿಸಬೇಕು. ಶೂದ್ರನಾದವನು ವಂದನೆ ಮತ್ತು ಆಜ್ಞಾಪಾಲನೆಗಳ ಮೂಲಕವಾಗಿ ವೈತಸೀ ವೃತ್ತಿಯನ್ನಾಶ್ರಯಿಸಿ ( ಬೆತ್ತದ ಗಿಡದಂತೆ ವಿನಮ್ರನಾಗಿದ್ದುಕೊಂಡು ) ಮೂರು ವರ್ಣದವರ ಶುಶ್ರೂಷೆಯಲ್ಲಿ ನಿರತನಾಗಿರಬೇಕು.

**ವರ್ತಮಾನಾ ಯಥಾಶಾಸ್ತ್ರಂ ಪ್ರಾಪ್ಯ ಚಾಪಿ ಮಹೀಮಿಮಾಮ್ ।**
**ಸತ್ಕುರ್ವನ್ತಿ ಮಹಾಭಾಗಾ ಗುರೂನ್ಸುವಿಗುಣಾನಪಿ ॥೭॥**

ಶ್ರೇಷ್ಠಪುರುಷರು ಯಥಾಶಾಸ್ತ್ರವಾಗಿ ನಡೆದುಕೊಳ್ಳುತ್ತಾರೆ. ತಮ್ಮ ಸದ್ಗುಣ-ಸದಾಚಾರಗಳ ಫಲವಾಗಿ ಈ ಪೃಥ್ವಿಯನ್ನೇ ಜಯಿಸಿದ್ದರೂ ಅವರು ಗುಣಹೀನರಾದ ಗುರುಜನರನ್ನೂ ಸತ್ಕರಿಸುತ್ತಾರೆ. ಗುರುಜನರ ಗುಣಾವಗುಣಗಳನ್ನು ಪರಿಶೀಲಿಸುವುದೇ ತಮ್ಮ ಕರ್ತವ್ಯವಲ್ಲವೆಂದೂ, ಅವರನ್ನು ಸತ್ಕರಿಸಿ ಉಪಚರಿಸುವುದು ತಮ್ಮ ಕರ್ತವ್ಯವೆಂದೂ ಅವರು ಭಾವಿಸುತ್ತಾರೆ. ಸದ್ವೃತ್ತಿ, ಸದ್ಗುಣ, ಪೌರುಷ–ಇವುಗಳಿಂದ ರಾಜನು ರಾಜ್ಯವನ್ನು ಸಂಪಾದಿಸುವುದು ಯೋಗ್ಯವಾಗಿದೆ. ಆದರೆ ಮೋಸದ ಪಗಡೆಯಾಟದಿಂದ ಯಾವ ಕ್ಷತ್ರಿಯನೂ ರಾಜ್ಯವನ್ನು ಸಂಪಾದಿಸಹೋಗು ವುದಿಲ್ಲ. ಕಪಟದ್ಯೂತದ ಮೂಲಕವಾಗಿ ಪಡೆದ ರಾಜ್ಯದಿಂದ ಸಂತೋಷಿಸುವುದೂ ಇಲ್ಲ. ಆದರೆ ಕ್ರೂರಿಯಾದ ಮತ್ತು ನಿರ್ದಯನಾದ ದುರ್ಯೋಧನನು ಮಾತ್ರ ಇದಕ್ಕೆ ಹೊರತಾಗಿದ್ದಾನೆ. ಕಪಟದ್ಯೂತದಿಂದ ರಾಜ್ಯವನ್ನು ಸಂಪಾದಿಸಿಯೂ ಸಂತುಷ್ಟನಾಗಿದ್ದಾನೆ. ವ್ಯಾಧನೊಬ್ಬನು ವಂಚನೆಯಿಂದ ಪ್ರಾಣಿಗಳನ್ನು ಹಿಡಿಯುವಂತೆ–ದುರ್ಯೋಧನನು ಕಪಟದ್ಯೂತದಿಂದ ರಾಜ್ಯವನ್ನು ಸಂಪಾದಿಸಿರುವುದಲ್ಲದೇ–ತಾನು ಸಂಪಾದಿಸಿದ ರಾಜ್ಯದ ವಿಷಯವಾಗಿ ಪ್ರಶಂಸೆಮಾಡಿಕೊಳ್ಳುತ್ತಲೂ ಇದ್ದಾನೆ. ವಿಚಕ್ಷಣನಾದವನು ದುಷ್ಕಾರ್ಯವನ್ನೇ ಮಾಡಿ ತನ್ನನ್ನೇ ತಾನು ಶ್ಲಾಘನೆಮಾಡಿಕೊಳ್ಳುವನೇ ?

ದುರ್ಯೋಧನ! ನಿನ್ನನ್ನೇ ನಾನು ನೇರವಾಗಿ ಪ್ರಶ್ನಿಸುತ್ತೇನೆ. ನೀನು ಅರ್ಜುನನೊಡನೆಯಾಗಲೀ, ನಕುಲನೊಡನೆಯಾಗಲೀ, ಸಹದೇವನೊಡನೆ ಯಾಗಲೀ–ಯಾವಾಗ ದ್ವಂದ್ವಯುದ್ಧವನ್ನು ಮಾಡಿ, ಅವರನ್ನು ಸೋಲಿಸಿ ಅವರ ಐಶ್ವರ್ಯವನ್ನು ಅಪಹರಿಸಿರುವೆ ; ಹೇಳುವೆಯಾ? ಧರ್ಮಾತ್ಮನಾದ ಯುಧಿಷ್ಠಿರನು ನಿನ್ನಿಂದ ಯಾವಾಗ ಪರಾಜಿತನಾದನು? ಬಲಿಷ್ಠರಲ್ಲಿ ಶ್ರೇಷ್ಠ ನಾದ ಭೀಮನನ್ನು ಎದುರಿಸಿ ನಿಂತು ನೀನು ಯಾವಾಗ ಯುದ್ಧಮಾಡಿರುವೆ? ಅವರ ರಾಜಧಾನಿಯಾದ ಇಂದ್ರಪ್ರಸ್ಥಕ್ಕೆ ಸಸೈನ್ಯನಾಗಿ ಹೋಗಿ ಧರ್ಮಾತ್ಮರಾದ ಪಾಂಡವರೊಡನೆ ನೀನು ಯಾವಾಗ ಯುದ್ಧಮಾಡಿ ಅವರನ್ನು ಪರಾಜಯಗೊಳಿಸಿರುವೆ? ನೀನು ಯಾವ ಯುದ್ಧದಲ್ಲಿ ಪಾಂಡವರೆಲ್ಲರನ್ನೂ ಗೆದ್ದು ಅವರ ಪತ್ನಿಯಾದ ಕೃಷ್ಣೆಯನ್ನು ನಿನ್ನ ಅಧೀನಮಾಡಿ ಕೊಂಡೆಯೆಂಬುದನ್ನು ಹೇಳುವೆಯಾ? ದುಷ್ಟಕರ್ಮನೇ! ಪಾಪಾತ್ಮನೇ! ಕಪಟದ್ಯೂತದಿಂದ ಪಾಂಡವರನ್ನು ಸೋಲಿಸಿದ್ದೇ ಅಲ್ಲದೇ–ಪಾಪರಹಿತಳಾದ ದ್ರೌಪದಿಯನ್ನು–ಅವಳು ರಜಸ್ವಲೆಯಾಗಿದ್ದಾಗ, ಏಕವಸ್ತ್ರಧಾರಿಣಿಯಾಗಿ ದ್ದಾಗ, ಸರ್ವರೂ ನೆರೆದಿದ್ದ ಸಭಾಮಂದಿರಕ್ಕೆ ಸೆಳೆದುತರುವಂತೆ ತಮ್ಮನಿಗೆ ಸೂಚನೆ ಕೊಟ್ಟ ನೀಚನಲ್ಲವೇ ನೀನು? ನಿನಗೆ ಪರಾಕ್ರಮವೆಂಬುದೊಂದಿರು ವುದೇ? ಚಂದನವನ್ನು ಅಪೇಕ್ಷಿಸುವವನು ಚಂದನವೃಕ್ಷವನ್ನೇ ಮೂಲಸಹಿತ ವಾಗಿ ಕಿತ್ತುಬಿಡುವಂತೆ–ಪಾಂಡವರ ರಾಜ್ಯಾಪಹರಣಕ್ಕಾಗಿ ನೀನು ಮಾಡ ಬಾರದುದೆಲ್ಲವನ್ನೂ ಮಾಡಿ, ಅವರ ಮೂಲವನ್ನೇ ಕತ್ತರಿಸಿಬಿಟ್ಟೆ. ಹದಿ ಮೂರು ವರ್ಷಗಳ ಕಾಲ ರಾಜ್ಯದಲ್ಲಿ ಧರ್ಮರಾಜನ ಸುಳಿವೇ ಇಲ್ಲದಂತೆ ಮಾಡಿರುವೆ."

ಪುನಃ ಕರ್ಣನನ್ನು ಕುರಿತು ಅಶ್ವತ್ಥಾಮನು ಹೇಳುತ್ತಾನೆ :

"ಕರ್ಣ! ಈ ದುಷ್ಕರ್ಮಕ್ಕೆ ನೀನೂ ಒಬ್ಬ ಮುಖ್ಯಪ್ರೇರಕನು. ಆ ಸಮಯದಲ್ಲಿ ವಿದುರನೇನು ಹೇಳಿದನೆಂಬುದನ್ನು ನೀನೀಗ ನೆನೆಸಿಕೊಳ್ಳ ಬೇಕೆಂದು ಹೇಳಲಿಚ್ಛಿಸುತ್ತೇನೆ. ( 'ನಿಮ್ಮ ಈ ಕಪಟದ್ಯೂತದ ಪರಿಣಾಮವಾಗಿ ಕುರುಕುಲವೇ ನಷ್ಟವಾಗಿಹೋಗುವುದು' ಎಂದು ಬಾರಿ-ಬಾರಿಗೂ ವಿದುರನು ಎಚ್ಚರಿಸಿದ್ದನಲ್ಲವೇ? )

**ಯಥಾಶಕ್ತಿ ಮನುಷ್ಯಾಣಾಂ ಶಮಮಾಲಕ್ಷಯಾಮಹೇ ।**

**ಅನ್ಯೇಷಾಮಪಿ ಸತ್ತ್ವಾನಾಮಪಿ ಕೀಟಪಿಪೀಲಿಕೈಃ ।**
**ದ್ರೌಪದ್ಯಾಃ ಸಮ್ಪರಿಕ್ಲೇಶಂ ನ ಕ್ಷನ್ತುಂ ಪಾಣ್ಡವೋಽರ್ಹತಿ ॥೧೪॥**

ಮನುಷ್ಯರು ತಮ್ಮ ಶಕ್ತಿಯಿದ್ದಷ್ಟು ತಾಳ್ಮೆಯಿಂದಿರುವುದನ್ನು ನಾವು ಕಾಣುತ್ತಿದ್ದೇವೆ. ತಾಳ್ಮೆಯಿಂದಿರಲು ಮಹತ್ತರವಾದ ಶಕ್ತಿಯಿರಬೇಕು. ದುರ್ಬಲರಾದವರಿಗೆ ತಾಳ್ಮೆಯಿಂದಿರುವ ಸಾಧ್ಯತೆಯಿಲ್ಲ. ದುರ್ಬಲನಾದವನು ದೌರ್ಬಲ್ಯದಿಂದ ತಾಳ್ಮೆಯನ್ನು ತಾಳಿದನಾದರೆ ಅದಕ್ಕೆ ತಾಳ್ಮೆಯೆಂದು ಹೆಸರಾಗುವುದಿಲ್ಲ. ಅಪಾರವಾದ ಶಕ್ತಿಯಿದ್ದೂ, ಉದ್ರೇಕಗೊಳ್ಳಬಹುದಾದ ಸಮಯದಲ್ಲಿಯೂ ತಾಳ್ಮೆಯಿಂದಿರುವವನೇ ಧೀರನೆನಿಸಿಕೊಳ್ಳುತ್ತಾನೆ. ಆದರೆ ಅದಕ್ಕೂ ಒಂದು ಮಿತಿಯಿದೆ. ಹುಳುಗಳೂ, ಇರುವೆಗಳೂ ವಿಶೇಷವಾದ ತಾಳ್ಮೆಯಿಂದಲೇ ಇರುತ್ತವೆ. ಯಾರ ಗೋಜಿಗೂ ಹೋಗದೇ ತಮ್ಮ ಪಾಡಿಗೆ ತಮ್ಮ ಕೆಲಸಗಳನ್ನು ಅನವರತವಾಗಿ ಮಾಡುತ್ತಿರುತ್ತವೆ. ನೋಡಿಯೋ–ನೋಡದೆಯೋ ಅವುಗಳನ್ನೇನಾದರೂ ತುಳಿದರೆ ಒಡನೆಯೇ ಅವೂ ಸಹ ಕಚ್ಚಿಬಿಡುತ್ತವೆ. ಇದು ಪ್ರಾಣಿಮಾತ್ರದ ಸ್ವಭಾವವೂ ಆಗಿರುತ್ತದೆ. ಪಾಂಡವರು ತಮ್ಮ ದೈಹಿಕಶ್ರಮವನ್ನಾದರೂ ಸಹಿಸಿಕೊಂಡಿದ್ದಾರೆ. ತಮಗಾದ ಅಪಮಾನವನ್ನೂ ಸಹಿಸಿಕೊಂಡಿದ್ದಾರೆ. ಆದರೆ ದ್ರೌಪದಿಗೆ ಸಭಾಮಂಟಪದಲ್ಲಾದ ಅಪಮಾನವನ್ನು ಮಾತ್ರ ಅವರು ಎಂದೆಂದಿಗೂ ಸಹಿಸಲಾರರು. ಪ್ರತಾಪಶಾಲಿಗಳಾಗಿದ್ದುದರಿಂದಲೇ ಅಂದಿನ ದಿನ ಅವರು ಸೈರಣೆಯನ್ನು ತಂದುಕೊಂಡರು. ಆದರೆ ಅಂದು ಮಾಡಿದ ನಿಮ್ಮ ಅಪರಾಧಕ್ಕೆ ಎಂದಾದರೊಂದು ದಿನ ಅವರು ಪ್ರತಿಕ್ರಿಯೆಯನ್ನು ಮಾತ್ರ ಮಾಡದೇ ಇರುವುದಿಲ್ಲ. ಅರ್ಜುನನಿಲ್ಲಿಗೆ ನಿಮ್ಮನ್ನು ನೋಡಿಕೊಂಡು ಹೋಗಲು ಬರುತ್ತಿಲ್ಲ.

**ಕ್ಷಯಾಯ ಧಾರ್ತರಾಷ್ಟ್ರಾಣಾಂ ಪ್ರಾದುರ್ಭೂತೋ ಧನಂಜಯ ।**

ಧೃತರಾಷ್ಟ್ರನ ಮಕ್ಕಳನ್ನು ವಿನಾಶಮಾಡಲೆಂದೇ ಧನಂಜಯನು ಇಲ್ಲಿಗೆ ಬಂದಿದ್ದಾನೆ. ಪಂಡಿತನಲ್ಲದಿದ್ದರೂ ಪಂಡಿತಮನ್ಯನಾಗಿ ತುಟಿ ಮೀರಿದ ಮಾತುಗಳನ್ನಾಡುತ್ತಿರುವೆಯಲ್ಲವೇ? ರಾಧೇಯ! ವೈರಿಗಳನ್ನು ನಾಶಮಾಡಿ ವೈರಕ್ಕೆ ವಿರಾಮವನ್ನು ತರುವ ಜಿಷ್ಣುವು ನಮ್ಮನ್ನು ನಿಃಶೇಷ

ವಾಗಿ ಧ್ವಂಸಮಾಡದೇ ಬಿಡುವನೆಂದು ಭಾವಿಸಿರುವೆಯಾ? ಧನಂಜಯನು ದೇವತೆಗಳೊಡನೆಯೇ ಆಗಲೀ, ಗಂಧರ್ವಾಸುರ-ರಾಕ್ಷಸರೊಡನೆಯೇ ಆಗಲೀ ಮನಸ್ಸಿನಲ್ಲಿ ಭಯವನ್ನಿಟ್ಟುಕೊಂಡು ಯುದ್ಧಮಾಡುವನೆಂದು ಭಾವಿಸಬೇಡ. ಮಹಾಪರಾಕ್ರಮಿಗಳೆನಿಸಿದ ದೇವಾಸುರರೊಡನೆ ಯುದ್ಧ ಮಾಡಲೂ ಅವನು ಅಂಜುವವನಲ್ಲ. ಮಹಾಮಹಿಮನಾದ ಗರುಡನು ಕುಳಿತ ವೃಕ್ಷಗಳೆಲ್ಲವೂ ಮುರಿದು ಕೆಳಗೆ ಬೀಳುವಂತೆ–ಸಂಕ್ರುದ್ಧನಾದ ಅರ್ಜುನನನ್ನು ಎದುರಿಸಿದ ಶತ್ರುಗಳೆಲ್ಲರೂ ವಿನಾಶಹೊಂದುತ್ತಾರೆ. ಕೋಪ ದಿಂದವನು ಯಾರನ್ನು ಎದುರಿಸಿ ಯುದ್ಧಮಾಡುವನೋ–ಅವನು ಒಡನೆಯೇ ಅಸುವನ್ನು ತೊರೆದು ಕೆಳಗೆ ಬೀಳುತ್ತಾನೆ. ಪರಾಕ್ರಮದಲ್ಲಿ ನಿನ್ನನ್ನು ಮೀರಿಸಿದ ಪರಾಕ್ರಮವು ಧನಂಜಯನಿಗಿರುವುದು. ಧನುರ್ವಿದ್ಯೆ ಯಲ್ಲಿ ಇಂದ್ರನಿಗೆ ಸಮಾನನೆನಿಸಿದ್ದಾನೆ. ಯುದ್ಧಮಾಡುವುದರಲ್ಲಿ ವಾಸುದೇವನಿಗೆ ಸಮಾನನು. ಇಂತಹ ಮಹಾಮಹಿಮನಾದ ಪಾರ್ಥನನ್ನು (ಅಸೂಯಾರಹಿತರಾದ) ಯಾರು ತಾನೇ ಶ್ಲಾಘಿಸದೇ ಇರುತ್ತಾರೆ? ದೇವತೆಗಳೊಡನೆ ಯುದ್ಧಮಾಡುವಾಗ ಅವರ ಮೇಲೆ ಪ್ರಯೋಗಿಸಲು ಯೋಗ್ಯವಾದ ಅಸ್ತ್ರಗಳನ್ನೇ ಅರ್ಜುನನು ಪ್ರಯೋಗಿಸುತ್ತಾನೆ. ಅವರೊಡನೆ ಯುದ್ಧಮಾಡಲು ಅನುಸರಿಸಬೇಕಾದ ವಿಧಾನದಿಂದಲೇ ಯುದ್ಧಮಾಡು ತ್ತಾನೆ. ಮಾನವರೊಡನೆ ಯುದ್ಧಮಾಡುವಾಗ ಮನುಷ್ಯೋಚಿತವಾದ ಪ್ರಣಾಳಿಕೆಗೆ ಅನುಸಾರವಾಗಿಯೇ ಯುದ್ಧಮಾಡುತ್ತಾನೆ. ಮಂತ್ರಾಸ್ತ್ರವನ್ನು ಪ್ರತ್ಯಸ್ತ್ರಪ್ರಯೋಗದಿಂದ ಶಮನಗೊಳಿಸುತ್ತಾನೆ. ಅಂತಹ ಅತುಲಪರಾಕ್ರಮಿ ಯಾದ ಅರ್ಜುನನಿಗೆ ಸಮಾನರಾದವರು ಈ ಪೃಥ್ವಿಯಲ್ಲಿ ಯಾರಿದ್ದಾರೆ? ಕರ್ಣ! ನಮ್ಮ ತಂದೆಯವರಿಗೆ ಅರ್ಜುನನನ್ನು ಕಂಡರೆ ಬಹಳ ಪ್ರೀತಿಯೆಂದು ಹೇಳಿದೆಯಲ್ಲವೇ? ಶಿಷ್ಯನನ್ನು ಪ್ರೀತಿಸುವುದರಲ್ಲಿ ತಪ್ಪೇನಿದೆ?

**ಪುತ್ರಾದನನ್ತರಂ ಶಿಷ್ಯ ಇತಿ ಧರ್ಮವಿದೋ ವಿದುಃ ।**
**ಏತೇನಾಪಿ ನಿಮಿತ್ತೇನ ಪ್ರಿಯೋ ದ್ರೋಣಸ್ಯ ಪಾಣ್ಡವಃ ॥೨೧॥**

ಆಚಾರ್ಯನಾದವನಿಗೆ ಮಗನನ್ನು ಬಿಟ್ಟರೆ ಶಿಷ್ಯನೇ ಪ್ರೀತಿಪಾತ್ರ

ನೆಂದು ಧರ್ಮಶಾಸ್ತ್ರವನ್ನು ತಿಳಿದವರು ಭಾವಿಸುತ್ತಾರೆ. ಈ ಕಾರಣದಿಂದಲೇ ಪಾಂಡವನು (ಅರ್ಜುನನು) ದ್ರೋಣರಿಗೆ ಪ್ರಿಯನಾಗಿರುತ್ತಾನೆ. ಧರ್ಮಶಾಸ್ತ್ರವನ್ನು ತಿಳಿಯದವನಿಗೆ, ಗುರು-ಶಿಷ್ಯರ ಪರಮಪವಿತ್ರವಾದ ಸಂಬಂಧದ ಸ್ವರೂಪವನ್ನು ತಿಳಿಯದವನಿಗೆ—ಈ ವಿಷಯವು ಹೇಗೆ ತಾನೇ ತಿಳಿದೀತು?

ದುರ್ಯೋಧನ! ನೀನು ಪಾಂಡವರೊಡನೆ ಕಪಟದ್ಯೂತವನ್ನಾಡಿ ಅವರ ರಾಜಧಾನಿಯಾದ ಇಂದ್ರಪ್ರಸ್ಥವನ್ನು ಹೇಗೆ ಅಪಹರಿಸಿದೆಯೋ, ಅವರು ದ್ಯೂತದಲ್ಲಿ ಸೋತುಹೋದರೆಂಬ ವ್ಯಾಜದಿಂದ ದ್ರೌಪದಿಯನ್ನು ಹೇಗೆ ಸಭಾಭವನಕ್ಕೆ ಸೆಳೆದುತಂದೆಯೋ—ಹಾಗೆಯೇ ಈಗ ನಿನ್ನೆದುರಾಗಿ ಬಂದಿರುವ ಅರ್ಜುನನೊಡನೆ ಯುದ್ಧಮಾಡಿ ಅವನನ್ನು ಪರಾಭವಗೊಳಿಸು ವವನಾಗು. ದ್ಯೂತದಲ್ಲಿ ನಿನ್ನ ಚಾತುರ್ಯವನ್ನು ತೋರಿದಂತೆ—ಯುದ್ಧ ದಲ್ಲಿಯೂ ನಿನ್ನ ಚಾತುರ್ಯವನ್ನು ತೋರಿಸು. ನಿಮ್ಮ ಮಾವನೊಬ್ಬ ನಿದ್ದಾನಲ್ಲಾ! 'ಕ್ಷತ್ರಧರ್ಮಕೋವಿದ' 'ಮಹಾಪ್ರಾಜ್ಞ' ಅವನೀಗ ಮುಂದೆ ಬಂದು ಪಾರ್ಥನೊಡನೆ ಯುದ್ಧಮಾಡಲಿ. ದುರ್ದ್ಯೂತದಲ್ಲಿ ಮಹಾ ಚತುರನಾಗಿರುವ ಗಾಂಧಾರರಾಜನಾದ ಶಕುನಿಯು ಯುದ್ಧದಲ್ಲಿಯೂ ತನ್ನ ಚಾತುರ್ಯವನ್ನು ತೋರಿಸಲಿ. ಅರ್ಜುನನೊಡನೆ ಯುದ್ಧಮಾಡುವ ಮೊದಲು ಶಕುನಿಯು ಒಂದು ವಿಷಯವನ್ನು ಸ್ಮರಣೆಯಲ್ಲಿಟ್ಟು ಕೊಳ್ಳಬೇಕಾಗಿದೆ. ಅರ್ಜುನನ ಗಾಂಡೀವವು ಕೃತ-ದ್ವಾಪರಗಳೆಂಬ ಹೆಸರಿನ ಪಗಡೆಯ ದಾಳಗಳನ್ನು ಶಕುನಿಯ ಮುಂದೆ ಬಿಡುವುದಿಲ್ಲ. ಹಾಗೇನಾದರೂ ದಾಳಗಳನ್ನು ಬಿಡುವುದಾಗಿದ್ದರೆ ಶಕುನಿಯು ತನ್ನ ದುರ್ದ್ಯೂತದ ಚಾತುರ್ಯವನ್ನು ಇಲ್ಲಿಯೂ ತೋರಿಸಿಬಿಡುತ್ತಿದ್ದನು. ಅರ್ಜುನನ ಗಾಂಡೀವವು ಪ್ರಜ್ವಲಿಸುತ್ತಿರುವ, ನಿಶಿತವಾದ, ಅಸಂಖ್ಯಾತವಾದ ಬಾಣ ಗಳನ್ನು ರಭಸದಿಂದ ಹೊರಹಾಕುತ್ತಿರುತ್ತದೆ. ಪರ್ವತಗಳನ್ನೂ ಭೇದಿಸು ವುದರಲ್ಲಿ ಸಮರ್ಥವಾದ, ಹದ್ದುಗಳ ರೆಕ್ಕೆಗಳನ್ನು ಹೊಂದಿರುವ, ಗಾಂಡೀವ ಧನುಸ್ಸಿನಿಂದ ನಿರ್ಮುಕ್ತವಾದ, ತೀಕ್ಷ್ಣವಾದ ಬಾಣಗಳು ಕಪಟ ದ್ಯೂತದಲ್ಲಿ ಚತುರನಾದ ಶಕುನಿಯನ್ನು ಕಂಡೊಡನೆಯೇ ಮಧ್ಯದಲ್ಲಿಯೇ

ನಿಂತುಬಿಡುವುವೆಂದು ಭ್ರಾಂತನಾಗಬೇಡ. ಎಂತಹ ಪ್ರಬಲನಾದ ಎದುರಾಳಿಯ ಹೃದಯವನ್ನಾದರೂ ಸೀಳಿಬಿಡುತ್ತವೆ.

**ಅನ್ತಕಃ ಪವನೋ ಮೃತ್ಯುಸ್ತಥಾಗ್ನಿರ್ವಡವಾಮುಖಃ ।**
**ಕುರ್ಯುರೇತೇ ಕ್ವಚಿಚ್ಛೇಷಂ ನ ತು ಕ್ರುದ್ಧೋ ಧನಂಜಯಃ ॥**

ದುರ್ಯೋಧನ! ಸರ್ವರನ್ನೂ ವಿನಾಶಮಾಡುವುದರಲ್ಲಿ ನಿಯುಕ್ತರಾಗಿರುವ ಯಮ-ವಾಯು-ಮೃತ್ಯು-ಬಡಬಾಗ್ನಿಗಳಾದರೂ, ಸ್ವಲ್ಪವಾದರೂ ಅವಶೇಷವನ್ನು ಉಳಿಸಬಹುದು. ಆದರೆ ಧನಂಜಯನು ಕುಪಿತನಾದರೆ ನಿಃಶೇಷವಾಗಿ ಸಕಲರನ್ನೂ ಧ್ವಂಸಮಾಡಿಬಿಡುತ್ತಾನೆ. ಸಭೆಯಲ್ಲಿ ನೀನು ನಿನ್ನ ಮಾವನೊಡನೆ ಕುಳಿತು ಪಗಡೆಯಾಟವಾಡಿ ಗೆದ್ದೆಯಲ್ಲವೇ? ಅಂದು ನಿನ್ನನ್ನು ನಿನ್ನ ಆ ಮಾವನು ರಕ್ಷಿಸಿದನಲ್ಲವೇ? ಇಂದೂ ಅವನಿಂದಲೇ ರಕ್ಷಣೆಯನ್ನು ಪಡೆದು ಅವನ ಸಹಕಾರದಿಂದಲೇ ಅರ್ಜುನನೊಡನೆ ಯುದ್ಧಮಾಡು.

ನಾನು ನನ್ನ ಅಭಿಪ್ರಾಯವನ್ನು ಈಗಲೇ ಹೇಳಿಬಿಡುತ್ತೇನೆ. ಯಾವ ಯೋಧರು ಬೇಕಾದರೂ ಯುದ್ಧಮಾಡಲಿ. ನಾನು ಮಾತ್ರ ಅರ್ಜುನನೊಡನೆ ಯುದ್ಧಮಾಡುವುದಿಲ್ಲ. ಅರ್ಜುನನೊಡನೆ ಯುದ್ಧಮಾಡಲು ನಾನಿಲ್ಲಿ ಬಂದಿಲ್ಲ. ಮತ್ಸ್ಯರಾಜನೊಡನೆ ಯುದ್ಧಮಾಡಲು ನಾವಿಲ್ಲಿಗೆ ಬಂದಿರುತ್ತೇವೆ. ವಿರಾಟನೊಡನೆ ಯುದ್ಧಮಾಡಬೇಕೆಂದೇ ದುರ್ಯೋಧನನು ನಮ್ಮನ್ನಿಲ್ಲಿಗೆ ಕರೆತಂದಿದ್ದಾನೆ. ಮತ್ಸ್ಯನೇನಾದರೂ ಗೋವುಗಳನ್ನು ಪ್ರತ್ಯಾಕ್ರಮಣಮಾಡಲು ಆಗಮಿಸಿದರೆ ಅವನೊಡನೆ ಮಾತ್ರವೇ ನಾವು ಯುದ್ಧಮಾಡುತ್ತೇವೆ.”

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಭೀಷ್ಮರ ಸಮಾಧಾನೋಕ್ತಿ

ಜನಮೇಜಯ! ಮಾತಿಗೆ ಮಾತು ಬೆಳೆದು ಕೌರವಪ್ರಮುಖರಲ್ಲಿ

ಅಸಮಾಧಾನವು ತಲೆದೋರಿತು. ಆ ಸಮಯದಲ್ಲಿ ಪ್ರಾಜ್ಞರಾದ ಭೀಷ್ಮರು ದುರ್ಯೋಧನನನ್ನೂ ಮತ್ತು ಕೌರವಪ್ರಮುಖರನ್ನೂ ಕುರಿತು ಹೇಳಿದರು :

"ದುರ್ಯೋಧನ! ಅಶ್ವತ್ಥಾಮನು ವಿವೇಚನೆಯಿಂದ ಮಾತನಾಡಿದ್ದಾನೆ. ಕೃಪಾಚಾರ್ಯರೂ ವಿವೇಚಿಸಿಯೇ ಮಾತನಾಡಿದ್ದಾರೆ. ಕರ್ಣನಿಗಿರುವುದು ಕೇವಲ ಕ್ಷಾತ್ರದೃಷ್ಟಿ. ಕ್ಷಾತ್ರಧರ್ಮದಲ್ಲಿ ಧರ್ಮಾಧರ್ಮವಿವೇಚನೆಯಾಗಲೀ, ಆಗು-ಹೋಗುಗಳ ಪರಿಶೀಲನೆಯಾಗಲೀ ಇರುವುದಿಲ್ಲ. ಯುದ್ಧಕ್ಕೆ ಬಂದವರನ್ನು ಎದುರಿಸಿ ಯುದ್ಧಮಾಡಬೇಕೆಂಬುದೊಂದೇ ಮುಖ್ಯಧ್ಯೇಯ. ತದನುಸಾರವಾಗಿಯೇ ಕರ್ಣನೂ ಮಾತನಾಡಿದ್ದಾನೆ. ಆದರೆ :

**ಆಚಾರ್ಯೋ ನಾಭಿವಕ್ತವ್ಯಃ ಪುರುಷೇಣ ವಿಜಾನತಾ ।**
**ದೇಶಕಾಲೌ ತು ಸಮ್ಪ್ರೇಕ್ಷ್ಯ ಯೋದ್ಧವ್ಯಮಿತಿ ಮೇ ಮತಿಃ ॥೨॥**

ವಿಚಾರಶೀಲನಾದ, ವಿಚಾರಜ್ಞನಾದ ಪುರುಷನು ಆಚಾರ್ಯರನ್ನು ನಿಂದೆಮಾಡಲೂ ಕೂಡದು; ತಿರಸ್ಕರಿಸಲೂ ಬಾರದು. ದೇಶ-ಕಾಲಗಳನ್ನು ಚೆನ್ನಾಗಿ ಪರಿಶೀಲಿಸಿಯೇ ಯುದ್ಧಮಾಡಬೇಕೆಂಬ ಅಭಿಪ್ರಾಯವನ್ನು ನಾನೂ ಅನುಮೋದಿಸುತ್ತೇನೆ. ಪಂಡಿತನ ಗುಣ-ಲಕ್ಷಣಗಳೇನೆಂಬುದನ್ನೂ ಮತ್ತು ಅವನಿಗೆ ಯೋಗ್ಯವಾದ ಸ್ಥಾನ-ಮಾನಗಳಾವುವೆಂಬುದನ್ನೂ ಕರ್ಣನು ಹೇಳಿದ್ದಾನೆ. ಆದರೆ ವಿವೇಚನಾನಿಪುಣನಾದ ಪಂಡಿತನಿಗೆ ಯುದ್ಧದಲ್ಲಿ ಸ್ಥಾನವಿಲ್ಲವೆಂಬುದು ಅಸಂಗತವಾಗುತ್ತದೆ. ಪಂಡಿತನಾದವನು ಯುದ್ಧಸಮಯದಲ್ಲಿಯೂ ಕಾಲ-ದೇಶ-ವರ್ತಮಾನಗಳನ್ನು ವಿವೇಚಿಸಿ ಸಲಹೆ ನೀಡುವುದು ಯುಕ್ತವಾಗಿದೆ ಮತ್ತು ಅವನ ಸಲಹೆಯಂತೆಯೇ ನಡೆದುಕೊಳ್ಳುವುದೂ ಯೋಗ್ಯವಾಗಿದೆ. ಪ್ರಸಕ್ತಸಂದರ್ಭವನ್ನೇ ಗಣನೆಗೆ ತೆಗೆದುಕೊಳ್ಳೋಣ :

**ಯಸ್ಯ ಸೂರ್ಯಸಮಾಃ ಪಞ್ಚ ಸಪತ್ನಾಃ ಸ್ಯುಃ ಪ್ರಹಾರಿಣಃ ।**
**ಕಥಮಭ್ಯುದಯೇ ತೇಷಾಂ ನ ಪ್ರಮುಹ್ಯೇತ ಪಣ್ಡಿತಃ ॥೩॥**

ಸೂರ್ಯನಿಗೆ ಸಮಾನರಾದ ಮತ್ತು ವೀರರಾದ ಐವರು ಶತ್ರುಗಳು ನಿನಗಿದ್ದಾರೆ. ಅವರು ಇದುವರೆಗೂ ಪಡಬಾರದ ಕಷ್ಟಗಳನ್ನು ಅನುಭವಿಸಿ, ಈಗ ತಾನೇ ಅಭ್ಯುದಯಾಕಾಂಕ್ಷಿಗಳಾಗಿ ಹೊರಗೆ ಬಂದಿದ್ದಾರೆ. ಅಂತಹವರ

ವಿಷಯದಲ್ಲಿ, ಪೂರ್ವಾಪರವಿವೇಚನೆಯಲ್ಲಿ ತಜ್ಞನಾದ, ಕಾಲ-ದೇಶ-ವರ್ತಮಾನಗಳ ಸ್ವರೂಪವನ್ನು ಚೆನ್ನಾಗಿ ತಿಳಿದಿರುವ ಪಂಡಿತನು ಭ್ರಾಂತನಾಗದಿರಲು ಹೇಗೆ ತಾನೇ ಸಾಧ್ಯವಾದೀತು? (ಪಂಡಿತನಲ್ಲದವನು ಮಾತ್ರವೇ ಇದೊಂದನ್ನೂ ವಿವೇಚಿಸದೇ ಕಾರ್ಯಮಾಡಿಯಾನು.)

**ಸ್ವಾರ್ಥೇ ಸರ್ವೇ ವಿಮುಹ್ಯನ್ತಿ ಯೇಽಪಿ ಧರ್ಮವಿದೋ ಜನಾಃ ।**
**ತಸ್ಮಾದ್ರಾಜನ್ಬ್ರವೀಮ್ಯೇಷ ವಾಕ್ಯಂ ತೇ ಯದಿ ರೋಚತೇ ॥೪॥**

ಸ್ವಾರ್ಥಸಾಧನೆಯ ಪ್ರಸಂಗವು ಬಂದಾಗ, ಧರ್ಮವನ್ನು ಸಂಪೂರ್ಣವಾಗಿ ತಿಳಿದವರೂ ಮೋಹಗೊಳ್ಳುತ್ತಾರೆ. ಈ ಕಾರಣದಿಂದಾಗಿ, ದುರ್ಯೋಧನ! ನನ್ನ ಮಾತು ನಿನಗೆ ಪಥ್ಯವಿರುವುದಾದರೆ—ನಾನು ಕೆಲವು ಮಾತು ಗಳನ್ನು ಹೇಳುತ್ತೇನೆ ; ಕೇಳು." (ಭೀಷ್ಮರಾಡಿದುದು ಅಮೃತವಾಣಿ. ಅವರ ಈ ಮಾತು ಸರ್ವಕಾಲಕ್ಕೂ ಸತ್ಯವಾದುದು. ಧರ್ಮವಿದರು ಧರ್ಮವನ್ನು ಮತ್ತೊಬ್ಬರಿಗೆ ಬೋಧಿಸುವಾಗ ನಿಷ್ಕೃಷ್ಟವಾಗಿ ಹೇಳುತ್ತಾರೆ. ತಾವೇ ಅನುಸರಿಸಬೇಕಾಗಿ ಬಂದಾಗ ಭ್ರಾಂತರಾಗಿಬಿಡುತ್ತಾರೆ. ಅವರು ಹೇಳುವ ಧರ್ಮಕ್ಕೂ—ಮಾಡುವ ಕ್ರಿಯೆಗೂ ಸಂಬಂಧವೇ ಇರುವುದಿಲ್ಲ.)

ಭೀಷ್ಮರು ಮುಂದುವರಿದು ಹೇಳಿದರು :

"ಸೈನಿಕರಲ್ಲಿ ಮತ್ತು ಕುರುಯೋಧಮುಖ್ಯರಲ್ಲಿ ರಣೋತ್ಸಾಹವನ್ನು ತುಂಬಲು ಕರ್ಣನು ಈ ಮಾತುಗಳನ್ನು ಹೇಳಿರುವನೆಂದು ನಾವು ಭಾವಿಸಬಹುದಾಗಿದೆ. ಇದೇ ಅಭಿಪ್ರಾಯವನ್ನೇ ಇಟ್ಟುಕೊಂಡು ಅವನು ದ್ರೋಣಾಚಾರ್ಯರ ವಿಷಯದಲ್ಲಾಡಿರುವ ಕೆಲವು ಕಟುವಚನಗಳನ್ನೂ ಆಚಾರ್ಯಪುತ್ರನಾದ ಅಶ್ವತ್ಥಾಮನು ಕ್ಷಮಿಸಲಿ. ಏಕೆಂದರೆ : ನಮ್ಮ ಮುಂದಿರುವ ಕಾರ್ಯವು ಮಹತ್ತ್ವದ್ದಾಗಿದೆ. ನಾವು ದುರ್ಧರವಾದ ಪರಿಸ್ಥಿತಿಯನ್ನು ಎದುರಿಸಬೇಕಾಗಿದೆ.

**ನಾಯಂ ಕಾಲೋ ವಿರೋಧಸ್ಯ ಕೌನ್ತೇಯೇ ಸಮುಪಸ್ಥಿತೇ ।**
**ಕ್ಷನ್ತವ್ಯಂ ಭವತಾ ಸರ್ವಮಾಚಾರ್ಯೇಣ ಕೃಪೇಣ ಚ ॥೬॥**

ಕೌಂತೇಯನು ಹೋರಾಟಕ್ಕೆ ಬಂದಿರುವ ಈ ಸಮಯದಲ್ಲಿ ನಮ್ಮ

ನಮ್ಮಲ್ಲಿಯೇ ವಿರೋಧವನ್ನು ಕಟ್ಟಿಕೊಳ್ಳುವುದು ಖಂಡಿತವಾಗಿಯೂ ಉಚಿತವಲ್ಲ. ಆಚಾರ್ಯರಾದ ದ್ರೋಣರೂ, ಕೃಪರೂ, ಅಶ್ವತ್ಥಾಮನೂ ಕಾಲ-ದೇಶ-ವರ್ತಮಾನಗಳ ವಿವೇಚನೆಯಿಲ್ಲದೇ ಹೇಳಿರುವ ಕರ್ಣನ ಮಾತುಗಳನ್ನು ಕ್ಷಮಿಸಿಬಿಡಲಿ. ಸೂರ್ಯನಲ್ಲಿ ಪ್ರಭೆಯಿರುವಂತೆ-ನಿಮ್ಮಲ್ಲಿ ಮಹಾಸ್ತ್ರಗಳು ಮೂರ್ತಿಮತ್ತಾಗಿ ನೆಲೆಸಿವೆ. ಚಂದ್ರನಲ್ಲಿರುವ ಬೆಳದಿಂಗಳನ್ನು ಪ್ರತ್ಯೇಕಿಸಲಾಗದಂತೆ–ನಿಮ್ಮಲ್ಲಿ ಉಪಸ್ಥಿತವಾಗಿರುವ ಬ್ರಹ್ಮವಿದ್ಯೆಯನ್ನು ಪ್ರತ್ಯೇಕಿಸುವ ಸಾಧ್ಯತೆಯಿಲ್ಲ. ನಿಮ್ಮಲ್ಲಿ ಪ್ರತಿಷ್ಠಿತವಾಗಿರುವ ವೇದವಿದ್ಯೆ ಯಿಂದಲೂ, ಧನುರ್ವಿದ್ಯೆಯಿಂದಲೂ ಮತ್ತು ಉಪಲಬ್ಧವಾಗಿರುವ ಮಹಾಸ್ತ್ರಗಳ ಸಾನ್ನಿಧ್ಯದಿಂದಲೂ ನೀವು ಸೂರ್ಯ-ಚಂದ್ರರಂತೆಯೇ ಬೆಳಗು ತ್ತಿದ್ದೀರಿ. ಬ್ರಾಹ್ಮಣ್ಯವೂ ಮತ್ತು ಬ್ರಹ್ಮಾಸ್ತ್ರವೂ ನಿಮ್ಮಲ್ಲಿ ಮೂರ್ತಿಮತ್ತಾಗಿ ನೆಲೆಸಿವೆ. ಚತುರ್ವೇದಗಳನ್ನೂ ಅಧ್ಯಯನಮಾಡಿರುವುದರಿಂದ ಬ್ರಾಹ್ಮಣ್ಯ ವನ್ನೂ ತುಂಬಿಕೊಂಡಿರುತ್ತೀರಿ. ಬ್ರಹ್ಮಾಸ್ತ್ರವು ನಿಮ್ಮಲ್ಲಿ ಪ್ರತಿಷ್ಠಿತವಾಗಿರುವುದ ರಿಂದ ಕ್ಷಾತ್ರತೇಜಸ್ಸೂ ನಿಮ್ಮಲ್ಲಿ ಎದ್ದುಕಾಣುತ್ತಿದೆ. ವೇದಗಳು ಒಂದು ಕಡೆಯಲ್ಲಿರುತ್ತವೆ. ಕ್ಷಾತ್ರವಿದ್ಯೆಯು ಇನ್ನೊಂದು ಕಡೆಯಲ್ಲಿರುತ್ತದೆ. ಆದರೆ ಬ್ರಹ್ಮವಿದ್ಯೆ ಮತ್ತು ಕ್ಷತ್ರಿಯವಿದ್ಯೆ–ಇವೆರಡೂ ಒಬ್ಬರಲ್ಲಿ ಉಪಸ್ಥಿತವಾಗಿರುವ ಒಂದು ವಿಶೇಷವನ್ನು ನಾವಿಂದು ಭರತಕುಲಾಚಾರ್ಯರಾದ ದ್ರೋಣರಲ್ಲಿ ಮತ್ತು ಅವರ ಮಗನಾದ ಅಶ್ವತ್ಥಾಮನಲ್ಲಿ ಮಾತ್ರವೇ ಕಾಣುತ್ತಿದ್ದೇವೆ. ಇವರಿಬ್ಬರ ಹೊರತಾಗಿ ಬ್ರಾಹ್ಮ ಮತ್ತು ಕ್ಷಾತ್ರಧರ್ಮಗಳ ಸಹಯೋಗವಿರುವ ವ್ಯಕ್ತಿಯನ್ನು ನಾವಿದುವರೆಗೂ ಕಂಡೂ ಇಲ್ಲ ; ಕೇಳಿಯೂ ಇಲ್ಲ. ವೇದಾಂತ, ಪುರಾಣ, ಪುರಾತನೇತಿಹಾಸ, ಬ್ರಹ್ಮಾಸ್ತ್ರ ಮತ್ತು ಷಡಂಗಯುಕ್ತವಾದ ನಾಲ್ಕು ವೇದಗಳ ದಿವ್ಯಜ್ಞಾನವು ಪರಶುರಾಮನೊಬ್ಬನನ್ನು ಬಿಟ್ಟರೆ ನಮ್ಮ ದ್ರೋಣಾ ಚಾರ್ಯರಿಗಲ್ಲದೇ ಮತ್ತಾರಿಗೆ ತಾನೇ ಇರುವುದು? ಆಚಾರ್ಯಪುತ್ರನ ಕ್ಷಮೆಯನ್ನು ಪುನಃ ಪ್ರಾರ್ಥಿಸುತ್ತೇನೆ. ಪರಸ್ಪರವಾಗಿ ವಿರೋಧವನ್ನು ಕಟ್ಟಿ ಕೊಳ್ಳುವ ಕಾಲವು ಇದಲ್ಲ. ಕೃಪಾಚಾರ್ಯರು ಹೇಳಿದಂತೆಯೇ ನಾವೆಲ್ಲರೂ ಒಟ್ಟಾಗಿ ಸೇರಿ ನಮ್ಮೊಡನೆ ಯುದ್ಧಕ್ಕೆ ಬರಲಿರುವ ಪಾಕಶಾಸನಿಯೊಡನೆ ಯುದ್ಧಮಾಡೋಣ.

**ಬಲಸ್ಯ ವ್ಯಸನಾನೀಹ ಯಾನ್ಯುಕ್ತಾನಿ ಮನೀಷಿಭಿಃ ।**
**ಮುಖ್ಯೋ ಭೇದೋ ಹಿ ತೇಷಾಂ ತು ಪಾಪಿಷ್ಠೋ ವಿದುಷಾಂ ಮತಃ ॥೧೬॥**

ಸೈನ್ಯಕ್ಕಿರುವ ಅನೇಕವ್ಯಸನಗಳಲ್ಲಿ (ಸೈನ್ಯಕ್ಕಿರುವ ಅಪಾಯಗಳಲ್ಲಿ) ಸೈನ್ಯದ ನಾಯಕರಲ್ಲಿಯೇ ಪರಸ್ಪರವಿರೋಧವು ಪ್ರಾಪ್ತವಾಗುವುದು–ಬಹಳ ಅನಿಷ್ಟಕಾರಕವಾದ ಅಪಾಯವೆಂದು ವಿದ್ವಾಂಸರ ಅಭಿಮತವಾಗಿದೆ."

ಭೀಷ್ಮರ ಹಿತೋಕ್ತಿಗಳನ್ನು ಕೇಳಿ ಅಶ್ವತ್ಥಾಮನು ಪುನಃ ಹೇಳಿದನು : "ಕುರುಕುಲಪಿತಾಮಹ! ನೀನು ಈ ಮಾತುಗಳನ್ನು ನಮ್ಮೊಡನೆ ಹೇಳುವ ಆವಶ್ಯಕತೆಯಿಲ್ಲ. ಸೈನ್ಯದ ನಾಯಕರಲ್ಲಿ ಪರಸ್ಪರವಿರೋಧವುಂಟಾಗ ಕೂಡದೆಂಬ ನೀತಿಯು ನಮಗೂ ತಿಳಿದಿದೆ. ಪರಸ್ಪರವಿರೋಧವನ್ನು ಕಲ್ಪಿಸುವುದಕ್ಕೇ ಆಗಲೀ, ಸೈನಿಕರಲ್ಲಿ ಭಯವನ್ನುಂಟುಮಾಡುವುದಕ್ಕೇ ಆಗಲೀ–ನಮ್ಮ ತಂದೆಯವರು ಅರ್ಜುನನನ್ನು ಹೊಗಳಲಿಲ್ಲ. ಅವರಿಗೆ ತಮ್ಮ ಪ್ರಿಯಶಿಷ್ಯನಾದ ಅರ್ಜುನನನ್ನು ಕಂಡೊಡನೆಯೇ ಹಿಂದಿನದೆಲ್ಲವೂ ಸ್ಮರಣೆಗೆ ಬಂದಿತು. ಪಾಂಡವರಿಗೆ ಕೌರವರು ಮಾಡಿದ ಅನ್ಯಾಯವನ್ನು ನೆನೆದು ಸ್ವಾಭಾವಿಕವಾಗಿಯೇ ನಮ್ಮ ತಂದೆಯವರು ಕುಪಿತರಾದರು. ಆಗವರು ಪಾರ್ಥನ ಪರಾಕ್ರಮವನ್ನು ಎತ್ತಿ ಹೇಳಿದರು. ಪಾರ್ಥನಲ್ಲಿ ಇಲ್ಲದಿರುವುದನ್ನೇನಾದರೂ ಅತಿಶಯಿಸಿ ಹೇಳಿರುವರೇ? ಇದನ್ನವರು ಸೈನಿಕರಲ್ಲಿ ಭಯಹುಟ್ಟಿಸುವ ಸಲುವಾಗಿ ಹೇಳಲಿಲ್ಲ. ಸೈನಿಕರನ್ನು ಎಚ್ಚರಿಸುವ ಸಲುವಾಗಿ ಹೇಳಿದರು. ಶತ್ರುವಾದ ಮಾತ್ರಕ್ಕೆ ಅವನ ಗುಣಗಳನ್ನು ಹೊಗಳಕೂಡದೆಂಬ ನಿಯಮವಿಲ್ಲ. ಅವನಲ್ಲಿರುವ ಗುಣಗಳನ್ನೂ ಗ್ರಹಿಸಬೇಕೆಂದೇ ಹಿರಿಯರು ಹೇಳುತ್ತಾರೆ.

**ಶತ್ರೋರಪಿ ಗುಣಾ ಗ್ರಾಹ್ಯಾ ದೋಷಾ ವಾಚ್ಯಾ ಗುರೋರಪಿ ।**
**ಸರ್ವಥಾ ಸರ್ವಯತ್ನೇನ ಪುತ್ರೇ ಶಿಷ್ಯೇ ಹಿತಂ ವದೇತ್ ॥೧೫॥**

ಒಳ್ಳೆಯ ಗುಣವು ಶತ್ರುವಿನಲ್ಲಿದ್ದರೂ ಅದನ್ನು ಗ್ರಹಿಸಬೇಕು. ಗುರುವಿನಲ್ಲಿರಬಹುದಾದ ದೋಷವನ್ನೂ ಮುಚ್ಚಿಡುವ ಕಾರಣವಿಲ್ಲ. ಅದನ್ನೂ ಬಹಿರಂಗಪಡಿಸಬಹುದು. ಸರ್ವಪ್ರಕಾರಗಳಿಂದಲೂ–ಸರ್ವ

ಪ್ರಯತ್ನಗಳಿಂದಲೂ ಮಗನ ಮತ್ತು ಶಿಷ್ಯನ ವಿಷಯದಲ್ಲಿ ಆಚಾರ್ಯನು ಹಿತವಾದ ಮಾತನ್ನೇ ಹೇಳಬೇಕು."

ಜನಮೇಜಯ! ಅಶ್ವತ್ಥಾಮನು ಹೀಗೆಂದು ಹೇಳಿದನಂತರ ದುರ್ಯೋಧನನು ದ್ರೋಣಾಚಾರ್ಯರನ್ನು ಕುರಿತು ಹೇಳಿದನು :

**ಆಚಾರ್ಯ ಏವ ಕ್ಷಮತಾಂ ಶಾನ್ತಿರತ್ರ ವಿಧೀಯತಾಮ್ ।**
**ಅಭಿದ್ಯಮಾನೇ ತು ಗುರೌ ತದ್ವೃತ್ತಂ ರೋಷಕಾರಿತಮ್ ॥೧೬॥**

"ಆಚಾರ್ಯರು ನಮ್ಮ ಮೇಲೆ ಕ್ಷಮೆಯನ್ನು ತೋರಲಿ. ಪುನಃ ಇಲ್ಲಿ ಶಾಂತವಾತಾವರಣವು ಪ್ರತಿಷ್ಠಿತವಾಗಲಿ. ಎಲ್ಲರ ಮನಸ್ಸುಗಳಲ್ಲಿಯೂ ನಾನಾಕಾರಣಗಳಿಂದ ಉದ್ಭವಿಸಿರುವ ಉದ್ವೇಗವು ಶಾಂತವಾಗಲಿ. ನಮ್ಮ ಪಕ್ಷದಲ್ಲಿ ಭಯವನ್ನು ಹುಟ್ಟಿಸುವುದು ನಮ್ಮ ಗುರುಗಳ ಅಭಿಪ್ರಾಯವಾಗಿರದಿದ್ದರೆ ಮತ್ತು ನಮ್ಮ ಗುರುಗಳು ಭೇದಭಾವವನ್ನು ಹೊಂದದಿದ್ದರೆ ರೋಷದಿಂದ ಮೊದಲಾದ ಈ ಪ್ರಸಂಗವು ಮುಗಿದಂತಾಗುತ್ತದೆ." ಹೀಗೆಂದು ಹೇಳಿ ದುರ್ಯೋಧನನು ಕರ್ಣ-ಭೀಷ್ಮ-ಕೃಪರೊಡನೆ ದ್ರೋಣಾಚಾರ್ಯರಲ್ಲಿ ಕ್ಷಮೆಯನ್ನು ಯಾಚಿಸಿದನು.

ದುರ್ಯೋಧನನು ಕ್ಷಮೆಯನ್ನು ಯಾಚಿಸಿದನಂತರ ದ್ರೋಣಾಚಾರ್ಯರು ಹೇಳಿದರು :

"ಭೀಷ್ಮನು ಹೇಳಿದ ಮೊದಲನೆಯ ಮಾತಿನಿಂದಲೇ ನಾನು ಪ್ರಸನ್ನನಾಗಿರುವೆನು. ಮುಂದೆ ಯಾವ ನೀತಿಯನ್ನನುಸರಿಸಿ ಯುದ್ಧಮಾಡಬೇಕೆಂಬುದನ್ನು ನಾವೀಗಲೇ ನಿಶ್ಚಯಿಸಿಬಿಡೋಣ. ಸಾಹಸದಿಂದಲೇ ಆಗಲೀ, ಪ್ರಮಾದದಿಂದಲೇ ಆಗಲೀ–ಅರ್ಜುನನು ದುರ್ಯೋಧನನ ಸಮೀಪಕ್ಕೂ ಬಾರದಿರುವಂತೆ ನಾವು ಸೈನ್ಯವ್ಯೂಹವನ್ನು ರಚಿಸಬೇಕು. ಯಾವ ರೀತಿಯಲ್ಲಿಯೂ ದುರ್ಯೋಧನನು ಪರಾಜಿತನಾಗದಂತೆ ಅಥವಾ ಬಂಧಿತನಾಗದಂತೆ ನೋಡಿಕೊಳ್ಳುವುದೇ ನಮ್ಮ ಇಂದಿನ ಮುಖ್ಯಕರ್ತವ್ಯವಾಗಿದೆ. ವನವಾಸದ ಮತ್ತು ಅಜ್ಞಾತವಾಸದ ಅವಧಿಯ ವಿಷಯವಾಗಿ ಹೇಳುವುದಾದರೆ ಅಜ್ಞಾತವಾಸದ ಅವಧಿಯು ಮುಗಿಯದೇ ಧನಂಜಯನು ನಮ್ಮೊಡನೆ ಯುದ್ಧಕ್ಕೆ ಬಂದಿರಲಾರನೆಂಬುದು ನನ್ನ ಅಭಿಪ್ರಾಯವಾಗಿದೆ.

ನಾವು ಆಕ್ರಮಿಸಿರುವ ವಿರಾಟನ ಗೋಧನವನ್ನು ಬಿಡಿಸಿಕೊಳ್ಳುವವರೆಗೂ ಅವನು ನಮ್ಮನ್ನು ಕ್ಷಮಿಸಲಾರನೆಂದೂ–ಯುದ್ಧದಿಂದ ವಿರತನಾಗಲಾರನೆಂದೂ ನಾನು ಭಾವಿಸುತ್ತೇನೆ. ಆದುದರಿಂದ ಈ ಸಮಯದಲ್ಲಿ ಅರ್ಜುನನು ಧೃತರಾಷ್ಟ್ರನ ಮಕ್ಕಳನ್ನು ನೇರವಾಗಿ ಆಕ್ರಮಿಸದಂತೆಯೂ ಮತ್ತು ನಮ್ಮ ಸೇನೆಯು ಯಾವ ಕಾರಣದಿಂದಲೂ ಪರಾಜಿತವಾಗದಂತೆಯೂ ಎಚ್ಚರಿಕೆಯನ್ನು ವಹಿಸಿ ಯುದ್ಧದ ನೀತಿಯನ್ನು ರೂಪಿಸಿಕೊಳ್ಳಬೇಕಾಗಿದೆ. ವನವಾಸದ ಮತ್ತು ಅಜ್ಞಾತವಾಸದ ಅವಧಿಯು ಮುಗಿದಿರುವುದೇ ಅಥವಾ ಇಲ್ಲವೇ–ಎಂಬ ಸಂಶಯವನ್ನು ಈ ಹಿಂದೆ ದುರ್ಯೋಧನನೂ ಪ್ರಸ್ತಾಪಿಸಿದ್ದನು. ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಹೇಳಬೇಕೆಂದೂ ಭೀಷ್ಮರನ್ನು ಕೇಳಿದ್ದನು. ಈ ವಿಷಯವಾಗಿ ಭೀಷ್ಮನು ತನ್ನ ಅಭಿಪ್ರಾಯವನ್ನು ಕೊಡಲೆಂಬುದು ನನ್ನ ಅಭಿಮತವಾಗಿದೆ."

೫೧ನೆಯ ಅಧ್ಯಾಯವು ಮುಗಿಯಿತು.

೫೨ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಭೀಷ್ಮರ ಸಮಯೋಚಿತವಾದ ಸಲಹೆ

ಪಾರಿಕ್ಷಿತ! ಭೀಷ್ಮನು ದುರ್ಯೋಧನಾದಿಗಳನ್ನು ಕುರಿತು ಹೇಳುತ್ತಾನೆ:

"ಕಲಾ, ಕಾಷ್ಠಾ, ಮುಹೂರ್ತ, ದಿನ, ಅರ್ಧಮಾಸ ( ಪಕ್ಷ ), ಮಾಸ, ನಕ್ಷತ್ರ, ಗ್ರಹ, ಋತು ಮತ್ತು ಸಂವತ್ಸರ–ಇವುಗಳಿಂದ ಕೂಡಿದ ಕಾಲಚಕ್ರವು ತಿರುಗುತ್ತಿರುತ್ತದೆ. ಪಕ್ಷಗಳ ಮತ್ತು ಮಾಸಗಳ ಕಾಲಾತಿರೇಕದಿಂದಲೂ, ಗ್ರಹ-ನಕ್ಷತ್ರಗಳಿಗೆ ಜ್ಯೋತಿಃಪ್ರದಗಳಾದ ಸೂರ್ಯ-ಚಂದ್ರರ ವ್ಯತಿಕ್ರಮದಿಂದಲೂ ಪ್ರತಿ ಐದು ವರ್ಷಗಳಿಗೆ ಎರಡು ಮಾಸಗಳು ಅಧಿಕವಾಗಿ ಬರುತ್ತಿರುತ್ತವೆ. ಪಾಂಡವರ ವನವಾಸದ ಹದಿಮೂರು ವರ್ಷಗಳಲ್ಲಿ ಐದು ತಿಂಗಳು ಮತ್ತು ಹನ್ನೆರಡು ದಿನಗಳು ಅಧಿಕವಾಗಿ ಬಂದಿರುತ್ತವೆಯೆಂದು ನಾನು ಭಾವಿಸುತ್ತೇನೆ. ಪಾಂಡವರು ಇದುವರೆಗೆ ಯಾವ ಪ್ರತಿಜ್ಞೆಗಳನ್ನು ಮಾಡಿರುತ್ತಾರೆಯೋ–ಅವೆಲ್ಲವನ್ನೂ ಯಥಾವತ್ತಾಗಿಯೇ

ಮುಗಿಸಿರುತ್ತಾರೆ. ಪ್ರತಿಜ್ಞಾತವಾದ ಕಾಲವು ಮುಗಿದಿದೆಯೆಂದು ನಿರ್ಧಾರವಾದನಂತರವೇ ಅರ್ಜುನನು ಇಲ್ಲಿಗೆ ಬಂದಿರುತ್ತಾನೆ. ಅವರೆಲ್ಲರೂ ಮಹಾತ್ಮರು. ಧರ್ಮಾರ್ಥಕೋವಿದರು. ಅವರೆಲ್ಲರಿಗೂ ಧರ್ಮಮೂರ್ತಿಯಾದ ಯುಧಿಷ್ಠಿರನೇ ರಾಜನಾಗಿರುತ್ತಾನೆ. ಹೀಗಿರುವಾಗ ಅವರು ಪ್ರತಿಜ್ಞೆಯ ವಿಷಯದಲ್ಲಿ ವ್ಯತಿಕ್ರಮವನ್ನೇಕೆ ಮಾಡುವರು? ಮೇಲಾಗಿ ಕುಂತಿಯ ಮಕ್ಕಳು ರಾಜ್ಯಲೋಭಿಗಳಲ್ಲ. ಅತ್ಯಂತದುಷ್ಕರವಾದ ಹನ್ನೆರಡು ವರ್ಷಗಳ ವನವಾಸವನ್ನು ಮುಗಿಸಿ ಒಂದು ವರ್ಷವನ್ನು ಅಜ್ಞಾತರಾಗಿಯೂ ಕಳೆದಿರುತ್ತಾರೆ. ಕೇವಲ ರಾಜ್ಯಪ್ರಾಪ್ತಿಗಾಗಿ ಅವರು ಅಧರ್ಮವೆನಿಸುವ ಕಾರ್ಯವನ್ನು ಮಾಡತಕ್ಕವರಲ್ಲ. ಅವರು ತಮ್ಮ ಪರಾಕ್ರಮವನ್ನೇ ತೋರಿಸಬೇಕೆನ್ನುವುದಾಗಿದ್ದರೆ–ಹನ್ನೆರಡು ವರ್ಷಗಳ ಕಾಲ ವನವಾಸಮಾಡುತ್ತಲೇ ಇರಲಿಲ್ಲ. ವನವಾಸಕ್ಕೆ ಹೊರಡುವ ಮೊದಲೇ ಅವರು ತಮ್ಮ ಪರಾಕ್ರಮವನ್ನು ತೋರಬಹುದಾಗಿದ್ದಿತು. ಅವರಿಗೆ ಪರಾಕ್ರಮಕ್ಕಿಂತಲೂ, ರಾಜ್ಯಕ್ಕಿಂತಲೂ ಹೆಚ್ಚಿನದು ಧರ್ಮ. ಧರ್ಮಪಾಶದಿಂದ ಬದ್ಧರಾದ ಅವರು ತಮ್ಮ ಕ್ಷತ್ರಿಯವ್ರತದಿಂದ (ಪ್ರತಿಜ್ಞೆಯಿಂದ) ಖಂಡಿತವಾಗಿಯೂ ಚಲಿಸತಕ್ಕವರಲ್ಲ.

**ಯಚ್ಚಾನೃತ ಇತಿ ಖ್ಯಾಯಾದ್ಯಃ ಸ ಗಚ್ಛೇತ್ಪರಾಭವಮ್ ।**
**ವೃಣುಯುರ್ಮರಣಂ ಪಾರ್ಥಾ ನಾನೃತತ್ವಂ ಕಥಂಚನ ॥೯॥**

ಯಾವನು ಈ ಅರ್ಜುನನನ್ನು–'ಅನೃತವಾದೀ'–ಎಂದು ಹೇಳುವನೋ ಅವನು ಪರಾಜಯಹೊಂದುವುದು ನಿಶ್ಚಯ. ಸುಳ್ಳಾಡುವವನು ಸೋಲನ್ನು ಹೊಂದಿಯೇ ಹೊಂದುತ್ತಾನೆ. ಏಕೆಂದರೆ : ಪಾಂಡವರು ಪ್ರಾಣವನ್ನಾದರೂ ತ್ಯಾಗಮಾಡುವರೇ ಹೊರತು ಸುಳ್ಳನ್ನೆಂದಿಗೂ ಹೇಳುವುದಿಲ್ಲ. (ಆದುದರಿಂದ ಅರ್ಜುನನು ಪ್ರತಿಜ್ಞಾತವಾದ ಕಾಲಕ್ಕಿಂತಲೂ ಮುಂದಾಗಿ–ರಾಜ್ಯಲೋಭದಿಂದಾಗಲೀ, ವಿಸ್ಮರಣೆಯಿಂದಾಗಲೀ ನಮ್ಮ ಮುಂದೆ ಬಂದಿರುವುದಿಲ್ಲ. ಅಜ್ಞಾತವಾಸದ ಕಾಲವು ಮುಗಿದಿರುವುದರಿಂದಲೇ ಅವನಿಲ್ಲಿಗೆ ಬಂದಿರುತ್ತಾನೆ.)

ಆದರೆ ಪ್ರತಿಜ್ಞಾತವಾದ ಅವಧಿಯು ಮುಗಿದನಂತರ ತಮಗೆ ಸಲ್ಲಬೇಕಾಗಿರುವ ರಾಜ್ಯವನ್ನು ಮಾತ್ರ ಖಂಡಿತವಾಗಿಯೂ ಬಿಟ್ಟುಬಿಡುವುದಿಲ್ಲ.

ಒಂದು ವೇಳೆ ತಮಗೆ ಸಲ್ಲಬೇಕಾದ ರಾಜ್ಯವನ್ನು ಸಾಕ್ಷಾತ್ ಇಂದ್ರನೇ ಆಕ್ರಮಿಸಿ ಸಂರಕ್ಷಿಸುತ್ತಿದ್ದರೂ ಕೂಡ ಅವನೊಡನೆಯೂ ಯುದ್ಧಮಾಡಿ ತಮ್ಮರಾಜ್ಯವನ್ನು ಹಿಂದಕ್ಕೆ ಪಡೆಯುವಷ್ಟು ಪರಾಕ್ರಮವು ಖಂಡಿತವಾಗಿಯೂ ಪಾಂಡವರಲ್ಲಿದೆ.

ಪ್ರಕೃತಸಂದರ್ಭದಲ್ಲಿ ಅರ್ಜುನನೆಷ್ಟೇ ಪರಾಕ್ರಮಿಯಾಗಿದ್ದರೂ ನಾವು ಯುದ್ಧದಿಂದ ವಿಮುಖರಾಗಬೇಕಾದ ಕಾರಣವಿಲ್ಲ. ಸರ್ವಾಸ್ತ್ರಕೋವಿದರಲ್ಲಿ ಶ್ರೇಷ್ಠನಾದ ಅರ್ಜುನನೊಡನೆ ನಾವೆಲ್ಲರೂ ಸೇರಿ ಯುದ್ಧಮಾಡೋಣ. ಲೋಕದಲ್ಲಿ ಸತ್ಪುರುಷರು ಯಾವ ಮಾರ್ಗವನ್ನು ಅನುಸರಿಸಿ ಹೋಗುವರೋ–ಅದೇ ಮಾರ್ಗದಲ್ಲಿಯೇ ನಾವೂ ಸಾಗೋಣ. ನಾವು ಆಕ್ರಮಿಸಿರುವ ಗೋಧನವು ಶತ್ರುಗಳಿಗೆ ಸೇರಿಹೋಗದಂತೆ ಎಚ್ಚರಿಕೆಯನ್ನು ವಹಿಸುವುದು ಯುಕ್ತವಾಗಿದೆ.

ದುರ್ಯೋಧನ! ಯುದ್ಧದಲ್ಲಿ ಯಾವ ಒಂದು ಪಕ್ಷದವರೂ ತಾವು ಗೆದ್ದೇ ಗೆಲ್ಲುತ್ತೇವೆಂಬುದನ್ನು ನಿರ್ಧರಿಸಿ ಹೇಳುವುದನ್ನು ನಾನಿದುವರೆಗೂ ಕಂಡಿಲ್ಲ ಮತ್ತು ಕೇಳಿಯೂ ಇಲ್ಲ. ಮೇಲಾಗಿ ನಮ್ಮೊಡನೆ ಯುದ್ಧಮಾಡಲು ಧನಂಜಯನೇ ಆಗಮಿಸಿದ್ದಾನೆ.

**ಸಮ್ಪ್ರವೃತ್ತೇ ತು ಸಂಗ್ರಾಮೇ ಭಾವಾಭಾವೌ ಜಯಾಜಯೌ ।**
**ಅವಶ್ಯಮೇಕಂ ಸ್ಪೃಶತೋ ದೃಷ್ಟಮೇತದಸಂಶಯಮ್ ॥೧೩॥**

ಎರಡು ದೇಶಗಳಿಗೆ ಅಥವಾ ಎರಡು ಪಕ್ಷಗಳಿಗೆ ಪರಸ್ಪರವಾಗಿ ಯುದ್ಧವು ಪ್ರಾರಂಭವಾದಾಗ–ಒಂದು ಪಕ್ಷಕ್ಕೆ ಲಾಭ ಮತ್ತು ಜಯಗಳೂ ಮತ್ತೊಂದು ಪಕ್ಷಕ್ಕೆ ನಷ್ಟ ಮತ್ತು ಅಪಜಯಗಳೂ ಉಂಟಾಗಿಯೇ ತೀರುತ್ತವೆ. ಜಯಾಪಜಯಗಳ ನಿರ್ಧಾರವಾಗದೇ ಯಾವುದೊಂದು ಯುದ್ಧವೂ ನಿಲ್ಲುವುದಿಲ್ಲ. ಆದುದರಿಂದ ನಾವು ಈ ಯುದ್ಧದಲ್ಲಿ ಸೋಲನ್ನೋ ಗೆಲುವನ್ನೋ ಅನುಭವಿಸಿಯೇ ತೀರಬೇಕು. ಇದರಲ್ಲಾವ ಸಂಶಯವೂ ಇಲ್ಲ. ಈ ಸಮಯದಲ್ಲಿ ನಾವು ಯುದ್ಧೋಚಿತವಾದ ಕಾರ್ಯವನ್ನಾದರೂ ಮಾಡಬೇಕು ಅಥವಾ ಧರ್ಮೋಚಿತವಾದ ಕಾರ್ಯವನ್ನಾದರೂ ಮಾಡಬೇಕು. ಎರಡು ಕಾರ್ಯಗಳಲ್ಲಿ ಯಾವುದಾದರೊಂದನ್ನು ಬಹುಶೀಘ್ರವಾಗಿ

ನಿರ್ಧರಿಸಬೇಕಾಗಿದೆ. ಸಾವಕಾಶಕ್ಕಿದು ಸಮಯವಲ್ಲ. ಧನಂಜಯನಾಗಲೇ ನಮ್ಮ ಸಮೀಪಕ್ಕೆ ಬಂದುಬಿಟ್ಟಿದ್ದಾನೆ.” (ಧರ್ಮಸಮ್ಮತವಾದ ಕಾರ್ಯವೆಂದರೆ ಪ್ರತಿಜ್ಞಾತವಾಗಿದ್ದ ಹದಿಮೂರು ವರ್ಷಗಳ ವನವಾಸ-ಅಜ್ಞಾತವಾಸಗಳನ್ನೂ ಮುಗಿಸಿ ಬಂದಿರುವ ಧನಂಜಯನನ್ನು ಆದರದಿಂದಲೇ ಸ್ವಾಗತಿಸಿ, ಯುದ್ಧಮಾಡದೇ ಪಾಂಡವರಿಗೆ ಅವರ ರಾಜ್ಯವನ್ನೊಪ್ಪಿಸುವ ಕಾರ್ಯವನ್ನು ಕೈಗೊಳ್ಳುವುದು. ಇದು ಧರ್ಮಮಾರ್ಗವೆಂದು ಭೀಷ್ಮರ ಅಭಿಪ್ರಾಯವಾಗಿದೆ. ಅವರ ಮಾತಿನ ಇಂಗಿತವನ್ನರಿತ ದುರ್ಯೋಧನನು ತನ್ನ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿಯೇ ಹೇಳುತ್ತಾನೆ.)

**ನಾಹಂ ರಾಜ್ಯಂ ಪ್ರದಾಸ್ಯಾಮಿ ಪಾಣ್ಡವಾನಾಂ ಪಿತಾಮಹ ।**
**ಯುದ್ಧೋಪಚಾರಿಕಂ ಯತ್ತು ತಚ್ಛೀಘ್ರಂ ಪ್ರವಿಧೀಯತಾಮ್ ॥**

“ಪಿತಾಮಹ! ಪಾಂಡವರು ಪ್ರತಿಜ್ಞಾತವಾದ ವನವಾಸವನ್ನು ಯಥಾವಿಧಿಯಾಗಿಯೇ ಮುಗಿಸಿ ಬಂದಿದ್ದರೂ ನಾನು ಅವರಿಗೆ ರಾಜ್ಯವನ್ನು ಕೊಡುವುದಿಲ್ಲ. ಆದುದರಿಂದ ಯುದ್ಧಕ್ಕೆ ಬೇಕಾದ ಸಲಕರಣೆಗಳನ್ನು ಶೀಘ್ರದಲ್ಲಿಯೇ ಸಿದ್ಧಮಾಡಿರಿ.”

ದುರ್ಯೋಧನನ ಮಾತನ್ನು ಕೇಳಿ ಭೀಷ್ಮನು ಹೇಳಿದನು :

“ದುರ್ಯೋಧನ! ಈ ಸಮಯದಲ್ಲಿಯೂ ನನ್ನ ಮನಸ್ಸಿಗೆ ಸ್ಫುರಣೆಯಾಗಿರುವ ಹಿತೋಕ್ತಿಯೊಂದನ್ನು ನಿನಗೆ ಹೇಳುತ್ತೇನೆ. ನಿನಗೆ ಶ್ರೇಯಸ್ಸುಂಟಾಗುವ ರೀತಿಯಲ್ಲಿ ಸಲಹೆಯನ್ನು ನೀಡುವುದು ಸರ್ವಥಾ ನನ್ನ ಕರ್ತವ್ಯವೆಂದು ನಾನು ಭಾವಿಸಿರುತ್ತೇನೆ. ನಮ್ಮಲ್ಲಿರುವ ಸೈನ್ಯದಲ್ಲಿ ನಾಲ್ಕನೆಯ ಒಂದು ಭಾಗವನ್ನು ತೆಗೆದುಕೊಂಡು ನೀನು ಹಸ್ತಿನಾಪುರಕ್ಕೆ ಹೋಗು. ನಮ್ಮ ಇನ್ನೊಂದು ಸೇನಾಭಾಗವು ನಾವು ಆಕ್ರಮಿಸಿರುವ ಹಸುಗಳನ್ನು ಹೊಡೆದುಕೊಂಡು ಹೋಗಲಿ. ಉಳಿದ ಅರ್ಧಭಾಗದ ಸೇನೆಯಿಂದ ನಾವು ಪಾಂಡವರೊಡನೆ ಯುದ್ಧಮಾಡುತ್ತೇವೆ. ನಾನು, ದ್ರೋಣರು, ಕರ್ಣ, ಅಶ್ವತ್ಥಾಮಾ ಮತ್ತು ಕೃಪರು–ಒಟ್ಟಾಗಿ ಸೇರಿ ನಮ್ಮೊಡನೆ ಯುದ್ಧಮಾಡಲು ಕೃತಸಂಕಲ್ಪನಾಗಿ ಬಂದಿರುವ ಬೀಭತ್ಸುವನ್ನು ಎದುರಿಸುತ್ತೇವೆ. ಮತ್ಸ್ಯರಾಜನೇ ಬರಲಿ ; ಅಥವಾ ಪುತ್ರನಾದ ಅರ್ಜುನನ ಸಹಾಯಕ್ಕೆ ಶತಕ್ರತುವೇ

ಬರಲಿ–ಅಲೆಗಳೊಡನೆ ಭೋರ್ಗರೆಯುತ್ತಾ ಉಕ್ಕಿಬರುವ ಸಮುದ್ರವನ್ನು ಸಮುದ್ರತೀರವು ತಡೆಹಿಡಿಯುವಂತೆ–ನಮ್ಮ ಎದುರಾಳಿಗಳೆಲ್ಲರನ್ನೂ ಎದುರಿಸಿ ಅವರೊಡನೆ ಯುದ್ಧಮಾಡುತ್ತೇವೆ."

ಜನಮೇಜಯ! ಭೀಷ್ಮನ ಮಾತುಗಳನ್ನು ಕುರುನಾಯಕರೆಲ್ಲರೂ ಸೂಕ್ತವಾಗಿದೆಯೆಂದೇ ಭಾವಿಸಿದರು. ಕುರುರಾಜನಾದ ದುರ್ಯೋಧನನೂ ಭೀಷ್ಮನ ಸಲಹೆಯಂತೆಯೇ ಎಲ್ಲವನ್ನೂ ಮಾಡಿದನು. ದುರ್ಯೋಧನನನ್ನೂ ಮತ್ತು ಆಕ್ರಮಿಸಿದ್ದ ಹಸುಗಳನ್ನೂ ಸೇನೆಯೊಡನೆ ಕಳುಹಿಸಿಕೊಟ್ಟನಂತರ ಭೀಷ್ಮನು ಉಳಿದ ಸೇನೆಯನ್ನೂ ಸೇನಾಮುಖ್ಯರನ್ನೂ ವ್ಯೂಹದ ಕ್ರಮದಲ್ಲಿ ನಿಲ್ಲಿಸಲು ಉಪಕ್ರಮಿಸಿ ಕುರುನಾಯಕರಿಗೆ ಹೇಳಿದನು :

**ಆಚಾರ್ಯ ಮಧ್ಯೇ ತಿಷ್ಠ ತ್ವಮಶ್ವತ್ಥಾಮಾ ತು ಸವ್ಯತಃ ।**
**ಕೃಪಃ ಶಾರದ್ವತೋ ಧೀಮಾನ್ಪಾರ್ಶ್ವಂ ರಕ್ಷತು ದಕ್ಷಿಣಮ್ ॥೨೨॥**

**ಅಗ್ರತಃ ಸೂತಪುತ್ರಸ್ತು ಕರ್ಣಸ್ತಿಷ್ಠತು ದಂಶಿತಃ ।**
**ಅಹಂ ಸರ್ವಸ್ಯ ಸೈನ್ಯಸ್ಯ ಪಶ್ಚಾತ್ಸ್ಥಾಸ್ಯಾಮಿ ಪಾಲಯನ್ ॥೨೩॥**

"ಆಚಾರ್ಯರೇ! ನೀವು ಸೈನ್ಯದ ಮಧ್ಯಭಾಗದಲ್ಲಿ ಉಪಸ್ಥಿತರಾಗಿರಿ. ಅಶ್ವತ್ಥಾಮನು ಸೈನ್ಯದ ವಾಮಪಾರ್ಶ್ವದಲ್ಲಿಯೂ–ಧೀಮಂತರಾದ ಕೃಪರು ಸೈನ್ಯದ ದಕ್ಷಿಣಪಾರ್ಶ್ವದಲ್ಲಿಯೂ ಸನ್ನದ್ಧರಾಗಿ ನಿಲ್ಲಲಿ. ಸೂತಪುತ್ರನಾದ ಕವಚಧರನಾದ ಕರ್ಣನು ಸೇನೆಯ ಅಗ್ರಭಾಗದಲ್ಲಿ ನಿಲ್ಲಲಿ. ನಾನು ಎಲ್ಲ ಸೇನೆಗಳ ಹಿಂಭಾಗದಲ್ಲಿ ಸರ್ವಸೈನ್ಯಗಳ ರಕ್ಷಕನಾಗಿ ನಿಲ್ಲುತ್ತೇನೆ."

೫೨ನೆಯ ಅಧ್ಯಾಯವು ಮುಗಿಯಿತು.

ಐ೩ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಅರ್ಜುನನು ದುರ್ಯೋಧನನ ಸೈನ್ಯವನ್ನು ಆಕ್ರಮಿಸಿ ಗೋವುಗಳನ್ನು ಹಿಂದಿರುಗಿಸಿದುದು

ಜನಮೇಜಯ! ಕುರುಪ್ರಮುಖರು ಮೇಲೆ ಹೇಳಿದ ರೀತಿಯಲ್ಲಿ ಯುದ್ಧಸನ್ನಾಹವನ್ನು ಮಾಡುತ್ತಿರಲಾಗಿ, ಅರ್ಜುನನು ತನ್ನ ರಥದ ನಿನಾದ ದಿಂದ ನಾಲ್ಕು ದಿಕ್ಕುಗಳನ್ನೂ ಪ್ರತಿಧ್ವನಿಸುತ್ತಾ ಕುರುಸೇನೆಯ ಕಡೆಗೆ



ಧಾವಿಸಿಬಂದನು. ಕುರುಪ್ರಮುಖರೂ ಮತ್ತು ಕುರುಸೈನಿಕರೂ ಅರ್ಜುನನ ರಥದ ಮೇಲೆ ಹಾರಾಡುತ್ತಿದ್ದ ಧ್ವಜದ ಅಗ್ರಭಾಗವನ್ನು ಮೊದಲು ವೀಕ್ಷಿಸಿದರು. ರಥಘೋಷವು ಅನವರತವಾಗಿ ಕೇಳಿಬರುತ್ತಿದ್ದಿತು.

ರಥಘೋಷದ ಜೊತೆಗೆ ಅರ್ಜುನನು ಪ್ರತಿಕ್ಷಣದಲ್ಲಿಯೂ ಮಾಡುತ್ತಿದ್ದ ಗಾಂಡೀವಧನುಸ್ಸಿನ ಟೇಂಕಾರಶಬ್ದವೂ ಸ್ಪಷ್ಟವಾಗಿ ಕೇಳುತ್ತಿದ್ದಿತು.

ಘೋರವಾಗಿ ಶಬ್ದಮಾಡುತ್ತಾ ಮಹಾರಥವು ಬರುತ್ತಿರುವುದನ್ನೂ ಆ ರಥದಲ್ಲಿ ಕುಳಿತು ಗಾಂಡೀವಧನುಸ್ಸನ್ನು ಧರಿಸಿ ಯುದ್ಧಮಾಡಲು ಬರುತ್ತಿರುವ ಅರ್ಜುನನನ್ನೂ ನೋಡಿ ಆಚಾರ್ಯದ್ರೋಣರು ತಮ್ಮ ಕಡೆಯವರನ್ನು ಕುರಿತು ಹೇಳಿದರು :

“ಪಾರ್ಥನ ರಥದ ಮೇಲ್ಭಾಗದಲ್ಲಿರುವ ಧ್ವಜವು ಬಹುದೂರದಲ್ಲಿರುವಾಗಲೇ ಬಹಳ ಪ್ರಕಾಶಮಾನವಾಗಿ ಕಾಣುತ್ತಿದೆ. ನಾವು ಕೇಳುತ್ತಿರುವ ಈ ಘೋರನಿನಾದವೂ ಅವನು ಕುಳಿತಿರುವ ಮಹಾರಥದ ಚಕ್ರಗಳದ್ದೇ ಆಗಿರುವುದು. ಧ್ವಜಾಗ್ರದಲ್ಲಿ ಕುಳಿತಿರುವ ವಾನರನೂ ಗರ್ಜನೆಮಾಡುತ್ತಿದ್ದಾನೆ. ರಥಿಕರಲ್ಲಿ ಶ್ರೇಷ್ಠನಾದ ಅರ್ಜುನನು ರಥಗಳಲ್ಲೆಲ್ಲಾ ಶ್ರೇಷ್ಠವಾದ ಮಹಾರಥದಲ್ಲಿ ಕುಳಿತು ಸಿಡಿಲಿಗೆ ಸಮಾನವಾದ ಧ್ವನಿಯನ್ನು ಹೊರಹೊಮ್ಮಿಸುವ, ಧನುಸ್ಸುಗಳಲ್ಲಿಯೇ ಅತ್ಯಂತಶ್ರೇಷ್ಠವಾದ ಗಾಂಡೀವಧನುಸ್ಸನ್ನು ಬಗ್ಗಿಸುತ್ತಿದ್ದಾನೆ.

ಅಹೋ! ಈ ಅಚ್ಚರಿಯನ್ನಾದರೂ ನೋಡಿರಿ. ಎವೆಯಿಕ್ಕುವುದರೊಳಗಾಗಿ ಅರ್ಜುನನ ಈ ಎರಡು ಬಾಣಗಳು ನನ್ನ ಎರಡು ಕಾಲುಗಳನ್ನೂ ಸ್ಪರ್ಶಮಾಡುತ್ತಿವೆ. ಮತ್ತೆರಡು ಬಾಣಗಳು ನನ್ನ ಕಿವಿಗಳನ್ನು ಸಂಸ್ಪರ್ಶಿಸಿ ಅನತಿದೂರದಲ್ಲಿ ಬಿದ್ದಿವೆ. ವನವಾಸ ಮತ್ತು ಅಜ್ಞಾತವಾಸಗಳನ್ನು ಮುಗಿಸಿ ಅತಿಮಾನುಷವಾದ ಅನೇಕಕಾರ್ಯಗಳನ್ನು ಸಾಧಿಸಿರುವ ಪಾರ್ಥನು ಈ ಎರಡು ಬಾಣಗಳ ಮೂಲಕವಾಗಿ ನನಗೆ ಅಭಿವಾದನಮಾಡುತ್ತಿದ್ದಾನೆ ಮತ್ತು ಮತ್ತೆರಡು ಬಾಣಗಳ ಮೂಲಕವಾಗಿ ನನ್ನ ಕಿವಿಗಳಲ್ಲಿ ಕುಶಲವನ್ನು ಕೇಳುತ್ತಿದ್ದಾನೆ. ಯುದ್ಧಮಾಡಲು ಅನುಜ್ಞೆಯನ್ನೂ ಕೇಳುತ್ತಿರಬಹುದು.

ನಾವು ನಮ್ಮ ಈ ಶಿಷ್ಯನನ್ನು ಬಹಳ ಕಾಲದ ನಂತರ ನೋಡುತ್ತಿದ್ದೇವೆ. ಪ್ರಜ್ಞಾವಂತನಾದ, ಬಂಧುಪ್ರಿಯನಾದ, ಪಾಂಡುಪುತ್ರನಾದ ಧನಂಜಯನು–ಇಂದು ದಿವ್ಯಶೋಭೆಯಿಂದ ಪ್ರಕಾಶಿಸುತ್ತಿದ್ದಾನೆ. ರಥದಲ್ಲಿ ಕುಳಿತಿರುವ, ಉತ್ತಮವಾದ ಬಾಣಗಳನ್ನು ಹೊಂದಿರುವ, ಸುಂದರವಾದ

ಎರಡು ಬತ್ತಳಿಕೆಗಳನ್ನು ಧರಿಸಿರುವ, ಶಂಖಪಾಣಿಯಾದ, ಸರ್ವಶ್ರೇಷ್ಠವಾದ ರಥದಲ್ಲಿ ಕುಳಿತಿರುವ, ಕಪಿಧ್ವಜವನ್ನು ಹೊಂದಿರುವ, ಅಭೇದ್ಯವಾದ ಕವಚ ವನ್ನು ಧರಿಸಿರುವ ಕಿರೀಟಧರನಾದ, ಖಡ್ಗಪಾಣಿಯಾದ, ಗಾಂಡೀವಧನು ರ್ಧರನಾದ ಪಾರ್ಥನು–ಸ್ರುಕ್, ಸ್ರುವ, ಆಜ್ಯಪಾತ್ರೆ, ಪ್ರೋಕ್ಷಣೀಪಾತ್ರೆ, ಪ್ರಣೀತಾಪಾತ್ರೆ–ಇವೇ ಮೊದಲಾದ ಹೋಮಸಾಧನಗಳಿಂದ ಪರಿವೃತ ನಾದ, ಘೃತಸಿಕ್ತನಾಗಿ ಧಗ-ಧಗಿಸುತ್ತಿರುವ ಯಜ್ಞೇಶ್ವರನಂತೆಯೇ ಪ್ರಕಾಶಿಸು ತ್ತಿದ್ದಾನೆ.”

ದ್ರೋಣರು ಈ ರೀತಿಯಲ್ಲಿ ಪಾರ್ಥನನ್ನು ಶ್ಲಾಘನೆಮಾಡುತ್ತಿರಲಾಗಿ, ಅರ್ಜುನನು ಯುದ್ಧಸನ್ನದ್ಧವಾಗಿದ್ದ ಕೌರವಸೇನೆಯನ್ನು ನೋಡಿ ತನ್ನ ಸಾರಥಿಯಾದ ಉತ್ತರಕುಮಾರನಿಗೆ ಹೇಳಿದನು : “ಉತ್ತರಕುಮಾರ! ನನ್ನ ಬಾಣಗಳು ಬೀಳುವಷ್ಟು ದೂರದ ಸ್ಥಳದಲ್ಲಿ ಕುದುರೆಗಳ ಕಡಿವಾಣಗಳನ್ನು ಸೆಳೆದು ಹಿಡಿದು ನಿಲ್ಲಿಸು. ಈ ಮಹಾಸೈನ್ಯದಲ್ಲಿ ಕುರುಕುಲಾಧಮನಾದ ದುರ್ಯೋಧನನೆಲ್ಲಿದ್ದಾನೆಂಬುದನ್ನು ನೋಡಬೇಕಾಗಿದೆ. ಅವನೆಲ್ಲಿರುವ ನೆಂಬುದನ್ನು ನಾನು ಚೆನ್ನಾಗಿ ತಿಳಿದುಕೊಳ್ಳುವವರೆಗೂ ನೀನು ರಥವನ್ನು ಅಲ್ಲಿಯೇ ನಿಲ್ಲಿಸಿರಬೇಕು. ಮಹಾಮಾನಿಷ್ಠನಾದ ಅವನು ಎಲ್ಲಿರುವನೆಂಬು ದನ್ನು ತಿಳಿದು, ಉಳಿದ ಕುರುಯೋಧರೆಲ್ಲರನ್ನೂ ಅನಾದರಣೆಮಾಡಿ ಅವನ ಮೇಲೆಯೇ ಹೋಗಿ ಬೀಳುತ್ತೇನೆ. ಅವನೊಬ್ಬನನ್ನು ಪರಾಜಯಗೊಳಿ ಸಿದರೆ ಇವರೆಲ್ಲರನ್ನೂ ಪರಾಜಯಗೊಳಿಸಿದಂತೆಯೇ ಆಗುತ್ತದೆ. ಉತ್ತರಕುಮಾರ! ಅಲ್ಲಿ ನೋಡು. ಸೇನೆಯ ಮಧ್ಯಭಾಗದಲ್ಲಿ ಆಚಾರ್ಯರಾದ ದ್ರೋಣರಿದ್ದಾರೆ. ವಾಮಪಾರ್ಶ್ವದಲ್ಲಿ ಅಶ್ವತ್ಥಾಮನಿದ್ದಾನೆ. ಮಹಾಧನುರ್ಧಾರಿಗಳಾದ ಕೃಪ-ಕರ್ಣ-ಭೀಷ್ಮರೂ ಯುದ್ಧಸನ್ನದ್ಧರಾಗಿ ಬಂದಿರುತ್ತಾರೆ. ಆದರೆ ಈ ಸಮೂಹದಲ್ಲಿ ನಾನು ರಾಜನನ್ನು ಮಾತ್ರ ಕಾಣುತ್ತಿಲ್ಲ. ಜೀವಗಳ್ಳನಾದ ಈ ದುರ್ಯೋಧನನು ಹಸುಗಳನ್ನು ಹೊಡೆದುಕೊಂಡು ದಕ್ಷಿಣಭಾಗದಲ್ಲಿರುವ ಹಸ್ತಿನಾಪುರಕ್ಕೆ ಹೋಗುವ ಮಾರ್ಗವನ್ನು ಹಿಡಿದು ಹೋಗುತ್ತಿರಬಹುದೆಂದು ನಾನು ಸಂಶಯಿಸುತ್ತೇನೆ. ನಾವು ಇವರನ್ನೆದುರಿಸಿ ಯುದ್ಧಮಾಡುವ ಕಾರಣವಿಲ್ಲ. ಇವರೆಲ್ಲರನ್ನೂ

ನಿರ್ಲಕ್ಷಿಸಿ ನೀನೀಗಲೇ ದುರ್ಯೋಧನನನ್ನು ಹಿಂಬಾಲಿಸು. ದುರ್ಯೋಧನನಿರುವೆಡೆಗೆ ರಥವನ್ನು ಓಡಿಸು. ಅಲ್ಲಿಗೆ ಹೋಗಿ ನಾನು ಅವನೊಡನೆಯೇ ಯುದ್ಧಮಾಡುತ್ತೇನೆ. ಫಲವಿಲ್ಲದ (ಹಸುಗಳನ್ನು ಬಿಡಿಸಿಕೊಳ್ಳದ) ಯುದ್ಧವೇತಕ್ಕೆ? ಅವನನ್ನು ಪರಾಜಯಗೊಳಿಸಿ, ನಮ್ಮ ಹಸುಗಳನ್ನು ಬಿಡಿಸಿಕೊಂಡೇ ಹಿಂದಿರುಗುತ್ತೇನೆ.”

ಅರ್ಜುನನು ಹೀಗೆಂದು ಹೇಳಿದೊಡನೆಯೇ ಉತ್ತರನು ಕುರುಸೇನಾಭಿಮುಖವಾಗಿ ಮುನ್ನುಗ್ಗಿ ಹೋಗುತ್ತಿದ್ದ ಕುದುರೆಗಳ ಕಡಿವಾಣಗಳನ್ನು ಬಹಳ ಕಷ್ಟದಿಂದ ಹಿಡಿದು ನಿಲ್ಲಿಸಿ, ದುರ್ಯೋಧನನು ಹೋಗುತ್ತಿದ್ದ ಮಾರ್ಗದ ಕಡೆಗೆ ರಥವನ್ನು ತಿರುಗಿಸಿದನು.

ಚತುರಂಗಬಲವನ್ನೂ ನಿರ್ಲಕ್ಷಿಸಿ ಅರ್ಜುನನು ಬೇರೆಯ ಕಡೆಗೆ ರಥವನ್ನು ತಿರುಗಿಸಿಕೊಂಡು ರಭಸದಿಂದ ಹೋಗುತ್ತಿರುವುದನ್ನು ಕಂಡು ಅರ್ಜುನನ ಅಭಿಪ್ರಾಯವೇನಿರಬಹುದೆಂಬುದನ್ನೂ ಊಹಿಸಿದ, ಕೃಪರು ಸೇನಾಪ್ರಮುಖರನ್ನು ಕುರಿತು ಹೇಳಿದರು :

“ನಮ್ಮ ದಕ್ಷಿಣಪಾರ್ಶ್ವದಲ್ಲಿರುವ ಹಸ್ತಿನಾಪುರದ ಮಾರ್ಗವನ್ನು ಹಿಡಿದು ಕಿರೀಟಿಯು ಹೋಗುತ್ತಿರುವುದನ್ನು ನೋಡಿದರೆ–ದುರ್ಯೋಧನನಿಲ್ಲದ ಈ ಸೇನೆಯೊಡನೆ ಕಿರೀಟಿಗೆ ಯುದ್ಧಮಾಡುವ ಇಚ್ಛೆಯಿಲ್ಲವೆಂದು ತೋರುತ್ತದೆ. ಸ್ವಲ್ಪ ಹೊತ್ತಿನಲ್ಲಿಯೇ ಅವನು ದುರ್ಯೋಧನನನ್ನು ಎದುರಿಸಿ ನಿಲ್ಲುವುದಂತೂ ನಿಶ್ಚಯ. ಆದುದರಿಂದ ನಾವೀಗಲೇ ಬೀಭತ್ಸುವನ್ನು ಹಿಂಬಾಲಿಸಿ ಹೋಗಿ ಅವನ ರಥವನ್ನು ನಾಲ್ಕು ದಿಕ್ಕುಗಳಿಂದಲೂ ಆಕ್ರಮಣಮಾಡೋಣ.

ಬಹುಕುಪಿತನಾದ ಪಾರ್ಥನೊಡನೆ ಏಕಾಕಿಯಾಗಿ ಯಾರೂ ಯುದ್ಧ ಮಾಡಲಾರರು. ದೇವತೆಗಳಲ್ಲಿ ಇಂದ್ರನೊಬ್ಬನು–ಮಾನವರಲ್ಲಿ ದೇವಕೀ ಸುತನಾದ ಕೃಷ್ಣನೊಬ್ಬನು–ಈ ಇಬ್ಬರು ಮಾತ್ರವೇ ಇವನೊಡನೆ ಏಕಾಕಿಗಳಾಗಿ ಯುದ್ಧಮಾಡಬಲ್ಲರು. ಇವರಿಬ್ಬರನ್ನು ಬಿಟ್ಟರೆ ಪುತ್ರಸಹಿತರಾದ, ಭರದ್ವಾಜರ ಪುತ್ರರಾದ, ಮಹಾರಥರಾದ ದ್ರೋಣರು ಪಾರ್ಥನೊಡನೆ ಯುದ್ಧಮಾಡಿಯಾರು. ಇವರನ್ನು ಬಿಟ್ಟರೆ ಪಾರ್ಥನೆದುರಿಗೆ ನಿಂತು ಯುದ್ಧ

ಮಾಡುವವರು ಯಾರು ತಾನೇ ಇದ್ದಾರೆ? ದುರ್ಯೋಧನನೇನಾದರೂ ಪಾರ್ಥನೊಡನೆ ಮಾಡುವ ಯುದ್ಧದಲ್ಲಿ–ನದಿಯಲ್ಲಿ ಹಳೆಯ ದೋಣಿ ಯೊಂದು ಮುಳುಗಿಹೋಗುವಂತೆ–ಸೋತುಬಿಟ್ಟರೆ ಅತುಲೈಶ್ವರ್ಯದಿಂದಾ ಗಲೀ, ಅಪಾರವಾದ ಗೋಧನದಿಂದಾಗಲೀ ನಮಗಾಗುವ ಪ್ರಯೋಜನ ವಾದರೂ ಏನಿದೆ?"

ಕೃಪರು ಕುರುಪ್ರಮುಖರಿಗೆ ಈ ಪ್ರಕಾರವಾಗಿ ಹೇಳುತ್ತಿರುವ ಸಮಯದಲ್ಲಿಯೇ–ಅರ್ಜುನನು ಸೇನೆಯ ಸಮೀಪಕ್ಕೆ ಹೋಗಿ ತಾನು ಬೀಭತ್ಸುವೆಂಬುದನ್ನು ಶತ್ರುಸೈನ್ಯಕ್ಕೆ ಕೂಗಿ ಹೇಳಿ ತಿಳಿಯಪಡಿಸಿ, ಮಿಡತೆ ಗಳೋಪಾದಿಯಲ್ಲಿರುವ ತನ್ನ ಅಸಂಖ್ಯಾತವಾದ ಬಾಣಗಳಿಂದ ಶತ್ರುಸೈನ್ಯ ವನ್ನು ಮುಚ್ಚಿಬಿಟ್ಟನು. ಅರ್ಜುನನ ಬಾಣಗಳ ಸಮೂಹದಿಂದ ಪರಿವೃತ ರಾಗಿದ್ದ ಕುರುಸೈನಿಕರು ಭೂಮಿಯನ್ನಾಗಲೀ ಆಕಾಶವನ್ನಾಗಲೀ ನೋಡಲು ಅಸಮರ್ಥರಾಗಿದ್ದರು. ಎಲ್ಲೆಡೆಗಳಲ್ಲಿಯೂ ಬಾಣಗಳೇ ಕಾಣುತ್ತಿದ್ದುವೇ ಹೊರತು ಬೇರಾವುದೂ ಕಾಣುತ್ತಲೇ ಇರಲಿಲ್ಲ. ಯುದ್ಧಸನ್ನದ್ಧರಾಗಿದ್ದ ಯೋಧರು ಅಸಂಖ್ಯಾತವಾದ ಬಾಣಗಳ ಆಕ್ರಮಣದಿಂದ ಭ್ರಾಂತರಾಗಿ ಹೋದರು. ಆದರೆ ಬಾಣಗಳಿಗೆ ಹೆದರಿ ಯುದ್ಧದಿಂದ ಪಲಾಯನಮಾಡುವ ಮನಸ್ಸೂ ಅವರಿಗುಂಟಾಗಲಿಲ್ಲ. ಪಾರ್ಥನ ಹಸ್ತಲಾಘವವನ್ನು ಕಂಡು ಮನಸ್ಸಿನಲ್ಲಿಯೇ ಅವನನ್ನು ಪ್ರಶಂಸಿಸಿದರು.

ಅರ್ಜುನನು ಶತ್ರುಗಳಿಗೆ ರೋಮಾಂಚಕಾರಕವಾದ ಶಂಖಧ್ವನಿ ಯನ್ನು ಮಾಡಿದನು. ಧನುಸ್ಸುಗಳಲ್ಲೆಲ್ಲಾ ಅತ್ಯಂತಶ್ರೇಷ್ಠವಾದ ಗಾಂಡೀವದ ಶಿಂಜಿನಿಯನ್ನು ಸೆಳೆದು ಟೇಂಕಾರಮಾಡಿದನು. ವೀರಗರ್ಜನೆ ಮಾಡುವಂತೆ ಧ್ವಜದಲ್ಲಿದ್ದ ವಾನರನನ್ನೂ–ಇತರ ಭೂತಗಳನ್ನೂ ಪ್ರಚೋದಿಸಿದನು. ಅವನು ಮಾಡಿದ ಶಂಖನಿನಾದದಿಂದಲೂ, ರಥಚಕ್ರಗಳ ಕರ್ಕಶಧ್ವನಿ ಯಿಂದಲೂ, ಧನುಷ್ಟೇಂಕಾರದಿಂದಲೂ, ಧ್ವಜದಲ್ಲಿದ್ದ ಕಪಿಯ ಮತ್ತು ಭೂತಗಣಗಳ ವೀರಗರ್ಜನೆಗಳಿಂದಲೂ ಭೂಮಿಯೇ ಕಂಪಿಸಿತು. ಹಸುಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಸೈನಿಕರು ಭ್ರಾಂತರಾಗಿ ಅರ್ಜುನನ ಕಡೆಗೆ ನೋಡುತ್ತಿರುವಲ್ಲಿ–ಸಾವಿರಾರು ಗೋವುಗಳು ಬಾಲ

ಗಳನ್ನು ಮೇಲೆತ್ತಿ ಅಳ್ಳಾಡಿಸುತ್ತಾ 'ಅಂಬಾ' ಎಂದು ಕೂಗಿಕೊಳ್ಳುತ್ತಾ ದಕ್ಷಿಣದಿಕ್ಕಿನಲ್ಲಿದ್ದ ವಿರಾಟನಗರಿಯ ಕಡೆಗೆ ಓಡಲಾರಂಭಿಸಿದುವು.

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ಗೋಹರಣಪರ್ವ (ಮುಂದುವರಿದಿದೆ.)

## ಕರ್ಣಾರ್ಜುನರ ಯುದ್ಧ: ಅರ್ಜುನನ ವಿಜಯ

ಜನಮೇಜಯ! ಬಾಣಗಳನ್ನು ಸುರಿಸುತ್ತಾ ವೀರಗರ್ಜನೆಗಳಿಂದಲೂ, ಧನುಷ್ಟೇಂಕಾರದಿಂದಲೂ ಸೈನಿಕರನ್ನು ಬಹಳ ವೇಗದಿಂದ ಹಿಮ್ಮೆಟ್ಟುವಂತೆ ಮಾಡಿ ಗೋವುಗಳನ್ನು ಬಿಡಿಸಿಕೊಂಡನಂತರ, ಧನುರ್ಧರರಲ್ಲಿ ಶ್ರೇಷ್ಠನಾದ ಅರ್ಜುನನು ಯುದ್ಧಮಾಡಬೇಕೆನ್ನುವ ಆಶಯದಿಂದ ದುರ್ಯೋಧನನನ್ನು ಆಕ್ರಮಣಮಾಡಿದನು. ಸಾವಿರಾರು ಗೋವುಗಳು ಬಹಳ ವೇಗವಾಗಿ ವಿರಾಟನಗರಿಯ ಕಡೆಗೆ ಧಾವಿಸುತ್ತಿರುವುದನ್ನೂ ಮತ್ತು ಅವುಗಳನ್ನು ಪುನರಾಕ್ರಮಿಸಲು ಸಾಧ್ಯವಾಗದೇ ತಮ್ಮ ಕಡೆಯ ಸೈನಿಕರು ಭ್ರಾಂತರಾಗಿ ನಿಂತಿರುವುದನ್ನೂ ನೋಡುತ್ತಿದ್ದ ಕುರುನಾಯಕರು–ಅರ್ಜುನನು ಕೃತಕೃತ್ಯನಾದನೆಂದೇ ಭಾವಿಸಿದರು. ಮರುಕ್ಷಣದಲ್ಲಿಯೇ ದುರ್ಯೋಧನನಿಗೆ ಅಭಿಮುಖವಾಗಿ ಹೋಗುತ್ತಿರುವ ಪಾರ್ಥನನ್ನು ನೋಡಿ, ತಮ್ಮ ರಾಜನ ಪರಾಜಯವೂ ಆಗಿಬಿಡಬಹುದೆಂಬ ಕಾತರದಿಂದ ಕುರುಪ್ರಮುಖರೆಲ್ಲರೂ ಒಟ್ಟಾಗಿ ದುರ್ಯೋಧನನ ಸಹಾಯಕ್ಕೆ ಧಾವಿಸಿದರು.

ಚತುರಂಗಬಲಯುಕ್ತವಾದ ಸೈನ್ಯವನ್ನು ವ್ಯೂಹರಚನೆಯಲ್ಲಿ ನಿಲ್ಲಿಸಿರುವುದನ್ನೂ ಅಸಂಖ್ಯಾತವಾದ ಧ್ವಜಗಳನ್ನೂ ಕಂಡು ಶತ್ರುಹಂತಕನಾದ ಅರ್ಜುನನು ಮತ್ಸ್ಯರಾಜನ ಪುತ್ರನಾದ ಉತ್ತರನನ್ನು ಕುರಿತು ಹೇಳಿದನು :

"ಉತ್ತರಕುಮಾರ! ಚಿನ್ನದ ಕಡಿವಾಣಗಳನ್ನು ಧರಿಸಿರುವ ಈ ಶ್ವೇತ ವರ್ಣದ ಕುದುರೆಗಳನ್ನು ಇದೇ ಮಾರ್ಗದಲ್ಲಿಯೇ ಬಹುಶೀಘ್ರವಾಗಿ ಓಡಿಸು. ನಾನು ಕೂಡಲೇ ಕುರುಪ್ರಮುಖರನ್ನು ಎದುರಿಸಿ ಯುದ್ಧಮಾಡ

ಬೇಕಾಗಿದೆ. ನಾನು ಮೊದಲು ದುರ್ಯೋಧನನೊಡನೆಯೇ ನೇರವಾಗಿ ಯುದ್ಧಮಾಡಲು ಇಚ್ಛಿಸಿದ್ದೆನು. ಆದರೆ ಈಗ ಕುರುಪ್ರಮುಖರೆಲ್ಲರೂ ಒಟ್ಟಾಗಿ ದುರ್ಯೋಧನನ ಸಹಾಯಕ್ಕೆ ಬರುತ್ತಿದ್ದಾರೆ. ಅರಣ್ಯದಲ್ಲಿನ ಸಲಗವೊಂದು ಮತ್ತೊಂದು ಸಲಗದೊಡನೆ ಸೆಣೆಸಲಿಚ್ಛಿಸುವಂತೆ–ದುರಾತ್ಮನಾದ ಸೂತಪುತ್ರನು ನನ್ನೊಡನೆ ಯುದ್ಧಮಾಡಲು ಉತ್ಕಟಾಕಾಂಕ್ಷೆಯಿಂದಿರುತ್ತಾನೆ. ದುರ್ಯೋಧನನ ಆಶ್ರಯದಿಂದ ಕೊಬ್ಬಿಹೋಗಿ ಬಹಳ ದರ್ಪದಿಂದ ಕೂಡಿರುವ ಕರ್ಣನಿಗೆದುರಾಗಿ ರಥವನ್ನು ಬೇಗ ನಿಲ್ಲಿಸು."

ಅರ್ಜುನನ ಕುದುರೆಗಳು ಸಾಮಾನ್ಯವಾದ ಅಶ್ವಗಳಾಗಿರಲಿಲ್ಲ. ಬಹಳ ಎತ್ತರವಾಗಿದ್ದುವು. ವೇಗದಲ್ಲಿ ವಾಯುವನ್ನೂ ಮೀರಿಸಿದ್ದುವು. ಅವುಗಳಿಗೆ ಸುವರ್ಣಮಯವಾದ ಜೀನುಗಳನ್ನು ಹೊದ್ದಿಸಲಾಗಿತ್ತು. ಉತ್ತರಕುಮಾರನಿಂದ ಚೋದಿತವಾದೊಡನೆಯೇ ಆ ಕುದುರೆಗಳು ಶತ್ರುಪಕ್ಷದ ರಥಸೈನ್ಯವನ್ನು ಭೇದಿಸಿಕೊಂಡು ಒಳನುಗ್ಗಿ, ಪಾಂಡುಪುತ್ರನ ರಥವನ್ನು ಯುದ್ಧಭೂಮಿಯ ಮಧ್ಯಭಾಗದಲ್ಲಿ ನಿಲ್ಲಿಸಿದುವು.

ಅರ್ಜುನನು ಕರ್ಣನನ್ನು ಆಕ್ರಮಿಸಿ ನಿಂತಿರುವುದನ್ನು ಕಂಡ ಚಿತ್ರಸೇನ, ಸಂಗ್ರಾಮಜಿತ್, ಶತ್ರುಸಹ ಮತ್ತು ಜಯ–ಎಂಬ ನಾಲ್ವರು ಕುರುಪ್ರವೀರರು ಬಾಣಗಳನ್ನೂ, ಉದ್ದವಾದ ಭರ್ಜಿಗಳನ್ನೂ ಮೇಲೆತ್ತಿಕೊಂಡು ಕರ್ಣನ ಸಹಾಯಕ್ಕೆ ಧಾವಿಸಿ ಬಂದರು.

ಅವರನ್ನು ನೋಡಿ ಪುರುಷಪ್ರವೀರನಾದ ಅರ್ಜುನನು ಕೋಪದಿಂದ ಕಿಡಿ-ಕಿಡಿಯಾದನು. ಧನುಸ್ಸೆಂಬ ಜ್ವಾಲೆಯ ಮೂಲಕವಾಗಿ ತಾಪವೆಂಬ ಬಾಣಗಳನ್ನು ಅವ್ಯಾಹತವಾಗಿ ಪ್ರಯೋಗಿಸಿ–ಅರಣ್ಯವನ್ನು ದಾವಾಗ್ನಿಯು ಭಸ್ಮಮಾಡಿಬಿಡುವಂತೆ–ಶತ್ರುಪಕ್ಷದ ರಥಗಳನ್ನು ಧ್ವಂಸಮಾಡತೊಡಗಿದನು.

ಜನಮೇಜಯ! ಈ ರೀತಿಯಲ್ಲಿ ಘೋರವಾದ ಯುದ್ಧವು ಪ್ರಾರಂಭವಾಗಲಾಗಿ, ಭೀಮಸೇನನ ತಮ್ಮನಾದ, ಅತಿರಥನಾದ ಪಾರ್ಥನನ್ನು ಕುರುಪ್ರವೀರನಾದ ವಿಕರ್ಣನು ಭಯಂಕರವಾದ ನಿರಂತರಬಾಣಪ್ರಯೋಗದಿಂದ ಆಕ್ರಮಣಮಾಡಿದನು. ಶ್ರೇಷ್ಠವಾದ ಸುವರ್ಣದಿಂದ ಸಮಲಂಕೃತವಾದ ದೃಢವಾದ ಶಿಂಜಿನಿಯಿಂದ ಕೂಡಿದ್ದ ವಿಕರ್ಣನ ಧನುಸ್ಸನ್ನು ಅರ್ಜುನನು

ಕ್ಷಣಮಾತ್ರದಲ್ಲಿ ಕತ್ತರಿಸಿ, ವಿಕರ್ಣನ ರಥದ ಮೇಲಿದ್ದ ಧ್ವಜವನ್ನೂ ಕೆಳ ಗುರುಳಿಸಿದನು. ಧ್ವಜವು ಕೆಳಗುರುಳಿದನಂತರ ವಿಕರ್ಣನು ಪಲಾಯನ ಮಾಡಿದನು. ಅನಂತರ ಶತ್ರುಗಳಿಗೆ ಬಹಳವಾದ ಉಪದ್ರವವನ್ನು ಕೊಡು ತ್ತಿದ್ದ, ಅಮಾನುಷವಾದ ಕಾರ್ಯಗಳನ್ನು ಮಾಡುತ್ತಿದ್ದ ಪಾರ್ಥನ ಪರಾಕ್ರಮ ವನ್ನು ಸಹಿಸಲಾರದೆ ಅವನ ಪರಾಕ್ರಮವನ್ನು ಹೇಗಾದರೂ ಮಾಡಿ ಮುರಿಯಲೇಬೇಕೆಂಬ ಉತ್ಕಟೇಚ್ಛೆಯಿಂದ ಶತ್ರುಂತಪನೆಂಬ ಕುರುಪ್ರವೀರನು ಪಾರ್ಥನನ್ನು ಅನುಸ್ಯೂತವಾದ ಬಾಣಗಳ ಪ್ರಯೋಗಗಳಿಂದ ಬಹಳವಾಗಿ ಪೀಡಿಸಿದನು. ಕೌರವರ ರಥಸೈನ್ಯದ ಮಧ್ಯದಲ್ಲಿ ಒಂದೆಡೆಯಿಂದ ಮತ್ತೊಂದೆಡೆಗೆ ಅತಿವೇಗವಾಗಿ ಸಂಚರಿಸುತ್ತಿದ್ದ ಪಾರ್ಥನು ಅತಿರಥನಾದ ಶತ್ರುಂತಪರಾಜನ ಬಾಣಗಳಿಂದ ಘಾಸಿಪಟ್ಟವನಾಗಿ, ಮರುಕ್ಷಣದಲ್ಲಿಯೇ ಅವನ ಮೇಲೆ ಐದು ಬಾಣಗಳನ್ನೂ, ಅವನ ಸೂತನ ಮೇಲೆ ಹತ್ತು ಬಾಣಗಳನ್ನೂ ಪ್ರಯೋಗಿಸಿದನು. ಅರ್ಜುನನ ಆ ಬಾಣಗಳ ಪ್ರಹಾರದಿಂದ ಶತ್ರುಂತಪರಾಜನ ಸೂತನು ಒಡನೆಯೇ ಕೆಳಗುರುಳಿದನು. ಅರ್ಜುನನು ಬಹುತೀಕ್ಷ್ಣವಾದ, ಕವಚಭೇದಿಯಾದ ಮತ್ತೊಂದು ಬಾಣವನ್ನು ಸೆಳೆದು ಶತ್ರುಂತಪರಾಜನ ಮೇಲೆ ಪ್ರಯೋಗಿಸಿದೊಡನೆಯೇ–ಚಂಡಮಾರುತಕ್ಕೆ ಸಿಕ್ಕಿದ ವೃಕ್ಷವು ಪರ್ವತಶಿಖರದಿಂದ ಬೇರುಸಹಿತವಾಗಿ ಉರುಳಿ ಕೆಳಗೆ ಬೀಳು ವಂತೆ–ರಾಜನು ಅಸುವನ್ನು ತೊರೆದು ರಥದಿಂದ ಕೆಳಕ್ಕೆ ಬಿದ್ದನು. ಪ್ರಳಯ ಕಾಲದಲ್ಲಿ ಬೀಸುವ ಚಂಡಮಾರುತದಿಂದ ಮಹಾರಣ್ಯದಲ್ಲಿರುವ ಮಹಾವೃಕ್ಷ ಗಳೆಲ್ಲವೂ ಕಂಪಿಸುವಂತೆ–ನರರ್ಷಭನಾದ, ವೀರಶ್ರೇಷ್ಠನಾದ ಅರ್ಜುನನಿಂದ ನರರ್ಷಭರಾದ, ವೀರರಾದ ಕುರುಪ್ರಮುಖರು ಭಗ್ನರಾಗಿ ಹೋದರು.

ಪಾರ್ಥನಿಂದ ಹತರಾದ ನರಪ್ರವೀರರು ಪ್ರಾಣಗಳನ್ನು ತೊರೆದು, ಶೋಭಾಯಮಾನವಾದ ವೇಷ-ಭೂಷಣಗಳೊಡನೆ ಭೂಮಿಯ ಮೇಲೆ ಮಲಗಿದರು. ಜನಮೇಜಯ! ಇದರಲ್ಲಿ ಒಂದು ಅಚ್ಚರಿಯೇನೆಂದರೆ : ಇತರರಿಗೆ ವಸುವನ್ನು ( ಐಶ್ವರ್ಯವನ್ನು ) ಕೊಡಲು ಸಮರ್ಥರಾದ ಮತ್ತು ವಾಸವನಿಗೆ (ಇಂದ್ರನಿಗೆ) ಸಮಾನವಾದ ಪರಾಕ್ರಮವುಳ್ಳವರೆಲ್ಲರೂ ವಾಸವಜ ನಿಂದ ( ಅರ್ಜುನನಿಂದ ) ಆ ಯುದ್ಧದಲ್ಲಿ ಪರಾಜಿತರಾದರು. ಸತ್ತುಬಿದ್ದಿದ್ದ ಕೆಲವರು ಸ್ವರ್ಣಮಯವಾದ ಕವಚಗಳನ್ನೂ ಕೆಲವರು ಉಕ್ಕಿನಿಂದ ಮಾಡಿದ

ಕಪ್ಪಾದ ಕವಚಗಳನ್ನೂ ತೊಟ್ಟುಕೊಂಡಿದ್ದು–ಹಿಮವತ್ಪರ್ವತದ ತಪ್ಪಲಿನಲ್ಲಿ ಬಿದ್ದಿರುವ ಆನೆಗಳಂತೆಯೇ–ವಿರಾಜಿಸಿದರು.

ಈ ರೀತಿಯಲ್ಲಿ ಪುರುಷಪ್ರವೀರನಾದ ಗಾಂಡೀವಿಯು–ಬೇಸಿಗೆಯ ಕಾಲದಲ್ಲಿ ಅಗ್ನಿಯು ಅರಣ್ಯವನ್ನು ದಹಿಸುವಂತೆ–ಶತ್ರುಯೋಧರನ್ನು ಧ್ವಂಸ ಮಾಡುತ್ತಾ, ಒಂದು ದಿಕ್ಕಿನಿಂದ ಮತ್ತೊಂದು ದಿಕ್ಕಿಗೆ ವಾಯುವೇಗದಲ್ಲಿ ಸಂಚರಿಸುತ್ತಿದ್ದನು.

ವಸಂತಕಾಲದಲ್ಲಿ ಸುಂಟರಗಾಳಿಯು ಯಾವ ರೀತಿಯಲ್ಲಿ ವೃಕ್ಷಗಳ ಎಲೆಗಳನ್ನುದುರಿಸುವುದೋ ಮತ್ತು ಮೇಘಗಳನ್ನು ಚೆಲ್ಲಾಪಿಲ್ಲಿಯಾಗಿ ಮಾಡುವುದೋ–ಅದೇ ರೀತಿಯಲ್ಲಿ ರಣರಂಗದಲ್ಲಿ ಸುಂಟರಗಾಳಿಗೆ ಸದೃಶ ನಾದ, ಅತಿರಥನಾದ ಅರ್ಜುನನು ಅನೇಕಯೋಧರನ್ನು ತನ್ನ ಶರವರ್ಷ ದಿಂದ ತರಗೆಲೆಗಳಂತೆ ಕೆಳಗೆ ಬೀಳಿಸುತ್ತಾ, ಮತ್ತೆ ಕೆಲವರನ್ನು ಪಲಾಯಿತ ರಾಗುವಂತೆ ಮಾಡುತ್ತಾ ಸಂಚರಿಸುತ್ತಿದ್ದನು. ಅಧಿಕಸತ್ತ್ವಶಾಲಿಯಾದ, ಕಿರೀಟ ವನ್ನು ಧರಿಸಿದ್ದ ಮತ್ತು ಸುಂದರವಾದ ಮಾಲೆಯಿಂದ ಅಲಂಕೃತನಾಗಿದ್ದ ಅರ್ಜುನನು ಕೆಂಪುಕುದುರೆಗಳನ್ನು ಕಟ್ಟಿದ್ದ ರಥದಲ್ಲಿ ಕುಳಿತಿರುವ ಕರ್ಣನ ತಮ್ಮನಾದ ಸಂಗ್ರಾಮಜಿತನ ಕುದುರೆಗಳನ್ನು ಸಂಹರಿಸಿದನಂತರ ಒಂದೇ ಒಂದು ಬಾಣದಿಂದ ಸಂಗ್ರಾಮಜಿತನ ತಲೆಯನ್ನೂ ಕತ್ತರಿಸಿಬಿಟ್ಟನು. ತನ್ನ ತಮ್ಮನು ಪ್ರಾಣತೊರೆದು ರಥದಿಂದ ಕೆಳಗೆ ಬಿದ್ದುದನ್ನು ನೋಡಿ ಸೂತ ಪುತ್ರನಾದ ಕರ್ಣನು ತನ್ನ ಬಲವೆಲ್ಲವನ್ನೂ ಕೇಂದ್ರೀಕರಿಸಿಕೊಂಡು–ರೋಷ ಗೊಂಡ ಸಲಗವೊಂದು ದಂತಗಳನ್ನು ಮುಂದೆಮಾಡಿಕೊಂಡು ತನ್ನ ಎದು ರಾಳಿಯ ಮೇಲೆ ನುಗ್ಗಿಹೋಗುವಂತೆ–ಅಥವಾ ಗೂಳಿಯೊಂದರ ಮೇಲೆ ಹುಲಿಯು ಬೀಳುವಂತೆ–ಅರ್ಜುನನ ಮೇಲೆ ಬಿದ್ದನು. ಎವೆಯಿಕ್ಕುವುದ ರೊಳಗಾಗಿಯೇ ಕರ್ಣನು ತನ್ನೆದುರಾಗಿ ಬಂದನೆಂಬುದನ್ನು ಅರ್ಜುನನು ಭಾವಿಸುವುದರೊಳಗಾಗಿಯೇ ಕರ್ಣನು ಬಹುತೀಕ್ಷ್ಣವಾದ ಹನ್ನೆರಡು ಬಾಣಗಳನ್ನು ಪಾರ್ಥನ ಮೇಲೆ ಪ್ರಯೋಗಿಸಿದನು. ಇಷ್ಟು ಮಾತ್ರವಲ್ಲ ; ಅರ್ಜುನನ ರಥದ ಕುದುರೆಗಳನ್ನೂ ಘಾಸಿಪಡಿಸಿದನು. ಅರ್ಜುನನ ಸಾರಥಿಯಾದ ಉತ್ತರನಿಗೂ ಪೆಟ್ಟುತಪ್ಪಲಿಲ್ಲ. ಕರ್ಣನು ಗುರಿಯಿಟ್ಟು

ಪ್ರಯೋಗಿಸಿದ ಬಾಣವು ಉತ್ತರನ ಕೈಗಳನ್ನು ಘಾಸಿಪಡಿಸಿತು. ಆದರೆ ಕಿರೀಟಿಯು ತನ್ನನ್ನು ರಕ್ಷಣೆಮಾಡಿಕೊಳ್ಳುವುದರಲ್ಲಿ ಮಾತ್ರವೇ ನಿರತನಾಗ ಲಿಲ್ಲ. ಮರುಕ್ಷಣದಲ್ಲಿಯೇ ಚಿತ್ರ-ವಿಚಿತ್ರವಾದ ರೆಕ್ಕೆಗಳುಳ್ಳ ಗರುಡಪಕ್ಷಿಯು ಹಾವನ್ನು ಕಂಡೊಡನೆಯೇ ಮೇಲೆ ಬೀಳುವಂತೆ–ಅರ್ಜುನನು ಕರ್ಣನ ಮೇಲೆ ಬಿದ್ದನು.

ಕರ್ಣಾರ್ಜುನರು ಧನುರ್ಧಾರಿಗಳಲ್ಲಿಯೇ ಶ್ರೇಷ್ಠರೆನಿಸಿದ್ದರು. ಮಹಾ ಬಲಿಷ್ಠರಾಗಿದ್ದರು. ಎಂತಹ ಶತ್ರುಗಳನ್ನೂ ಎದುರಿಸಿ ಯುದ್ಧಮಾಡುವ ಸಾಮರ್ಥ್ಯವುಳ್ಳವರಾಗಿದ್ದರು. ಅಂತಹ ಇಬ್ಬರು ಮಹಾಯೋಧರು ಪರಸ್ಪರವಾದ ಯುದ್ಧಮಾಡಲು ಸನ್ನದ್ಧರಾಗಿರುವರೆಂಬುದನ್ನು ತಿಳಿದೊಡ ನೆಯೇ ಕುರುಪ್ರವೀರರು ತಮ್ಮ ತಮ್ಮ ಆಯುಧಗಳನ್ನು ಕೆಳಗಿಟ್ಟು ಮಹಾ ಯುದ್ಧದ ಪ್ರೇಕ್ಷಕರಾಗಿ ನಿಂತುಬಿಟ್ಟರು. ಕರ್ಣನು ತನ್ನೆದುರಿನಲ್ಲಿ ಬಂದೊಡನೆಯೇ ಅವನು ಹಿಂದೆ ಮಾಡಿದ್ದ ಅಪರಾಧಗಳನ್ನು ನೆನೆದ ಅರ್ಜುನನ ಕೋಪವು ಉಲ್ಬಣಿಸಿತು. ಸೇಡು ತೀರಿಸಿಕೊಳ್ಳಲು ಅವಕಾಶವು ಸಿಕ್ಕಿದುದಕ್ಕಾಗಿ ಅರ್ಜುನನಿಗೆ ಒಂದು ವಿಧವಾದ ಸಂತೋಷವೂ ಉಂಟಾ ಯಿತು. ಮರುಕ್ಷಣದಲ್ಲಿಯೇ ಅರ್ಜುನನು ಕರ್ಣನ ಅಶ್ವ-ರಥ-ಸಾರಥಿ ಗಳನ್ನೂ ಮತ್ತು ಕರ್ಣನನ್ನೂ ಘೋರವಾದ ಬಾಣಗಳ ಮಳೆಯಿಂದ ಮುಚ್ಚಿ ಬಿಟ್ಟನು. ಕೌರವರ ಪಕ್ಷದಲ್ಲಿದ್ದ ಅಶ್ವಸೇನೆ, ಗಜಸೇನೆ, ರಥಗಳೂ ಮತ್ತು ಪದಾತಿಸೈನ್ಯಗಳೂ ಅರ್ಜುನನ ಬಾಣಗಳ ಆಘಾತದಿಂದಾಗಿ ತತ್ತರಿಸತೊಡಗಿ ದುವು. ಕಿರೀಟಿಯ ಅನುಸ್ಯೂತವಾದ ಬಾಣಪ್ರಯೋಗದಿಂದಾಗಿ ಭೀಷ್ಮ ಪ್ರಮುಖರಾದ ಕುರುಯೋಧರು ಮುಚ್ಚಿಹೋದರು. ಅನೇಕ ಯೋಧರ ರಥಗಳು ಧ್ವಂಸಿತವಾದುವು. ಮರುಕ್ಷಣದಲ್ಲಿಯೇ ಮಹಾತ್ಮನಾದ ಕರ್ಣನು ಅರ್ಜುನನು ಬಿಡುತ್ತಿದ್ದ ಬಾಣಗಳ ಪ್ರವಾಹವನ್ನು ಅನುಸ್ಯೂತವಾಗಿ ಪ್ರಯೋಗಿಸಿದ ತನ್ನ ಬಾಣಗಳ ಸಮೂಹಗಳಿಂದ ಕತ್ತರಿಸಿ–ಪ್ರಜ್ವಲಿಸುವ ಯಜ್ಞೇಶ್ವರನಂತೆ–ತನ್ನ ರಥದಲ್ಲಿ ಧನುಷ್ಪಾಣಿಯಾಗಿ ಆತಂಕರಹಿತನಾಗಿ ಕುಳಿತುಕೊಂಡನು. ಕರ್ಣನ ಅತ್ಯದ್ಭುತವಾದ ಕೈಚಳಕವನ್ನು ಕಂಡು, ಅವನು ಮಾಡುತ್ತಿದ್ದ ಧನುಷ್ಟೇಂಕಾರವನ್ನು ಕೇಳಿ ಕುರುಯೋಧರು ಆನಂದಪರವಶರಾಗಿ ಕರತಾಡನಗಳನ್ನು ಮಾಡುತ್ತಿದ್ದರು. ಶಂಖಧ್ವನಿ

ಯಾಯಿತು. ಭೇರೀ-ಮೃದಂಗಾದಿಗಳ ನಿನಾದಗಳೂ ಸಿಂಹನಾದಗಳೂ ಕೇಳಿ ಬರುತ್ತಿದ್ದುವು. ಈ ವಿಧವಾದ ಹರ್ಷಧ್ವನಿಗಳಿಂದ ಕುರುಯೋಧರು ಕರ್ಣನನ್ನು ಬಹುವಾಗಿ ಕೊಂಡಾಡಿದರು.

ಇತ್ತಲಾಗಿ ಅರ್ಜುನನು ಕರ್ಣನು ಬಿಟ್ಟ ಬಾಣಗಳೆಲ್ಲವನ್ನೂ ಕ್ಷಣ ಮಾತ್ರದಲ್ಲಿ ಕತ್ತರಿಸಿ, ಗಾಂಡೀವಧನುಸ್ಸನ್ನು ಪುನಃ-ಪುನಃ ಟೇಂಕಾರ ಮಾಡುತ್ತಾ ವಿಜೃಂಭಿಸುತ್ತಿರಲಾಗಿ, ಅರ್ಜುನನ ರಥದ ಮೇಲಿದ್ದ ಪತಾಕೆ ಯಲ್ಲಿ ಉಪಸ್ಥಿತನಾಗಿದ್ದ ಹನುಮಂತನು ತನ್ನ ಬಾಲವನ್ನು ಮೇಲೆತ್ತಿ ಘೋರನಿನಾದಮಾಡುತ್ತಿರಲಾಗಿ, ಧ್ವಜದಲ್ಲಿದ್ದ ಇತರ ಭೂತಗಣಗಳೂ ಸಿಂಹನಾದಗಳನ್ನು ಮಾಡುತ್ತಿರಲಾಗಿ, ಕರ್ಣನೊಮ್ಮೆ ಸಿಂಹನಾದವನ್ನು ಮಾಡಿದನು. ಕರ್ಣನ ಸಿಂಹನಾದವನ್ನು ಕೇಳಿದೊಡನೆಯೇ ಬಹುಕುಪಿತ ನಾದ ಅರ್ಜುನನು ತನ್ನ ಬಾಣವರ್ಷದಿಂದ ಸೂತಪುತ್ರನನ್ನು ಘಾಸಿಪಡಿಸಿ, ಭೀಷ್ಮ-ದ್ರೋಣ-ಕೃಪರನ್ನೊಮ್ಮೆ ವೀಕ್ಷಿಸಿ, ಕರ್ಣನ ಸಾರಥಿ ಮತ್ತು ಕುದುರೆಗಳನ್ನೂ ಬಾಣಗಳ ಸಮೂಹದಿಂದ ಬಹುವಾಗಿ ಘಾಸಿಪಡಿಸಿದನು. ಒಡನೆಯೇ ಕರ್ಣನೂ ಕಾರ್ಮುಗಿಲು ಮಳೆಗರೆಯುವಂತೆಯೇ ಅರ್ಜುನನ ಮೇಲೆ ಬಾಣಗಳ ಮಳೆಗರೆದನು. ಮರುಕ್ಷಣದಲ್ಲಿ ಕಿರೀಟಮಾಲಾಧರನಾದ ಅರ್ಜುನನೂ ನಿಶಿತವಾದ ಬಾಣಗಳಿಂದ ಕರ್ಣನನ್ನು ಮುಚ್ಚಿಬಿಟ್ಟನು. ಕರ್ಣಾರ್ಜುನರು ಪರಸ್ಪರವಾಗಿ ಬಿಡುತ್ತಿದ್ದ ನಿಶಿತಾಸ್ತ್ರಗಳು ಯುದ್ಧ ಭೂಮಿಯ ಮೇಲ್ಭಾಗವನ್ನು ಕಾರ್ಮುಗಿಲಿನೋಪಾದಿಯಲ್ಲಿ ಮುಚ್ಚಿ ಬಿಟ್ಟುವು. ಎರಡು ರಥಗಳಲ್ಲಿ ಎದುರು-ಬದುರಾಗಿ ಕುಳಿತಿದ್ದ ಕರ್ಣಾರ್ಜು ನರು ಪ್ರೇಕ್ಷಕರಿಗೆ ಮೇಘದಿಂದ ಆಚ್ಛಾದಿತರಾದ ಸೂರ್ಯ-ಚಂದ್ರರಂತೆಯೇ ಕಾಣುತ್ತಿದ್ದರು. ಅರ್ಜುನನ ಸಾಮರ್ಥ್ಯವನ್ನು ಸಹಿಸದ ಆಶುಬಾಣ ಪ್ರಯೋಗದಲ್ಲಿ ಬಹುಸಮರ್ಥನಾದ ಕರ್ಣನು ಅರ್ಜುನನ ಸಾಮರ್ಥ್ಯ ವನ್ನು ಸಹಿಸದೇ ನಾಲ್ಕು ನಿಶಿತವಾದ ಬಾಣಗಳಿಂದ ಸಾರಥಿಯನ್ನೂ ಮತ್ತೆ ಮೂರು ಬಾಣಗಳಿಂದ ಪತಾಕೆಯಲ್ಲಿದ್ದ ಕಪಿಯನ್ನೂ ಘಾಸಿಪಡಿಸಿದನು. ಸಮರದಲ್ಲಿ ಶತ್ರುಗಳನ್ನು ಮರ್ದನಮಾಡುವ ಸಾಮರ್ಥ್ಯವುಳ್ಳ, ಗಾಂಡೀವಧರನಾದ, ಕುರುಶ್ರೇಷ್ಠನಾದ ಅರ್ಜುನನು ಕರ್ಣನ ಆ ಕಾರ್ಯ ದಿಂದ–ಮಲಗಿದ್ದಾಗ ಹೊಡೆದು ಮೇಲೆಬ್ಬಿಸಿದ ಸಿಂಹದಂತೆ–ರೋಷಾ

ವಿಷ್ಟನಾಗಿ ಶತ್ರುವಿನ ಬಳಿಗೆ ನೇರವಾಗಿ ಹೋಗುವ ಬಾಣಗಳಿಂದ ಕರ್ಣನನ್ನು ಪ್ರಹರಿಸಿದನು.

ಅದಕ್ಕೆ ಪ್ರತಿಯಾಗಿ ಕರ್ಣನೂ ನಿಶಿತವಾದ ಬಾಣಗಳನ್ನು ಅರ್ಜುನನ ಮೇಲೆ ಅನುಸ್ಯೂತವಾಗಿ ಪ್ರಯೋಗಿಸಿದನು. ಕರ್ಣನ ನಿಶಿತವಾದ ಬಾಣಗಳ ಜಾಲದಿಂದ ಘಾಸಿಪಟ್ಟ ಮಹಾತ್ಮನಾದ ಅರ್ಜುನನು ಅತಿಮಾನುಷವಾದ ತನ್ನ ಕೌಶಲದಿಂದ–ಸೂರ್ಯನು ಕಿರಣಗಳಿಂದ ಭೂಮಂಡಲವನ್ನೆಲ್ಲಾ ಆವರಿಸುವಂತೆ–ನಿಶಿತವಾದ ಬಾಣಗಳಿಂದ ಕರ್ಣನನ್ನು ಸಂಪೂರ್ಣವಾಗಿ ಮುಚ್ಚಿಬಿಟ್ಟನು. ಎದುರಾನೆಯಿಂದ ಹೊಡೆಯಲ್ಪಟ್ಟ ಸಲಗನಂತೆ–ಕರ್ಣನ ಬಾಣಾಘಾತದಿಂದ ಕಿಡಿ-ಕಿಡಿಯಾದ ಅರ್ಜುನನು ತೀಕ್ಷ್ಣವಾದ ಭಲ್ಲಗಳೆಂಬ ಹೆಸರಿನ ಬಾಣಗಳನ್ನು ಗಾಂಡೀವ ಧನುಸ್ಸಿಗೇರಿಸಿ, ಶಿಂಜಿನಿಯನ್ನು ಕಿವಿಯ ವರೆಗೂ ಸೆಳೆದು, ಸೂತಪುತ್ರನ ಎಲ್ಲ ಅವಯವಗಳಿಗೂ ಗುರಿಯಿಟ್ಟು ಹೊಡೆಯಲು ಉಪಕ್ರಮಿಸಿದನು. ಗಾಂಡೀವಧನುಸ್ಸಿನಿಂದ ವಿನಿರ್ಮುಕ್ತ ವಾದ, ವಜ್ರಾಯುಧಕ್ಕೆ ಸಮಾನವಾದ ಅರ್ಜುನಪ್ರೇಷಿತವಾದ ಬಾಣಗಳು ಕರ್ಣನ ತೋಳುಗಳನ್ನೂ, ಶಿರಸ್ಸನ್ನೂ, ಹಣೆಯನ್ನೂ, ಕುತ್ತಿಗೆಯನ್ನೂ ಮತ್ತು ಇತರ ಅಂಗಗಳನ್ನೂ ಬಹುವಾಗಿ ಘಾಸಿಪಡಿಸಿದುವು. ಬೇರೊಂದು ಆನೆಯಿಂದ ಸೋಲಿಸಲ್ಪಟ್ಟ ಆನೆಯಂತೆ–ಪಾರ್ಥನ ನಿಶಿತವಾದ ಬಾಣ ಗಳಿಂದ ಎಲ್ಲ ಅಂಗಗಳಲ್ಲಿಯೂ ಗಾಯಗೊಂಡ ಕರ್ಣನು ಸಂತಪ್ತನಾಗಿ ಯುದ್ಧಭೂಮಿಯನ್ನು ಬಿಟ್ಟು ಹೊರಟುಹೋದನು."

೫೪ನೆಯ ಅಧ್ಯಾಯವು ಮುಗಿಯಿತು.

## ಅರ್ಜುನನಿಂದ ಕೌರವಸೈನ್ಯಕ್ಕಾದ ಅಪಾರಹಾನಿ

ಜನಮೇಜಯ! ರಾಧೇಯನು ಪರಾಜಿತನಾಗಿ ರಣಾಂಗಣದಿಂದ ಹೊರಟುಹೋದನಂತರ–ದುರ್ಯೋಧನನೇ ಮೊದಲಾದ ಕುರುಯೋಧರು ತಮ್ಮ ತಮ್ಮ ಸೈನ್ಯಗಳೊಡನೆ ಅರ್ಜುನನನ್ನು ಆಕ್ರಮಿಸಿದರು. ಮಹೋದಧಿಯ ಉತ್ಕರ್ಷವನ್ನು ಅದರ ತೀರವು ತಡೆದು ನಿಲ್ಲಿಸುವಂತೆ– ಶರವರ್ಷಮಾಡುತ್ತಾ ಅವ್ಯಾಹತವಾಗಿ ನುಗ್ಗುತ್ತಿದ್ದ, ವ್ಯೂಹರೂಪವಾದ ಕೌರವಸೇನೆಯನ್ನು ಅರ್ಜುನನೊಬ್ಬನೇ ತಡೆದುನಿಲ್ಲಿಸಿದನು. ತನ್ನ ಮೇಲೆ ನುಗ್ಗಿಬರುತ್ತಿದ್ದ ಅಸಂಖ್ಯಾತಸೇನೆಯನ್ನು ನೋಡಿ ಶ್ವೇತವಾಹನನಾದ, ಬೀಭತ್ಸುವಾದ, ಕುಂತಿಯ ಪುತ್ರನಾದ ಪಾರ್ಥನು ದಿವ್ಯಾಸ್ತ್ರಗಳನ್ನು ಪ್ರಯೋಗಮಾಡುತ್ತಾ ಅಪಾರಸೇನೆಯನ್ನೂ ಏಕಾಕಿಯಾಗಿಯೇ ಎದುರಿಸಿ ನಿಂತನು. ಸೂರ್ಯದೇವನು ಕಿರಣಗಳಿಂದ ಭೂಮಿಯನ್ನು ಮುಚ್ಚಿಬಿಡುವಂತೆ–ಅರ್ಜುನನು ದಿವ್ಯಗಾಂಡೀವದಿಂದ ವಿನಿರ್ಮುಕ್ತವಾದ ಬಾಣಗಳ ಸಮೂಹದಿಂದ ಹತ್ತುದಿಕ್ಕುಗಳನ್ನೂ ಮುಚ್ಚಿಬಿಟ್ಟನು. ರಥಸೇನೆಯಲ್ಲಿಯೇ ಆಗಲೀ, ಅಶ್ವಸೇನೆಯಲ್ಲಿಯೇ ಆಗಲೀ, ಗಜಸೇನೆಯಲ್ಲಿಯೇ ಆಗಲೀ, ಪದಾತಿಗಳಲ್ಲಿಯೇ ಆಗಲೀ–ಅರ್ಜುನನ ಬಾಣಗಳಿಂದ ಗಾಯಗೊಳ್ಳದವರು ಯಾರೂ ಇರಲಿಲ್ಲ. ಅರ್ಜುನನ ಬಾಣಗಳು ನಾಟಿಕೊಳ್ಳದ ಎರಡು ಅಂಗುಲಗಳಷ್ಟು ಪ್ರದೇಶವೂ ಅವರ ಮೈಯಲ್ಲಿ ಇರಲಿಲ್ಲ. ಪಾರ್ಥನ ದಿವ್ಯಾಸ್ತ್ರಗಳ ಪ್ರಯೋಗವಿಧಾನ, ಅವನ ರಥಕ್ಕೆ ಕಟ್ಟಿದ್ದ ಕುದುರೆಗಳ ಚಲನಚಾತುರ್ಯ, ಕುದುರೆಗಳನ್ನು ನಡೆಸುವುದರಲ್ಲಿ ಉತ್ತರನಿಗಿದ್ದ ಕೌಶಲ, ಶಸ್ತ್ರಾಸ್ತ್ರಗಳ ಪ್ರಯೋಗಗಳಲ್ಲಿ ಅರ್ಜುನನು ಅನುಸರಿಸುತ್ತಿದ್ದ ಕ್ರಮ ಮತ್ತು ಬತ್ತಳಿಕೆಯಿಂದ ಬಾಣಗಳನ್ನು ತೆಗೆದುಬಿಡುವುದರಲ್ಲಿ ಅವನಿಗಿದ್ದ ಕೈಚಳಕ–ಇವುಗಳನ್ನು ನೋಡಿ ಶತ್ರುಗಳೂ ಅರ್ಜುನನನ್ನು ಶ್ಲಾಘನೆ ಮಾಡುತ್ತಿದ್ದರು. ಯುದ್ಧರಂಗದಲ್ಲಿ ಅರ್ಜುನನು–ಪ್ರಳಯಕಾಲದಲ್ಲಿ ಸರ್ವಪ್ರಾಣಿಗಳ ವಿನಾಶಕನಾದ ಕಾಲಾಗ್ನಿಯಂತೆಯೇ–ಕಾಣುತ್ತಿದ್ದನು. ಧಗಧಗನೆ ಪ್ರಜ್ವಲಿಸುವ ಯಜ್ಞೇಶ್ವರನಂತಿದ್ದ ಪಾರ್ಥನನ್ನು ಶತ್ರುಗಳು

ನೋಡಲೂ ಕೂಡ ಸಾಧ್ಯವಾಗುತ್ತಿರಲಿಲ್ಲ. ಅರ್ಜುನನ ಬಾಣಗಳಿಂದ ಪ್ರಹೃತರಾದ ಯೋಧರು–ಪರ್ವತದ ಸಮೀಪದಲ್ಲಿರುವ ಸೂರ್ಯಕಿರಣ ದಿಂದ ವ್ಯಾಪ್ತವಾದ ಮೋಡಗಳೋಪಾದಿಯಲ್ಲಿ–ಕಾಣುತ್ತಿದ್ದರು. ಪಾರ್ಥನು ಪ್ರಯೋಗಿಸಿದ ಬಾಣಗಳು ಸೈನಿಕರ ಶರೀರದೊಳಗೆ ನಾಟಿಕೊಂಡಿದ್ದುವು. ಆ ಸೈನಿಕರ ಸಮೂಹವನ್ನು ನೋಡಿದರೆ ಪುಷ್ಪಭರಿತವಾದ ಅಶೋಕವೃಕ್ಷಗಳ ಸ್ಮರಣೆಯುಂಟಾಗುತ್ತಿದ್ದಿತು. (ಸೈನ್ಯಗಳು ಪುಷ್ಪಿತವಾದ ಅಶೋಕವೃಕ್ಷಗಳ ವನಗಳಂತೆ ಶೋಭಿಸಿದುವು.)

ಅರ್ಜುನನ ಬಾಣಗಳ ಪ್ರಹಾರಗಳಿಂದ ಕತ್ತರಿಸಲ್ಪಟ್ಟ ಯೋಧರ ಸ್ವರ್ಣಮಯವಾದ ರತ್ನಹಾರಗಳೂ, ಪುಷ್ಪಮಾಲಿಕೆಗಳೂ, ಛತ್ರಗಳೂ ಮತ್ತು ಪತಾಕೆಗಳೂ ಕೆಳಗೆ ಬೀಳುತ್ತಲೇ ಇರಲಿಲ್ಲ. ಪಾರ್ಥನ ಬಾಣಗಳಿಂದ ಭಗ್ನವಾದ ಅವೆಲ್ಲವನ್ನೂ ವಾಯುದೇವನು ಹಾರಿಸಿಕೊಂಡು ಆಕಾಶದಲ್ಲಿ ಬಹಳ ದೂರದವರೆಗೆ ಒಯ್ಯುತ್ತಿದ್ದನು. ಅನೇಕರಥಗಳಲ್ಲಿ ಸಾರಥಿಗಳೇ ಇರುತ್ತಿರಲಿಲ್ಲ. ರಥಗಳೂ ಧ್ವಂಸಿತವಾಗಿದ್ದುವು. ಅಂತಹ ಸಂದರ್ಭದಲ್ಲಿ ಕುದುರೆಗಳು ಗಾಬರಿಗೊಂಡು ದಿಕ್ಕಾಪಾಲಾಗಿ ಧ್ವಸ್ತವಾದ ರಥಗಳ ಭಾಗ ಗಳನ್ನೇ ಎಳೆದುಕೊಂಡು ಓಡಿಹೋಗುತ್ತಿದ್ದುವು. ಪಾರ್ಥನ ಅವ್ಯಾಹತವಾದ ಬಾಣಗಳು ಆನೆಗಳ ಕಿವಿ, ಕಕ್ಷ, ಕೆಳತುಟಿ, ದಂತ ಮತ್ತು ಮರ್ಮಸ್ಥಾನಗಳಲ್ಲಿ ನೆಟ್ಟುಕೊಂಡಿದ್ದುವು. ಯಾತನೆಯನ್ನು ತಾಳಲಾರದೇ ಪರ್ವತೋಪಮವಾದ ಆನೆಗಳು ದಾರುಣವಾಗಿ ಘೀಳಿಡುತ್ತಾ ಅಸುವನ್ನು ತೊರೆದು ಕೆಳಗೆ ಬೀಳು ತ್ತಿದ್ದುವು. ಸ್ವಲ್ಪಹೊತ್ತಿನೊಳಗಾಗಿಯೇ ಕೌರವಸೇನೆಯ ಸಾವಿರಾರು ಆನೆಗಳು ಅಸುವನ್ನು ತೊರೆದು ಭೂಮಿಯ ಮೇಲೆ ಬಿದ್ದುವು. ಆ ದೃಶ್ಯ ವನ್ನು ನೋಡಿದರೆ ಕಾರ್ಮುಗಿಲಿನಿಂದ ಆಚ್ಛಾದಿತವಾದ ಆಕಾಶದಂತೆಯೇ ರಣರಂಗವು ಶೋಭಿಸುತ್ತಿದ್ದಿತು. ಯುಗಾಂತಸಮಯದಲ್ಲಿ (ಪ್ರಳಯ ಕಾಲದಲ್ಲಿ) ಕಾಲಾಗ್ನಿಯು ಸ್ಥಾವರ-ಜಂಗಮಗಳನ್ನು ಸಂಪೂರ್ಣವಾಗಿ ದಹಿಸಿಬಿಡುವಂತೆ–ಅರ್ಜುನನು ಆ ಯುದ್ಧದಲ್ಲಿ ತನ್ನ ಶತ್ರುಗಳನ್ನು ದಹಿಸಿ ಬಿಟ್ಟನು. (ಸಂಪೂರ್ಣವಾಗಿ ಧ್ವಂಸಮಾಡಿದನು.) ತನ್ನಲ್ಲಿದ್ದ ಸರ್ವಾಸ್ತ್ರಗಳ ತೇಜಸ್ಸಿನಿಂದಲೂ, ಧನುಷ್ಟೇಂಕಾರಗಳಿಂದಲೂ, ಧ್ವಜದಲ್ಲಿದ್ದ ಭೂತಗಣ ಗಳು ಮಾಡುತ್ತಿದ್ದ ಚೀತ್ಕಾರಗಳಿಂದಲೂ, ಆಂಜನೇಯನು ಪದೇ-ಪದೇ

ಮಾಡುತ್ತಿದ್ದ ಭೈರವನಿನಾದದಿಂದಲೂ, ಶಂಖಧ್ವನಿಯಿಂದಲೂ–ಪಾರ್ಥನು ದುರ್ಯೋಧನನ ಅಳಿದುಳಿದಿದ್ದ ಸೈನಿಕರ ಹೃದಯಗಳಲ್ಲಿಯೂ ಭಯೋತ್ಪಾದನೆ ಮಾಡಿದನು. ಅರ್ಜುನನನ್ನು ನೋಡುತ್ತಿದ್ದಂತೆಯೇ ಶತ್ರುಪಕ್ಷದ ರಥಸೈನಿಕರ ಶಕ್ತಿಯೇ ಕುಗ್ಗಿಹೋಗಿದ್ದಿತು. ಅವರ ಅಧೀರತೆಯನ್ನು ಕಂಡು ಅರ್ಜುನನು ಅವರ ಮೇಲೆ ಬಾಣಪ್ರಯೋಗಮಾಡಲು ಹಿಂಜರಿಯುತ್ತಿದ್ದನು. ಸೇನಾಪ್ರಮುಖರಿಂದ ಪ್ರಚೋದಿತರಾದ ಸೈನಿಕರು ಧೈರ್ಯವನ್ನು ತಂದುಕೊಂಡು ಪಾರ್ಥನ ಮೇಲೆ ಪುನಃ ಬೀಳಲು ಬರುತ್ತಿದ್ದರು.

ಕುಪಿತನಾದ ಅರ್ಜುನನು ಒಡನೆಯೇ ಸುತೀಕ್ಷ್ಣವಾದ ಅಗ್ರಭಾಗಗಳುಳ್ಳ, ರಕ್ತಪಿಪಾಸುಗಳಾದ ಬಾಣಗಳಿಂದ ಅಂತರಿಕ್ಷವನ್ನು ತುಂಬಿಬಿಟ್ಟನು. ಆ ಬಾಣಸಮೂಹಗಳು ರಕ್ತಪಾಯಿಗಳಾದ ಪಕ್ಷಿಗಳಂತೆಯೇ ಕಾಣುತ್ತಿದ್ದುವು. ಸೂರ್ಯನ ಕಿರಣಗಳಿಗೆ ದಿಗಂತಗಳೇ ಮೇರುಗಳಾಗಿರುವಂತೆ–ಅರ್ಜುನನ ಬಾಣಗಳಿಗೂ ದಿಗಂತಗಳೇ ಮೇರುಗಳಾಗಿದ್ದುವು. (ಅವನ ಬಾಣಗಳು ದಿಗಂತಗಳವರೆಗೂ ವ್ಯಾಪಿಸಿದ್ದುವು.) ಶತ್ರುಪಕ್ಷದ ರಥಿಗಳು ಅರ್ಜುನನು ತಮ್ಮ ಸಮೀಪಕ್ಕೆ ಬಂದಾಗ ಒಮ್ಮೆ ಮಾತ್ರ ಅರ್ಜುನನನ್ನು ನೋಡುತ್ತಿದ್ದರು. ಎರಡನೆಯ ಬಾರಿ ಅರ್ಜುನನನ್ನು ನೋಡಲು ಶಕ್ಯವಿರಲಿಲ್ಲ. ಏಕೆಂದರೆ : ಅರ್ಜುನನನ್ನು ಸಂದರ್ಶಿಸಿದ ಮರುಕ್ಷಣದಲ್ಲಿಯೇ ಆ ರಥಿಕರನ್ನು ಅಶ್ವ-ಸಾರಥಿಗಳ ಸಹಿತರಾಗಿ ಅರ್ಜುನನು ಯಮಲೋಕಕ್ಕೆ ಕಳುಹಿಸಿಬಿಡುತ್ತಿದ್ದನು. ಅವನ ತೀಕ್ಷ್ಣಬಾಣಗಳು ಯಾವ ವಿಧವಾದ ತಡೆಯೂ ಇಲ್ಲದೇ ಶತ್ರುವಿನ ಶರೀರದಲ್ಲಿ ನುಗ್ಗಿಹೊರಬರುತ್ತಿದ್ದಂತೆ–ಪಾರ್ಥನ ರಥವೂ ಯಾವ ವಿಧವಾದ ತಡೆಯೂ ಇಲ್ಲದೇ ಶತ್ರುಸೈನ್ಯದ ಮಧ್ಯದಲ್ಲಿ ನುಗ್ಗಿಹೋಗುತ್ತಿದ್ದಿತು. ಅನಂತವಾದ ಹೆಡೆಗಳನ್ನು ಧರಿಸಿರುವ ಆದಿಶೇಷನು ಸಮುದ್ರದಲ್ಲಿ ಸ್ವೇಚ್ಛೆಯಿಂದ ವಿಹರಿಸುವಂತೆ–ಅರ್ಜುನನು ರಣರಂಗದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಾ ಶತ್ರುಪಕ್ಷದ ಯೋಧರನ್ನು ಕ್ಷೋಭೆಗೊಳಿಸಿದನು. ಅರ್ಜುನನು ಬಾರಿ-ಬಾರಿಗೂ ಧನುಸ್ಸನ್ನು ಕಿವಿಯವರೆಗೂ ಸೆಳೆದು ಬಾಣಗಳನ್ನು ಬಿಡುತ್ತಿದ್ದಾಗಲೂ ಧನುಸ್ಸಿನ ಟೇಂಕಾರ ಶಬ್ದವು ಕೇಳಿಬರುತ್ತಿತ್ತು. ಅರ್ಜುನನ ಧನುಸ್ಸಿನ ಅಂತಹ ಟೇಂಕಾರವನ್ನು ಪ್ರಪಂಚದಲ್ಲಿರುವ ಯಾವ ಪ್ರಾಣಿಯೂ ಅದುವರೆಗೆ ಕೇಳಿಯೇ ಇರಲಿಲ್ಲ. ಅರ್ಜುನನು

ಬಿಟ್ಟ ಅಗ್ನಿರೂಪದ ಬಾಣಗಳು ಹಿಂದೆಯೇ ಹೇಳಿದಂತೆ ಆನೆಗಳ ದೊಡ್ಡದಾದ ಶರೀರದ ನಾನಾಭಾಗಗಳಲ್ಲಿ ನಾಟಿಕೊಂಡಿದ್ದುವು. ಬಾಣಗಳು ಚುಚ್ಚಿಕೊಂಡಿದ್ದಂತೆಯೇ ಅವುಗಳು ಅಸುವನ್ನು ತೊರೆದು ರಣರಂಗದಲ್ಲಿ ತಂಡ-ತಂಡವಾಗಿ ಬಿದ್ದಿದ್ದುವು. ಅವು–ಸೂರ್ಯನ ಕಿರಣಗಳಿಂದ ವ್ಯಾಪ್ತ ವಾದ ಮೋಡಗಳಂತೆ–ಕಾಣುತ್ತಿದ್ದುವು. ಅರ್ಜುನನ ರಥವು ರಣರಂಗದ ಸುತ್ತಲೂ ಬಹುವೇಗವಾಗಿ ಸಂಚರಿಸುತ್ತಿದ್ದಿತು. ಅರ್ಜುನನು ತನ್ನೆರಡು ಬಾಹುಗಳಿಂದಲೂ ಧನುಸ್ಸನ್ನು ಸೆಳೆದು ಬಾಣಗಳನ್ನು ಶತ್ರುಗಳ ಮೇಲೆ ಪ್ರಯೋಗಿಸುತ್ತಿದ್ದನು. ಅವನು ಪ್ರತಿಕ್ಷಣದಲ್ಲಿಯೂ ಶಿಂಜಿನಿಯನ್ನು ಪೂರ್ಣ ವಾಗಿ ಸೆಳೆದು ಬಾಣಗಳನ್ನು ಪ್ರಯೋಗಿಸುತ್ತಿದ್ದುದರಿಂದ ಪ್ರೇಕ್ಷಕರಿಗೆ ಅವನ ಧನುಸ್ಸು ಯಾವಾಗಲೂ ಮಂಡಲಾಕಾರವಾಗಿಯೇ ಇರುವುದೋ ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಿತು.

**ಪತನ್ತ್ಯರೂಪೇಷು ಯಥಾ ಚಕ್ಷೂಂಷಿ ನ ಕದಾಚನ ।**
**ನಾಲಕ್ಷ್ಯೇಷು ಶರಾಃ ಪೇತುಸ್ತಥಾ ಗಾಣ್ಡೀವಧನ್ವನಃ ॥೨೬॥**

ರೂಪಹೀನವಾದ ವಸ್ತುಗಳ ಮೇಲೆ ಕಣ್ಣುಗಳು ಹೇಗೆ ಬೀಳುವು ದಿಲ್ಲವೋ (ಆಕಾರವಿಲ್ಲದ ವಸ್ತುಗಳನ್ನು ಕಣ್ಣುಗಳು ಹೇಗೆ ನೋಡಲಾ ರವೋ)–ಅದೇ ರೀತಿಯಲ್ಲಿ ಗಾಂಡೀವಧನುರ್ಧರನಾದ ಅರ್ಜುನನ ಬಾಣ ಗಳು ಲಕ್ಷ್ಯವನ್ನು ಬಿಟ್ಟು ಬೇರೆಯ ಸ್ಥಳದಲ್ಲಿ ಒಮ್ಮೆಯಾದರೂ ಬೀಳು ತ್ತಿರಲಿಲ್ಲ.

**ಮಾರ್ಗೋ ಗಜಸಹಸ್ರಸ್ಯ ಯುಗಪದ್ಗಚ್ಛತೋ ವನೇ ।**
**ಯಥಾ ಭವೇತ್ತಥಾ ಜಜ್ಞೇ ರಥಮಾರ್ಗಃ ಕಿರೀಟಿನಃ ॥೨೭॥**

ಸಾವಿರಾರು ಆನೆಗಳು ಒಟ್ಟಾಗಿ ಅರಣ್ಯದಲ್ಲಿ ಹೋಗುತ್ತಿದ್ದರೆ ಅದೊಂದು ಮಾರ್ಗವಾಗಿಯೇ ಹೇಗೆ ಪರಿಣಮಿಸುತ್ತದೆಯೋ ಹಾಗೆಯೇ–ಪಾರ್ಥನ ದಿವ್ಯರಥವು ರಣರಂಗದ ಯಾವ ಭಾಗಕ್ಕೆ ಹೋದರೂ ಅದೊಂದು ಮಾರ್ಗವಾಗಿಯೇ ಪರಿಣಮಿಸುತ್ತಿದ್ದಿತು. ಸಾವಿರಾರು ಆನೆಗಳು ಒಟ್ಟಾಗಿ ಕಾಲಿಟ್ಟೊಡನೆಯೇ ಅರಣ್ಯದಲ್ಲಿನ ಮರ-ಗಿಡ-ಬಳ್ಳಿಗಳೆಲ್ಲವೂ ಧ್ವಂಸವಾಗಿ ಹೋಗಿ ಆ ಪ್ರದೇಶವು ಒಂದು ಮಾರ್ಗವಾಗಿ ಪರಿಣಮಿಸು

ವಂತೆ–ಅರ್ಜುನನ ರಥಕ್ಕೆ ಸಿಕ್ಕಿದ ಯೋಧರೆಲ್ಲರೂ ಧ್ವಂಸಿತರಾಗಿ ರಥವು ಮುಂದೆ-ಮುಂದೆ ಹೋಗಲು ಯಾವ ಅಡಚಣೆಯೂ ಇಲ್ಲದೇ ಒಂದು ರಾಜಮಾರ್ಗವಾಗಿಯೇ ಪರಿವರ್ತಿತವಾಗುತ್ತಿದ್ದಿತು.

ಅರ್ಜುನನು ನಿಂತಲ್ಲಿ ನಿಲ್ಲುತ್ತಿರಲಿಲ್ಲ. ಶತ್ರುಗಳನ್ನು ಧ್ವಂಸಮಾಡುತ್ತಾ ರಣಾಂಗಣದ ಎಲ್ಲ ಕಡೆಗಳಲ್ಲಿಯೂ ಸಂಚರಿಸುತ್ತಿದ್ದನು. ಕುರುಯೋಧರು ತಮ್ಮ ಸೈನಿಕರ ಅವ್ಯಾಹತವಾದ ಹತ್ಯೆಯನ್ನು ಕಂಡು ಆ ಕಾರ್ಯವು ಅತಿ ಮಾನುಷವಾದುದೆಂದು ಭಾವಿಸಿದರು. ತನ್ನ ಮಗನಾದ ಅರ್ಜುನನಿಗೆ ಜಯ ವನ್ನು ಗಳಿಸಿಕೊಡಲು ಸಾಕ್ಷಾತ್ ಇಂದ್ರನೇ ದೇವತೆಗಳೊಡನೆ ಯುದ್ಧರಂಗಕ್ಕೆ ಬಂದು ಅಗೋಚರನಾಗಿ ಆ ವಿಧ್ವಂಸಕೃತ್ಯವನ್ನು ಮಾಡುತ್ತಿರಬಹುದೆಂದೂ ಭಾವಿಸಿದರು. ಶತ್ರುಗಳನ್ನು ಸಂಪೂರ್ಣವಾಗಿ ಧ್ವಂಸಮಾಡುತ್ತಿರುವವನು ಅರ್ಜುನನ ರೂಪದಲ್ಲಿ ಬಂದಿರುವ ಕಾಲಯಮನೇ ಆಗಿರಬಹುದೆಂದು ಕುರುಯೋಧರು ಭ್ರಮಿಸಿದರು. ಕುರುಸೈನಿಕರ ಶರೀರಗಳು ಪಾರ್ಥನ ಬಾಣಗಳಿಂದ ಛಿನ್ನ-ವಿಚ್ಛಿನ್ನವಾಗಿ ಮಾಡಲ್ಪಟ್ಟು ರಣರಂಗದ ಸುತ್ತಲೂ ಬಿದ್ದಿದ್ದುವು. ಘೋರವಾದ ಆ ವಿಧ್ವಂಸನವನ್ನು ನೋಡಿದವರೆಲ್ಲರೂ ಅದು ಪಾರ್ಥನ ಕೃತ್ಯವೆಂದೇ ನಿಸ್ಸಂಶಯವಾಗಿ ಹೇಳುವಂತಿದ್ದಿತು. ಏಕೆಂದರೆ: ಪಾರ್ಥನಿಗೆ ಸಮಾನವಾಗಿ ಯುದ್ಧಮಾಡುವವರು ಈ ಪೃಥ್ವಿಯಲ್ಲಿಯೇ ಬೇರಾರೂ ಇರಲಿಲ್ಲ. ಅದ್ಭುತ ಕೃತ್ಯಗಳೆಲ್ಲಕ್ಕೂ ಪಾರ್ಥನೇ ಹೆಸರಾಂತಿದ್ದನು. ರೈತನು ಧಾನ್ಯಗಳ ತೆನೆಗಳನ್ನು ಕತ್ತರಿಸುವಂತೆ–ಅರ್ಜುನನು ಕುರುಸೈನಿಕರ ತಲೆಗಳನ್ನು ಕತ್ತರಿಸುತ್ತಾ ಹೋಗುತ್ತಿದ್ದನು. ಅರ್ಜುನನು ತಮ್ಮೆದುರಿಗೆ ಬಂದನೆಂಬ ಭಯದಿಂದಲೇ ಕುರುಸೈನಿಕರು ತಮ್ಮ ಶಕ್ತಿಯನ್ನು ಕಳೆದುಕೊಂಡು ಅವನ ಬಾಣಗಳಿಗೆ ತಲೆಗಳನ್ನೊಪ್ಪಿಸುತ್ತಿದ್ದರೇ ಹೊರತು ಪ್ರತಿಭಟಿಸುತ್ತಲೇ ಇರಲಿಲ್ಲ. ಅರ್ಜುನನೆಂಬ ಚಂಡಮಾರುತದಿಂದ ಛಿನ್ನವಾದ ಶತ್ರುರೂಪವಾದ ಕಾಡುಗಳು ಅನವರತವಾದ ಅರುಣದ್ರವದ (ರಕ್ತದ ) ಸೇಚನೆಯಿಂದಾಗಿ ಭೂಮಿಯನ್ನು ಕೆಂಪಾಗಿ ಮಾಡಿಬಿಟ್ಟುವು. (ಕುರುಸೈನಿಕರ ರಕ್ತದಿಂದಾಗಿ ರಣರಂಗವೆಲ್ಲವೂ ರಕ್ತಮಯವಾಯಿತು.) ರಕ್ತದಿಂದ ಮಿಶ್ರಿತವಾದ ಧೂಳಿಯು ಆಕಾಶದಲ್ಲೆಲ್ಲಾ ಪಸರಿಸಿ, ಸೂರ್ಯನ

ಕಿರಣಗಳೂ ಕೆಂಪಾಗಿ ಪರಿವರ್ತಿತವಾದುವು. ಸೂರ್ಯನನ್ನೊಳಗೊಂಡ ಆಕಾಶವು ಯುದ್ದರಂಗದ ರಕ್ತಧೂಳಿಯಿಂದ ಸಂಪೂರ್ಣವಾಗಿ ಕೆಂಪಾಗಿ ಮಾಡಲ್ಪಟ್ಟು ಅರುಣವರ್ಣದ ಸಂಧ್ಯಾಕಾಲದಂತೆಯೇ ಕಾಣತೊಡಗಿತು. ಆಕಾಶವು ಕೆಂಪಾಯಿತೆಂಬ ವ್ಯಾಜದಿಂದ ಸೂರ್ಯನಾದರೂ ಅಸ್ತಂಗತನಾಗ ಬಹುದಾಗಿದ್ದಿತು. ಆದರೆ ಅರ್ಜುನನು ಮಾತ್ರ ಯುದ್ಧದಿಂದ ವಿರತನಾಗುವ ಸೂಚನೆಯೇ ಇರಲಿಲ್ಲ. ಶೂರನಾದ, ಅಚಿಂತ್ಯಾತ್ಮನಾದ ಅರ್ಜುನನು ಪೌರುಷದಿಂದ ಯುದ್ಧಮಾಡಲು ತನ್ನೆದುರಿಗೆ ಬಂದ ಧನುರ್ಧಾರಿಗಳನ್ನು ದಿವ್ಯಾಸ್ತ್ರಗಳಿಂದ ಪ್ರಹರಿಸಿ ಆಕ್ರಮಣಮಾಡುತ್ತಿದ್ದನು. ದ್ರೋಣರ ಮೇಲೆ ಚೂಪಾದ ಎಪ್ಪತ್ತು ಮೂರು ಬಾಣಗಳನ್ನೂ, ದುಃಸಹನ ಮೇಲೆ ಹತ್ತು ಬಾಣಗಳನ್ನೂ, ಅಶ್ವತ್ಥಾಮನ ಮೇಲೆ ಎಂಟು ಬಾಣಗಳನ್ನೂ, ದುಃಶಾಸನನ ಮೇಲೆ ಹನ್ನೆರಡು ಬಾಣಗಳನ್ನೂ, ಕೃಪರ ಮೇಲೆ ಮೂರು ಬಾಣಗಳನ್ನೂ, ಭೀಷ್ಮನ ಮೇಲೆ ಅರುವತ್ತು ಬಾಣಗಳನ್ನೂ, ದುರ್ಯೋಧನನ ಮೇಲೆ ನೂರು ಬಾಣಗಳನ್ನೂ–ಏಕಕಾಲದಲ್ಲಿ ಪ್ರಯೋಗಿಸಿದನು. ಸ್ವಲ್ಪಕಾಲ ಚೇತರಿಸಿಕೊಂಡು ಪುನಃ ಯುದ್ಧಕ್ಕೆ ಆಗಮಿಸಿದ ಕರ್ಣನ ಕಿವಿಗೆ ಗುರಿಯಿಟ್ಟು 'ಕರ್ಣೀ' ಎಂಬ ಹೆಸರಿನ ಬಾಣವನ್ನು ಪ್ರಯೋಗಿಸಿದನು. ಕರ್ಣಾರ್ಜುನರ ಯುದ್ಧವು ಪುನಃ ಪ್ರಾರಂಭವಾಯಿತು. ಸರ್ವಾಸ್ತ್ರಕೋವಿದನಾದ ಮಹಾ ಧನುರ್ಧರನಾದ ಕರ್ಣನನ್ನು 'ಕರ್ಣೀ' ಎಂಬ ಬಾಣದಿಂದ ಪ್ರಹರಿಸಿದನಂತರ ಅರ್ಜುನನು ಕರ್ಣನ ಕುದುರೆಗಳನ್ನೂ ಮತ್ತು ಸಾರಥಿಯನ್ನೂ ನಿಶಿತವಾದ ಬಾಣಗಳಿಂದ ಯಮಾಲಯಕ್ಕೆ ಕಳುಹಿಸಿಕೊಟ್ಟನು. ಕರ್ಣನ ರಥವೂ ಭಗ್ನವಾಗಿ ಹೋಯಿತು. ಅವನ ಹಿಂಬಾಲಕರಾಗಿ ಬಂದಿದ್ದ ಯೋಧರು ಕರ್ಣನಿಗುಂಟಾದ ದುರವಸ್ಥೆಯನ್ನು ನೋಡಿ ಧೃತಿಗೆಟ್ಟರು. ಕುರುಸೈನ್ಯವು ದಿಕ್ಕೆಟ್ಟು ಓಡಿಹೋಗುತ್ತಿದ್ದರೂ ಅರ್ಜುನನು ಯುದ್ಧದಿಂದ ವಿರತನಾಗದಿರುವುದನ್ನು ಕಂಡು ವಿರಾಟಪುತ್ರನು ಅರ್ಜುನನ ಆಶಯವನ್ನು ತಿಳಿದು ಕುತೂಹಲದಿಂದ ಕಿರೀಟಿಯನ್ನು ಪ್ರಶ್ನಿಸಿದನು :

"ಅರ್ಜುನ! ಸುಂದರವಾದ ಈ ರಥದಲ್ಲಿ ಕುಳಿತು ಸಾರಥಿಯಾದ ನನ್ನಿಂದ ಒಡಗೂಡಿದವನಾಗಿ ನೀನು ಯಾವ ಸೇನೆಯನ್ನು ಅಥವಾ ಸೇನಾ

ಪ್ರಮುಖನನ್ನು ಆಕ್ರಮಿಸಲು ಇಚ್ಛಿಸಿರುವೆ? ಶೀಘ್ರವಾಗಿ ಹೇಳು. ನೀನು ಹೇಳಿದೆಡೆಗೆ ನಾನು ರಥವನ್ನೊಯ್ಯಲು ಸಿದ್ಧನಾಗಿರುತ್ತೇನೆ."

"ಅಗೋ ಅಲ್ಲಿ ನೋಡು. ಉತ್ತರ! ವ್ಯಾಘ್ರದ ಚರ್ಮದಿಂದ ಮಾಡಿರುವ ಕವಚವನ್ನು ಧರಿಸಿ ರಥದಲ್ಲಿ ಕುಳಿತಿರುವ, ನೀಲಧ್ವಜರಾದ, ರಕ್ತಾಶ್ವರಾದ, ಶುಭಸ್ವರೂಪರಾದ ಕೃಪರ ಬಳಿಗೆ ರಥವನ್ನು ಸಾಗಿಸು. ಆ ರಥದ ಸುತ್ತಲೂ ಕೃಪರಿಗೆ ಸೇರಿದ ಸೇನಾವಿಭಾಗವಿದೆ. ದೃಢಧನ್ವರಾದ ಕೃಪರಿಗೊಮ್ಮೆ ನನ್ನ ಶೀಘ್ರಾಸ್ತ್ರಕೌಶಲವನ್ನು ತೋರಿಸಬೇಕೆಂದಿರುತ್ತೇನೆ.

ಅತ್ತ ನೋಡು ಉತ್ತರ! ಧ್ವಜದಲ್ಲಿ ಸ್ವರ್ಣಮಯವಾದ ಕಮಂಡಲುವಿನ ಚಿಹ್ನೆಯನ್ನು ಹೊಂದಿರುವವರೇ ಶಸ್ತ್ರವೇತ್ತರಲ್ಲಿ ಸರ್ವಶ್ರೇಷ್ಠರೆನಿಸಿದ ಆಚಾರ್ಯ ದ್ರೋಣರು. ನನಗೂ ಮತ್ತು ಎಲ್ಲ ಶಸ್ತ್ರಾಸ್ತ್ರಕೋವಿದರಿಗೂ ಅವರು ಮಾನ್ಯರಾಗಿರುತ್ತಾರೆ. ಸುಪ್ರಸನ್ನರಾದ ಮಹಾವೀರರಾದ ದ್ರೋಣಾಚಾರ್ಯರ ರಥದ ಸುತ್ತಲೂ ಒಮ್ಮೆ ಪ್ರದಕ್ಷಿಣೆಮಾಡಿಸು. ಈ ಸಮಯದಲ್ಲಿ ನಾನು ಅವರಿಗೆ ಗೌರವವನ್ನು ಸಲ್ಲಿಸಬೇಕಾಗಿದೆ. ನಾನು ಅವರೆದುರಿನಲ್ಲಿ ತಲೆತಗ್ಗಿಸಿ ನಮ್ರನಾಗಿ ಕುಳಿತುಕೊಳ್ಳಬೇಕಾಗಿದೆ. ಇದು ಸನಾತನಧರ್ಮ. ದ್ರೋಣರೇನಾದರೂ ಮೊದಲು ನನ್ನ ಮೇಲೆ ಬಾಣಪ್ರಯೋಗಮಾಡಿದರೆ ಅನಂತರ ನಾನು ಅವರ ಮೇಲೆ ಬಾಣಪ್ರಯೋಗಮಾಡುತ್ತೇನೆ. ಇದರಿಂದವರಿಗೆ ಕೋಪವುಂಟಾಗುವುದಿಲ್ಲ. ಉದ್ಧತನಾಗಿ ನಾನೇ ಮೊದಲು ಅವರ ಮೇಲೆ ಬಾಣಪ್ರಯೋಗಮಾಡಿದರೆ ಅದರಿಂದ ಆಚಾರ್ಯರು ಕುಪಿತರಾಗಬಹುದು. ಆದುದರಿಂದ ಈ ಸಮಯದಲ್ಲಿ ನಾನು ಅವರಿಗೆ ಗೌರವವನ್ನು ತೋರಿಸಬೇಕು. ಯುದ್ಧಸನ್ನದ್ಧನೂ ಆಗಿರಬೇಕು. (ವೀರ ಸಮೂಹದ ಮೇಲೆ ಬಾಣಪ್ರಯೋಗಮಾಡುವಾಗ ಈ ನಿಯಮ ವಿರುವುದಿಲ್ಲ.)

ದ್ರೋಣರ ಸಮೀಪದಲ್ಲಿಯೇ ಇರುವ, ಧ್ವಜದಲ್ಲಿ ಧನುಸ್ಸಿನ ಲಾಂಛನ ವನ್ನು ಹೊಂದಿರುವ ಮಹಾವೀರನೇ ದ್ರೋಣಪುತ್ರನಾದ ಅಶ್ವತ್ಥಾಮನು. ಮಹಾರಥನಾದ ಅವನೂ ಸಹ ನನಗೂ ಮತ್ತು ಸರ್ವಾಸ್ತ್ರಗಳ ವಿಶಾರದ ರಿಗೂ ಮಾನ್ಯನಾಗಿರುತ್ತಾನೆ. ಆದುದರಿಂದ ಕದಾಚಿತ್ ನೀನು ಅವನ ರಥದ ಸಮೀಪಕ್ಕೆ ಹೋದಲ್ಲಿ ಅಲ್ಲಿಂದ ಕೂಡಲೇ ಪ್ರತಿನಿವೃತ್ತನಾಗಬೇಕು.

ಅದೋ ನೋಡು, ಉತ್ತರ! ಅಲ್ಲಿ ಕಾಣುತ್ತಿರುವ ರಥದಲ್ಲಿ ಸ್ವರ್ಣ ಮಯವಾದ ಕವಚವನ್ನು ಧರಿಸಿ, ಸೇನೆಯ ಮೂರನೆಯ ಭಾಗದಿಂದ ಪರಿವೃತನಾಗಿ ಯುದ್ಧಸನ್ನದ್ಧನಾಗಿ ನಿಂತಿರುವವನೇ ಶ್ರೀಮಂತನಾದ ರಾಜಾ ದುರ್ಯೋಧನ. ಅವನ ಧ್ವಜದಲ್ಲಿ ಸ್ವರ್ಣಮಯವಾದ ನಾಗದ ಲಾಂಛನ ವಿದೆ. ಅವನೇ ಧೃತರಾಷ್ಟ್ರನ ಹಿರಿಯ ಮಗನು. ಶತ್ರುಗಳ ರಥಗಳನ್ನು ವಿಧ್ವಂಸನಮಾಡುವುದರಲ್ಲಿ ಬಹುಸಮರ್ಥನಾದ, ಯುದ್ಧದುರ್ಮದನಾದ, ಶತ್ರುಗಳನ್ನು ನಾಶಮಾಡುವುದರಲ್ಲಿ ಬಹುಕುಶಲನಾದ ದುರ್ಯೋಧನನ ರಥದ ಬಳಿಗೆ ನಿನ್ನ ರಥವನ್ನು ಒಯ್ಯುವವನಾಗು. ಶಸ್ತ್ರಾಸ್ತ್ರಗಳ ಪ್ರಯೋಗ ಪರಿಪಾಟಿಯಲ್ಲವನು ದ್ರೋಣರ ಶಿಷ್ಯರಲ್ಲಿ ಮೊದಲನೆಯವನೆಂದು ಪ್ರಸಿದ್ಧ ನಾಗಿರುತ್ತಾನೆ. ಬಾಣಪ್ರಯೋಗದಲ್ಲಿ ನನಗಿರುವ ಕೈಚಳಕವನ್ನು ಅವನಿಗೂ ತೋರಿಸುತ್ತೇನೆ.

ಯಾವನ ಧ್ವಜದಲ್ಲಿ ಬಹುಸುಂದರವಾದ ನಾಗಕಕ್ಷವು (ಆನೆಗೆ ಕಟ್ಟುವ ಸರಪಳಿ) ಪ್ರಕಾಶಿಸುತ್ತಿದೆಯೋ ಅವನೇ ವಿಕರ್ತನನ (ಸೂರ್ಯನ) ಮಗನಾದ (ಭಕ್ತನಾದ) ಕರ್ಣ. ಈ ಹಿಂದೆಯೇ ಅವನು ನಿನಗೆ ಪರಿಚಿತನಾಗಿರುತ್ತಾನೆ. ಅವನ ರಥವನ್ನು ಸಮೀಪಿಸಿದಾಗ ನೀನು ಬಹಳ ಜಾಗರೂಕನಾಗಿರಬೇಕು. ಏಕೆಂದರೆ : ಆ ದುರಾತ್ಮನು ನನ್ನನ್ನು ಕಂಡೊಡನೆಯೇ ನನ್ನೊಡನೆ ಯುದ್ಧಮಾಡಲು ಮುಂದೆಬರುತ್ತಾನೆ. ಯಾವಾಗಲೂ ಅವನು ಯುದ್ಧದಲ್ಲಿ ನನ್ನೊಡನೆಯೇ ಸ್ಪರ್ಧಿಸುತ್ತಾನೆ.

ಅತ್ತನೋಡು, ಕುಮಾರ! ಅಲ್ಲಿರುವ ನೀಲಧ್ವಜರೇ ಭೀಷ್ಮರು ; ನಮ್ಮ ಪಿತಾಮಹರು. ಅವರ ಧ್ವಜವು ನೀಲವಾಗಿದ್ದು ಸೂರ್ಯನಿಂದ ಕೂಡಿರುವ ಐದು ನಕ್ಷತ್ರಗಳ ಲಾಂಛನದಿಂದ ಕೂಡಿರುವುದು.

ವೀರ್ಯವಂತರಾದ ಅವರು ಬತ್ತಳಿಕೆಯನ್ನೂ ಮತ್ತು ದೊಡ್ಡದಾದ ಧನುಸ್ಸನ್ನೂ ಧರಿಸಿ ರಥದಲ್ಲಿ ಕುಳಿತಿದ್ದಾರೆ. ಅವರ ತಲೆಯ ಮೇಲೆ ಬಹಳ ಶುಭ್ರವಾದ, ಬಿಳುಪಾದ ಶ್ವೇತಚ್ಛತ್ರವಿದೆ. ನಾನಾಧ್ವಜಪತಾಕೆಗಳಿಂದ ಸುಶೋಭಿತವಾಗಿರುವ ಅಪಾರವಾದ ರಥಸೇನೆಯ ಮುಂಭಾಗದಲ್ಲವರು– ಮೋಡಗಳ ಮುಂಭಾಗದಲ್ಲಿ ಪ್ರಕಾಶಿಸುವ ಸೂರ್ಯನಂತೆಯೇ ವಿರಾಜ

ಮಾನರಾಗಿದ್ದಾರೆ. ಅವರು ತೊಟ್ಟಿರುವ ಸುವರ್ಣಮಯವಾದ ಕವಚವು ಸೂರ್ಯ-ಚಂದ್ರರಿಗೆ ಸದೃಶವಾಗಿದ್ದು ಬಹಳ ಕಾಂತಿಯುಕ್ತವಾಗಿದೆ. ಅವರು ಧರಿಸಿರುವ ಸುವರ್ಣಮಯವಾದ ಕಿರೀಟವು ನನ್ನ ಮನಸ್ಸಿಗೂ ತಾಪ ವನ್ನುಂಟುಮಾಡುವುದಾಗಿದೆ. ಭೀಷ್ಮರು ಮಹಾತ್ಮನಾದ ಶಂತನುವಿನ ಪುತ್ರರು. ನಮ್ಮೆಲ್ಲರಿಗೂ ಪಿತಾಮಹರು. ದುರ್ಯೋಧನನ ಆಶ್ರಯ ದಿಂದಲೇ ಪ್ರವೃದ್ಧರಾಗಿರುವ ಅವರು ಯಾವಾಗಲೂ ಅವನ ಪಕ್ಷಪಾತಿಗಳೇ ಆಗಿರುತ್ತಾರೆ. ಎಲ್ಲರೊಡನೆಯೂ ಯುದ್ಧಮಾಡಿದ ನಂತರ ನಾವು ಭೀಷ್ಮರ ಬಳಿಗೆ ಹೋಗೋಣ. ಇತರ ಯೋಧರೊಡನೆ ಯುದ್ಧಮಾಡುವಾಗ ಅವರು ನಮಗೆ ಆತಂಕವನ್ನುಂಟುಮಾಡುವುದಿಲ್ಲ. ಅವರೊಡನೆ ಯುದ್ಧಮಾಡು ವಾಗ ನೀನು ಕುದುರೆಗಳನ್ನು ಬಹಳ ಜಾಗರೂಕತೆಯಿಂದ ನಡೆಸ ಬೇಕಾಗಿದೆ."

ಸವ್ಯಸಾಚಿಯ ಮಾತುಗಳನ್ನು ಕೇಳಿ ಅಪ್ರಮತ್ತನಾದ ಉತ್ತರ ಕುಮಾರನು ಯುದ್ಧಸನ್ನದ್ಧರಾಗಿದ್ದ ಕೃಪಾಚಾರ್ಯರ ರಥದ ಸಮೀಪಕ್ಕೆ ಧನಂಜಯನನ್ನು ಕರೆದೊಯ್ದನು."

ಅಅನೆಯ ಅಧ್ಯಾಯವು ಮುಗಿಯಿತು.

**ಎಂಟನೆಯ ಸಂಪುಟವು ಮುಗಿಯಿತು.**

॥ ಶ್ರೀಕೃಷ್ಣಾರ್ಪಣಮಸ್ತು ॥
॥ ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು ॥
ಓಂ ತತ್ಸತ್



